॥ श्रीगुरुराजो विजयते ॥

श्रीमदानन्दतीर्थभगवत्पादविरचित-

## श्रीमदनुव्याख्यानसहिता

श्रीमज्जयतीर्थप्रणीता

# श्रीमन्न्यायसुधा

द्वितीयाध्याये
अभिमान्यधिकरणतः रचनानुपपत्त्यधिकरणसमाप्त्यन्तः

## सप्तमो भागः

ಕರ್ಣಾಟಕ ಭಾಷಾ ಟೀಕಾ ವಿಭೂಷಿತಾ
ಏಳನೆಯ ಸಂಪುಟ



ಲೇಖಕರು
ಕೇಶವಾಚಾರ್ಯ ಜಾಲೀಹಾಳ
ಅಗ್ರಹಾರ, ಗದಗ.

ಪ್ರಕಾಶಕರು—

**ಕೇಶವಾಚಾರ್ಯ ಜಾಲೀಹಾಳ**

ಶ್ರೀಮನ್ನ್ಯಾಯಸುಧಾ ಪ್ರಕಾಶನ ಕಾರ್ಯಾಲಯ

ಅಗ್ರಹಾರ, **ಗದಗ.**

**Publishers—**

Pandit Keshavacharya Jalihal

ShrimanNyaya Sudha Prakashana Karyalaya

Agrahar, **Gadag.**

**Dated 2nd November, 1971.**

**Price: Rs. 18-00**

Printer—

**R. S. Hombali,** Printer; **Gadag.**



॥ श्री गुरुराजो विजयते ॥

# Author's Note

We are extremely happy to place this seventh volume of our publication "श्रीमन्न्यायसुधा" in the hands of our esteemed readers. Of course this task of ours was met with several difficulties as per the saying "श्रेयांसि बहुविघ्नानि" Still with the grace of Shri Veera Narayan we have been able to bring this volume to light.

The very purpose of publishing श्रीमन्न्यायसुधा with Kannada translation and commentary has already been stated in the first volume That cherished desire of ours could not be fulfilled merely by planning, but the grace of the Almighty and the sympathetic co-operotion and help from all sides are really needed This work of our publication gradually stepping forward with the support and assurances of public can make better progress only with the timely financial help from the pious people We request the public earnestly to extend their co-operation in substantial form to enable us to finish up this great task.

Sanskrit is a language possessed of grace, dignity and depth of meaning. Especially of scientific treatises written in this language being full of technical words are beyond the understanding of common man. The immortal saying of Shri Raghavendra Swamigal प्रत्यक्षरं प्रति पदं अनेकाकूतगर्भिता is itself the proof on this behalf So we cannot claim the credit of successsful translation of this unmatched superhuman work into Kannada due to our limited understanding. We however leave the judgement to our learned readers The task is undertaken in accordance with the saying "न न पतन्त्यात्मसमं पतत्रिण"

To facilitate the easy understanding of this subject full of philosophical and logical technicalities, we have published the sum and substance of Adhikaranas in brief

in this volume in keeping with the popular saying "संक्षेपविस्तराभ्यां प्रवदन्ति मनीषिणः" We request the readers to refer elsewhere for the complete understanding of different technical words, since it is beyond the scope of our present work to deal with such matters There might be several errors in the work naturally due to ignorance to which human beings like us are subjected We however assure to correct them, including of course the un-noticed printing errors which the learned readers would be kind enough to bring to our notice.

In this context we extend our grateful gratitude to Hon. Sect of S M S O Sabha Tiruchanur, whose substantial help enabled us to pull on the work We are extreemely under obligation of our patrons and doners without whose substantial aid, the work particularly this vol would not see the light of publication. We are thank-fully giving their names at the last page of this volume. So we never fail to express our gratitude to all those who are the main cause to undertake this publication by their mint and might.

We express our heart-felt thanks to Shri S. S Hombali who read with us the manuscripts and proofs

Lastly we pray Shri Veera Narayana to bestow plenty of prosperity, good health and righteous behaviour combined with proper understanding upon all the people enabling them to co-operate in this pious undertaking with all their devotion and sense of duty.

**Gadag** **Pandit—Keshavacharya Jalihal.**

**Date**— 2-11-71

## — ವಿಷಯಸಾರ —

**ಅಭಿಮಾನ್ಯಧಿಕರಣಂ ೨–೧–೩.**

ಎರಡು ಸೂತ್ರಗಳುಳ್ಳ ಈ ಅಧಿಕರಣದಲ್ಲಿ ದೃಷ್ಟಯುಕ್ತಿವಿರೋಧವು ಪರಿಹರಿಸಲ್ಪಡುತ್ತದೆ ಮೊದಲನೆಯ ಸೂತ್ರದಲ್ಲಿ, ಮೃದಾದ್ಯಭಿಮಾನಿ ದೇವತೆಗಳನ್ನೇ 'ಮೃದಬ್ರವೀತ್''ಇತ್ಯಾದಿವಾಕ್ಯಗಳಲ್ಲಿ ಮೃದಾದಿಶಬ್ದದಿಂದ ಹೇಳಲಾಗಿದೆಯೆಂಬಲ್ಲಿ ಶಕ್ತಿ, ಹಾಗು ವ್ಯಾಪ್ತಿ ಇವುಗಳನ್ನು ಯುಕ್ತಿಯಾಗಿ ಹೇಳಲಾಗಿದೆ ಎರಡನೆಯ ಸೂತ್ರದಲ್ಲಿ ಅಭಿಮಾನಿದೇವತೆಗಳ ಆ ಸಾಮರ್ಥ್ಯವು ಮಹಾತ್ಮರಿಗೆ ಗೋಚರವಾಗುವುದೆಂಬ ಸಂಗತಿಯನ್ನು ಹೇಳಲಾಗಿದ

॥ ಓಂ ॥ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ॥ ಓಂ ॥

" ಮೃದಬ್ರವೀತ್ " ಇತ್ಯಾದಿ ಶ್ರುತಿಗಳಲ್ಲಿ " ಅಭಿಮಾನಿ ವ್ಯಪದೇಶಸ್ತು " ಅಭಿಮಾನಿ ಚೇತನಗಳಿಗೇ ಉಕ್ತಿಯು, ಜಡಕ್ಕಲ್ಲ ಆದುದರಿಂದ ಯುಕ್ತಿವಿರೋಧವಿಲ್ಲ "ವಿಶೇಷಾನುಗತಿಭ್ಯಾಂ"–ಶಕ್ತಿ, ಹಾಗು ತಮ್ಮ ವಸ್ತುಗಳ ಮೇಲೆ ವ್ಯಾಪ್ತಿ ಇವುಗಳು, ಆ ಅಭಿಮಾನಿದೇವತೆಗಳಿಗಿರುವುದರಿಂದ, ವ್ಯಾಪ್ತತ್ವ ಸದೇಹತ್ವವಿದ್ದರೂ ಕಾಣಿಸದಿರುವುದು ಮುಂತಾದುದು ಯುಕ್ತವಾಗುತ್ತದೆ

॥ ಓಂ ॥ ದೃಶ್ಯತೇ ಚ ಓಂ ॥

ಆ ಅಭಿಮಾನಿದೇವತೆಗಳ ಆ ಸಾಮರ್ಥ್ಯವು ಯೋಗಿಗಳಿಗೆ ಕಾಣಿಸುತ್ತದೆ

**ಅಸದಧಿಕರಣಂ ೨–೧–೪.**

ಆರು ಸೂತ್ರಗಳುಳ್ಳ ಈ ಅಧಿಕರಣದಲ್ಲಿ ಶ್ರುತಿ-ಸಂವಾದ ಯುಕ್ತವಾದ, ಪ್ರಾಗಭಾವಕ್ಕೆವಿಶ್ವಕರ್ತೃತ್ವ ಸಾಧಕಯುಕ್ತಿಯಿಂದ ವಿರೋಧವನ್ನು ಪರಿಹರಿಸಲಾಗುತ್ತದೆ

ಓಂ ॥ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ॥ ಓಂ ॥

"ಅಸತ್" = ಪ್ರಲಯದಲ್ಲಿರುವ ವಿಶ್ವಪ್ರಾಗಭಾವವು "ಇತಿ ಚೇತ್" ಜಗತ್ಕರ್ತೃವು, ಎಂದು ಶಂಕಿಸುವುದು "ನ"=ಯುಕ್ತವಲ್ಲ ಏಕೆಂದರೆ– "ಪ್ರತಿಷೇಧಮಾತ್ರತ್ವಾತ್"– ಅಭಾವ ಧರ್ಮತ್ವವನ್ನು ಬಿಟ್ಟು, ಅದು ಸ್ವರೂಪದಿಂದಲೇ ನಿಷೇಧರೂಪವಾದುದರಿಂದ

॥ ಓಂ ॥ ಅಪೀತೌ ತದ್ವತ್ಪ್ರಸಂಗಾದಸಮಂಜಸಮ್ ॥ ಓಂ ॥

"ಅಪೀತೌ"– ಪ್ರಳಯದಲ್ಲಿ, "ತದ್ವತ್ಪ್ರಸಂಗಾತ್"=ಸರ್ವಕ್ಕೂ ಅಸತ್ವವು (ಅಭಾವಮಾತ್ರತ್ವವು) ಬರಬೇಕಾಗುವುದರಿಂದ, "ಅಸಮಂಜಸಂ" ಈ ಪ್ರಾಗಭಾವದ ಕರ್ತೃತ್ವವಾದವು ಅಸಮಂಜಸವಾದುದು.

॥ ಓಂ ॥ ನ ತು ದೃಷ್ಟಾಂತಭಾವಾತ್ ॥ ಓಂ ॥

"ನ"-ಪ್ರಲಯದಲ್ಲಿ ಸರ್ವಕ್ಕೆ ಅಸತ್ತ್ವವು(ಅಭಾವಮಾತ್ರತ್ವವು)ಇಷ್ಟವಲ್ಲ ಏಕೆ? "ದೃಷ್ಟಾಂತ-ಭಾವಾತ್"- ನಿಶ್ಚಿತವ್ಯಾಪ್ತಿಮೂಲಕ ಅನುಮಾನವಿರುವುದರಿಂದ

॥ ಓಂ ॥ ಸ್ವಪಕ್ಷದೋಷಾಚ್ಚ ॥ ಓಂ ॥

"ಸ್ವಪಕ್ಷೇ"- ಪ್ರಲಯದಲ್ಲಿ ಸರ್ವಕ್ಕೆ ಅಸತ್ತ್ವಪಕ್ಷದಲ್ಲಿ "ದೋಷಾಚ್ಚ"- ದೃಷ್ಟಾಂತವಿಲ್ಲವೆಂಬ ದೋಷವಿರುವುದರಿಂದಲೂ ಅದು ಅಯುಕ್ತವಾದುದು

॥ ಓಂ ॥ ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ ॥ ಓಂ ॥

"ತರ್ಕಾಪ್ರತಿಷ್ಠಾನಾತ್" = ದೃಷ್ಟಾಂತಸದ್ಭಾವ, ಅಸದ್ಭಾವ ಮುಂತಾದ ತರ್ಕಗಳಿಗೆ ಅವ್ಯವಸ್ಥಿತತ್ವವಿರುವುದರಿಂದ "ಅನ್ಯಥಾಽಪಿ" = ಪ್ರತಿತರ್ಕದಿಂದ ವಿಪರೀತವಾಗಿಯೂ (ಅಭಾವವು ವಿಶ್ವಕಾರಣ, ಭಾವವು ವಿಶ್ವಕಾರಣವಲ್ಲವೆಂಬುದಾಗಿ) "ಅನುಮೇಯಂ"- ಅನುಮಾನಮಾಡಲು (ತರ್ಕಿಸಲು) ಶಕ್ಯವಿರುತ್ತದೆ "ಇತಿ ಚೇನ್ನ"= ಹೀಗೆ ಶಂಕಿಸುವುದು ಸರಿಯಲ್ಲ ಏಕೆಂದರೆ "ಏವಮಪಿ"= ಹೀಗೆ ತರ್ಕಕ್ಕೆ ಅಪ್ರಾಮಾಣ್ಯವಿರುವುದಾದರೂ "ಅನಿರ್ಮೋಕ್ಷ ಪ್ರಸಂಗಃ" = ಮೋಕ್ಷವಿಲ್ಲದಿರುವ ಪ್ರಸಂಗವು ಬರುತ್ತದೆ

॥ ಓಂ ॥ ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ ॥ ಓಂ ॥

"ಏತೇನ"=ಸತ್(ಬ್ರಹ್ಮ) ಕಾರಣತ್ವದಲ್ಲಿ ದೃಷ್ಟಾಂತವಿರುವುದರಿಂದ ಹಾಗು ಜೀವಾದಿಗಳ ಕಾರಣತ್ವದಲ್ಲಿ ದೃಷ್ಟಾಂತವಿಲ್ಲದಿರುವುದರಿಂದ, "ಶಿಷ್ಟಾಃ"=ನಿಷೇಧಿಸಲ್ಪಡದೆ ಉಳಿದಿರುವ "ಅಪರಿಗ್ರಹಾಃ ಅಪಿ" ಪರಿಗ್ರಹಣಕ್ಕೆ ಯೋಗ್ಯವಾಗದ ಜೀವ, ಪ್ರಧಾನ-ಶೂನ್ಯ-ಕಾಲ-ಸ್ವಭಾವ ಇತ್ಯಾದಿಗಳ ಕಾರಣತ್ವ ವಾದಗಳೂ "ವ್ಯಾಖ್ಯಾತಾಃ"=ದೂಷಿಸಲ್ಪಟ್ಟಿರುವವುಗಳು (ಹೀಗೆ ತಿಳಿಯಬೇಕು)

ಈ ಅಧಿಕರಣದಲ್ಲಿ ಮೊದಲಿನ ನಾಲ್ಕು ಸೂತ್ರಗಳಿಂದ, ವಿಶ್ವಪ್ರಾಗಭಾವದ ಜಗತ್ಕರ್ತೃತ್ವವನ್ನು (೧) ಪ್ರತಿಷೇಧ ಮಾತ್ರತ್ವ, (೨) ಪ್ರಲಯದಲ್ಲಿ ಸರ್ವಾಸತ್ವ ಪ್ರಸಂಗ, (೩) ಪ್ರಾಮಾಣಿಕ ಪರಿತ್ಯಾಗ, (೪) ಅಪ್ರಾಮಾಣಿಕ ಸ್ವೀಕಾರ, ಈ ನಾಲ್ಕು ಯುಕ್ತಿಗಳಿಂದ ನಿರಾಕರಿಸಿ, ಐದನೆಯ ಸೂತ್ರದಲ್ಲಿ ಸತ್ಕಾರಣತ್ವದ ಸಾಧನದಲ್ಲಿಯೂ ಅಸತ್ಕಾರಣತ್ವದ ಬಾಧಕದ ಮೇಲೆಯೂ ಆಕ್ಷೇಪಗಳನ್ನು ಪರಿಹರಿಸಿರುತ್ತಾರೆ ಆರನೆಯ ಸೂತ್ರದಲ್ಲಿ ಉಳಿದ ವಾದಗಳ ನಿರಾಸದಲ್ಲಿ ಹಿಂದೆ ಹೇಳಿದ ಬಾಧಕಗಳ ಅತಿದೇಶವು ಹೇಳಲ್ಪಟ್ಟಿದೆ

ಮಾಯಾವಾದಿಗಳೂ ರಾಮಾನುಜೀಯರೂ- (೧) "ನ ವಿಲಕ್ಷಣತ್ವಾತ್" ಈ ಸೂತ್ರದಿಂದ "ಏತೇನ" ಇಲ್ಲಿಯವರೆಗಿರುವ ಎಂಟು ಸೂತ್ರಗಳಿಂದ ಒಂದೇ ಅಧಿಕರಣ, ಮೊದಲಿನ ಎರಡು ಸೂತ್ರಗಳು ಪೂರ್ವಪಕ್ಷ ಸೂತ್ರಗಳು, ಉಳಿ

ದವುಗಳು ಸಿದ್ಧಾಂತ ಸೂತ್ರಗಳು ಈ ಅಧಿಕರಣದಲ್ಲಿ ತರ್ಕವಿರೋಧವು ಪರಿಹರಿಸಲ್ಪಡುತ್ತದೆ ಹೇಗೆಂದರೆ– "ನ"= ಬ್ರಹ್ಮವು ವಿಶ್ವಕಾರಣವಲ್ಲ ಏಕೆ? "ವಿಲಕ್ಷಣತ್ವಾತ್"= ಚೇತನ-ಅಚೇತನವೆಂಬುದಾಗಿರುವ ಪರಸ್ಪರ ವೈಲಕ್ಷಣ್ಯ (ವಿಲಕ್ಷಣ ಸ್ವಭಾವ)ವಿರುವುದರಿಂದ. "ತಥಾತ್ವಂ ಚ" ಆ ವೈಲಕ್ಷಣ್ಯವಾದರೋ, "ಶಬ್ದಾತ್"= "ವಿಜ್ಞಾನಂ ಚಾವಿಜ್ಞಾನಂ ಚ' ಇತ್ಯಾದಿಯಾದ ಶ್ರುತಿಯಲ್ಲಿ ಹೇಳಲ್ಪಟ್ಟಿರುತ್ತದೆ ಇನ್ನು "ಮೃದಬ್ರವೀತ್" ಇತ್ಯಾದಿ ಶ್ರುತಿಯಲ್ಲಿ ಮೃದಾದಿ ಜಡಗಳಿಗೆ ಚೇತನತ್ವವನ್ನು ಹೇಳಲಾಗಿದೆ. ಆದುದರಿಂದ ವೈಲಕ್ಷಣ್ಯವಿಲ್ಲವೆಂದು "ತು" ಶಂಕಿಸಬಾರದು ಏಕೆಂದರೆ– "ಅಭಿಮಾನಿ ವ್ಯಪದೇಶಃ"= ಮೃದಾದಿಗಳ ಅಭಿಮಾನಿ ದೇವತೆಗಳಿಗೇ ಅವುಗಳಲ್ಲಿ ಹೇಳಿಕೆಯಿದೆ ಜಡಗಳಿಗಲ್ಲ ಏಕೆ? "ವಿಶೇಷಾನುಗತಿಭ್ಯಾಂ"= "ತಾವಾ ಏತಾ ದೇವತಾಃ ಸರ್ವಾಃ ಪ್ರಾಣೇ ನಿಶ್ರೇಯಸಂ ವಿದಿತ್ವಾ" ಎಂಬುದಾಗಿ "ದೇವತಾ" ಶಬ್ದ ವಿಶೇಷವೂ "ಅಗ್ನಿರ್ಭೂತ್ವಾ ಮುಖಂ ಪ್ರಾವಿಶತ್" ಎಂಬುದಾಗಿ ಕರಣಗಳಲ್ಲಿ ದೇವತೆಗಳ ಅನುಗತಿ(ಪ್ರಾಪ್ತಿ)ಯೂ ಹೇಳಲ್ಪಟ್ಟಿರುವುದರಿಂದ ಆದುದರಿಂದ, ಜಗತ್ತು-ಬ್ರಹ್ಮ ಇವೆರಡರಲ್ಲಿ ಪರಸ್ಪರ ವೈಲಕ್ಷಣ್ಯವಿರುವುದರಿಂದ, ಬ್ರಹ್ಮವು ವಿಶ್ವಕಾರಣವಲ್ಲ ಹೀಗೆ ಪೂರ್ವಪಕ್ಷವು ಬರಲು ಸಿದ್ಧಾಂತವು—

"ದೃಶ್ಯತೇತು"– ಲೋಕದಲ್ಲಿ–ಚೇತನದಿಂದ, ಅಚೇತನ ಕೇಶಾದಿಗಳೂ ಅಚೇತನವಾದ ಗೋಮಯಾದಿಗಳಿಂದ ವೃಶ್ಚಿಕಾದಿ ಚೇತನಗಳೂ ಹುಟ್ಟಿರುವುದು ಕಂಡಿರುವುದರಿಂದ, ದೃಷ್ಟಾಂತವಿರುವುದರಿಂದ, ವೈಲಕ್ಷಣ್ಯವಿದ್ದರೂ ಬ್ರಹ್ಮವು ವಿಶ್ವದ ಕಾರಣವಾಗುತ್ತದೆ

"ಅಸದಿತಿಚೇತ್"– ಕಾರ್ಯವು ಹುಟ್ಟುವ ಮುಂಚೆ ಅಸತ್ಯವಾದುದರಿಂದ ಅಸತ್ಕಾರ್ಯವಾದವು ಬರುವುದೆಂಬುದು 'ನ"=ಸರಿಯಲ್ಲ ಏಕೆ? "ಪ್ರತಿಷೇಧಮಾತ್ರತ್ವಾತ್"=ಕಾರ್ಯವು ಕಾರಣಾತ್ಮಕವಾಗಿ, ಇರುವುದರಿಂದ, 'ಅಸತ್‌ಕಾರ್ಯಂ'= ಎಂಬುದು ಕೇವಲ ಶಬ್ದವಷ್ಟೇ, ಅರ್ಥವಿಲ್ಲ ಆದುದರಿಂದ ಬ್ರಹ್ಮ-ಜಗತ್ತುಗಳಲ್ಲಿ ವೈಲಕ್ಷಣ್ಯವಿಲ್ಲ

ರಾಮಾನುಜೀಯರು ಕಾರ್ಯ ಕಾರಣಗಳಲ್ಲಿ ಸಮಾನಲಕ್ಷಣದ ನಿಯಮವಿಲ್ಲವೆಂಬ ಅರ್ಥವಿದ್ದುದರಿಂದ,ಕಾರ್ಯಕಾರಣಗಳಲ್ಲಿ ವೈಲಕ್ಷಣ್ಯವಿಲ್ಲ ಹೀಗೆಹೇಳುತ್ತಾರೆ

'ಅಪೀತೌ"=ಪ್ರಳಯದಲ್ಲಿ "ತದ್ವತ್ಪ್ರಸಂಗಾತ್"– ಕಾರ್ಯ(ಜಗತ್ತು)ದಲ್ಲಿರುವಂತೆ ಬ್ರಹ್ಮನಿಗೆ ಸ್ಥೂಲತ್ವ, ಜಾತಿ-ವಿಕಾರ ಮುಂತಾದುದೂ ಇರಬೇಕಾಗುವ ಪ್ರಸಂಗವು ಬರುವುದರಿಂದ, ಕಾರ್ಯಕಾರಣಗಳ ಅಭೇದವನ್ನು ಹೇಳುವ ವೇದಾಂತ ದರ್ಶನವು ಅಸಮಂಜಸವಾದುದು ಹೀಗೆ ಶಂಕಾಸೂತ್ರ- ಇದರ ಸಮಾಧಾನ–ಇದು ಸರಿಯಲ್ಲ ಏಕೆಂದರೆ– "ದೃಷ್ಟಾಂತಭಾವಾತ್"-ಪ್ರಲಯದಲ್ಲಿ

ಕಾರ್ಯಧರ್ಮಗಳಿಂದ ಕಾರಣಕ್ಕೆ ದೋಷವಿಲ್ಲವೆಂಬಲ್ಲಿ ದೃಷ್ಟಾಂತವಿರುವುದರಿಂದಲೇ, ವೇದಾಂತ ದರ್ಶನವು ಸಮಂಜಸವೇ !

ರಾಮಾನುಜೀಯರು- ಚಿದಚಿದ್ವಸ್ತು ಶರೀರನಾದ ಬ್ರಹ್ಮನಿಗ ಕಾರ್‍ಯಕಾರಣ ಭಾವದಿಂದ ಇರುವುದರಲ್ಲಿ ಗುಣದೋಷಗಳ ವ್ಯವಸ್ಥೆಯ ಬಗ್ಗೆ- ಸಶರೀರನಾದ ಮನುಷ್ಯ-ಜೀವನಿಗೆ ಬಾಲ್ಯ ಮುಂತಾದುದು ಶರೀರದಲ್ಲಿಯೂ, ಜ್ಞಾನಸುಖಾದಿಗಳು ಆತ್ಮನಲ್ಲಿಯೂ ಇರುವಂತೆ, ಬ್ರಹ್ಮ ಶರೀರವಾದ ಚಿದಚಿದ್ವಸ್ತುಗಳಲ್ಲಿ ಅಜ್ಞಾನ ವಿಕಾರಮುಂತಾದುದೂ, ಶರೀರಿಯಾದ ಆತ್ಮ-ಬ್ರಹ್ಮನಲ್ಲಿ ನಿರವದ್ಯತ್ವ, ನಿರ್ವಿಕಾರತ್ವ ಸರ್ವಜ್ಞತ್ವ ಮುಂತಾದುದೂ ಇರುವುದೆಂದು ದೃಷ್ಟಾಂತವಿದೆ ಆದುದರಿಂದ ವೇತಾಂತದರ್ಶನವು ಸಮಂಜಸ, ಹೀಗೆ ಹೇಳುತ್ತಾರೆ

‘ ಸ್ವಪಕ್ಷದೋಷಾಚ್ಚ’’– ಪೂರ್ವಪಕ್ಷಿಯಾದ ಸಾಂಖ್ಯನ ಮತದಲ್ಲಿಯೂ ಅವನು ಹೇಳಿದ, ‘‘(೧) ವೈಲಕ್ಷಣ್ಯವಿದ್ದಲ್ಲಿ ಕಾರ್ಯಕಾರಣಭಾವವಿಲ್ಲದಿರುವುದು, (೨) ಅಸತ್ಕಾರ್ಯವಾದ ಪ್ರಸಂಗ, (೩) ಕಾರ್ಯಗತದೋಷಗಳು ಬ್ರಹ್ಮನಿಗೆ ಬರಲಿ’’ ಈ ದೋಷಗಳು ಸಾಧಾರಣವಿರುತ್ತವೆ

ರಾಮಾನುಜೀಯರು– ಪ್ರಧಾನಕಾರಣತ್ವ ಪಕ್ಷದಲ್ಲಿ ದೋಷಗಳು ಇರುವುದರಿಂದ ವೇದಾಂತದರ್ಶನವೇ ಸಮಂಜಸ, ಹೀಗೆ ಹೇಳುತ್ತಾರೆ

‘‘ತರ್ಕಾಪ್ರತಿಷ್ಠಾನಾತ್’’= ತರ್ಕಕ್ಕೆ ಅವ್ಯವಸ್ಥೆಯಿರುವುದರಿಂದ, ಕೇವಲ ‘‘ತರ್ಕದಿಂದ ದೂಷಿಸಬರುವುದಿಲ್ಲ ಏಕೆಂದರೆ ‘‘ಅನ್ಯಥಾಪ್ಯನುಮೇಯಂ ಇತಿ ಚೇತ್’’= ಅಪ್ರತಿಷ್ಠಿತ ತರ್ಕದಿಂದ ಬೇರೆಯಾದ ಪ್ರತಿಷ್ಠಿತ ತರ್ಕದಿಂದ ದೂಷಿಸುವುದಾದರೆ ‘‘ಏವಮಪಿ’’= ಯಾವದೋ ಒಂದು ವಿಷಯದಲ್ಲಿ ತರ್ಕಕ್ಕೆ ಪ್ರತಿಷ್ಠೆ (ಪ್ರಾಮಾಣ್ಯ)ಇದ್ದರೂ ‘‘ಅನಿರ್ಮೋಕ್ಷ ಪ್ರಸಂಗಃ’’= ತರ್ಕಕ್ಕೆ ಅಪ್ರತಿಷ್ಠಿತತ್ವವೆಂಬ ದೋಷದಿಂದ ಬಿಡುಗಡೆಯಾಗುವುದಿಲ್ಲ ಆದುದರಿಂದ, ಕೇವಲ ತರ್ಕವು ಆಭಾಸವೇ ! ಅಥವಾ ಕೇವಲ ತರ್ಕದಿಂದ ಬ್ರಹ್ಮಜ್ಞಾನವಾಗದು ಆದರಿಂದ ಮುಕ್ತಿಯಿಲ್ಲ

‘ರಾಮಾನುಜೀಯರು– ಕುತರ್ಕ ಮೂಲಕವಾದುದರಿಂದ ಪ್ರಧಾನಕಾರಣತ್ವವನ್ನು ಪರಿತ್ಯಜಿಸಬೇಕು ಕ್ಲೃಪ್ತ ಪ್ರಕಾರದಿಂದ ಬೇರಯಾದ ಪ್ರಕಾರದಿಂದ ಅನುಮಾನ ಮಾಡುವುದೆಂದರೆ (ತರ್ಕಿಸುವುದೆಂದರೆ) ಆಗಲೂ, ಅದಕ್ಕಿಂತ ಹೆಚ್ಚಿನ ಕುತರ್ಕಗಳ ಸಂಭಾವನೆಯು ಇರುವುದರಿಂದ, ಅಪ್ರತಿಷ್ಠಿತವಾಗುವುದರಿಂದ ಅನಿರ್ಮೋಕ್ಷ ಪ್ರಸಂಗವು ತಪ್ಪುವುದಿಲ್ಲ, ” ಹೀಗೆ ಹೇಳುತ್ತಾರೆ

ಬ್ರಹ್ಮ–ಜಗತ್ತು ಇವೆರಡರಲ್ಲಿ ವೈಲಕ್ಷಣ್ಯವಿದ್ದುದರಿಂದ ಬ್ರಹ್ಮವು ವಿಶ್ವಕಾರಣವಲ್ಲವೆಂದು ಆಶಂಕಿಸಿ, ಕಾರ್ಯಕಾರಣಗಳಲ್ಲಿ ಸಮಾನಲಕ್ಷಣವಿರಬೇಕೆಂಬ ನಿಯಮವು ವೃಶ್ಚಿಕಕೇಶಾದಿಗಳಲ್ಲಿ ವ್ಯಭಿಚರಿತವಾದುದರಿಂದ, ವೇದ ನಿರಪೇಕ್ಷ

ತರ್ಕಕ್ಕೆ ಸ್ಥಿತಿಯಿಲ್ಲವಾದುದರಿಂದ, ಪೂರ್ವಪಕ್ಷ ಯುಕ್ತಿಯು ಆಭಾಸವಾದುದರಿಂದ ಬ್ರಹ್ಮವು ವಿಶ್ವದ ಕಾರಣವು, ಹೀಗೆ ಸಿದ್ಧಾಂತವನ್ನು ಹೇಳಿದ್ದಾರೆ

''ಏತೇನ''=ಪ್ರಧಾನದ ನಿರಾಕರಣದಿಂದ, ''ಶಿಷ್ಟಾಃ ಅಪರಿಗ್ರಹಾಃ ಅಪಿ''- ಶಿಷ್ಟರಿಂದ ಪರಿಗ್ರಹಪಡೆಯದ ಉಳಿದ ಅಣ್ವಾದಿಗಳ ಕಾರಣತ್ವವಾದಗಳೂ ''ವ್ಯಾಖ್ಯಾತಾಃ''= ನಿರಾಕರಿಸಲ್ಪಟ್ಟವುಗಳು ಹೀಗೆ ಹೇಳುತ್ತಾರೆ

**ಭೋಕ್ತ್ರಾಪತ್ತ್ಯಧಿಕರಣಂ ೨-೧-೩**

ಇಲ್ಲಿ ಬಹುಶ್ರುತಿ–ಸಿದ್ಧವಾದ ಯುಕ್ತಿ ವಿರೋಧವು ಪರಿಹರಿಸಲ್ಪಡುತ್ತದೆ

॥ ಓಂ ॥ **ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್** ॥ ಓಂ ॥

''ಭೋಕ್ತುಃ''= ಜೀವನಿಗೆ, ಮೋಕ್ಷದಲ್ಲಿ 'ಆಪತ್ತೇಃ''= ಬ್ರಹ್ಮಭಾವವು, ''ಪರೇಽವ್ಯಯೇ ಸರ್ವಏಕೀಭವಂತಿ'' ಇತ್ಯಾದಿ ಶ್ರುತಿಯಲ್ಲಿ ಹೇಳಿದುದರಿಂದ ''ಅವಿಭಾಗಶ್ಚೇತ್'' ಐಕ್ಯವು ಬರಬೇಕಾಗುವುದರಿಂದ ಬ್ರಹ್ಮವು ಸರ್ವಕರ್ತೃ ವೆನಿಗಲಾರದೆಂದು ಶಂಕಿಸುವುದು- ''ನ''- ಸರಿಯಲ್ಲ ಏಕೆಂದರೆ ''ಸ್ಯಾತ್‌ಲೋಕವತ್''=ಜೀವನಿಂದ ಅಭೇದವಿಲ್ಲ ಶ್ರುತಿಯಲ್ಲಿಯ''ಏಕೀಭವಂತಿ'' ಎಂಬ ಪ್ರಯೋಗವು ಲೋಕದಲ್ಲಿ ನೀರಿನಲ್ಲಿ ನೀರನ್ನು ನೇರಿಸಿದಾಗ ಆಗುವ ಐಕ್ಯಪ್ರಯೋಗದಂತೆ ಸ್ಥಾನೈಕ್ಯ ಮುಂತಾದ ನಿಮಿತ್ತಗಳಿಂದ ಆಗಿರುತ್ತದೆ

ವ್ಯಾಖ್ಯಾನಕಾರರುಗಳು''ಭೋಕ್ತ್ರಾಪತ್ತೇಃ''= ಮೂಲಕಾರಣ( ಬ್ರಹ್ಮ ) ದಿಂದ ಅಭಿನ್ನವಾದುದರಿಂದ ಭೋಗ್ಯಕ್ಕೆ ಭೋಕ್ತೃತ್ವವು ಬರಬೇಕಾಗುತ್ತದೆ ಹಾಗು ಭೋಕ್ತೃವಿಗೆ ಭೋಗ್ಯತ್ವವು ಬರಬೇಕಾಗುತ್ತದೆ ಆದುದರಿಂದ ''ಅವಿಭಾಗ''- ಭೋಕ್ತೃ-ಭೋಗ್ಯವಿಭಾಗವು ಇಲ್ಲದಿರಲಿ! ''ಇತಿ ಚೇತ್ ನ''= ಹೀಗೆ ಶಂಕಿಸಬಾರದು ಏಕೆಂದರೆ– ''ಸ್ಯಾಲ್ಲೋಕವತ್''– ಮೃತ್ತು–ಘಟ, ಸಮುದ್ರ– ತರಂಗ ಮುಂತಾವುಗಳಲ್ಲಿ ಹೇಗೋ ಹಾಗೆ ಅಭೇದವಿದ್ದರೂ– ಈ ವಿಭಾಗವು ಸರಿಹೋಂದುತ್ತದೆ

ರಾಮಾನುಜೀಯರು– ಚಿದಚಿದ್ವಸ್ತು ಶರೀರನಾದುದರಿಂದ ಬ್ರಹ್ಮನಿಗೆ ಸಶರೀರತ್ವವನ್ನೊಪ್ಪಿದರೆ– ಜೀವನಂತೆ ಬ್ರಹ್ಮನಿಗೂ ಶರೀರಸಂಬಂಧನಿಮಿತ್ತವಾಗಿ ಸುಖದುಃಖ ಭೋಕ್ತೃತ್ವವು ಬರಬೇಕಾಗುತ್ತದೆ ಜೀವನಿಂದ ಭೇದವಿಲ್ಲವಾಗುತ್ತದೆ ಹೀಗೆ ಶಂಕಿಸುವುದು ಸರಿಯಲ್ಲ ಏಕಂದರೆ- ಲೋಕದಲ್ಲಿ ಕಾಂತಾರ ಮಧ್ಯ ಪತಿತನಾದ ರಾಜನಿಗೆ ಮಶಕದಂಶಾದಿಗಳ ಉಪದ್ರವವಿಲ್ಲದಿರುವ ಹಾಗೆ ಇಲ್ಲಿಯೂ ಅನ್ಯವಶತ್ವ ಮೂಲಕವಾಗಿ ಆಗುವ ದುಃಖಾದಿ ಭೋಕ್ತೃತ್ವವು ಅನನ್ಯವಶನಾದ ಪರಬ್ರಹ್ಮನಿಗೆ ಆಗುವುದಿಲ್ಲ ಹೀಗೆ ಹೇಳುತ್ತಾರೆ

**ತದನನ್ಯತ್ವಾಧಿಕರಣಂ ೨ ೧-೬.**

ಆರು ಸೂತ್ರಗಳುಳ್ಳ ಈ ಅಧಿಕರಣದಲ್ಲಿ [illegible] ವಿರೋಧವನ್ನು ನಿರಾಕರಿಸಲಾಗುತ್ತದೆ

॥ ಓಂ ॥ ತದನನ್ಯತ್ವಮಾರಂಭಣಶಬ್ದಾದಿಭ್ಯಃ ॥ ಓಂ ॥

'ತದನನ್ಯತ್ವಂ"=ಸ್ವತಂತ್ರ ಸಾಧನಕ್ಕೆ ಬ್ರಹ್ಮನಿಂದ ಅಭೇದವು, ಹೊರತು ಅದು ಬ್ರಹ್ಮದಿಂದಬೇರೆಯಾದುದಲ್ಲ (ಬ್ರಹ್ಮವೇ,ಸ್ವತಂತ್ರ,- ಸ್ವತಂತ್ರಸಾಧನಾಂತರ ವಿಲ್ಲದಿರುವುದರಿಂದ, ಸ್ವತಂತ್ರ ಸಾಧನ ನಿರಪೇಕ್ಷ ಕರ್ತೃವು) ಏಕೆ ? "ಆರಂಭಣ ಶಬ್ದಾದಿಭ್ಯಃ"=ಕಿಂಸ್ವಿದಾಸೀಧಧಿಷ್ಠಾನಂ ಆರಂಭಣಂ ಕತಮತ್‌ಸ್ವಿತ್‌ಕಥಾಸೀತ್" ಇತ್ಯಾದಿ ಶ್ರುತಿಯಲ್ಲಿ ಅಧಿಷ್ಠಾನಮುಂತಾದುದನ್ನಾಕ್ಷೇಪಿಸುವ ಶಬ್ದಗಳ ಪ್ರಯೋಗವಿ ರುತ್ತದೆ ಹಾಗು ಪರಮಾತ್ಮನಿಗೆಪಾರತಂತ್ರ್ಯವಿಲ್ಲದಿರುವುದು,ಸಾಧನಗಳಿಗೆ ಸತ್ತಾ ಪ್ರದಾಯಕತ್ವವಿರುವುದು, ಸ್ವಾತಂತ್ರ್ಯವಿರುವುದು, ಈ ಮುಂತಾದಕಾರಣಗಳಿಂದ

ಭಾವೇಚೋಪಲಬ್ಧೇಃ

'ಭಾವೇ ಚ"= ಸ್ವತಂತ್ರವಾದ ಸಾಧನವು ಬೇರೆ ಇದ್ದರೆ "ಉಪಲಬ್ಧೇಃ" (ಪ್ರಸಂಗಃ)ಪ್ರಮಾಣಗಳಿಂದ ಉಪಲಬ್ಧಿಯಾಗುವ ಪ್ರಸಂಗವು ಬರುತ್ತದೆ (ಆದರೆ ಉಪಲಬ್ಧಿಯಾಗಿಲ್ಲ) ಆದುದರಿಂದ ಬೇರೆ ಸ್ವತಂತ್ರಸಾಧನವಿಲ್ಲ

**॥ ಓಂ ॥ ಸತ್ವಾಚ್ಚಾವರಸ್ಯ ॥ ಓಂ ॥**

"ಅವರಸ್ಯ"=ಪರಮಾತ್ಮನ ಅಧೀನವಾದ ಸಾಧನಕ್ಕೆ "ಸತ್ವಾಚ್ಚ"=ಅಸ್ತಿತ್ವ ವಿರುವುದರಿಂದಲೇ, 'ಅದ್ಭ್ಯಃ ಸಂಭೂತಃ" ಇತ್ಯಾದಿ ವಚನವು ಹೊರಟಿದೆ

**॥ ಓಂ ॥ ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್ ॥ ಓಂ ॥**

"ಅಸದ್ವ್ಯಪದೇಶಾತ್"=ಸಾಧನಾಂತರಕ್ಕೆ "ನಾಸದಾಸೀನ್ನೋಸದಾಸೀತ್" ಇತ್ಯಾದಿ ಶ್ರುತಿಯಲ್ಲಿ ಅಸತ್ಯತೆಯನ್ನು ಹೇಳಿರುವುದರಿಂದ, "ನೇತಿ ಚೇನ್ನ''– ಹಿಂದೆ ಹೇಳಿದುದು ಅಯುಕ್ತವೆಂದು ಶಂಕಿಸಬಾರದು ಏಕೆಂದರೆ "ಧರ್ಮಾಂತ ರೇಣ'=ಸ್ವತಂತ್ರತ್ವ, ವ್ಯಕ್ತತ್ವ ಮುಂತಾದ ಧರ್ಮಗಳಿಂದಲೇ (ಆ ಧರ್ಮಗಳಿಲ್ಲ ವೆಂಬ ಅಭಿಪ್ರಾಯದಿಂದಲೇ) ಆ ಅಸತ್ಯತ್ವವ್ಯಪದೇಶವು ಏಕೆಂದರೆ- "ವಾಕ್ಯ ಶೇಷಾತ್ = "ತಮಃ ಆಸೀತ್' ಎಂಬ ವಾಕ್ಯಶೇಷವು ಸರ್ವಥಾ ಅಸತ್ಯವೆಂಬ ಅರ್ಥವಿದ್ದರೆ-ಸರಿಹೊಂದುವುದಿಲ್ಲ, ಈ ಕಾರಣದಿಂದ

**॥ ಓಂ ॥ ಯುಕ್ತೇಃ ಶಬ್ದಾಂತರಾಚ್ಚ ॥ ಓಂ ॥**

"ಯುಕ್ತೇಃ''= ಸ್ವೇಚ್ಛೆಯಿಂದ ಲೀಲಾರೂಪವಾಗಿ ಸ್ವಾಧೀನವಾದ ಸಾಧನಗ ಳನ್ನುತೆಗೆದುಕೊಂಡು ಸೃಷ್ಟಿಯನ್ನುಮಾಡುವುದರಲ್ಲಿ ಲೀಲೆಯಿಂದ ದಂಡವನ್ನು ಹಿಡಿ ದುಕೊಂಡು ನಡೆಯುವವನಿಗೆ ಹೆಳವತನವು(ಬಾರದಿರುವಂತೆ, ಪೂರ್ಣತೆಯ ವಿರೋ

ಧಿಯಾಗುವುದಿಲ್ಲವೆಂದು ಯುಕ್ತಿ ಇರುವುದರಿಂದ, ಹಾಗು "ಶಬ್ದಾಂತರಾಚ್ಚ"= ಇಂಥ ಅಭಿಪ್ರಾಯವುಳ್ಳ ಬೇರೆ ಶಬ್ದ ವಿಶೇಷವೂ ಇರುವುದರಿಂದ, ಹಿಂದೆ ಹೇಳಿದುದು ಯುಕ್ತವಾಗುತ್ತದೆ

॥ ಓಂ ॥ **ಪಟವಚ್ಚ** ॥ ಓಂ ॥

"ಪಟವಚ್ಚ" = ಪಟ ಮುಂತಾದುದರ ಸೃಷ್ಟಿಯು ಹಾಗ ವಿಶ್ವದ ಸೃಷ್ಟಿಯೂ ಕರ್ತೃವಿನಿಂದ ಭಿನ್ನವಾದ ಸಾಧನಾಂತರದಿಂದ ಸಾಧ್ಯವಾದುದು (ಆದುದರಿಂದ ಕರ್ತೃಭಿನ್ನ ಸಾಧನವಿದೆ)

॥ ಓಂ ॥ **ಯಥಾ ಪ್ರಾಣಾದಿಃ** ॥ ಓಂ ॥

ಪ್ರಾಣದೇಹೇಂದ್ರಿಯಾದಿಗಳು ಸ್ವತಂತ್ರಗಳಲ್ಲ- ಇದು ಹೇಗೋ ಹಾಗೆ ಪ್ರಕೃತಿ ಮುಂತಾದ ಸಾಧನವೂ ಸ್ವತಂತ್ರವಲ್ಲ

ಇಲ್ಲಿ ಕ್ರಮವಾಗಿ (೧) ಸ್ವತಂತ್ರ ಕಾರಣವು ವಿಷ್ಣುವೇ ಎಂಬಲ್ಲಿ ಶ್ರುತಿಯೆಂಬ ಪ್ರಮಾಣವನ್ನೂ, ಬೇರೆ ಸ್ವತಂತ್ರ ಸಾಧನವಿದೆಯೆಂಬಲ್ಲಿ ಬಾಧಕವನ್ನೂ, ಹಿಂದೆ ಹೇಳಿದುದರಲ್ಲಿ ವಿರೋಧ ಪರಿಹಾರಾರ್ಥವಾಗಿ "ನಾಸದಾಸೀತ್" ಇತ್ಯಾದಿ ಶ್ರುತಿಗಳಿಗ ಸಾವಕಾಶತ್ವವನ್ನೂ, ಪರತಂತ್ರ ಸಾಧನಸದ್ಭಾವದಲ್ಲಿ ಯುಕ್ತಿ ಶ್ರುತಿಗಳನ್ನೂ, ಸಾಧನಾಂತರದಿಂದ ಸೃಷ್ಟಿಯೆಂಬಲ್ಲಿ ಸಾಧಕಯುಕ್ತಿಯನ್ನೂ, ಪ್ರಕೃತ್ಯಾದಿಗಳ ಪರಮಾತ್ಮಾಧೀನತ್ವದ ಬಗ್ಗ ಪ್ರಾಣಾದಿ ದೃಷ್ಟಾಂತವನ್ನೂ, ಕ್ರಮದಿಂದ ೧-೨-೩-೪ ೫-೬ ೭ ಸೂತ್ರಗಳಿಂದ ಹೇಳಲಾಗಿದೆ

ಮಾಯಾವಾದಿಗಳು— "ತದನನ್ಯತ್ವಂ"= ಕಾರಣವಾದ ಬ್ರಹ್ಮದಿಂದ ಕಾರ್ಯವಾದ ಪ್ರಪಂಚಕ್ಕ ಅಭೇದವು ಇರುತ್ತದೆ ಏಕಂದರೆ- "ಆರಂಭಣ ಶಬ್ದಾದಿಭ್ಯಃ"= ಏಕವಿಜ್ಞಾನದಿಂದ ಸರ್ವ ವಿಜ್ಞಾನದ ದೃಷ್ಟಾಂತವಾಗಿ ಹೇಳಿದ "ಯಥಾ ಸೋಮ್ಯ" ಇತ್ಯಾದಿ ಶ್ರುತಿವಾಕ್ಯದಲ್ಲಿ "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" ಎಂಬುದಾಗಿ, "ಆರಂಭಣ" ಹಾಗು 'ಐತದಾತ್ಮ್ಯ" ಮುಂತಾದ ಶಬ್ದಗಳಿರುವುದರಿಂದ "ಭಾವೇಚ'= ಕಾರಣದ ಅಸ್ತಿತ್ವವಿದ್ದರೆಯೇ "ಉಪಲಬ್ಧೇಃ"= ಕಾರ್ಯದ ಉಪಲಬ್ಧಿಯಾಗುವುದರಿಂದಲೂ ಅಥವಾ 'ಭಾವಾಚ್ಚೋಪಲಬ್ಧೇಃ"=ಕೇವಲ ಆರಂಬಣಾದಿ ಶಬ್ದಗಳಿಂದಷ್ಟೇ ಅಲ್ಲ, ಪ್ರತ್ಯಕ್ಷದಿಂದ ಉಪಲಬ್ಧಿಯಾಗಿರುವುದರಿಂದಲೂ ಕಾರ್ಯಕಾರಣಗಳಲ್ಲಿ ಅಭೇದವಿರುತ್ತದೆ

"ಅವರಸ್ಯ"= ಕಾರ್ಯಕ್ಕೆ "ಸತ್ವಾಚ್ಚ"–ಉತ್ಪತ್ತಿಯ ಪೂರ್ವದಲ್ಲಿ ಕಾರಣದಿಂದ ಅಭಿನ್ನವಾಗಿ ಇರುವುದರಿಂದಲೂ "ಇದಂ ಸತ್" ಎಂಬುದಾಗಿ ಸತ್ವಶ್ರವಣವಿರುವುದರಿಂದಲೂ ಕಾರ್ಯ ಪ್ರಪಂಚಕ್ಕೆ ಕಾರಣವಾದ ಬ್ರಹ್ಮಾಭೇದವಿರುತ್ತದೆ

ಅಸದ್ವ್ಯಪದೇಶಾತ್''='ಅಸದೇವೇದಮಗ್ರ ಆಸೀತ್'' ಇತ್ಯಾದಿ ಶ್ರುತಿಗಳಲ್ಲಿ ಅಸತ್ತ್ವವನ್ನು ಹೇಳಿರುವುದರಿಂದ, "ನೇತಿಚೇತ್'' ಕಾರ್ಯಕ್ಕೆ ಸತ್ತ್ವವಿಲ್ಲವೆಂದು ಶಂಕಿಸುವುದು ''ನ''– ಸರಿಯಲ್ಲ ಏಕಂದರೆ'' ಧರ್ಮಾಂತರೇಣ''= ಕಾರ್ಯಾತ್ಮಕತ್ವವೆಂಬ ಧರ್ಮದಿಂದ ಅಸತ್ತ್ವ–(ಇರುವುದಿಲ್ಲ)ವೆಂಬ ಅರ್ಥವಿರುತ್ತದೆ ಏಕೆಂದರೆ (೧)ವಾಕ್ಯಶೇಷದಲ್ಲಿ "ತತ್ಸತ್" ಎಂಬುದಾಗಿ ಹೇಳಿಕೆಯಿರುವುದರಿಂದ

ದಧಿಘಟರುಚಕ ಮುಂತಾದವುಗಳನ್ನಪೇಕ್ಷಿಸುವವರಿಗ ಕ್ರಮದಿಂದ ಹಾಲು ಮಣ್ಣು ಬಂಗಾರಗಳಲ್ಲಿಯೇ ಪ್ರವೃತ್ತಿಯಾಗುವುದು ಕಂಡಿರುವುದೆಂಬ "ಯುಕ್ತೇಃ" = ಯುಕ್ತಿಯಿರುವುದರಿಂದಲೂ 'ಶಬ್ದಾಂತರಾಚ್ಚ''– "ಸದೇವ ಸೋಮ್ಯ' ಇತ್ಯಾದಿ ಶಬ್ದಾಂತರಗಳಿರುವುದರಿಂದಲೂ ಕಾರ್ಯಕ್ಕೆ ಉತ್ಪತ್ತಿಯ ಮುಂಚೆ ಸತ್ಯತೆಯೂ ಕಾರಣಾಭೇದವೂ ತಿಳಿದುಬರುತ್ತದೆ

''ಪಟವಚ್ಚ''– ಸಂವೇಷ್ಟಿತ (ಸಂಕುಚಿತ) ವಾದಾಗ ಪ್ರಸಾರಿತವಾದಾಗ, ಒಂದೇ ಪಟಕ್ಕೆ (ಅರಿವೆಗೆ) ಪ್ರತೀತಿಯಲ್ಲಿಯೂ ಕಾರ್ಯದಲ್ಲಿಯೂ ಭೇದವಿದ್ದರೂ ಅಭೇದವೇ ಇರುವಂತ ಕಾರ್ಯಕಾಣಗಳಲ್ಲಿ ಅಭೇದವೇ!

" ಯಥಾ ಚ ಪ್ರಾಣಾದಿಃ " = ಪ್ರಾಣಾಪಾನಾದಿ ವಾಯು ವೃತ್ತಿಗಳನ್ನು ಪ್ರಾಣಾಯಾಮದಿಂದ ನಿರೋಧಿಸಿದಾಗ, ಹಾಗು ನಿರೋಧಿಸದಿರುವಾಗ ಆಕುಂಚನಾದಿ ಕಾರ್ಯದ ಆಗುವಿಕೆಯೂ ಆಗದಿರುವಿಕೆಯೂ ಕಂಡಿದೆ ಆದರೂ ಅಲ್ಲಿ ಪ್ರಾಣಾದಿಗಳಿಗೆ ಭೇದವಿಲ್ಲ ಅದರಂತೆ ತಂತುಪಟ ಮುಂತಾದ ಕಾರ್ಯಕಾರಣಗಳಿಗೆ ಭೇದವಿಲ್ಲ ಆದುದರಿಂದ, ಜಗತ್ತು-ಬ್ರಹ್ಮಗಳೆಂಬ ಕಾರ್ಯಕಾರಣಗಳಿಗೆ ಅಭೇದವೇ! ಹೀಗೆ ಹೇಳುತ್ತಾರೆ.

ರಾಮಾನುಜೀಯರು—

(೧) " ಆರಂಭಣ " ಶಬ್ದಗಳಿಂದ ಕೂಡಿದ ಶ್ರುತಿಗಳಿಂದ, ಕಾರಣವಾದ ಬ್ರಹ್ಮಭೇದವು ಕಾರ್ಯವಾದ ಪ್ರಪಂಚಕ್ಕೆ ತಿಳಿದುಬರುತ್ತದೆ. (೨) ಘಟಾದಿ ಕಾರ್ಯಭಾವದಲ್ಲಿಯೂ "ಮೃದ್, ದ್ರವ್ಯಂ" ಎಂಬುದಾಗಿ ಕಾರಣದ ಉಪಲಬ್ಧಿಯಿರುವುದರಿಂದಲೂ, (೩) ಕಾರ್ಯಕ್ಕೆ ಕಾರಣದಲ್ಲಿ ಸತ್ತ್ವವಿರುವುದರಿಂದಲೂ ಕಾರ್ಯಕಾರಣಗಳಲ್ಲಿ ಅಭೇದವೇ! (೪) ಕಾರ್ಯಕ್ಕೆ ಆಗ ಅಸತ್ಯತೆಯು ಹೇಳಲ್ಪಡುವುದರಿಂದ ಕಾರಣಾಭೇದವಿಲ್ಲವೆಂದು ಶಂಕಿಸಬಾರದು ಏಕೆಂದರೆ ಸ್ಥೂಲತ್ವವಿರೋಧಿಯಾದ ಸೂಕ್ಷ್ಮತ್ವರೂಪ ಧರ್ಮಾಂತರವಿರುವುದರಿಂದ (ಆ ಅಭಿಪ್ರಾಯದಿಂದ) ಅಸತ್ತ್ವವ್ಯಪದೇಶವಿದ ಏಕೆಂದರೆ- ವಾಕ್ಯಶೇಷದಲ್ಲಿ "ಸನ್ಮನೋಽಕುರುತ" ಎಂಬುದಾಗಿ ಮನಸ್ಕಾರ(ಮನಸ್ಸನ್ನು ಮಾಡುವುದು) ವು ಹೇಳಲ್ಪಡುತ್ತದೆ (೪) ಹಾಗು ಅಸದ್ವ್ಯಪದೇಶದಲ್ಲಿ ಯುಕ್ತಿಯೂ "ತದ್ಧೇದಂ ತರ್ಹ್ಯವ್ಯಾಕೃತಮಾಸೀತ್" ಎಂಬ ಶಬ್ದಾಂತರವೂ ಇರುತ್ತದೆ (೫)ಸಂಯೋಗ ವಿಶೇಷವನ್ನು ಹೊಂದಿದ ತಂತು

ಗಳೇ "ಪಟ"ವೆಂಬ ಬೇರೆ ಹೆಸರನ್ನು ಪಡೆಯುವಂತೆ ಬ್ರಹ್ಮವು ಜಗತ್ತೆಂಬ ಬೇರೆ ಹೆಸರನ್ನು ಪಡೆದಿದ (೬) ಒಂದೇ ನಾಯುವು ವೃತ್ತಿಗಳ ಪ್ರಭೇದದಿಂದ ಪ್ರಾಣ ಅಪಾನಾದಿ ಬೇರೆ ಬೇರೆ ಸಂಜ್ಞೆಗಳನ್ನು ಹೊಂದಿರುವಂತೆ ಬ್ರಹ್ಮವೂ ಪ್ರಪಂಚವೆಂಬ ಸಂಜ್ಞೆಯನ್ನು ಹೊಂದಿದೆ ಆದುದರಿಂದ ಬ್ರಹ್ಮನಿಂದ ಅಭೇದವು ಜಗತ್ತಿಗೆ ಇದೆ ಹೀಗೆ ಹೇಳುತ್ತಾರೆ

**ಇತರವ್ಯಪದೇಶಾಧಿಕರಣಂ ೨-೧-೭.**

ಆರುಸೂತ್ರಗಳುಳ್ಳ ಈ ಅಧಿಕರಣದಲ್ಲಿ ಶ್ರುತಿ-ಅನುಭವಗಳ ಸಂವಾದವುಳ್ಳ ಯುಕ್ತಿವಿರೋಧವು ಪರಿಹರಿಸಲ್ಪಡುತ್ತದೆ

"ಇತರವ್ಯಪದೇಶಾತ್''="ಇತರಸ್ಯ"=ಪ್ರಸ್ತುತವಾದ ಬ್ರಹ್ಮಕರ್ತೃತ್ವದಿಂದ ಬೇರೆಯಾದ ಜೀವಕರ್ತೃತ್ವಕ್ಕೆ "ವ್ಯಪದೇಶಾತ್''-'ಜೀವಾದ್ ಭವಂತಿ ಭೂತಾನಿ" ಇತ್ಯಾದಿ ಶ್ರುತಿಯಲ್ಲಿ ಪ್ರತಿಪಾದನವಿರುವುದರಿಂದ "ಚೇತ್''=ಜೀವನು ಒಂದು ಪಕ್ಷದಲ್ಲಿ ಸ್ವತಂತ್ರಕರ್ತೃವೆಂದರೆ- "ತರ್ಹಿ''- ಈ ಪಕ್ಷದಲ್ಲಿ "ಹಿತಾಕರಣಾದಿ ದೋಷಪ್ರಸಕ್ತಿಃ"=ಹಿತಾಕರಣ, ಅಹಿತಕರಣಗಳೆಂಬ ದೋಷಗಳ ಪ್ರಸಂಗವಿರುತ್ತದೆ ಆದರೆ ಸ್ವತಂತ್ರನಾಗಿದ್ದರೆ ಜೀವನಿಗೆ ಇವುಗಳು ಅನ್ವಯಿಸಲಾರವಾದುದರಿಂದ, ಜೀವನು ಸ್ವತಂತ್ರ ಕರ್ತೃವಲ್ಲ

ಓಂ॥ **ಕೃತ್ಸ್ನಪ್ರಸಕ್ತಿರ್ನಿರವಯವತ್ವ ಶಬ್ದಕೋಪೋ ವಾ** ॥ಓಂ॥

"ಕೃತ್ಸ್ನಪ್ರಸಕ್ತಿಃ"-ಜೀವನಿಗೆ ಸ್ವತಂತ್ರ ಕರ್ತೃತ್ವವಿದ್ದರೆ- ಸರ್ವಸಾಮರ್ಥ್ಯದಿಂದ ಕಾರ್ಯದಲ್ಲಿ ಪ್ರವೃತ್ತಿಯೆಂದರ "ತೃಣಾದಾನ'' ಮುಂತಾದ ಕಾರ್ಯಗಳಲ್ಲಿಯೂ ಅನುಭವವಿರುದ್ಧವಾದ ಸರ್ವ ಸಾಮರ್ಥ್ಯದ ಪ್ರಸಕ್ತಿಯು ಬರುತ್ತದೆ,"ನಿರವಯವತ್ವ ಶಬ್ದಕೋಪೋವಾ'' -ಏಕದೇಶದಿಂದ (ಅಂಶದಿಂದ) ಪ್ರವೃತ್ತಿಯೆಂದು ಹೇಳಿದರ ನಿರಂಶತ್ವ ಪ್ರತಿಪಾದಕ "ನಿರವಯವಃ'' ಇತ್ಯಾದಿ ಶ್ರುತಿ ವಿರೋಧವು ಬರಪೇಕಾಗುತ್ತದೆ ಆದುದರಿಂದ ಜೀವನಿಗೆ ಸ್ವತಂತ್ರ ಕರ್ತೃತ್ವವಿಲ್ಲ

ಈ ಅಧಿಕರಣದಲ್ಲಿ ಆರು ಸೂತ್ರಗಳಿದ್ದರೂ, ನ್ಯಾಯಸುಧೆಯಲ್ಲಿ ಮೊದಲಿನ ಹಾಗು ಕೊನೆಯ ಸೂತ್ರಗಳೆರಡನ್ನೇ ವಿವೇಚಿಸಿಸುವುದರಿಂದ ಇಲ್ಲಿಯೂ ಗ್ರಂಥ ವಿಸ್ತರದ ಭೀತಿಯಿಂದ ಆ ಎರಡು ಸೂತ್ರಗಳ ಅರ್ಥವನ್ನು ಮಾತ್ರ ಬರೆಯಲಾಗಿದೆ

ರಾಮಾನುಜೀಯರು ಮಾಯಾವಾದಿಗಳು ಇತರ "ವ್ಯಪದೇಶಾದಿ ಸೂತ್ರವು ಪೂರ್ವಪಕ್ಷಸೂತ್ರವೆಂದೂ ಮುಂದಿನ ಎರಡು ಸೂತ್ರಗಳು ಸಿದ್ಧಾಂತಸೂತ್ರಗಳೆಂದು ಹೇಳುತ್ತಾರೆ

"ಇತರಸ್ಯ =ಶಾರೀರನಿಗೆ (ಜೀವನಿಗೆ) "ವ್ಯಪದೇಶಾತ್ '= "ತತ್ಸೃಷ್ಟ್ವಾ ತದೇವಾನುಪ್ರಾವಿಶತ್'' ಎಂಬುದಾಗಿ ಬ್ರಹ್ಮಾಭೇದ ವಚನವಿರುವುದರಿಂದ,

"ಹಿತಾಕರಣಾದಿ ದೋಷ ಪ್ರಸಕ್ತಿಃ"– ಹಿತಾಕರಣ, ಅಹಿತಕರಣಗಳೆಂಬ ದೋಷಗಳು ಪ್ರಸಕ್ತವಾಗುತ್ತವೆ ಆದುದರಿಂದ, ಬ್ರಹ್ಮವು ಕರ್ತೃವಲ್ಲ ಹೀಗೆ ಪೂರ್ವಪಕ್ಷವನ್ನು ಹೇಳಿ ಮುಂದಿನ ಎರಡು ಸೂತ್ರಗಳಿಂದ, ಔಪಾಧಿಕಭೇದವಿರುವುದರಿಂದ ಸರ್ವಜ್ಞತ್ವ ಸರ್ವಶಕ್ತಿಮತ್ವವು, ಬ್ರಹ್ಮನಲ್ಲಿ ಇರುವುದರಿಂದ, ಹಾಗು ಭೂಮಿಯಿಂದ ಪರಸ್ಪರ ಭಿನ್ನವಾದ ಕಲ್ಲು–ವಜ್ರ–ವ್ರೀಹಿ ಮುಂತಾದವುಗಳು ಹೊರಬಿದ್ದರೂ ಭೂಮಿಗೆ ಹೇಗೋ ಹಾಗ, ಜೀವರಿಗೆ ಪರಸ್ಪರ ಭೇದವಿದ್ದರೂ ಬ್ರಹ್ಮನಲ್ಲಿ ಭೇದವಿಲ್ಲದ್ದರಿಂದ, ಅವರಿಗಾಗುವ ಹಿತಾಕರಣಾದಿಗಳು ಬ್ರಹ್ಮನಿಗ ಆಗುವುದಿಲ್ಲ"ವೆಂದು ಹೇಳಿರುತ್ತಾರೆ ರಾಮಾನುಜೀಯರೂ ಇದೇ ತರಹದ ಅಭಿಪ್ರಾಯವನ್ನು ಹೇಳುತ್ತಾರೆ

**ಶ್ರುತೇಸ್ತು ಶಬ್ದಮೂಲತ್ವಾಧಿಕರಣಂ ೨ ೧–೮**

ಇದಕ್ಕೆ ವಿಚಿತ್ರ ಶಕ್ತ್ಯಧಿಕರಣವೆಂದೂ ಹೆಸರು ಐದು ಸೂತ್ರಗಳುಳ್ಳ ಈ ಅಧಿಕರಣದಲ್ಲಿ 'ಅಣೋಯಸ್ತ್ವ" ಮುಂತಾದ ಧರ್ಮವುಳ್ಳವನಿಗೆ "ಮಹೀಯಸ್ತ್ವ" ಮುಂತಾದ ಧರ್ಮಗಳಿರುವುದಾದರ ವ್ಯಾಘಾತವೆಂಬಲ್ಲಿ ಪರ್ಯವಸಾನಹೊಂದುವ ಪ್ರಬಲ ಯುಕ್ತಿಗಳ ವಿರೋಧವನ್ನು ಪರಿಹರಿಸಲಾಗುತ್ತದೆ

॥ ಓಂ ॥ **ಶ್ರುತೇಸ್ತು ಶಬ್ದಮೂಲತ್ವಾತ್** ॥ ಓಂ ॥

ಈಶ್ವರನ ಸ್ವತಂತ್ರ ಕರ್ತೃತ್ವಪಕ್ಷದಲ್ಲಿ ಹಿಂದೆ ಹೇಳಿದ ಕೃತ್ಸ್ನಪ್ರಸಕ್ತಿ ಮುಂತಾದ ದೋಷಗಳಿಲ್ಲ ಏಕೆ? "ಶ್ರುತೇಸ್ತು"– "ಯೋಽಸೌ ವಿರುದ್ಧೋಽವಿರುದ್ಧೋ ಮನುರಮನುಃ" ಇತ್ಯಾದಿ ಶ್ರುತಿಯು ಇರುವುದರಿಂದಲೇ! (ಇಲ್ಲಿ ಲೋಕದಲ್ಲಿ ವಿರುದ್ಧವಾದ ಧರ್ಮಗಳಿಗ ಪರಮಾತ್ಮನಲ್ಲಿ ಅವಿರೋಧವೆಂದು ಹೇಳಿದುದರಿಂದಲೇ) 'ಶಬ್ದಮೂಲತ್ವಾತ್"– ಪರಮಾತ್ಮ-ತದ್ಧರ್ಮಗಳು ಕೇವಲ ಆಗಮೈಕವೇದ್ಯವಾದುದರಿಂದ, ಯುಕ್ತಿಯ ವಿಷಯವಾಗಿರುವುದಿಲ್ಲ ಆದುದರಿಂದ ಯುಕ್ತಿವಿರೋಧವಿಲ್ಲ

॥ ಓಂ ॥ **ವಿಕರಣತ್ವಾನ್ನೇತಿ ಚೇತ್ತದುಕ್ತಂ** ॥ ಓಂ ॥

'ವಿಕರಣತ್ವಾತ್"– "ಅಚಕ್ಷುಃಶ್ರೋತ್ರಂ ತದಪಾಣಿಪಾದಂ" ಇತ್ಯಾದಿ ಶ್ರುತಿಯಲ್ಲಿ ಕಣ್ಣು ಮುಂತಾದ ಕರಣಗಳಿಲ್ಲವೆಂದು ಹೇಳಿದುದರಿಂದ, ಪರಮಾತ್ಮನಿಗೆ "ನ ಇತಿ ಚೇನ್ನ"– ಜಗತ್ಕರ್ತೃತ್ವವು ಯುಕ್ತವಲ್ಲವೆಂದು ಶಂಕಿಸಬಾರದು ಏಕೆಂದರೆ 'ತದುಕ್ತಂ"- 'ನ ತಸ್ಯ ಕಾರ್ಯಂ ಕರಣಂ ಚಂ ವಿದ್ಯತೇ" ಎಂಬುದಾಗ ಅಲ್ಲಿಯೇ ಪ್ರಾಕೃತೇಂದ್ರಿಯಗಳಿಲ್ಲವೆಂಬ ಅರ್ಥವನ್ನು ಹೇಳಿರುತ್ತದೆ ಆದುದರಿಂದ,ಪ್ರಾಕೃತೇಂದ್ರಿಯಗಳಿಲ್ಲದಿದ್ದರೂ ಕರ್ತೃತ್ವವು ಯುಕ್ತವಾಗಿರುತ್ತದೆ ನ್ಯಾಯಸುಧೆಯಲ್ಲಿ ಎರಡೇ ಸೂತ್ರಗಳನ್ನು ಪರಿಗ್ರಹಿಸಿರುವುದರಿಂದ, ಇವುಗಳನ್ನೇ ಇಲ್ಲಿ ವಿವರಿಸಲಾಗಿದೆ (೧) ಲೋಕದಲ್ಲಿ ವಿರುದ್ಧವಾದ ಧರ್ಮಗಳು ವಿಷ್ಣುವಿನಲ್ಲಿ ಅವಿ

ರೋಧವಿಂದಿರು-ವೆಂಬುದು ಶ್ರುತಿಪ್ರಮಾಣಸಿದ್ಧವಾಗಿದೆ, ಹಾಗು ಆ ಧರ್ಮಗಳು ಆಗಮೈಕಗಮ್ಯಗಳು (೨) ಪರಮಾತ್ಮನಲ್ಲಿಯೇ ವಿಚಿತ್ರಾನೇಕ ಶಕ್ತಿಗಳಿರುತ್ತವೆ (೩) ಜೀವಪಕ್ಷದಲ್ಲಿ ಯುಕ್ತಿವಿರೋಧವು ದೋಷವು ಈಶ್ವರ ಪಕ್ಷದಲ್ಲಿ ಅವು ದೋಷವಲ್ಲ (೪) ಪರಮಾತ್ಮನು ಸರ್ವವಿಷಯಕನಾದ ಸಾರ್ವಕಾಲಿಕ ಶಕ್ತಿಯುಳ್ಳವನೆಂದು ಶ್ರುತಿಗಳಲ್ಲಿ ಸಿದ್ಧವಿರುವುದು (೫) ಇಂದ್ರಿಯಾದಿಗಳಿಲ್ಲವೆಂಬುದಕ್ಕೆ ಪ್ರಾಕೃತೇಂದ್ರಿಯವಿಲ್ಲವೆಂಬ ಅರ್ಥವಿರುವುದು'' ಈ ಯುಕ್ತಿಗಳಿಂದ ಹರಿಯ ಕರ್ತೃತ್ವದಮೇಲಿನ ಆಕ್ಷೇಪವನ್ನು ಪರಿಹರಿಸಿ ಅದನ್ನು ಸಮರ್ಥಿಸಲಾಗಿದೆ

ಮಾಯಾವಾದಿಗಳು— "ಕೃತ್ಸ್ನ ಪ್ರಸಕ್ತಿ" ಇತ್ಯಾದಿ ಸೂತ್ರಗಳಿಂದಾರಂಭಿಸಿದ ಮೂರು ಸೂತ್ರಗಳಿಂದಲೇ ಈ ಅಧಿಕರಣವೆಂದು ಹೇಳುತ್ತಾರೆ ಅದರಲ್ಲಿ- "ಕೃತ್ಸ್ನ ಪ್ರಸಕ್ತಿ" ಇತ್ಯಾದಿ ಸೂತ್ರವು ಪೂರ್ವಪಕ್ಷವಾಗಿದೆ ಸರ್ವಾತ್ಮನಾ ಪರಿಣಾಮ ಪಕ್ಷದಲ್ಲಿ "ಕೃತ್ಸ್ನ ಪ್ರಸಕ್ತಿಃ"- ಸಮಗ್ರ ಪರಿಣಾಮವಾಗುವುದರಿಂದ ಅನಿತ್ಯತೆಯ ಪ್ರಸಂಗವು ಏಕದೇಶ ಪರಿಣಾಮವೆಂದರೆ ನಿರವಯತ್ವ ಶ್ರುತಿ ವಿರೋಧವು ಹೀಗೆ ಪೂರ್ವಪಕ್ಷ ಸಿದ್ಧಾಂತವು—

"ಶ್ರುತೇಸ್ತು" = ಕಾರ್ಯವಾದ ಪ್ರಪಂಚದಿಂದ ವೈಲಕ್ಷಣ್ಯವನ್ನು (ವಿಕಾರದಿಂದ ಬೇರೆಯಾಗಿರುವುದೆಂಬ) ಹೇಳುವ ಶ್ರುತಿಯು ಇರುವುದರಿಂದ, ನಿತ್ಯತೆ, ಕೃತ್ಸ್ನ ಪ್ರಸಕ್ತಿ ದೋಷವಿಲ್ಲ ಏಕೆಂದರ ಬ್ರಹ್ಮಸ್ವರೂಪವು ಶಬ್ದೈಕ ಸಮಧಿಗಮ್ಯವಾದುದರಿಂದ, ಜಗದುಪಾದಾನತ್ವವೂ ನಿರವಯವತ್ವವೂ ಸಂಗತವಾಗುತ್ತದೆ ಮಾಯಾಶಕ್ತಿಯಿಂದ ಪರಿಣಾಮವು ವಾಸ್ತವವಲ್ಲ ಆದುದರಿಂದ ದೋಷವಿಲ್ಲವೆಂದು ಹೇಳುತ್ತಾರೆ

ಮುಂದಿನ "ಸರ್ವೋಪೇತಾಚ ತದ್ದರ್ಶನಾತ್'' 'ವಿಕರಣತ್ವಾನ್ನೇತಿ ಚೇತ್ತದುಕ್ತಂ'' ಇವೆರಡು ಸೂತ್ರಗಳಿಂದ ಬೇರೆ ಅಧಿಕರಣವೆಂದೂ ಹೇಳುತ್ತಾರೆ ಅವರ ರೀತಿಯಿಂದ,- 'ವಿಕರಣತ್ವಾತ್'' ಕರಣರಹಿತವಾದುದರಿಂದ "ನೇತಿಚೇನ್ನ''- ಪರದೇವತೆಗೆ ಸರ್ವಕರ್ಮಕರ್ತೃತ್ವವಿಲ್ಲವೆಂದು ಶಂಕಿಸಬಾರದು ಏಕೆಂದರೆ- ಶಬ್ದಮೂಲತ್ವ ಯುಕ್ತಿಯಿಂದಲೇ ಹಿಂದೆ ಇದನ್ನು ಪರಿಹರಿಸಲಾಗಿದೆ ಹೀಗೆ ಕೊನೆಯ ಸೂತ್ರದ ಅರ್ಥ ಹೇಳುತ್ತಾರೆ

ರಾಮಾನುಜೀಯರು ಮಾತ್ರ-"ಕೃತ್ಸ್ನ ಪ್ರಸಕ್ತಿ" ಈ ಸೂತ್ರದಿಂದ "ವಿಕರಣತ್ವಾತ್'' ಇತ್ಯಾದಿ ಸೂತ್ರವನ್ನೊಳಗೊಂಡು ಆರು ಸೂತ್ರಗಳಿಂದ ಈ ಅಧಿಕರಣವೆಂದು ಹೇಳುತ್ತಾರೆ ಸೂತ್ರಾರ್ಥ-ಅಧಿಕರಣನಿರೂಪಣೆಯಲ್ಲಿ ಯಾವದೇ ವ್ಯತ್ಯಾಸವನ್ನು ಹೇಳಿರುವುದಿಲ್ಲ ರಾಮಾನುಜೀಯರು ಪರಿಣಾಮವಾದಿಗಳು—ಮಾಯಾವಾದಿಗಳು ಬ್ರಹ್ಮವಿವರ್ತವಾದಿಗಳೂ ಮಾಯಾಪರಿಣಾಮಕಾರಣತ್ವವಾದಿ ವಾದಿಗಳೂ ಆಗಿದ್ದಾರೆ

**ನ ಪ್ರಯೋಜನವತ್ವಾಧಿಕರಣಂ ೨-೧-೯.**

ಎರಡು ಸೂತ್ರಗಳುಳ್ಳ ಈ ಅಧಿಕರಣದಲ್ಲಿ ಸಲ ಮುಖಯುಕ್ತಿಯ ವಿರೋಧ ವನ್ನು ಪರಿಹರಿಸಲಾಗುತ್ತದೆ

" ನ '= ಈಶ್ವರನ ಸೃಷ್ಟ್ಯಾದಿ ಪ್ರವೃತ್ತಿಯು ತನ್ನ ಪ್ರಯೋಜನಾರ್ಥವಲ್ಲ ಏಕೆ ? ''ಪ್ರಯೋಜನವತ್ವಾತ್''=ಪೂರ್ಣಾನಂದನಾದುದರಿಂದ ಹೊಂದಬೇಕಾದು ದನ್ನು ಮುಂಚಯೇ ಹೊಂದಿದವನಾದುದರಿಂದ,

॥ಓಂ॥ ಲೋಕವತ್ತು ಲೀಲಾಕೈವಲ್ಯಂ॥ಓಂ ॥

"ಲೋಕವತ್ತು'– ಲೋಕದಲ್ಲಿ ಮತ್ತ ಜನರ ಪ್ರವೃತ್ತಿಯು ಹೇಗೋ ಹಾಗೆ "ಲೀಲಾಕೈವಲ್ಯಂ''-ಈಶ್ವರನ ಸೃಷ್ಟಿವ್ಯಾಪಾರವು ಕೇವಲಲೀಲೆಯೇ! ಆದುದರಿಂದ ಸುಖೋದ್ರೇಕದಿಂದ ಸ್ವಭಾವದಿಂದಲೇ ವಿಶ್ವಸೃಷ್ಟಿಯು

ಮಾಯಾವಾದಿಗಳು- "ಪ್ರಯೋಜನವತ್ವಾತ್''=ಚೇತನನ ಪ್ರವೃತ್ತಿಗೆ ಪ್ರಯೋಜನವಿರುವುದರಿಂದ " ನ ''=ಬ್ರಹ್ಮನಿಗೆ ಜಗತ್ಕಾರಣತ್ವವು ಯುಕ್ತವಲ್ಲ ಹೀಗ ಪೂರ್ವಪಕ್ಷವು ಬರಲು, "ನ"= ಇದು ಸರಿಯಲ್ಲ, ಏಕೆಂದರೆ "ಲೋಕವತ್''= ಪ್ರಾಪ್ತಕಾಮರಾದ ರಾಜಾದಿಗಳಿಗೆ ಮೃಗಯಾದಿಗಳಲ್ಲಿ ಹೇಗೂ ಹಾಗೆ "ಲೀಲಾ ಕೈವಲ್ಯಂ''= ಕೇವಲ ಲೀಲೆಯಿಂದ ಬ್ರಹ್ಮನಿಗ ಜಗತ್ಸೃಷ್ಟ್ಯಾದಿ ಪ್ರವೃತ್ತಿಯು ಸಂಭವಿಸುತ್ತದ. ಹೀಗೆ ೧ನೆಯ ಸೂತ್ರವನ್ನು ಪೂರ್ವಪಕ್ಷವೆಂದೂ ಕೊನೆಯು ದನ್ನು ಸಿದ್ಧಾಂತವೆಂದೂ ವ್ಯಾಖ್ಯಾನಿಸುತ್ತಾರೆ

ರಾಮಾನುಜೀಯರೂ—ಇದರಂತೆಯೇ ವ್ಯಾಖ್ಯಾನಿಸಿ ಕೊನೆಯ ಸೂತ್ರಕ್ಕೆ ಕೇವಲ ಲೀಲಾರ್ಥವಾಗಿಯೇ ( ಕ್ರೀಡಾರೂಪ ಪ್ರಯೋಜನಕ್ಕಾಗಿ ) ರಾಜಾದಿ ಗಳಿಗೆ ಕಂದುಕಾದ್ಯಾರಂಭದಂತೆ ಈಶ್ವರನ ಸೃಷ್ಟ್ಯಾದಿಪ್ರವೃತ್ತಿಯಾಗುವುದೆಂದು ಹೇಳುತ್ತಾರೆ

**ವೈಷಮ್ಯಾಧಿಕರಣಂ ೨-೧-೧೦**

ಮೂರು ಸೂತ್ರಗಳುಳ್ಳ ಈ ಅಧಿಕರಣದಲ್ಲಿ ಬಹುಮುಖ ದೃಢಯುಕ್ತಿ ವಿರೋಧವನ್ನು ಪರಿಹರಿಸಲಾಗುವದು

॥ ಓಂ ॥ ವೈಷಮ್ಯ ನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾಹಿ ದರ್ಶಯತಿ ॥ ಓಂ ॥

"ವೈಷಮ್ಯ ನೈರ್ಘೃಣ್ಯೇ" = ಜೀವರಿಗೆ ಬೇರೆ ಬೇರೆ ಫಲವನ್ನು ಕೊಡುವುದ ರಿಂದ ವೈಷಮ್ಯ ನೈರ್ಘೃಣ್ಯಗಳೆಂಬ ದೋಷಗಳು, "ನ"- ಈಶ್ವರನಿಗೆ ಇರುವುದಿಲ್ಲ ಏಕೆ ? 'ಸಾಪೇಕ್ಷತ್ವಾತ್"=ಕರ್ಮಾದಿಗಳನ್ನು ಅಪೇಕ್ಷಿಸಿ ಫಲದಾತೃತ್ವವಿರುವುದ

ರಿಂದ  ಇದು ಏಕೆ ? ಎಂದರೆ "ತಥಾ ಹಿ ದರ್ಶಯತಿ" = 'ಪುಣ್ಯೇನ ಪುಣ್ಯಂ" ಎಂಬ ಶ್ರುತಿಯು ಈ ವಿಷಯವನ್ನು ಹೇಳುವುದರಿಂದ

॥ ಓಂ ॥ ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್ ॥ ಓಂ ॥

"ಕರ್ಮ" = ಪರಮಾತ್ಮನಿಗೆ ಅನುಸರಿಸಬೇಕಾದ ಕರ್ಮವು "ನ' – ಇಲ್ಲ ಏಕೆ ? - "ಅವಿಭಾಗಾತ್"=ಅಸ್ವತಂತ್ರ ವಸ್ತುಗಳಿಂದ ಅದು ಬೇರೆಯಾಗದಿರುವುದರಿಂದ = ಅಸ್ವತಂತ್ರವಾದುದರಿಂದ  "ಇತಿ ಚೇನ್ನ"- ಹೀಗೆ ಹೇಳಬಾರದು. ಏಕೆ ? 'ಅನಾದಿತ್ವಾತ್"=ಪ್ರವಾಹರೂಪದಿಂದ ಅನಾದಿಯಾದುದರಿಂದ  ಆದುದರಿಂದ, ಪೂರ್ವಪೂರ್ವದ ಕರ್ಮಗಳನ್ನನುಸರಿಸಿ ಉತ್ತರೋತ್ತರ ಕರ್ಮಗಳನ್ನು ಮಾಡಿಸುವುದರಿಂದ ಕರ್ಮವು ಬೇಕಾದುದರಿಂದ, ಹಿಂದಿನ ದೋಷವಿಲ್ಲ

॥ ಓಂ ॥ ಉಪಪದ್ಯತೇ ಚಾಪ್ಯುಪಲಭ್ಯತೇ ಚ ॥ ಓಂ ॥

ಕರ್ಮಾದಿಗಳನ್ನು ಅಪೇಕ್ಷಿಸಿದರೂ "ಉಪಪದ್ಯತೇ" = ಸ್ವಾತಂತ್ರ್ಯವು ಸಂಭವಿಸುತ್ತದೆ  ಏಕೆಂದರೆ ಕರ್ಮವು ಸ್ವಾಧೀನವಾಗಿದೆ  "ಉಪಲಭ್ಯತೇ ಚ"= ಇಂಥ ಕರ್ಮವನ್ನನುಸರಿಸುವದರಿಂದ ಬರುವ ವೈಷಮ್ಯ ನೈರ್ಘೃಣ್ಯಗಳೂ ದೋಷಗಳಲ್ಲವೆಂದು ಹೇಳಿದುದರಿಂದ ದೋಷವಲ್ಲ

ಮಾಯಾವಾದಿಗಳೂ ರಾಮಾನುಜೀಯರೂ— (೧) ಈಶ್ವರನು ಜೀವಕೃತ ಪುಣ್ಯ ಪಾಪಾದಿ ಸಾಪೇಕ್ಷನಾಗಿ ಫಲ ಕೊಡುವನೆಂಬ ಶ್ರುತಿಯಿರುವುದರಿಂದ, ಕರ್ಮ ಸಾಪೇಕ್ಷನಾಗಿ ಫಲದಾನದಿಂದ ವೈಷಮ್ಯಾದಿಗಳಿಲ್ಲ (೨) ಸೃಷ್ಟಿಯ ಮುಂಚೆ ಕರ್ಮವಿಲ್ಲವೆಂದಲ್ಲ  ಸಂಸಾರವು ಅನಾದಿಯಾದುದರಿಂದ ಇದ್ದೇ ಇದೆ (೩) ಸಂಸಾರಕ್ಕೆ ಅನಾದಿತ್ವವೇ ಯುಕ್ತವಾಗುತ್ತದೆ  ಇಲ್ಲದಿದ್ದರೆ ಅನ್ಯೋನ್ಯಾಶ್ರಯಾದಿ ದೋಷಗಳು ಬರುತ್ತವೆ  ಶ್ರುತಿಸ್ಮೃತಿಗಳಲ್ಲಿ ಸಂಸಾರದ ಅನಾದಿತ್ವವು ಹೇಳಲ್ಪಟ್ಟದ್ದೂ ಆಗಿದೆ" ಹೀಗೆ ಹೇಳುತ್ತಾರೆ. ರಾಮಾನುಜೀಯರು ಮಾತ್ರ ಮುಂದಿನ ಸೂತ್ರವೂ ಇದರಲ್ಲಿ ಸೇರಿದೆಯೆಂದು ಹೇಳುತ್ತಾರೆ

**ಸರ್ವಧರ್ಮಾಧಿಕರಣಂ ೨-೧-೧೧.**

॥ ಓಂ ॥ **ಸರ್ವಧರ್ಮೋಪಪತ್ತೇಶ್ಚ** ॥ ಓಂ ॥

ಇದರಲ್ಲಿ ಬ್ರಹ್ಮನ ಗುಣಪೂರ್ಣತ್ವ–ನಿರ್ದೋಷತ್ವಗಳ ಮೇಲಿನ ಯುಕ್ತಿ ವಿರೋಧವನ್ನು ಪರಿಹರಿಸಲಾಗುತ್ತದೆ

"ಸರ್ವಧರ್ಮಾಣಾಂ"=ಜ್ಞಾನಾನಂದಾದಿ ಸದ್ಗುಣಗಳೆನಿಸಿದ ಹಾಗು ದುಃಖ ದ್ವೇಷಾದಿಗಳಿಲ್ಲದಿರುವುದೆಂಬ ಸಕಲಧರ್ಮಗಳೂ "ಉಪಪತ್ತೇಶ್ಚ" ಸ್ವಾತಂತ್ರ್ಯವಿರುವುದರಿಂದ ಹರಿಯಲ್ಲಿ ಯುಕ್ತವನಿಸುತ್ತವೆ  ಆದುದರಿಂದ ಯಾವದೇ ಯುಕ್ತಿ ವಿರೋಧವಿಲ್ಲ

ಮಾಯಾವಾದಿಗಳು- "ಕಾರಣಗತವಾದ ಎಲ್ಲ ಧರ್ಮಗಳೂ ಬ್ರಹ್ಮನಲ್ಲಿ ಸಂಭಾವಿಸುವುದರಿಂದ ಬ್ರಹ್ಮವು ಜಗತ್ಕಾರಣವಾದುದೆಂದು ಸಿದ್ಧಿಸಿತು "

ರಾಮಾನುಜೀಯರು-'ಪ್ರಧಾನ ಪರಮಾಣುಗಳಲ್ಲಿ ಸಂಭವಿಸಲಾರದ ಸರ್ವ ಧರ್ಮಗಳು ಬ್ರಹ್ಮನಲ್ಲಿ ಇರುವುದರಿಂದ, ಹಾಗು ಸರ್ವಶಕ್ತಿ ಪ್ರತಿಪಾದಕ ಶ್ರುತಿ ಯಿರುವುದರಿಂದ ಬ್ರಹ್ಮವೇ ಜಗತ್ಕಾರಣವು,' ಹೀಗೆ ಹೇಳುತ್ತಾರೆ

**ರಚನಾನುಪಪತ್ತ್ಯಧಿಕರಣಂ ೨-೨-೧**

॥ ಓಂ ॥ **ರಚನಾನುಪಪತ್ತೇಶ್ಚ ನಾನುಮಾನಂ** ॥ ಓಂ ॥

ಈ ನಾಲ್ಕು ಸೂತ್ರಗಳುಳ್ಳ ಈ ಅಧಿಕರಣದಲ್ಲಿ ಅಚೇತನಪ್ರಕೃತಿ ಕಾರಣ ವಾದಿಯಾದ ನಿರೀಶ್ವರ ಸಾಂಖ್ಯಮತವನ್ನು ನಿರಾಕರಿಸಲಾಗುತ್ತದೆ " ಅನು ಮಾನಂ"=ಅನುಮಾನ ಕಲ್ಪಿತವಾದ, ಪ್ರಧಾನವು, "ನ =ಜಗತ್ಕರ್ತೃವಲ್ಲ ಏಕೆ? "ರಚನಾನುಪಪತ್ತೇಶ್ಚ"– ಜಡಕ್ಕೆ ರಚಯಿತೃತ್ವವು (ಸ್ವತಃ ಪ್ರವೃತ್ತಿ) ಸಂಭವಿಸು ವುದಿಲ್ಲವಾದುದರಿಂದ ಹಾಗು ಸ್ವತಃ ಪ್ರವೃತ್ತಿಯಿಲ್ಲವೆಂಬಲ್ಲಿ ಸಾಧಕ ಪ್ರಮಾಣವೂ ಇರುವುದರಿಂದ

॥ ಓಂ ॥ **ಪ್ರವೃತ್ತೇಶ್ಚ** ॥ ಓಂ ॥

ಪಟಾದಿ ಸೃಷ್ಟಿಯಲ್ಲಿ ಚೇತನನಿಗೆ ಕರ್ತೃತ್ವವು ಕಂಡಿರುವುದರಿಂದಲೂ, ಅನು ಮಾನಕಲ್ಪಿತ ಜಡ-ಪ್ರಧಾನವು ಕರ್ತೃವಾಗಲಾರದು

॥ ಓಂ ॥ **ಪಯೋಂಬುವಚ್ಚೇತ್ತತ್ರಾಪಿ** ॥ ಓಂ ॥

"ಪಯೋಂಬುವಚ್ಚೇತ್"– ಅಚೇತನವಾದ ಹಾಲು ನೀರುಗಳಿಗೆ- ಸ್ವತಃ ಮೊಸರಾಗುವುದರಲ್ಲಿ, ಹರಿಯುವುದರಲ್ಲಿ ಪ್ರವೃತ್ತಿಯಿರುವಂತೆ ಪ್ರಧಾನಕ್ಕೂ ಜಗ ತ್ಕರ್ತೃತ್ವವಿರಲಿ, ಹೀಗೆ ಹೇಳುವದು "ನ"=ಸರಿಯಲ್ಲ ಏಕೆಂದರೆ- "ತತ್ರಾಪಿ"– ಪಯೋಂಬ್ವಾದಿಗಳಲ್ಲಿಯೂ ಈಶ್ವರನೆಂಬ ಚೇತನದಿಂದಲೇ ಪ್ರವೃತ್ತಿಯಾಗಿದೆ

॥ ಓಂ ॥ **ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್** ॥ ಓಂ ॥

'ವ್ಯತಿರೇಕಾನವಸ್ಥಿತೇಃ"- ಈಶ್ವರನಿಲ್ಲದೆ ಯಾವುದೂ ನಡೆಯಲಾರದಾದುದ ರಿಂದ, 'ಅನಪೇಕ್ಷತ್ವಾಚ್ಚ"– ಆದುದರಿಂದಲೇ ಕೇವಲ ಅಚೇತನಕ್ಕೇ ಪ್ರವೃತ್ತಿ ಯೆಂಬಲ್ಲಿ ದೃಷ್ಟಾಂತವಿಲ್ಲವಾದುದರಿಂದ, ಸಜ್ಜನರಿಂದ ಅನಾದರಣೀಯವಾದುದ ರಿಂದ, ನಿರೀಶ್ವರ ಸಾಂಖ್ಯಮತವು ಅಯುಕ್ತವಾದುದರಿಂದ, ವಿಷ್ಣುವಿನ ಜಗತ್ಕರ್ತೃ ತ್ವಕ್ಕೆ ಅದರ ವಿರೋಧವಿಲ್ಲ

ಮಾಯಾವಾದಿಗಳೂ ರಾಮಾನುಜೀಯರೂ ಮೊದಲಿನಿಂದ ಹತ್ತು ಸೂತ್ರ ಗಳಿಂದ ಮೊದಲನೆಯ ಈ ಅಧಿಕರಣವೆಂದೂ ಇದರಲ್ಲಿ ಸಾಂಖ್ಯಮತನಿರಾಕರಣವು ಮಾಡಲ್ಪಡುವುದೆಂದೂ ಹೇಳುತ್ತಾರೆ

ಮಾಯಾವಾದಿಗಳು—(೧) ಸೃಷ್ಟಿಸಲ್ಪಡಬೇಕಾದ ವಸ್ತುವಿನ ಜ್ಞಾನವಿಲ್ಲದ ಅಚೇತನ–ಪ್ರಧಾನಕ್ಕೆ ವಿಶ್ವಸೃಷ್ಟಿ ಕರ್ತೃತ್ವವು ಯುಕ್ತವಲ್ಲ ಏಕೆಂದರೆ ಶಿಲ್ಪ್ಯಾದಿ ಚೇತನರಿಗೇ ಪ್ರಾಸಾದಾದಿ ಕರ್ತೃತ್ವವು ಕಂಡಿದೆ ಹೀಗೆ ಹೇಳುತ್ತಾರೆ

ರಾಮಾನುಜೀಯರು— ಚೇತನಾಧಿಷ್ಠಾನವಿಲ್ಲದ ಅಚೇತನ ಪ್ರಕೃತಿಗೆ-ಜಗತ್ಕರ್ತೃತ್ವವು ಸಂಭವಿಸುವುದಿಲ್ಲ ಲೋಕದಲ್ಲಿ ಚೇತನಾಧಿಷ್ಠಿತ ದಾರ್ವಾದಿಗಳಿಗೆ ರಚನಾ ಪ್ರವೃತ್ತಿಯಿರುವುದು ಕಂಡಿದೆ ಹೀಗೆ ೧-ನೇಯ ಸೂತ್ರಾರ್ಥ ೨ನೇ ಸೂತ್ರ ವನ್ನು ಇದರಲ್ಲಿ ಸೇರಿಸಿ ಪರಿಸುತ್ತಾರೆ

(೨) ಮಾಯಾವಾದಿಗಳು- ರಚನಾನುಕೂಲವಾದ, ಪ್ರಧಾನದ ಸಾಮ್ಯಾವಸ್ಥಾ ಪ್ರಚ್ಯುತಿಯೆಂಬುದು, ಚೇತನಾಧಿಷ್ಠಾನವಿಲ್ಲದೆಯೇ ಕೇವಲ ಪ್ರಧಾನಕ್ಕೆ ಆಗುವುದಿಲ್ಲ ಏಕೆಂದರೆ- ಪ್ರವೃತ್ತಿಯು ಚೇತನಾಧೀನವಾಗಿದ್ದು, ಚೇತನಾಧಿಷ್ಠಿತವೇ ಆದ ರಥಾದಿಗಳಿಗೆ ಕಂಡಿದೆ ಹೀಗೆ ೨ನೇ ಸೂತ್ರಾರ್ಥ ಹೇಳುತ್ತಾರೆ

(೩) ಕರುಗಳ ಪೋಷಣೆಗಾಗಿ ತಾನಾಗಿ ಪ್ರವೃತ್ತಿಸುವ ಪಯಸ್ಸಿನಂತೆ, ತಾನಾಗ ಹರಿಯುವ ನೀರುಗಳಂತೆ ಪ್ರಧಾನಕ್ಕೆ ಸ್ವತಃ ಪ್ರವೃತ್ತಿಯೆಂಬುದು ಸರಿಯಲ್ಲ ಏಕೆಂದರೆ- ಅಲ್ಲಿಯೂ ಈಶ್ವರನೇ ಪ್ರವರ್ತಕನು

(೪) ಪ್ರಧಾನವು ಸ್ವತಂತ್ರವಾಗಿ ಕಾರ್ಯರೂಪದಿಂದ ಪರಿಣಮಿಸುವುದಾದರೆ— ಸರ್ವದಾ ಪರಿಣಾಮವಾಗಲಿ! ಹೊರತಾಗಿ ಇದರ ವ್ಯತಿರೇಕವಾಗದಿರಲಿ! ಪ್ರಧಾನವು ಸ್ವತಂತ್ರವಾದುದರಿಂದ, ಚೇತನನಿರಪೇಕ್ಷವಾದುದರಿಂದ ಸದಾ ಕಾರ್ಯೋತ್ಪಾದವಾಗುವ ಪ್ರಸಂಗವು ಬರುವುದರಿಂದ ಅವರ ಮತವು ಯುಕ್ತವಲ್ಲ

ರಾಮಾನುಜೀಯರು- ಇದರಂತೆಯೇ ಹೇಳಿ, ನಾಲ್ಕನೆಯ ಸೂತ್ರವನ್ನು ಪ್ರಾಜ್ಞನಿಂದ ಅಧಿಷ್ಠಿತತ್ವವನ್ನು ಅವಲಂಬಿಸುವುದಿಲ್ಲವಾದುದರಿಂದ, ಸರ್ವದಾ ಸೃಷ್ಟಿಯಾಗಲಿ, ಹೀಗೆ ವ್ಯಾಖ್ಯಾನಿಸಿದ್ದಾರೆ



# ಅಧಿಕರಣಾನುಕ್ರಮಣಿಕಾ



# ಸೂತ್ರಾನುಕ್ರಮಣಿಕಾ



# ವಿಷಯಾನುಕ್ರಮಣಿಕಾ

## (೧) ಅಭಿಮಾನ್ಯಧಿಕರಣೇ



## (೨) ಅಸದಧಿಕರಣೇ

## (೩) ಭೋಕ್ತ್ರಾಪತ್ತ್ಯಧಿಕರಣಂ



## (೪) ತದನನ್ಯತ್ವಾಧಿಕರಣೇ (ಆರಂಭಣಾಧಿಕರಣೇ)

## (೧೦) ರಚನಾನುಪಪತ್ತ್ಯಧಿಕರಣೇ





॥ श्रीगुरुराजो विजयते ॥

श्रीमदनुव्याख्यानसहिता

# ॥ श्रीमन्न्यायसुधा ॥

॥ ॐ अभिमानिव्यपदेशस्तु विशेषानुगतिभ्याम् ॐ ॥ युक्त्यन्तरविरोधं वेदस्य परिहर्तुमिदमारभ्यते। स्यादेतत्। युक्तिविरोधाः किं प्रत्येकं परिहरणीयाः । उतोपलक्षणया । नाद्यः । निरसनीययुक्त्याभासानन्त्येन शास्त्रापर्यवसानप्रसङ्गात् । सूत्रत्वव्याघाताच्च । द्वितीये त्वनारम्भ

## — ಪದಾರ್ಥದೀಪಿಕಾ —

ಓಂ॥ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್ ಓಂ॥

"ವೇದಕ್ಕೆ ಬೇರ (ಇನ್ನೊಂದು) ಯುಕ್ತಿಯಿಂದ ವಿರೋಧವನ್ನು ಪರಿಹರಿಸಲು ಈ ಅಧಿಕರಣವು ಆರಂಭಿಸಲ್ಪಡುತ್ತದೆ ಇದು ಆಗಲಿ! ಯುಕ್ತಿ ವಿರೋಧಗಳನ್ನು ಬೇರೆ ಬೇರೆಯಾಗಿ ( ಪ್ರತ್ಯೇಕವಾಗಿ– ಒಂದೊಂದು ಅಧಿಕರಣದಲ್ಲಿ ಒಂದೊಂದು ಯುಕ್ತಿ ವಿರೋಧಪರಿಹಾರವಾಗುವ ಹಾಗ) ಪರಿಹರಿಸತಕ್ಕದ್ದೋ! ಅಥವಾ ಉಪಲಕ್ಷಣದಿಂದ ಪರಿಹರಿಸಬೇಕೋ? ಇವೆರಡರಲ್ಲಿ ಮೊದಲನೆಯ ಪಕ್ಷವು ಯುಕ್ತವಲ್ಲ ಏಕಂದರೆ, ನಿವಾರಿಸಲ್ಪಡುವ, ವಿರೋಧಿ ಯುಕ್ತಿಗಳು ಅನಂತಗಳಿರುವದರಿಂದ, ಶಾಸ್ತ್ರವು ಮುಗಿಯದಿರುವ ಪ್ರಸಂಗವು ಬರುತ್ತದೆ ಮತ್ತು ಸೂತ್ರತ್ವವ್ಯಾಘಾತವೂ ಬರುತ್ತದ ಎರಡನಯ ಪಕ್ಷದಲ್ಲಿ– ಈ ಅಧಿಕರಣವು ಆರಂಭಿಸಲ್ಪಡುವಂತಹದು ಆಗುವುದೇ ಇಲ್ಲ ಏಕೆಂದರ ಇದರ ಅವ್ಯ

## — ವಿಶೇಷಾರ್ಥಪ್ರದೀಪಿಕಾ —

ಗತಾರ್ಥತೆಯ ಆಶಂಕೆಯನ್ನು ತೋರಿಸಲು, ಬೇಕಾದ ವಿಷಯದ ಉಪಸ್ಥಿತಿಯ ಸಲುವಾಗಿ ವಿಷಯವನ್ನು ಮೊದಲು 'ಯುಕ್ತ್ಯಂತರ"ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಗತಾರ್ಥತೆಯ ಆಶಂಕೆಯನ್ನು "ಸ್ಯಾದೇತತ್" ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ "ಉಪಲಕ್ಷಣಯಾ"– ಸಂಗ್ರಾಹಕವಾದ ಲಕ್ಷಣಾವೃತ್ತಿಯಿಂದ

"ಸೂತ್ರತ್ವವ್ಯಾಘಾತಾಚ್ಚ" – ಬೇರ ಕಡೆಯಲ್ಲಿ ಲಭಿಸದ ಅರ್ಥವನ್ನು ಹೇಳುವುದೆಂಬ "ಸಾರವತ್ವ"ವೆಂಬ ಸೂತ್ರದ ಲಕ್ಷಣದಿಂದ ವಿರೋಧವು

## ॥ ॐ अभिमानिव्यपदेशस्तु विशेषानुगतिभ्याम् ॐ ॥

तथाऽपि मृज्जलादीनां बुद्धिवाग दिवाचक ॥

एवास्याधिकरणस्य । निरन्तरातीताधिकरणेनैवोपलक्षणया सकलयुक्ति-
विरोधाना परिहृतत्वादिति । मैवम् । अभ्यधिकाशङ्कासद्भावेन तदुप-
पत्तेरित्याशयवान्पूर्वपक्षं तावदाह ॥ तथाऽपीति ॥ यद्यपि फलव्यभि-

ವೇದಕ್ಕೆ ಫಲವ್ಯಭಿಚಾರ, ಅಪ್ರಮಾಣ ಉಕ್ತವಾಗಿರುವುದೆಂಬ ಗುಣವಿಲ್ಲದಿ
ರುವುದೂ, ಈ ಮುಂತಾದ ವಿರೋಧವು ಪರಿಹರಿಸಲ್ಪಟ್ಟದೆಯಾದರೂ, ಮಣ್ಣು,

### — ಪದಾರ್ಥದೀಪಿಕಾ —

ವಹಿತ ಹಿಂದಿನ ಅಧಿಕರಣದಿಂದ, ಉಪಲಕ್ಷಣಾವೃತ್ತಿಯಿಂದ, (ಸಂಗ್ರಾಹಕವಾಗಿ)
ಸಕಲ ಯುಕ್ತಿ ವಿರೋಧಗಳೂ ಪರಿಹರಿಸಲ್ಪಟ್ಟಿರುತ್ತವೆ" ಹೀಗೆ ಆಶಂಕಿಸುವದು
ಯುಕ್ತವಲ್ಲ ಏಕೆಂದರ "ಅಭ್ಯಧಿಕಾಶಂಕೆಯು ಬರುವುದರಿಂದ ಈ ಅಧಿಕರಣಾರಂ
ಭವು ಯುಕ್ತಿಯುಕ್ತವೆನಿಸುತ್ತದೆ" ಈ ಅಭಿಪ್ರಾಯವುಳ್ಳವರಾಗಿ ಅನುವ್ಯಾಖ್ಯಾನ
ಕಾರರು ಮೊದಲು ಪೂರ್ವಪಕ್ಷವನ್ನು "ತಥಾಽಪಿ" ಇತ್ಯಾದಿ ಪದ್ಯ (ವಚನ)
ದಿಂದ ಹೇಳುತ್ತಾರ ವೇದಕ್ಕೆಫಲವ್ಯಭಿಚಾರಾದಿಗಳ ವಿರೋಧವು ಪರಿಹರಿಸ
ಲ್ಪಟ್ಟಿತು ಆದರೂ" ಎಂಬುದಾಗಿ "ತಥಾಽಪಿ' ಈ ಪದದ ಅರ್ಥ "ಮೃಜ್ಜ

### — ವಿಶೇಷಾರ್ಥಪ್ರದೀಪಿಕಾ —

ಬರುವದರಿಂದ ಅಥವಾ "ಸೂಚಕ" ಎಂಬುದಾಗಿ ಹೇಳಿದಂತೆ ಅನೇಕಾರ್ಥ
ಸೂಚಕತ್ವಕ್ಕೆ ವ್ಯಾಘಾತವು ಬರುವದರಿಂದ, ಇಲ್ಲವೆ ಸರ್ವಶಾಖಾನಿರ್ಣಾಯ
ಕತ್ವವೆಂಬ ವಿಶ್ವತೋಮುಖತ್ವಕ್ಕೆ ವ್ಯಾಘಾತವು ಬರುವದರಿಂದ, ಹೀಗೆ
ಅರ್ಥ ಸೂತ್ರಗಳು ವಿಶ್ವತೋಮುಖಗಳಾದುದರಿಂದ, ಉಪಲಕ್ಷಣೆಯಿಂದ
ವಿಷಯವಿಶೇಷವನ್ನು ತೆಗೆದುಕೊಂಡು ಸಮಾನವಿಷಯದಲ್ಲಿ ನ್ಯಾಯವನ್ನು
ಚಾಲನಮಾಡುವ ಸ್ವಭಾವವುಳ್ಳವುಗಳಾದುದರಿಂದ, ಪ್ರತ್ಯೇಕವಾಗಿ ಯುಕ್ತಿ
ವಿರೋಧ ಪರಿಹಾರಕಗಳಾದರೆ ಸಮಾನವಿಷಯದಲ್ಲಿ ನ್ಯಾಯಸಂಚಾರಕತ್ವವು
ಇಲ್ಲವಾಗುವದರಿಂದ ಸೂತ್ರತ್ವವೇ ಇಲ್ಲವಾಗಲಿ, ಹೀಗೆ ಭಾವ ಸಂಗ್ರಾಹಕವಾಗಿ
ಸಕಲಯುಕ್ತಿ ವಿರೋಧದ ನಿರಾಸವು ಲಭಿಸುತ್ತಿದ್ದರೆ ಪ್ರತ್ಯೇಕವಾಗಿ ಅದರ
ನಿರಾಕರಣಮಾಡಲು ಇನ್ನೊಂದು ಸೂತ್ರವನ್ನು ಮಾಡುವದು ಯುಕ್ತವಾಗ
ಲಾರದು ಹೀಗೆ ತಾತ್ಪರ್ಯ

दृष्टव्याप्तिविरुद्धत्वात्तत्र मानं कथं भवेत् ॥

चारादिविरोधो वेदस्य परिहृतस्तथाऽपीत्यर्थः । मृज्जलादीनामित्यादिपदेन तेजःप्रभृतीनां ग्रहणम् । बुद्धिर्ज्ञानं वाग्वक्तृत्वम् । आदिग्रहणेन श्रोतृत्वादिकम् । वेद इत्यनुवर्तते । दृष्टा प्रमिता व्याप्तिः यस्याः युक्तेः सा तथोक्ता । व्याप्तिग्रहणं पक्षधर्मताया अप्युपलक्षणम् । क्वचित्तन्नियमानभ्युपगमात्स्वशब्देनासङ्कीर्तनम् । तया विरुद्धत्वात्तत्र

ನೀರು ಅಗ್ನಿ ಮುಂತಾದವುಗಳಿಗೆ ಜ್ಞಾನ, ವಕ್ತೃತ್ವ ಶ್ರೋತೃತ್ವ ಮುಂತಾದುದನ್ನು ಪ್ರತಿಪಾದಿಸುವ "ಮೃದಬ್ರವೀತ್" ಈ ಮುಂತಾಗಿರುವ ವೇದವಾಕ್ಯವು, ಪ್ರಮಾಣಸಿದ್ಧವಾದ ವ್ಯಾಪ್ತಿ ಪಕ್ಷ ಧರ್ಮತೆಗಳಿಂದ ಕೂಡಿದ ಯುಕ್ತಿಯಿಂದ ವಿರುದ್ಧವಾದುದರಿಂದ, 'ಮಣ್ಣು ನೀರು ಮುಂತಾದವುಗಳಿಗ ಜ್ಞಾನ ವಕ್ತೃತ್ವ ಈ ಮುಂತಾದುದಿದೆ" ಎಂಬ ಅರ್ಥದಲ್ಲಿ ಪ್ರಮಾಣವು ಹೇಗೆ ಆದೀತು ?

— ಪದಾರ್ಥದೀಪಿಕಾ —

ಲಾದೀನಾಂ" ಇಲ್ಲಿಯ ಆದಿ" ಪದದಿಂದ, ತೇಜಸ್ಸು ಮುಂತಾದುದರ ಗ್ರಹಣವಿದೆ. "ಬುದ್ಧಿವಾಗಾದಿ ವಾಚಕಃ" ಇಲ್ಲಿ "ಬುದ್ಧಿ" ಎಂದರ ಜ್ಞಾನವು, "ವಾಕ್" ಎಂದರೆ ವಕ್ತೃತ್ವವು "ಆದಿ" ಪದವನ್ನು ಗ್ರಹಿಸಿದುದರಿಂದ "ಶ್ರೋತೃತ್ವ" ಮುಂತಾದುದರ ಗ್ರಹಣವು ಮಾಡಲ್ಪಟ್ಟಿದೆ 'ವೇದಃ" ಎಂಬ ಪದವು ಅನುವೃತ್ತಿಸಲ್ಪಟ್ಟಿರುತ್ತದ 'ದೃಷ್ಟವ್ಯಾಪ್ತಿ" ಇಲ್ಲಿ "ದೃಷ್ಟಾ ಪ್ರಮಿತಾ ವ್ಯಾಪ್ತಿಃ ಯಸ್ಯಾಃ" ( ಯಾವುದರ ವ್ಯಾಪ್ತಿಯು ಯಥಾರ್ಥವಾಗಿ ದೃಷ್ಟ (ನೋಡಲ್ಪಟ್ಟದ್ದು) ವಾಗಿದೆಯೋ ಅದು ದೃಷ್ಟವ್ಯಾಪ್ತಿ) ಹೀಗ ಅರ್ಥ "ವ್ಯಾಪ್ತಿ' ಪದವು 'ಪಕ್ಷಧರ್ಮತೆಯನ್ನೂ ಸಂಗ್ರಹಿಸುತ್ತದೆ ಕೆಲವು ಕಡೆಗಳಲ್ಲಿ ಪಕ್ಷಧರ್ಮತೆಯು ನಿಯಮೇನ ಬೇಕೆಂಬುದನ್ನು ಒಪ್ಪುವದಿಲ್ಲವಾದುದರಿಂದ, ಪಕ್ಷಧರ್ಮತೆಯನ್ನು ಅದರ ವಾಚಕ ಶಬ್ದದಿಂದ ಸಂಕೀರ್ತನ ಮಾಡಲಿಲ್ಲ ಇಂಥ ಯುಕ್ತಿಯಿಂದ ವಿರುದ್ಧವಾದುದರಿಂದ, ಹೀಗೆ 'ದೃಷ್ಟ ವ್ಯಾಪ್ತಿವಿರುದ್ಧತ್ವಾತ್" ಎಂಬಲ್ಲಿಯ ಅರ್ಥ "ತತ್ರ"– ಮೃತ್ತು–ಜಲ–

— ವಿಶೇಷಾರ್ಥಪ್ರದೀಪಿಕಾ —

"ಫಲವ್ಯಭಿಚಾರಾದಿಃ' ಇಲ್ಲಿ "ಆದಿ"ಶಬ್ದಕ್ಕೆ ಆಪ್ತೋಕ್ತತ್ವಗುಣವಿಲ್ಲದಿರುವಿಕೆಯೆಂಬ ವಿರೋಧವು, ಎಂದು ಅರ್ಥ "ಬುದ್ಧಿರ್ಜ್ಞಾನಂ" ಎಂಬಲ್ಲಿ "ಜ್ಞಾನ"ವೆಂಬುದು "ತತ್ತೇಜ ಐಕ್ಷತ" ಎಂಬಲ್ಲಿರುವ "ಈಕ್ಷಣ" ಶಬ್ದದ ಅರ್ಥ. ಶ್ರೋತೃತ್ವಾದಿಕಂ" ಆದಿಶಬ್ದದಿಂದ, ವಿವಾದ, ಕಾಮ, ಸಂವಾದ( ಕಲಹ) ಮುಂತಾದುದನ್ನು ಗ್ರಹಿಸಬೇಕು "ವಾಚಕಃ" ಎಂಬಲ್ಲಿ 'ಯಾವದು ವಾಚಕವು" ಎಂಬ

मृज्जलादीनां बुद्धिवागादौ । कथमित्याक्षेपे । प्रतिपाद्यान्तरं तु नास्त्यप्रतीतेरिति शेषः ।

एतदुक्तं भवति । मृदब्रवीत्, आपोऽब्रुवन्, तत्तेज ऐक्षत, ता आप ऐक्षन्त, शृणोत ग्रावाणो विदुषोऽनुप्राणा, अहं श्रेयसि व्यूदिरे आपो वा अकामयन्तेत्यादिवेदस्तावन्न प्रमाणम् । युक्तिविरुद्धार्थाभिधायित्वात् । नीलं नभ इतिवत् । मृज्जलादीनां बुद्धिवागादिमत्त्वं खल्वस್यार्थः ।

— ಪದಾರ್ಥದೀಪಿಕಾ —

ಇವು ಮುಂತಾದವುಗಳ ಬುದ್ಧಿ, (ತಿಳಿವು) ವಾಕ್ಕು (ಮಾತು) ಈ ಮುಂತಾದವುಗಳ ಬಗ್ಗೆ "ಕಥಂ' ಎಂಬುದು ಆಕ್ಷೇಪಾರ್ಥದಲ್ಲಿದೆ (ವೇದವು ಹೇಗೆ ಪ್ರಮಾಣವಾದೀತು ? ಯಾವದೇ ರೀತಿಯಿಂದ ಆಗಲಾರದು ಹೀಗೆ ಅರ್ಥ) ಬೇರೆ ಪ್ರತಿಪಾದ್ಯವಾದ ಅರ್ಥವಂತೂ ಇರುವದಿಲ್ಲ ಏಕೆಂದರೆ ಆ ಬೇರೆ ಅರ್ಥವು ಈ ವಾಕ್ಯಗಳಿಂದ ತೋರುವದಿಲ್ಲ 'ಪ್ರತಿಪಾದ್ಯಾಂತರಂ ತು ನಾಸ್ತಿ" ಹೀಗೆ ಶೇಷವಿದೆ

ಇಲ್ಲಿಯ ಅಭಿಪ್ರಾಯವು-- "ಮೃದಬ್ರವೀತ್, ಆಪೋಽಬ್ರುವನ್, ತತ್ತೇಜ ಐಕ್ಷತ, ತಾ ಆಪ ಐಕ್ಷಂತ, ಶೃಣೋತ ಗ್ರಾವಾಣೋ ವಿದುಷೋಽನು ಪ್ರಾಣಾ, ಅಹಂ ಶ್ರೇಯಸಿ ವ್ಯೂದಿರೇ, ಆಪೋ ವಾ ಅಕಾಮಯಂತ" ಈ ಮುಂತಾದ ವೇದವು ಪ್ರಮಾಣವಲ್ಲ ಏಕೆಂದರೆ ಯುಕ್ತಿಯಿಂದ ವಿರುದ್ಧವಾದ ಅರ್ಥವನ್ನು ಹೇಳುತ್ತದೆ "ನೀಲಂ ನಭಃ" ಎಂಬ ವಾಕ್ಯವು ದೃಷ್ಟಾಂತವು ಹೇಗೆಂದರೆ— "ಮಣ್ಣು, ಜಲ, ಈ ಮೊದಲಾದವುಗಳಿಗೆ," ತಿಳಿವಳಿಕೆಯಿದೆ ಅವು ಮಾತನ್ನಾಡುತ್ತವೆ ಈ ಮುಂತಾದ ಸಂಗತಿಯೇ ವಾಕ್ಯದ ಅರ್ಥವು ಈ ಅರ್ಥವು, "ಮಣ್ಣು

— ವಿಶೇಷಾರ್ಥಪ್ರದೀಪಿಕಾ —

ಆಕಾಂಕ್ಷೆಯನ್ನು "ವೇದಇತ್ಯನುವರ್ತತೇ' ಎಂಬ ವಚನದಿಂದ ಪೂರ್ಣಗೊಳಿಸುತ್ತಾರೆ "ಪ್ರಮಾಣಂವೇದಏವೈಕಃ" ಎಂಬ ಹಿಂದಿನ ವಾಕ್ಯದಿಂದ ಅನುವೃತ್ತಿಯನ್ನು ತಿಳಿಯಬೇಕು ಅಭ್ಯಧಿಕಾಶಂಕೆಯ ಪ್ರಕಾರವನ್ನು "ಏತದುಕ್ತಂ" ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ ಇಲ್ಲಿ ಮೃದಾದಿಶಬ್ದಗಳಿಗೆ ಆದಿಕಾಲದ ಪೃಥಿವ್ಯಾದಿಗಳೆಂಬ ಅರ್ಥವನ್ನು ತಿಳಿಯಬೇಕು

"ಪ್ರಾಣಾಃ" ಇಂದ್ರಿಯಗಳು "ಅಹಂ ಶ್ರೇಯಸಿ ವ್ಯೂದಿರೇ" ನಾನು ಶ್ರೇಷ್ಠನೆಂಬಲ್ಲಿ ವಿವಾದವನ್ನು ಮಾಡಿದವು ಹೀಗೆ ಅರ್ಥ "ಇತ್ಯಾದಿವೇದಃ"(ದಾಃ) ಇಲ್ಲಿ "ಆದಿ" ಪದದಿಂದ "ಓಷಧಯಃ ಸಂವದಂತೇ, ಯಂ ಪೃಥಿವೀ ನ ವೇದ" ಇತ್ಯಾದಿ ವೇದವಾಕ್ಯಗಳನ್ನು ಗ್ರಹಿಸಬೇಕು "ಸರ್ವೋಽಪ್ಯಮಾನಂ" (ಎಲ್ಲ ವೇದವೂ

स च, विमता मृन्न वक्त्री मृत्त्वात्सम्प्रतिपन्नमृद्वदित्यादियुक्तिविरुद्धः । तथा च वेदवाक्यान्तरस्याप्यप्रामाण्यमनुमास्यते । ननु न विलक्षणत्वादि-

— ಪದಾರ್ಥದೀಪಿಕಾ —

ಮಾತನ್ನಾಡುವುದಿಲ್ಲ ಏಕೆಂದರೆ ಅದು ಮಣ್ಣಾಗಿ (ಜಡವಾಗಿ) ರುತ್ತದೆ ಇದರಲ್ಲಿ ಸಮ್ಮತವಾದ ಮಣ್ಣು (ಘಟ ಮುಂತಾದುದು) ದೃಷ್ಟಾಂತವು " ಈ ಮುಂತಾದ ಯುಕ್ತಿಯಿಂದ ವಿರುದ್ಧವಾಗಿರುತ್ತದೆ. ಆದುದರಿಂದ ವೇದವಾಕ್ಯಾಂತರದಲ್ಲಿಯೂ ಅಪ್ರಾಮಾಣ್ಯವನ್ನು ಯುಕ್ತಿಯಿಂದ ಸಾಧಿಸಲಾಗುತ್ತದೆ

ಇನ್ನು– "ನ ವಿಲಕ್ಷಣತ್ವಾತ್"ಎಂಬ ಅಧಿಕರಣ (ಸೂತ್ರ)ದಿಂದ ಹೇಳಲ್ಪಟ್ಟ

— ವಿಶೇಷಾರ್ಥಪ್ರದೀಪಿಕಾ —

ಅಪ್ರಮಾಣ) ವೆಂದು ಮುಂದೆ ಹೇಳುವೆವೆಂಬುದನ್ನು 'ತಾವತ್" ಶಬ್ದವು ತಿಳಿಸುತ್ತದೆ ಇತಿವತ್" "ಆಕಾಶವು ರೂಪರಹಿತವಾದುದು ಏಕೆಂದರೆ ವಿಭು ವಾಗಿದೆ'' ಎಂಬೀಯುಕ್ತಿಯಿಂದ "ಆಕಾಶವು ನೀಲವರ್ಣದ್ದು ಎಂಬ ಪ್ರತ್ಯಕ್ಷವು ವಿರುದ್ಧವು ಹೇಗೋ ಹಾಗ 'ಮೃತ್ತು ಮಾತನಾಡುವದಿಲ್ಲ ಏಕೆಂದರೆ ಮಣ್ಣಾ ಗಿದೆ ಇತ್ಯಾದಿಯುಕ್ತಿಯಿಂದ "ಮೃದಬ್ರವೀತ್" ಇತ್ಯಾದಿ ವೇದವಾಕ್ಯಗಳು ವಿರುದ್ಧವಾಗಿವ ಹೇತುವಿನ ಅಸಿದ್ಧಿಯನ್ನು (ಹೇತುವು ಪಕ್ಷದಲ್ಲಿ ಇಲ್ಲವೆಂಬು ದನ್ನು) "ಮೃಜ್ಜಲಾದೀನಾಂ" ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಾರ 'ಮೃಜ್ಜಲಾದೀನಾಂ ಬುದ್ಧಿವಾಗಾದಿಮತ್ವಂ" ಇಲ್ಲಿ ಕ್ರಮವು ವಿವಕ್ಷಿತವಾಗಿಲ್ಲ. ಏಕೆಂದರೆ ಮೃತ್ತಿಗೆ ಬುದ್ಧಿಯನ್ನು ಹೇಳುವ ವಾಕ್ಯವಿಲ್ಲ ಆದುದರಿಂದ ಆದಿ ಪದದಿಂದ ಗೃಹಿಸಲ್ಪಟ್ಟ ತೇಜಸ್ಸಿನಿಂದ ಬುದ್ಧಿಗೆ ಅನ್ವಯವಿದೆಯೆಂದು ತಿಳಿ ಯಬೇಕು ಏಕೆಂದರ "ತತ್ತೇಜ ಐಕ್ಷತ' ಶ್ರುತವಾಗಿದೆ. ಮೂಲವನ್ನನು ಸರಿಸಿ ಟೀಕಾಕಾರರು ಹಾಗೆಯೇ ಅನುವಾದಿಸಿದ್ದಾರೆ

"ಇತ್ಯಾದಿಯುಕ್ತಿವಿರುದ್ಧಃ" ಇಲ್ಲಿ 'ಆದಿ" ಪದದಿಂದ, ಜಲತ್ವತೇಜ ಸ್ತ್ವಯುಕ್ತಿಗಳನ್ನು ಸಂಗ್ರಹಿಸಬೇಕು ಮತ್ತು 'ಜಡತ್ವಾತ್ ಘಟವತ್" (ಘಟದ ಹಾಗೆ ಜಡವಾದುದರಿಂದ) ಎಂಬುದನ್ನು ಸಂಗ್ರಹಿಸಬೇಕು ಇಷ್ಟುಮಾತ್ರದಿಂದ (ಕೇವಲ ಯುಕ್ತಿವಿರುದ್ಧಾರ್ಥ ಪ್ರತಿಪಾದಕವಾದುದೆಂಬ ಮಾತ್ರದಿಂದ) ವಿಷ್ಣುವಿನ ಜಗತ್ಕಾರಣತ್ವಕ್ಕೆ ವಿರೋಧವಿಲ್ಲವೆಂಬ ಶಂಕೆಯುಬಂದರೆ ಉತ್ತರವನ್ನು"ತಥಾಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಒಂದು ವೇದಕ್ಕೆ (ವೇದದ ಏಕದೇಶಕ್ಕೆ) ಅಪ್ರಾಮಾಣ್ಯವು ಬರಲು, "ಯತೋವಾ" ಇತ್ಯಾದಿ ವೇದವಾಕ್ಯಾಂತರಗಳಲ್ಲಿಯೂ "ತತ್ಸಾಮಾನ್ಯಾದಿತರೇಷು ತಥಾತ್ವಂ" (ಆ ಧರ್ಮವು ಸಮಾನವಾದುದರಿಂದ ಇತರವೇದಗಳಲ್ಲಿ ಅದರಂತೆ ಅಪ್ರಾಮಾಣ್ಯವು.) ಎಂಬುದಾಗಿ ಜೈಮಿನಿಯ

त्वनेनैव न्यायेनायमपि विरोधः परिहरणीयः । मैवम् । तन्न्याय-सञ्चाराविषयत्वात् । तत्र हि यथोक्तानुष्ठानेऽपि फलव्यभिचारश्चेद्धेतुस्तदापाततस्तावत्सन्दिग्धविशेषणासिद्धः । कर्त्रादिवैगुण्यस्यापि सम्भवात् । नित्यत्वेन वेदप्रामाण्यस्थितौ तु विशेषणासिद्धिनिश्चय एव ।

— ಪದಾರ್ಥ ದೀಪಿಕಾ —

ಯುಕ್ತಿಯಿಂದಲೇ ಈ ವಿರೋಧವು ಪರಿಹರಿಸಲ್ಪಡತಕ್ಕದ್ದು" ಹೀಗೆ ಶಂಕಿಸ ಬಾರದು ಏಕೆಂದರೆ ನವಿಲಕ್ಷಣತ್ವಾಧಿಕರಣ ನ್ಯಾಯದ ಸಂಚಾರಕ್ಕೆ ಇದು ವಿಷಯವಾಗುವದಿಲ್ಲ. ಹೇಗೆಂದರೆ- ಆ ಅಧಿಕರಣದಲ್ಲಿ- "ವೇದೋಕ್ತಾನುಷ್ಠಾನ ವಿದ್ದರೂ ಫಲವ್ಯಭಿಚಾರವು ವೇದದ ಅಪ್ರಾಮಾಣ್ಯಸಾಧನೆಯಲ್ಲಿ ಯುಕ್ತಿಯೆಂದಾದರೆ ಈ ಯುಕ್ತಿಯು- ಆಪಾತವಾಗಿ ಸಂದಿಗ್ಧವಾದ ವಿಶೇಷಣದ ಅಸಿದ್ಧಿಯುಳ್ಳದ್ದಾಗುತ್ತದ (ಈ ಯುಕ್ತಿಯಲ್ಲಿ ಸೇರಿದ "ಯಥೋಕ್ತಾನುಷ್ಠಾನೇಽಪಿ" (ವೇದದಲ್ಲಿ ಹೇಳಿದಂತೆ ಅನುಷ್ಠಾನವಿದ್ದರೂ)ಎಂಬ ವಿಶೇಷಣವು ಸಂದಿಗ್ಧವಾಗಿರುತ್ತದೆ) ಏಕೆಂದರೆ ಕರ್ತೃವುಂತಾದುದರ ವೈಗುಣ್ಯವೂ ಸಂಭವಿಸುತ್ತದೆ ಇನ್ನು- ನಿತ್ಯವಾಗಿರುವುದೆಂಬ ಕಾರಣದಿಂದ, ವೇದ ಪ್ರಾಮಾಣ್ಯವನ್ನು ಅಂಗೀಕರಿಸಿದ್ದರಂತೂ ವಿಶೇಷಣದ ಅಸಿದ್ಧಿಯು (ಇಲ್ಲದಿರುವಿಕೆಯು) ನಿಶ್ಚಿತವೇ ಇರುತ್ತದೆ ಕೇವಲ ಫಲವ್ಯಭಿಚಾರ

— ವಿಶೇಷಾರ್ಥಪ್ರದೀಪಿಕಾ —

ಯುಕ್ತಿ (ಮೀಮಾಂಸಾನ್ಯಾಯ) ಯಿಂದ, ವೇದವಾಕ್ಯತ್ವಯುಕ್ತಿಯಿಂದ, ವೃದಾದಿ ವಾಕ್ಯದೃಷ್ಟಾಂತದಿಂದ ಅಪ್ರಾಮಾಣ್ಯವನ್ನು ಊಹಿಸುತ್ತೇವೆ, ಹೀಗೆ ಅರ್ಥ

"ದೃಷ್ಟವ್ಯಾಪ್ತಿ' ಎಂಬೀ ವಚನದ ಅರ್ಥವನ್ನು ವಿವರಿಸುತ್ತ ಅಭ್ಯಧಿಕಾಶಂಕೆಯ ಪ್ರಕಾರವನ್ನು "ವೈವಂ" ಇಲ್ಲಿಂದ "ಸಿದ್ಧೈವ" ಇಲ್ಲಿಯವರೆಗಿನ ವಾಕ್ಯಗಳಿಂದ ತೋರಿಸುತ್ತಾರೆ ಆ ನ್ಯಾಯದ ಸಂಚಾರಕ್ಕೆ ಇದು ವಿಷಯ (ಆಸ್ಪದ)ವಲ್ಲವೆಂಬುದನ್ನೇ "ತತ್ರಹಿ"ಇತ್ಯಾದಿ ವಚನಗಳಿಂದ ವಿಶದ ಪಡಿಸುತ್ತಾರೆ "ತತ್ರ" ಹಿಂದಿನ ಅಧಿಕರಣದಲ್ಲಿ. ಇದಕ್ಕೆ "ಪರಿಹೃತಃ" ಎಂಬ ಪದದೊಡನೆ ಅನ್ವಯವಿದೆ "ಹೇತುಃ" ಇಲ್ಲಿ "ವೇದಾದ್ಯಪ್ರಾಮಾಣ್ಯೇ' ಎಂಬುದನ್ನು ಸೇರಿಸಿ ಯೋಜಿಸಬೇಕು ಆಪಾತತಃ"- ವೇದಪ್ರಾಮಾಣ್ಯದ ನಿಶ್ಚಯವಿಲ್ಲದಿರುವಾಗ "ನಿತ್ಯತ್ವೇನ"-ಸ್ವತಂತ್ರ ಪುರುಷರಿಂದ ರಚಿತವಾಗದಿರುವದರಿಂದ, ಪ್ರಾಮಾಣ್ಯದ ಅಪವಾದಕದೋಷಗಳಿಲ್ಲವಾದುದರಿಂದ, ಜ್ಞಾನ ಜನನಶಕ್ತಿಯಿಂದಲೇ ಪ್ರಮಾಜನನಶಕ್ತಿಯೆಂಬ ಪ್ರಾಮಾಣ್ಯವು ಇರುತ್ತಿದ್ದರೆ, (ಅದನ್ನಂಗೀಕರಿಸಿದರೆ) ಹೀಗೆ ಅರ್ಥ "ವಿಶೇಷಣಾಸಿದ್ಧಿನಿಶ್ಚಯಏವ"- "ಯಥೋಕ್ತಾನುಷ್ಠಾನೇಪಿ" (ವೇದದಲ್ಲಿ

फलव्यभिचारमात्रस्य हेतुत्वे त्वनैकान्तिकत्वमित्येवं व्याप्तिपक्षधर्मता-विरहव्युत्पादनेन युक्तिविरोधः परिहृतः । न चास्या युक्तेर्व्याप्त्याद्यङ्ग-वैकल्यं शक्यव्युत्पादनम् । व्याप्त्यादेः प्रमाणदृष्टत्वात् । न खलु

— ಪದಾರ್ಥದೀಪಿಕಾ —

ವಷ್ಟೇ ಅಪ್ರಾಮಾಣ್ಯಸಾಧಕ ಯುಕ್ತಿಯಾಗಿರುವುದಾದರೆ ಅನೈಕಾಂತಿಕತ್ವವೇ!" ಹೀಗೆ ವ್ಯಾಪ್ತಿ ಪಕ್ಷಧರ್ಮತೆಗಳಿಲ್ಲವೆಂಬುದನ್ನು ತೋರಿಸಿಕೊಡುವುದರಿಂದ ಯುಕ್ತಿ ವಿರೋಧವು ಪರಿಹರಿಸಲ್ಪಟ್ಟಿರುತ್ತದೆ. ಹಾಗು ಈ ಯುಕ್ತಿಗೆ ವ್ಯಾಪ್ತಿ ಮುಂತಾದುದಿಲ್ಲ ವೆಂಬುದನ್ನು ತೋರಿಸುವದು ಶಕ್ಯವಿಲ್ಲ ಏಕೆಂದರೆ ವ್ಯಾಪ್ತಿ ಮುಂತಾದುದು ಪ್ರಮಾಣದಿಂದ ಕಂಡುಬಂದಿರುತ್ತದೆ ಏಕೆಂದರ ವ್ಯರ್ತ್ವ (ಮಣ್ಣಾಗಿರುವುದು)

— ವಿಶೇಷಾರ್ಥಪ್ರದೀಪಿಕಾ —

ಹೇಳಿದಪ್ರಕಾರ ಅನುಷ್ಠಾನಮಾಡಿದಾಗ್ಯೂ) ಎಂಬ ವಿಶೇಷಣದ ಅಸಿದ್ಧಿಯು ನಿಶ್ಚಯವೇ! ಹೀಗೆ ಅರ್ಥ 'ಅನೈಕಾಂತಿಕತ್ವಮೇವ" ಫಲದ ಕಾರಣವೆಂದು ನಿರ್ಣಯಿಸಲ್ಪಟ್ಟ, ಅದರೆ ವಿಗುಣವಾಗಿ ಅನುಷ್ಠಾನ ಮಾಡಲ್ಪಟ್ಟ ಲೌಕಿಕ ಕ್ರಿಯಾಮುಂತಾದುದರಲ್ಲಿ, ಫಲವ್ಯಭಿಚಾರವು ಸಾಧ್ಯವನ್ನು ವ್ಯಭಿಚರಿಸಿಯೇ ಇರುತ್ತದೆ ಹೀಗೆ ಅರ್ಥ 'ಭೋಜನಂ ತೃಪ್ತಿಸಾಧನಂ' ಈ ಮುಂತಾದ ಆಪ್ತವಾಕ್ಯಗಳಲ್ಲಿ ಅಪ್ರಾಮಾಣ್ಯವೆಂಬ ಸಾಧ್ಯವಿಲ್ಲದಿದ್ದರೂ ಫಲವ್ಯಭಿಚಾರವೆಂಬ ಹೇತುವು (ಭೋಜನವನ್ನು ಮಾಡದಿದ್ದಾಗ) ಇರುವದರಿಂದ ವ್ಯಭಿಚಾರವೇ ಬರುತ್ತದೆಂದು ಭಾವ

ಪ್ರಮಾಣತಯಾಂಗೀಕೃತ ಫಲವ್ಯಭಿಚಾರಿ ಶಿವಾದಿವಾಕ್ಯೇಷು (ಪ್ರಮಾಣ ವೆಂದು ಪರಿಗ್ರಹಿತವಾದ ಫಲವ್ಯಭಿಚಾರಿಯಾದ ಶಿವಾದಿವಾಕ್ಯಗಳಲ್ಲಿ) ಎಂಬುದನ್ನು ಶೇಷವಾಗಿಟ್ಟುಕೊಳ್ಳಬೇಕು (ಶ್ರೀಸತ್ಯವ್ರತೀಯ ಟಿಪ್ಪಣಿ)

ಹೀಗೆ, ಹಿಂದಿನ ಯುಕ್ತಿಯು ಸಾವಕಾಶವೆಂದು ಹೇಳಿ, ಈ ಅಧಿಕರಣದ ವಿರೋಧಿಯುಕ್ತಿಯು ನಿರವಕಾಶವಾದುದರಿಂದ ದೃಢವಾದುದೆಂಬುದಾಗಿ 'ನ ಚಾಸ್ಯ" ಇತ್ಯಾದಿವಾಕ್ಯದಿಂದ ಹೇಳುತ್ತಾರ "ಆದಿ' ಪದದಿಂದ ಪಕ್ಷ ಧರ್ಮತೆಯನ್ನು ಪರಿಗ್ರಹಿಸಬೇಕು ಇದರಿಂದ ಹಿಂದಿನ ಅಧಿಕರಣದಲ್ಲಿ ಸಾವಕಾಶವಾದ ಯುಕ್ತಿವಿರೋಧವು ಪರಿಹೃತವಾಯಿತು ಇಲ್ಲಿ ಮಾತ್ರ ನಿರವಕಾಶವಾದ ದೃಢಯುಕ್ತಿವಿರೋಧವು ಪರಿಹರಿಸಲ್ಪಡುತ್ತದೆ, ಆದುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಆನಂತರ್ಯಸಂಗತಿಯನ್ನು ಹೇಳಿದ್ದಾಗುತ್ತದಂದು ತಿಳಿಯಬೇಕು 'ವ್ಯಾಪ್ತ್ಯಾದೇಃ' – ವ್ಯಾಪ್ತಿ ಪಕ್ಷಧರ್ಮತೆ ಇವುಗಳಿಗೆ

मृत्त्वादिकमवक्तृत्वादिना न सम्बद्धम् । प्रसिद्धमृदादौ तथोपलम्भात् । न च तत्रापि बुद्ध्यादिसद्भावः । कदाऽपि तत्कार्यस्यादर्शनात् । नापि सम्बद्धमपि व्यभिचीर्णम् । व्यभिचारानुपलम्भात् । न चानुपलभ्यमानव्यभिचारमपि सोपाधिकमुपाधेरनिरूपणात् । बुद्ध्यादिमत्त्वे च मृदादीनां शरीरेन्द्रियवत्ताऽपि स्यात् । अकरणकक्रियादर्शनात् । न च तद्युक्तमिन्द्रियादीनामपि वक्तृत्वादिवद्दर्शनात् । ततोऽनुकूलतर्क-

## — ಪದಾರ್ಥದೀಪಿಕಾ —

ಮುಂತಾದುದು ಮಾತನ್ನಾಡದಿರುವುದು ಮುಂತಾದುದರೊಡನೆ ಸಂಬಂಧವುಳ್ಳದ್ದಲ್ಲವೆಂದಲ್ಲ– ಸಂಬಂಧವುಳ್ಳದ್ದೇ! ಏಕೆಂದರೆ ಪ್ರಸಿದ್ಧ ಮಣ್ಣು ಮುಂತಾದುದರಲ್ಲಿ ಹಾಗೆ ಕಂಡಿರುತ್ತದೆ ಮತ್ತು ಈ ಪ್ರಸಿದ್ಧ ಮಣ್ಣು ಮುಂತಾದುದರಲ್ಲಿಯೂ ಬುದ್ಧಿ ಮುಂತಾದುದು ಇರುವುದೆಂಬುದು ಸರಿಯಲ್ಲ ಏಕೆಂದರೆ– ಆ ಬುದ್ಧಿ ಮುಂತಾದುದರ ಕಾರ್ಯವು ಆಗಿರುವುದು ಎಂದೆಂದೂ (ಒಮ್ಮೆಯಾದರೂ) ಕಂಡಿಲ್ಲ ಹಾಗು ಸಂಬಂಧವುಳ್ಳದ್ದಾದರೂ, ವ್ಯಭಿಚರಿತ ( ಅನಿಯತವಾದ ಸಂಬಂಧವುಳ್ಳದ್ದು ) ವಾಗಿಲ್ಲ ಏಕೆಂದರೆ ವ್ಯಭಿಚಾರವು ಕಂಡು ಬಂದಿಲ್ಲ ಇನ್ನು ವ್ಯಭಿಚಾರವು ಕಂಡು ಬರದಿದ್ದರೂ ಸೋಪಾಧಿಕವೆಂದು ಹೇಳಬಾರದು ಏಕೆಂದರೆ ಉಪಾಧಿಯನ್ನು ನಿರೂಪಿಸಲಿಲ್ಲ ಮತ್ತು ಬುದ್ಧಿ ಮುಂತಾದುದನ್ನುಳ್ಳದ್ದಾದರೆ, ಮಣ್ಣು ಮುಂತಾದುದು ಶರೀರ–ಇಂದ್ರಿಯಗಳುಳ್ಳದ್ದೂ ಆಗಬೇಕಾಗುವದು ಏಕೆಂದರೆ ಕರಣವಿಲ್ಲದೆ ಕ್ರಿಯೆಯಾಗಿರುವುದು ಎಲ್ಲಿಯೂ ಕಂಡಿಲ್ಲ ಆದರೆ ಇದು ಯುಕ್ತವಲ್ಲ ಏಕೆಂದರೆ ಇಂದ್ರಿಯಾದಿಗಳ ವಕ್ತೃತ್ವ ಮುಂತಾದುದರ ಹಾಗೆ ಮಣ್ಣು ಮುಂತಾದವುಗಳಿಗೆ ವಕ್ತೃತ್ವವು ಅಪ್ರಾಮಾಣಿಕವಾಗಿವೆ ಆದುದರಿಂದ, ಅನುಕೂಲ ತರ್ಕದಿಂದ

## — ವಿಶೇಷಾರ್ಥಪ್ರದೀಪಿಕಾ —

ವ್ಯಾಪ್ತಿಯ ನಿರ್ಣಾಯಕವಾದ, ವಿಪಕ್ಷದಲ್ಲಿ ಬಾಧಕತರ್ಕವನ್ನೂ ಅನುಕೂಲತರ್ಕವನ್ನೂ "ಬುದ್ಧ್ಯಾದಿಮತ್ತ್ವೇ' ಇತ್ಯಾದಿವಾಕ್ಯದಿಂದ ಹೇಳುತ್ತಾರೆ 'ಪಕ್ಷೀಕರಿಸಲ್ಪಟ್ಟ ಮೃದಾದಿಗಳಿಗೆ" ಎಂಬುದನ್ನು ಸೇರಿಸಬೇಕು. ಅನುಕೂಲ ತರ್ಕವು ಸರ್ವತ್ರ ವ್ಯಾಪ್ತಿಗ್ರಾಹಕವೆಂಬ ಕಾರಣದಿಂದ ಇಲ್ಲಿ ಅದನ್ನು ಹೇಳಿಲ್ಲ ಆದರೆ ಯುಕ್ತಿಯ ದಾರ್ಢ್ಯವನ್ನು ಉಪಪಾದಿಸಲು ಅದನ್ನಿಲ್ಲಿ ಹೇಳಿದ್ದು ಆದುದರಿಂದ ಅನವಸ್ಥೆಯಿಲ್ಲವೆಂದು ತಿಳಿಯಬೇಕು ವ್ಯಾಪ್ತಿಯನ್ನು ಉಪಪಾದನಮಾಡಿ ಪಕ್ಷಧರ್ಮತೆಯನ್ನೂ 'ನ ಚ ಮೃದಾದಿಷು" ಈ ವಾಕ್ಯದಿಂದ ವಿಶದ

सनाथेनोपाधिव्यभिचारानुपलम्भसहकृतेन सहभावग्राहकेण प्रमाणेन सिद्धा मृत्त्वादीनामवक्तृत्वादिना व्याप्तिः । न च मृदादिषु मृत्त्वादिकं नास्तीति युक्तम् । व्याघातात् । मृदब्रवीदित्यादिप्रयोगायोगाच्च ततः पक्षधर्मताऽपि सिद्धेवेति ।

ननु च नित्यतया वेदस्य प्रामाण्ये व्यवस्थिते तद्विरुद्धाया युक्तेरेवाप्रामाण्यमुचितमिति । मैवम् । व्याप्तिपक्षधर्मतापेताया युक्तेरपि निरवकाशत्वात् । ततश्च सत्प्रतिपक्षतया निश्चायकत्वाभावेना-

— ಪದಾರ್ಥದೀಪಿಕಾ —

ಕೂಡಿದ್ದ (ಸಹಾಯ ಪಡೆದ) ಉಪಾಧಿ, ವ್ಯಭಿಚಾರಗಳೆರಡರ ದರ್ಶನದಿಂದ ರಹಿತ ವಾದ, (ಅದರ್ಶನದಿಂದ ಸಹಕೃತವಾದ) ಸಾಹಚರ್ಯವನ್ನು ಗ್ರಹಿಸುವ ಪ್ರಮಾಣ ದಿಂದ, ಮೃತ್ತ್ವ (ಮಣ್ಣಾಗಿರುವುದು) ಮುಂತಾದುದಕ್ಕೆ ಅವಕ್ತೃತ್ವ (ವಕ್ತೃತ್ವ ವಿಲ್ಲದಿರುವುದು) ಮುಂತಾದುದರೊಡನೆ ವ್ಯಾಪ್ತಿಯು ಸಿದ್ಧಿಸುತ್ತದೆ ಮತ್ತು- ಮಣ್ಣು ಮುಂತಾದುದರಲ್ಲಿ ಮೃತ್ತ್ವಮುಂತಾದುದು ಇಲ್ಲವೆಂಬುದು (ಹೇಳುವುದು) ಯುಕ್ತವಲ್ಲ ಏಕೆಂದರೆ ವ್ಯಾಘಾತವು ಬರುತ್ತದೆ ಮತ್ತು "ಮೃದಬ್ರವೀತ್" (ಮಣ್ಣು ಮಾತನಾಡಿತು) ಈ ಮುಂತಾದ ವಾಕ್ಯಪ್ರಯೋಗವು ಕೂಡುವುದೂ ಇಲ್ಲ ಆದುದರಿಂದ ಪಕ್ಷಧರ್ಮತೆಯೂ (ಪಕ್ಷೀಕೃತವಾದ ಮೃತ್ತಿನಲ್ಲಿ ಮೃತ್ತ್ವವಿದೆಯೆಂಬುದೂ) ಸಿದ್ಧವೆಂದು ಹೇಳಿದ್ದಾಗುತ್ತದೆ

ಇನ್ನು- 'ನಿತ್ಯತ್ವವಿದ್ದುದರಿಂದ, ವೇದದ ಪ್ರಾಮಾಣ್ಯವು ಸಿದ್ಧ (ವ್ಯವಸ್ಥಿತ) ವಿರಲು, ಅದರ ವಿರುದ್ಧವಾದ ಯುಕ್ತಿಗೇ ಅಪ್ರಾಮಾಣ್ಯವು (ಪ್ರಾಮಾಣ್ಯವಿಲ್ಲದಿರುವುದು) ಯುಕ್ತವಾಗುತ್ತದೆ.' ಹೀಗೆ ಶಂಕಿಸಬಾರದು ಏಕೆಂದರೆ ವ್ಯಾಪ್ತಿ ಪಕ್ಷಧರ್ಮತೆಗಳಿಂದ ಕೂಡಿದ ಯುಕ್ತಿಗೂ ನಿರವಕಾಶತೆಯು ಇರುತ್ತದೆ ಆದುದ

— ವಿಶೇಷಾರ್ಥಪ್ರದೀಪಿಕಾ —

ಪಡಿಸುತ್ತಾರೆ "ವ್ಯಾಘಾತಾತ್"- 'ಮೃದಾದಿಷು" ಎಂಬುದಕ್ಕೆ 'ಮತ್ತು" ಮುಂತಾದುದುಳ್ಳವುಗಳಲ್ಲಿ" ಎಂದು ಅರ್ಥವಿದೆ ಆದುದರಿಂದ ಮೃತ್ತ್ವವಿಲ್ಲವೆಂದರೆ ಸ್ವವಚನವಿರೋಧರೂಪ ವ್ಯಾಘಾತವೆಂದು ತಿಳಿಯಬೇಕು

"ಕಥಂ ಮಾನಂ ಭವೇತ್" ಎಂಬ ಮೂಲವಚನದ ತಾತ್ಪರ್ಯವನ್ನು ಶಂಕಾಸಮಾಧಾನಗಳಿಂದ "ನನುಚ" ಇತ್ಯಾದಿಗ್ರಂಥದಿಂದ ತೋರಿಸುತ್ತಾರೆ "ನಿಶ್ಚಾಯಕತ್ವಾಭಾವೇನ"- ಸತ್ಪ್ರತಿಪಕ್ಷವು ಬರುವದರಿಂದ ಸಾಧ್ಯ ಸಂದೇಹವೇ

प्रामाण्यं वेदस्य । ननु प्रसिद्धमृदादिपक्षीकारे सिद्धसाधनता । पक्षसपक्षभेदाभावश्च । सपक्षान्तरस्वीकारे तत्र मृत्त्वाद्यभावः । जडत्वस्य हेतूकरणे त्वसिद्धिः । स्यात् । तस्मादादिकालीनं मृदादिकं

— ಪದಾರ್ಥದೀಪಿಕಾ —

ರಿಂದ ಪ್ರತಿಪಕ್ಷಾನುಮಾನವಿರುವುದರಿಂದ, ನಿಶ್ಚಾಯಕವಿಲ್ಲದಿರುವುದರಿಂದ, ವೇದಕ್ಕೆ ಅಪ್ರಾಮಾಣ್ಯವು ಬರುತ್ತದೆ

ಇನ್ನು ಪ್ರಸಿದ್ಧವಾದ ಮಣ್ಣುಮುಂತಾದುದನ್ನು ಪಕ್ಷವೆಂದು ಹೇಳಿದರೆ ಸಿದ್ಧ ಸಾಧನವೆಂಬ ದೋಷವು ಬರುತ್ತದೆ ಮತ್ತು ಪಕ್ಷ, ಸಪಕ್ಷ (ದೃಷ್ಟಾಂತ) ಗಳಲ್ಲಿ ಭೇದವಿಲ್ಲದ್ದಾಗುತ್ತದೆ ಬೇರೆ ಸಪಕ್ಷವನ್ನು ಸ್ವೀಕರಿಸಿದರೆ ಅಲ್ಲಿ ಮೃತ್ತ್ವವುಮುಂತಾದುದು (ಹೇತುವು) ಇಲ್ಲವಾಗುತ್ತದೆ ಜಡತ್ವವನ್ನು ಯುಕ್ತಿಯನ್ನಾಗಿ ಮಾಡಿದ ಪಕ್ಷದಲ್ಲಿಯುಂತೂ ಅದಕ್ಕೆ ಅಸಿದ್ಧಿಯು ಬರುವದು, ಆದುದರಿಂದ, ಆದಿಕಾಲದಲ್ಲಿ

— ವಿಶೇಷಾರ್ಥಪ್ರದೀಪಿಕಾ —

ಬರುತ್ತದೆ ಆದುದರಿಂದ ಅರ್ಥ (ವಿಷಯ–ಸಾಧ್ಯ)ದ ನಿಶ್ಚಾಯಕತ್ವವು ಸಂಭವಿಸುವುದಿಲ್ಲವಾದುದರಿಂದ ಅರ್ಥದ ಸತ್ವ (ಅಸ್ತಿತ್ವ)ದ ನಿಶ್ಚಯವಾಗಿರುವದೆಂಬ ಪ್ರಾಮಾಣ್ಯವು ವೇದಕ್ಕೆ ಬರಲಾರದು ಹೀಗೆ ಭಾವ (ಶ್ರೀ ಸತ್ಯಪ್ರತೀಯ ಟಿಪ್ಪಣೀ)

ಇನ್ನು "ಮೃದಬ್ರವೀತ್" ಇತ್ಯಾದಿ ವೇದವಾಕ್ಯಗಳಿಗೆ ಪ್ರತ್ಯಕ್ಷವಿರೋಧವೇ ಹೊರತು ಯುಕ್ತಿವಿರೋಧವಿಲ್ಲ ಆದುದರಿಂದ ಈ ಅಧಿಕರಣಕ್ಕೆ ಈ ಪಾದದಲ್ಲಿ ಸೇರಿಕೆಯು ಯುಕ್ತವಲ್ಲ" ಈ ಆಕ್ಷೇಪವನ್ನು ಶಂಕಾವ್ಯಾಜದಿಂದ ಪರಿಹರಿಸುತ್ತ ಪೂರ್ವಪಕ್ಷವೇ ಉದಯವಾಗದೆಂದು ಆಶಂಕಿಸಿ, ಸಮಾಧಾನವನ್ನೂ 'ನನು ಪ್ರಸಿದ್ಧಮೃದಾದಿಪಕ್ಷೀಕಾರೇ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ "ಸಿದ್ಧಸಾಧನತಾ"– ಪ್ರಸಿದ್ಧವಾದ ಮೃದಾದಿಗಳಿಗೆ, ವಕ್ತೃತ್ವದಬಗ್ಗೆ ವಿವಾದಿಸುವವನನ್ನು ಕುರಿತು ಸಿದ್ಧಸಾಧನತೆಯು ಬರುವುದಿಲ್ಲವಾದುದರಿಂದ, ಇಲ್ಲಿ ಪ್ರಸಿದ್ಧ ಮೃದಾದಿಗಳೇ ದೃಷ್ಟಾಂತಗಳೋ ಅಥವಾ ಬೇರೆ ದೃಷ್ಟಾಂತವಿದೆಯೋ? ಹೀಗೆ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಅದರಲ್ಲಿ ಮೊದಲನೆಯ ಕಲ್ಪವನ್ನು "ಪಕ್ಷ ಸಪಕ್ಷಯೋಃ" ಈ ವಾಕ್ಯದಿಂದ ನಿರಾಕರಿಸುತ್ತಾರೆ ಪ್ರಸಿದ್ಧಮೃದಾದಿಗಳೇ ಪಕ್ಷ ಹಾಗು ಸಪಕ್ಷವಾಗುವವು ಈ ಕಾರಣದಿಂದ ಅವೆರಡರಲ್ಲಿ ಭೇದವಿಲ್ಲವಾಗುತ್ತದೆ ಎರಡನೆಯ ಪಕ್ಷದಲ್ಲಿ ಮೃತ್ವ ಮುಂತಾದುದು ಹೇತುವಾದರೆ ಅಸಾಧಾರಣ್ಯವೆಂಬ ದೋಷವನ್ನು "ಸಪಕ್ಷಾಂತರ" ಈ ವಾಕ್ಯದಿಂದ ಹೇಳು

पक्षयितव्यम् । नच तत्प्रत्यक्षादिसिद्धमिति वेद एवोपजीव्यः । तथा च धर्मिग्राहकप्रमाणविरोधादप्रामाण्यं युक्तेरिति चेन्न । व्याप्त्यादिमत्यास्तदसम्भवात् । आदिकालीनमृदादिस्वरूपपरवाक्यान्तरेण परिदृश्यमानकार्यलिङ्गेन वा धर्मिग्रहोपपत्तेः । एतेन वैदिकेऽर्थे युक्तेरवकाशा-

— ಪದಾರ್ಥದೀಪಿಕಾ —

ರುವ ಮಣ್ಣು ಮುಂತಾದುದನ್ನು ಪಕ್ಷೀಕರಿಸಬೇಕು ಮತ್ತು ಆ ಆದಿಕಾಲದಲ್ಲಿರುವ ಮಣ್ಣು ಮುಂತಾದುದು ಪ್ರತ್ಯಕ್ಷಾದಿಗಳಿಂದ ಸಿದ್ಧಿಸಿಲ್ಲ, ಆದುದರಿಂದ, ವೇದವನ್ನೇ ಉಪಜೀವಿಸತಕ್ಕದ್ದು ಅಂತೂ ಧರ್ಮಿಯನ್ನು ಗ್ರಹಿಸಿಕೊಡುವ ಪ್ರಮಾಣದಿಂದ ವಿರೋಧವು ಬರುವುದರಿಂದ, ಯುಕ್ತಿಗೆ ಪ್ರಾಮಾಣ್ಯವಿಲ್ಲ– (ಅಪ್ರಾಮಾಣ್ಯವು) ಹೀಗೆ ಶಂಕಿಸಬಾರದು ಏಕೆಂದರೆ ವ್ಯಾಪ್ತಿಮುಂತಾದುದನ್ನುಳ್ಳ ಯುಕ್ತಿಗೆ ಅಪ್ರಾಮಾಣ್ಯವು ಸಂಭವಿಸುವುದಿಲ್ಲ ಏಕೆಂದರೆ ಆದಿಕಾಲದಲ್ಲಿರುವ ಮಣ್ಣು ಮುಂತಾದುದರ ಸ್ವರೂಪವನ್ನು ತಿಳಿಸುವ ವಾಕ್ಯಾಂತರದಿಂದ, ಇಲ್ಲವೆ, ಕಂಡು ಬರುವ ಕಾರ್ಯರೂಪ ಯುಕ್ತಿಯಿಂದ ಧರ್ಮಿಯ (ಪಕ್ಷದ) ವಿಷಯಕವಾದ ಜ್ಞಾನವು ಸಂಭವಿಸುತ್ತದೆ ಇದರಿಂದ, "ವೇದೋಕ್ತವಾದ ಅರ್ಥದ ಬಗ್ಗೆ ಯುಕ್ತಿಗೆ ಅವ

— ವಿಶೇಷಾರ್ಥಪ್ರದೀಪಿಕಾ —

ತ್ತಾರೆ "ಮೃದಾದಿಗಳಿಂದ ಬೇರೆಯಾದುದು' ಹೀಗೆ ಅರ್ಥ "ಸ್ತಂಭ ಮುಂತಾದ ಸಪಕ್ಷಾಂತರ" ವೆಂದೂ ಅರ್ಥ (ಸತ್ಪ್ರತೀಯ) ಜಡತ್ವವು ಹೇತುವೆಂದರೆ, ದೋಷವನ್ನು "ಜಡತ್ವ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ "ಅಸಿದ್ಧಿಃ"– ಮೃದಾದಿಗಳಿಗೆ ಬುದ್ಧಿವಾಗಾದಿಗಳನ್ನು ವೇದವಚನಾನುಸಾರವಾಗಿ ಅಂಗೀಕರಿಸುವವನು, ಅಜ್ಞಾತೃತ್ವ, ಅವಕ್ತೃತ್ವ ಮುಂತಾದರೂಪ ಜಡತ್ವವನ್ನು ಒಪ್ಪಲಾರನು ಹೀಗೆ ಭಾವ ಟೀಕಾದಲ್ಲಿ ಜಡತ್ವವನ್ನು ಹೇತುವಾಗಿ ಹೇಳಿದುದು ಆದಿಕಾಲೀನವಾದ ಮೃದಾದಿಗಳನ್ನು ಪಕ್ಷೀಕರಿಸಿದ ಕಲ್ಪದಲ್ಲಿಯೇ ! ಏಕೆಂದರೆ ಮೃತ್ತ್ವ ಮುಂತಾದುದರಿಂದ ಜಡತ್ವವನ್ನು ತರ್ಕಿಸತಕ್ಕದ್ದು ಹೀಗೆ ಚಂದ್ರಿಕಾದಲ್ಲಿ ತಾತ್ಪರ್ಯವನ್ನು ಹೇಳಲಾಗಿದೆ.

"ವೇದ ಏವೋಪಜೀವ್ಯಃ"- "ಮೃದಬ್ರವೀತ್" ಇತ್ಯಾದಿರೂಪವೇದವೇ ಉಪಜೀವ್ಯವು ಹೀಗೆ ಅರ್ಥ "ವಾಕ್ಯಾಂತರೇಣ" - "ಅದ್ಭ್ಯಃಪೃಥಿವೀ" ಇತ್ಯಾದಿರೂಪವಾದ ವಾಕ್ಯಾಂತರದಿಂದ ಈ ಪಕ್ಷದಲ್ಲಿಯೂ ಧರ್ಮಿಗ್ರಾಹಕದ ಸಜಾತೀಯವಾದ ವಾಕ್ಯದಿಂದ ಬಾಧವು ಬರುತ್ತದೆಂಬ ಕಾರಣದಿಂದ, ಧರ್ಮಿಗ್ರಾಹಕವಾದ ಬೇರೆ ಪ್ರಮಾಣವನ್ನು "ಪರಿದೃಶ್ಯಮಾನ" ಇತ್ಯಾದಿವಾಕ್ಯದಿಂದ

ततस्तन्नामकः कश्चित्पुमानन्यो भवेदिति ॥

भावान्न तद्विरोधकत्वमित्यपास्तम् । तदेवं मृदब्रवीदित्यादिवेदवाक्यानां युक्तिविरुद्धत्वेनाप्रामाण्ये वेदत्वाद्यतो वा इमानि भूतानीत्यादिवाक्याना-मप्यप्रामाण्यान्न वेदसमन्वयेन ब्रह्मणो जगत्कारणत्वसिद्धिरिति ।

सिद्धान्तमाह ॥ तत इति ॥ वेदस्य युक्तेश्च निरवकाशत्वं तत

ವೇದಕ್ಕೆ ಹಾಗು ಯುಕ್ತಿಗೆ ನಿರವಕಾಶತೆಯಿರುವುದರಿಂದ, "ಮೃತ್" ಮುಂತಾದ ಹೆಸರುಳ್ಳ, ನಮ್ಮಂಥವರ ಇಂದ್ರಿಯಗಳಿಗೆ ಗೋಚರನಾಗದ, ನಮ್ಮಂಥವರಿಂದ ವಿಲಕ್ಷಣನಾದ ಅಂತರ್ಧಾನಾದಿ ಶಕ್ತಿಯುಳ್ಳ ಚೇತನನು, "ಮೃದಬ್ರವೀತ್" ಇತ್ಯಾದಿ ಶ್ರುತಿಗಳಲ್ಲಿ ವಕ್ತೃತ್ವ ಮುಂತಾದ ಗುಣವುಳ್ಳವನೆಂಬುದಾಗಿ ಪ್ರತಿಪಾದಿ

— ಪದಾರ್ಥದೀಪಿಕಾ —

ಕಾಶವಿಲ್ಲವಾದುದರಿಂದ, ವೇದಾರ್ಥವಿರೋಧಕತ್ವವು ಯುಕ್ತಿಗ ಬರಲಾರದು," ಹೀಗೆ ಹೇಳಿದುದೂ ನಿರಾಕರಿಸಲ್ಪಟ್ಟಿರುತ್ತದೆ ಹೀಗೆ "ಮೃದಬ್ರವೀತ್" ಈ ಮುಂತಾದ ವೇದ ವಾಕ್ಯಗಳಿಗೆ, ಯುಕ್ತಿವಿರೋಧವಿರುವುದರಿಂದ ಅಪ್ರಾಮಾಣ್ಯವು ಸಿದ್ಧವಾಗಲು, ವೇದತ್ವ (ವೇದವಾಗಿರುವುದೆಂಬ) ಯುಕ್ತಿಯಿಂದ "ಯತೋ ವಾ ಇಮಾನಿ ಭೂತಾನಿ' ಈ ಮುಂತಾದ ವೇದ ವಾಕ್ಯಗಳಿಗೂ ಅಪ್ರಾಮಾಣ್ಯವು ಬರುವುದರಿಂದ, ವೇದಸಮನ್ವಯದಿಂದ ಬ್ರಹ್ಮನಲ್ಲಿ ಜಗತ್ಕಾರಣತ್ವದ ಸಿದ್ಧಿಯು ಆಗುವುದಿಲ್ಲ" ಹೀಗೆ ಪೂರ್ವಪಕ್ಷವು.

ಸಿದ್ಧಾಂತವನ್ನು "ತತಃ" ಇತ್ಯಾದಿ ವಚನದಿಂದ ಹೇಳುತ್ತಾರೆ "ತತಃ" ಎಂಬ ಶಬ್ದದಿಂದ ವೇದದ ಹಾಗು ಯುಕ್ತಿಯ ನಿರವಕಾಶತೆಯನ್ನು ಪರಾಮರ್ಶಿ

— ವಿಶೇಷಾರ್ಥಪ್ರದೀಪಿಕಾ —

ಹೇಳುತ್ತಾರೆ "ಈಗಿರುವ ಮೃದಾದಿರೂಪವಾದ ಕಾರ್ಯವು ಸಜಾತೀಯಕಾರಣದಿಂದ ಹುಟ್ಟಿದುದು ಏಕೆಂದರೆ ಕಾರ್ಯವಾಗಿದೆ" ಈ ಅನುಮಾನದಿಂದ ಆದಿಕಾಲೀನ ಮೃದಾದಿಗಳು ಸಿದ್ಧಿಸುತ್ತವೆ ಹೀಗೆ ಅರ್ಥ "ಏತೇನ"-ಮೃದಬ್ರವೀತ್" ಇತ್ಯಾದಿ ವೇದವಿಷಯವಾದ, ಆದಿಕಾಲೀನಮೃದಾದಿಗಳಿಗೆ ಅನುಮಾನದಿಂದ ಸಿದ್ಧಿಯನ್ನು ಹೇಳಿದುದರಿಂದ, ಅಂದರೆ– ಮೃದಾದಿಗಳು ವೈದಿಕ (ವೇದಪ್ರಾಪ್ತ) ವಲ್ಲವೆಂದು ಇಲ್ಲಿ ಭಾವ ಅಥವಾ ವೇದದಿಂದ ಬೇರೆಯಾದ ಅನುಮಾನವೇ ಉಪಜೀವ್ಯವೆಂದು ಹೇಳುವುದರಿಂದ, ಹೀಗೆ ಅರ್ಥ "ವೇದಸ್ಯ" - ಹಿಂದಿನ ಅಧಿಕರಣದಲ್ಲಿ ಚನ್ನಾಗಿ ಸಮರ್ಥಿಸಲ್ಪಟ್ಟ ಪ್ರಾಮಾಣ್ಯ

युक्त्यागमाविरोधेन प्राप्तमत्राभिधीयते ॥

इति परामृशति । तन्नामको मृदादिनामकः कश्चिदित्यस्मदाद्यतीन्द्रियत्वमभिप्रैति । पुमांश्चेतनोऽन्योऽस्मदादिलक्षणोऽन्तर्धानादिशक्तिमान् भवेत् । अस्यां श्रुतौ वक्तृत्वादिना प्रतिपाद्यत इति शेषः । इतिशब्दस्य प्राप्तमित्यनेनान्वयः । प्राप्तं प्रमितम् । युक्त्यागमाविरोधेनेत्यर्थापत्तिं सूचयति । ततश्चायमर्थः । न मृदब्रवीदित्यादिवाक्यानां

ಸಲ್ಪಡುತ್ತಾನ ಯುಕ್ತಿ ಆಗಮಗಳಿಗೆ ಪರಸ್ಪರ ಅವಿರೋಧವು ಬರುವುದರಿಂದ, ಹಿಂದ ಹೇಳಿದಂತೆ ಪ್ರಮಿತವಾದ ಈ ಸಂಗತಿಯು, "ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ" ಎಂಬ ಈ ಸೂತ್ರದಲ್ಲಿ ಹೇಳಲ್ಪಡುತ್ತದೆ.

— ಪದಾರ್ಥದೀಪಿಕಾ —

ಸುತ್ತಾರೆ "ತನ್ನಾಮಕಃ"– "ಮೃತ್" ಈ ಮುಂತಾದ ನಾಮವುಳ್ಳ "ಕಶ್ಚಿತ್" ಎಂಬ ವಚನದಿಂದ, 'ನಮ್ಮಂಥವರ ಇಂದ್ರಿಯಗಳಿಗೆ ನಿಲುಕದವನು" ಎಂಬ ಅರ್ಥವನ್ನು ಹೇಳಲು ಅಭಿಪ್ರಾಯ ಪಟ್ಟಿರುತ್ತಾರ "ಪುಮಾನ್"– ಚೇತನನು "ಅನ್ಯಃ"– ನಮ್ಮಂಥವರಿಂದ ವಿಲಕ್ಷಣನು, ಅಂತರ್ಧಾನ ಮುಂತಾದುವರಲ್ಲಿ ಶಕ್ತಿಯುಳ್ಳವನು "ಭವೇತ್"– ಆಗಿರಬೇಕು "ಅಸ್ಯಾಂ ಶ್ರುತೌ ವಕ್ತೃತ್ವಾದಿನಾ ಪ್ರತಿಪಾದ್ಯತೇ' (ಈ 'ಮೃದಬ್ರವೀತ್" ಇತ್ಯಾದಿ ಶ್ರುತಿಯಲ್ಲಿ ವಕ್ತೃತ್ವಾದಿಗುಣಗಳುಳ್ಳವನೆಂಬುದಾಗಿ (ಮಾತನ್ನಾಡಿದನೆಂದು ಮುಂತಾಗಿ) ಪ್ರತಿಪಾದಿಸಲ್ಪಡುತ್ತದ) ಎಂಬುದು ಶೇಷವಚನವು "ಇತಿ" ಶಬ್ದಕ್ಕೆ "ಪ್ರಾಪ್ತಂ" ಎಂಬ ಪದದಿಂದ ಅನ್ವಯವಿರುತ್ತದೆ "ಪ್ರಾಪ್ತಂ"– ಪ್ರಮಿತವಾದುದು "ಯುಕ್ತ್ಯಾಗಮಾವಿರೋಧೇನ" ಎಂಬ ವಚನದಿಂದ, ಅರ್ಥಾಪತ್ತಿಯನ್ನು ಸೂಚಿಸುತ್ತಾರೆ ಇದರಿಂದ ಈ ಅರ್ಥವು ಹೊರಡುತ್ತದೆ – "ಮೃದಬ್ರವೀತ್" ಇತ್ಯಾದಿ ವೇದವಾಕ್ಯ

— ವಿಶೇಷಾರ್ಥಪ್ರದೀಪಿಕಾ —

ವುಳ್ಳದೆಂದು ಪ್ರಾಪ್ತವಾದ, ಪೂರ್ವಶ್ಲೋಕದಲ್ಲಿ "ತಥಾಪಿ'' ಎಂಬ ಪದದಿಂದ ಸೂಚಿತವಾದ ವೇದದ ನಿರವಕಾಶತ್ವವು, ಹೀಗೆ ಅರ್ಥ "ಯುಕ್ತೇಶ್ಚ"– "ದೃಷ್ಟವ್ಯಾಪ್ತಿ'' ಎಂಬುದಾಗಿ ಹಿಂದೆ ಹೇಳಿದ ಯುಕ್ತಿಯ ನಿರವಕಾಶತ್ವವು, ಹೀಗೆ ಅರ್ಥ ಭೂದೇವಿಯು ಸ್ತ್ರೀಯಾದುದರಿಂದ "ಪುಮಾನ್-ಚೇತನಃ'' ಎಂದು ಟೀಕಾಕಾರರು ವ್ಯಾಖ್ಯಾನಿಸಿದ್ದಾರೆ "ಅರ್ಥಾಪತ್ತಿಂ" – ಶ್ರುತಿಯುಕ್ತಿ ಇವೆರಡರ ಅವಿರೋಧವು ಅನ್ಯಥಾ ಯುಕ್ತವಾಗುವದಿಲ್ಲವೆಂಬ ಅನುಪಪತ್ತಿಯೆಂಬ

युक्तिविरोधेनाप्रामाण्यं वक्तव्यम्। अत्र मृदादिशब्दस्य चेतनविषयत्वात्। तथा च तत्पक्षीकारे हेतोरसिद्धः। शब्दमात्रेण हेतुत्वेऽतिप्रसङ्गात्। अचेतनमृदादिपक्षीकारे च प्रकृताविरोधात्।

— ಪದಾರ್ಥದೀಪಿಕಾ —

ಗಳಿಗೆ ಯುಕ್ತಿವಿರೋಧವೆಂಬ ಕಾರಣದಿಂದ ಅಪ್ರಾಮಾಣ್ಯವನ್ನು ಹೇಳತಕ್ಕದ್ದಲ್ಲ. ಏಕೆಂದರೆ" ಇಲ್ಲಿರುವ "ಮೃತ್"ಮುಂತಾದ ಶಬ್ದಕ್ಕೆ–"ಚೇತನ" ವೆಂಬ ಅರ್ಥವಿದ (ವಿಷಯವಾಗಿದೆ) ಆದುದರಿಂದ, ಚೇತನವನ್ನು ಪಕ್ಷೀಕರಿಸಿದಲ್ಲಿ ಅಸಿದ್ಧಿಯು ಬರುತ್ತದೆ ಕೇವಲ ಶಬ್ದದಿಂದ ವಾಚ್ಯವಾಗಿರುವುದೇ ಹೇತುವೆಂದು ಹೇಳಿದರೆ ಅತಿ ಪ್ರಸಂಗವು ಬರುತ್ತವ ಅಚೇತನವಾದ ಮೃದಾದಿಗಳನ್ನು ಪಕ್ಷವೆಂದು ಹೇಳಿದರೆ ಪ್ರಕೃತದಲ್ಲಿ ವಿರೋಧವಿಲ್ಲ (ಈ ಕಾರಣಗಳಿಂದ, ಯುಕ್ತಿಗ ವೇದಪ್ರಾಮಾಣ್ಯ ವಿರೋಧಕತ್ವವು ಬರಲಾರದು" ಆದುದರಿಂದ ವೇದವು ಅಪ್ರಮಾಣವಲ್ಲ, ಪ್ರಮಾಣವೇ !)

— ವಿಶೇಷಾರ್ಥಪ್ರದೀಪಿಕಾ —

ಅರ್ಥಾಪತ್ತಿಯನ್ನು ಈ ಅರ್ಥವನ್ನು ಒಪ್ಪದಿದ್ದಲ್ಲಿ ವಿರೋಧದ ಶಾಂತಿಯೇ ಆಗುವದಿಲ್ಲವೆಂದು ಭಾವ

"ಮೃತ್ತ್ವಾತ್'' ಎಂಬಲ್ಲಿ ''ಮೃತ್ತಿನಲ್ಲಿಗುವ (ಜಡಗತ) ''ಮೃತ್ತ್ವ" ಎಂಬ ಧರ್ಮವು ಅಭಿಪ್ರೇತವಿದ್ದ ಪಕ್ಷ ಹಾಗೂ "'ಮೃತ್" ವಾಚ್ಯತ್ವವೆಂಬ ಅರ್ಥವಿದ್ದ ಪಕ್ಷ ಇವೆರಡನ್ನೂ ''ತಥಾಚ'' ಇತ್ಯಾದಿ ವಚನದಿಂದ ದೂಷಿಸುತ್ತಾರೆ "ಅತಿಪ್ರಸಂಗಾತ್– ಪೃಥ್ವಿಮುಂತಾದುದೂ ''ಗೋ'' ಪದ ವಾಚ್ಯವಾದುದರಿಂದ ಅದಕ್ಕೂ ನಾಸ್ನಾದಿಮತ್ತ್ವವು ಬರಬೇಕಾಗುತ್ತದೆಂದು ಅರ್ಥ ''ಪ್ರಕೃತಾ ವಿರೋಧಾತ್'' - ಅಚೇತನ ಮೃದಾದಿಗಳಿಗೆ ವಕ್ತೃತ್ವವಿಲ್ಲದಿದ್ದರೂ ''ಮೃದಬ್ರವೀತ್'' ಇತ್ಯಾದಿ ವಾಕ್ಯಗಳಿಗೆ, ಮೃತ್ತಿಕೆಯು ಮಾತನಾಡಿತೆಂದು ಅರ್ಥ ವಿಲ್ಲವಾದುದರಿಂದ ಹಾಗೂ ಅಭಿಮಾನಿ ಚೇತನವೇ ನುಡಿಯಿತೆಂಬ ಅರ್ಥ ವಿರುವದೆಂದು ಅಂಗೀಕರಿಸಿದುದರಿಂದ ಯುಕ್ತಿವಿರೋಧವಿಲ್ಲವಾದುದರಿಂದ, ವೇದ ಪ್ರಾಮಾಣ್ಯದ ಬಗ್ಗೆ ಯಾವದೇ ವಿರೋಧವಿಲ್ಲವೆಂದು ತಾತ್ಪರ್ಯ

ಇನ್ನು ಮೃತ್ತ್ವಮುಂತಾದುದು ಚೇತನಗಳಲ್ಲಿ ಅಪ್ರಸಿದ್ಧವಾದುದಾದರೆ 'ತನ್ನಾಮಕಃ'' ಎಂದು ಹೇಳಿದುದು ಅಯುಕ್ತವಾಗುತ್ತದೆ ಏಕೆಂದರೆ "ಮೃತ್" ಮುಂತಾದ ಶಬ್ದಗಳ ಪ್ರವೃತ್ತಿನಿಮಿತ್ತವು ಇರುವದಿಲ್ಲ ಅಮುಖ್ಯವೃತ್ತಿಯಿಂದ ಶಬ್ದವು ಪ್ರವೃತ್ತಿಸುವದೆಂದರೆ ಮುಖ್ಯನ್ಯಾಯವಿರೋಧವು (ಮುಖ್ಯಾಮುಖ್ಯ

ननु कथं चेतनेषु मृदादिशब्दप्रवृत्तिः । अभिधानशक्त्येति ब्रूमः मृदाद्यभिमानित्वात । पृथिव्यादिषु तदभिमतत्वेन मृदादिशब्द-प्रवृत्तिः । नन्वेतेऽभिमानिनः किमभिमतार्थव्यापिनस्तदेकदेशवृत्तयो

— ಪದಾರ್ಥದೀಪಿಕಾ —

ಇನ್ನು- ಚೇತನಗಳಲ್ಲಿ "ಮೃತ್" ಮುಂತಾದ ಶಬ್ದಗಳು ಹೇಗೆ ಪ್ರವೃತ್ತ ವಾಗುವವು ? ಎಂದು ಪ್ರಶ್ನಿಸಿದರೆ "ಅಭಿಧಾನಶಕ್ತಿಯಿಂದ" ಎಂಬ ಉತ್ತರವನ್ನು ಹೇಳುತ್ತೇವೆ ಏಕೆಂದರೆ "ಮೃತ್ತು" ಮುಂತಾದುದರ ಮೇಲೆ ಆ ಚೇತನಗಳಿಗೆ ಅಭಿಮಾನವಿರುತ್ತದೆ ಆದುದರಿಂದ, ಪೃಥಿವೀ ಮುಂತಾದುದರಲ್ಲಿ ಅದು ಅಭಿಮತ ವಾದುದರಿಂದ ಮೃದಾದಿ ಶಬ್ದಗಳಿಗೆ ಮೃದಾದ್ಯಭಿಮಾನಿ ಚೇತನಗಳಲ್ಲಿ ಪ್ರವೃ ತ್ತಿಯು ಯುಕ್ತವಾಗುತ್ತದೆ

ಇನ್ನು 'ಈ ಅಭಿಮಾನಿಚೇತನರು, ತಮ್ಮ ಅಭಿಮತ (ಅಭಿಮಾನ ವಿಷಯ) ಗಳಾದ ಅರ್ಥ (ವಸ್ತು) ಗಳನ್ನು ತುಂಬ ವ್ಯಾಪಿಸಿರುವರೋ ಅಥವಾ ಅವುಗಳ

— ವಿಶೇಷಾರ್ಥಪ್ರದೀಪಿಕಾ —

ಗಳಲ್ಲಿ ಮುಖ್ಯವನ್ನು ಸ್ವೀಕರಿಸಬೇಕಂಬ ಯುಕ್ತಿವಿರೋಧವು) ಬರುತ್ತದೆ ಈ ಅಭಿಪ್ರಾಯದಿಂದ ಆಶಂಕೆಯನ್ನು "ನನು" ಇತ್ಯಾದಿವಾಕ್ಯದಿಂದ ತೋರಿಸು ತ್ತಾರ ಜಡವಾಚಕವಾಗಿ ಪ್ರಸಿದ್ಧವಾದ ಮೃದಾದಿಶಬ್ದಗಳಿಗೆ ಚೇತನಗಳಲ್ಲಿ ಅಭಿಧಾನ ಶಕ್ತಿ (ಮುಖ್ಯವೃತ್ತಿ)ಯನ್ನು ಹೇಗೆ ಹೇಳುವದೆಂಬ ಆಶಂಕೆಯನ್ನು "ಮೃದಾದ್ಯಭಿಮಾನಿತ್ವಾತ್" ಎಂಬ ವಚನದಿಂದ ಪರಿಹರಿಸಿದ್ದಾರೆ ಮೃತ್ತಿನ ಲ್ಲಿರುವ ಮೃತ್ತ್ವವೆಂಬ ಧರ್ಮವು ಇಲ್ಲದಿದ್ದರೂ ಮೃತ್ತಿನಲ್ಲಿರುವ "ಮೃತ್ವ" ಧರ್ಮದಮೇಲೆ ಸ್ವಾತಂತ್ರ್ಯ(ನಿಯಮನ) ವೆಂಬ ಪ್ರವೃತ್ತಿನಿಮಿತ್ತವಿರುವುದೆಂದು ಇಲ್ಲಿಯ ಭಾವ ಪರಾಧೀನ ನಿಯಂತೃತ್ವವೇ ಅಭಿಮಾನವೆನಿಸುತ್ತದೆಂದು ಭಾವ ಇದನ್ನು ಮುಂದೆ ವಿವರಿಸುವರು ಹಾಗಾದರೆ- ಜಡಗಳಲ್ಲಿ ಪ್ರಯೋಗ ವಾಗದಿರಲಿ, ಎಂಬ ಆಶಂಕೆಯನ್ನು , "ಅದಕ್ಕೂಕಡಮೆಯಾದ ವೃತ್ತಿಯಿಂದ ಪ್ರಯೋಗವಾಗುವದು, ಈ ಅಭಿಪ್ರಾಯದಿಂದ "ಪೃಥಿವ್ಯಾದಿಷು" ಈ ವಚನದಿಂದ ನಿವಾರಿಸುತ್ತಾರೆ "ತದಭಿಮತತ್ವೇನ"– ಮೃದಾದಿಶಬ್ದವಾಚ್ಯವಾದ ದೇವತೆಗಳ (ಚೇತನಗಳ) ಸಂಬಂಧವಿರುವುದೆಂಬ ನಿಮಿತ್ತದಿಂದ, ಅಂದರೆ ಅದರಿಂದಾದ ಯೋಗ ರೂಢಿಗಳಿಂದ ಹೀಗೆ ಅರ್ಥ ಈ ಸಂಗತಿಯು "ಶರೀರರೂಪಕ ವಿನ್ಯಸ್ತಗೃಹೀತೇಃ" ಎಂಬಲ್ಲಿ ಹೇಳಲ್ಪಟ್ಟಿದೆ ಆ ಅಧಿಕರಣದಲ್ಲಿ– "ಅವ್ಯಕ್ತ ಶಬ್ದವಾಚ್ಯನಾದ ಈಶ್ವರನ ಸಂಬಂಧವಿರುವದರಿಂದ ಅವ್ಯಕ್ತತತ್ವಾದಿ ಇತರ ಅರ್ಥಗಳಲ್ಲಿಯೂ ಅವ್ಯಕ್ತಶಬ್ದದ ಪ್ರಯೋಗವಾಗುವದೆಂದು ಹೇಳರುತ್ತಾರೆ

वा । आद्येऽपि सदेहा विदेहा वा । आद्ये तदुपलम्भप्रसङ्गः । द्वितीये तेषामिन्द्रियाभावेन वक्तृत्वाद्यनुपपत्तौ पुनर्युक्तिविरोधनाऽवस्थ्यम् । तृतीये तद्वैयर्थ्यम् । तदनधिष्ठितप्रदेशवत् प्रदेशान्तरप्रवृत्तिसम्भवादिति । मैवम् । व्यापकाना सदेहानामपि पिशाचादिवदन्तर्धानशक्तियोगाददृश्यत्वोपपत्तेः । नन्वेवं सति कल्पनागौरवमापद्येत । केषाञ्चिच्चेतनानां मृदाद्यभिमानित्वं ततस्तच्छब्दानां तेषु वृत्तिर्व्यापकत्वं

— ಪದಾರ್ಥದೀಪಿಕಾ —

ಏಕದೇಶದಲ್ಲಿ ಇರತಕ್ಕವರೋ? ಹೀಗೆ ಪ್ರಶ್ನೆ ಮೊದಲನೆಯು ಕಲ್ಪದಲ್ಲಿಯಾದರೋ ಅವರು ದೇಹವುಳ್ಳವರೋ ? ದೇಹವಿಲ್ಲದವರೋ ? ಹೀಗೆ ಪ್ರಶ್ನೆ ಇವುಗಳಲ್ಲಿ ಮೊದಲನೆಯು ಕಲ್ಪದಲ್ಲಿ ದೇಹವುಳ್ಳ ಅವರ ದರ್ಶನವಾಗಬೇಕಾಗುತ್ತದ ಎರಡನೆಯ ಪಕ್ಷದಲ್ಲಿ ದೇಹವಿಲ್ಲದ ಆ ಅಭಿಮಾನಿಚೇತನರಿಗೆ ಇಂದ್ರಿಯವಿಲ್ಲದಿರುವುದರಿಂದ ವಕ್ತೃತ್ವ ಮುಂತಾದುದರ ಬಗ್ಗೆ ಅನುಪಪತ್ತಿಯು ಬರಲು, ಮತ್ತೆ ಯುಕ್ತಿ ವಿರೋಧವು ಅನಿವಾರ್ಯವೇ ಆಗುತ್ತದೆ — ಹಾಗೆಯೇ ಉಳಿಯುತ್ತದೆ ಮೂರನೆಯ ಕಲ್ಪದಲ್ಲಿ ಏಕದೇಶದಲ್ಲಿ ಇರುವುದೆಂಬುದರ ಉಪಯೋಗವು ಇರುವುದಿಲ್ಲ (ವೈಯ್ಯರ್ಥವು) ಏಕೆಂದರೆ ಈ ಚೇತನರಿಲ್ಲದ ಪ್ರದೇಶಗಳ ಹಾಗೆ ಇನ್ನುಳಿದ ಇಂಥ ಪ್ರದೇಶಗಳಿಗೂ ಪ್ರವೃತ್ತಿಯು ಸಂಭವಿಸುತ್ತದೆ " ಹೀಗೆ ಪ್ರಶ್ನಿಸುವುದು ಸಮಂಜಸವಲ್ಲ ಏಕಂದರೆ ತಮ್ಮ ಅಭಿಮಾನ ವಿಷಯಗಳಾದ ವಸ್ತುಗಳನ್ನೆಲ್ಲಾ ವ್ಯಾಪಿಸಿದ ಸದೇಹರಾದ ಅಭಿಮಾನಿಚೇತನರಿಗೂ ಪಿಶಾಚಾದಿಗಳ ಹಾಗೆ ಅಂತರ್ಧಾನ ಶಕ್ತಿಯಿರುವುದರಿಂದ, ಅದೃಶ್ಯರಾಗಿರುವುದು ಯುಕ್ತವಾಗುತ್ತದೆ

ಹಾಗಾದರೆ- "ಕಲ್ಪನಾಗೌರವವು ಬರಬೇಕಾದೀತು ಏಕೆಂದರ ಕೆಲವು ಚೇತನರಿಗೆ ಮೃದಾದ್ಯಭಿಮಾನಿತ್ವವು, ಅನಂತರ ಈ ಅಭಿಮಾನ ವಿರುವುದರಿಂದ, ಮೃದಾದಿಶಬ್ದಗಳಿಗೆ ಅವರಲ್ಲಿ ಪ್ರವೃತ್ತಿಯು, ಹಾಗು, ಅಭಿಮಾನಿ ಚೇತನರಿಗೆ

— ವಿಶೇಷಾರ್ಥಪ್ರದೀಪಿಕಾ —

''ಕಶ್ಚಿದನ್ಯಃ'' ಎಂಬೆರಡು ಪದಗಳ ತಾತ್ಪರ್ಯವನ್ನು ಶಂಕಾಸಮಾಧಾನಗಳ ಮುಖಾಂತರದಿಂದ ''ನನ್ವೇತೇ'' ಇತ್ಯಾದಿ ವಾಕ್ಯಗಳಿಂದ ವಿಶದಪಡಿಸುತ್ತಾರೆ '‘ತೃತೀಯೇಽಪಿ ’– ಇಲ್ಲಿ ಎರಡೇ ಪಕ್ಷಗಳನ್ನು ವಿಕಲ್ಪಿಸಿದ್ದರೂ, ಈ ಪಕ್ಷವು ಎರಡನೆಯದಾಗಿದ್ದರೂ ಮೊದಲನೆಯ ಪಕ್ಷದಲ್ಲಿ ಮಾಡಿದ ಎರಡು ವಿಕಲ್ಪಗಳ ಅಪೇಕ್ಷೆಯಿಂದ ಮೂರನೆಯದೆನಿಸುತ್ತದೆಂದು ತಿಳಿಯಬೇಕು. ‘ ಯುಕ್ತ್ಯಾಗಮಾವಿರೋಧೇನ'' ಎಂಬ ಪದದ ತಾತ್ಪರ್ಯವನ್ನು ''ನನ್ವೇವಂ''

सदेहत्वमन्तर्धानशक्तिस्तत्परता च श्रुतेरित्यनेकस्य कल्प्यमानत्वात् । मैवम् । अर्थापत्तिनः सर्वस्यास्य सिद्धत्वात् । श्रुतिर्हि मृदादीनां वक्तृत्वादिकं प्रतिपादयति युक्तिश्च तदभावम । न च वास्तवो विरोधः सम्भवति । वस्तुविकल्पापत्तेः । न चायं विरोधो विनैतत्कल्पनया शाम्यति । जडस्वीकारे युक्तिविरोधात् । अनभिमानिस्वीकारे च पृथक् शब्दशक्तौ प्रमाणाभावात् । अव्यापकत्वाद्यङ्गीकारे

## — ಪದಾರ್ಥದೀಪಿಕಾ —

ಆಯಾ ಪದಾರ್ಥವ್ಯಾಪಕತ್ವವು, ಸದೇಹತ್ವವು, ಅಂತರ್ಧಾನಶಕ್ತಿಯು, ಹಾಗು ಶ್ರುತಿಯು ಇಂಥ ಅಭಿಮಾನಿಚೇತನಪರವಾಗಿರುವುದು, ಈ ಮುಂತಾದ ಅನೇಕ ಸಂಗತಿಗಳನ್ನು ಕಲ್ಪಿಸಬೇಕಾಗುವದು" ಹೀಗೆ ಶಂಕಿಸಬಾರದು ಏಕೆಂದರೆ ಇದೆಲ್ಲವೂ ಅರ್ಥಾಪತ್ತಿಯಿಂದ ಸಿದ್ಧಿಸಿರುತ್ತದೆ ಹೇಗೆಂದರೆ– "ಶ್ರುತಿಯು, ಮೃತ್ತು ಮೊದಲಾದವುಗಳಿಗೆ ವಕ್ತೃತ್ವ ಮುಂತಾದುದನ್ನು ಹೇಳುತ್ತದೆ ಮತ್ತು ಯುಕ್ತಿಯು, ವಕ್ತೃತ್ವ ಮುಂತಾದುದು ಮೃದಾದಿಗಳಿಗೆ ಇಲ್ಲವೆಂಬ ಸಂಗತಿಯನ್ನು ಹೇಳುತ್ತದೆ ಇನ್ನು ವಿರೋಧವು ವಾಸ್ತವವಾಗಿರುವುದು (ವಸ್ತುವಿನಲ್ಲಿ–ಇರುವುದು) ಸರಿಯಲ್ಲ ಏಕೆಂದರೆ ವಸ್ತುವಿನಲ್ಲಿ ವಿಕಲ್ಪವು (ವಿರುದ್ಧಾಕಾರಗಳೆರಡು) ಯುಕ್ತವಾಗದು ಮತ್ತು ಈ ವಿರೋಧವು, ಇದೆಲ್ಲದರ ಕಲ್ಪನೆಯನ್ನು ಬಿಟ್ಟರೆ ಶಾಂತವಾಗುವುದಿಲ್ಲ (ಪರಿಹಾರವಾಗುವುದಿಲ್ಲ) ಹೇಗೆಂದರೆ- ಜಡಗಳನ್ನು (ಮೃದಾದಿಗಳನ್ನು ಜಡಗಳೆಂದ) ಒಪ್ಪಿದ ಪಕ್ಷದಲ್ಲಿ ಯುಕ್ತಿವಿರೋಧವು ಬರುತ್ತದೆ ಅಭಿಮಾನಿ ಚೇತನರಿಲ್ಲವೆಂದು ಅಂಗೀಕರಿಸಿದರೆ ಪೃಥಕ್ಕಾಗಿ ಶಬ್ದ ಶಕ್ತಿಯ ಬಗ್ಗೆ ಪ್ರಮಾಣವಿಲ್ಲವಾಗುವದು ಹಾಗು ವ್ಯಾಪಕತ್ವವಿಲ್ಲವೆಂದು

## — ವಿಶೇಷಾರ್ಥಪ್ರದೀಪಿಕಾ —

ಇತ್ಯಾದಿವಾಕ್ಯಗಳಿಂದ ಶಂಕಾಸಮಾಧಾನಗಳ ಮುಖಾಂತರದಿಂದ ವಿಶದಪಡಿಸುತ್ತಾರೆ "ವಸ್ತುವಿಕಲ್ಪಾಪತ್ತೇಃ"– ಮೃದಾದಿ ವಸ್ತುಗಳಿಗೆ ವಕ್ತೃತ್ವವಿಲ್ಲದಿರುವುದು, ಈ ಮುಂತಾದ ವಿರುದ್ಧಾಕಾರಗಳು ಬರಬೇಕಾಗುವವು, ಹೀಗೆ ಅರ್ಥ

"ಅನಭಿಮಾನಿಸ್ವೀಕಾರೇ" - ಪೃಥಿವ್ಯಾದಿಗಳ ಮೇಲೆ ಅಭಿಮಾನವಿಲ್ಲದ ಯಾವದೋ ಒಂದು ಚೇತನವನ್ನು, ಮೃದಬ್ರವೀದಿತ್ಯಾದಿ ವೇದಗಳಿಗೆ ಪ್ರತಿಪಾದ್ಯವೆಂದು ಅಂಗೀಕರಿಸಿದರೆ, "ಪೃಥಕ್" - ಮೃತ್ತ್ವ ಮುಂತಾದ ಧರ್ಮವು

**चोक्तानुपपत्तेः । न च श्रुतियुक्त्योरन्यतराप्रामाण्येनाप्येतदुपपद्यत इति वाच्यम् । उक्तरीत्या द्वयोरपि निरवकाशत्वात् । न हि परेणापि विद्वेषेणैवागमाप्रामाण्यमभिधातुं युक्तम् । किन्तु मोपपत्तिमाश्रित्यैव । तथा च कथं वेदप्रामाण्येऽपि न दीयते दृष्टिः । तदेवं युक्त्यागमाविरोधेनास्यार्थस्य प्राप्तत्वान्न किञ्चित्कल्पनागौरवमिति ।**

— ಪದಾರ್ಥದೀಪಿಕಾ —

ಅಂಗೀಕರಿಸಿದ ಪಕ್ಷದಲ್ಲಿ ಹಿಂದೆ ಹೇಳಿದ ಅನುಪಪತ್ತಿಯು ಬರುತ್ತದ ಇನ್ನು– ಶ್ರುತಿ–ಯುಕ್ತಿಗಳೆರಡಲ್ಲೊಂದರ ಅಪ್ರಾಮಾಣ್ಯದಿಂದಲೂ ಇದೆಲ್ಲವೂ ಯುಕ್ತ ವೆನಿಸಬಹುದೆಂದು ಹೇಳಬಾರದು ಏಕೆಂದರೆ ಹಿಂದೆ ಹೇಳಿದ ರೀತಿಯಿಂದ, ಎರಡೂ ನಿರವಕಾಶಗಳಾಗಿವೆ ಹಾಗು ಪರವಾದಿಗಾದರೂ ಕೇವಲ ವಿದ್ವೇಷ ದಿಂದಲೇ ಆಗಮಗಳ ಅಪ್ರಾಮಾಣ್ಯವನ್ನು ಹೇಳುವುದು ಯುಕ್ತವಲ್ಲ. ಆದರೆ ಯುಕ್ತಿಯನ್ನು ಅವಲಂಬಿಸಿಯೇ ! (ಆಗಮಗಳ ಅಪ್ರಾಮಾಣ್ಯವನ್ನು ಹೇಳು ವುದು ಯುಕ್ತವೆನಿಸೀತು) ಆದುದರಿಂದ, ವೇದದ ಪ್ರಾಮಾಣ್ಯದ ಬಗ್ಗೆಯೂ ದೃಷ್ಟಿಯನ್ನು ಪರನು ಹೇಗೆ ಹಾಕಲಾರನು ? ಈ ರೀತಿಯಿಂದ, ಯುಕ್ತಿ ಆಗಮಗಳ ಅವಿರೋಧದಿಂದ ಈ ವಿಷಯವು ಪ್ರಾಪ್ತವಾದುದರಿಂದ, ಯಾವದೇ ಕಲ್ಪನಾ ಗೌರವದೋಷವು ಇಲ್ಲ "– ಹೀಗೆ (ತಿಳಿಯಬೇಕು)

— ವಿಶೇಷಾರ್ಥಪ್ರದೀಪಿಕಾ —

ಳ್ಳದಾಗಿರುವುದು, ಅದರಮೇಲೆ ಸ್ವಾತಂತ್ರ್ಯ ಈ ಎರಡು ನಿಮಿತ್ತಗಳನ್ನು ಬಿಟ್ಟು "ಶಬ್ದಶಕ್ತ್ಯಾ"ದ್ಯಾದಾದಿಶಬ್ದಗಳ ಶಕ್ತಿಯಬಗ್ಗೆ "ಅವ್ಯಾಪಕತ್ವಾದ್ಯಂಗೀಕಾರೇ"- ಇಲ್ಲಿ ಆದಿಪದದಿಂದ, ದೇಹವಿಲ್ಲದಿರುವುದೆಂಬದನ್ನು ಸ್ವೀಕರಿಸಬೇಕು "ಉಕ್ತಾ- ನುಪಪತ್ತೇಃ ಅವ್ಯಾಪಕ (ವ್ಯಾಪಕವಲ್ಲ)ವೆಂಬ ಪಕ್ಷದಲ್ಲಿ, ಆ ಅಭಿಮಾನಿಚೇತನ ಗಳು ಅಧಿಷ್ಠಾನಮಾಡದ ಪ್ರದೇಶದಹಾಗೆ ಪ್ರದೇಶಾಂತರಕ್ಕೂ (ಅಧಿಷ್ಠಿತಪ್ರದೇ ಶಕ್ಕೂ) ಪ್ರವೃತ್ತಿಯು ಸಂಭವಿಸುತ್ತದೆಯಾದುದರಿಂದ ಏಕದೇಶದಲ್ಲಿರುವುದೆಂಬುದು ವ್ಯರ್ಥವಾಗುತ್ತದೆ ದೇಹವಿಲ್ಲವಂಬ ಪಕ್ಷದಲ್ಲಿಯಾದರೂ ಇಂದ್ರಿಯಗಳಿಲ್ಲವಾ ದುದರಿಂದ ವಕ್ತೃತ್ವವು ಯುಕ್ತವಾಗದಿರುವದರಿಂದ ಮತ್ತೆ ಯುಕ್ತಿವಿರೋಧವು ಅನಿವಾರ್ಯ, ಹೀಗೆ ಹಿಂದೆ ಹೇಳಿದ ದೋಷಗಳು ಬರುತ್ತವೆಯೆಂದು ಅರ್ಥ "ಉಕ್ತರೀತ್ಯಾ"– ಪ್ರಮಿತವಾದ ವ್ಯಾಪ್ತಿ ಪಕ್ಷಧರ್ಮತೆಯುಳ್ಳದ್ದಾದುದರಿಂದ ಯುಕ್ತಿಯ ನಿರವಕಾಶತೆ ನವಿಲಕ್ಷಣತ್ವಾಧಿಕರಣಸಿದ್ಧಾಂತದಲ್ಲಿ ಹೇಳಿದ ಹಾಗೆ ವೇದಕ್ಕೆ ನಿತ್ಯತ್ವವೂ ನಿರವಕಾಶ, ಹೀಗೆ ಭಾವ "ಉಪಪತ್ತಿಂ"– ವ್ಯುತ್ಪ

नन्वेतदुत्सूत्रितं कथमुच्यत इत्यत आह ॥ अत्रेति । इत्युक्तमेतत्सर्वमत्राभिमानिव्यपदेशस्तु विशेषानुगतिभ्यामिति सूत्रेऽभिधीयत इत्यर्थः यद्वाऽत्राभिधीयत इति सिद्धान्तोपक्रमवाक्यम् । तस्यैवं प्राप्ते सूत्रकृता समाधानमभिधीयत इत्यर्थः । एवं सूत्रमवतार्य तत इत्यादिना व्याख्यातमिति ।

— ಪದಾರ್ಥದೀಪಿಕಾ —

ಇಸ್ಸ್- ಇದೆಲ್ಲ ಸಂಗತಿಯು ಸೂತ್ರವನ್ನು ಅತಿಕ್ರಮಿಸಿದ್ದು (ಸೂತ್ರದಲ್ಲಿ–ಅಡಕವಾಗಿ–ಸೇರದಿದ್ದುದು) ಇದನ್ನು ಹೇಗೆ ಹೇಳುವುದು ? ಈ ಆಶಂಕೆಯ ಪರಿಹಾರವನ್ನು "ಅತ್ರ" ಈ ವಚನದಿಂದ ಹೇಳುತ್ತಾರೆ "ಹಿಂದೆ ಹೇಳಿದ ಇದೆಲ್ಲ ಸಂಗತಿಯು, "ಅತ್ರ"- 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ" ಎಂಬ ಸೂತ್ರದಲ್ಲಿ ಹೇಳಲ್ಪಡುತ್ತದೆ;" ಹೀಗೆ ಅರ್ಥ ಅಥವಾ 'ಅತ್ರಾಭಿಧೀಯತೇ" ಇದು ಸಿದ್ಧಾಂತದ ಉಪಕ್ರಮ (ಸುರುವಿನಲ್ಲಿರುವ) ವಾಕ್ಯವು. ಇದಕ್ಕೆ, "ಹೀಗೆ ಪ್ರಾಪ್ತವಾಗಲು ಸೂತ್ರಕಾರರು ಸಮಾಧಾನವನ್ನು ಹೇಳುತ್ತಾರೆ," ಎಂದು ಅರ್ಥ. ಹೀಗೆ ಸೂತ್ರದ ಅವತಾರಿಕೆಯನ್ನು ಹೇಳಿ, "ತತಃ" ಇತ್ಯಾದಿ ವಚನದಿಂದ ವ್ಯಾಖ್ಯಾನಿಸಿರುತ್ತಾರೆ' ಹೀಗೆ ಅರ್ಥ

— ವಿಶೇಷಾರ್ಥಪ್ರದೀಪಿಕಾ —

ಮುಂತಾದ ಯುಕ್ತಿಯನ್ನು,"ವೇದಪ್ರಾಮಾಣ್ಯೇಽಪಿ"–ವೇದಪ್ರಾಮಾಣ್ಯವು, ವೇದದ ನಿರ್ದೋಷತ್ವ ಮುಂತಾದ ಯುಕ್ತಿಗಳುಳ್ಳದ್ದಾಗಿದೆಯೆಂದು ಹಿಂದಿನ ಅಧಿಕರಣದಲ್ಲಿ ಹೇಳಲಾಗಿದೆಯೆಂದು ಭಾವ 'ಇತಿ" ಪದಕ್ಕೆ "ಪ್ರಾಪ್ತಂ" ಎಂಬ ಅನಂತರಪದದಿಂದ ಅನ್ವಯವೆಂದು ಹಿಂದೆ ಹೇಳಿದುದರಿಂದ, ಅದನ್ನು ಅನುವಾದಮಾಡಿ, ಅದರ ಅರ್ಥವನ್ನು "ಇತ್ಯುಕ್ತಮೇತತ್ಸರ್ವಂ"ಎಂಬ ವಚನದಿಂದ ಹೇಳುತ್ತಾರೆ ಅಥವಾ "ಪ್ರಾಪ್ತಂ' ಎಂಬುದರ ಅನಂತರ ಇದು ಶೇಷವೆಂದೂ ಹೇಳಬಹುದು "ಅತ್ರ" ಎಂಬುದು ಅನುವಾದ ಅದರ ವ್ಯಾಖ್ಯಾನವೇ "ಅಭಿ ಮಿತಿಸೂತ್ರೇ" ಎಂಬುದು ಇದು ಸೂತ್ರಭಾಷ್ಯದಲ್ಲಿ ವ್ಯಕ್ತವಾಗಿದೆಯೆಂದು ಭಾವ "ಅತ್ರ'- ಈ ಮುಂತಾದುದನ್ನು "ತತಃ" ಇದರ ಹಿಂದೆ (ಪೂರ್ವದಲ್ಲಿ) ಎಳೆದು ಹಚ್ಚಬೇಕೆಂಬ ಅಭಿಪ್ರಾಯದಿಂದ ಬೇರೆ ಯೋಜನೆಯನ್ನು "ಯದ್ವಾ" ಈ ವಾಕ್ಯದಿಂದ ಹೇಳುತ್ತಾರೆ "ತಸ್ಯ" ಎಂಬುದಕ್ಕೆ "ಇತ್ಯರ್ಥಃ" ಎಂಬಲ್ಲಿ ಅನ್ವಯವಿದೆ "ಅತ್ರ" ಎಂಬುದಕ್ಕೆ "ಏವಂ ಪ್ರಾಪ್ತೇ" ಎಂದು ವ್ಯಾಖ್ಯಾನ

बालरूढिं विनवापि विद्वद्रूढिसमाश्रयात् ॥

यदुक्तं तन्नामक इति मृदादिशब्दवाच्यत्वं देवतायास्तदनुपपन्नम् । अयोगादनुपयोगाच्च । मृदादिशब्दाः खल्वचेतनेष्वेव रूढाः । न देवतायाम् । लक्षणाश्रयणेनापि श्रुतियुक्तिविरोधशान्तिर्भविष्यति । नापि वचनवृत्तिं सूत्रकृदाहेत्यत आह ॥ बालरूढिमिति । एते

ಅಜ್ಞರ (ಬಾಲ) ರೂಢಿಯನ್ನು ಹೊರತುಪಡಿಸಿಯೇ ವಿದ್ವದ್ರೂಢಿಯನ್ನು ಚೆನ್ನಾಗಿ ಆಶ್ರಯಿಸುವುದರಿಂದ (ವಿದ್ವದ್ರೂಢಿಯಿಂದಲೇ) ಈ ಪೃಥಿವ್ಯಾದಿ ದೇವತೆಗಳು

— ಪದಾರ್ಥದೀಪಿಕಾ —

ಇನ್ನು– "ತನ್ನಾಮಕಃ" ಎಂಬುದಾಗಿ, ಮೃದಾದಿಶಬ್ದವಾಚ್ಯತ್ವವು ಮೃದಾದಿಗಳ ಅಭಿಮಾನಿಗಳಾದ ದೇವತೆಗಳಿಗೆ ಇದಯೆಂಬುದಾಗಿ ಹೇಳಿದುದು ಯುಕ್ತವೆನಿಸುವುದಿಲ್ಲ ಏಕೆಂದರೆ ಆ ದೇವತೆಗಳಿಗೆ ಮೃದಾದಿಶಬ್ದ ವಾಚ್ಯತೆಯು ಬರುವುದಿಲ್ಲ ಹಾಗು ಅದರ ಉಪಯೋಗವೂ ಇರುವುದಿಲ್ಲ ಹೇಗಂದರೆ- "ಮೃತ್" ಮುಂತಾದ ಶಬ್ದಗಳು ಅಚೇತನಗಳಲ್ಲಿಯೇ ರೂಢಿಯುಳ್ಳವುಗಳೆಂಬಲ್ಲಿ ಸಂದೇಹವಿಲ್ಲ ಆದರೆ ದೇವತೆಗಳಲ್ಲಿ ರೂಢಿಯುಳ್ಳವುಗಳಲ್ಲ ಲಕ್ಷಣಾವೃತ್ತಿಯನ್ನು ಅವಲಂಬಿಸುವದರಿಂದಲೂ ಶ್ರುತಿಯುಕ್ತಿಗಳಲ್ಲಿಯ ವಿರೋಧದ ಪರಿಹಾರವಾಗುತ್ತದೆ ಹಾಗು ಸೂತ್ರಕಾರರೂ ಸಹ ದೇವತೆಗಳಲ್ಲಿ ಮೃದಾದಿಶಬ್ದಗಳಿಗೆ ವಚನ ವೃತ್ತಿ (ಶಕ್ತಿ) ಯನ್ನು ಹೇಳಿರುವುದಿಲ್ಲ," ಈ ರೀತಿಯಾದ ಆಕ್ಷೇಪದ ಸಮಾಧಾನವನ್ನು 'ಬಾಲರೂಢಿಂ" ಇತ್ಯಾದಿಯಾದ ವಚನದಿಂದ

— ವಿಶೇಷಾರ್ಥಪ್ರದೀಪಿಕಾ —

ದೇವತೆಗಳಿಗೆ ಮೃದಾದಿಶಬ್ದವಾಚ್ಯತ್ವವು ಅಯುಕ್ತವೂ ಅನುಪಯುಕ್ತವೂ ಆಗಿದೆಯೆಂಬುದನ್ನು "ಮೃದಾದಿಶಬ್ದಃ" ಇತ್ಯಾದಿವಾಕ್ಯಗಳಿಂದ ಕ್ರಮವಾಗಿ ವಿಶದಪಡಿಸುತ್ತಾರೆ ದೇವತೆಗಳಲ್ಲಿ ಮೃದಾದಿಶಬ್ದಗಳ ಪ್ರಯೋಗ ಬಾಹುಲ್ಯವಿಲ್ಲದ್ದರಿಂದ ಅವುಗಳಿಗೆ ರೂಢಿಯಿಲ್ಲವೆಂದು ತಿಳಿಯಬೇಕು "ಲಕ್ಷಣಾಶ್ರಯಣೇನಾಪಿ"- ಮೃದಬ್ರವೀತ್, ಇತ್ಯಾದಿಶ್ರುತಿಗೂ ಮಣ್ಣಾದುದರಿಂದ ಮಾತನ್ನಾಡುವದಿಲ್ಲವೆಂಬ ಯುಕ್ತಿಗೂ ವಿರೋಧವನ್ನು ಪರಿಹರಿಸಲು, ಬೇಕಾಗುವ "ಶ್ರುತಿಯು ಅಭಿಮಾನಿದೇವತಾ (ಚೇತನ) ಪರ" ವೆಂಬ ಸಂಗತಿಯು, ಮೃದಾದಿಶಬ್ದಗಳಿಗೆ ದೇವತೆಗಳಲ್ಲಿ ಲಕ್ಷಣಾವೃತ್ತಿಯನ್ನು ಹೇಳಿದರೂ ಸಂಭವಿಸುತ್ತದೆಂದು ಇಲ್ಲಿ ಭಾವ

तत्तन्नामान एवैते तत्तद्वस्त्वभिमानिनः ॥ सन्ति

पृथिवीवरुणादयस्तत्तन्नामान एव सन्ति । तानि तानि मृदादीनि नामानि वाचकानि येषां ते तथोक्ताः । न तु तानि लक्षकाणीत्येवार्थः । सन्ति भवन्ति । अयोगपरिहारायोक्तं बालेति । अविद्वद्रूढ्यभावेऽपि विद्वद्रूढिसद्भावात् । मृदादिशब्दास्तावद्देवताविषया इत्यर्थापत्तिसिद्धम् । मुख्यासम्भव एव च जघन्यवृत्तिराश्रयणीया । न

"ಮೃತ್" ಮುಂತಾದ ಆಯಾಯ ನಾಮಗಳು ವಾಚಕಗಳುಳ್ಳವರೇ ಹಾಗು ಆಯಾಯ ವಸ್ತುಗಳ ಮೇಲೆ ಅಭಿಮಾನವುಳ್ಳವರೇ ಆಗಿರುತ್ತಾರೆ.

— ಪದಾರ್ಥದೀಪಿಕಾ —

ಹೇಳುತ್ತಾರೆ "ಏತೇ"– ಪೃಥಿವೀ, ವರುಣ, ಮೊದಲಾದವರು, "ಮೃತ್" ಮೊದಲಾದ ಆಯಾಯ ಶಬ್ದವಾಚ್ಯರೇ ಆದವರಿರುತ್ತಾರೆ ಮೃದಾದಿ ಶಬ್ದ ರೂಪಗಳಾದ "ಆಯಾಯ ನಾಮಗಳು, ಯಾರಿಗೆ ವಾಚಕಗಳಾಗಿರುವವೋ ಅವರು," ಹೀಗ "ತತ್ತನ್ನಾಮಾನಃ" ಎಂಬಲ್ಲಿ ಅರ್ಥ "ಹೊರತಾಗಿ ಆ ಶಬ್ದಗಳು ಲಾಕ್ಷಣಿಕ (ಲಕ್ಷಣಾವೃತ್ತಿಯುಳ್ಳವುಗಳು) ಗಳಲ್ಲ" ಹೀಗೆ ಏವ" ಈ ಶಬ್ದದ ಅರ್ಥ 'ಸಂತಿ ಎಂದರೆ 'ಭವಂತಿ' (ಆಗುತ್ತಾರ) ಎಂದು ಅರ್ಥ. ಅಭಿಮಾನಿದೇವತಗಳಲ್ಲಿ ಮೃದಾದಿ ಶಬ್ದಗಳ ಅಯೋಗವನ್ನು (ಸಂಬಂಧವಿಲ್ಲವೆಂಬುದನ್ನು) ತಪ್ಪಿಸಲು, "ಬಾಲರೂಢಿಂ" ಇತ್ಯಾದಿ ವಚನವನ್ನು ಹೇಳಿರುತ್ತಾರ ಏಕೆಂದರೆ ಅಜ್ಞರ (ಬಾಲರ) ರೂಢಿಯು ಇಲ್ಲದಿದ್ದರೂ ಪ್ರಾಜ್ಞರ ರೂಢಿಯು ಇರುತ್ತದೆ ಹೇಗೆಂದರೆ– ಮೃದಾದಿಶಬ್ದಗಳಂತೂ ಮೃದಾದ್ಯಭಿಮಾನಿದೇವತೆಗಳನ್ನು ವಿಷಯೀಕರಿಸಿರುವವೆಂಬುದು ಅರ್ಥಾಪತ್ತಿಯಿಂದ ಸಿದ್ಧವಾಗಿದೆ ಮತ್ತು ಮುಖ್ಯವೃತ್ತಿಯು ಯುಕ್ತವೆನಿಸದಿರುವಾಗಲೇ (ಮುಖ್ಯಾರ್ಥಕ್ಕೆ ಬಾಧವು ಬರುತ್ತಿದ್ದರೇನೇ) ಅಮುಖ್ಯ ವೃತ್ತಿಯನ್ನು ಆಶ್ರಯಿಸತಕ್ಕದ್ದು

— ವಿಶೇಷಾರ್ಥಪ್ರದೀಪಿಕಾ —

"ವಿದ್ವದ್ರೂಢಿಸದ್ಭಾವಾತ್"– ಅಜ್ಞರೂಢಿ ಪ್ರಾಜ್ಞರೂಢಿ, ಯೆಂಬ ಅವಾಂತರ ಪ್ರಭೇದಗಳನ್ನು (ರೂಢಿಯಲ್ಲಿ) ಸಮಾಕರ್ಷಾಧಿಕರಣದಲ್ಲಿ ಸಮರ್ಥಿಸಲಾಗಿದೆಯೆಂದು ಇಲ್ಲಿ ತಿಳಿಯಬೇಕು

"ನಚಾತ್ರ ಬಾಧಕಂ"- ನ್ಯಾಯವಿಲ್ಲದೆ ಅನೇಕಅರ್ಥಗಳನ್ನು ಹೇಳುವುದೇ ಬಾಧಕವೆಂದು ಶಂಕಿಸತಕ್ಕದ್ದಲ್ಲ ಏಕೆಂದರ ಸಮಾನವೃತ್ತಿಯಿಂದ, ಅಕ್ಷ-ಅಜ

चात्र बाधकमस्तीति वैदिकप्रयोगादेव बाधकाभावसहिताद्विद्वद्रूढिरवगम्यते । यच्चोक्तं वचनवृत्त्यङ्गीकारः प्रकृतानुपयोगीति तत्परिहारायोक्तं तत्तन्मृदादिवस्त्वभिमानि न इति । अयमर्थः । मृदादिशब्दानां चेतनाविषयतामात्रेण प्रकृतविरोधशान्तावपि वस्तुस्थितिं विजिज्ञापयिषता सूत्रकारेण व्यपदेशस्त्विति तुशब्देन मुख्यवृत्तिः सूचिता ।

## — ಪದಾರ್ಥದೀಪಿಕಾ —

ಆದರೆ ಇಲ್ಲಿ ಬಾಧಕವು ಇರುವುದಿಲ್ಲ ಆದುದರಿಂದ, ಹೀಗೆ ಬಾಧಕದಿಂದ ರಹಿತವಾದ ವೈದಿಕ ಪ್ರಯೋಗವಿರುವುದರಿಂದಲೇ ವಿದ್ವದ್ರೂಢಿಯು (ಪ್ರಾಜ್ಞ ರೂಢಿಯು) ಇದಯೆಂಬುದು ತಿಳಿದು ಬರುತ್ತದ ಇನ್ನು- ವಚನ ವೃತ್ತಿಯನ್ನು (ಶಕ್ತಿಯನ್ನು) ಅಂಗೀಕರಿಸುವುದು ಪ್ರಕೃತೋಪಯೋಗಿಯಲ್ಲವೆಂದು ಹಿಂದೆ ಹೇಳಿದುದರ ಪರಿಹಾರಕ್ಕಾಗಿ "ತತ್ತನ್ಮೃದಾದಿ ವಸ್ತ್ವಭಿಮಾನಿನಃ' ಎಂಬುದಾಗಿ (ಮೃತ್ತು ಮುಂತಾದ ಆಯಾಯ ವಸ್ತುಗಳಲ್ಲಿ ಅಭಿಮಾನವುಳ್ಳವರೆಂಬುದಾಗಿ) ಹೇಳಿರುತ್ತಾರೆ" ಹೀಗೆ

ಇಲ್ಲಿಯ ಅರ್ಥವು ಇದು— "ಮೃದಾದಿ ಶಬ್ದಗಳಿಗೆ ಚೇತನರು ವಿಷಯರಾಗಿರುವರೆಂಬ ಮಾತ್ರದಿಂದ ಪ್ರಕೃತ ವಿರೋಧದ ಶಾಂತಿಯು ಆಗುತ್ತಿದ್ದರೂ, ವಾಸ್ತವಸ್ಥಿತಿಯನ್ನು ತಿಳಿಸಲಪೇಕ್ಷೆಯುಳ್ಳ ಸೂತ್ರಕಾರರಿಂದ "ವ್ಯಪದೇಶಸ್ತು" ಎಂಬಲ್ಲಿರುವ "ತು" ಶಬ್ದದಿಂದ ಮುಖ್ಯವೃತ್ತಿಯು ಸೂಚಿಸಲ್ಪಟ್ಟಿದೆ

## — ವಿಶೇಷಾರ್ಥಪ್ರದೀಪಿಕಾ —

ಮುಂತಾದ ಶಬ್ದಗಳಿಗೆ ಹೇಗೋ ಹಾಗೆ ಅನೇಕಾರ್ಥವಿರುವುದೇ ಅನ್ಯಾಯವು ಆದರೆ ಇಲ್ಲಿ ವೃತ್ತಿಗಳಲ್ಲಿ ನ್ಯೂನಾಧಿಕ್ಯವಿದೆ ಸಮಾನತೆಯಿಲ್ಲ ಆದುದರಿಂದ ದೋಷವಿಲ್ಲ ಹೀಗ ತಿಳಿಯಬೇಕು

"ತುಶಬ್ದೇನ ಮುಖ್ಯವೃತ್ತಿಃ ಸೂಚಿತಾ' — "ತು" ಶಬ್ದವು ಅವಧಾರಣಾರ್ಥಕವಾದುದು ಯೋಗ್ಯತೆಯಿದ್ದುದರಿಂದ, "ಅಭಿಮಾನಿ" ಪದದಿಂದ ಅನ್ವಯ ಹೊಂದುತ್ತದೆ "ಅಭಿಮಾನಿನ ಏವ ವ್ಯಪದೇಶಃ ಅಭಿಮಾನಿವ್ಯಪದೇಶಃ" ಎಂಬುದಾಗಿ ಅನ್ವಯವು 'ಮೃದಬ್ರವೀತ್", ತತ್ತೇಜ ಐಕ್ಷತ ತಾ ಆಪ ಐಕ್ಷಂತ" ಇತ್ಯಾದಿವಾಕ್ಯಗಳಲ್ಲಿಯಾದರೋ 'ಮೃತ್ತೇಜ" ಮುಂತಾದ ಅಭಿಮಾನಿಗಳಷ್ಟೇ ಹೇಳಲ್ಪಡುವದಿಲ್ಲ ಹಾಗಿದ್ದಲ್ಲಿ ಅಭಿಮಾನಿಗಳನ್ನಷ್ಟೇ ಶ್ರುತಿಯಲ್ಲಿ ಹೇಳಬಹುದಿತ್ತು ಹಾಗೇ ಅಭಿಮಾನಿಗಳನ್ನಷ್ಟೇ ಹೇಳುವದೆಂದರೆ (ಶ್ರುತಿಯು) ಇದರ ವಾಕ್ಯಶೇಷದಲ್ಲಿ "ತಾಸಾಂ ತ್ರಿವೃತಂ ತ್ರಿವೃತಮೇಕೈ

तत्रोपपत्तिज्ञापनायाभिमानीति चोक्तम् । अन्यथा चेतनव्यपदेश इत्यवक्ष्यन् । अभिमानी खल्वभिमतस्य सत्तादेः प्रयोजकः । ततश्च

— ಪದಾರ್ಥದೀಪಿಕಾ —

ಇದರ ಬಗ್ಗೆ ಯುಕ್ತಿಯನ್ನು ಜ್ಞಾಪಿಸಲಿಕ್ಕೆ "ಅಭಿಮಾನಿ" ಎಂಬುದಾಗಿಯೂ ಹೇಳಿದ್ದಾರೆ. ಇಲ್ಲದಿದ್ದಲ್ಲಿ "ಚೇತನವ್ಯಪದೇಶಃ" ಎಂಬುದಾಗಿ ಹೇಳುತ್ತಿದ್ದರು ಹೇಗೆಂದರೆ— ಅಭಿಮಾನಿಯು, ತನ್ನ ಅಭಿಮಾನಕ್ಕೊಳಪಟ್ಟ ವಸ್ತುವಿನ ಸತ್ತಾ (ಸ್ಥಿತಿ) ಮುಂತಾದುದಕ್ಕೆ ಪ್ರಯೋಜಕನು ಆದುದರಿಂದ,

— ವಿಶೇಷಾರ್ಥಪ್ರದೀಪಿಕಾ —

ಕಾಮಕರೋತ್" ಎಂಬುದಾಗಿ ತೇಜಸ್ಸು ಮುಂತಾದ ಅಚೇತನಗಳಿಗೆ ತ್ರಿವೃತ್ಕರಣ ಮುಂತಾದುದು ಯುಕ್ತವಾಗಲಾರದು ಆದುದರಿಂದ ಮೃದಾದಿ ಶಬ್ದಗಳಿಂದ, ಅಚೇತನಗಳಾದ ಮೃದಾದಿಗಳೂ ಹೇಳಲ್ಪಡುವವೆಂಬದನ್ನು ಅಪಲಾಪ ಮಾಡಲು ಸಾಧ್ಯವಿಲ್ಲ ಆದರೆ ಪರಮ ಆಸ್ತ್ರತಮರಾದ ಬಾದರಾಯಣರು ಯುಕ್ತಿಸಹಿತವಾಗಿ "ಅಭಿಮಾನಿನ ಏವ ವ್ಯಪದೇಶಃ" ಎಂಬದಾಗಿ ಹೇಳುತ್ತಾರೆ ಇವೆರಡರ ಬಲದಿಂದ ಅಭಿಮಾನಿದೇವತೆಗಳಲ್ಲಿ ಮುಖ್ಯವೃತ್ತಿಯಿದೆ ಅಭಿಮನ್ಯಮಾನವಾದ ಮೃದಾದಿ ಜಡಗಳಲ್ಲಿ ಹಾಗೆ ಮುಖ್ಯವೃತ್ತಿಯಿಲ್ಲವೆಂಬುದು ತಿಳಿದು ಬರುತ್ತದ ಆದುದರಿಂದ, ಪರಮಮುಖ್ಯವೃತ್ತಿಯಿಂದ ಅಭಿಮಾನಿದೇವತೆಗೇ ಮೃದಾದಿಶಬ್ದಗಳಿಂದ ವ್ಯಪದೇಶವು, ಮತ್ತೊಂದಕ್ಕಲ್ಲ, ಹೀಗೆ ಹೇಳಿದರೆ, ಲೋಕಸಿದ್ಧ ಮುಖ್ಯವೃತ್ತಿಯಿಂದ ಇತರ ವಾಚ್ಯಾರ್ಥಗಳಲ್ಲಿ ಅವಧಾರಣಾರ್ಥಕ ತುಶಬ್ದವು ಯುಕ್ತವಾಗುವದು "ತತ್ತೇಜ ಐಕ್ಷತ" ಇತ್ಯಾದಿಗಳಲ್ಲಿ "ಶರೀರರೂಪಕವಿನ್ಯಸ್ತ ಗೃಹೀತೇಃ" ಎಂಬಲ್ಲಿ ಹೇಳಿದ ರೀತಿಯಿಂದ ತೇಜಃಪ್ರಭೃತಿಜಡಗಳಲ್ಲಿ ವಿನ್ಯಸ್ತವಾದ ಅಭಿಮಾನಿ ದೇವತೆಗೇ "ಅಭಿಮಾನಿ" ಶಬ್ದದಿಂದ ಗ್ರಹಣವಾಗುತ್ತದೆ ಕೇವಲಕ್ಕಲ್ಲ, ಹೀಗೆ ತ್ರಿವೃತ್ಕರಣಾದಿಗಳು ಸಂಗತವಾಗುವವು ಕರ್ಮ, ದೇವತೆ ಮುಂತಾದುವು ವೇದದ ಅರ್ಥವಾದರೂ "ತದೇವ ಸರ್ವಶಾಸ್ತ್ರಯೋನಿ' (ಅದೇ ಸರ್ವಶಾಸ್ತ್ರಗಳಿಂದ ಮುಖ್ಯವಾಗಿ ಕಾರಣವೆಂದು ಹೇಳಲ್ಪಡತಕ್ಕದ್ದು) ಎಂದು, ಸಮನ್ವಯ ಸೂತ್ರದಲ್ಲಿಯು "ತು" ಶಬ್ದದಿಂದ ಹೇಗೆ ಸೂಚಿಸಲ್ಪಡುತ್ತದೆಯೋ ಹಾಗೇ ಇಲ್ಲಿ ಸೂಚಿತವಾಗಿದೆಯೆಂದು ಭಾವವು 'ತತ್ರೋಪಪತ್ತಿಜ್ಞಾಪನಾಯ"— ಇಲ್ಲಿ ಅಭಿಮಾನಿ ದೇವತೆಯಲ್ಲಿ ಮುಖ್ಯವೃತ್ತಿಯೆಂಬಲ್ಲಿ ಸ್ವಾತಂತ್ರ್ಯವೆಂಬ ನಿಮಿತ್ತವಿರುವದು ಉಪಪತ್ತಿಯು ಅದನ್ನು 'ಅಭಿಮಾನೀ" ಇತ್ಯಾದಿ ವಚನದಿಂದ

तदधीनत्वादिति न्यायेन स एव तन्मुख्यार्थ इति । तदेतदस्माभिः सूत्रं व्याकुर्वद्भिरभिहितमिति ।

नन्वत्र तन्नामक इत्येकवचनं प्रक्रम्य तत्तन्नामान इति बहुवचनप्रयोगे किन्निमित्तम् । तथा भाष्येपि- अभिमानिदेवता तत्र व्यपदिश्यते; तासां चेत्यादि । उच्यते । अत्राभिमानिव्यपदेश

— ಪದಾರ್ಥದೀಪಿಕಾ —

"ತದಧೀನತ್ವಾತ್" ಈ ಸೂತ್ರದಲ್ಲಿ ಹೇಳಿದ ಯುಕ್ತಿಯಿಂದ ಅಭಿಮಾನಿಯೇ ಆಯಾಯ ಶಬ್ದದ ಮುಖ್ಯಾರ್ಥವು" ಹೀಗೆ ಇದೆಲ್ಲ ವಿಷಯವು, ಸೂತ್ರವನ್ನು ವ್ಯಾಖ್ಯಾನಿಸುವ ನಮ್ಮಿಂದ ಹೇಳಲ್ಪಟ್ಟಿದೆ" ಹೀಗ ಅರ್ಥ

ಇನ್ನು- ಅನುವ್ಯಾಖ್ಯಾನದಲ್ಲಿ "ತತ್ತನ್ನಾಮಕಃ" ಎಂಬುದಾಗಿ ಸುರುವು ಮಾಡಿ ( ಪ್ರಕ್ರಮಿಸಿ ) 'ತತ್ತನ್ನಾಮಾನಃ" ಎಂಬುದಾಗಿ ಬಹು ವಚನದ ಪ್ರಯೋಗ ಮಾಡುವುದರಲ್ಲ ಕಾರಣವು ಯಾವದು ? ಹಾಗೂ ಭಾಷ್ಯದಲ್ಲಿಯೂ "ಅಭಿಮಾನಿ ದೇವತಾ ಅತ್ರ ವ್ಯಪದಿಶ್ಯತೇ । ತಾಸಾಂ ಚ" (ಅಭಿಮಾನವುಳ್ಳ ದೇವತೆಯೇ ಈ ಮೃದಬ್ರವೀದಿತ್ಯಾದಿ ವಾಕ್ಯಗಳಲ್ಲಿ ಹೇಳಲ್ಪಡುತ್ತದೆ ಅಭಿ

— ವಿಶೇಷಾರ್ಥಪ್ರದೀಪಿಕಾ —

ವ್ಯಕ್ತಪಡಿಸುತ್ತಾರೆ ಪರಾಧೀನವಾದುದನ್ನು ನಿಯಮನ ಮಾಡುವವನೆಂದು. ಅಭಿಮಾನಿ''ಶಬ್ದದ ಅರ್ಥವು ಆದುದರಿಂದ "ಅಭಿಮಾನೀ" ಈ ಶಬ್ದಮಾತ್ರದಿಂದ ''ಯಥೇಷ್ಟವಾಗಿ ವಿನಿಯೋಗ ಮಾಡುವುದು" ಎಂಬ ಸ್ವಾತಂತ್ರ್ಯವು ಸೂಚಿತ ವಾದರೂ, ಆ ಸ್ವಾತಂತ್ರ್ಯವು ಶಬ್ದದ ಪ್ರವೃತ್ತಿನಿಮಿತ್ತವೆಂಬುದು ಏಕೆ? ಈ ಪ್ರಶ್ನೆಯನ್ನು ''ತತಶ್ಚ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ''ಸ್ವಾತಂತ್ರ್ಯಂ ತದ್ಗತತ್ವಂ ಚ ಶಬ್ದವೃತ್ತೇರ್ಹಿಕಾರಣಂ॥ ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್ ಕುತೋ ರಾಜ್ಞಿ, ಜಯೋಽನ್ಯಥಾ॥ ಎಂಬುದಾಗಿ ಹೇಳಿದ ರೀತಿಯಿಂದ, "ತದಧೀನತ್ವಾದರ್ಥವತ್" ಎಂಬೀಸೂತ್ರದಲ್ಲಿ ಸ್ವಾತಂತ್ರ್ಯವು, ಶಬ್ದಪ್ರವೃತ್ತಿಯ ಕಾರಣವೆಂಬುದನ್ನು ಸಮರ್ಥಿಸಿದ್ದಾಗಿದೆ ಆದುದರಿಂದ, ಅವ್ಯಕ್ತಮುಂತಾದುದು ಈಶನ ಅಧೀನವಾದುದರಿಂದ, ''ಅವ್ಯಕ್ತ'' ಮುಂತಾದ ಶಬ್ದಗಳೆಲ್ಲವೂ ಈಶನಲ್ಲಿ ಅರ್ಥವುಳ್ಳದ್ದು, ಇದು ಹೇಗೋ ಹಾಗೆ, ಮೃದಾದಿಗಳು ಅಭಿಮಾನಿ ದೇವತೆಗಳ ಅಧೀನವಾಗಿವೆಯಾದುದರಿಂದ ಮೃದಾದಿ ಶಬ್ದಗಳೆಲ್ಲವೂ ಅಭಿಮಾನಿ ದೇವತೆಗಳಲ್ಲಿ ಅರ್ಥವುಳ್ಳದ್ದೆಂದು ಸಂಭವಿಸುವದೆಂಬ ಅಭಿಪ್ರಾಯದಿಂದ, "ತದಧೀನತ್ವಾದಿತಿ ನ್ಯಾಯೇನ" ಎಂಬುದಾಗಿ ಹೇಳಿದ್ದಾರೆ

**इत्यभिमानशब्दो ह्येकवचनान्तः समस्तः । व्यपदेशशब्दस्यैकवचनान्तत्वात् । न हि बहूनामेको व्यपदेश इति सम्भवति । उत्तरसूत्रे चैकवचनमेव । अतो यथा सूत्रं प्रथमं व्याख्यातम् । अथेदानीं प्राणसंवादादिघटनाय जाताविदमेकवचनमित्याशयवता बहुवचनं प्रयुक्तमिति । अभिमानिनां प्रादेशिकत्वविदेहत्वयोर्वैयर्थ्यवक्तृत्वाद्यनुप-**

— ಪದಾರ್ಥದೀಪಿಕಾ —

ಮಾನಿ ದೇವತೆಗಳಿಗಾದರೂ ) ಇತ್ಯಾದಿಯಾಗಿ, ಏಕ ವಚನದಿಂದಾರಂಭಿಸಿ, ಬಹು ವಚನಗಳಿಂದ ಪ್ರಯೋಗಿಸುವುದು ಇದೆ ಇದರಲ್ಲಿ ನಿಮಿತ್ತವಾವುದು ? ಹೀಗೆ ಪ್ರಶ್ನೆಯು ಇದರ ಉತ್ತರವು ಹೇಳಲ್ಪಡುತ್ತದೆ— " ಸೂತ್ರದಲ್ಲಿರುವ "ಅಭಿಮಾನಿವ್ಯಪದೇಶಃ " ಎಂಬಲ್ಲಿಯ " ಅಭಿಮಾನಿ " ಶಬ್ದವು ಏಕಚವನಾಂತವಾದುದು ಹಾಗು ಸಮಾಸದಲ್ಲಿ ಸೇರಿದುದು ಏಕೆಂದರೆ "ವ್ಯಪದೇಶಃ" ಈ ಶಬ್ದವು ಏಕವಚನಾಂತವಾಗಿರುತ್ತದೆ ಏಕೆಂದರೆ ಬಹಳ ಅಭಿಮಾನಿಗಳಿಗೆ ಒಂದು ವ್ಯಪದೇಶವು (ನಾಮವು, ಹೆಸರು) ಇರುವುದೆಂಬುದು ಸರಿಯಲ್ಲ ಮತ್ತು ಮುಂದಿನ ಸೂತ್ರದಲ್ಲಿ ಏಕವಚನವೇ ಇರುತ್ತದೆ ಆದುದರಿಂದ, ಸೂತ್ರಕ್ಕೆ ಅನುಸಾರವಾಗಿ ಮೊದಲು ''ತತ್ತನ್ನಾಮಕಃ'' ಎಂಬುದಾಗಿ ಏಕವಚನಾಂತವಾಗಿ ವ್ಯಾಖ್ಯಾನಿಸಲ್ಪಟ್ಟಿತು ಈಗ ಮಾತ್ರ- ಪ್ರಾಣ (ಇಂದ್ರಿಯಗಳೊಡನೆ) ಸಂವಾದ ಮುಂತಾದ ಸಂಗತಿಯನ್ನು ಉಪಪಾದಿಸಲು, ಇದು ಜಾತ್ಯೇಕವಚನವೆಂಬ ಅಭಿಪ್ರಾಯವುಳ್ಳವರಾಗಿ ಬಹುವಚನವನ್ನು ಪ್ರಯೋಗಿಸಿರುತ್ತಾರೆ '' ಹೀಗೆ

ಇನ್ನು- ''ಅಭಿಮಾನಿ ದೇವತೆಗಳು ತಮ್ಮ ಅಭಿಮಾನದ ವಿಷಯವಾದ ವಸ್ತುಗಳ ಏಕದೇಶದಲ್ಲಿ ಇರುವುದು, ದೇಹರಹಿತರಾಗಿರುವುದು ಈ ಪಕ್ಷಗಳಲ್ಲಿ ವೈಯ್ಯರ್ಥ್ಯವೂ ವಕ್ತೃತ್ವಾದಿಗಳ ಅಸಂಭವವೂ ಬರುತ್ತವೆ. ಹಾಗು

— ವಿಶೇಷಾರ್ಥಪ್ರದೀಪಿಕಾ —

"ಉತ್ತರಸೂತ್ರೇ'' – "ದೃಶ್ಯತೇ ಚ'' ಎಂಬುದು ಮುಂದಿನಸೂತ್ರವು ''ಪ್ರಾಣಸಂವಾದಾದಿ ಘಟನಾಯ'' - ಇಲ್ಲಿ ಪ್ರಾಣಾಃ ಅಹಂಶ್ರೇಯಸಿ ವ್ಯೂದಿರೇ'' ಎಂಬಲ್ಲಿ ''ಪ್ರಾಣ'' ಪದದಿಂದ ಇಂದ್ರಿಯಾಭಿಮಾನಿಗಳಾದ ಅನೇಕ ದೇವತೆಗಳನ್ನು ಪರಿಗ್ರಹಣಮಾಡಿದರೆ ಅವುಗಳು ಮಾಡಿದ ಪರಸ್ಪರ ಸಂವಾದ ವಿವಾದಾದಿಗಳು ಸರಿಹೊಂದುವವು. ಈ ಕಾರಣದಿಂದ ಬಹುವಚನವು ಪ್ರಯೋ

तेषां विशेषेण शक्तिरन्येभ्य उच्यते ॥
व्याप्तिश्चोक्तानुसारेण दृश्यन्ते चाधिकारिभिः ॥

पत्ती, व्याप्तानां सदेहत्वेऽनुपलम्भबाध इत्येतत्परिहाराय विशेषानुगतिभ्यामिति सूत्रखण्डं कश्चिदन्य इति तात्पर्यतो व्याख्यातम् । तत्प्रपञ्चयति ॥ तेषामिति । विशेषेणातिशयेन । अन्येभ्योऽस्मदादिभ्यः । व्याप्तिश्चोच्यत इति सम्बन्धः । देहवत्त्वस्याप्युपलक्षणमेतत् । यद्यप्येतत्सर्वमर्थापत्त्यैव लब्धम् । अन्यथा विरोधशान्तेरेवापर्यवसानात् । तथाऽप्युच्यत इति पृथिव्याद्यभिमानिन्य इत्याग-

ಇವರುಗಳಿಗೆ, ನಮ್ಮಂಥವರಿಗಿಂತ ಅತಿಶಯವಾಗಿ "ಆತ್ಮನಿ ಚೈವಂ ವಿಚಿತ್ರಾಶ್ಚ ಹಿ" ಇತ್ಯಾದಿಗಳಲ್ಲಿ ಹೇಳಿದಂತೆ ಸಾಮರ್ಥ್ಯವೂ ವ್ಯಾಪ್ತಿಯೂ ದೇಹವತ್ವವೂ ಹೇಳಲ್ಪಡುತ್ತದೆ. ಮತ್ತು ಕಣ್ಣಿಗೆ ಕಾಣದಿರುವವುಗಳನ್ನ ಕಾಣುವ ಸಾಮರ್ಥ್ಯವುಳ್ಳ ಯೋಗಿಗಳಿಂದ ಆ ಅಭಿಮಾನಿದೇವತೆಗಳು ನೋಡಲ್ಪಡುವರು

— ಪದಾರ್ಥದೀಪಿಕಾ —

ತುಂಬ ವ್ಯಾಪಿಸಿದ ಅಭಿಮಾನಿಗಳಿಗ ದೇಹವಿದ್ದ ಪಕ್ಷದಲ್ಲಿ ಅನುಪಲಂಭ ( ಕಾಣದಿರುವುದು ) ಬಾಧವು ಬರುತ್ತದೆ- ಹೀಗೆ ಹೇಳಿದ ದೋಷಗಳ ಪರಿಹಾರಕ್ಕಾಗಿ " ವಿಶೇಷಾನುಗತಿಭ್ಯಾಂ " ಎಂಬ ಸೂತ್ರಾಂಶವನ್ನು " ಕಶ್ಚಿದನ್ಯಃ " ಎಂಬ ವಚನದಿಂದ ತಾತ್ಪರ್ಯದಿಂದ ವ್ಯಾಖ್ಯಾನಿಸಿರುತ್ತಾರೆ ಅದನ್ನು "ತೇಷಾಂ" ಈ ವಚನದಿಂದ ವಿವರಿಸುತ್ತಾರೆ "ವಿಶೇಷೇಣ"- ಅತಿಶಯದಿಂದ " ಅನ್ಯೇಭ್ಯಃ "- ಅಸ್ಮದಾದಿಗಳಿಗಿಂತ ಇಲ್ಲಿ " ವ್ಯಾಪ್ತಿಶ್ಚ ಉಚ್ಯತೇ " (ವ್ಯಾಪ್ತಿಯೂ ಹೇಳಲ್ಪಡುತ್ತದೆ) ಎಂಬುದರ ಯೋಜನೆಯಿದೆ ಇದು "ದೇಹವುಳ್ಳವರಾಗಿರುವುದು"ಎಂಬ ಸಂಗತಿಯನ್ನೂ ಸಂಗ್ರಹಿಸಿರುತ್ತದೆ ಇನ್ನು- ಇದೆಲ್ಲವು ಅರ್ಥಾಪತ್ತಿಯಿಂದಲೇ ಲಭಿಸಿರುತ್ತದೆ ಏಕೆಂದರೆ ಇಲ್ಲದಿದ್ದಲ್ಲಿ ವಿರೋಧದ ಶಾಂತಿಯೇ ಇಲ್ಲವಾಗುವ ಪ್ರಸಂಗವು ಬರುತ್ತದೆ ಆದರೂ " ಉಚ್ಯತೇ " ಎಂಬ ವಚನದಿಂದ, " ಪೃಥಿವ್ಯಾದ್ಯಭಿಮಾನಿನ್ಯಃ ' ಈ ಮುಂತಾದ ಸಂವಾದಿ

— ವಿಶೇಷಾರ್ಥಪ್ರದೀಪಿಕಾ —

ಗಿಸಲ್ಪಟ್ಟಿತು, ಹೀಗೆ ಅರ್ಥ 'ಇದಂ" – ಸೂತ್ರದಲ್ಲಿರುವ (ದೃಶ್ಯತೇ ಚ" ಎಂಬಲ್ಲಿ) "ಪ್ರಾದೇಶಿಕತ್ವಂ" ಒಂದು ಪ್ರದೇಶದಲ್ಲಿರುವದು "ವೈಯ್ಯರ್ಥ್ಯಂ"-- "ತದನಧಿಷ್ಠಿತ" ಇತ್ಯಾದಿ ವಾಕ್ಯದಿಂದ ಹಿಂದೆ ಹೇಳಿದ ವೈಯ್ಯರ್ಥ್ಯವು

ममप्यत्र संवा ( दय ) दिनं दर्शयति । यद्यप्यत्राकाङ्क्षानुसारेण व्याप्तिमादावुक्त्वा शक्तिविशेषोऽनन्तरमभिधातव्यः । तथाऽप्यल्पाचतरस्य पूर्वनिपातमनुसृत्य प्रवृत्तं सूत्रमनुगच्छता क्रमो भग्नः ।

ननु च पृथिव्याद्यभिमानिन्य इति वाक्यं कथमुपादेयम् आत्मनि चैवं विचित्राश्च हि । उत्क्रान्तिगत्यागतीनामित्याद्यागामि-

— ಪದಾರ್ಥದೀಪಿಕಾ —

ಯಾದ ಆಗಮವನ್ನೂ ಇಲ್ಲಿ ತೋರಿಸಿರುತ್ತಾರೆ ಇನ್ನು- ಇಲ್ಲಿ ಆಕಾಂಕ್ಷಾ ಕ್ರಮವನ್ನನುಸರಿಸಿ ವ್ಯಾಪ್ತಿಯನ್ನು ಮೊದಲು ಹೇಳಿ, ಅನಂತರ ಶಕ್ತಿವಿಶೇಷವನ್ನು ಹೇಳತಕ್ಕದ್ದು ಆದರೂ ಅಲ್ಪವಾದ ಸ್ವರಗಳುಳ್ಳ ಶಬ್ದಕ್ಕೆ ಪೂರ್ವ ನಿಪಾತವನ್ನು ಅನುಸರಿಸಿ ಹೊರಟ ಸೂತ್ರವನ್ನು ಅನುಸರಿಸುತ್ತಿರುವ ಶ್ರೀ ಅನುವ್ಯಾಖ್ಯಾನಕಾರರಿಂದ, ಕ್ರಮವು ಮುರಿಯಲ್ಪಟ್ಟಿದೆ

ಇನ್ನು "ಪೃಥಿವ್ಯಾದ್ಯಭಿಮಾನಿನ್ಯಃ" ಎಂಬ ವಾಕ್ಯವು ಹೇಗೆ ಸ್ವೀಕರಿಸಲರ್ಹವಾಗುವದು? ಏಕೆಂದರೆ– "ಆತ್ಮನಿ ಚೈವಂ ವಿಚಿತ್ರಾಶ್ಚ ಹಿ, ಉತ್ಕ್ರಾಂತಿಗತ್ಯಾಗತೀನಾಂ" ಈ ಮುಂತಾದ, ಮುಂದೆ ಹೇಳಲಾಗುವ ಸೂತ್ರಗಳಿಂದ,

— ವಿಶೇಷಾರ್ಥಪ್ರದೀಪಿಕಾ —

"ಆಕಾಂಕ್ಷಾ ಕ್ರಮೇಣ"– 'ಅಭಿಮಾನಿನಃ ಪ್ರಾದೇಶಿಕತ್ವೇ"ಇತ್ಯಾದಿ ವಾಕ್ಯದಿಂದ ಹೇಳಿದ ಆಕಾಂಕ್ಷೆಯ ಕ್ರಮದಿಂದ. (ಪೂರ್ವಾಪರ ಸಮಭಿವ್ಯಾಹಾರಾನುಸಾರ) ''ಆದಾವುಕ್ತ್ವಾ''= ಅನುವ್ಯಾಖ್ಯಾನದಲ್ಲಿ ಮೊದಲು ಹೇಳಿ, ಹೀಗೆ ಅರ್ಥ ''ಅಲ್ಪಾಚ್ ತರಸ್ಯ''– ಅಲ್ಪವಾದ ಸ್ವರಗಳುಳ್ಳದ್ದಕ್ಕೆ ''ಪೂರ್ವನಿಪಾತಂ''= ಮೊದಲು ಉಚ್ಚರಿಸಲ್ಪಡುವುದನ್ನು

"ಆತ್ಮನಿ ಚೈವಂ"– ಪರಮಾತ್ಮನಲ್ಲಿಯೇ ಅಘಟಿತ ಘಟಕವಾದ ಅಚಿಂತ್ಯ ವಿಚಿತ್ರಗಳು, ಜೀವನಲ್ಲಿಲ್ಲವೆಂದು, ಇದೇ ವಾದದಲ್ಲಿಯೇ "ಶ್ರುತೇಸ್ತು ಶಬ್ದ ಮೂಲತ್ವಾತ್" ಇತ್ಯಾದಿ ಸೂತ್ರಗಳಿಂದ ಹೇಳುವರು ಮುಂದೆ ವಿಯತ್ಪಾದದಲ್ಲಿ ''ಉತ್ಕ್ರಾಂತಿಗತ್ಯಾಗತೀನಾಂ'' ಎಂಬ ಅಧಿಕರಣದಲ್ಲಿ, ಕ್ರಿಯೆಯಿರುವುದರಿಂದ ಜೀವರಿಗೆ ಅಣುತ್ವವು ಹೇಳಲ್ಪಡುತ್ತದೆ ಆದರೆ ಈ ಅಧಿಕರಣದಲ್ಲಿ ಅಭಿಮಾನಿ ದೇವತೆಗಳೆಂಬ ಜೀವರಿಗೆ ಅಚಿಂತ್ಯ ಸಾಮರ್ಥ್ಯವೂ ವ್ಯಾಪ್ತತೆಯೂ ಹೇಳಲ್ಪಡುತ್ತದೆ ಆದ್ದರಿಂದ, ವಿರೋಧ ಬರುವುದರಿಂದ, ''ಪೃಥಿವ್ಯಾದ್ಯಭಿಮಾನಿನಃ'' ಎಂದು ಹೇಳಿದುದನ್ನು ಹೇಗೆ ಒಪ್ಪಬೇಕು? ಹೀಗೆ ಇಲ್ಲಿ ಅರ್ಥ.

सूत्रेणाचिन्त्यशक्तेः सर्वगतत्वस्य च विरुद्धत्वादित्यत आह ॥ उक्तानुसारेणेति । आत्मनि चैवमित्याद्युक्तानुसारेण शक्तिर्व्याप्तिश्चोच्यत इत्यन्वयः। स्यादयं विरोधो यदि शक्तिर्व्याप्तिश्च निरवधिकाऽत्रोच्यते। न चैवम् । प्रमाणान्तरानुसारेणान्तर्धानादिशक्तेरभिमतार्थव्याप्तेश्च प्रतिपाद्यनाङ्गीकारादिति ।

एवमस्मदाद्यपेक्षयाऽभिमानिनामनुपलम्भमङ्गीकृत्य तद्बाधः परिहृतः। इदानीमसिद्धश्चासावित्याह ॥ दृश्यन्ते चेति । अधिकारिभिरन्तर्हितार्थदर्शनसमर्थैर्योगिभिः । एतच्च भाष्योदाहृतस्मृति-

— ಪದಾರ್ಥದೀಪಿಕಾ —

ಅಚಿಂತ್ಯ ಶಕ್ತಿಯೂ ಸರ್ವಗತತ್ತ್ವವೂ ವಿರುದ್ಧವಾಗುತ್ತದೆ ಈ ಆಶಂಕೆಯನ್ನು 'ಉಕ್ತಾನುಸಾರೇಣ" ಈ ವಚನದಿಂದ ಪರಿಹರಿಸುತ್ತಾರೆ "ಶಕ್ತಿಶ್ಚ ವ್ಯಾಪ್ತಿಶ್ಚ ಉಚ್ಯತೇ "ಆತ್ಮನಿ ಚೈವಂ ವಿಚಿತ್ರಾಶ್ಚಹಿ" ಇತ್ಯಾದ್ಯುಕ್ತಾನುಸಾರೇಣ"- "ಆತ್ಮನಿ ಚೈವ" ಇತ್ಯಾದಿಗಳಲ್ಲಿ ಹೇಳಿದುದರ ಅನುಸಾರವಾಗಿ ಶಕ್ತಿಯೂ ವ್ಯಾಪ್ತಿಯೂ ಹೇಳಲ್ಪಡುತ್ತದೆ ಹೀಗೆ ಅನ್ವಯ ವಿರುತ್ತದೆ ಈ ವಿರೋಧವು. ನಿರವಧಿಕವಾದ ಶಕ್ತಿ ಹಾಗು ವ್ಯಾಪ್ತಿ, ಇವುಗಳನ್ನು ಹೇಳಿದುದಾದರೆ ಎರಬಹುದು ಆದರೆ ಹಾಗೆ ಹೇಳುವುದಿಲ್ಲ ಪ್ರಮಾಣಾಂತರಗಳನ್ನು ಅನುಸರಿಸಿ, ಅಂತರ್ಧಾನ ಮೊದಲಾದ ಶಕ್ತಿಯೂ ಅಭಿಮತವಾದ ಪದಾರ್ಥದ ಮೇಲಿನ ವ್ಯಾಪ್ತಿಯೂ ಹೇಳಲ್ಪಡುತ್ತದೆಂದು ಅಂಗೀಕರಿಸಿರುತ್ತದೆ" ಹೀಗೆ ಆಶಂಕೆಯ ಪರಿಹಾರ

ಹೀಗೆ ಅಸ್ಮದಾದಿಗಳ ಅಪೇಕ್ಷೆಯಿಂದ, ಅಭಿಮಾನಿದೇವತಗಳಿಗೆ ಅನುಪಲಂಭವನ್ನು ಅಂಗೀಕರಿಸಿ, ಅದರ ಬಾಧವನ್ನು ಪರಿಹರಿಸಲಾಯಿತು ಈಗ ಈ ಅನುಪಲಂಭಬಾಧವು ಅಸಿದ್ಧವೆಂಬುದಾಗಿ "ದೃಶ್ಯಂತೇ" ಎಂಬ ವಚನದಿಂದ ಹೇಳುತ್ತಾರೆ "ಅಧಿಕಾರಿಭಿಃ"- ಅಂತರ್ಹಿತ (ಕಾಣಿಸಲಾರದ) ವಸ್ತುಗಳನ್ನು ನೋಡುವ ದೃಷ್ಟಿಸಾಮರ್ಥ್ಯವುಳ್ಳ ಯೋಗಿಗಳಿಂದ ಇದು ಭಾಷ್ಯೋದಾಹೃತಸ್ಮೃತಿಗಳಿಂದ ಸಿದ್ಧವಾಗಿದೆ ಇದರಿಂದ "ದೃಶ್ಯತೇ" ಎಂಬ ಸೂತ್ರವು

— ವಿಶೇಷಾರ್ಥಪ್ರದೀಪಿಕಾ —

"ಅನಾ"= ಅನುಪಲಂಭವು (ಕಾಣಿಸದಿರುವುದು) "ಉದಾಹೃತ"— "ಪೃಥಿವ್ಯಾದ್ಯಭಿಮಾನಿನ್ಯಃ" ಎಂಬ ಭಾಷ್ಯೋದಾಹೃತಸ್ಮೃತಿ

सिद्धम् । एतेन दृश्यते चेति सूत्रं व्याख्यातं भवति । ये तु मीमांसकंमन्या विग्रहवतीं देवतां न सहन्ते तेऽप्यनेनैव निरस्ता भवन्ति । अर्थापत्त्या प्रत्यक्षेण च तत्सिद्धेः । समर्थितं चागमानां सिद्धार्थे प्रामाण्यम् । अनुपलम्भोऽनेकत्र युगपत्सन्निधानं च शक्तिविशेषादुपपद्यते पिशाचादिवत् । न च पिशाचादयोऽपि न सन्ति । मन्त्रौषधादिनाऽस्मदादिभिरप्युपलभ्यमानत्वात् । अर्थक्रियया संवादेन च प्रामाण्योपपत्तेः । वक्ष्यति च सूत्रकारो देवादिवदित्युक्त्वा तत्र

— ಪದಾರ್ಥದೀಪಿಕಾ —

ವ್ಯಾಖ್ಯಾನಿಸಲ್ಪಟ್ಟದ್ದಾಗುತ್ತದೆ. ಮೀಮಾಂಸಕರೆಂದು ಬಗೆದುಕೊಳ್ಳುತ್ತಿರುವವರು ಯಾರು ವಿಗ್ರಹವುಳ್ಳ ದೇವತೆಯನ್ನು ಒಪ್ಪಲು ಇಚ್ಛಿಸುವುದಿಲ್ಲವೋ-(ಸಹಿಸುವುದಿಲ್ಲವೋ-ದ್ವೇಷಿಸುವರೋ) ಅವರೂ ಇದರಿಂದಲೇ ನಿರಾಕರಿಸಲ್ಪಟ್ಟವರಾಗುತ್ತಾರೆ ಏಕಂದರೆ ಅರ್ಥಾಪತ್ತಿ ಮತ್ತು ಪ್ರತ್ಯಕ್ಷ, ಇವುಗಳಿಂದ ವಿಗ್ರಹವುಳ್ಳ ದೇವತೆಯ ಸಿದ್ಧಿಯಾಗುತ್ತದೆ ಮತ್ತು ಆಗಮಗಳಿಗೆ ಸಿದ್ಧವಸ್ತುಗಳ ವಿಷಯದಲ್ಲಿ ಯಥಾರ್ಥಜ್ಞಾನಜನಕತ್ವವನ್ನು ಸಮರ್ಥಿಸಿದ್ದಾಗಿರುತ್ತದೆ ಅನುಪಲಂಭವು (ಕಾಣಿಸದಿರುವುದು) ಮತ್ತು ಅನೇಕ ಕಡೆಗಳಲ್ಲಿ ಏಕಕಾಲದಲ್ಲಿ ಸನ್ನಿಹಿತವಾಗಿರುವುದು, ಇವೆರಡೂ, ಪಿಶಾಚಾದಿಗಳಲ್ಲಿರುವ ಹಾಗೆ ದೇವತೆಗಳಿಗೂ ಶಕ್ತಿವಿಶೇಷವಿರುವುದರಿಂದ ಯುಕ್ತವೆನಿಸುತ್ತವೆ ಮತ್ತು ಪಿಶಾಚಾದಿಗಳು ಇಲ್ಲನೆಂದು ಹೇಳಬಾರದು ಏಕೆಂದರೆ ಮಂತ್ರ-ಔಷಧ-ಮುಂತಾದುದರಿಂದ ಅಸ್ಮದಾದಿಗಳಿಗೂ ಅವುಗಳ ಉಪಲಬ್ಧಿಯಾಗುತ್ತದ ಮತ್ತು ಅರ್ಥಕ್ರಿಯೆಯಿಂದ ಹಾಗು ಸಂವಾದದಿಂದ ಪ್ರಾಮಾಣ್ಯವು ಯುಕ್ತವೆನಿಸುತ್ತದೆ ಸೂತ್ರಕಾರರೂ ಸಹ ಮುಂದೆ "ದೇವಾದಿವದ್" ಎಂಬುದಾಗಿ ಹೇಳಿ, ಅದರ ಬಗ್ಗೆ ಸಂದೇಹ

— ವಿಶೇಷಾರ್ಥಪ್ರದೀಪಿಕಾ —

"ಸಮರ್ಥಿತಂ"- "ಕಾರ್ಯತಾ ಚ" ಇತ್ಯಾದಿ ಪದ್ಯಗಳಿಂದ, ಸಮರ್ಥಿತವೆಂದು ತಿಳಿಯಬೇಕು.

"ಅರ್ಥಕ್ರಿಯಯಾ ಸಂವಾದೇನ ಚ"- ಮಂತ್ರಗಳಿಗೂ ಔಷಧಾದಿ ಬೋಧಕ ವಾಕ್ಯಗಳಿಗೆ ಅರ್ಥಕ್ರಿಯೆಯೂ ಸಂವಾದವೂ ಇರುತ್ತದೆಂದು ಭಾವ ಅಥವಾ ಕಾಣಿಸುವುದು ಭ್ರಮವೆಂದು ಬಗೆದರೆ ಈ ವಾಕ್ಯದಿಂದ ಸಮಾಧಾನ ಹೇಳುತ್ತಾರೆಂದು ಭಾವ "ಅಪಿಲೋಕೇ"- "ಲೋಕೇಪಿ ಪಿಶಾಚಾದ

विप्रतिपन्नं प्रत्यपि लोक इति । किञ्चेन्द्राग्निवरुणादिपदं कस्यचिद् वाचकं पदत्वात् । गोपदवत् । न चाचेतनमात्रे तत्प्रयोगोऽस्ति । न च चेतनो मुक्तः प्रलीनो वा तद्वाच्यः । जगद्व्यापारसम्बन्धिन्यपि प्रयोगात् । न चासौ विग्रहविधुरः सम्भवतीत्यलम् ।

— ಪದಾರ್ಥದೀಪಿಕಾ —

ಪಡುವವನನ್ನೂ ಕುರಿತು, "ಅಪಿ ಲೋಕೇ" ಎಂಬುದಾಗಿ ಹೇಳುವರು ಹಾಗು ಇಂದ್ರ, ಅಗ್ನಿ, ವರುಣ, ಮುಂತಾದ ಪದವು, ಒಂದು ಅರ್ಥದ ವಾಚಕವಾಗಿದ. ಏಕೆಂದರೆ ಪದವಾಗಿರುತ್ತದೆ ಇದರಲ್ಲಿ ಗೋಪದವು ದೃಷ್ಟಾಂತವು. ಮತ್ತು ಅಚೇತನ ಮಾತ್ರದಲ್ಲಿ- ಕೇವಲ ಅಚೇತನದಲ್ಲಿಯೇ ಇವುಗಳ ಪ್ರಯೋಗವೆಂದಲ್ಲ ಮತ್ತು- ಮುಕ್ತ ಇಲ್ಲವೆ ಪ್ರಲೀನನಾದ ಚೇತನನು ಇಂದ್ರಾದಿಪದಗಳಿಂದ ವಾಚ್ಯನಲ್ಲ, ಏಕಂದರೆ ಜಗದ್ವ್ಯಾಪಾರ ಸಂಬಂಧವುಳ್ಳವನಲ್ಲಿಯೂ ಈ ಪದಗಳ ಪ್ರಯೋಗವಿರುತ್ತದೆ ಮತ್ತು ಈ ಚೇತನನು ವಿಗ್ರಹವಿಲ್ಲದವನೆಂಬುದು ಸರಿಯಾಗುವುದಿಲ್ಲ ಹೀಗೆ, ಇಲ್ಲಿಯ ವಿಸ್ತರವು ಸಾಕು

— ವಿಶೇಷಾರ್ಥಪ್ರದೀಪಿಕಾ —

ಯೋಽಂತರ್ಧಾನ ಶಕ್ತ್ಯಾ ನೋಪಲಭ್ಯಂತೇ ಕಿಮು ಈಶ್ವರಃ'' ( ಲೋಕದಲ್ಲಿ ಪಿಶಾಚಾದಿಗಳು ಅಂತರ್ಧಾನ ಶಕ್ತಿಯಿಂದ ಕಾಣುವುದಿಲ್ಲ, ಈಶ್ವರನು ಹಾಗೆ ಕಾಣುವುದಿಲ್ಲವೆಂಬುದಿನ್ನೇನು ಹೇಳತಕ್ಕದ್ದು ? ) ಎಂಬುದಾಗಿ ಮುಂದೆ ಹೇಳುವರೆಂದು ಭಾವ

" ಅಚೇತನ ಮಾತ್ರೇ '' ಎಂಬ ಹೇಳಿಕೆಯಿಂದ, ಅಗ್ನ್ಯಾದಿ ಪದಗಳು ಅಗ್ನ್ಯಾದಿ ಅಚೇತನಗಳಿಗೂ ವಾಚಕವೆಂದು ಹೇಳಿದ್ದಾಗುತ್ತದೆ "ಪ್ರಲೀನ"- ದೇಹಲಯ ಹೊಂದಿದವನು ಲಯದಲ್ಲಿರುವ ಜೀವನು, ಹೀಗೆ ಅರ್ಥ "ಜಗದ್ವ್ಯಾಪಾರಸಂಬಂಧಿನ್ಯಪಿ "— ಇಂದ್ರಸ್ಯನು ವೀರ್ಯಾಣಿ ಪ್ರವೋಚಂ, ಯಾನಿ ಚಕಾರ ಪ್ರಥಮಾನಿ ವಜ್ರೀ। ಅಗ್ನೇಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಉರುಂ ಹಿ ರಾಜಾ ವರುಣಶ್ಚಕಾರ, ಸೂರ್ಯಾಯ ಪಂಥಾಂ " ಇತ್ಯಾದಿ ವೇದಗಳಲ್ಲಿ ಜಗದ್ವ್ಯಾಪಾರವುಳ್ಳವರಲ್ಲಿಯೂ ಪ್ರಯೋಗಗಳಿವೆ ಹೀಗೆ ಭಾವ "ಇತ್ಯಲಂ''- " ಮತ್ಸಿಸೋಮ ವರುಣಮತ್ಸಿ ಮಿತ್ರಂ '' ಇತ್ಯಾದಿ ವಾಕ್ಯಗಳಲ್ಲಿ ಸೋಮಕ್ಕೆ ವರುಣಾದಿಗಳಿಗೆ ಸಂತೋಷ ( ಮಾದ )ವನ್ನುಂಟು ಮಾಡೆಂದು ಪ್ರಾರ್ಥಿಸಲಾಗುತ್ತದೆ ಜಡಕ್ಕಾಗಲೀ ದೇಹವಿಲ್ಲದ ಚೇತನಕ್ಕಾಗಲೀ ಸೋಮಪಾನದಿಂದ ಸಂತೋಷವುಂಟಾಗುವುದೆಂಬುದು ಯುಕ್ತವಲ್ಲ

ननु तथाऽपि मृदब्रवीदित्यादिवेदस्याबोधकत्वलक्षणमप्रामाण्यं दुर्निवारणम् । तथा हि । यद्यपि वाक्यतापन्नानि पदानि वाक्यार्थं पदार्थानामन्योन्यसंसर्गविशेषरूपमपूर्वमेवावगमयन्ति । तथाऽपि पदार्थैर्वाच्यवाचकभावरूपसम्बन्धप्रमितिलक्षणां व्युत्पत्तिमपेक्षन्ते । अन्वयव्यतिरेकाभ्यां तथाऽवधारणात् । न च मृदादिशब्दानां पृथिव्यादिषु देवतासु व्युत्पत्तिः सम्भवति । सम्बन्धज्ञानस्य सम्बन्धिज्ञानसापेक्षत्वात् । प्रतिसम्बन्धिरूपायाश्च देवतायाः प्रत्यक्षेण दुरधिगमत्वात् । लिङ्गाभावेनानुमानायोगात् । न च शब्दतस्तदवगमः ।

— ಪದಾರ್ಥದೀಪಿಕಾ —

ಇಷ್ಟಾದರೂ "ವ್ಯದಬ್ರವೀತ್" ಈ ಮುಂತಾದ ರೂಪ ವೇದಕ್ಕೆ, ಬೋಧಕತ್ವವಿಲ್ಲದಿರುವುದೆಂಬ ಅಪ್ರಾಮಾಣ್ಯವು ಅಪರಿಹಾರ್ಯವಾಗುತ್ತದೆ ಹೇಗೆಂದರೆ– ವಾಕ್ಯರೂಪತ್ವವನ್ನು ಹೊಂದಿರುವ ಪದಗಳು, ಪದಾರ್ಥಗಳ ಪರಸ್ಪರ ಸಂಸರ್ಗರೂಪವಾದ ವಾಕ್ಯಾರ್ಥವೆನಿಸುವ ಅಪೂರ್ವವಾದ ಅರ್ಥವನ್ನು ತಿಳಿಸುತ್ತವೆಯೆಂಬುದು ನಿಜವೇ! ಆದರೂ ಪದಗಳು, ಪದಾರ್ಥಗಳೊಡನೆ ಇರುವ ವಾಚ್ಯವಾಚಕ ಭಾವರೂಪವಾದ ಸಂಬಂಧದ ಜ್ಞಾನರೂಪವಾದ ವ್ಯುತ್ಪತ್ತಿಯನ್ನು ಅಪೇಕ್ಷಿಸುತ್ತವೆ ಏಕೆಂದರ ಅನ್ವಯ ವ್ಯತಿರೇಕ ಯುಕ್ತಿಗಳಿಂದ ಹಾಗೆ ಅಪೇಕ್ಷಿಸುವುದೆಂಬ ಸಂಗತಿಯು ತಿಳಿದು ಬಂದಿರುತ್ತದೆ ಮತ್ತು "ವ್ಯತ್" ಮೊದಲಾದ ಶಬ್ದಗಳಿಗೆ ಪೃಥಿವ್ಯಾದ್ಯಭಿಮಾನಿದೇವತೆಗಳಲ್ಲಿ ಹಿಂದೆ ಹೇಳಿದ ವ್ಯುತ್ಪತ್ತಿಯು ಸಂಭವಿಸಲಾರದು ಏಕೆಂದರ ಸಂಬಂಧದ ಬಗೆಗಿನ ಜ್ಞಾನವು ಸಂಬಂಧಿ (ಸಂಬಂಭವುಳ್ಳ) ಪದಾರ್ಥವಿಷಯಕ ಜ್ಞಾನವನ್ನು ಅಪೇಕ್ಷಿಸುತ್ತದೆ ಹಾಗು ಪ್ರತಿಸಂಬಂಧಿಯೆನಿಸಿದ ದೇವತೆಯನ್ನು ಪ್ರತ್ಯಕ್ಷದಿಂದ ತಿಳಿಯುವುದು ದುಸ್ಸಾಧ್ಯವು ಲಿಂಗವಿಲ್ಲದಿರುವುದರಿಂದ, ಯುಕ್ತಿಯಿಂದ ಆದರ ಜ್ಞಾನವು ಬರುವುದಿಲ್ಲ ಶಬ್ದದಿಂದಲೂ ಆದರ ಬಗ್ಗೆ ಜ್ಞಾನವು ಬರುವುದಿಲ್ಲ

— ವಿಶೇಷಾರ್ಥಪ್ರದೀಪಿಕಾ —

ಮತ್ತು 'ತೇಷಾಂ ಪಾಹಿ ಶ್ರುಧೀ ಹವಂ" ಎಂಬುದಾಗಿ ಪಾನಸ್ತೋತ್ರ, ಶ್ರವಣಾದಿಗಳು ಹೇಳಲ್ಪಡುತ್ತವೆ ಇದುವೂ ಅಚೇತನಕ್ಕೆ ಇಲ್ಲವೆ ವಿಗ್ರಹರಹಿತ ಚೇತನಕ್ಕೆ ಯುಕ್ತವಲ್ಲ ಈ ಮುಂತಾದುದನ್ನು ಊಹಿಸಬೇಕೆಂದು ಇಲ್ಲಿಯ ಭಾವ 'ವಾಕ್ಯತಾಪನ್ನಾನಿ"- ಆಕಾಂಕ್ಷಾಸನ್ನಿಧಿ ಯೋಗ್ಯತೆಗಳನ್ನು ಪಡೆದವುಗಳು

शास्त्रोक्तवस्तुनश्चैव व्युत्पत्तिः शास्त्रलिङ्गतः ॥

सत्यां व्युत्पत्तौ शब्दतो देवतावगमः सति च तस्मिन्व्युत्पत्तिरिति परस्पराश्रयत्वात् । न च शब्दविशेषस्यागृहीतसङ्गतिकस्यैव बोधकत्वम् । अदृष्टकल्पनाप्रसङ्गात् । यद्यपि दृश्यते चेत्युक्तम् । तथाऽप्यस्मदादीना व्युत्पत्त्यनुपपत्तिरेव । देवतादर्शनं च योगिनां वेदार्थज्ञानोत्तरभावनाजन्यमङ्गीक्रियत इति न व्युत्पत्तिहेतुः । लक्षणाऽपि वाच्यार्थदर्शनं विनाऽनुपपन्नैवत्यत आह ॥ शास्त्रोक्तेति ॥ चशब्दोऽ

ಕೇವಲ ಶಾಸ್ತ್ರದಿಂದಲೇ ತಿಳಿಯಲರ್ಹವಾದ ವಸ್ತುವಿಗೂ ಸಹ ವ್ಯಾದಾದಿ ಶಬ್ದಗಳಿಗೂ ಅವುಗಳಿಗೂ ವಾಚ್ಯವಾಚಕಭಾವ ಸಂಬಂಧ ಜ್ಞಾನರೂಪವಾದ ವ್ಯುತ್ಪತ್ತಿಯು ಯುಕ್ತವಾಗುತ್ತದೆ ಶಾಸ್ತ್ರವೆಂಬ ಲಿಂಗದಿಂದ ಅದರ ಜ್ಞಾನವು ಸಂಭವಿಸುತ್ತದೆ.

## — ಪದಾರ್ಥದೀಪಿಕಾ —

ಏಕೆಂದರೆ ವ್ಯುತ್ಪತ್ತಿಯು ಇದ್ದರೆ ಶಬ್ದದಿಂದ ದೇವತೆಯ ಬಗೆಗಿನ ಜ್ಞಾನವು, ಆ ದೇವತೆಯ ವಿಷಯಕ ಜ್ಞಾನವು ಇದ್ದರೆ ವ್ಯುತ್ಪತ್ತಿಯು, ಹೀಗೆ ಅನ್ಯೋನ್ಯಾಶ್ರಯವೆಂಬ ದೋಷವು ಬರುತ್ತದೆ ವಾಚ್ಯವಾಚಕಭಾವ ಸಂಬಂಧ ಜ್ಞಾನವಿಷಯವಾಗದಿದ್ದ ಯಾವದೋ ಒಂದು ಶಬ್ದಕ್ಕೇ ಬೋಧಕತ್ವವೆಂದು ಹೇಳುವುದು ಸರಿಯಲ್ಲ ಏಕೆಂದರೆ ಅದೃಷ್ಟಕಲ್ಪನಾಪ್ರಸಂಗವು ಬರುತ್ತದೆ ಯದ್ಯಪಿ, "ದೃಶ್ಯತೇಚ" ಎಂಬುದಾಗಿ ಹೇಳಲ್ಪಟ್ಟಿದೆ. ಆದರೂ ಅಸ್ಮದಾದಿಗಳಿಗೆ ವ್ಯುತ್ಪತ್ತಿಯು ಉಂಟಾಗುವುದೇ ಇಲ್ಲ ದೇವತೆಯ ದರ್ಶನವಾದರೂ ಯೋಗಿಗಳಿಗೆ ವೇದಾರ್ಥಜ್ಞಾನದ ಅನಂತರದಲ್ಲಿ ಭಾವನೆಯಿಂದ ಹುಟ್ಟುವಂತಹದೆಂದು ಅಂಗೀಕರಿಸಲ್ಪಡುತ್ತದೆ ಆದುದರಿಂದ, ಅದು ವ್ಯುತ್ಪತ್ತಿಯ ಕಾರಣವಲ್ಲ ಮತ್ತು ವಾಚ್ಯಾರ್ಥವಿಷಯಕಜ್ಞಾನವಿಲ್ಲದೆ ಲಕ್ಷಣಾವೃತ್ತಿಯೂ ಸಂಭವಿಸುವುದೇ ಇಲ್ಲ ಈ ಆಶಂಕೆಯನ್ನು 'ಶಾಸ್ತ್ರೋಕ್ತ" ಇತ್ಯಾದಿ ವಚನದಿಂದ ಪರಿ

## — ವಿಶೇಷಾರ್ಥಪ್ರದೀಪಿಕಾ —

ಯೋಗಿಗಳ ದೇವತಾ ಪ್ರತ್ಯಕ್ಷವು, ಇಂದ್ರಾದಿ ಪದಗಳ ವ್ಯುತ್ಪತ್ತಿಯ ಕಾರಣವಲ್ಲ ಎಂಬುದಾಗಿ " ದೇವತಾದರ್ಶನಂ ಚ " ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ. "ನ ತದ್ವ್ಯುತ್ಪತ್ತಿಹೇತುಃ'' ಇಲ್ಲಿ "ಯೋಗಿನಾಮಪಿ'' ಎಂಬುದನ್ನು ಹಚ್ಚಿಕೊಳ್ಳಬೇಕು. ಅಂದರೆ ಯೋಗಿಗಳಿಗೂ ಅದು ವ್ಯುತ್ಪತ್ತಿಕಾರಣವಲ್ಲವೆಂದು ಅರ್ಥವಾಗುವುದೆಂದು ತಿಳಿಯಬೇಕು

प्यर्थः । एवशब्दः सामर्थ्याच्छास्त्रशब्देन सम्बन्धनीयः । शास्त्रैक-
समधिगम्यवस्तुन इति । प्रत्यक्षाद्यगम्याया अपि देवताया इति
यावत् । वस्तुनो व्युत्पत्तिरिति मृदादिशब्दस्य तत्सम्बन्धिवाचकत्व-
प्रतिपत्तिरित्यर्थः । युज्यत इति शेषः । अनेन चैवशब्दस्य
सम्बन्धः । शास्त्रलिङ्गतस्तज्ज्ञानसम्भवादिति शेषः ।

यद्वा शास्त्रोक्तवस्तुनोऽपि शास्त्रलिङ्गतोऽधिगतिसम्भवात्तत्र-
शब्दस्य व्युत्पत्तिर्युज्यत इति योजना । देवताया इति वक्तव्ये
शास्त्रोक्तवस्तुनश्चेति वचनं शङ्कानुवादरूपम् । शास्त्रमेव लिङ्गं शास्त्र

— ಪದಾರ್ಥದೀಪಿಕಾ —

ಹರಿಸುತ್ತಾರೆ "ಚ" ಶಬ್ದವು 'ಅಪಿ' (ಹಾಗೂ) ಎಂಬ ಶಬ್ದಾರ್ಥದಲ್ಲಿ
ಇರುತ್ತದೆ "ಏವ" ಶಬ್ದವನ್ನು, ಸಾಮರ್ಥ್ಯವಿದ್ದುದರಿಂದ ಶಾಸ್ತ್ರಶಬ್ದದಿಂದ
ಅನ್ವಯಿಸಬೇಕು "ಶಾಸ್ತ್ರೈಕಸಮಧಿಗಮ್ಯವಾದ ವಸ್ತುವಿಗ" ಹೀಗೆ ಅರ್ಥ
ವಾಗುತ್ತದೆ "ಪ್ರತ್ಯಕ್ಷಾದಿಗಳಿಗೆ ನಿಲುಕದ ದೇವತೆಗೂ, ಹೀಗೆ ಅರ್ಥ
"ವಸ್ತುನೋ ವ್ಯುತ್ಪತ್ತಿಃ" ಎಂಬುದಕ್ಕೆ "ಮೃದಾದಿಶಬ್ದಗಳಿಗೆ ಅದರ ಸಂಬಂಧ
ವುಳ್ಳದ್ದರ ವಾಚಕತ್ವದ ಜ್ಞಾನವು," ಹೀಗೆ ಅರ್ಥ "ಯುಜ್ಯತೇ' ಎಂಬುದು
ಶೇಷವು ಇದರಿಂದಲೂ ಏವ' ಶಬ್ದಕ್ಕೆ 'ಯುಜ್ಯತೇ ಏವ' ಎಂಬುದಾಗಿ
ಅನ್ವಯವಿದೆ "ಶಾಸ್ತ್ರಲಿಂಗತಃ'– ಇಲ್ಲಿ 'ತಜ್ಜ್ಞಾನಸಂಭವಾತ್' ಎಂಬುದು
ಶೇಷವು ಅಥವಾ 'ಶಾಸ್ತ್ರೋಕ್ತವಸ್ತುನೋಽಪಿ ಶಾಸ್ತ್ರಲಿಂಗತೋಽಧಿಗತಿ
ಸಂಭವಾತ್ತತ್ರ ಶಬ್ದಸ್ಯ ವ್ಯುತ್ಪತ್ತಿಃ ಯುಜ್ಯತೇ" (ಶಾಸ್ತ್ರೋಕ್ತವಾದ ವಸ್ತುವಿನ
ಜ್ಞಾನವೂ ಶಾಸ್ತ್ರಲಿಂಗದಿಂದ ಬರುವುದರಿಂದ, ಅಂಥ ಶಾಸ್ತ್ರೋಕ್ತ ವಸ್ತುವಿನ
ಬಗ್ಗೆ ಶಬ್ದವ್ಯುತ್ಪತ್ತಿಯು ಯುಕ್ತವೆನಿಸುತ್ತದೆ) ಎಂಬುದಾಗಿ ಯೋಜನೆಯು

ಇಲ್ಲಿ– "ದೇವತಾಯಾಃ' ಎಂಬುದಾಗಿ ಹೇಳಬೇಕಾದುದಿರುವಾಗ
"ಶಾಸ್ತ್ರೋಕ್ತವಸ್ತುನಶ್ಚ" ಎಂಬ ವಚನವು ಶಂಕಾನುವಾದ ರೂಪವಾಗಿ
ಹೊರಟಿದೆ ಶಾಸ್ತ್ರವೇ ಲಿಂಗವು– ಹೀಗೆ "ಶಾಸ್ತ್ರಲಿಂಗಂ" ಎಂಬಲ್ಲಿ

— ವಿಶೇಷಾರ್ಥಪ್ರದೀಪಿಕಾ —

"ಸಾಮರ್ಥ್ಯಾತ್" – ಅನ್ವಯಯೋಗ್ಯತಾಬಲದಿಂದ 'ವ್ಯುತ್ಪತ್ತಿಃ"
"ವಾಚಕ'ವೆಂಬ ಜ್ಞಾನವು ಅದರಲ್ಲಿ ವಿಷಯವಾದ (ಉಪಸರ್ಜನವಾದ) "ವಾಚ
ಕತ್ವ' ದೊಡನೆ "ವಸ್ತುನಃ" ಎಂಬ ಪದದ ಅನ್ವಯವಿದೆಯೆಂಬುದನ್ನು "ವಸ್ತುನೋ
ವ್ಯುತ್ಪತ್ತಿಃ" ಎಂಬ ವಚನದಿಂದ ಹೇಳುತ್ತಾರೆ

लिङ्गम् । मृदब्रवीदित्यादिशास्त्रादेवोपपत्तिविरोधसहितान्मृदादिशब्द-वाच्यतयैव देवतास्वरूपमवगम्यत इति । यद्वा शास्त्रं तैस्तैः प्रणीतं तत्सद्भावे लिङ्गम् । न हि वेदादन्यद्वाक्यं वक्तारमन्तरेणोपपद्यते । ततश्च वचनलिङ्गानुमिते वक्तरि वृद्धैरन्यान्प्रति मृदादिशब्दाः शक्यव्युत्पादनाः । यद्वा शास्त्रं शासनम् । वर्षणाद्युपलक्षणमेतत् । न हि वर्षणादिक्रिया विकर्तृका सम्भवति । तथा च तयाऽनुमिते कर्तरि शक्यत एव वृद्धैः शब्दो व्युत्पादयितुम् । अथवा शास्त्रोक्तं लिङ्ग-मव्यभिचारितो धर्मः शास्त्रलिङ्गम् । पाशहस्तत्वसहस्राक्षत्वादि-शास्त्रोक्ततत्तद्देवतालक्षणान्युपादाय व्युत्पादनं शक्यमेव । यथा

— ಪದಾರ್ಥ ದೀಪಿಕಾ —

ವಿಗ್ರಹವು "ವೃದಬ್ರವೀತ್" ಇತ್ಯಾದಿ, ಉಪಪತ್ತಿ ವಿರೋಧ ಸಹಿತವಾದ ಶಾಸ್ತ್ರದಿಂದಲೇ, ವೃದಾದಿ ಶಬ್ದವಾಚ್ಯವಾಗಿ ದೇವತೆಯ ಸ್ವರೂಪವು ತಿಳಿಯಲ್ಪಡುತ್ತದೆ ಹೀಗೆ ಅರ್ಥ. ಅಥವಾ– "ಶಾಸ್ತ್ರಂ"– ಅವರವರಿಂದ ರಚಿತವಾದ ಶಾಸ್ತ್ರವೇ ಆಯಾ ದೇವತೆಗಳಿರುವುದೆಂಬಲ್ಲಿ ಲಿಂಗವು ಏಕೆಂದರೆ ವೇದದಿಂದ ಭಿನ್ನವಾದ ವಾಕ್ಯವು, ವಕ್ತೃವಿನನ್ನು ಬಿಟ್ಟಿರುವುದು ಯುಕ್ತವೆನಿಸಲಾರದು ಆದುದರಿಂದ, ವಚನವೆಂಬ ಲಿಂಗದಿಂದ ಊಹಿಸಲ್ಪಟ್ಟ ವಕ್ತ್ರವಿನಲ್ಲಿ, ವೃದ್ಧರು ಇತರರನ್ನು ಕುರಿತು ವೃದಾದಿ ಶಬ್ದಗಳನ್ನು ವ್ಯುತ್ಪಾದಿಸುವುದು ಶಕ್ಯವಿರುತ್ತದ ಅಥವಾ 'ಶಾಸ್ತ್ರಂ" ಎಂದರೆ ಶಾಸನವು ಇದು "ವರ್ಷಣ" ಮುಂತಾದುದರ ಸಂಗ್ರಾಹಕವು ಮತ್ತು ವರ್ಷಣ ಮುಂತಾದ ರೂಪವಾದ ಕ್ರಿಯೆಯು ಕರ್ತೃವಿಲ್ಲದಯೆ ಆಗುವಂತಹದಲ್ಲ ಆದುದರಿಂದ, ಅದರಿಂದ (ಕ್ರಿಯೆಯಿಂದ) ಊಹಿಸಲ್ಪಟ್ಟ ಕರ್ತೃವಿನಲ್ಲಿ ವೃದ್ಧರಿಂದ ಶಬ್ದವು ವ್ಯುತ್ಪಾದಿಸಲ್ಪಡಲು ಶಕ್ಯವಾಗುತ್ತದೆ ಅಥವಾ ಶಾಸ್ತ್ರೋಕ್ತವಾದ, ಅವ್ಯಭಿಚರಿತ ಧರ್ಮವು "ಶಾಸ್ತ್ರ ಲಿಂಗವು" ಪಾಶಹಸ್ತತ್ವ, ಸಹಸ್ರಾಕ್ಷತ್ವ, ಈ ಮುಂತಾದ, ಶಾಸ್ತ್ರೋಕ್ತವಾದ ಆಯಾಯ ದೇವತೆಗಳ ಲಕ್ಷಣಗಳನ್ನು ಸ್ವೀಕರಿಸಿ, (ಗ್ರಹಿಸಿ) ಶಬ್ದಗಳ

— ವಿಶೇಷಾರ್ಥಪ್ರದೀಪಿಕಾ —

'ಶಂಕಾನುವಾದರೂಪಂ" — ಕಣ್ಣಿಗೆ ಕಾಣಿಸುವುದಿಲ್ಲವಾದುದರಿಂದ, ಅಭಿಮಾನಿದೇವತೆಯು, ಕೇವಲ ಶಾಸ್ತ್ರದಿಂದಲೇ ತಿಳಿಯಲ್ಪಡುವುದೆಂದು ಪೂರ್ವಪಕ್ಷಿಯು ಹೇಳಿದುದರ ಅನುವಾದರೂಪವಾಗಿ, ಹೀಗೆ ಅರ್ಥ

खलु लोके यथा मुद्गस्तथा मुद्गपर्णी यथा माषस्तथा माषपर्णी दीर्घग्रीवादिमान्पशुरुष्ट्र इति लक्षणान्युपादाय मुद्गपर्ण्यादिशब्दा व्युत्पाद्यन्ते तथा यः पाशहस्तत्वादिमान्सोऽबादिशब्दार्थ इति व्युत्पादनं सुकरमेव । पाशादिशब्दास्तु लोकत एव गृहीतसङ्गतयः । समासस्य वाक्यत्वेन व्युत्पत्त्यनपेक्षत्वमिति न कश्चिद्विरोधः । न केवलं मृदादिशब्दानामयं व्युत्पत्तिप्रकारः । किन्त्वमातीन्द्रिये धर्मादावपि । ततश्चैवं

— ಪದಾರ್ಥದೀಪಿಕಾ —

ವ್ಯುತ್ಪಾದನವು ಶಕ್ಯವೇ ಆಗಿರುತ್ತದೆ ಲೋಕದಲ್ಲಿ ಮುದ್ಗವು ಹೇಗೋ ಹಾಗೆ ಮುದ್ಗಪರ್ಣಿಯು, ಮಾಷವು ಹೇಗೋ ಹಾಗೆ ಮಾಷಪರ್ಣಿಯು, ದೀರ್ಘವಾದ ಕುತ್ತಿಗೆ ಮುಂತಾದುದನ್ನುಳ್ಳದ್ದು ಒಂಟೆಯು, ಹೀಗೆ ಲಕ್ಷಣಗಳನ್ನು ಸ್ವೀಕರಿಸಿ, "ಮುದ್ಗಪರ್ಣಿ" ಮುಂತಾದ ಶಬ್ದಗಳು ಹೇಗೆ ವ್ಯುತ್ಪಾದಿಸಲ್ಪಡುವವೋ ಹಾಗೆ– "ಯಾವನು "ಪಾಶಹಸ್ತತ್ವ" (ಕೈಯಲ್ಲಿ ಪಾಶವುಳ್ಳವನಾಗಿರುವುದು) ಮುಂತಾದ ಧರ್ಮವುಳ್ಳವನೋ ಅವನು 'ಅಪ್" (ನೀರು–ವರುಣ) ಮುಂತಾದ ಶಬ್ದವಾಚ್ಯನು," ಎಂಬುದಾಗಿ ವ್ಯುತ್ಪಾದಿಸುವುದು ಶಕ್ಯವೇ ! "ಪಾಶ" ಮುಂತಾದ ಶಬ್ದಗಳಿಗೆ ವಾಚ್ಯವಾಚಕಭಾವ ಸಂಬಂಧ ಜ್ಞಾನವಂತೂ ಲೋಕದಿಂದಲೇ ಬಂದಿರುತ್ತದೆ ಸಮಾಸವು ವಾಕ್ಯರೂಪವಾದುದರಿಂದ, ಅದಕ್ಕೆ ವ್ಯುತ್ಪತ್ತಿಯು ಬೇಕಾಗುವುದಿಲ್ಲ ಆದುದರಿಂದ ಯಾವದೇ ವಿರೋಧವಿಲ್ಲ ಕೇವಲ ಮೃದಾದಿ ಶಬ್ದಗಳಿಗೇನೇ ಈ ವ್ಯುತ್ಪತ್ತಿಪ್ರಕಾರವಲ್ಲ ಆದರೆ ಅತೀಂದ್ರಿಯವಾದ ಧರ್ಮ ಮುಂತಾದವುಗಳಲ್ಲಿಯೂ ಇದೇ ವ್ಯುತ್ಪತ್ತಿಯ ಪ್ರಕಾರವು ಅನ್ವಯಿಸುತ್ತದೆ ಆದುದರಿಂದ, ಹೀಗೆ ವೇದ ಪ್ರಾಮಾಣ್ಯವನ್ನು

— ವಿಶೇಷಾರ್ಥಪ್ರದೀಪಿಕಾ —

'ಮುದ್ಗಪರ್ಣೀ, ಮಾಷಪರ್ಣೀ" ಶಬ್ದಗಳು ಧಾನ್ಯವಿಶೇಷದ ಹೆಸರುಗಳು "ಯಾವನು ಪಾಶಹಸ್ತನೋ ಅವನು ವರುಣನು" ಇತ್ಯಾದಿ ವಚನಗಳಲ್ಲಿ 'ಪಾಶಹಸ್ತ" ಮುಂತಾದ ಸಮುದಾಯಶಬ್ದಗಳ ವ್ಯುತ್ಪತ್ತಿಯು ಇಲ್ಲದಿದ್ದರೆ, ಅದರ ಜ್ಞಾನವು ಅದರಿಂದ ಹೇಗೆ ? ಈ ಪ್ರಶ್ನೆಯ ಉತ್ತರವನ್ನು "ಸಮಾಸಸ್ಯ" ಈ ವಾಕ್ಯದಿಂದ ಹೇಳುತ್ತಾರೆ 'ವಾಕ್ಯತ್ವೇನ"— ವಾಕ್ಯದ ಅವಯವಗಳಾದ ಪದಗಳ ಶಕ್ತಿಯಿಂದಲೇ ಅರ್ಥವನ್ನು ತಿಳಿಸುವುದರಿಂದ, ಪ್ರತ್ಯೇಕವಾದ ಸಮುದಾಯ ವ್ಯುತ್ಪತ್ತಿಯು ಬೇಕಾಗುವುದಿಲ್ಲ, ಹೀಗೆ ಭಾವ

"ಶಾಸ್ತ್ರೋಕ್ತ ದೇವತಾಯಾಃ" ಎಂಬುದಾಗಿ ಹೇಳದೆ "ಶಾಸ್ತ್ರೋಕ್ತವಸ್ತುನಃ"

व्युत्पत्तिः सा बलवती मूर्खव्युत्पत्तितो हि यत् ॥

वेदप्रामाण्यमाक्षिपतोऽतीन्द्रियार्थव्यवहारमात्रविलयप्रसङ्ग इति सूचयितुं शास्त्रोक्तवस्तुनश्चेति सामान्येनोक्तम् ।

एवं तर्हि कुटिलिकेयं व्युत्पत्तिर्दुर्बला । साक्षात्कृते तु मृदादावेव प्रबला । ततश्च देवतानां मुख्यप्रतिपाद्यत्वमित्ययुक्तम् । किन्तु मृदादीनामेव । व्युत्पत्त्यनुसारित्वात्प्रतिपादनस्येत्यत आह ॥ व्युत्पत्ति-

ಯಾವ ಕಾರಣದಿಂದ ಶಬ್ದಶಕ್ತಿಯನ್ನು ಬಲ್ಲವರಾದ ವೃದ್ಧರಿಂದ ಶಾಸ್ತ್ರಲಿಂಗ ಗಳಿಂದ ಸಂಪಾದಿಸಲ್ಪಟ್ಟ (ದೊರಕಿಸಲ್ಪಟ್ಟ) ಆ ವಾಚ್ಯವಾಚಕಭಾವ ಸಂಬಂಧ ಜ್ಞಾನರೂಪ ವ್ಯುತ್ಪತ್ತಿಯು ಶಬ್ದಶಕ್ತಿಯನ್ನರಿಯದ ಮೂರ್ಖರಿಂದ ಸಂಪಾದಿಸಲ್ಪಟ್ಟ ವ್ಯುತ್ಪತ್ತಿಗಿಂತ ಪ್ರಬಲವಾಗಿರುವುದೋ ಈ ಕಾರಣದಿಂದ ಆಯಾಯ ನಾಮಗಳೇ ವಾಚಕವಾಗಿ ಉಳ್ಳ ಆಯಾಯ ಅಭಿಮಾನಿದೇವತೆಗಳೇ ಪ್ರತಿಪಾದಿಸಲ್ಪಡುತ್ತಾರೆ.

— ಪದಾರ್ಥದೀಪಿಕಾ —

ಆಕ್ಷೇಪಿಸುವವನಿಗೆ ಅತೀಂದ್ರಿಯವಾದ ವಸ್ತುವಿಷಯಕವಾದ ವ್ಯವಹಾರವೇ ಇಲ್ಲವಾಗುವ ಪ್ರಸಂಗವು ಬರುತ್ತದೆಯೆಂಬುದನ್ನು ಸೂಚಿಸಲು "ಶಾಸ್ತ್ರೋಕ್ತ ವಸ್ತುನಶ್ಚ" ಎಂಬುದಾಗಿ ಸಾಮಾನ್ಯವಾಗಿ ಹೇಳಿರುತ್ತಾರೆ ಹಾಗಾದರೆ ಈ ಕುಟಿಲಿಕ (ದೇವತಾದರ್ಶನಮೂಲಕವಾಗದ) ವ್ಯುತ್ಪತ್ತಿಯು ದುರ್ಬಲವಾದುದು ಮೃದಾದಿಗಳು ಸಾಕ್ಷಾತ್ಕರಿಸಲ್ಪಟ್ಟರೇನೇ ಪ್ರಬಲವಾಗುವದು ಆದುದರಿಂದ, ದೇವತೆಗಳು ಮುಖ್ಯ ಪ್ರತಿಪಾದ್ಯರೆಂಬುವುದು ಸರಿಯಾದುದಲ್ಲ ಮೃದಾದಿಗಳೇ ಮುಖ್ಯಾರ್ಥವೆಂಬುದೇ ಸರಿಯಾದುದು ಏಕೆಂದರೆ ಪ್ರತಿಪಾದನವು ವ್ಯುತ್ಪತ್ತಿಯನ್ನು ಅನುಸರಿಸುತ್ತದೆ ಈ ಆಶಂಕೆಯನ್ನು "ವ್ಯುತ್ಪತ್ತಿ ಸಾ" ಇತ್ಯಾದಿ

— ವಿಶೇಷಾರ್ಥಪ್ರದೀಪಿಕಾ —

ಎಂಬುದಾಗಿ ಸಾಮಾನ್ಯವಾಗಿ ಹೇಳಿದುವರ ಪ್ರಯೋಜನವನ್ನು 'ನ ಕೇವಲಂ" ಇತ್ಯಾದಿ ವಚನದಿಂದ ಹೇಳುತ್ತಾರೆ 'ಧರ್ಮದಾವಪಿ''—ಚೋದನಾ ಲಕ್ಷಣಾರ್ಥೋ ಧರ್ಮಃ"ಎಂಬಲ್ಲಿ ಚೋದನಾ (ವಿಧಿ) ಪ್ರಮಾಣವುಳ್ಳದ್ದು ಧರ್ಮವು, ಇನ್ನುಳಿದ ಶ್ಯೇನಾದಿಗಳು ಅಧರ್ಮಗಳು, ಹೀಗೆ ಜೈಮಿನ್ಯಾಚಾರ್ಯರು ಹೇಳಿದ್ದಾರೆ ಅಲ್ಲಿ "ತ್ರಿವೃತ್ಪಂಚದಶಃ ಸಪ್ತದಶಏಕವಿಂಶಃ ಏತಾನಿ ವಾವ ಜ್ಯೋತೀಂಷಿ ಯ ಏತಸ್ಯ ಸ್ತೋಮಃ'' ಇತ್ಯಾದಿ ವಾಕ್ಯಬಲದಿಂದ "ಜ್ಯೋತಿಷಾಂ ಸ್ತೋಮೋ ಯಸ್ಮಿನ್'' ಎಂಬುದಾಗಿ ಹೇಳಿದ ರೀತಿಯಿಂದ ಜ್ಯೋತಿಷ್ಟೋಮಾದಿ ಶಬ್ದಗಳ

रिति सेति । या विदितशब्दशक्तिभिर्वृद्धैः शास्त्रलिङ्गतः सम्पादिता । मूर्खैरविदितशक्तिभिर्व्युत्पादिता व्युत्पत्तिर्मूर्खव्युत्पत्तिः । हिशब्दो हेतुसूचकः । न हि व्युत्पत्तिविषयस्य परोक्षत्वमपरोक्षत्वं च व्युत्पत्तेर्दौर्बल्ये प्राबल्ये च कारणम् । अपि तर्हि व्युत्पादकस्य शब्दशक्तितत्त्वज्ञत्वम् । तदनुसारेण व्युत्पादनं प्राबल्ये । अन्यत्तु दौर्बल्ये । अन्यथा एरण्डे साक्षात्कृते चन्दनशब्दस्य व्युत्पत्तिः प्रबला; लिङ्गतो

— ಪದಾರ್ಥದೀಪಿಕಾ —

ವಚನದಿಂದ ಪರಿಹರಿಸುತ್ತಾರೆ. "ಸಾ' – ಶಬ್ದಶಕ್ತಿಜ್ಞಾನವುಳ್ಳ ವೃದ್ಧರಿಂದ ಶಾಸ್ತ್ರಲಿಂಗದಿಂದ ಸಂಪಾದಿಸಲ್ಪಟ್ಟ ವ್ಯುತ್ಪತ್ತಿಯು ಯಾವದೋ ಅದು "ಮೂರ್ಖೈಃ"- ಶಬ್ದಶಕ್ತಿಯನ್ನು ತಿಳಿಯದವರಿಂದ, ವ್ಯುತ್ಪಾದಿಸಲ್ಪಟ್ಟದ್ದು ಮೂರ್ಖವ್ಯುತ್ಪತ್ತಿಯು "ಹಿ" ಶಬ್ದವು ಕಾರಣತ್ವ ಸೂಚಕವಾಗಿದೆ ವ್ಯುತ್ಪತ್ತಿಯ ವಿಷಯವು ಪರೋಕ್ಷ (ಇಂದ್ರಿಯಾಗೋಚರವಾಗಿರುವುದು) ಅಪರೋಕ್ಷ (ಇಂದ್ರಿಯಗೋಚರ) ವಾಗಿರುವುದು, ಇದು ವ್ಯುತ್ಪತ್ತಿಯ ದೌರ್ಬಲ್ಯದಲ್ಲಿ ಹಾಗು ಪ್ರಾಬಲ್ಯದಲ್ಲಿ ಕಾರಣವಲ್ಲ ಆದರೆ ವ್ಯುತ್ಪಾದಕನ ಶಬ್ದ-ಶಕ್ತಿತತ್ತ್ವಜ್ಞಾನವೇ ಕಾರಣವು ಇದನ್ನನುಸರಿಸಿ ವ್ಯುತ್ಪಾದಿಸುವುದು ಪ್ರಾಬಲ್ಯದಲ್ಲಿ ಕಾರಣವು ಇನ್ನುಳಿದುದು ದೌರ್ಬಲ್ಯದಲ್ಲಿ ಕಾರಣವು ಇಲ್ಲದಿದ್ದಲ್ಲಿ (ಏರಂಡ) ಔಡ್ಲ ವೃಕ್ಷದ ಸಾಕ್ಷಾತ್ಕಾರವಾಗಿರಲು, ಅದರಲ್ಲಿ ಚಂದನಶಬ್ದದ ವ್ಯುತ್ಪತ್ತಿಯು ಪ್ರಬಲವಾಗಲಿ! ಲಿಂಗದಿಂದ ತಿಳಿಯಲ್ಪಟ್ಟ ಚಂದನವಿಷಯದಲ್ಲಿ ಆ ಶಬ್ದದ ವ್ಯುತ್ಪ

— ವಿಶೇಷಾರ್ಥಪ್ರದೀಪಿಕಾ —

ವ್ಯುತ್ಪತ್ತಿಯು ಸಂಭವಿಸುತ್ತದೆ ಹೀಗ ಭಾವ 'ಆಕ್ಷಿಪತಃ' —ಬೌದ್ಧಮುಂತಾದವರಿಗೆ ಮೂರ್ಖೈಃ ಎಂಬದು ಅನುವಾದ "ಅವಿದಿತಶಕ್ತಿಭಿಃ'' ಎಂಬುದು ಅದರ ವ್ಯಾಖ್ಯಾನವು ಅಂದರೆ "ವಾಸ್ತವವಾಗಿ ಶಬ್ದದ ಮುಖ್ಯವೃತ್ತಿಯು ಯಾವುದರಲ್ಲಿಯೋ ಆ ಅರ್ಥವನ್ನು ತಿಳಿಯದವರಿಂದ, ಹೀಗೆ ಅದರ ಅರ್ಥ

"ಇದಂ'' - ಶಕ್ತಿತತ್ತ್ವಜ್ಞಾನವನ್ನು ಅನುಸರಿಸಿ, ಶಕ್ತಿವ್ಯುತ್ಪಾದನರೂಪ ಕಾರಣವು ದೇವತೆ ಮುಂತಾದ ಅರ್ಥಗಳಲ್ಲಿ ಶಕ್ತಿಯನ್ನು ವ್ಯುತ್ಪಾದನಮಾಡುವ ಸೂತ್ರಕಾರರು ಶಕ್ತಿತತ್ತ್ವದ ಅಭಿಜ್ಞರು ಹೀಗೆ ಭಾವ

"ಇತಿ'' ಶಬ್ದಕ್ಕೆ "ಇತಿಹಿ''ಶಬ್ದಸೂಚಿತ ಹೇತೋಃ'' (ಹೀಗೆ ಹಿ ಶಬ್ದಸೂಚಿತವಾದ ಕಾರಣತ್ವದಿಂದ) ಎಂಬುದಾಗಿ ಕಾರಣತ್ವಾರ್ಥಕತ್ವವನ್ನು ತಿಳಿಯಬೇಕು

दृढयुक्तिविरोधे तु सर्वत्र न्याय ईदृश ॥ २-१-३ ॥

ज्ञापितचन्दने दुर्बलेति स्यात् । अस्ति चेदं कारणं प्रकृत इति इयमेव प्रबला नेतरेति । यद्यस्मादेवं तस्मात्तन्नामान एवैत इति पूर्वेण सम्बन्धः ।

नन्वेतदयुक्तम् । यद्युक्तिविरोधेन वेदस्य स्वार्थात्प्रच्यावनम् । तस्य सकलप्रमाणापेक्षया प्राबल्यात् । यत्क्वचित्स्वार्थात्प्रच्यावनं तदुपजीव्यविरोध एव । न चात्र तथेत्यत आह ॥ दृढेति । विरोधे

ಎಲ್ಲ ಕಡೆಗಳಲ್ಲಿಯೂ ವೇದಕ್ಕೆ ವ್ಯಾಪ್ತಿ ಪಕ್ಷಧರ್ಮತೆಗಳಿಂದ ಕೂಡಿದ ದೃಢ ಯುಕ್ತಿಯಿಂದ ವಿರೋಧವು ಬರುತ್ತಿದ್ದಲ್ಲಿ ಇದೇ ರೀತಿಯಾಗಿರುವ, ಬೇರೆ ಅರ್ಥವನ್ನು ಒಪ್ಪಿ ವಿರೋಧವನ್ನು ಪರಿಹರಿಸುವುದೆಂಬ ಪ್ರಕಾರವನ್ನು ತಿಳಿಯತಕ್ಕದ್ದು "೨-೧-೩"

## — ಪದಾರ್ಥದೀಪಿಕಾ —

ತ್ತಿಯು ದುರ್ಬಲವೆಂದಾಗಲಿ! ಮತ್ತು ಇದೆಲ್ಲ ಕಾರಣವು ಪ್ರಕೃತದಲ್ಲಿ ಇರುವುದರಿಂದ ಈ ವ್ಯುತ್ಪತ್ತಿಯೇ ಪ್ರಬಲವು," ಉಳಿದುದಲ್ಲ ಹೀಗ ಅರ್ಥ ''ಯತ್''– ಯಾವ ಕಾರಣದಿಂದ ಹೀಗೆ ಇರುತ್ತದೆಯೋ ಆ ಕಾರಣದಿಂದ, "ತತ್ತನ್ನಾಮಾನ ಏವೈತೇ" (ಆಯಾಯ ನಾಮದಿಂದ ವಾಚ್ಯರಾಗಿರುವವರೇ ಇವರು) ಎಂಬುದಾಗಿ ಹಿಂದಿನ ಪದಗಳೊಡನೆ ಅನ್ವಯವಿದೆ

ಇನ್ನು- "ಯುಕ್ತಿವಿರೋಧದಿಂದ, ವೇದಕ್ಕೆ ತನ್ನ ಅರ್ಥವನ್ನು ಬಿಡಿಸುವುದೆಂಬ ಈ ಸಂಗತಿಯು ಯುಕ್ತವಲ್ಲ ಏಕೆಂದರೆ- ವೇದಕ್ಕೆ ಸಕಲ ಪ್ರಮಾಣಗಳಿಗಿಂತ ಪ್ರಾಬಲ್ಯವಿರುತ್ತದೆ ಎಲ್ಲಿಯಾದರೂ ಸ್ವಾರ್ಥವನ್ನು ಬಿಡಿಸುವುದಿದ್ದರೆ ಅದು ಉಪಜೀವ್ಯ ಪ್ರಮಾಣದಿಂದ ವಿರೋಧವು ಬರುವಾಗಲೇ! ಆದರೆ ಇಲ್ಲಿ ಹಾಗೆ ಇಲ್ಲ", ಈ ಆಶಂಕೆಯನ್ನು ''ದೃಢ'' ಇತ್ಯಾದಿ ವಚನದಿಂದ ಪರಿ

## — ವಿಶೇಷಾರ್ಥಪ್ರದೀಪಿಕಾ —

"ಪ್ರಾಬಲ್ಯಾತ್"-ಪ್ರಾಬಲ್ಯಮಾಗಮಸ್ಯೈವ ಜಾತ್ಯಾತೇಷು ತ್ರಿಷು ಸ್ಮೃತಂ" ಎಂಬ ವಚನವಿದ್ದುದರಿಂದಪ್ರಾಬಲ್ಯವೆಂದು ತಿಳಿಯಬೇಕು "ಯತ್ಕ್ವಚಿತ್"— "ಸರ್ವಂ ವಿಲಾಪ್ಯಾಂತಸ್ತಮಸಿ ವಿಲೀನಃ" ಇತ್ಯಾದಿ ಸಂದರ್ಭಗಳಲ್ಲಿ, ಹೀಗೆ ಅರ್ಥ.

वेदस्येति शेषः । अयं भावः । श्रुतेरर्थप्रच्यावनस्यायुक्ततां वदतः कोऽभिसन्धिः । किं विरुद्धयोरेव प्रामाण्यमुतागमविरुद्धाया युक्तेरप्रामाण्यं । नाद्यः । वस्तुविकल्पप्रसङ्गात् । न द्वितीयः । व्याप्तिपक्षधर्मतापेतायास्तदयोगात् । कथं तर्ह्युपजीव्यविरोधे त्वित्याद्युक्तमिति चेत् । उपलक्षणत्वेनेति ब्रूमः । उपजीव्यं खलु नोपजीव्यमित्येव बाधकम् । किन्तु प्रबलत्वेन । तद्यदि युक्त्यन्तरस्यापि स्यात्तदा कुतो न बाधकतेति । यद्वाऽधिकरणोपाधिमनेनाह । न केवलमत्रोदा-

— ಪದಾರ್ಥದೀಪಿಕಾ —

ಹರಿಸುತ್ತಾರೆ "ವಿರೋಧೇ' ಇಲ್ಲಿ ,'ವೇದಸ್ಯ'' ಎಂಬುದು ಶೇಷವಾಗಿದೆ ಇಲ್ಲಿಯ ಭಾವವು— ''ಶ್ರುತಿಗೆ ತನ್ನ ಅರ್ಥವನ್ನು ಬಿಡಿಸುವುದು ಅಯುಕ್ತವೆಂದು ಹೇಳುವವನ ಅಭಿಪ್ರಾಯವು ಯಾವದು? ವಿರುದ್ಧಗಳಿಗೇ ಪ್ರಾಮಾಣ್ಯ ವೆಂಬುದೋ? ಇಲ್ಲವೇ ಆಗಮವಿರುದ್ಧವಾದ ಯುಕ್ತಿಗೆ ಅಪ್ರಾಮಾಣ್ಯ ವೆಂಬುದೋ? ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ ವಸ್ತುವಿನಲ್ಲಿ ದ್ವೈವಿಧ್ಯವಿರುವ ಪ್ರಸಂಗವು ಬರುತ್ತದೆ ಎರಡನೆಯ ಪಕ್ಷವು ಸರಿಯಾದು ದಲ್ಲ ಏಕೆಂದರೆ- ವ್ಯಾಪ್ತಿ ಪಕ್ಷಧರ್ಮತೆಯುಳ್ಳ ಯುಕ್ತಿಗ ಅಪ್ರಾಮಾಣ್ಯವು ಯುಕ್ತವಾಗದು ಹಾಗಾದರ '' ಉಪಜೀವ್ಯ ವಿರೋಧೇ ತು '' ಇತ್ಯಾದಿಯಾಗಿ ಹೇಳಿದುದು ಹೇಗೆ? ಎಂದರೆ — '' ಉಪಲಕ್ಷಣವಾಗಿ '' ಎಂಬುದಾಗಿ ಉತ್ತರ ಹೇಳುತ್ತೇವೆ ಉಪಜೀವ್ಯವಾದರೋ ಕೇವಲ ಉಪಜೀವ್ಯವೆಂಬ ಕಾರಣ ದಿಂದಲೇ ಬಾಧಕವಲ್ಲ ಆದರೆ ಪ್ರಬಲವಾದುದೆಂಬ ಕಾರಣದಿಂದಲೇ! ಅದು ಬೇರೆ ಯುಕ್ತಿಗೂ ಇರುತ್ತಿದ್ದರೆ ಆಗ ಅದಕ್ಕೆ ಬಾಧಕತ್ವವು ಏಕೆ ಬರಲಾರದು? ಹೀಗ ಇಲ್ಲಿಯ ಅರ್ಥ ಅಥವಾ ಇದರಿಂದ, ಅಧಿಕರಣದ ಉಪಾಧಿಯನ್ನು

— ವಿಶೇಷಾರ್ಥಪ್ರದೀಪಿಕಾ —

'ಇತ್ಯಾದ್ಯುಕ್ತಂ'' – ಹಿಂದಿನ ಅಧಿಕರಣದಲ್ಲಿ "ಉಪಜೀವ್ಯ ವಿರೋಧೇ ತು'' ವೇದಸ್ಯಾನ್ಯಾರ್ಥಕಲ್ಪನಾ" ಈ ಮುಂತಾದುದು ಹೇಳಲ್ಪಟ್ಟಿರುವದು, ಹೀಗೆ ಅರ್ಥ "ಉಪಲಕ್ಷಣತಯಾ" ದೃಢಯುಕ್ತಿವಿರೋಧದ ಸಂಗ್ರಾಹಕವಾಗಿ

"ಇತ್ಯೇವ ಬಾಧಕಂ'' – ಉಪಜೀವ್ಯವೆಂಬ ಕಾರಣದಿಂದಲೇ ಬಾಧಕ ವಾಗುವುದಾದರೆ ''ಇದಂ ರಜತಂ" ''ಎಂಬ ಭ್ರಮವು, "ಇದು ರಜತವಲ್ಲ'' ಎಂಬ ಬಾಧಕಜ್ಞಾನಕ್ಕೆ ಬಾಧಕವೆಂದೆನಿಸುವ ಪ್ರಸಂಗವು ಬರುತ್ತದೆಂದು ಭಾವ

हरणे । किन्तु सर्वत्रापि वेदवाक्ये प्रमितव्याप्तिपक्षधर्मतावद्युक्ति-विरोधे सतीदृश एवान्यार्थस्वीकारेण विरोधपरिहारो न्यायः प्रकारो द्रष्टव्य इति ॥ २-१ ३ ॥

॥ ॐ असदिति चेन्न प्रतिषेधमात्रत्वात् ॐ ॥ ननु चानारम्भणीयमेवेदमधिकरणम् । न विलक्षणत्वादित्यनेनैव वेदस्य सकलयुक्तिविरोधानां परिहृतत्वात् । दृढयुक्तिविरोधपरिहारस्य चाभि-

— ಪದಾರ್ಥದೀಪಿಕಾ —

ಹೇಳುತ್ತಾರೆ ಇಲ್ಲಿ ಕೇವಲ ಉದಾಹರಣದಲ್ಲಿಯೇ ಇಲ್ಲ, ಆದರೆ ಸರ್ವತ್ರ ವೇದ ವಾಕ್ಯದಲ್ಲೆಲ್ಲ— ಪ್ರಮಿತವಾದ ವ್ಯಾಪ್ತಿ ಪಕ್ಷಧರ್ಮತೆಯುಳ್ಳ ಯುಕ್ತಿವಿರೋಧವು ಬರುತ್ತಿದ್ದಲ್ಲಿ ಅಲ್ಲಿ ಇಂಥದೇ ಆದ ಅನ್ಯಾರ್ಥವನ್ನು ಸ್ವೀಕರಿಸಿ ವಿರೋಧ ಪರಿಹಾರವೆಂಬ ನ್ಯಾಯ— ಪ್ರಕಾರವನ್ನು ತಿಳಿಯಬೇಕು ಹೀಗೆ ಅರ್ಥ ॥ ೨–೧–೩ ॥

— ಅಭಿಮಾನ್ಯಧಿಕರಣವು ಮುಗಿದುದು —

॥ ಓಂ ॥ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ॥ ಓಂ ॥ ಈ ಅಧಿಕರಣವು ಅನಾರಂಭಣೀಯವೇ ! ಏಕೆಂದರೆ "ನ ವಿಲಕ್ಷಣತ್ವಾತ್" ಈ ಅಧಿಕರಣದಿಂದಲೇ ವೇದಕ್ಕೆ (ತೋರುವ) ಸಕಲ ಯುಕ್ತಿವಿರೋಧಗಳನ್ನು ಪರಿಹರಿಸಲಾಗಿರುತ್ತದೆ ಹಾಗು ದೃಢವಾದ ಯುಕ್ತಿಯಿಂದ ಬರುವ ವಿರೋಧದ

— ವಿಶೇಷಾರ್ಥಪ್ರದೀಪಿಕಾ —

"ಅನೇನ"—ದೃಢಯುಕ್ತಿವಿರೋಧೇತು" ಇತ್ಯಾದಿ ವಚನದಿಂದ 'ಸರ್ವತ್ರಾಪಿ" – ಹಿಂದಿನ ಅಧ್ಯಾಯದಲ್ಲಿ ಪ್ರತಿಯೊಂದು ಅಧಿಕರಣದಲ್ಲಿಯೂ ಪೂರ್ವಪಕ್ಷದ ಯುಕ್ತಿಗಳಿಗಿಂತ ಸಿದ್ಧಾಂತಯುಕ್ತಿಗಳು ವ್ಯಾಪ್ತಿಮುಂತಾದದುಳ್ಳವುಗಳಾದುದರಿಂದ, ಆಪಾತವಾಗಿ ಪೂರ್ವಪಕ್ಷದಲ್ಲಿ ಹೇಳಿದಂತೆ ತೋರಿದ ಅರ್ಥವನ್ನು ಬಿಡಿಸುವುದು, ಈ ಅಧಿಕರಣ ನ್ಯಾಯದಿಂದ, ಎಂಬುದಾಗಿ ಹೇಳಿದ್ದಾಗುತ್ತದೆ "ನ್ಯಾಯಃ" ಎಂಬುದರ ಅರ್ಥವು 'ಪ್ರಕಾರಃ" ಎಂಬುದು ॥ ೨ ೧ ೩॥

ಈ ಅಧಿಕರಣದ ಉಪಾಧಿಯನ್ನು ಹೇಳುವದರಲ್ಲಿ ಕಾರಣವನ್ನು "ನನು ಚ" ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ "ಪರಿಹಾರಸ್ಯ"— ಶ್ರುತಿಗೆ ಮೇಲೆ (ಆಪಾತವಾಗಿ) ತೋರುವ ಅರ್ಥವನ್ನು ಬಿಡಿಸಿ, ಅವಿರುದ್ಧವಾದ ಅರ್ಥಾಂತರಕಲ್ಪನರೂಪವಾದ ಪರಿಹಾರವನ್ನು ಹೇಳಲಾಗಿದೆಯೆಂದು ಭಾವ

## ॐ असदिति चेन्न प्रतिषेधमात्रत्वात् ॐ

अल्पवाक्ययुता युक्तिर्बहुलैव विरोधिनी ॥
यत्र तत्र कथं वस्तुनिर्णय स्यादितीरिते ॥
विरोधियुक्तिबाहुल्यादिति न्यायो विनिश्चित. ॥

मान्यधिकरणन्यायसिद्धत्वादित्यतो गतार्थतां परिहरन्नधिकरणस्यो-पाधिमप्याह ॥ अल्पवाक्येति ।' यत्र यदा वेदस्य वाक्ययुता युक्तिर्विरोधिनी स्यात् । तत्र तदा वस्तुनिर्णयः कथं स्यात् । इति पूर्वपक्षिणेरिते सति तद्विरोधियुक्तीनां बाहुल्यात्प्राबल्याद्वस्तुनिर्णयो

ಯಾವಾಗ್ಗೆ, ಅಲ್ಪ ವಾಕ್ಯಗಳಿಂದ ಸಹಿತವಾದ ಯುಕ್ತಿಯು ಹೆಚ್ಚಾಗಿಯೇ ವಿರೋಧಿಯಾಗುವದೋ ಆವಾಗ್ಗೆ ವಸ್ತುವಿನ ನಿಶ್ಚಯವು ಹೇಗೆ ಆದೀತು ? ಹೀಗೆ ಪೂರ್ವಪಕ್ಷಿಯಿಂದ ಹೇಳಲ್ಪಡುತ್ತಿರಲು ಪೂರ್ವಪಕ್ಷದಲ್ಲಿ ಹೇಳಿದ ಯುಕ್ತಿಗಳಿಗಿಂತ ಸಿದ್ಧಾಂತ ಯುಕ್ತಿಗಳು ಪ್ರಬಲವಾದುದರಿಂದ ವಸ್ತುವಿನ ಬಗ್ಗೆ ನಿರ್ಣಯವು ಆಗುವದು. ಹೀಗೆ ಈ ಅಧಿಕರಣದಲ್ಲಿ ನ್ಯಾಯವು ನಿರ್ಣಯಿಸಲ್ಪಟ್ಟಿದೆ.

### — ಪದಾರ್ಥದೀಪಿಕಾ —

ಪರಿಹಾರವು ಅಭಿಮಾನ್ಯಧಿಕರಣದಲ್ಲಿ ಹೇಳಿದ ನ್ಯಾಯದಿಂದ ಸಿದ್ಧವಾಗುತ್ತದೆ ಹೀಗ ಆಶಂಕೆಯು ಬರುವುದರಿಂದ, ಗತಾರ್ಥತೆಯನ್ನು ಪರಿಹರಿಸುತ್ತ ಈ ಅಧಿಕರಣದ ಉಪಾಧಿಯನ್ನು "ಅಲ್ಪವಾಕ್ಯ" ಇತ್ಯಾದಿ ವಚನದಿಂದ ಹೇಳುತ್ತಾರ "ಯತ್ರ"-ಯಾವಾಗ ವೇದಕ್ಕೆ ವಾಕ್ಯ ಸಹಿತವಾದ ಯುಕ್ತಿಯು ವಿರೋಧಿಯಾಗುವದೋ "ತತ್ರ"-ಆವಾಗ ವಸ್ತುನಿರ್ಣಯವು ಹೇಗೆ ಆದೀತು ? ಹೀಗೆ ಪೂರ್ವ ಪಕ್ಷಿಯಿಂದ ಹೇಳಲ್ಪಡಲು, ಅದರ ವಿರೋಧಿಯಾದ ಯುಕ್ತಿಗಳಿಗೆ ಪ್ರಾಬಲ್ಯವಿದ್ದುದರಿಂದ (ಪ್ರಾಧಾನ್ಯವಿದ್ದುದರಿಂದ) ವಸ್ತು

### — ವಿಶೇಷಾರ್ಥಪ್ರದೀಪಿಕಾ —

"ಅಲ್ಪವಾಕ್ಯಯುತಾ" ಎಂಬಲ್ಲಿಯ "ಅಲ್ಪ" ಪದದ ಕೃತ್ಯ (ಪ್ರಯೋಜನ) ವನ್ನು ಮುಂದೆ ಹೇಳುವವರಿದ್ದುದರಿಂದ, "ವಾಕ್ಯಯುತಾ" ಎಂಬುದಾಗಿ ಮಾತ್ರವೇ ಅನುವಾದ ಮಾಡಿದ್ದಾರೆ 'ಬಾಹುಲ್ಯಾತ್" ಎಂಬುದು ಅನುವಾದವು 'ಪ್ರಾಬಲ್ಯಾತ್" ಎಂಬುದು ವ್ಯಾಖ್ಯಾನವು "ವಸ್ತುನಿರ್ಣಯ" ಪದದ ಅನುವೃತ್ತಿಯು ಇದೆಯೆಂದು ಬಗೆದು "ವಸ್ತುನಿರ್ಣಯೋ ಭವೇದಿತಿ" ಎಂಬುದಾಗಿ ಹೇಳಿದ್ದಾರೆ ಇಲ್ಲಿ "ಅತ್ರ" ಎಂಬುದು ಶೇಷವು ಅದರ

भवेदिति सिद्धान्तः । इत्येषोऽत्राधिकरणे न्यायो विनिश्चितः ।

एतदुक्तं भवति । पूर्वाधिकरणे प्रत्यक्षादिगृहीतव्याप्त्यादिमत्त्वेन दृढया युक्त्या विरुद्धत्वाद्वेदैकदेशस्याप्रामाण्ये सति तद्दृष्टान्तेन ब्रह्मणो जगत्कारणत्वाभिधायकस्यापि वेदस्य वेदत्वादप्रामाण्ये तदसिद्धिरिति पूर्वः पक्षः । सिद्धान्तस्तु युक्तिवद्वेदस्याप्यपौरुषेयत्वेन दृढत्वाद्वास्तवविरोधस्यानुपपत्तेरविरुद्धार्थकल्पनोपपत्तेर्नाप्रामाण्यमिति । इह पुनर्वेदवाक्यान्तरसंवादेन सुदृढया युक्त्या विरुद्धत्वाद्ब्रह्मणो जग-

— ಪದಾರ್ಥದೀಪಿಕಾ —

ನಿರ್ಣಯವಾಗುತ್ತದೆಯೆಂಬುದು ಸಿದ್ಧಾಂತವು "ಇತಿ"– ಹೀಗೆ, ಈ ನ್ಯಾಯವು "ಅತ್ರ"– ಈ ಅಧಿಕರಣದಲ್ಲಿ ನಿರ್ಣಯಿಸಲ್ಪಟ್ಟಿದೆ

''ಹಿಂದಿನ ಅಧಿಕರಣದಲ್ಲಿ– ''ಪ್ರತ್ಯಕ್ಷಾದಿಗಳಿಂದ ಗ್ರಹಿಸಲ್ಪಟ್ಟ ವ್ಯಾಪ್ತ್ಯಾದಿಗಳುಳ್ಳದ್ದಾದುದರಿಂದ ದೃಢವಾದ ಯುಕ್ತಿಯಿಂದ ವಿರುದ್ಧವಾದುದರಿಂದ ವೇದದ ಏಕದೇಶಕ್ಕೆ ( ಕೆಲವಾಕ್ಯಕ್ಕೆ ) ಅಪ್ರಾಮಾಣ್ಯವು ಬರಲು, ಆ ವೇದೈಕದೇಶ ವಾಕ್ಯದ ದೃಷ್ಟಾಂತದಿಂದ' ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳುವ ವೇದಕ್ಕೂ ವೇದತ್ವವಿದ್ದುದರಿಂದ ಅಪ್ರಾಮಾಣ್ಯವು ಬರುತ್ತಿರಲು, ಬ್ರಹ್ಮನಿಗೆ ಜಗತ್ಕಾರಣತ್ವವು ಸಿದ್ಧಿಸಲಾರದು'' ಹೀಗೆ ಪೂರ್ವಪಕ್ಷವು ಆದರೆ ''ಯುಕ್ತಿಯ ಹಾಗೆ, ಅಪೌರುಷೇಯವಾದುದರಿಂದ ವೇದವೂ ದೃಢವಾದುದರಿಂದ, ವಾಸ್ತವವಿರೋಧವು ಸಂಭವಿಸುವು (ಯುಕ್ತವೆನಿಸುವು) ದಿಲ್ಲವಾದುದರಿಂದ, ಅವಿರುದ್ಧವಾದ ಅರ್ಥವನ್ನು ಕಲ್ಪಿಸಲು ಬರುವುದರಿಂದ, ವೇದಕ್ಕೆ ಅಪ್ರಾಮಾಣ್ಯವು ಬರುವುದಿಲ್ಲ,'' ಹೀಗೆ ಸಿದ್ಧಾಂತವು ಆದರೆ ಈ ಅಧಿಕರಣದಲ್ಲಿಯಾದರೋ. "ವೇದವಾಕ್ಯಾಂತರಸಂವಾದದಿಂದ ಅತ್ಯಂತದೃಢವಾದ ಯುಕ್ತಿಯಿಂದ ವಿರುದ್ಧವಾದುದರಿಂದ, ಬ್ರಹ್ಮನ ಜಗತ್ಕಾರಣತ್ವವನ್ನು ಪ್ರತಿ

— ವಿಶೇಷಾರ್ಥಪ್ರದೀಪಿಕಾ —

ಅರ್ಥವು "ಅಧಿಕರಣೇ" (ಅಧಿಕರಣದಲ್ಲಿ) ಎಂಬುದು ಇಷ್ಟುಮಾತ್ರದಿಂದ ಗತಾರ್ಥತೆಯ ಪರಿಹಾರವು ಹೇಗೆ? ಎಂಬುದನ್ನು ''ಏತದುಕ್ತಂ ಭವತಿ'' ಇತ್ಯಾದಿ ವಚನಗಳಿಂದ ಹೇಳುತ್ತಾರ "ತದಸಿದ್ಧಿಃ" - ಜಗತ್ಕಾರಣತ್ವದ ಅಸಿದ್ಧಿಯು. ''ಸುದೃಢಯಾ'' - ಹಿಂದೆ ಹೇಳಿದ ಯುಕ್ತಿಯು, ವ್ಯಾಪ್ತಿಮುಂತಾದುದನ್ನುಳ್ಳದ್ದರಿಂದ ದೃಢವಾದುದು ಆದರ ಈ ಅಧಿಕರಣದಲ್ಲಿ

त्कारणत्वाभिधात्रीणां श्रुतीनामेव तत्र प्रामाण्यानुपपत्तौ प्रथमाध्यायोक्तवस्तुनिर्णयो न भवेदिति पूर्व पक्षः । सिद्धान्तस्तु । पूर्वपक्षिणोत्प्रेक्षिताभ्यः श्रुतिसहितयुक्तिभ्योऽपि प्रबलानां तद्विरोधियुक्तीनां

## — ಪದಾರ್ಥದೀಪಿಕಾ —

ಪಾದಿಸುವ ಶ್ರುತಿಗಳಿಗೇನೇ ಆದರ ಬಗ್ಗೆ ಪ್ರಾಮಾಣ್ಯವು ಸಂಭವಿಸದಿರಲು, ಪ್ರಥಮಾಧ್ಯಾಯೋಕ್ತವಾದ ವಸ್ತುನಿರ್ಣಯವು ಆಗಲಾರದು," ಹೀಗೆ ಪೂರ್ವ ಪಕ್ಷವು ಆದರೆ "ಪೂರ್ವಪಕ್ಷಿಯು ಉತ್ಪ್ರೇಕ್ಷಿಸಿ (ಕಲ್ಪಿಸಿ–ಊಹಿಸಿ) ಹೇಳಿದ ಶ್ರುತಿಸಹಿತವಾದ ಯುಕ್ತಿಗಳಿಗಿಂತಲೂ ಅತಿ ಪ್ರಬಲವಾದ ಆದರ ವಿರೋಧಿ

## — ವಿಶೇಷಾರ್ಥಪ್ರದೀಪಿಕಾ —

ಹೇಳಿದ ಯುಕ್ತಿಯು, ವ್ಯಾಪ್ತಿ ಮುಂತಾದುದರಿಂದ ರಹಿತವಾದುದರಿಂದ ದೃಢವಾದುದಲ್ಲ ಏಕೆಂದರೆ "ಅನ್ಯತ್ರ ಅನುಪಕ್ಷೀಣತ್ವೇ ಸತಿ', ಎಂಬುದಾಗಿ ಮುಂದೆ ಹೇಳಲ್ಪಡುವ ಯುಕ್ತಿಯು, ವ್ಯಾಪ್ತಿ ಮುಂತಾದುದರಿಂದ ಸಹಿತವಾದರೂ ವಿರೋಧಿಯು ಆಗುವದಿಲ್ಲ ವಿರೋಧಿಯಾದ "ಭಾವತ್ವಯುಕ್ತಿ,,' ಪರಿಶೇಷ ರೂಪಯುಕ್ತಿ ಇವುಗಳಿಗೆ ಕ್ರಮದಿಂದ ವ್ಯಾಪ್ತಿ ಪಕ್ಷಧರ್ಮತೆಗಳಿಲ್ಲವಾದುದರಿಂದ ದೃಢವಾಗಲಾರದು ಆದುದರಿಂದ, ಯುಕ್ತಿಯು ಸುದೃಢವೆಂಬುದು ಹೇಗೆ? ಹೀಗೆ ಪ್ರಶ್ನಯು ಬರುತ್ತದೆ ಇದು ನಿಜ ಆದರೂ - ವೇದವಾಕ್ಯಗಳ ಸಂವಾದವಿರುವುದು, ಸಂವಾದವಿಲ್ಲದಿರುವುದು, ಇವುಗಳಿಂದ, ಪೂರ್ವೋತ್ತರ ಪಕ್ಷಗಳ ಯುಕ್ತಿಗಳು–ಅದೃಢ, ದೃಢಗಳೆಂಬುದನ್ನು ತಿಳಿಯಬೇಕು ಏಕೆಂದರೆ ಶ್ರುತಿಸಂವಾದವಿರುವದರಿಂದ, ಇಲ್ಲಿರುವ ಯುಕ್ತಿಗಳಿಗೆ ವ್ಯಾಪ್ತಿ ಮುಂತಾದುದು ಅವಶ್ಯವಾದುದು, ಎಂಬುದಾಗಿ ತಾತ್ಪರ್ಯವಿರುತ್ತದೆ ಇದರಿಂದ, ಸೋಪಾನಾರೋಹಣನ್ಯಾಯದಿಂದ (೧) ಯುಕ್ತಿವಿರೋಧ (೨) ದೃಢಯುಕ್ತಿ ವಿರೋಧ (೩) ಸುದೃಢಯುಕ್ತಿವಿರೋಧಗಳನ್ನು ಕ್ರಮದಿಂದ "ನವಿಲಕ್ಷಣತ್ವಾತ್'' ಇತ್ಯಾದಿ ಮೂರು ಅಧಿಕರಣಗಳಲ್ಲಿ ನಿರಾಸಪಡಿಸಿದುದರಿಂದ ಈ ಅಧಿಕರಣಕ್ಕೆ ಸಂಗತಿಯೂ ಸೂಚಿತವಾಯಿತು

"ಶ್ರುತಿಸಹಿತಯುಕ್ತಿಭ್ಯಃ'' – ವಿಶ್ವದ ಪ್ರಾಗಭಾವಕ್ಕೆ ಕಾರಣತ್ವವನ್ನು ಮಾತ್ರ ಸಾಧಿಸುವ ಯುಕ್ತಿಯು ಒಂದು ವಿಯದಾದಿ (ಆಕಾಶಾದಿ) ಗಳಿಗೆ ಪ್ರಲಯದಲ್ಲಿ ಇಲ್ಲದಿರುವಿಕೆಯನ್ನು ಸಾಧಿಸುವ "ಭಾವತ್ವ'' ಯುಕ್ತಿಯು ಇನ್ನೊಂದು ವಿಶ್ವದ ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಾಧನಮಾಡುವ "ಪರಿಶೇಷ'' ರೂಪಯುಕ್ತಿಯು ಮತ್ತೊಂದು ಈ ಕಾರಣದಿಂದ, ' ಯುಕ್ತಿಭ್ಯಃ''

सद्भावात्तद्विरुद्धानां पूर्वपक्षश्रुतियुक्तीनामप्रामाण्यादुपपन्नतरः प्रागुक्तोऽर्थ इति । अतः पूर्वोत्तरपक्षन्याययोरगतत्वेन युक्तोऽधिकरणारम्भ इति । एतच्चानुपदमेवोदाहरणेन प्रपञ्चयिष्यामः । नन्वेवं सति

— ಪದಾರ್ಥದೀಪಿಕಾ —

ಯುಕ್ತಿಗಳು ಇರುವುದರಿಂದ, ಈ ಯುಕ್ತಿವಿರುದ್ಧಗಳಾದ ಪೂರ್ವಪಕ್ಷದ ಶ್ರುತಿ ಯುಕ್ತಿಗಳಿಗೆ ಅಪ್ರಾಮಾಣ್ಯವು ಬರುವುದರಿಂದ, ಹಿಂದೆ ಹೇಳಿದ ಸಮ ನ್ವಯಾಧ್ಯಾಯಾರ್ಥ (ವಸ್ತು) ನಿರ್ಣಯವು ಅತ್ಯಂತ ಯುಕ್ತಿಯುಕ್ತವಾಗಿ ಸಂಭ ವಿಸುತ್ತದೆ," ಹೀಗೆ ಸಿದ್ಧಾಂತವು ಆದುದರಿಂದ, ಪೂರ್ವೋತ್ತರ ಪಕ್ಷಗಳಲ್ಲಿಯ (ಹೇಳಲ್ಪಡುವ) ನ್ಯಾಯಗಳು, ಹಿಂದೆ ಹೇಳಲ್ಪಟ್ಟಿಲ್ಲವಾದುದರಿಂದ, ಈ ಅಧಿ ಕರಣದ ಆರಂಭವು ಯುಕ್ತವಾದುದು " ಹೀಗೆ ಹೇಳಲ್ಪಟ್ಟದ್ದಾಗುತ್ತದೆ ಇದನ್ನು, ಕೂಡಲೇ (ನೇರ ಮುಂದಿನ ಗ್ರಂಥದಿಂದ) ಉದಾಹರಣದೊಂದಿಗೆ ವಿಶದಪಡಿಸುವೆವು

— ವಿಶೇಷಾರ್ಥಪ್ರದೀಪಿಕಾ —

ಎಂಬುದಾಗಿ ಹೇಳಿದ್ದಾರೆ ಮುಂದೆ ಹೇಳಲ್ಪಡುವ, ಅಕರ್ತೃಕತ್ವ, ಜೀವಕರ್ತೃ ಕತ್ವ ಸಾಧಕಯುಕ್ತಿಗಳನ್ನೂ ಸಂಗ್ರಹಿಸಬೇಕು ಸಂವಾದಿಯಾದ ಶ್ರುತಿಯು ಮುಂದೆ ವ್ಯಕ್ತವಾಗುವದು 'ತದ್ವಿರೋಧಿಯುಕ್ತೀನಾಂ-''– ನಿಷೇಧ್ಯೈಕ ಸ್ವರೂಪತ್ವ, ಕಾರ್ಯತ್ವ, ವಿನಾಶತ್ವ, ಈ ಮುಂತಾದ ಯುಕ್ತಿಗಳಿಗೆ ''ಅಪ್ರಾಮಾಣ್ಯಾತ್"– ಶ್ರುತಿಗಳಿಗ' ಮೇಲೆ ಆಪಾತವಾಗಿ ತೋರುವ ಅರ್ಥ ದಲ್ಲಿ, ಅಪ್ರಾಮಾಣ್ಯ (ಪ್ರಾಮಾಣ್ಯವಿಲ್ಲ) ವೆಂದೂ ಯುಕ್ತಿಗಳಿಗೆ ಸರ್ವಧಾ ಅಪ್ರಾಮಾಣ್ಯವೆಂದೂ ತಿಳಿಯಬೇಕು ಆದುದರಿಂದಲೇ ಇದೇ ನ್ಯಾಯದಿಂದ, "ಪತ್ಯಾದಿಶಬ್ದೇಭ್ಯಃ'' ಎಂಬಲ್ಲಿ ಬ್ರಾಹ್ಮಣಾದಿಶ್ರುತಿ, ಬ್ರಹ್ಮಲಿಂಗ, ಇವುಗಳಿಗೆ ಅನ್ಯಥಾ ಅನುಪಪತ್ತಿ(ಸಂಭವ) ಇಲ್ಲವೆಂಬ (–ಅನ್ಯಥಾನುಪಪತ್ತಿ) ಯುಕ್ತಿಯಿಂದ 'ಸ ತ್ರೇಧಾ ಬಭೂವೈಷಾಂ ಗುಣಾನಾಮುಪಾದಾನಾಯ ವಿಷ್ಣುರ್ವಾವ ಸತ್ತ್ವಸ್ಯ ರಜಸೋ ಬ್ರಹ್ಮೇಶಾನೋ ನಾಮ ತಮಸಃ' ಎಂಬ ವೇದವಾಕ್ಯಾಂತರಸಂವಾ ದವುಳ್ಳ ವಿರಿಂಚಿ ಬ್ರಹ್ಮ (ವಿಷ್ಣು)ರ ಅಭೇದವೆಂಬ ಆಪಾತವಾಗಿ ತೋರಿದ ಅರ್ಥವನ್ನು ತಪ್ಪಿಸಿ (ಶ್ರುತಿಗೆ) ಅದಕ್ಕಿಂತ ಪ್ರಬಲವಾದ ಸಿದ್ಧಾಂತಯುಕ್ತ್ಯಾಗಮ ಬಲದಿಂದ ಅರ್ಥಾಂತರವನ್ನುಕಲ್ಪಿಸುವುದು ಮಾಡಲ್ಪಟ್ಟಿದೆಯೆಂದು ತಿಳಿಯಬೇಕು 'ಏತಚ್ಚ"= ವಿಷ್ಣುವಿನ ಜಗತ್ಕಾರಣತ್ವವನ್ನು ಪ್ರತಿಪಾದಿಸುವ ಶ್ರುತಿಗಳಿಗೆ ವೇದ ವಾಕ್ಯಸಂವಾದವಿರುವುದರಿಂದ ಯುಕ್ತಿವಿರೋಧವಿಲ್ಲವೆಂಬ ಸಂಗತಿಯನ್ನು-"ಪ್ರಪಂ

श्रुतीना श्रुतियुक्तिविरोधपरिहारोऽस्याधिकरणस्यार्थ इत्युक्तं भवति । साऽयं चतुर्थपादार्थ एवेति तत्रैवास्याधिकरणस्योपसम्बन्धनमुचितम् । नात्रेत्यतोऽस्य ततोऽपि वैलक्षण्यं दर्शयितुमुक्तमल्पेति बहुलेति च । अत्राल्पत्वमुपसर्जनत्वम् । बहुलत्वं च प्रधानत्वमिति ज्ञातव्यम् । एवशब्दस्तु न गुणप्रधानभावव्यत्यासश्चतुर्थपाद इवेत्यर्थे ।

— ಪದಾರ್ಥದೀಪಿಕಾ —

ಹಾಗಾದಲ್ಲಿ- "ಶ್ರುತಿಗಳಿಗೆ, ಶ್ರುತಿ ಯುಕ್ತಿಗಳಿಂದ, ತೋರುವ ವಿರೋಧದ ಪರಿಹಾರವು, ಈ ಅಧಿಕರಣದ ವಿಷಯ" ವೆಂದು ಇದರಿಂದ ಹೇಳಿದ್ದಾಗುತ್ತದ ಆದರ ವಿರೋಧಪರಿಹಾರವು ಚತುರ್ಥಪಾದದ ವಿಷಯವೇ ಆಗಿದ ಆದುದರಿಂದ, ಅದರಲ್ಲಿಯೇ ಈ ಅಧಿಕರಣದ ನಿವೇಶನವನ್ನು ಮಾಡುವುದು ಉಚಿತವಾದುದು ಈ ಪಾದದಲ್ಲಿ ಅದು ಉಚಿತವಲ್ಲ" ಹೀಗೆ ಆಶಂಕೆಯು ಒರುವುದರಿಂದ, (ಅದನ್ನು ಪರಿಹರಿಸಲು) ಅದಕ್ಕಿಂತಲೂ ಇದಕ್ಕೆ ವೈಲಕ್ಷಣ್ಯವನ್ನು ತೋರಿಸಲು "ಅಲ್ಪ" ಎಂಬುದಾಗಿಯೂ "ಬಹುಲ ಎಂಬುದಾಗಿಯೂ ಹೇಳಿದ್ದಾರೆ ಇಲ್ಲಿ "ಅಲ್ಪತ್ವ" ವೆಂದರೆ "ಅಮುಖ್ಯ–ಅಪ್ರಧಾನ" ವಾಗಿರುವುದು 'ಬಹುಲತ್ವ" ವೆಂದರೆ "ಪ್ರಧಾನವಾಗಿರುವುದು" ಎಂಬ ಅರ್ಥವನ್ನು ತಿಳಿಯಬೇಕು "ಏವ" ಶಬ್ದವು, "ನ ಗುಣಪ್ರಧಾನಭಾವವ್ಯತ್ಯಾಸಃ ಚತುರ್ಥಪಾದ ಇವ" (ಗುಣಪ್ರಧಾನಭಾವವ್ಯತ್ಯಾಸವು ಚತುರ್ಥಪಾದದಲ್ಲಿರುವ ಹಾಗೆ ಇಲ್ಲಿ ಇಲ್ಲ) ಎಂಬ ಅರ್ಥವನ್ನು ಹೇಳುತ್ತದೆ

— ವಿಶೇಷಾರ್ಥಪ್ರದೀಪಿಕಾ —

ಚಯಿಷ್ಯಾಮಃ"- "ಅಯಮನ್ಯಾರ್ಥಃ" ಇತ್ಯಾದಿವಚನಗಳಿಂದ ವಿಶದಪಡಿಸುವೆವು ಹೀಗ ಅರ್ಥ

"ಸ್ಮೃತಿಯುಕ್ತಿ ಶ್ರುತಿಗುಣಯುಕ್ತಯೋ ಬಹುಯುಕ್ತಯಃ"ಇತ್ಯಾದಿಗಳಿಗೆ, ಮುಂದಿನ ಪಾದದ ಉಪಕ್ರಮ (ಪ್ರಾರಂಭ)ದಲ್ಲಿ ಹೇಳಿರುವ ರೀತಿಯಿಂದ ಅರ್ಥವನ್ನು "ಅತ್ರಾಲ್ಪತ್ವಂ" ಇತ್ಯಾದಿ ವಚನದಿಂದ ಹೇಳುತ್ತಾರ ಬಾಹುಲ್ಯಂ" ಎಂಬ ಎರಡೂ ಪದಗಳಿಗೆ "ಪ್ರಾಬಲ್ಯ''ವೆಂದು ಅರ್ಥವು "ಇತಿ' ಶಬ್ದವು ಹೇತ್ವರ್ಥದಲ್ಲಿದೆಯೆಂಬ ಅಭಿಪ್ರಾಯದಿಂದ "ಇತ್ಯತಃ' ಎಂಬುದಾಗಿ ಹೇಳಿದ್ದಾರೆ "ಏವಶಬ್ದಸ್ತು'—ಚತುರ್ಥಪಾದದಲ್ಲಿ ಯುಕ್ತಿಗೆ ಅಪ್ರಾಧಾನ್ಯವು, ಶ್ರುತಿಗೆ ಪ್ರಾಧಾನ್ಯವು, ಹೀಗೆ ಶ್ರುತಿಯುಕ್ತಿಗಳಲ್ಲಿ ಗುಣಪ್ರಧಾನ ಭಾವವಿದೆ ಆದರ ಹಾಗೆ ಇಲ್ಲಿ ಶ್ರುತಿಯುಕ್ತಿಗಳಿಗೆ ಗುಣಪ್ರಧಾನಭಾವವಿಲ್ಲ ಆದುದರಿಂದ

युक्तेस्तु युक्तिबाहुल्यमागमादागमस्य च ॥
कथं न निर्णयं कुर्यादिति

ननु श्रुतियुक्तिभ्यां पूर्वपक्षिते कथं प्रबलयुक्तिमात्राश्रयणेन सिद्धान्तः । कथञ्चित्प्रतिपक्षतामात्रसम्भवादित्यत उक्तं विवृण्वन्नाह ॥ युक्तेस्त्विति ।। पूर्वपक्षयुक्त्यपेक्षया विरोधियुक्तेर्बाहुल्यं तथा पूर्वपक्षागमापेक्षया विरोध्यागमस्य च बाहुल्यं कथं निर्णयं न कुर्यात् । पूर्वपक्ष्युत्प्रेक्षितयुक्त्यागमाभ्यां प्रबलौ विरोधियुक्त्यागमौ तद्बाधया वस्तुव्यवस्थां कुरुत इत्यर्थः । कुर्यादिति प्रत्येकं सम्बन्धः । न

ಪೂರ್ವಪಕ್ಷದಲ್ಲಿ ಹೇಳಿದ ಯುಕ್ತಿಗಳಿಗಿಂತ ಸಿದ್ಧಾಂತ ಯುಕ್ತಿಗಳ ಬಾಹುಲ್ಯವು (ಪ್ರಾಬಲ್ಯ ಹಾಗು ಪ್ರಾಧಾನ್ಯ) ಹಾಗು ಪೂರ್ವಪಕ್ಷದಲ್ಲಿ ತೋರಿಸಿದ ಆಗಮಗಳಿಗಿಂತ ಸಿದ್ಧಾಂತದಲ್ಲಿಯು ಆಗಮಗಳಿಗೆ ಬಾಹುಲ್ಯವು, ವಸ್ತುವಿನ ವ್ಯವಸ್ಥೆಯನ್ನು ಹೇಗೆ ಮಾಡಲಾರವು ? ಈ ಕಾರಣದಿಂದ ಈ ಅಧಿಕರಣದ ಆರಂಭವು ಯುಕ್ತವಾಗುತ್ತದೆ

## — ಪದಾರ್ಥದೀಪಿಕಾ —

ಇನ್ನು– ಶ್ರುತಿಯುಕ್ತಿಗಳಿಂದ ಪೂರ್ವಪಕ್ಷವನ್ನು ಮಾಡಿರಲು, ಕೇವಲ ಪ್ರಬಲ ಯುಕ್ತಿಯನ್ನೇ ಆಶ್ರಯಿಸಿ ಸಿದ್ಧಾಂತವನ್ನು ಹೇಳುವುದು ಹೇಗೆ ? ಏಕೆಂದರೆ ಹೇಗಾದರೂ ( ಯಾವದೋ ಒಂದು ರೀತಿಯಿಂದ ) ಪ್ರತಿಪಕ್ಷತ್ವವೇ ಬರಬಹುದು ಈ ಆಶಂಕಯು ಬರುವುದರಿಂದ, ಇದನ್ನು ಪರಿಹರಿಸಲು, ಹಿಂದ ಹೇಳಿದುದನ್ನು, ವಿವರಿಸುತ್ತಲೇ ' ಯುಕ್ತೇಸ್ತು” ಇತ್ಯಾದಿ ವಚನದಿಂದ ಹೇಳುತ್ತಾರೆ ಪೂರ್ವಪಕ್ಷದ ಯುಕ್ತಿಗಿಂತಲೂ ವಿರೋಧಿಯುಕ್ತಿಗೆ ಬಾಹುಲ್ಯವು, (ಪ್ರಧಾನತ್ವವು) ಹಾಗು ಪೂರ್ವಪಕ್ಷದ ಆಗಮಕ್ಕಿಂತ ವಿರೋಧಿಯಾದ ಆಗಮಕ್ಕೆ ಬಾಹುಲ್ಯವು, ನಿರ್ಣಯವನ್ನು ಹೇಗೆ ಮಾಡಲಾರದು ? ಪೂರ್ವಪಕ್ಷಿಯು ಉತ್ಪ್ರೇಕ್ಷೆಯಿಂದ ತೋರಿಸಿದ ಯುಕ್ತಿಆಗಮಗಳಿಗಿಂತ ಪ್ರಬಲವಾದ ವಿರೋಧಿಯುಕ್ತಿ ಆಗಮಗಳು, ಅವುಗಳನ್ನು ಬಾಧಿಸುವುದರಿಂದ ವಸ್ತು ವ್ಯವಸ್ಥೆಯನ್ನು ಮಾಡುತ್ತವೆ, ಹೀಗೆ ಅರ್ಥ ''ಕುರ್ಯಾತ್” ಎಂಬುದಕ್ಕ

## — ವಿಶೇಷಾರ್ಥಪ್ರದೀಪಿಕಾ —

ಚತುರ್ಥಪಾದದಲ್ಲಿ ಈ ಅಧಿಕರಣಕ್ಕೆ ಅಂತರ್ಭಾವವಿಲ್ಲವೆಂಬ ಅರ್ಥವನ್ನು ತೋರಿಸಲು “ಏವ” ಕಾರವನ್ನು ಮೂಲದಲ್ಲಿ ಪ್ರಯೋಗಿಸಿದ್ದಾರೆಂದು ಭಾವ

केवलं सिद्धान्ते प्रबलयुक्तिमात्रं किन्नाम प्रबलागमोऽप्यस्तीति भावः । इत्यतोऽधिकरणारम्भः सम्भवतीति शेषः । अधिकरणोपाधिव्युत्पादनसमाप्तिद्योतको वेतिशब्दः । तदिदमुदाहरणनिष्ठं व्युत्पादयितुं पूर्वपक्षमनुवदति सूत्रकारः । असदिति चेदिति । अयमस्यार्थः । न ब्रह्मणो जगत्कर्तृत्वं युक्तम् । प्रमाणाभावात् । सदेव सोम्येदमग्र आसीत्तत्तेजोऽसृजतेत्यादिश्रुतिरस्तीति चेन्न । तस्या युक्तिविरुद्धत्वेन भवदभिमतार्थे प्रामाण्याभावात् । तथा हि । महाप्रलये

— ಪದಾರ್ಥದೀಪಿಕಾ —

ಪ್ರತ್ಯೇಕವಾಗಿ ಅನ್ವಯವಿದೆ ಸಿದ್ಧಾಂತದಲ್ಲಿ ಕೇವಲ ಪ್ರಬಲಯುಕ್ತಿ ಪೊಂದೇ ಎಂದಲ್ಲ, ಪ್ರಬಲವಾದ ಆಗಮವೂ ಇದೆ, ಹೀಗೆ ಭಾವ ''ಇತ್ಯತೋಽಧಿಕರಣಾರಂಭಃ ಸಂಭವತಿ'' (ಈ ಕಾರಣದಿಂದ ಅಧಿಕರಣದ ಆರಂಭವು ಸಂಭವಿಸುತ್ತದೆ) ಹೀಗೆ ಶೇಷವು ಅಥವಾ ಅಧಿಕರಣದ ಉಪಾಧಿಯನ್ನು ಹೇಳುವುದರ ಸಮಾಪ್ತಿಯನ್ನು ತೋರಿಸುವದು ಈ ''ಇತಿ'' ಶಬ್ದವು ಇದನ್ನು ಉದಾಹರಣದಲ್ಲಿ ಬರುವಹಾಗೆ ವ್ಯುತ್ಪಾದಿಸುವುದಕ್ಕಾಗಿ ಪೂರ್ವಪಕ್ಷವನ್ನು ಸೂತ್ರಕಾರರು "ಅಸದಿತಿಚೇತ್" ಎಂಬ ವಚನದಿಂದ ಅನುವಾದಿಸಿದ್ದಾರೆ ಇದರ ಅರ್ಥವು ಇದು- ''ಬ್ರಹ್ಮನಿಗೆ, ಜಗತ್ಕರ್ತೃತ್ವವು ಯುಕ್ತಿಯುಕ್ತವಲ್ಲ ಏಕೆಂದರೆ ಪ್ರಮಾಣವು ಇರುವುದಿಲ್ಲ ಇನ್ನು ''ಸದೇವ ಸೋಮ್ಯೇದಮಗ್ರ ಆಸೀತ್ ತತ್ತೇಜೋಽಸೃಜತ" ಈ ಮುಂತಾದ ಶ್ರುತಿಯು ಇದೆ" ಹೀಗೆ ಶಂಕಿಸುವುದು ಸರಿಯಲ್ಲ ಏಕೆಂದರೆ- ಈ ಶ್ರುತಿಗೆ, ಯುಕ್ತಿ ವಿರೋಧವು ಬರುವುದರಿಂದ, ನೀವು ಹೇಳಿದ ಅರ್ಥದ ಬಗ್ಗೆ ಪ್ರಾಮಾಣ್ಯವಿರುವುದಿಲ್ಲ ಹೇಗೆಂದರೆ— ಮಹಾಪ್ರಲಯದಲ್ಲಿ, ಮುಂದೆ ಹುಟ್ಟಲಿರುವ

— ವಿಶೇಷಾರ್ಥಪ್ರದೀಪಿಕಾ —

"ಯುಕ್ತಿವಿರುದ್ಧತ್ವೇನ" - ಪ್ರಳಯದಲ್ಲಿ ಎಲ್ಲದಕ್ಕೂ ಅಸತ್ವ (ಇಲ್ಲದಿರುವಿಕೆಯನ್ನು) ವನ್ನು ಸಾಧನಮಾಡುವ "ಭಾವತ್ವ" ಯುಕ್ತಿಯಿಂದ ಕೂಡಿದ, ಪ್ರಾಗಭಾವಕ್ಕೆ ಕಾರಣತ್ವ ಸಾಧಕಯುಕ್ತಿಯಿಂದ, ಹಾಗೂ-ಕಾರ್ಯವು ಸಕರ್ತೃಕವೆಂಬ ನಿಯಮವಿದ್ದುದರಿಂದ, ಪ್ರಲಯದಲ್ಲಿ ಭಾವವಾವದೂ ಇಲ್ಲವಾದುದರಿಂದ ಭಾವಪದಾರ್ಥಕ್ಕೆ ಕರ್ತೃತ್ವವು ಅಯುಕ್ತವಾಗುತ್ತಿರಲು, ಪರಿಶೇಷದಿಂದ ಅಭಾವಕ್ಕೆ ಕರ್ತೃತ್ವವು, ಹೀಗೆ ಪರಿಶೇಷರೂಪಯುಕ್ತಿಯಿಂದ ವಿರುದ್ಧವಾದುದರಿಂದ, ಹೀಗೆಅರ್ಥ.

तावदुत्पत्स्यमानकार्यप्रागभावोऽवश्यमङ्गीकरणीयः । अन्यथा सर्गादौ कार्योत्पादायोगात् । न चास्यान्यत्र चरितार्थतोपलभ्यते । ततश्च

— ಪದಾರ್ಥದೀಪಿಕಾ —

ಕಾರ್ಯಗಳ ಪ್ರಾಗಭಾವವು, ಇದೆಯೆಂದು ಅವಶ್ಯವಾಗಿ ಅಂಗೀಕರಿಸಲ್ಪಡಬೇಕಾದುದು ಏಕೆಂದರೆ ಅದನ್ನಂಗೀಕರಿಸದಿದ್ದಲ್ಲಿ ಸೃಷ್ಟ್ಯಾದಿಯಲ್ಲಿ ಕಾರ್ಯದ ಉತ್ಪಾದವು ಸಂಭವಿಸಲಾರದು. ಈ ಕಾರ್ಯದ ಉತ್ಪಾದವು ಬೇರೆ ಕಡೆಯಲ್ಲಿ ಚರಿತಾರ್ಥವಾಗುವುದಿಲ್ಲ ಆದುದರಿಂದ, ಅದೇ (ಪ್ರಾಗಭಾವವೇ)

— ವಿಶೇಷಾರ್ಥಪ್ರದೀಪಿಕಾ —

"ಮಹಾಪ್ರಲಯದಲ್ಲಿ ತತ್ಸತ್ತ್ವಾಭಾವಸ್ಯ" ಇತ್ಯಾದಿಗ್ರಂಥದಿಂದ, ಮುಂದೆ "ಪರಿಶೇಷ" ಯುಕ್ತಿಯಿಂದ ಕರ್ತೃತ್ವವನ್ನು ಸಾಧನಮಾಡಲು ಇಚ್ಛೆಯುಳ್ಳವರಿದ್ದು ಈಗ ಕೇವಲ ಕಾರಣತ್ವವನ್ನಷ್ಟೇ ಸಾಧನಮಾಡಲು, ಮುಂದೆ ಹೇಳ್ಪಡಲಿರುವ ಹೇತುವಿನ ವಿಶೇಷ್ಯದ ಅಸಿದ್ಧಿಯನ್ನು "ಮಹಾಪ್ರಲಯೇ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಸೂತ್ರದಲ್ಲಿಯ "ಅಸತ್' ಶಬ್ದವು ಛಾಂದಸವಿದ್ದು ಭಾವಸಾಧನಾಂತವಿದ್ದು, ಅಭಾವಪರವಾಗಿದೆಯೆಂಬ ಅಭಿಪ್ರಾಯದಿಂದ "ಉತ್ಪತ್ಸ್ಯಮಾನ ಕಾರ್ಯಪ್ರಾಗಭಾವಃ' ಎಂಬುದಾಗಿ ಹೇಳಿದ್ದಾರ ಸೂತ್ರವನ್ನು ಅನುಸರಿಸಿ ಪ್ರಯೋಗಿಸಲ್ಪಟ್ಟ ಏಕವಚನವು ಸಮುದಾಯಾರ್ಥಕವು ಆದುದರಿಂದ "ತತ್ತತ್ಕಾರ್ಯಪ್ರಾಗಭಾವಾಃ' (ಆಯಾಯ ಕಾರ್ಯದ ಪ್ರಾಗಭಾವಗಳು)ಹೀಗ ಅರ್ಥ ಈ ಪ್ರಾಗಭಾವಗಳು ಅನೇಕವಿದ್ದರೂ ಪ್ರಮಾಣಪ್ರಮಿತವಾಗಿವೆ, ಆದುದರಿಂದ, ಪ್ರಮಿತನಾಗದ ಈಶ್ವರನನ್ನು ಅಂಗೀಕರಿಸುವುದಕ್ಕಿಂತಲೂ ಪ್ರಮಿತವಾದ ಪ್ರಾಗಭಾವಗಳಿಗೆ ಕರ್ತೃತ್ವ(ಕಾರಣತ್ವ) ವನ್ನು ಅಂಗೀಕಸುವುದರಲ್ಲಿ ಲಾಘವವಿದೆಯೆಂಬುದು ಭಾವವು "ಉತ್ಪತ್ಸ್ಯಮಾನ ಕಾರ್ಯಪ್ರಾಗಭಾವ" ಎಂಬಲ್ಲಿ, "ಉತ್ಪತ್ಸ್ಯಮಾನಕಾರ್ಯ" ಎಂಬ ವಿಶೇಷಣವನ್ನು, ನಷ್ಟ (ನಾಶಹೊಂದಿದ) ಕಾರ್ಯದ ಪ್ರಾಗಭಾವವು ಮಹದಾದಿಕಾರ್ಯಗಳ ಕಾರಣವಾಗಿರುವದಿಲ್ಲವಾದುದರಿಂದ ಬರುವ ಬಾಧದೋಷವನ್ನು ಪರಿಹರಿಸಲು ಸೇರಿಸಿದ್ದು ಅನ್ಯೋನ್ಯಾಭಾವಮುಂತಾದವು ಮಹದಾದಿಕಾರ್ಯಗಳ ಕಾರಣಗಳಲ್ಲವಾದುದರಿಂದ ಬರುವ ಬಾಧವನ್ನು ಪರಿಹರಿಸಲು "ಪ್ರಾಗಭಾವ" ಪದವನ್ನು ಇಟ್ಟಿರುತ್ತಾರೆ. "ಅವಶ್ಯಂ" = ನಿಯಮದಿಂದ ಇದರಿಂದ ಆಶ್ರಯದ ಅಸಿದ್ಧಿಯು ಪರಿಹರಿಸಲ್ಪಟ್ಟಿತು ವಿಶೇಷಣದ ಅಸಿದ್ಧಿಯನ್ನು ಪರಿಹರಿಸುತ್ತಾರೆ "ನಚಾಸ್ಯ" ಇತ್ಯಾದಿವಚನದಿಂದ

स एव सकलकार्यकारणं भविष्यति । अयमत्र प्रयोगः । महाप्रलयवर्ती कार्यप्रागभावो महदादिकार्यकारणं भवितुमर्हति । अन्यत्रानुपक्षीणत्वे सति नियमेन तत्पूर्वभावित्वात् । योऽन्यत्रानुपक्षीणत्वे सति नियमेन यतः पूर्वभावी स तस्य कारणम् । यथा कुविन्दः पटस्येति । महदादिकं वा प्रागभावकार्यम् । अनन्यथासिद्धनियतपश्चाद्भावित्वात् । यद्यदनन्यथासिद्धनियतपश्चाद्भावि तत्तत्कार्यम् । यथा पटः कुविन्दस्येति ।

नन्वत्र जगत्प्रागभावस्य जगत्कारणत्वमात्रं वा साध्यमन्य-

— ಪದಾರ್ಥದೀಪಿಕಾ —

ಸಕಲ ಕಾರ್ಯಗಳ ಕಾರಣವಾಗುವದು ಇಲ್ಲಿಯ ಪ್ರಯೋಗವು ಹೀಗೆ— ಮಹಾ ಪ್ರಲಯದಲ್ಲಿರುವ ಕಾರ್ಯಪ್ರಾಗಭಾವವು, ಮಹದಾದಿ ಕಾರ್ಯಗಳ ಕಾರಣವಾಗುವದು. ಏಕೆಂದರ ಬೇರೆ ಕಡೆಯಲ್ಲಿ ಶಕ್ತಿಹ್ರಾಸವಾಡಿಕೊಳ್ಳದಿದ್ದು, ನಿಯಮದಿಂದ ಕಾರ್ಯದ ಪೂರ್ವದಲ್ಲಿ ಇರುತ್ತದೆ ಯಾವದು ಇನ್ನೊಂದರಲ್ಲಿ ತನ್ನ ಶಕ್ತಿಯನ್ನು ಕಳೆದುಕೊಳ್ಳದಿದ್ದು, ನಿಯಮದಿಂದ ಒಂದು (ಯಾವ) ವಸ್ತುವಿನ ಪೂರ್ವಭಾವಿಯಾಗಿರುವುದೋ ಅದು ಆ ವಸ್ತುವಿನ ಕಾರಣವು, ನೇಕಾರನು ಪಟದ ಕಾರಣವಾಗಿರುವುದು ಇಲ್ಲಿ ಉದಾಹರಣವು" ಹೀಗೆ, ಇಲ್ಲವೆ "ಮಹದಾದಿ ವಿಶ್ವವು ಪ್ರಾಗಭಾವದಿಂದ ಹುಟ್ಟುವಂತಹದು ಏಕೆಂದರೆ ಅನ್ಯಥಾಸಿದ್ಧಿಯಿಲ್ಲದ್ದು, ನಿಯಮದಿಂದ ಪ್ರಾಗಭಾವದ ಅನಂತರದಲ್ಲಿಯೇ ಹುಟ್ಟಿರುತ್ತದೆ ಏಕೆಂದರೆ "ಯಾವದು, ಯಾವದಕ್ಕಿಂತ ಅನ್ಯಥಾಸಿದ್ಧಿಯಿಲ್ಲದೆ ಅನಂತರ ಭಾವಿಯಾಗಿರುವುದೋ, ಅದು ಅದರಿಂದ ಹುಟ್ಟುವಂತಹದು," ಹೀಗೆ ನಿಯಮವಿದೆ. ಇದರಲ್ಲಿ ನೇಕಾರನಿಂದ ಹುಟ್ಟಿರುವ ಪಟವು ದೃಷ್ಟಾಂತವು" ಹೀಗೆ

ಇನ್ನು– ಈ ಅನುಮಾನದಲ್ಲಿ ಕೇವಲ ಪ್ರಾಗಭಾವಕ್ಕೆ ಜಗತ್ಕಾರಣತ್ವವಷ್ಟೇ ಸಾಧ್ಯವೋ? ಅಥವಾ- ಇತರರಲ್ಲಿ ಇಲ್ಲದೆ ಇದ್ದು ಪ್ರಾಗಭಾವದಲ್ಲಿಯೇ

— ವಿಶೇಷಾರ್ಥಪ್ರದೀಪಿಕಾ —

ಸಾಧ್ಯದಲ್ಲಿರುವ ''ಮಹದಾದಿಕಾರ್ಯಕಾರಣಂ'' ಎಂಬುದಕ್ಕೆ ''ಮಹದಾದಿಕಾರ್ಯಗಳ ಜನನದಲ್ಲಿ ಶಕ್ತಿಯನ್ನುಳ್ಳದ್ದು'' ಎಂದು ಅರ್ಥ ಇದರಿಂದ ಹೇತುಸಾಧ್ಯಗಳಲ್ಲಿ ಅಭೇದವೆಂಬ ಆಶಂಕೆಗೆ ಅವಕಾಶವಿಲ್ಲವೆಂದು ತಿಳಿಯಬೇಕು.

योगव्यवच्छेदेन वा। आद्येऽर्थान्तरता। प्रागभावस्य कारणत्वेऽपि ब्रह्मकारणतासम्भवात्। द्वितीये व्याप्त्यभावः। न हि यो यदपेक्षया पूर्वभावी स एव तत्कारणं नान्य इति नियमोऽस्ति। ततः प्रागभावस्य जगत्कारणत्वेऽपि तत्समानन्यायानामीश्वरादीनामपि तत्कारणत्वमङ्गीकार्यमिति। मैवम्। स्यादेतदेवम्। यदीश्वरादीनां प्रलये सत्त्वमेव स्यात्। न चैतदस्ति। सिद्धान्तिना कारणत्वेनाशास्य-

— ಪದಾರ್ಥದೀಪಿಕಾ —

ಮಾತ್ರ ಜಗತ್ಕಾರಣತ್ವವು, ಎಂಬುದು ಸಾಧ್ಯವೋ ? ಮೊದಲನೆಯ ಪಕ್ಷದಲ್ಲಿ ಅರ್ಥಾಂತರತೆಯು ಏಕೆಂದರೆ ಪ್ರಾಗಭಾವಕ್ಕೆ ಜಗತ್ತನ್ನು ಕುರಿತು ಕಾರಣತ್ವ ವಿದ್ದ ಪಕ್ಷದಲ್ಲಿಯೂ ಬ್ರಹ್ಮನಿಗೆ ಜಗತ್ಕಾರಣತ್ವವ ಸಂಭವಿಸುತ್ತದೆ ಎರಡ ನೆಯ ಪಕ್ಷದಲ್ಲಿ ವ್ಯಾಪ್ತಿಯು ಇರುವುದಿಲ್ಲ ಏಕೆಂದರೆ ಯಾವದು ಯಾವು ದಕ್ಕಿಂತ ಪೂರ್ವಭಾವಿಯೋ ಅದೊಂದೇ ಅದಕ್ಕೆ ಕಾರಣವು ಮತ್ತೊಂದು ಕಾರಣವಲ್ಲ" ಎಂಬ ನಿಯಮವಿಲ್ಲ ಆದುದರಿಂದ ಪ್ರಾಗಭಾವಕ್ಕೆ ಜಗತ್ಕಾ ರಣತ್ವವಿದ್ದರೂ, ಅಲ್ಲಿರುವ ನ್ಯಾಯವುಳ್ಳ ಈಶ್ವರ ಮೊದಲಾದವರಿಗೂ ಜಗ ತ್ಕಾರಣತ್ವವು ಅಂಗೀಕರಿಸಲ್ಪಡತಕ್ಕದ್ದು ' ಹೀಗೆ ಶಂಕಿಸುವುದು ಸರಿಯಾದು ದಲ್ಲ ಏಕೆಂದರೆ ಪ್ರಲಯದಲ್ಲಿ ಈಶ್ವರಾದಿಗಳಿಗೆ ಅಸ್ತಿತ್ವವಿದ್ದರ ಇದು (ಹೀಗೆ ಹೇಳಿದುದು) ಸರಿಯೆನಿಸಬಹುದಿತ್ತು ಆದರೆ ಪ್ರಲಯದಲ್ಲಿ ಈಶ್ವರಾದಿಗಳಿಗೆ ಅಸ್ತಿತ್ವವು ಇರುವುದಿಲ್ಲ ಏಕೆಂದರೆ- ಸಿದ್ಧಾಂತಿಯು ಕಾರಣವೆಂದು ಆಶಿಸಿದ

ವಿಶೇಷಾರ್ಥಪ್ರದೀಪಿಕಾ —

"ಅನನ್ಯಥಾಸಿದ್ಧನಿಯತಪಶ್ಚಾದ್ಭಾವಿತ್ವಾತ್" – ಇಲ್ಲಿ 'ಅನ್ಯಥಾಸಿದ್ಧಿಯಿ ಲ್ಲದೆ ಇರುವ ಪ್ರಾಗಭಾವದ ಅನಂತರದಲ್ಲಿಯೇ ನಿಯಮದಿಂದ ಹುಟ್ಟುವುದ ರಿಂದ" ಎಂದು ಅರ್ಥ "ಅನನ್ಯಥಾಸಿದ್ಧೋ ನಿಯತಃ ಪಶ್ಚಾದ್ಭಾವಃ ಅಸ್ಯಅಸ್ತೀತಿ ಅನನ್ಯಥಾಸಿದ್ಧನಿಯತಪಶ್ಚಾದ್ಭಾವೀ ತಸ್ಯಭಾವ, ಹೀಗೆ ವಿಗ್ರಹವು

"ತತ್ಸಮಾನನ್ಯಾಯಾನಾಂ"=ಅನ್ಯತ್ರಕ್ಷೀಣವಾಗದ, (ಅನ್ಯಥಾಸಿದ್ಧಿಯಿಂದ ರಹಿತವಾದ) ನಿಯತ ಕಾರ್ಯಭಾವಿತ್ವವೆಂಬ ಯುಕ್ತಿಯುಳ್ಳ

ಸ್ಯಾದೇತತ್" ,ಎಂಬಲ್ಲಿ "ಏತತ್"—ಈಶ್ವರಾದಿಗಳಿಗೆ ಜಗತ್ಕಾರಣತ್ವವು, "ಏವಂ" - ಪ್ರಾಗಭಾವದ ಹಾಗೆ, ಅನನ್ಯಥಾಸಿದ್ಧ ನಿಯತಪೂರ್ವಭಾವತ್ವ ವಿರು ವುದರಿಂದ, ಹೀಗೆ ಅರ್ಥ

**मानमीश्वरादिकं प्रलयेऽसद्भवितुमर्हति । भावत्वान्महदादिकार्यवदिति युक्तिविरुद्धत्वात् । एवञ्चे(दी)श्वरादीनां प्रलयेऽसत्त्वसिद्धौ प्रागभावस्य कारणत्वमात्रसाधनेऽपि तस्यैव कारणत्वमिति सिध्यति ।**

**ननु च यत्कार्यं तत्सकर्तृकमिति नियमान्महदादिकर्तृत्वेनेश्वरोऽ**

— **ಪದಾರ್ಥದೀಪಿಕಾ** —

ಈಶ್ವರ ಮುಂತಾದುದು ಪ್ರಲಯದಲ್ಲಿ ಅಸತ್ತು– ಇಲ್ಲದ್ದು ಆಗಿದೆ (ಇಲ್ಲದಿರುವುದು ಯೋಗ್ಯವು) ಏಕೆಂದರೆ ಭಾವವಾಗಿರುತ್ತದೆ ಇದರಲ್ಲಿ ಮಹದಾದಿ ಕಾರ್ಯಗಳು ದೃಷ್ಟಾಂತಗಳು ಈ ರೀತಿಯಾದ ಯುಕ್ತಿಯಿಂದ, ಪ್ರಲಯದಲ್ಲಿ ಅಸತ್ವವು (ಅಸ್ತಿತ್ವವಿಲ್ಲವೆಂಬುದು) ಸಿದ್ಧವಾಗಲು, ಪ್ರಾಗಭಾವಕ್ಕೆ ಜಗತ್ಕಾರಣತ್ವವನ್ನಷ್ಟೇ ಸಾಧನ ಮಾಡಿದರೂ ಸಹ, ಕೇವಲ ಪ್ರಾಗಭಾವಕ್ಕೇನೇ ಜಗತ್ಕಾರಣತ್ವವು ಸಿದ್ಧಿಸುತ್ತದೆ

ಇನ್ನು– "ಯಾವದು ಕಾರ್ಯವೋ (ಹುಟ್ಟುವಂತಹದೋ) ಅದೆಲ್ಲವೂ ಕರ್ತೃವುಳ್ಳದ್ದೇ" ಎಂಬ ನಿಯಮವಿದ್ದುದರಿಂದ, ಮಹದಾದಿಗಳ ಕರ್ತೃವೆಂದು

— **ವಿಶೇಷಾರ್ಥಪ್ರದೀಪಿಕಾ** —

ಸೂತ್ರದಲ್ಲಿರುವ ''ಅಸತ್' ಶಬ್ದವು, ಕರ್ತ್ರರ್ಥಕ ಶತೃಪ್ರತ್ಯಯಾಂತವಾಗಿದ್ದು, ''ಅಭಾವದ ಪ್ರತಿಯೋಗಿ'' ಎಂಬ ಅರ್ಥಪರವಾಗಿದೆ ಈ ಅಭಿಪ್ರಾಯದಿಂದ ಪ್ರಯೋಗಾಂತರದ ಸೂಚಕವಾಗುವಂತೆ ಬೇರೆ ವ್ಯಾಖ್ಯಾನ (ವೃತ್ತಿ) ವನ್ನೂ 'ಸಿದ್ಧಾಂತಿನಾ'' ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ "ಈಶ್ವರನಸಿದ್ಧಿ' ಈಶ್ವರನ ಅಸಿದ್ಧಿ'' ಇವೆರಡೂ ಪಕ್ಷಗಳಲ್ಲಿಯೂ ಸಹ "ಈಶ್ವರನು ಇಲ್ಲಿ-ಅಸತ್ತು ಎಂದು ಸಾಧನಮಾಡಲು ಶಕ್ಯವಿಲ್ಲವಾದುದರಿಂದ,'ಸಿದ್ಧಾಂತಿನಾ ಆಶಾಸ್ಯಮಾನಂ', ಎಂಬುದಾಗಿ ಹೇಳಿದ್ದಾರೆ ಇದರಿಂದ (ಇಷ್ಟರಿಂದ) "ನನು'' ಇತ್ಯಾದಿವಾಕ್ಯಗಳಿಂದ ಮಾಡಲ್ಪಟ್ಟ ಪೂರ್ವಪಕ್ಷದ ಪರಿಹಾರವು ಯಾವದು? ಎಂಬ ಆಶಂಕೆಯು ಬರುವುದರಿಂದ "ಭಾವತ್ವ' (ಭಾವವಾಗಿರುವುದು) ಎಂಬ ಯುಕ್ತಿ ಸಹಿತವಾದ, ಪ್ರಾಚೀನಯುಕ್ತಿಯೇ ಸಿದ್ಧಾಂತವಿರೋಧಿಯಾಗಿದ್ದು, ಪ್ರಕೃತ ಪೂರ್ವಪಕ್ಷದ ಸಾಧಕವೆಂಬುದಾಗಿ "ಏವಂಚ' ಇತ್ಯಾದಿ ವಚನದಿಂದ ಹೇಳುತ್ತಾರೆ. "ತಸ್ಯೈವ ಕಾರಣತ್ವಂ' – ಕರ್ತೃತ್ವ, ಉಪದಾನತ್ವ, ಮುಂತಾದ ಎಲ್ಲರೂಪದ ಕಾರಣತ್ವವೂ, ಹೀಗೆ ಅರ್ಥ

ಸರ್ವರೂಪಗಳಿಂದಲೂ ಪ್ರಾಗಭಾವಕ್ಕೇ ಕಾರಣತ್ವವೆಂಬ ವಿಷಯವನ್ನು ಶಂಕಾಸಮಾಧಾನಗಳಿಂದ "ನನು" ಇತ್ಯಾದಿ ವಚನಗಳಿಂದ ವಿಶದಪಡಿಸು

वश्यमङ्गीकरणीय । न । प्रलये तत्स ( त्ताभा ) त्त्वाभावस्य प्रमितत्वेन प्रागभावस्यैव जगत्कर्तृत्वोपपत्तेः । न चैतदनुमानजातमुदाहृत श्रुतिविरुद्धत्वेनाप्रमाणमिति साम्प्रतम् । असदेवेदमग्र आसीत् । तदसदेव सन्मनोऽकुरुत । असतः सदजायतेत्यादिश्रुतिसंवादित्वेन

— ಪದಾರ್ಥ ದೀಪಿಕಾ —

ಈಶ್ವರನನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು ” ಹೀಗೆ ಶಂಕಿಸಬಾರದು ಏಕೆಂದರೆ– ಪ್ರಲಯದಲ್ಲಿ ಈಶ್ವರನ ಅಸ್ತಿತ್ವವಿಲ್ಲವೆಂಬುದು ಪ್ರಮಾಣಸಿದ್ಧವಾದುದರಿಂದ ಪ್ರಾಗಭಾವಕ್ಕೇ ಜಗತ್ಕರ್ತೃತ್ವವು ಯುಕ್ತಿಯೊಪ್ಪಿತವೆನಿಸುತ್ತದೆ ಮತ್ತು ಇದೆಲ್ಲ ಅನುಮಾನವು, ಹಿಂದೆ ಉದಾಹರಿಸಲ್ಪಟ್ಟ ಶ್ರುತಿಯಿಂದ ವಿರುದ್ಧವಾದುದರಿಂದ ಪ್ರಮಾಣವಲ್ಲವೆಂಬುವುದು ಸಮಂಜಸವಲ್ಲ ಏಕೆಂದರೆ– “ಅಸದೇವೇದಮಗ್ರ ಆಸೀತ್ । ತದಸದೇವ ಸನ್ಮನೋಽಕುರತ । ಅಸತಃ ಸದಜಾಯತ” ಈ ಮುಂತಾದ ಶ್ರುತಿಗಳ ಸಂವಾದವುಳ್ಳದ್ದಿರುವುದರಿಂದ, ಆ

— ವಿಶೇಷಾರ್ಥಪ್ರದೀಪಿಕಾ —

ತ್ತಾರೆ ಸಮಾಧಾನವನ್ನು “ನ” ಇತ್ಯಾದಿ ವಚನದಿಂದ ಹೇಳುತ್ತಾರೆ “ತತ್ಸತ್ತ್ವಾಭಾವಸ್ಯ” – ಈಶ್ವರಾದಿಗಳ ಸ್ಥಿತಿ (ಅಸ್ತಿತ್ವ) ಇಲ್ಲವೆಂಬುದು ಇದು ಇತರ ಸಂಗ್ರಾಹಕವಾಗಿದೆ “ಯಾವುದು ಕಾರ್ಯವೋ ಅದು ಉಪಾದಾನಪೂರ್ವಕವೇ ಆದುದು,” ಎಂಬ ನಿಯಮವಿರುವದರಿಂದ, ಮಹದಾದಿಗಳ ಉಪಾದಾನರೂಪವಾಗಿ ಪ್ರಧಾನವನ್ನು ಅವಶ್ಯವಾಗಿ ಅಂಗೀಕರಿಸಬೇಕೆಂದು ಶಂಕಿಸಿದರೆ ಇದು ಸರಿಯಲ್ಲ ಏಕೆಂದರೆ ಪ್ರಲಯದಲ್ಲಿ, ಭಾವತ್ವಯುಕ್ತಿಯಿಂದ ಈಶ್ವರಾದಿಗಳ ಅಸ್ತಿತ್ವವು ಇಲ್ಲವೆಂಬುದು ಪ್ರಮಾಣಸಿದ್ಧವಾದುದರಿಂದ ಮಾಯಾವಾದಿಗಳು ಅಂಗೀಕರಿಸಿದ ಬ್ರಹ್ಮನ ಹಾಗೆ ಜಗತ್ಕರ್ತೃವಾದ ಪ್ರಾಗಭಾವಕ್ಕೇ ಉಪಾದಾನತ್ವವು ಯುಕ್ತವಾಗುತ್ತದೆ ಹೀಗೆಯೂ ತಿಳಿಯಬೇಕು

‘ಉದಾಹೃತ ಶ್ರುತಿವಿರುದ್ಧತ್ವೇನ’’ – ‘ ಸದೇವ ಸೋಮ್ಯ” ಈ ಮುಂತಾದ ಶ್ರುತಿಗಳಿಂದ ವಿರುದ್ಧವಾದುದರಿಂದ, ಹೀಗೆ ಅರ್ಥ “ಅಸದೇವೇದ ಮಗ್ರ ಆಸೀತ್” ಎಂಬ ಶ್ರುತಿಯು ಪ್ರಾಗಭಾವಕ್ಕೆ ನಿಯತಪೂರ್ವವೃತ್ತಿತ್ವವೆಂಬ ಯುಕ್ತಿಯು ಸಂವಾದಿಯಾಗಿದೆ. “ತದಸದೇವ’’ – ಎಂಬ ಶ್ರುತಿಯು ಪ್ರಾಗಭಾವಕ್ಕೆ ಕರ್ತೃತ್ವವನ್ನು ಸಾಧಿಸುವ “ಪರಿಶೇಷ” ಯುಕ್ತಿಯು ಸಂವಾದಿಯಾಗಿದೆ ಮೂರನೆಯದು ಮಾತ್ರ (ಅಸತಃ ಸದಜಾಯತ ಎಂಬುದು) ಕಾರ್ಯವು ಪ್ರಾಗಭಾವಮಾತ್ರದಿಂದ ಜನಿಸುವಂತಹದೆಂಬ ಯುಕ್ತಿಯು ಸಂವಾದಿಯಾಗಿದೆ.

श्रुतिमात्रतः प्राबल्यात् । प्रबलयुक्तिविरुद्धायाश्च श्रुतेः स्वार्थपरित्याग-
स्यातीताधिकरणे स्थितत्वात् । प्रागभावस्यापि स्वरूपसत्त्वादिना
सदेवेत्यादिप्रयोगविषयत्वोपपत्तेः । नन्वेतेन सर्वे इत्यसदादिशब्दानां
ब्रह्मार्थत्वमुक्तम् । तत्किं शब्दानामन्यत्र शक्तिरेव नास्ति । किं वा

— ಪದಾರ್ಥದೀಪಿಕಾ —

ಅನುಮಾನವು ಕೇವಲ ಶ್ರುತಿಗಿಂತ ಪ್ರಬಲವಾಗಿರುತ್ತದೆ ಪ್ರಬಲಯುಕ್ತಿಯಿಂದ
ವಿರುದ್ಧವಾದ ಶ್ರುತಿಗೆ, ತನ್ನ ಆಪಾತವಾದ ಅರ್ಥಪರತ್ವವಿಲ್ಲದಿರುವದೆಂಬ
ವಿಷಯವು ಹಿಂದಿನ ಅಧಿಕರಣದಲ್ಲಿ ಸಿದ್ಧವಾಗಿದೆ ಪ್ರಾಗಭಾವಕ್ಕಾದರೋ
ಸ್ವರೂಪಸತ್ವ ಮುಂತಾದುದು ಇರುವದರಿಂದ, "ಸದೇವ" ಈ ಮುಂತಾದ
ಪ್ರಯೋಗದ ವಿಷಯವಾಗುವಿಕೆಯು ಯುಕ್ತವೆನಿಸುತ್ತದೆ

ಇನ್ನು "ಏತೇನ ಸರ್ವೇ" ವ್ಯಾಖ್ಯಾತಾಃ ವ್ಯಾಖ್ಯಾತಾಃ" ಎಂಬ ಸೂತ್ರದಿಂದ
"ಅಸತ್" ಮುಂತಾದ ಶಬ್ದಗಳಿಗೆ ಬ್ರಹ್ಮವು ಅರ್ಥವೆಂಬುದಾಗಿ ಹೇಳಲ್ಪ
ಟ್ಟಿದೆ," ಎಂಬುದಾಗಿ ಶಂಕಿಸಬಹುದು ಆದರೆ ಹಾಗಾದಲ್ಲ ಬ್ರಹ್ಮ (ವಿಷ್ಣು)
ವನ್ನು ಬಿಟ್ಟು, ಬೇರೆ ಅರ್ಥಗಳಲ್ಲಿ ಶಬ್ದಗಳಿಗೆ ಶಕ್ತಿಯೇ ಇಲ್ಲವೋ ? ಇಲ್ಲವೆ

— ವಿಶೇಷಾರ್ಥಪ್ರದೀಪಿಕಾ —

ಇನ್ನು ಶ್ರುತಿಯಲ್ಲಿಯ ಅಸಚ್ಛಬ್ದವು "ತುಚ್ಛ' ಪರವೆಂದು ಹೇಳಬಾರದು.
ಏಕೆಂದರೆ "ಆಸೀತ್" ಇತ್ಯಾದಿಯಾಗಿ ಅಸ್ತಿತ್ವವನ್ನು ಹೇಳುವುದರಿಂದ
ವಿರೋಧವು ಬರುತ್ತದ ಹೀಗೆ ಭಾವ

"ಸ್ವಾರ್ಥಪರಿತ್ಯಾಗಸ್ಯಾತೀತಾಧಿಕರಣೇ ಸ್ಥಿತತ್ವಾತ್" –ಹೀಗ ಹೇಳಿದುದ
ರಿಂದ, ಪೂರ್ವದ ಅಧಿಕರಣದ ಸಿದ್ಧಾಂತಯುಕ್ತಿಯಿಂದ ಪೂರ್ವಪಕ್ಷವು
ಹೊರಟಿರುವದರಿಂದ "ಆಪವಾದಿಕೀ" ಸಂಗತಿಯು" ಎಂಬುದೂ ಸೂಚಿತವಾಗಿದೆ
'ಸ್ವರೂಪಸತ್ತ್ವಾದಿನಾ" – ಕಾರ್ಯೋನ್ಮುಖತ್ವ ಮುಂತಾದ ಕಾರಣಗಳಿಂದ,
"ಮನೋಽಕುರುತ" ಇತ್ಯಾದಿಯಾಗಿ ಹೇಳಿದ 'ಯೋಗವು'' "ಆದಿ" ಪದದ
ಅರ್ಥವು

"ನನ್ವೇತೇನ ಸರ್ವೇ" – "ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ"
ಎಂಬ ಪೂರ್ವಾಧ್ಯಾಯದ ಅಂತಿಮ ಅಧಿಕರಣದಲ್ಲಿ "ನೈವ ಸಾಧಯಿತುಂ ಶಕ್ಯಃ"
ಇತ್ಯಾದಿ ವಚನಗಳಿಂದ, ಅಸಚ್ಛಬ್ದವಾಚ್ಯವಾದ ತುಚ್ಛವು ಈಶ್ವರಾಧೀನವಾದು
ದರಿಂದ, ತದಧೀನತ್ವನ್ಯಾಯದಿಂದ "ಅಸತ್'' ಶಬ್ದಕ್ಕೆ ಬ್ರಹ್ಮವೆಂಬ ಅರ್ಥವು
ಹೇಳಲ್ಪಟ್ಟಿತು ಆದುದರಿಂದ, ಆ "ಅಸತ್' ಶಬ್ದದಿಂದ, ಇನ್ನೊಂದನ್ನು

श्रुतेस्तत्र तात्पर्याभावः । नाद्यः । समाकर्षाङ्गीकारात् । न द्वितीयः । युक्त्युपेतायास्तत्र तात्पर्योपपत्तेः । तथाऽपि प्रागभावस्यैव कारणत्वं

— ಪದಾರ್ಥದೀಪಿಕಾ —

ಶ್ರುತಿಗಳಿಗೆ ಅಲ್ಲಿ ತಾತ್ಪರ್ಯವಿರುವುದಿಲ್ಲವೋ ? ಹೀಗ ಪ್ರಶ್ನೆ- ಮೊದಲ ನೆಯ ಕಲ್ಪವು ಸರಿಯಲ್ಲ ಏಕೆಂದರೆ ಸಮಾಕರ್ಷವನ್ನು ಅಂಗೀಕರಿಸಿದ್ದಾಗಿದೆ ಎರಡನೆಯ ಕಲ್ಪವು ಸರಿಯಾದುದಲ್ಲ ಏಕೆಂದರ ಯುಕ್ತಿಯಿಂದ ಕೂಡಿದ ಶ್ರುತಿಗೆ ಆ ಇತರ ಅರ್ಥಗಳಲ್ಲಿ ತಾತ್ಪರ್ಯವು ಯುಕ್ತಿಒಪ್ಪಿತವಾಗುತ್ತದೆ ಆದರೂ ಪ್ರಾಗಭಾವಕ್ಕೇ, ಕಾರಣತ್ವವು ಕರ್ತೃತ್ವವು, ಇವರಡೂ ಎಲ್ಲಿಯೂ

— ವಿಶೇಷಾರ್ಥಪ್ರದೀಪಿಕಾ —

(ಪ್ರಾಗಭಾವವನ್ನು) ಹೇಗ ಗ್ರಹಿಸುವುದು? ಹೀಗೆ ಭಾವವು 'ಅನ್ಯತ್ರಾಪಿ ವೃತ್ತ್ಯಂಗೀಕಾರಾತ್'' ಎಂಬ ಭಾಷ್ಯದಂತೆ ಸಮಾಧಾನವನ್ನು "ತತ್ ಕಿಂ'' ಇತ್ಯಾದಿ ವಚನದಿಂದ ಹೇಳುತ್ತಾರ "ಅನ್ಯತ್ರ" – ಭಾವಾದಿಗಳಲ್ಲಿ ಭಾವ ವ್ಯುತ್ಪತ್ತಿಯಿಂದ, "ಏತೇನ ಸರ್ವೇ ವ್ಯಾಖ್ಯಾತಾಃ" ಎಂಬಲ್ಲಿ, "ಅಸತ್" ಪದವು ತುಚ್ಛಪರವೆಂದು ಒಪ್ಪಿ ವಿಚಾರವು ಹೊರಟಿದ್ದರೂ, ಇಲ್ಲಿ ಭಾವವ್ಯುತ್ಪತ್ತ್ಯಾದಿ ಗಳಿಂದ ಯೋಗದಿಂದ ಅಭಾವಾರ್ಥಕವೆಂದಂಗೀಕರಿಸಿ ವಿಚಾರವನ್ನು ಮಾಡು ವುದು ವಿರುದ್ಧವಾಗುವುದಿಲ್ಲವೆಂದು ತಿಳಿಯಬೇಕು "ತತ್ರ'' – ಅಭಾವ ಮುಂತಾದ ಅರ್ಥಗಳಲ್ಲಿ "ಸಮಾಕರ್ಷಾಂಗೀಕಾರಾತ್" – ಭಗವಂತನ ವಾಚಕ ಗಳೇ ಆದರೂ ಶಬ್ದಗಳಿಗೆ ಬೇರ ಅರ್ಥಗಳಲ್ಲಿ ನ್ಯೂನ (ಅಮುಖ್ಯ– ಕಡಿಮೆಯ) ವೃತ್ತಿಯಿಂದ ವಾಚಕವಾಗಿ ವ್ಯವಹಾರವನ್ನು ಸಮಾಕರ್ಷಾಧಿಕರಣದಲ್ಲಿ ಒಪ್ಪಿ ರುತ್ತಾರ ಆದುದರಿಂದ, ಹೀಗ ಇಲ್ಲಿಯ ಅರ್ಥ 'ಯುಕ್ತ್ಯುಪೇತಾಯಾಃ" ಇನ್ನು – ಇಲ್ಲಿ ಶ್ರುತಿಯು, ತನ್ನ ಅರ್ಥದಲ್ಲಿ ತನಗೆ ಪರತ್ವವು (ತಾತ್ಪರ್ಯವು) ಬರುವುದಕ್ಕೋಸುಗ ಯುಕ್ತಿಯನ್ನವಲಂಬಿಸುತ್ತದೆ ಯುಕ್ತಿಯಾದರೂ ತನ್ನ ಪ್ರಾಮಾಣ್ಯವನ್ನು ಪಡೆಯುವುದಕ್ಕಾಗಿ ಶ್ರುತಿಯಸಂವಾದವನ್ನು ಅಪೇಕ್ಷಿಸುತ್ತದೆ ಆದುದರಿಂದ, 'ಅನ್ಯೋನ್ಯಾಶ್ರಯ"ವೆಂದು ಶಂಕಿಸಬಾರದು ಏಕೆಂದರೆ "ಸದೇವ" ಇತ್ಯಾದಿ ಶ್ರುತಿಯ ಅರ್ಥವನ್ನು ಬಾಧಗೊಳಿಸುವುದರಲ್ಲಿಯೇ ಯುಕ್ತಿಯು ಶ್ರುತಿಸಂವಾದವನ್ನಪೇಕ್ಷಿಸುತ್ತದೆ ಆದರೆ ಪ್ರಾಗಭಾವಾದಿಗಳ ಕಾರಣತ್ವವನ್ನು ಸಾಧನಮಾಡುವುದರಲ್ಲಿ ಯುಕ್ತಿಯು ಶ್ರುತಿಯನ್ನಪೇಕ್ಷಿಸು ವುದಿಲ್ಲ

"ತಥಾಽಪಿ" – "ಕಾರಣತ್ವಂ" =ಉಪಾದಾನಕಾರಣತ್ವವು ಘಟದ ಪ್ರಾಗ

कर्तृत्वं च न क्वाप्युपलब्धमिति चेन्न । अलौकिकार्थस्य यथागमं ग्राह्यत्वात् । सन्ततोत्पत्तिप्रसङ्गस्तु ब्रह्मवादिनोऽपि समानः । इच्छादि ( कारणानां ) कादाचित्कत्वेन तत्समाधानं ममापि समानम् । अत एव श्रुतिराह । मनोऽकुरुतेति । तस्मात्तत्तत्प्रागभावस्यैव तत्तत्कर्तृत्वादुक्तमयुक्तमिति ।

— ಪದಾರ್ಥದೀಪಿಕಾ —

ಕಂಡಿರುವುದಿಲ್ಲವೆಂದು ಶಂಕಿಸಬಾರದು ಏಕೆಂದರೆ ಅಲೌಕಿಕ (ಲೋಕದಲ್ಲಿ ಕಂಡು ಬಾರದ) ಅರ್ಥಗಳನ್ನು ಆಗಮಗಳನ್ನು ಅನುಸರಿಸಿ ಗ್ರಹಿಸ (ಸ್ವೀಕರಿಸ) ಬೇಕಾಗುತ್ತದೆ ಇನ್ನು– ಸಂತತ (ಯಾವಾಗಲೂ) ಉತ್ಪತ್ತಿಯಾಗಲೆಂಬ ಪ್ರಸಂಗವು ಬ್ರಹ್ಮವಾದಿಗಳಿಗೂ ಸಮಾನವಾಗುತ್ತದೆ. ಇಚ್ಛಮುಂತಾದುದು ಕಾದಾಚಿತ್ಕವಾದುದಂಬ ಕಾರಣದಿಂದ ಹೇಳುವ ಆ ಸಮಾಧಾನವು ನನಗೂ ಸಮಾನವಿರುತ್ತದೆ ಆದುದರಿಂದಲೇ ಶ್ರುತಿಯು, "ತನ್ಮನೋಽಕುರುತ" ಎಂಬುದಾಗಿ ಹೇಳಿರುತ್ತದೆ. ಆದುದರಿಂದ, ಆಯಾಯ ಪ್ರಾಗಭಾವವೇ ಆಯಾಯ

— ವಿಶೇಷಾರ್ಥಪ್ರದೀಪಿಕಾ —

ಭಾವವು ಘಟವನ್ನು ಕುರಿತು ಉಪಾದಾನಕಾರಣವಾಗಿರುವುದೂ ಕರ್ತೃವಾಗಿರುವುದೂ ಲೋಕದಲ್ಲಿ ಕಂಡಿಲ್ಲ ಆದುದರಿಂದ, ಮಹದಾದಿಕಾರ್ಯಗಳ ಪ್ರಾಗಭಾವಕ್ಕೆ ಮಹದಾದಿಗಳನ್ನು ಕುರಿತು, ಉಪಾದಾನ ಕಾರಣತ್ವವೂ ಕರ್ತೃತ್ವವೂ ಇವೆರಡೂ ಯುಕ್ತವಾಗಲಾರವು, ಹೀಗೆ ಭಾವ "ಅಲೌಕಿಕಾರ್ಥಸ್ಯ" ಲೋಕದಲ್ಲಿ ಅಶರೀರನಿಗೆ (ಶರೀರವಿಲ್ಲದವನಿಗೆ) ಕರ್ತೃತ್ವವು ಕಂಡಿರದಿದ್ದರೂ ಆಗಮಬಲದಿಂದ ಶರೀರವಿಲ್ಲದಿದ್ದರೂ ಈಶ್ವರನಿಗೆ ಕರ್ತೃತ್ವವನ್ನು ಹೇಗೆ ಅಂಗೀಕರಿಸುತ್ತಾರೆಯೋ ಹಾಗೆ ಇಲ್ಲಿಯೂ ಬೇರೆ ಪ್ರಾಗಭಾವಗಳಲ್ಲಿ ಕರ್ತೃತ್ವವು ಕಂಡಿರದಿದ್ದರೂ ಇಲ್ಲಿ– ಮಹದಾದಿ ಪ್ರಾಗಭಾವದಲ್ಲಿ ಮಹದಾದಿಗಳನ್ನು ಕುರಿತು ಕರ್ತೃತ್ವವನ್ನು ಆಗಮಬಲದಿಂದ ಒಪ್ಪುವುದು ಅಯುಕ್ತವಾಗಲಾರದು, ಹೀಗೆ ಭಾವ

"ಬ್ರಹ್ಮವಾದಿನೋಽಪಿ" – ಬ್ರಹ್ಮವೇ ಉಪಾದಾನಕಾರಣವು ಹಾಗೂ ಕರ್ತೃವು ಹೀಗೆ ಹೇಳುವವನ ಮತದಲ್ಲಿಯೂ, ಕರ್ತೃ, ಉಪಾದಾನಗಳೆರಡೂ ಇರುವುದರಿಂದ ಸಂತತವಾಗಿ ಕಾರ್ಯದ ಉತ್ಪತ್ತಿಯಾಗಲೆಂಬ ಪ್ರಸಂಗವು, ಬರುತ್ತದೆ ಹೀಗೆ ಅರ್ಥ.

"ಮಮಾಪಿ ಸಮಾನಂ" - ಅಭಾವಕ್ಕೆ ಕಾರ್ಯೋನ್ಮುಖವಾಗಿರುವುದು

तदिदमुक्तमसदभावः श्रुत्या जगत्कर्तृत्वेनोच्यते । अनुमीयते च तथा । तस्मात्स एव जगत्कर्तेति । अत्रासच्छब्दो भावसाधनः श्रुत्यनुगमार्थमभावे प्रयुक्तः । अपरोऽपि वृत्तिः । भावत्वहेतुना कार्य-

— ಪದಾರ್ಥದೀಪಿಕಾ —

ವಸ್ತುವಿನ ಕರ್ತೃವಾಗುವುದರಿಂದ, ಬ್ರಹ್ಮವು ಜಗತ್ಕಾರಣವೆಂದು ಹೇಳಿದುದು ಯುಕ್ತವಲ್ಲ ಹೀಗೆ ಪೂರ್ವಪಕ್ಷವು

ಈ ಅಭಿಪ್ರಾಯವು "ಅಸತ್"= ಅಭಾವವು, ಶ್ರುತಿಯಿಂದ ಜಗತ್ಕರ್ತೃವೆಂಬುದಾಗಿ ಹೇಳಲ್ಪಡುತ್ತದೆ ಹಾಗು ಯುಕ್ತಿಯಿಂದಲೂ ಹಾಗೆ ಊಹಿಸಲ್ಪಡುತ್ತದ ಆದುದರಿಂದ, ಪ್ರಾಗಭಾವವೇ ಜಗತ್ಕರ್ತೃವು, ಎಂಬುದಾಗಿ ಸೂತ್ರಭಾಗದಿಂದ ಹೇಳಲ್ಪಟ್ಟಿರುತ್ತದೆ ಇಲ್ಲಿ "ಅಸತ್" ಶಬ್ದವು, ಭಾವಸಾಧನವು ಆದು, ಶ್ರುತಿಯ ಅನುಗಮದ ಸಲುವಾಗಿ ಅಭಾವಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ ಇನ್ನೂ ಒಂದು ವೃತ್ತಿಯೂ ಇದೆ– "ಭಾವತ್ವ (ಭಾವವಾಗಿರುವುದೆಂಬ) ವೆಂಬ ಯುಕ್ತಿಯಿಂದ, ಕಾರ್ಯಪದಾರ್ಥದ ಹಾಗ ಈಶ್ವರ

— ವಿಶೇಷಾರ್ಥಪ್ರದೀಪಿಕಾ —

ಮುಂತಾದ ರೂಪವಾದ ಇಚ್ಛೆಯು ಇರುವುದೆಂದು ಒಪ್ಪಿರುವುದರಿಂದ ಸಮಾನವೆಂದು ಭಾವವು ಎಲ್ಲವೂ ಸೂತ್ರಾರೂಢವೆಂಬುದಾಗಿ "ತದಿದಮುಕ್ತಂ" ಎಂಬ ವಾಕ್ಯದಿಂದ ತೋರಿಸುತ್ತಾರೆ "ಅಸದಿತಿ ಸೂತ್ರಖಂಡೇನ" (ಅಸದಿತಿ ಚೇತ್" ಎಂಬ ಸೂತ್ರಭಾಗದಿಂದ) ಎಂಬುದನ್ನು ಹಚ್ಚಿಕೊಳ್ಳಬೇಕು

"ಅತ್ರ"- ಸೂತ್ರದಲ್ಲಿ ಅಥವಾ ಸೂತ್ರಕ್ಕೆ ಈ ಅರ್ಥವಿದೆಯೆಂಬಲ್ಲಿ, ಹೀಗೆ ಅರ್ಥ "ಅಸತ್ ಶಬ್ದ"—ನಞ ಎಂಬ ಉಪಪದಯುಕ್ತವಾದ "ಸತ್" ಎಂಬ ಶಬ್ದವು 'ಅಸ–ಭುವಿ" ಎಂಬಲ್ಲಿ ಹೇಳಿದ "ಅಸ" ಧಾತುವಿನ ಮುಂದೆ ಭಾವಾರ್ಥದಲ್ಲಿ ಛಾಂದಸ ಶತೃ ಪ್ರತ್ಯಯವು ಬರಲಾಗಿ, ನಞ ಸಮಾಸವಾಗಿ "ಅಸತ್" ಎಂಬ ರೂಪವಾಗಿದೆ ಕರ್ತ್ರರ್ಥದಲ್ಲಿ ಸಾಧನಮಾಡುವಾಗಲೂ ಇದೇ ರೀತಿಯು

ತಿಳುವಳಿಕೆಗೆ ಸುಲಭವಾದುದರಿಂದ "ಅಭಾವಃ" ಎಂಬುದಾಗಿಯೇ ಹೇಳಬೇಕಿತ್ತು ಸೂತ್ರದಲ್ಲಿ ಹಾಗೆ ಏಕೆ ಹೇಳಲಿಲ್ಲ? ಈ ಶಂಕೆಯನ್ನು "ಶ್ರುತ್ಯರ್ಥಾನುಗಮಾರ್ಥಂ" ಎಂಬ ವಚನದಿಂದ ಪರಿಹರಿಸುತ್ತಾರೆ ಅಸದೇ ವೇದಮಗ್ರ ಆಸೀತ್ ಇತ್ಯಾದಿ ಶ್ರುತಿಯನ್ನು ಇಲ್ಲಿ ಪರಿಗ್ರಹಿಸಬೇಕು ಇದರಿಂದ ಶ್ರುತಿಯಲ್ಲಿರುವ "ಅಸತ್" ಶಬ್ದವು ಭಾವಸಾಧನವೆಂಬು ಸೂಚಿತವಾಗುತ್ತದೆ.

असत्कारणं न हि ॥ श्रुत्यर्थो भवति क्वापि

यदीश्वरादिकमपि प्रलयेऽसदनुमीयत इति । अत्रासच्छब्दः कर्तृसाधनः । इह प्रथमां वृत्तिमभिप्रेत्य नेति सिद्धान्तांशं व्याख्याति ॥ असदिति ।

अभाव इत्यर्थः । कारणमिति तद्विशेषः कर्तोच्यते । हीत्यनेनेदमाह । उपपत्तिविरुद्धस्तावन्न वेदार्थः सम्भवति तदविरुद्धेऽर्थे

ಅಸತ್ತು (ಅಭಾವವು) ವಿಶ್ವದ ಕರ್ತೃವು; ಎಂಬುದು ಶ್ರುತಿಯ ಅರ್ಥವಾಗುವುದಿಲ್ಲ. ಪ್ರಾಗಭಾವವು ಕರ್ತೃವಾಗಿರುವುದೆಂಬುದು ಎಲ್ಲಿಯೂ ಕಂಡು ಬಂದಿಲ್ಲ

— ಪದಾರ್ಥದೀಪಿಕಾ —

ಮುಂತಾದುದೂ ಪ್ರಲಯದಲ್ಲಿ "ಅಸತ್" ಎಂಬುದಾಗಿ ಊಹಿಸಲ್ಪಡುತ್ತದೆ," ಎಂಬುದಾಗಿ ಇಲ್ಲಿ— "ಅಸತ್" ಶಬ್ದವು, ಕರ್ತೃಸಾಧನವಾಗಿದ ಇವೆರಡು ವೃತ್ತಿಗಳಲ್ಲಿ ಮೊದಲನೆಯದನ್ನು ಅಭಿಪ್ರಾಯದಲ್ಲಿ ತಂದುಕೊಂಡು, "ನ" ಇತ್ಯಾದಿಯಾದ ಸಿದ್ಧಾಂತಾಂಶವನ್ನು "ಅಸತ್" ಇತ್ಯಾದಿಯಾದ ಶ್ಲೋಕದಿಂದ ವ್ಯಾಖ್ಯಾನಿಸುತ್ತಾರೆ "ಅಸತ್" ಎಂಬುದಕ್ಕೆ "ಅಭಾವ" ಎಂದರ್ಥ. "ಕಾರಣಂ" ಎಂಬ ಪದದಿಂದ, ಕಾರಣದಲ್ಲಿ— ವಿಶೇಷ ಕಾರಣವೆನಿಸಿದ "ಕರ್ತೃ' ಎಂಬ ಅರ್ಥವು ಹೇಳಲ್ಪಡುತ್ತದೆ "ಹಿ" ಶಬ್ದದಿಂದ, "ಉಪಪತ್ತಿಯಿಂದ ( ಯುಕ್ತಿ ) ವಿರುದ್ಧವಾಗದ ಅರ್ಥವು ಸಂಭವಿಸುವಾಗ ಉಪಪತ್ತಿ

— ವಿಶೇಷಾರ್ಥಪ್ರದೀಪಿಕಾ —

"ಅಪರಾಽಪಿ ವೃತ್ತಿಃ- ಈ ಸೂತ್ರಭಾಗಕ್ಕೆ ಇನ್ನೂ ಒಂದು ಅರ್ಥವು, ಹೀಗೆ ಅರ್ಥ ಆ ಅರ್ಥವನ್ನು "ಭಾವತ್ವ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಅಸತ್" - ಅವಿದ್ಯಮಾನವು — ಇಲ್ಲದಿರುವಂತಹದು, ಹೀಗೆ ಅರ್ಥ ಈ ಬೇರೆ ಅರ್ಥವನ್ನು ಸೂಚಿಸಲು ಸೂತ್ರದಲ್ಲಿ "ಅಸತ್" ಶಬ್ದವನ್ನು ಪ್ರಯೋಗಿಸಿದುದು ಹೀಗೆ ಭಾವ "ಅತ್ರ" ಈ ಅರ್ಥದಲ್ಲಿ "ಕರ್ತೃಸಾಧನಃ"— "ಅಸ್ತೀತಿ ಸತ್, ನ ಸತ್ ಅಸತ್" ಹೀಗೆ ಕರ್ತೃಸಾಧನಾಂತವೆಂದು ತಿಳಿಯಬೇಕು ಇಲ್ಲಿ "ಅಭಾವ" ಶಬ್ದಕ್ಕೆ ಪ್ರಾಗಭಾವವೆಂದು ಅರ್ಥ "ತದ್ವಿಶೇಷಃ ಕರ್ತಾ"— ಇಲ್ಲಿ ಪ್ರಕೃತಕ್ಕೆ ಉಪಯೋಗವಿರುವುದರಿಂದ ಕರ್ತೃವೆಂದು ಹೇಳಲಾಗಿದೆ "ಉಪಾದಾನಮುಚ್ಯತೇ" (ಉಪಾದಾನವೂ "ಅಭಾವ" ಶಬ್ದದಿಂದ ಹೇಳಲ್ಪಡು

श्रुतिप्रायोपपत्तिभिः ॥ अविरोधश्चतुर्थे तु पादे सम्यक् समर्थ्यते ॥

सम्भवतीत्युक्तम् । प्रकृतश्चोपपत्तिविरुद्धः । तथा च वक्ष्याम इति । श्रुत्यर्थो न भवतीत्युपलक्षणम् । अनुमानप्रमेयमपीदं न भवत्युपपत्तिविरुद्धत्वादित्यपि द्रष्टव्यम् । किञ्च सम्भावित एव श्रुत्यर्थो वक्तव्योऽनुमातव्यश्च । न चैवं प्रकृतः । क्वाप्यभावस्य कर्तृत्वानुपलम्भादित्याह ॥

ಶ್ರುತಿಪ್ರಧಾನಕವಾದ ಯುಕ್ತಿಗಳಿಂದ ಶ್ರುತಿಗಳಿಗೆ ಅವಿರೋಧವು ಚತುರ್ಥ ಪಾದದಲ್ಲಿ ಚನ್ನಾಗಿ ಸಮರ್ಥಿಸಲ್ಪಡುತ್ತದೆ.

## — ಪದಾರ್ಥದೀಪಿಕಾ —

ವಿರುದ್ಧವಾದುದು ವೇದಾರ್ಥವಾಗುವುದಿಲ್ಲ" ಎಂದು "ದೃಢಯುಕ್ತಿ ವಿರೋಧೀತು ಸರ್ವತ್ರ ನ್ಯಾಯ ಈದೃಶಃ" ಎಂಬಲ್ಲಿ ಹಿಂದೆ ಹೇಳಲ್ಪಟ್ಟಿದೆ ಪ್ರಕೃತವಾದ— ಪ್ರಾಗಭಾವವು ಜಗತ್ಕರ್ತೃವೆಂಬ, ಪೂರ್ವಪಕ್ಷಿಯು ಹೇಳಿದ ಶ್ರುತ್ಯರ್ಥವು, ಯುಕ್ತಿಯಿಂದ ವಿರುದ್ಧವಾದುದು ಈ ಸಂಗತಿಯನ್ನು ಮುಂದೆ ಹೇಳುವೆವು" ಎಂಬ ವಿಷಯವನ್ನು ಹೇಳಿದ್ದಾರ "ಶ್ರುತ್ಯರ್ಥೋ ನ ಭವತಿ" (ಶ್ರುತಿಯ ಅರ್ಥವಾಗುವದಿಲ್ಲ) ಎಂಬ ವಚನವು ಸಂಗ್ರಾಹಕವಾಗಿದೆ ಅನುಮಾನ (ಯುಕ್ತಿ) ದಿಂದ ಸಿದ್ಧಿಸುವಂತಹದೂ ಇದು ಆಗುವದಿಲ್ಲ. ಏಕೆಂದರೆ ಯುಕ್ತಿ (ಉಪಪತ್ತಿ) ವಿರುದ್ಧವಾಗಿದೆ" ಎಂಬ ಸಂಗತಿಯನ್ನು (ಸಂಗ್ರಹಿಸಿದೆಯೆಂದೂ) ತಿಳಿಯಬೇಕು

ಮತ್ತು— ಸಂಭಾವಿತವಾದುದನ್ನೇ ಶ್ರುತಿಯ ಅರ್ಥವೆಂಬುದಾಗಿ ಹೇಳಬೇಕು ಹಾಗು ಅದನ್ನೇ ಯುಕ್ತಿಯಿಂದ ತರ್ಕಿಸಬೇಕು ಪ್ರಕೃತದ ಅರ್ಥವಾದರೋ ಅಂತಹದಲ್ಲ ಏಕೆಂದರೆ ಪ್ರಾಗಭಾವಕ್ಕೆ ಕರ್ತೃತ್ವವು ಎಲ್ಲಿಯೂ ಕಂಡಿಲ್ಲ ಈ ಸಂಗತಿಯನ್ನು "ಕ್ವಾಪಿ" ಇತ್ಯಾದಿ ವಚನದಿಂದ ಹೇಳುತ್ತಾರೆ

## — ವಿಶೇಷಾರ್ಥಪ್ರದೀಪಿಕಾ —

ತ್ತದೆ) ಎಂಬುದನ್ನು ಇಲ್ಲಿ ತಿಳಿಯಬೇಕು "ಪ್ರಕೃತಶ್ಚ"— ಪ್ರಾಗಭಾವವು ವಿಶ್ವಕರ್ತೃವೆಂದು ಮುಂತಾಗಿ ಪೂರ್ವಪಕ್ಷಿಯು ಹೇಳಿದ ಶ್ರುತ್ಯರ್ಥವು. 'ವಕ್ಷ್ಯಾಮಃ" — "ನಿಷೇಧೈಕಸ್ವರೂಪಸ್ಯ ನ ಕರ್ತೃತಾ"— ಇತ್ಯಾದಿ ವಚನಗಳಿಂದ ಮುಂದೆ ಹೇಳುವರೆಂದು ತಿಳಿಯಬೇಕು

"ಸಂಭಾವಿತಃ" — "ಸಂಭಾವಿತಃ ಪ್ರತಿಜ್ಞಾಯಾಃ ಅರ್ಥಃ ಸಾಧ್ಯೇತ

क्वापीति । असत्कारणं न ह्युपलब्धमित्यनुवर्तते । चतुर्थपादादस्याधिकरणस्य वैलक्षण्यं दर्शयितुमल्पेत्याद्युक्तम् । तदविशदम् । वैलक्षण्यज्ञानस्योभयस्वरूपज्ञानाधीनत्वात् । अतश्चतुर्थपादार्थं दर्शयति ॥ श्रुतीति । श्रुतीनां प्रायो बाहुल्यम् । तत्सहिताभिरुपपत्तिभिः । श्रुतिप्रधानकोपपत्तिभिरिति यावत् । अविरोधो विरोधाभावः । श्रुतीनामिति शेषः । यद्वा श्रुतिप्रायशब्देन श्रुतिकल्पत्वमुच्यते ।

— ಪದಾರ್ಥದೀಪಿಕಾ —

" ಅಸತ್ ಕಾರಣಂ ನ ಹ್ಯುಪಲಬ್ಧಂ " ( ಪ್ರಾಗಭಾವವು ಕಾರಣವಾದುದು ಕಂಡಿಲ್ಲ) ಎಂಬ ವಚನವು ಅನುವರ್ತಿಸಲ್ಪಟ್ಟಿದ

ನಾಲ್ಕನೆಯ ಪಾದದಿಂದ, ಈ ಅಧಿಕರಣಕ್ಕೆ ವೈಲಕ್ಷಣ್ಯವನ್ನು ತೋರಿಸಲು, "ಅಲ್ಪ" ಈ ಮುಂತಾದ ವಚನವು ಹೇಳಲ್ಪಟ್ಟಿದೆ ಇದರ ಅರ್ಥವು ವಿಶದವಾಗಿಲ್ಲ ಏಕೆಂದರೆ ವೈಲಕ್ಷಣ್ಯಜ್ಞಾನವು (ಇದು ಇದರಿಂದ ಭಿನ್ನವಾಗಿದೆ ಇದರಲ್ಲಿ ಅಂತರ್ಗತವಲ್ಲ—ವಿಲಕ್ಷಣವೆಂಬ ಜ್ಞಾನವು) ಎರಡು ವಸ್ತುಗಳ ಸ್ವರೂಪಜ್ಞಾನದ ಆಧೀನವಾಗಿರುತ್ತದೆ ಆದುದರಿಂದ, ನಾಲ್ಕನೆಯ ಪಾದದ ಅರ್ಥವನ್ನು "ಶ್ರುತಿಪ್ರಾಯೋಪಪತ್ತಿಭಿಃ" ಇತ್ಯಾದಿ ವಚನದಿಂದ ಹೇಳುತ್ತಾರೆ "ಶ್ರುತಿಪ್ರಾಯೋಪಪತ್ತಿಭಿಃ"— ಇಲ್ಲಿ "ಶ್ರುತಿನಾಂ ಪ್ರಾಯಂ ಬಾಹುಲ್ಯಂ" (ಶ್ರುತಿಗಳ ಬಹುತ್ವವು) " ತತ್ಸಹಿತಾಭಿ ರುಪಪತ್ತಿಭಿಃ " (ಅದರಿಂದ ಸಹಿತವಾದ ಉಪಪತ್ತಿಗಳಿಂದ,) ಎಂಬ ಅರ್ಥವಿದೆ ಅಂದರೆ "ಶ್ರುತಿಯೇ ಪ್ರಧಾನವಾಗಿವುಳ್ಳ ಯುಕ್ತಿಗಳಿಂದ" ಎಂಬುದಾಗಿ ತಾತ್ಪರ್ಯ "ಅವಿರೋಧಃ" ವಿರೋಧದ ಇಲ್ಲದಿರುವಿಕೆಯು ಇಲ್ಲಿ 'ಶ್ರುತೀನಾಂ' (ಶ್ರುತಿಗಳಿಗೆ) ಎಂಬುದು ಶೇಷವಾಗಿದೆ ಅಥವಾ— "ಶ್ರುತಿಪ್ರಾಯೋಪಪತ್ತಿಭಿಃ" ಎಂಬಲ್ಲಿಯ "ಶ್ರುತಿಪ್ರಾಯ" ಶಬ್ದದಿಂದ, 'ಶ್ರುತಿಕಲ್ಪ'' (ಶ್ರುತಿಯನ್ನನುಸರಿಸಿದ) ವೆಂಬ ಅರ್ಥವು ಹೇಳಲ್ಪಟ್ಟಿದೆ

— ವಿಶೇಷಾರ್ಥಪ್ರದೀಪಿಕಾ —

ಹೇತುನಾ", ಎಂಬುದಾಗಿ ವಚನಗಳಿರುವುದರಿಂದ ಸಂಭಾವಿತವಾದುದನ್ನೇ ಶ್ರುತ್ಯರ್ಥವಾಗಿ ಹೇಳತಕ್ಕದ್ದು; ಹೀಗೆ ಭಾವ

"ಶ್ರುತಿಪ್ರಾಯೋಪಪತ್ತಿಭಿಃ" ಎಂಬಲ್ಲಿಯೂ "ಪ್ರಾಯಃ" ಶಬ್ದವು ಬಾಹುಲ್ಯವಾಚಕವಾಗಿದ್ದು, ಪ್ರಾಧಾನ್ಯಾರ್ಥಕವು ಆಗಿಪಯೆಂಬುದಾಗಿ "ಪ್ರಾಯೋ ಬಾಹುಲ್ಯಂ" ಇತ್ಯಾದಿ ಪಚವದಿಂದ ಹೇಳುತ್ತಾರೆ

श्रुतिगृहीताभिरुपपत्तिभिरित्यर्थः । अत्र तु स्वतन्त्राभिरिति स्फुटमेव । अथवाऽत्रोक्तार्थस्यैव तत्र प्रपञ्चनान्न दोषः । यथा प्रथमपादार्थप्रपञ्चना द्वितीयपादस्येत्याशयेनोक्तं सम्यगिति । यद्वा क्वापीत्यत्र सम्बध्यते । तेन क्वाप्यध्यात्मलक्षणे विषयेऽत्र त्वन्यत्रेति भेदः सूचितो

— ಪದಾರ್ಥದೀಪಿಕಾ —

ಅಂದರೆ "ಶ್ರುತಿಸಿದ್ಧವಾದ ವ್ಯಾಪ್ತ್ಯಾದಿಗಳುಳ್ಳ ಯುಕ್ತಿಗಳಿಂದ" ಎಂದು ವಿಶಿಷ್ಟಾರ್ಥ. 'ಈ ಪಾದದಲ್ಲಿ "ಸ್ವತಂತ್ರವಾದ ಯುಕ್ತಿಗಳಿಂದ ಅವಿರೋಧವು'' ಎಂಬ ಸಂಗತಿಯು ಸ್ಪಷ್ಟವೇ ಇದೆ ಅಥವಾ ಇಲ್ಲಿ ಹೇಳಿದ ಅರ್ಥವನ್ನೇ ಅಲ್ಲಿ ವಿಸ್ತರಿಸಿದುದರಿಂದ ದೋಷವಿಲ್ಲ ಪ್ರಥಮ ಪಾದದ ಅರ್ಥದ ವಿವರಣ ರೂಪತ್ವವು ದ್ವಿತೀಯ ಪಾದಕ್ಕೆ ಹೇಗೋ ಹಾಗೆ ಈ ಅಭಿಪ್ರಾಯದಿಂದ "ಸಮ್ಯಕ್'' ಎಂದು ಹೇಳಿದ್ದಾರೆ ಅಥವಾ "ಕ್ವಾಪಿ'' ಎಂಬುದಿಲ್ಲಿಯೂ ಅನ್ವಯಹೊಂದುತ್ತದೆ ಇದರಿಂದ, (ಆದುದರಿಂದ) "ಕ್ವಾಪಿ''— ಅಧ್ಯಾತ್ಮ ವಿಷಯದಲ್ಲಿ ಯುಕ್ತಿಸಹಿತ ಶ್ರುತಿಗಳಿಂದ ವಿರೋಧವು ಶ್ರುತಿಗೆ ಇಲ್ಲಿ ಪರಿಹರಿಸಲ್ಪಡುತ್ತದೆ ಬೇರೆ ಕಡೆಯಲ್ಲಿ—ಬೇರೆ ವಿಷಯದಲ್ಲಿ—ಅಧ್ಯಾತ್ಮೇತರ ವಿಷಯದಲ್ಲಿ ಶ್ರುತಿವಿರೋಧವು ಪರಿಹರಿಸಲ್ಪಡುತ್ತದೆ" ಹೀಗೆ ಭೇದವು ಸೂಚಿಸ

— ವಿಶೇಷಾರ್ಥಪ್ರದೀಪಿಕಾ —

"ಪ್ರಥಮಪಾದಾರ್ಥಪ್ರಪಂಚೇನ" - ಈ ಸ್ಮೃತ್ಯಧಿಕರಣದಲ್ಲಿ ಶ್ರುತಿವಿರುದ್ಧ (ಅಶ್ರೌತ) ಗಳಾದ ಸ್ಮೃತಿಗಳಿಗೆಲ್ಲಾ ಅಪ್ರಾಮಾಣ್ಯವನ್ನು ಸಂಕ್ಷೇಪದಿಂದ ಹೇಳಿ, ಅದರ ವಿವರಣವನ್ನು ಸಮಯಪಾದದಲ್ಲಿ ಹನ್ನೆರಡು ಅಧಿಕರಣಗಳಿಂದ ಹೇಗೆ ಮಾಡುವರೋ ಹಾಗೆ "ಇತರೇಷಾಂ ಚಾನುಪಲಬ್ಧೇರಿತಿ ಸಾಮಾನ್ಯತೋ ನಿರಾಕರಣಂ ಸಮಯಾನಾಂಕೃತಂ" ಇತ್ಯಾದಿಯಾದ ಭಾಷ್ಯವಚನವಿರುವುದರಿಂದ ಇದು ತಿಳಿದುಬರುತ್ತದೆ. ಹಾಗೆ ಇಲ್ಲಿಯೂ ಈ ಪಾದದಲ್ಲಿ ಹೇಳಿದ ಅರ್ಥವನ್ನು ನಾಲ್ಕನೆಯ ಪಾದದಲ್ಲಿ ವಿಶದ ಪಡಿಸುವರು, ಹೀಗೆ ಭಾವ

"ಅಧ್ಯಾತ್ಮಲಕ್ಷಣೇ" — ಉಪಾಸನಾಪಾದದಲ್ಲಿ — "ಅಧ್ಯಾತ್ಮಪ್ರವಣೋ ಭೂತ್ವಾ ತಸ್ಯ ಸನ್ನಿಹಿತತ್ವತಃ" ಎಂಬುದಾಗಿ ಅನುವ್ಯಾಖ್ಯಾನವಚನವಿರುವುದರಿಂದ ಅಧ್ಯಾತ್ಮವಿಷಯದಲ್ಲಿ ಯುಕ್ತಿಸಹಿತ ಶ್ರುತಿಗಳಿಂದ ವಿರೋಧ ಪರಿಹಾರವು ಚತುರ್ಥಪಾದದ ಅರ್ಥವೆಂದು ಸಿದ್ಧಿಸುತ್ತದೆ ಆದುದರಿಂದ, ಸಯುಕ್ತಿಕ ಶ್ರುತಿಗಳಿಂದ ವಿರೋಧ ಪರಿಹಾರವು ಚತುರ್ಥಪಾದದ ಅರ್ಥವಲ್ಲವಾದುದರಿಂದ ಈ ಅಧಿಕರಣಕ್ಕೆ ಆ 'ಅಧಿಕರಣಗಳಿಂದ ಸಾಂಕರ್ಯವಿಲ್ಲ ಹೀಗೆ ಭಾವ

असत्कार्यं यथा दृष्टं वस्तुत्वात्कारणं तथा ॥

भवति । यद्यप्येतत्प्रागेव वक्तव्यम् । तथाऽप्यसत्कार्यमित्यादेर्वक्ष्यमाणस्य सूत्रव्याख्यानान्तरत्वद्योतनाय व्यवधानेनोक्तम् । अन्यथा पूर्वमेव व्याख्यानमिदं तु तदुपपादनायोपयोगीति विज्ञायेत ।

अथ द्वितीयां वृत्तिमभिप्रेत्यासदिति चेन्नेत्येतावत्सूत्रं व्याचष्टे ॥ असदिति ।॥ कार्यं महदादिकम् । यथा प्रलयेऽसत्प्रमितं तथा वस्तुत्वाद्भावत्वात्कारणं कारणत्वेन सिद्धान्तिनाऽङ्गीकृतमीश्वरादिकमपि

ಮಹದಾದಿ ಕಾರ್ಯಪದಾರ್ಥಗಳು ಹೇಗೆ ಪ್ರಲಯದಲ್ಲಿ ಅಸತ್ಯ (ಇಲ್ಲದಿರುವವು) ಗಳೆಂಬುದಾಗಿ ಪ್ರಮಿತವಾಗಿವೆಯೋ ಹಾಗೆ ಭಾವರೂಪ ಪದಾರ್ಥಗಳಾ

— ಪದಾರ್ಥದೀಪಿಕಾ —

ಲ್ಪಡುತ್ತದೆ ಇನ್ನು ಈ ವಿಷಯವು ಹಿಂದಯೇ ಹೇಳಲ್ಪಡತಕ್ಕದ್ದು ಆದರೂ "ಅಸತ್ ಕಾರ್ಯಂ" ಈ ಮುಂತಾದ, ಮುಂದೆ ಹೇಳಲ್ಪಡುವ ವಚನವು, ಸೂತ್ರದ ಮೇಲಿನ ಇನ್ನೊಂದು ವ್ಯಾಖ್ಯಾನರೂಪವಾಗಿದೆಯೆಂಬುದನ್ನು ತೋರಿಸಿಕೊಡಲು, ವ್ಯವಧಾನದಿಂದ ಹೇಳಲ್ಪಟ್ಟಿದೆ ಹಾಗಿಲ್ಲದಿದ್ದಲ್ಲಿ— ಹಿಂದಿನದೇ ವ್ಯಾಖ್ಯಾನವು ಈ ಗ್ರಂಥವು ಮಾತ್ರ ಅದಕ್ಕೆ ಉಪಯೋಗಿಯಾಗಿದೆಯೆಂಬುದಾಗಿ ತಿಳಿದು ಬಂದೀತು !

ಇನ್ನು— ಎರಡನೆಯ ವೃತ್ತಿಯನ್ನು ಹೃದಯದಲ್ಲಿ ಇಟ್ಟುಕೊಂಡು, "ಅಸದಿತಿ ಚೇನ್ನ ' ಇಷ್ಟು ಸೂತ್ರಾಂಶವನು "ಅಸತ್" ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ "ಕಾರ್ಯಂ"— ಮಹದಾದಿ ಕಾರ್ಯವು, ಪ್ರಲಯದಲ್ಲಿ "ಯಥಾ"= ಹೇಗೆ "ಅಸತ್" (ಇಲ್ಲದ್ದು ಎಂದು) ಎಂಬುದಾಗಿ ಪ್ರಮಿತವಾಗಿದೆಯೋ " ತಥಾ "= ಹಾಗೆ 'ವಸ್ತುತ್ವಾತ್"— ಭಾವವಾದ ಕಾರಣದಿಂದ, " ಕಾರಣಂ' '= ಕಾರಣವೆಂದು ಸಿದ್ಧಾಂತಿಯಿಂದ ಸ್ವೀಕರಿಸಲ್ಪಟ್ಟ ಈಶ್ವರ

— ವಿಶೇಷಾರ್ಥಪ್ರದೀಪಿಕಾ —

"ಪ್ರಾಗೇವ" - "ಇತಿ ನ್ಯಾಯೋ ವಿನಿಶ್ಚಿತಃ" ಈ ಪದ್ಯದ ಅನಂತರ ಇಲ್ಲವೆ "ಕಥಂ ನ ನಿರ್ಣಯಂ ಕುರ್ಯಾತ್ " ಈ ಪದ್ಯದ ಅನಂತರದಲ್ಲಿ

"ಅಸತ್" ಪ್ರಮಿತಂ"— ಇಲ್ಲಿ "ಅಸತ್" ಶಬ್ದಕ್ಕೆ "ಅವಿದ್ಯಮಾನ" (ಇಲ್ಲದಿದ್ದುದು) ಎಂಬುದಾಗಿ ಅರ್ಥ ಇದರಂತೆ ಮುಂದೆಯೂ "ಅಸತ್" ಶಬ್ದದ

इति चेन्न निषेधैकस्वरूपस्य न कर्तृता ॥

प्रलयेऽसद्भवितुमर्हतीत्यर्थः। कुतो नेति चेत्। न तावदस्मादेवानुमानादभावस्य विश्वकर्तृत्वसिद्धिः। किन्त्वनेन प्रलयावस्थायामीश्वराद्यभावसिद्धौ कार्यस्य सकर्तृकत्वनियमे स्थिते प्रागभावस्य नियतपूर्वभावित्वेन विश्वकारणत्वं सिध्यत्कर्तृतयैव सेत्स्यतीति

ದುದರಿಂದ, ಕಾರಣರೆಂದು ಸಿದ್ಧಾಂತಿಗಳಿಂದ ಅಂಗೀಕರಿಸಲ್ಪಟ್ಟ ಈಶ್ವರ ಮುಂತಾದವುಗಳು, ಪ್ರಲಯದಲ್ಲಿ ಅಸತ್ಯ (ಇಲ್ಲದಿರುವವು) ಗಳು; ಹೀಗೆ ಶಂಕಿಸುವುದು ಯುಕ್ತವಲ್ಲ ಏಕೆಂದರೆ ಕೇವಲ ನಿಷೇಧವೇ ಸ್ವರೂಪವಾಗಿವುಳ್ಳ ಪ್ರಾಗಭಾವಕ್ಕೆ ಕರ್ತೃತ್ವವು ಯುಕ್ತವಾಗುವುದಿಲ್ಲ.

— ಪದಾರ್ಥದೀಪಿಕಾ —

ಮುಂತಾದುದೂ ಪ್ರಲಯದಲ್ಲಿ ಅಸತ್ (ಇಲ್ಲದಿರುವಂತಹದು) ಆಗಿರಲರ್ಹವಿದೆ "ಇತಿ"— ಹೀಗೆ "ನ" ಆಗುವುದಿಲ್ಲ ಏಕೆ ? ಎಂದರೆ– ಇದೇ ಅನುಮಾನ (ಯುಕ್ತಿ) ದಿಂದಲೇ ಪ್ರಾಗಭಾವಕ್ಕೆ ವಿಶ್ವಕರ್ತೃತ್ವವು ಸಿದ್ಧಿಸುವುದಿಲ್ಲ ಆದರೆ "ಈ ಅನುಮಾನದಿಂದ, ಪ್ರಲಯಾವಸ್ಥೆಯಲ್ಲಿ ಈಶ್ವರಾದಿಗಳಿಲ್ಲವೆಂಬ ಸಂಗತಿಯು ಸಿದ್ಧಿಯಾಗಲು, ಕಾರ್ಯಕ್ಕೆ ಕರ್ತೃವಿರಲೇಬೇಕೆಂಬ ನಿಯಮವಿದ್ದದರಿಂದ (ಒಪ್ಪಬೇಕಾದುದರಿಂದ) ಪ್ರಾಗಭಾವವು ನಿಯಮೇನ ಪೂರ್ವಭಾವಿಯಾದುದರಿಂದ, ಅದಕ್ಕೆ ಸಿದ್ಧಿಸುವ ವಿಶ್ವಕಾರಣತ್ವವು, ಕರ್ತೃವಾಗುವುದ

— ವಿಶೇಷಾರ್ಥಪ್ರದೀಪಿಕಾ —

ಅರ್ಥವನ್ನು ತಿಳಿಯಬೇಕು 'ವಸ್ತುತ್ವಾತ್" ಎಂಬ ಹೇತುವು ಲಯದಲ್ಲಿರುವ ವಿಶ್ವಪ್ರಾಗಭಾವದಲ್ಲಿ ಇದ್ದರೂ ಅಲ್ಲಿ ಅಸತ್ವವು (ಅವಿದ್ಯಮಾನತ್ವವು) ಇಲ್ಲವಾದುದರಿಂದ ವ್ಯಭಿಚಾರ ದೋಷವು ಬರುತ್ತದೆ ಅದನ್ನು ತಪ್ಪಿಸಲು "ವಸ್ತುತ್ವಾತ್" ಎಂಬುದಕ್ಕೆ "ಭಾವತ್ವಾತ್"ಎಂಬುದಾಗಿ ವ್ಯಾಖ್ಯಾನಿಸಿರುತ್ತಾರೆ

"ಈಶ್ವರಾದಿಕಂ" – ಈಶ್ವರ, ಪ್ರಧಾನ, ಅದೃಷ್ಟ ಮುಂತಾದುದು -"ಕರ್ತೃತ್ವಯೈವ" - ಇಲ್ಲಿ ಉಪಾದಾನತ್ವಾದಿನಾ" (ಉಪಾದಾನಕಾರಣತ್ವ ಮುಂತಾದ ರೂಪಗಳಿಂದಲೂ) ಎಂಬುದನ್ನು ತಿಳಿಯತಕ್ಕದ್ದು "ಸೇತ್ಸ್ಯತಿ"–ಇಲ್ಲಿ ಪರಿಶೇಷದಿಂದ ಸಿದ್ಧಿಸುವದೆಂದು ತಿಳಿಯಬೇಕು ಬೇರೆ ರೀತಿಯು ಕಾರಣತ್ವವು ಸಂಭವಿಸುವುದಿಲ್ಲವಾದುದರಿಂದ, ಕರ್ತೃತ್ವರೂಪ ಕಾರಣತ್ವವು ಸಿದ್ಧಿಸುತ್ತದೆಯೆಂದು ತಿಳಿಯಬೇಕು.

वक्तव्यम् । तदिदं प्रत्यनुमानपराहतमित्याशयवान्प्रतिषेधमात्रत्वादिति सौत्रं हेतुं व्याकुर्वन्साध्यमध्याहरति ॥ निषधेति । निषेधैकस्वरूपस्येति हेतुगर्भविशेषणम् ।

अयमत्र प्रयोगः । विप्रतिपन्नोऽभावो न कर्ता प्रतिषेधमात्र-

— ಪದಾರ್ಥದೀಪಿಕಾ —

ರಿಂದಲೇ ಸಿದ್ಧಿಸುತ್ತದ" ಹೀಗೆ ಹೇಳಬೇಕು "ಈ ಅನುಮಾನವು ಪ್ರತಿ ಅನುಮಾನದಿಂದ ಪರಾಹತವಾಗುತ್ತದ" ಈ ಅಭಿಪ್ರಾಯದವರಾಗಿ, (ಶ್ರೀ ಅನುವ್ಯಾಖ್ಯಾನಕಾರರು) "ಪ್ರತೀಷೇಧಮಾತ್ರತ್ವಾತ್' ಎಂಬ ಸೂತ್ರೋಕ್ತವಾದ ಯುಕ್ತಿ (ಹೇತು) ಯನ್ನು ವ್ಯಾಖ್ಯಾನಿಸುತ್ತ ಸಾಧ್ಯವನ್ನು 'ನಿಷೇಧೈಕ ಸ್ವರೂಪಸ್ಯ" ಈ ಮುಂತಾದ ವಚನದಿಂದ, ಅಧ್ಯಾಹರಿಸುತ್ತಾರೆ "ನಿಷೇಧೈಕ ಸ್ವರೂಪಸ್ಯ" ಇದು ಹೇತುಗರ್ಭ ವಿಶೇಷಣವು

ಇಲ್ಲಿ ಪ್ರಯೋಗವು ಇದು— "ವಿವಾದದಲ್ಲಿ ವಿಷಯವಾದ ಪ್ರಾಗಭಾವವು, ಕರ್ತೃವು ಅಲ್ಲ ಏಕೆ ? ಎಂದರೆ— "ಪ್ರತಿಷೇಧಮಾತ್ರತ್ವಾತ್"— ಕೇವಲ

— ವಿಶೇಷಾರ್ಥಪ್ರದೀಪಿಕಾ —

"ಹೇತುಗರ್ಭವಿಶೇಷಣಂ" – ಹೇತ್ವರ್ಥಗರ್ಭಿತವಾದ ವಿಶೇಷಣವೆಂದು ಅರ್ಥ. "ವಿಪ್ರತಿಪನ್ನೋಽಭಾವಃ" – "ಆಯಾಯ ಕಾರ್ಯದ ಪ್ರಾಗಭಾವವು ಆಯಾಯ (ತನ್ನ) ಕಾರ್ಯದ ಕರ್ತೃವಾಗಲಾರದು" ಹೀಗೆ ಸಾಧ್ಯದ ಅರ್ಥ ಅಥವಾ ಸಾಂಖ್ಯರ ಮತದಲ್ಲಿ ಪ್ರಧಾನದ ಹಾಗೆ, ಮಾಯಾವಾದಿಗಳ ಮತದಲ್ಲಿ ಬ್ರಹ್ಮನ ಹಾಗೆ ಪ್ರಾಗಭಾವವೂ ಲಾಘವಯುಕ್ತಿಯಿರುವುದರಿಂದ ಅದು ಒಂದೇ ವಿಶ್ವದ ಕರ್ತೃವೂ ಉಪಾದಾನವೂ ಆಗಿದೆಯೆಂದು ಪರನು ಹೇಳತಕ್ಕದ್ದು ಈ ಅಭಿಪ್ರಾಯದಿಂದ "ವಿಪ್ರತಿಪನ್ನೋಽಭಾವಃ" ಎಂಬುದಾಗಿ ಪಕ್ಷವನ್ನು ನಿರ್ದೇಶಪಡಿಸಿರುತ್ತಾರೆ ಆದುದರಿಂದಲೇ "ಕರ್ತೃತ್ವವೇ ಅಭಾವದಕ್ಕೆ ಇಲ್ಲದಿರುವಾಗ ವಿಶ್ವಕರ್ತೃತ್ವವಂತೂ ದೂರದಿಂದಲೇ ನಿರಾಕೃತವಾಯಿತು" ಎಂಬುದಾಗಿ ಹೇಳಿದ ಮುಂದಿನ ವಾಕ್ಯವು ಸಂಗತವಾಗುತ್ತದೆ ಹಾಗಿಲ್ಲದಿದ್ದಲ್ಲಿ ಆಯಾಯ ಪ್ರಾಗಭಾವಕ್ಕೆ ಆಯಾಯ ಕಾರ್ಯದ ಕರ್ತೃತ್ವವಷ್ಟೇ ಪ್ರಸಕ್ತವಾಗುವದರಿಂದ ಅಪ್ರಸಕ್ತ (ಅಪ್ರಾಪ್ತವಾದ) ವಿಶ್ವಕರ್ತೃತ್ವದ ನಿರಾಕರಣವು ಸರಿಯೆನಿಸಲಾರದು ಮತ್ತು ಶ್ರುತಿಸೂತ್ರಗಳಲ್ಲಿ ಏಕವಚನದ ಪ್ರಯೋಗವೂ ಇರುತ್ತದೆ ಮತ್ತು 'ಅನೇಕತ್ವಾದೇಃ ಪರೇಣಾಪಿ ತ್ಯಾಜ್ಯತ್ವಾತ್" (ಅನೇಕತ್ವ ಮುಂತಾದುದನ್ನು ಪರನೂ ಬಿಡಬೇಕು) ಎಂಬುದಾಗಿ ಮುಂದೆ ಹೇಳುವರು ಇನ್ನು "ತಸ್ಮಾತ್"

त्वात् । निषेधैकस्वरूपत्वात् । सम्प्रतिपन्नघटाभाववदिति । कर्तृत्व-
मात्रस्याभावे विश्वकर्तृत्वं दूरोत्सारितम् । न च दृष्टान्तः साध्यविकलः ।
अन्वयव्यतिरेकाभ्यां कुलालादेः कर्तृत्वनिश्चयेऽभावस्य तत्कल्पका-
भावात् ।

नन्वस्तु निषेधैकस्वरूपत्वं कर्तृत्वं च । को विरोधः । तथा
च घटाद्यभावस्याकर्तृत्वेऽपि प्रलयकालीनोऽभावः कर्ता भविष्यतीत्यतः
कर्तृत्वनिषेधैकस्वरूपत्वयोर्विरोधं स्फोरयितुं कर्तृत्वस्वरूपमाह ॥
बुद्धीति । प्रवृत्तिरिच्छाप्रयत्नादिका । निश्चितं सर्वैरपि परीक्षकैः ।

— ಪದಾರ್ಥದೀಪಿಕಾ —

ನಿಷೇಧರೂಪವಾಗಿದೆಯಾದುದರಿಂದ ! ಸಂಪ್ರತಿಪನ್ನ ಘಟಾದಿಗಳು ಇಲ್ಲಿ
ದೃಷ್ಟಾಂತಗಳು," ಹೀಗೆ, ಕರ್ತೃತ್ವಸಾಮಾನ್ಯವೇ ಇಲ್ಲವಾದಾಗ, ವಿಶ್ವಕರ್ತೃ
ತ್ವವು ದೂರದಲ್ಲಿಯೇ ನಿರಾಕರಿಸಲ್ಪಟ್ಟಿರುತ್ತದೆ. ಹಾಗು ದೃಷ್ಟಾಂತವು ಸಾಧ್ಯ
ವಿಲ್ಲದ್ದಾಗಿಲ್ಲ ಏಕೆಂದರೆ ಅನ್ವಯ–ವ್ಯತಿರೇಕಗಳೆಂಬ ಯುಕ್ತಿಗಳಿಂದ ಕುಲಾ
ಲಾದಿಗಳಿಗೆ ಕರ್ತೃತ್ವವಿದೆಯೆಂಬ ನಿಶ್ಚಯವಾಗುತ್ತಿರಲು, ಅಭಾವಕ್ಕೆ ಕರ್ತೃತ್ವ
ವನ್ನು ಕಲ್ಪಿಸಿಕೊಡುವ ಯುಕ್ತಿಗಳಿರುವುದಿಲ್ಲ

ಇನ್ನು— "ಕೇವಲ ನಿಷೇಧಸ್ವರೂಪವೂ ಕರ್ತೃತ್ವವೂ (ಎರಡೂ ಒಂದಕ್ಕೇ)
ಇರಲಿ ! ವಿರೋಧವು ಯಾವದು ? ಆದುದರಿಂದ, ಘಟವುಂಟಾದುದರ
ಪ್ರಾಗಭಾವಕ್ಕೆ ಕರ್ತೃತ್ವವು ಇಲ್ಲದಿದ್ದರೂ, ಪ್ರಲಯಕಾಲದಲ್ಲಿರುವ ವಿಶ್ವಪ್ರಾಗ
ಭಾವವು ಕರ್ತೃವು ಆಗುವದು. ಹೀಗೆ ಆಶಂಕೆಯು ಬರುವುದರಿಂದ,-- ಅದನ್ನು
ಪರಿಹರಿಸಲು, ಕರ್ತೃತ್ವ. ನಿಷೇಧೈಕ ಸ್ವರೂಪತ್ವ, ಇವೆರಡರಲ್ಲಿ ವಿರೋಧವನ್ನು
ಸ್ಫುಟಪಡಿಸಲು, ಕರ್ತೃತ್ವದಸ್ವರೂಪವನ್ನು " ಬುದ್ಧಿಪೂರ್ವಪ್ರವೃತ್ತಿರ್ಹಿ " ಈ
ವಚನದಿಂದ ಹೇಳುತ್ತಾರೆ "ಪ್ರವೃತ್ತಿಃ" ಎಂದರೆ ಇಚ್ಛೆ, ಪ್ರಯತ್ನ ಮುಂತಾದ

— ವಿಶೇಷಾರ್ಥಪ್ರದೀಪಿಕಾ —

ತತ್ತತ್ಪ್ರಾಗಭಾವಸ್ಯೈವ ತತ್ತತ್ಕರ್ತೃತ್ವಾತ್" (ಆದುದರಿಂದ – ಆಯಾಯ
ಪ್ರಾಗಭಾವಕ್ಕೇ ಆಯಾಯ ಕಾರ್ಯದ ಕರ್ತೃತ್ವವಿದ್ದುದರಿಂದ) ಎಂಬ
ಹಿಂದಿನ ಗ್ರಂಥದಿಂದ ನಿಗಮನಮಾಡಿದುದು ಭಿಕ್ಷುಪಾದ ಪ್ರಸರಣನ್ಯಾಯ
ವನ್ನು ಒಪ್ಪಿ. ಆದುದರಿಂದ ವಿರೋಧವಿಲ್ಲ ಇಲ್ಲಿ "ಉಪಾದಾನಂ ಚನ"
(ಉಪಾದಾನವೂ ಅಲ್ಲ) ಎಂಬುದಾಗಿ ಸಾಧ್ಯಾಂಶವನ್ನೂ ತಿಳಿಯಬೇಕು.

बुद्धिपूर्वप्रवृत्तिर्हि कर्तृत्वमिति निश्चितम् ॥

वृक्षेण स्थीयत इत्यादौ कर्तृत्वं पारिभाषिकम् । न तु स्वाभाविक-

ಏಕೆಂದರೆ ಬುದ್ಧಿ ( ಜ್ಞಾನ ) ಪೂರ್ವಕವಾದ ಇಚ್ಛಾಪ್ರಯತ್ನ ಮುಂತಾದ ರೂಪವಾದ ಪ್ರವೃತ್ತಿಯೇ ಕರ್ತೃತ್ವವೆಂದು ಇಲ್ಲಿ ಎಲ್ಲ ಪರೀಕ್ಷಕರಿಂದಲೂ ನಿರ್ಣಯಿಸಲ್ಪಟ್ಟಿದೆ

— ಪದಾರ್ಥದೀಪಿಕಾ —

ರೂಪ ಪ್ರವೃತ್ತಿಯು "ನಿಶ್ಚಿತಂ"= ಎಲ್ಲ ಪರೀಕ್ಷಕರಿಂದಲೂ ನಿಶ್ಚಯಿಸಲ್ಪಟ್ಟಿರುತ್ತದೆ "ವೃಕ್ಷೇಣ ಸ್ಥೀಯತೇ" ( ಮರವು ನಿಂತಿದೆ- ಇರುತ್ತದೆ ) ಈ ಮುಂತಾದ ಪ್ರಯೋಗಗಳಲ್ಲಿ ಕರ್ತೃತ್ವವು ಪಾರಿಭಾಷಿಕವಾದುದು ಆದರೆ ಅದು

— ವಿಶೇಷಾರ್ಥಪ್ರದೀಪಿಕಾ —

"ಇಚ್ಛಾಪ್ರಯತ್ನಾದಿಕಾ"- "ಇಚ್ಛಾ" - ಕಾರ್ಯಾನುಕೂಲವಾದ ಇಚ್ಛಾ "ಪ್ರಯತ್ನ"-ಅಂಥ ಪ್ರಯತ್ನ ಶರೀರ ಇಂದ್ರಿಯ ಮುಂತಾದುದು "ಆದಿ" ಪದದ ಅರ್ಥವು

ಬುದ್ಧಿಪೂರ್ವಕಪ್ರವೃತ್ತಿಯು ಕರ್ತೃತ್ವವೆಂದಿಂದಲ್ಲಿ "ವೃಕ್ಷೇಣಸ್ಥಿಯತೇ" (ಮರದಿಂದ ನಿಂತದ್ದಾಗುವದು) ಎಂಬಲ್ಲಿ, "ಕರ್ತೃಕರಣಯೋಃ ತೃತೀಯಾ (ಕರ್ತೃಕರಣಾರ್ಥಗಳಲ್ಲಿ ತೃತೀಯಾ ವಿಭಕ್ತಿಯು) ಎಂಬ ಸೂತ್ರದಿಂದ ಕರ್ತೃರ್ಥದಲ್ಲಿ ವಿಧಿಸಲ್ಪಟ್ಟ ಕರ್ತೃತ್ವವು ಬರಲಾರದು ಈ ಆಕ್ಷೇಪದ ಸಮಾಧಾನವನ್ನು "ವೃಕ್ಷೇಣ'' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ''ಸ್ಥಾ-ತಿಷ್ಠ" ಧಾತುವು ಅಕರ್ಮಕವು ಆದುದರಿಂದ, "ಲಃಕರ್ಮಣಿ ಚ ಭಾವೇ ಚಾಕರ್ಮಕೇಭ್ಯಃ"(ಸಕರ್ಮಕ ಧಾತುಗಳ ಮುಂದೆ ಲಕಾರಗಳು ಕರ್ಮ-ಕರ್ತ್ರರ್ಥಗಳಲ್ಲಿ ಬರುವವು ಅಕರ್ಮಕ ಧಾತುಗಳ ಮುಂದೆ ಭಾವಾರ್ಥ ಕರ್ತ್ರರ್ಥಗಳಲ್ಲಿ ಬರುತ್ತವೆ) ಎಂಬುದಾಗಿ ಹೇಳಿದ ಭಾವಾರ್ಥಕ ಲಕಾರವು ಬರಲು,ಭಾವಾರ್ಥಕ ಆಖ್ಯಾತ ಹಾಗು ಆ ಕ್ರಿಯಾಪದ ಯೋಗವಿರುವುದರಿಂದ ಕರ್ತ್ರರ್ಥದಲ್ಲಿ ಈ ತೃತೀಯಾ ವಿಭಕ್ತಿಯು ಬಂದಿದೆಯೆಂದು ತಿಳಿಯಬೇಕು "ಪಾರಿಭಾಷಿಕಮ್" 'ಸ್ವತಂತ್ರಃಕರ್ತಾ" ಕ್ರಿಯೆಯಲ್ಲಿ ಸ್ವತಂತ್ರ-ಪ್ರಧಾನವಾಗಿ ಅಭಿಪ್ರೇತ(ವಿವಕ್ಷಿತ) ವಾದುದು ಕರ್ತೃವು)ಎಂದು ಪಾಣಿನಿಯು ಹೇಳಿದುದರಿಂದ, ಸ್ಥಿತಿ ಎಂಬ ಕ್ರಿಯೆಯನ್ನು ಕುರಿತು ಸ್ವಾತಂತ್ರ್ಯವೆಂಬ ಕರ್ತೃತ್ವವು ಪಾಣಿನಿಯ ಪರಿಭಾಷೆಯಿಂದ ಹೇಳಲ್ಪಟ್ಟದ್ದು ಆದುದರಿಂದ ಅದರಲ್ಲಿ ಸರ್ವಸಂಪ್ರತಿಪತ್ತಿಯು ಇರುವುದಿಲ್ಲ. ಹೀಗೆ ಭಾವ.

मिति हि सर्वेऽपि प्रतिपन्नाः । अत्र बुद्धिपूर्वप्रवृत्तिरित्येतद्बुद्ध्या विविच्य व्याख्येयम् । तथा हि । स्यात्कर्तृत्वनिषेधैकस्वरूपत्वयोरविरोधः । यदि तृतीयादेविषयत्वमेव कर्तृत्वं स्यात् । न चैतदस्ति । अपि तर्हीच्छाप्रयत्नादिरूपा प्रवृत्तिरेव । सर्वैरपि परीक्षकैस्तस्या एव कर्तृत्वेन निश्चितत्वात् । प्रकरणाच्चैतदेव निश्चितम् । अत्रैव हि

— ಪದಾರ್ಥದೀಪಿಕಾ —

ಸ್ವಾಭಾವಿಕವಲ್ಲ ಹೀಗೆಯೇ ಎಲ್ಲರೂ ಬಗೆದಿರುತ್ತಾರೆ ಇಲ್ಲಿ, "ಬುದ್ಧಿಪೂರ್ವ ಪ್ರವೃತ್ತಿಃ" ಎಂಬುದನ್ನು, ಬುದ್ಧಿಯಿಂದ ವಿವೇಚಿಸಿ (ಬಿಡಿಸಿ) ವ್ಯಾಖ್ಯಾನಿಸ ಬೇಕು ಹೇಗೆಂದರೆ ತೃತೀಯಾ ವಿಭಕ್ತಿ ಮುಂತಾದುದರಲ್ಲಿ ವಿಷಯವಾಗಿರು ವುದೇ ಕರ್ತೃತ್ವವೆಂದಾದರೆ ಕರ್ತೃತ್ವ-ನಿಷೇಧೈಕ ಸ್ವರೂಪತ್ವಗಳಲ್ಲಿ ಅವಿರೋಧವು ಬರಬಹುದು. ಆದರೆ- ಹಾಗೆ ಇರುವುದಿಲ್ಲ ಇದಕ್ಕೆ ಬದಲಾಗಿ, ಇಚ್ಛಾ, ಪ್ರಯತ್ನ ಮುಂತಾದ ರೂಪವಾದ ಪ್ರವೃತ್ತಿಯೇ ಕರ್ತೃತ್ವವೆನಿಸಿರುತ್ತದೆ ಏಕೆಂದರೆ ಎಲ್ಲ ಪರೀಕ್ಷಕರಿಂದಲೂ ಇಚ್ಛಾಪ್ರಯತ್ನಾದಿ ರೂಪ ಪ್ರವೃತ್ತಿಯೇ ಕರ್ತೃತ್ವವೆಂದು ನಿರ್ಣಯಿಸಲ್ಪಟ್ಟಿದೆ ಮತ್ತು ಪ್ರಕರಣವು ಇರುವುದರಿಂದ, ಅದೇ ಕರ್ತೃತ್ವವೆಂದು ನಿಶ್ಚಯಿಸಲ್ಪಟ್ಟಿದೆ ಇಂಥ ಕರ್ತೃತ್ವದ ಬಗ್ಗೆಯೇ ವಿವಾ

— ವಿಶೇಷಾರ್ಥಪ್ರದೀಪಿಕಾ —

"ಬುಧ್ಯಾ ವಿವಿಚ್ಯ ವ್ಯಾಖ್ಯೇಯಂ" - ಪೂರ್ವಪಕ್ಷಿಯು ಸಹ ಇಚ್ಛಾ ಮುಂತಾದುದನ್ನು ಅಂಗೀಕರಿಸಿದುದರಿಂದ, ಇಚ್ಛೆ ಮುಂತಾದುದರ ಇಲ್ಲದಿರುವಿಕೆಯು ಬುದ್ಧಿಯ ಇಲ್ಲದಿರುವಿಕೆಯಿಂದಲೇ ಸಾಧ್ಯವಾಗುವುದರಿಂದ, "ಪ್ರವೃತ್ತಿರ್ಬುದ್ಧಿಪೂರ್ವಾ" ಎಂಬುದಾಗಿಯೇ ಬುದ್ಧಿಯಲ್ಲಿ ವಿವೇಕವನ್ನು ಮಾಡಿ (ಬಿಡಿಸಿ- ವಾಕ್ಯಭೇದವನ್ನು ಮಾಡಿ) ವ್ಯಾಖ್ಯಾನ ಮಾಡಬೇಕು ಹೀಗೆ ಇಲ್ಲಿ ಅರ್ಥ

" ತೃತೀಯಾದಿವಿಷಯತ್ವಮೇವ " - ಇಲ್ಲಿ " ಆದಿ " ಪದದಿಂದ, "ಕರ್ತೃಕರಣಯೋಃ ಕೃತಿ" ಇತ್ಯಾದಿ ಸೂತ್ರಗಳಿಂದ ವಿಧಿಸಲ್ಪಟ್ಟ ಷಷ್ಠೀ ಮುಂತಾದುದನ್ನು ಪರಿಗ್ರಹಿಸಿರುತ್ತದೆ

"ಪ್ರಕರಣಾಚ್ಚ" – ಜನ್ಮಾದಿ ಸೂತ್ರದಲ್ಲಿ ಹೇಳಿದ ಜಗತ್ಕರ್ತೃತ್ವದ ಬಗ್ಗೆಯೇ ಹಿಂದುಮುಂದಿನ ಅಧಿಕರಣಗಳಲ್ಲಿ ವಿಚಾರವು ಪ್ರವೃತ್ತವಾದುದರಿಂದ "ಪ್ರಕರಣಾತ್" ಎಂಬುದಾಗಿ ಹೇಳಿದ್ದಾರೆ. ಅದನ್ನು "ಅತ್ರೈವಹಿ"

**विप्रतिपत्तिर्नान्यत्र । सा चेयं प्रवृत्तिर्बुद्धिपूर्वा बुद्धिव्याप्ता । कार्यायाः प्रवृत्तेर्बुद्धिकारणकत्वात् । अकार्यायाश्च बुद्धिव्यभिचाराद्यदर्शनात् । न च कर्तृत्वापरपर्यायाः प्रवृत्तेर्व्यापिका बुद्धिरभावे सम्भवति ।**

### — ಪದಾರ್ಥದೀಪಿಕಾ —

ದವು, ಬೇರೆಯುದರಲ್ಲಿ ವಿವಾದವಿಲ್ಲ ಮತ್ತು ಅಂಥ ಈ ಪ್ರವೃತ್ತಿಯಾದರೂ "ಬುದ್ಧಿಪೂರ್ವಾ"= ಬುದ್ಧಿಯಿಂದ ವ್ಯಾಪ್ತವಾದುದು ಏಕೆಂದರೆ ಕಾರ್ಯವೆನ್ನಿಸಿದ ಪ್ರವೃತ್ತಿಯನ್ನು ಕುರಿತು ಬುದ್ಧಿಯು ಕಾರಣವಾಗಿರುತ್ತದೆ ಕಾರ್ಯವಾಗದೇ ಇರುವ ಪ್ರವೃತ್ತಿಯನ್ನು ಕುರಿತು ಬುದ್ಧಿವ್ಯಭಿಚಾರ ಮುಂತಾದುದು ಕಂಡಿಲ್ಲ ಮತ್ತು ಕರ್ತೃತ್ವವೆಂಬ ಹೆಸರುಳ್ಳ ಪ್ರವೃತ್ತಿಯನ್ನು ಕುರಿತು ವ್ಯಾಪಕವೆನಿಸಿದ ಬುದ್ಧಿಯು, ಪ್ರಾಗಭಾವದಲ್ಲಿ ಸಂಭವಿಸುವುದಿಲ್ಲ ಆದುದರಿಂದ,

### — ವಿಶೇಷಾರ್ಥಪ್ರದೀಪಿಕಾ —

ಎಂಬ ವಾಕ್ಯದಿಂದ ವಿಶದಪಡಿಸುತ್ತಾರೆ ಅಥವಾ ವಿವಾದದಲ್ಲಿ ವಿಷಯವಾದುದರಿಂದ ಅದೇ ಕರ್ತೃತ್ವವನ್ನೇ ಸ್ವೀಕರಿಸಬೇಕು, ಬೇರೆಯುದನ್ನಲ್ಲವೆಂದು ಅಭಿಪ್ರಾಯದಿಂದ "ಅತ್ರೈವ ಹಿ" ಎಂಬುದಾಗಿ ಹೇಳಿದ್ದಾರೆ

ಹಾಗಾದರೆ—ಮುಂದೇನು? ಅಂಥ ಕರ್ತೃತ್ವವನ್ನು (ಬುದ್ಧಿಪೂರ್ವಕ ಪ್ರವೃತ್ತಿಯನ್ನು) ನಾನೂ ಒಪ್ಪಿದ್ದೇನೆ ಈ ಆಶಂಕೆಯನ್ನು "ಸಾ ಚ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಬುದ್ಧಿಪೂರ್ವಕವೆಂದರೆ "ಬುದ್ಧಿಯೇ ಕಾರಣವಾಗಿವುಳ್ಳದ್ದು" ಎಂಬುದಾಗಿ ಕೆಲವುಕಡೆಗಳಲ್ಲಿ ಅರ್ಥವು ಕೆಲವುಕಡೆಗಳಲ್ಲಿ— ಬುದ್ಧಿಯಿಂದ ಅವಿನಾಭೂತ (ರಹಿತವಾಗದಿರುವುದು) ವಾಗಿರುವುದು; ಹೀಗೆ ಅರ್ಥವು ಅಥವಾ—ಬುದ್ಧಿಯು ಕಾರಣವಾಗಿವುಳ್ಳದ್ದು ಎಂಬ ಮಾತಿನಲ್ಲಿಯೂ 'ಬುದ್ಧಿಯಿಂದ ಅವಿನಾಭೂತವಾಗಿರುವುದೆಂಬ ಬುದ್ಧಿಪೂರ್ವಕತ್ವವನ್ನು "ಕಾರ್ಯಾಯಾಃ' ಇತ್ಯಾದಿ ವಾಕ್ಯದಿಂದ ವಿಶದಪಡಿಸುತ್ತಾರ ಜನ್ಯಪ್ರವೃತ್ತಿ ಅಜನ್ಯಪ್ರವೃತ್ತಿ, ಹೀಗೆ ಪ್ರವೃತ್ತಿಯಲ್ಲಿ ಎರಡು ತರಹಗಳು ಅವುಗಳಲ್ಲಿ ಮೊದಲನೆಯದರ ಬಗ್ಗೆ "ಕಾರ್ಯಾಯಾಃ" ಎಂಬ ವಾಕ್ಯವು ಹೊರಟಿದೆ ಅಸ್ಮದಾದಿಗಳ ಪ್ರವೃತ್ತಿಯು ಕಾರ್ಯ (ಜನ್ಯ) ಪ್ರವೃತ್ತಿಯು ಈಶ್ವರಾದಿಗಳ ಪ್ರವೃತ್ತಿಯು ಅಕಾರ್ಯ— ಅಜನ್ಯವೆನಿಸಿದೆ ಈಶ್ವರನ ಪ್ರವೃತ್ತಿಯನ್ನು ಕುರಿತು, ನಿತ್ಯವಾದುದರಿಂದ ಬುದ್ಧಿಯು ಕಾರಣವಾಗದಿದ್ದರೂ ಅಲ್ಲಿ ಬುದ್ಧಿಯು ಇರುವುದರಿಂದ ಬುದ್ಧಿಯಿಂದ ಅವಿನಾಭೂತವಾಗಿರುವುದೆಂಬ ಅರ್ಥವು ಸಲ್ಲುತ್ತದೆ. ಆದುದರಿಂದ ಯಾವುದೇ ವ್ಯಭಿಚಾರವಿಲ್ಲ ಹೀಗೆ ತಿಳಿಯಬೇಕು.

ततो व्याप्यं कर्तृत्वमपि न सम्भवत्येवेति कथं कर्तृत्वनिषेधैकस्वरूपत्वयोर्न विरोध इति। अत्र कर्तृत्वानुवादेन बुद्धिपूर्वप्रवृत्तिरिति व्याख्यानान्निश्चितमिति नपुंसकोपपत्तिः। भावे वा क्तप्रत्यय इति।

ननु मा भूदप्रयोजकत्वं हेतोः। तथाऽपि वैय्यर्थ्यमपरिहार्यम्। अभावपर्यायो हि प्रतिषेधशब्दः कर्तृत्वं च कार्योत्पत्त्यनुकूलेच्छादियोग इत्युक्तम्। न च प्रतिषेधत्वं कर्तरि वर्तते। येना-

— ಪದಾರ್ಥದೀಪಿಕಾ —

ವ್ಯಾಪ್ಯವೆನಿಸಿದ ಕರ್ತೃತ್ವವೂ ಪ್ರಾಗಭಾವದಲ್ಲಿ ಸಂಭವಿಸುವುದೇ ಇಲ್ಲ ಆದುದರಿಂದ, ಕರ್ತೃತ್ವ–ನಿಷೇಧೈಕ ಸ್ವರೂಪತ್ವ, ಇವೆರಡರಲ್ಲಿ ವಿರೋಧವು ಹೇಗೆ ಇರುವುದಿಲ್ಲ ? ಇಲ್ಲಿ ಕರ್ತೃತ್ವವನ್ನು ಅನುವದಿಸಿ, ಬುದ್ಧಿಪೂರ್ವಪ್ರವೃತ್ತಿಯೆಂದು ವ್ಯಾಖ್ಯಾನಿಸಿದುದರಿಂದ "ನಿಶ್ಚಿತಂ" ಎಂಬ ನಪುಂಸಕಲಿಂಗವು ಯುಕ್ತವೆನಿಸುತ್ತದೆ ಅಥವಾ ಭಾವಾರ್ಥದಲ್ಲಿ"ಕ್ತ"ಪ್ರತ್ಯಯವು ಇರುತ್ತದೆ ಹೀಗೆ ವ್ಯಾಖ್ಯಾನವು.

ಇನ್ನು– ಹೇತುವಿಗೆ ಸಾಧ್ಯವನ್ನು ಕುರಿತು ಪ್ರಯೋಜಕತ್ವವಿಲ್ಲದಿರುವುದು (ಅಪ್ರಯೋಜಕತ್ವವು) ಬಾರದಿರಲಿ ! ಆದರೂ ವೈಯ್ಯರ್ಥ್ಯವನ್ನು ಪರಿಹರಿಸುವುದು ಶಕ್ಯವಿಲ್ಲ ಏಕೆಂದರೆ– "ಪ್ರತಿಷೇಧ" ಶಬ್ದವು, ಅಭಾವವೆಂಬ ಪರ್ಯಾಯಾರ್ಥಕವು ಮತ್ತು ಕರ್ತೃತ್ವವೆಂದರೆ– ಕಾರ್ಯದ ಉತ್ಪತ್ತಿಗೆ ಅನುಕೂಲವಾಗಿರುವ ಇಚ್ಛಾದಿಗಳ ಯೋಗವು, ಎಂಬುದಾಗಿ ಹೇಳಲ್ಪಟ್ಟಿದೆ ಕರ್ತೃವಿನಲ್ಲಿ ಪ್ರತಿಷೇಧರೂಪತೆಯು ಇರುವುದಿಲ್ಲ ಹಾಗೆ ಇರುವುದಾದರೆ ಕರ್ತೃತ್ವ

— ವಿಶೇಷಾರ್ಥಪ್ರದೀಪಿಕಾ —

ವ್ಯಾಪಿಕೆಯಾದ ಬುದ್ಧಿಯು ಅಭಾವದಲ್ಲಿ ಸಂಭವಿಸುವುದಿಲ್ಲ ಇದನ್ನು "ಬುದ್ಧಿರಾಹಿತ್ಯಮೇವ ತತ್" ಎಂಬ ಅನುವ್ಯಾಖ್ಯಾನ ಸಂದರ್ಭದಲ್ಲಿ ಉಪಪಾದನ ಮಾಡಲಾಗುವುದು ಹೀಗೆ ಭಾವವು

'ವ್ಯಾಖ್ಯಾನಾತ್" – "ಕರ್ತೃತ್ವಂ ಬುದ್ಧಿಪೂರ್ವಪ್ರವೃತ್ತಿರಿತಿ ನಿಶ್ಚಿತಂ" ಎಂಬುದಾಗಿ ಅನ್ವಯವಿರುವುದೆಂದು ತಾತ್ಪರ್ಯ. "ಭಾವೇ ವಾ"– "ಭಾವೇಕ್ತಃ" (ಭಾವಾರ್ಥದಲ್ಲಿ "ಕ್ತ" ಪ್ರತ್ಯಯವು) ಎಂಬ ಸೂತ್ರದಿಂದ ವಿಧಿಸಲ್ಪಟ್ಟ ಕ್ತ ಪ್ರತ್ಯಯವು ನಪುಸಂಕದಲ್ಲಿ ಬಂದುದರಿಂದ, "ಕರ್ತೃತ್ವಮಿತಿ ನಿಶ್ಚಯಃ" (ಕರ್ತೃತ್ವವೆಂದು ನಿಶ್ಚಯವು) ಎಂಬ ಅರ್ಥವು ಲಭಿಸಿದುದರಿಂದ ಯಾವದೇ ದೋಷವಿಲ್ಲವೆಂದು ಭಾವ

प्रतिषेधात्मकत्वं तु भावस्याभावधर्मतः ॥

कर्तृत्वं व्यभिचरेत् । तन्निरासार्थं च विशेषणं सार्थकं स्यात् । अतः प्रतिषेधत्वादित्येतावताऽकर्तृत्वव्यभिचाराभावात्सूत्रे मात्रग्रहणं व्याख्याने अप्येकग्रहणं व्यर्थमित्यत आह ॥ प्रतिषेधेति ॥ भावस्यापि कुलालादेः कर्तुः प्रतिषेधात्मकत्वं विद्यते । अतः प्रतिषेधत्वादित्येवोक्ते कुलालादावकर्तृत्वेन हेतोर्व्यभिचारः स्यात् । तत्परिहारार्थं मात्रग्रहणम् । तद्व्याख्याने चैकग्रहणं च सार्थकमिति । ननु कुलालादेर्भावस्य कथं प्रतिषेधात्मकत्वमित्यत आह ॥ अभावेति ॥ अभावोऽत्रान्योन्याभावो विवक्षितः । स धर्मोऽस्येत्यभावधर्मा । तस्य भावस्तत्त्वम् ॥ तत

ಕುಲಾಲ ಮುಂತಾದ ಕರ್ತೃಗಳಾದ ಭಾವ ಪದಾರ್ಥಗಳಿಗೂ ಸಹ, ಭೇದ ವೆಂಬ ಹೆಸರಿನ ಅನ್ಯೋನ್ಯಾಭಾವವೆಂಬ ಧರ್ಮವು ಇರುವುದರಿಂದ ನಿಷೇಧ ಸ್ವರೂಪತೆಯು ಇರುತ್ತದೆ.

## — ಪದಾರ್ಥದೀಪಿಕಾ —

ವಿಲ್ಲವೆಂಬುದನ್ನು ನಿಷೇಧ ಸ್ವರೂಪತೆಯು ವ್ಯಭಿಚರಿಸಬಹುದಾಗಿತ್ತು ಮತ್ತು ಅದರ ನಿರಾಸಕ್ಕಾಗಿ ವಿಶೇಷಣವು ಸಾರ್ಥಕವಾಗಬಹುದಿತ್ತು ಆದುದರಿಂದ, "ಪ್ರತಿಷೇಧತ್ವಾತ್" ( ಪ್ರತಿಷೇಧರೂಪವಾದುದರಿಂದ ) ಇಷ್ಟು ಮಾತ್ರದಿಂದ, "ಕರ್ತೃತ್ವವಿಲ್ಲ" (ಅಕರ್ತೃತ್ವ) ವೆಂಬುದರಿಂದ ವ್ಯಭಿಚಾರವಿಲ್ಲದಿರುವುದರಿಂದ, ಸೂತ್ರದಲ್ಲಿ "ಮಾತ್ರ" ಪದದ ಗ್ರಹಣವೂ, ವ್ಯಾಖ್ಯಾನದಲ್ಲಿ "ಏಕ" ಪದದ ಗ್ರಹಣವೂ ವ್ಯರ್ಥವೇ ! ಈ ಆಶಂಕೆಯನ್ನು "ಪ್ರತಿಷೇಧಾತ್ಮಕತ್ವಂ" ಇತ್ಯಾದಿ ಪದ್ಯದಿಂದ ಪರಿಹರಿಸುತ್ತಾರೆ ಕುಲಾಲ ಮುಂತಾದ, ಭಾವರೂಪವಾದ ಕರ್ತೃವಿಗೂ ಪ್ರತಿಷೇಧರೂಪತ್ವವು ಇರುತ್ತದೆ ಆದುದರಿಂದ, "ಪ್ರತಿಷೇಧತ್ವಾತ್" ಇಷ್ಟು ಮಾತ್ರವನ್ನೇ ಹೇಳಿದಲ್ಲಿ, ಕುಲಾಲಾದಿಗಳಲ್ಲಿ, ಪ್ರತೀಷೆಧಾತ್ಮಕತ್ವವು, ಅಕರ್ತೃತ್ವವನ್ನು ವ್ಯಭಿಚರಿಸುವುದರಿಂದ ವ್ಯಭಿಚಾರದೋಷವು ಬಂದೀತು. ಅದರ ನಿರಾಕರಣಕ್ಕಾಗಿ, "ಮಾತ್ರ" ಪದವನ್ನು ಗ್ರಹಿಸಿದ್ದು ಮತ್ತು ಅದರ ವ್ಯಾಖ್ಯಾನದಲ್ಲಿಯೂ "ಏಕ"ಪದವನ್ನು ಗ್ರಹಿಸಿದುದು ಸಾರ್ಥಕವು;ಹೀಗೆ ಉತ್ತರ

ಇನ್ನು- ಕುಲಾಲ ಮುಂತಾದ ಭಾವವಸ್ತುಗಳಿಗೆ ಪ್ರತಿಷೇಧರೂಪತೆಯು ಹೇಗೆ? ಈ ಆಶಂಕೆಯನ್ನು ಪರಿಹರಿಸಲು,'ಅಭಾವ" ಇತ್ಯಾದಿಯಾಗಿ ಹೇಳಿದ್ದಾರೆ- ಇಲ್ಲಿ– "ಅಭಾವ"ವೆಂದರೆ. 'ಅನ್ಯೋನ್ಯಾಭಾವ" (ಭೇದ) ವೆಂಬ ಅರ್ಥವು ಅಭಿಪ್ರೇತವಾಗಿದೆ ಅಂಥ ಅಭಾವವು ಇದಕ್ಕೆ ಧರ್ಮವಾದುದರಿಂದ, "ಅಭಾವ

धर्मधर्म्यैक्यतश्चैव

इति भावप्रधानो निर्देशः । अस्ति खलु कुलालादेर्भावस्य भेदापर-पर्यायः प्रतिषेधात्मकोऽन्योन्याभावो धर्म इति ।

नन्विदमसङ्गतम् । यः कर्ता धर्मी कुलालादिर्न तस्य प्रति-षेधात्मत्वम् । यश्च प्रतिषेधात्मकोऽन्योन्याभावो न तस्य कर्तृत्वमित्यत आह ॥ धर्मेति ।' धर्मधर्मिणोः कुलालान्योन्याभावयोरेकत्वतः ।

ಧರ್ಮ (ಅನ್ಯೋನ್ಯಾಭಾವ) ಧರ್ಮಿ (ಕುಲಾಲ) ಗಳಲ್ಲಿ ಅತ್ಯಂತಾಭೇದವಿದ್ದುದರಿಂದ ಹಾಗು ಕುಲಾಲಾದಿಗಳಿಗೆ ಅಭಾವ (ಭೇದ) ಧರ್ಮವಿರುವುದರಿಂದ ಕುಲಾಲ ಮುಂತಾದ ಭಾವಗಳಿಗೆ ನಿಷೇಧಸ್ವರೂಪತೆಯು ಇರುತ್ತದೆ.

— ಪದಾರ್ಥದೀಪಿಕಾ —

ಧರ್ಮ" ಎಂಬುದಾಗಿ ಹೇಳುತ್ತಾರೆ ಅವರಲ್ಲಿಯ ಭಾವ(ಧರ್ಮ)ವು "ಅಭಾವ ಧರ್ಮತಾ" (ಅಂದರೆ "ಅಭಾವವೆಂಬ ಧರ್ಮವುಳ್ಳದ್ದಾಗಿರುವದು"ಎಂದು ಅರ್ಥ.) ಹೀಗೆ ಇಲ್ಲಿ ಭಾವಪ್ರಧಾನವಾದ ನಿರ್ದೇಶವಿರುತ್ತದ ಕುಲಾಲ ಮುಂತಾದ ಭಾವ ವಸ್ತುಗಳಿಗೆ, ಭೇದವೆಂಬ ನಾಮಾಂತರವುಳ್ಳ, ನಿಷೇಧರೂಪವಾದ ಅಭಾವವೆಂಬ ಧರ್ಮವು ಇರುತ್ತದೆ' ಇದು ಪ್ರಸಿದ್ಧವು

ಇನ್ನು– ಇದು ಅಸಂಗತವು ಏಕೆಂದರೆ– ಕರ್ತೃವೆನಿಸಿದ ಕುಲಾಲಾದಿ ಧರ್ಮಿಯು ಯಾವದೋ ಅದಕ್ಕೆ ನಿಷೇಧರೂಪತೆಯು ಇಲ್ಲ ಮತ್ತು ನಿಷೇಧರೂಪವಾದ ಅನ್ಯೋನ್ಯಾಭಾವವು ಯಾವದೋ ಅದಕ್ಕೆ ಕರ್ತೃತ್ವವು ಇಲ್ಲ. ಹೀಗೆ ಆಶಂಕೆಯು ಬರುವುದರಿಂದ, ಅದರ ಪರಿಹಾರವನ್ನು "ಧರ್ಮಧರ್ಮ್ಯೈಕ್ಯ ತಶ್ಚೈವ" ಇತ್ಯಾದಿ ವಚನದಿಂದ ಹೇಳುತ್ತಾರೆ "ಧರ್ಮಧರ್ಮಿಣೋಃ"= ಕುಲಾಲ ಅನ್ಯೋನ್ಯಾಭಾವ, ಇವೆರಡರಲ್ಲಿ, "ಐಕ್ಯತಃ"– "ಏಕತ್ವತಃ"–ಐಕ್ಯವಿದ್ದುದರಿಂದ

— ವಿಶೇಷಾರ್ಥಪ್ರದೀಪಿಕಾ —

ಧರ್ಮಿಯಿಂದ ಐಕ್ಯವು ಲಭಿಸುವುದಕ್ಕಾಗಿ "ಅಭಾವೋಽತ್ರಾನ್ಯೋನ್ಯಾಭಾವಃ" ಎಂಬುದಾಗಿ ಹೇಳಿದ್ದಾರೆ ಅದೃಶ್ಯತ್ವಾಧಿಕರಣದಲ್ಲಿ –ಅನ್ಯೋನ್ಯಾಭಾವಕ್ಕೆ ಧರ್ಮಿಯೊಡನೆ ಐಕ್ಯ (ಅಭೇದ) ಮತ್ತೊಂದು ಅಭಾವಕ್ಕೆ ಧರ್ಮಿಯೊಡನೆ ಐಕ್ಯವಿಲ್ಲವೆಂಬುದನ್ನು ಉಪಪಾದಿಸಲಾಗಿದೆ

ಹೇತುವಿನ ಅಸಿದ್ಧಿಯನ್ನು (ಭಾವದಲ್ಲಿ ಪ್ರತಿಷೇಧರೂಪತ್ವವಿಲ್ಲವೆಂಬುದನ್ನು) "ಅಸ್ತಿ ಖಲು" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ

"ಧರ್ಮಧರ್ಮ್ಯೈಕ್ಯತಶ್ಚೈವ" ಎಂಬ ಮುಂದಿನ ಅನುವ್ಯಾಖ್ಯಾನದ

चशब्दो हेतुसमुच्चये । अभावधर्मतो धर्मधर्म्यैक्यतश्च प्रतिषेधात्मकत्वं भावस्यास्तीत्यन्वयः । एवशब्दो भेदव्युदासार्थः । अन्योन्याभावो

— ಪದಾರ್ಥದೀಪಿಕಾ —

"ಚ" ಶಬ್ದವು ಹೇತು ಸಮುಚ್ಚಯಾರ್ಥದಲ್ಲಿ ಇರುತ್ತದೆ' 'ಅಭಾವಧರ್ಮತಃ' ಧರ್ಮಧರ್ಮ್ಯೈಕ್ಯತಶ್ಚ ಪ್ರತಿಷೇಧಾತ್ಮಕತ್ವಂ ಭಾವಸ್ಯ ಅಸ್ತಿ" (ಅಭಾವರೂಪ ಧರ್ಮವಿದ್ದುದರಿಂದ, ಹಾಗು ಧರ್ಮಧರ್ಮಿಗಳಿಗೆ ಐಕ್ಯವಿದ್ದುದರಿಂದ, ಭಾವಕ್ಕೆ ಪ್ರತಿಷೇಧರೂಪತೆಯು ಇದೆ) ಹೀಗೆ ಅನ್ವಯವಿರುತ್ತದೆ "ಏವ" ಶಬ್ದವು, ಭೇದದ ನಿರಾಕರಣಕ್ಕಾಗಿ ಏಕೆಂದರೆ ಅನ್ಯೋನ್ಯಾಭಾವವು ಧರ್ಮಿಯಿಂದ

— ವಿಶೇಷಾರ್ಥಪ್ರದೀಪಿಕಾ —

ಸಾರ್ಥಕತ್ವವನ್ನು ತೋರಿಸಲು ಆಶಂಕೆಯನ್ನು "ನನು" ಇತ್ಯಾದಿ ವಚನದಿಂದ ಉತ್ಥಾಪನ ಮಾಡುತ್ತಾರೆ

"ಚಶಬ್ದಃ ಹೇತುಸಮುಚ್ಚಯೇ" – ಇಲ್ಲಿ "ಸಮುಚ್ಚಯೇ" ಶಬ್ದವು "ಇತರೇತರಯೋಗೇ" ಎಂಬ ಅರ್ಥದಲ್ಲಿ ತಾತ್ಪರ್ಯವುಳ್ಳದ್ದು ಏಕೆಂದರೆ ಮುಂದೆ ಹೇಳಲಿರುವ ರೀತಿಯಿಂದ, ಅಭಾವ ಧರ್ಮವುಳ್ಳದಾಗಿರುವುದೆಂಬ ಧರ್ಮ ಹಾಗೂ ಧರ್ಮಿಗಳ ಐಕ್ಯಗಳು ಪರಸ್ಪರ ಸಾಪೇಕ್ಷಗಳು ಅವುಗಳಲ್ಲಿಯೇ ಹೇತುವು ಇದೆಯೆಂಬುದಾಗಿ ಹೇಳುವರು ಪರಸ್ಪರ ನಿರಪೇಕ್ಷವಾದವುಗಳಿಗೆ ಒಂದು ಕ್ರಿಯೆಯೊಡನೆ ಸಂಬಂಧವಿರುವಸ್ಥಲದಲ್ಲಿಯೇ ಸಮುಚ್ಚಯವೆಂಬ ನಿಯಮವೆಂಬುದನ್ನುಮೂಲಗ್ರಂಥಗಳಲ್ಲಿ ಹೇಳಿದ್ದಾರೆ ಹೀಗೆ ತಿಳಿಯಬೇಕು.

ಅನುವ್ಯಾಖ್ಯಾನದಲ್ಲಿ "ಧರ್ಮಧರ್ಮ್ಯೈಕ್ಯತಃ" ಎಂದು ಹೇಳುವುದರಿಂದ ಕುಂಬಾರ–ಅನ್ಯೋನ್ಯಾಭಾವಗಳಲ್ಲಿ ಐಕ್ಯವನ್ನು ಹೇಳಿದ್ದಾಗುವುದರಿಂದ, ಕುಲಾಲಾದಿಗಳಿಗೆ ಪ್ರತಿಷೇಧರೂಪತ್ವವನ್ನು ತೋರಿಸಿದ್ದಾಗುತ್ತದೆ. ಆದುದರಿಂದ "ಧರ್ಮಧರ್ಮ್ಯೈಕ್ಯತಶ್ಚೈವ" ಎಂಬಲ್ಲಿಯ "ಏವ" ಶಬ್ದವು ವ್ಯರ್ಥವೆಂಬ ಆಶಂಕೆಯನ್ನು ಕಳೆಯಲು, — ಕುಲಾಲ-ಅನ್ಯೋನ್ಯಾಭಾವಗಳಲ್ಲಿ ಭೇದಾಭೇದವಿದ್ದರೆ ಅಭೇದಮೂಲಕವಾಗಿ ಕುಲಾಲನಲ್ಲಿ ಪ್ರತಿಷೇಧ ರೂಪತ್ವಕ್ಕೆ ವ್ಯಭಿಚಾರವು (ಅಕರ್ತೃತ್ವದೊಡನೆ) ಬರುವುದರ ಹಾಗೆ ಭೇದವಿರುವುದೆಂಬ ಕಾರಣದಿಂದ ಅದರ ಪರಿಹಾರವೂ ಸಂಭವಿಸುವುದರಿಂದ, ಭೇದ ನಿರಾಸದ ಮುಖಾಂತರದಿಂದ ವ್ಯಭಿಚಾರವನ್ನು ತೋರಿಸುವ ಅತ್ಯಂತ ಅಭೇದದ ಲಾಭಕ್ಕಾಗಿ "ಏವ" ಶಬ್ದವೆಂಬುದಾಗಿ 'ಏವಶಬ್ದಃ" ಇತ್ಯಾದಿ ವಚನದಿಂದ ಹೇಳುತ್ತಾರೆ

न तु तन्मात्रता भवेत् ॥

हि धर्मिणाऽत्यन्ताभिन्नोऽभ्युपेयते । न त्वयावद्द्रव्यभावी धर्म इव भिन्नाभिन्नः । अस्त्वेवं प्रतिषेधत्वस्य कुलालादौ व्यभिचारस्तथाऽपि कथं मात्रग्रहणस्य सार्थक्यम् । न ह्यविशिष्टव्यभिचार एव विशेषणं प्रयोजयति । तथात्वे विशेषणानियमानुपपत्तेः । किन्नाम विशेषणस्य व्यभिचारनिरासौपयिकत्वे सति । तदत्र कथमित्यत आह ॥ न त्विति । कुलालादेः कर्तुर्भावस्य प्रतिषेधात्मकत्वेऽपि तन्मात्रता प्रतिषेधमात्रता न भवेत् । अतोऽस्ति मात्रग्रहणस्य व्यभिचारपरिहारौपयिकत्वम् । तुशब्दोऽवधारणे । सन्दिग्धव्यभिचारपरिहारार्थः ।

ಕರ್ತೃಗಳಾದ ಕುಲಾಲಾದಿ ಭಾವವಸ್ತುಗಳಿಗೆ ನಿಷೇದಾತ್ಮಕತ್ವವಿದ್ದರೂ ನಿಷೇಧ ಮಾತ್ರಸ್ವರೂಪತ್ವವು ಇರುವುದಿಲ್ಲ.

— ಪದಾರ್ಥ ದೀಪಿಕಾ —

ಅತ್ಯಂತ ಅಭಿನ್ನವೆಂದು ಅಂಗೀಕರಿಸಲ್ಪಡುತ್ತದೆ ಆದರೆ ಅಯಾವದ್ದ್ರವ್ಯಭಾವಿ (ದ್ರವ್ಯವಿರುವವರೆಗೂ ಇಲ್ಲದಿರುವ) ಧರ್ಮದಂತೆ ಧರ್ಮಿಯಿಂದ ಭಿನ್ನಾಭಿನ್ನವಲ್ಲ

ಇನ್ನು- ಹೀಗೆ ಪ್ರತಿಷೇಧರೂಪತ್ವಕ್ಕೆ ಕುಲಾಲಾದಿಗಳಲ್ಲಿ ಅಕರ್ತೃತ್ವ ದೊಡನೆ (ಕರ್ತೃತ್ವವಿಲ್ಲವೆಂಬ ಸಂಗತಿಯೊಡನೆ) ವ್ಯಭಿಚಾರವು ಇರಲಿ ! ಆದರೂ "ಮಾತ್ರ" ಪದಗ್ರಹಣಕ್ಕೆ ಸಾರ್ಥಕ್ಯವು ಹೇಗೆ? ಏಕೆಂದರೆ ಅವಿಶಿಷ್ಟವಾದ (ಕೇವಲವಾದ) ಹೇತುವಿನ ವ್ಯಭಿಚಾರ (ಸಾಧ್ಯ ಪರಿತ್ಯಾಗವು) ವಷ್ಟೇ ವಿಶೇಷಣವನ್ನು ಕುರಿತು ಪ್ರಯೋಜಕವಾಗುವುದಿಲ್ಲ. ಏಕಂದರೆ ಹಾಗಾದಲ್ಲಿ ವಿಶೇಷಣದ ನಿಯಮವು ಅಯುಕ್ತವೆನಿಸುತ್ತದೆ ಆದರೆ ವಿಶೇಷಣವು ವ್ಯಭಿಚಾರ ವನ್ನು ತಪ್ಪಿಸುವ ಉಪಾಯವಾಗಿರುವುದಾದರೆ ವಿಶೇಷಣವನ್ನು ಹಚ್ಚಬೇಕಾಗು ತ್ತದೆ ಆದರೆ ಇಲ್ಲಿ ವ್ಯಭಿಚಾರ ಪರಿಹಾರದ ಉಪಾಯವಾಗಿರುವುದೆಂಬ ಸಂಗತಿಯು ಹೇಗೆ? ಈ ಆಶಂಕೆಯು ಬರುವುದರಿಂದ, ಅದರ ಪರಿಹಾರವನ್ನು "ನತು" ಇತ್ಯಾದಿ ವಚನದಿಂದ ಹೇಳುತ್ತಾರೆ ಕುಲಾಲ ಮುಂತಾದ, ಭಾವ ರೂಪ ಕರ್ತೃವಿಗೆ ನಿಷೇಧರೂಪತ್ವವಿದ್ದರೂ "ತನ್ಮಾತ್ರತಾ" ಕೇವಲ ಪ್ರತಿಷೇಧ ಸ್ವರೂಪತೆಯು ಇರುವದಿಲ್ಲ ಆದುದರಿಂದ, "ಮಾತ್ರ" ಪದಗ್ರಹಣವು, ವ್ಯಭಿ ಚಾರ ಪರಿಹಾರದ ಉಪಾಯವಾಗಿದೆ "ತು" ಶಬ್ದವು, ಅವಧಾರಣಾರ್ಥ ದಲ್ಲಿದ್ದು, ಸಂಧಿಗ್ಧ ವ್ಯಭಿಚಾರ ಪರಿಹಾರಾರ್ಥಕವಾಗಿದೆ.

नन्वेवमेकं स (न्धि) न्दित्सतोऽन्यत्प्रच्यवते यतो व्यर्थविशेषणतापरिहारे स्वरूपासिद्धिरापन्ना । तथा हि । पक्षीकृतेऽभावे प्रमेयत्वादिधर्माः सन्ति न वा । नेति पक्षे अप्रमिताश्रयत्वादिकं हेतोः । आद्ये न तावत्तेऽप्यभावाः । विधिप्रत्ययविषयत्वात् । प्रतियोग्यनिरूप्यत्वाच्च । षट्पदार्थातिरिक्तत्वमभावत्वमिति चेन्न । स्वेच्छापरिकल्पनाया अनुपादेयत्वात् । अन्यथा पञ्चैव भावास्तदतिरिक्तोऽभाव इति कल्पनायां समवायादेरपि भावत्वं न स्यात् । ते च

— ಪದಾರ್ಥದೀಪಿಕಾ —

ಇನ್ನು– ಒಂದನ್ನು ಸಂಧಾನ ಮಾಡಲು (ಕೂಡಿಸಲು) ಇಚ್ಛಿಸಿದವನಿಗೆ ಇನ್ನೊಂದು ಬಿಟ್ಟು ಹೋಗುತ್ತದೆ ಏಕೆಂದರೆ ವಿಶೇಷಣವು ವ್ಯರ್ಥವೆಂಬುದರ ಪರಿಹಾರವಾದರೆ ಸ್ವರೂಪಾಸಿದ್ಧಿಯು ಬರುತ್ತದೆ ಹೇಗೆಂದರೆ ಪಕ್ಷೀಕೃತವಾದ ಅಭಾವದಲ್ಲಿ ಪ್ರಮೇಯತ್ವ ಮುಂತಾದ ಧರ್ಮಗಳು ಇರುತ್ತವೆಯೋ ? ಇಲ್ಲವೋ? ಇಲ್ಲವೆಂಬ ಪಕ್ಷದಲ್ಲಿ ಹೇತುವಿಗೆ ಆಶ್ರಯಾಸಿದ್ಧತ್ವ ಮುಂತಾದ ದೋಷಗಳು ಬರುತ್ತವೆ ಮೊದಲನೆಯ ಪಕ್ಷದಲ್ಲಿ ಆ ಪ್ರಮೇಯತ್ವ ಮುಂತಾದ ಧರ್ಮಗಳಂತೂ ಅಭಾವರೂಪವಾಗಿಲ್ಲ ಏಕೆಂದರೆ ವಿಧಿಪ್ರತ್ಯಯದಲ್ಲಿ ವಿಷಯವಾಗಿವೆ ಹಾಗು ಪ್ರತಿಯೋಗಿಯಿಂದ ನಿರೂಪ್ಯ(ಘಟಿತ)ವಾಗಿಲ್ಲ ಇನ್ನು– ಆರು ಪದಾರ್ಥಗಳಿಂದ ಭಿನ್ನವಾಗಿರುವದು ಅಭಾವದ ಲಕ್ಷಣವೆಂದು ಹೇಳುವುದು ಸರಿಯಲ್ಲ. ಏಕೆಂದರೆ ತನ್ನ ಮನಸ್ಸಿಗೆ ಬಂದಂತೆ ಮಾಡುವ ಕಲ್ಪನೆಗಳು ಸ್ವೀಕಾರಾರ್ಹವಾಗಲಾರವು ಇಲ್ಲದಿದ್ದಲ್ಲಿ "ಐದೇ ಭಾವ ವಸ್ತುಗಳು, ಇವುಗಳಿಂದ ಅತಿರಿಕ್ತವಾದುದು ಅಭಾವವು," ಹೀಗೆ ಕಲ್ಪಿಸಿದಲ್ಲಿ ಸಮವಾಯ ಮುಂತಾದುದಕ್ಕೂ ಭಾವತ್ವವು ಸಿದ್ಧಿಸಲಾರದು ಮತ್ತು ಅವುಗಳಾದರೋ ಧರ್ಮಿಯಾದ ಅಭಾವ

— ವಿಶೇಷಾರ್ಥಪ್ರದೀಪಿಕಾ —

"ಅಪ್ರಮಿತಾಶ್ರಯತ್ವಾದಿಕಂ"— ಆಶ್ರಯಾಸಿದ್ಧಿ, ಸ್ವರೂಪಾಸಿದ್ಧಿ, ಮುಂತಾದುದು ಬರುತ್ತದೆ ಪ್ರಮೇಯತ್ವಾದಿ ಧರ್ಮಗಳಿಲ್ಲವೆಂದರೆ ಬರುವ ದೋಷವನ್ನು ''ಆದ್ಯೇ'' ಇತ್ಯಾದಿ ವಚನದಿಂದ ಹೇಳುತ್ತಾರೆ ಪ್ರಮೇಯತ್ವಾದಿ ಧರ್ಮಗಳು ಅಭಾವರೂಪಗಳೇಕೆ ಅಲ್ಲವೆಂಬುದನ್ನು "ವಿಧಿಪ್ರತ್ಯಯವಿಷಯತ್ವಾತ್" ಇತ್ಯಾದಿ ವಾಕ್ಯಗಳಿಂದ ಉಪಪಾದನ ಮಾಡುತ್ತಾರೆ

ಅಭಾವತ್ವವೂ ಅಭಾವರೂಪವೆಂಬುದಾಗಿ "ಷಟ್ಪದಾರ್ಥಾತಿರಿಕ್ತತ್ವಂ" ಇತ್ಯಾದಿ ವಚನಗಳಿಂದ ಶಂಕಿಸುತ್ತಾರೆ ಭಾವಧರ್ಮಗಳು ಅಭಾವದಲ್ಲಿ

नाभावाद्धर्मिणो भिन्नाः । अन्योन्याभावसमानन्यायत्वात् । तथा च यथा कुलालादेर्विपक्षस्य विधिनिषेधात्मकत्वेन प्रतिषेधमात्रत्वाभाव-स्तथा पक्षीकृताभावस्यापि ( धर्मद्वारा विधिरूपस्य ) प्रतिषेधमात्रत्वा-भावात्स्वरूपासिद्धो हेतुः स्यात् । दृष्टान्तश्च साधनविकलः । घटा-भावस्यापि धर्मद्वारा विधिरूपस्य प्रतिषेधमात्रत्वाभावादित्यत आह ॥ अभावस्य चेति । प्रथमापिशब्दात्पूर्वं यदीत्यध्याहार्यम् । यद्यप्य-

— ಪದಾರ್ಥದೀಪಿಕಾ —

ದಿಂದ ಭಿನ್ನವಾಗಿಲ್ಲ ಏಕೆಂದರೆ ಅನ್ಯೋನ್ಯಾಭಾವಕ್ಕೆ ಇರುವ ಯುಕ್ತಿಗಳು ಇಲ್ಲಿಯೂ ಸಮಾನವಾಗಿರುತ್ತವೆ ಆದುದರಿಂದ, ಕುಲಾಲ ಮುಂತಾದ ಭಾವ ವಸ್ತುವಿಗೆ ವಿಧಿನಿಷೇಧ ರೂಪತೆಗಳೆರಡೂ ಇರುವದರಿಂದ ಕೇವಲ ಪ್ರತಿಷೇಧ ರೂಪತೆಯು ಹೇಗೆ ಇರುವದಿಲ್ಲವೋ ಹಾಗೆ ಪಕ್ಷೀಕರಿಸಲ್ಪಟ್ಟ ಅಭಾವಕ್ಕೂ (ಪ್ರಾಗಭಾವಕ್ಕೂ) ಕೇವಲ ಪ್ರತಿಷೇಧರೂಪತೆಯು ಇಲ್ಲವಾದುದರಿಂದ, ಸ್ವರೂಪಾ ಸಿದ್ಧವು ಹೇತುವು ಆಗುತ್ತದೆ ಹಾಗು ದೃಷ್ಟಾಂತವು ಸಾಧನರಹಿತವೂ ಆಗುತ್ತದೆ ಏಕೆಂದರೆ ಧರ್ಮದ ಮುಖಾಂತರದಿಂದ ವಿಧಿ(ಭಾವ)ರೂಪವಾಗಿ ರುವ ಘಟಾಭಾವಕ್ಕೂ ಕೇವಲ ಪ್ರತಿಷೇಧರೂಪತೆಯು ಇಲ್ಲ ಹೀಗೆ ಆಶಂಕೆಯು ಬರುವುದರಿಂದ, ಅದನ್ನು ಪರಿಹರಿಸಲು, "ಅಭಾವಸ್ಯ ಚ" ಎಂಬ ವಚನವನ್ನು ಹೇಳಿರುತ್ತಾರೆ. ಮೊದಲನೆಯ "ಅಪಿ" ಶಬ್ದದ ಮುಂಚೆ "ಯದಿ" ಶಬ್ದವನ್ನು

— ವಿಶೇಷಾರ್ಥಪ್ರದೀಪಿಕಾ —

ಇರಲಿ ಆದರೂ ಸ್ವರೂಪಾಸಿದ್ಧಿಯು ಹೇತುವಿಗೆ ಹೇಗೆ? ಈ ಆಶಂಕೆಯನ್ನು "ತೇ ಚ" ವಚನದಿಂದ ಪರಿಹರಿಸುತ್ತಾರೆ. "ಅನ್ಯೋನ್ಯಾಭಾವಸಮಾನನ್ಯಾ ಯತ್ವಾತ್" - ಅನ್ಯೋನ್ಯಾಭಾವವು ಯಾವದ್ ದ್ರವ್ಯಭಾವಿ (ತನ್ನ ಆಶ್ರಯ ವಾದುದು (ದ್ರವ್ಯವು) ಇರುವವರೆಗೂ ಇರುವಂತಹದು) ಯಾದುದರಿಂದ, ಧರ್ಮಿಯಿಂದ ಅತ್ಯಂತ ಅಭಿನ್ನವಾದುದು ಹೇಗೋ ಹಾಗೆ ಪ್ರಮೇಯತ್ವಾದಿ ಧರ್ಮಗಳೂ ಯಾವದ್ ದ್ರವ್ಯಭಾವಿಗಳಾದುದರಿಂದ ಅತ್ಯಂತ ಅಭಿನ್ನಗಳೇ! ಹೀಗೆ ಅರ್ಥ. ಎರಡನೆಯ ಪಕ್ಷದಲ್ಲಿ ಸ್ವರೂಪಾಸಿದ್ಧಿಯೆಂಬುದನ್ನು "ತಥಾಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಧರ್ಮಿಯಿಂದ ಅಭಿನ್ನವೆಂಬ ಪಕ್ಷದಲ್ಲಿ ಸ್ವರೂಪಾಸಿದ್ಧಿಯೊಂದೇ ಅಲ್ಲ. ದೃಷ್ಟಾಂತದಲ್ಲಿ ಹೇತುವು ಇಲ್ಲವೆಂಬುದು ದೋಷವಾಗುತ್ತದೆ, ಎಂಬುದಾಗಿ "ದೃಷ್ಟಾಂತಶ್ಚ" ಇತ್ಯಾದಿವಚನದಿಂದ ಹೇಳು ತ್ತಾರೆ ಅದನ್ನು "ಘಟಾಭಾವಸ್ಯಾಪಿ"ಇತ್ಯಾದಿ ವಚನದಿಂದ ಉಪಪಾದಿಸುತ್ತಾರೆ

अभावस्य च भावोऽपि धर्मोऽथापि हि धर्मिण. ॥
तादृक्त्व मात्रतेहोक्ता

भावस्य पक्षीकृतस्य दृष्टान्तीकृतस्य च भावः प्रमेयत्वादिधर्मोऽस्ति । चशब्दाद्धर्मिणाऽभिन्नश्च । भावस्याभावधर्म इवेति वा । अथाऽपि न स्वरूपासिद्ध्यादिदोष इति शेषः । कथमित्यत आह ॥ हि धर्मिण इति । हिशब्दो हेतौ । तादृकत्वं प्रतिषेधात्मकत्वम् । मात्रता प्रतिषेधमात्रता । इह सूत्रे ।

ಪಕ್ಷೀಕರಿಸಲ್ಪಟ್ಟ ಹಾಗು ದೃಷ್ಟಾಂತೀಕರಿಸಲ್ಪಟ್ಟ ಅಭಾವಕ್ಕೆ ಪ್ರಮೇಯತ್ವ ಮುಂತಾದ ಭಾವಧರ್ಮಗಳು ಇರುತ್ತವೆ. ಧರ್ಮಿಯಿಂದ ಆ ಧರ್ಮಗಳು ಅಭಿನ್ನಗಳೇ ಆಗಿವೆ ಆದರೂ ಧರ್ಮಿಗೇನೇ, ಧರ್ಮದ್ವಾರವಿಲ್ಲದೆಯೇ (ಧರ್ಮಗಳ ಮುಖಾಂತರವಾಗದೆಯೇ) ಪ್ರತಿಷೇಧ ಮಾತ್ರಸ್ವರೂಪವಿರುವುದೆಂಬುದು ಇಲ್ಲಿ-ಸೂತ್ರದಲ್ಲಿ ಹೇಳಲ್ಪಟ್ಟಿದೆ

## — ಪದಾರ್ಥದೀಪಿಕಾ —

ಅಧ್ಯಾಹರಿಸತಕ್ಕದ್ದು ಪಕ್ಷೀಕರಿಸಲ್ಪಟ್ಟ ಹಾಗೂ ದೃಷ್ಟಾಂತೀಕರಿಸಲ್ಪಟ್ಟ ಅಭಾವಕ್ಕೆ ಭಾವರೂಪವಾದ ಪ್ರಮೇಯತ್ವ ಮುಂತಾದ ಧರ್ಮವು ಇರುತ್ತದೆಯೆಂಬುದೇನೋ ನಿಜ 'ಚ" ಶಬ್ದವಿದ್ದುದರಿಂದ, ಅದು ಧರ್ಮಿಯಿಂದ ಅಭಿನ್ನವೂ ಆಗಿದೆ. ಅಥವಾ "ಭಾವಕ್ಕೆ ಇರುವ ಅಭಾವ ಧರ್ಮದ ಹಾಗೆ" ಎಂಬುದಾಗಿ ಉಪಮಾರ್ಥದಲ್ಲಿಯೂ "ಚ" ಶಬ್ದವನ್ನು ಹೇಳಬಹುದು "ಆದರೂ ಸ್ವರೂಪಾಸಿದ್ಧಿ ಮುಂತಾದ ದೋಷವಿಲ್ಲ''(ಅಥಾಪಿ ನ ಸ್ವರೂಪಾಸಿದ್ಧ್ಯಾದಿ ದೋಷಃ'' ಇತಿಶೇಷಃ) ಎಂಬುದು ಶೇಷವಾಗಿದೆ ಸ್ವರೂಪಾಸಿದ್ಧಿ ಮುಂತಾದ ದೋಷವು ಹೇಗೆ ಇಲ್ಲ? ಎಂಬ ಪ್ರಶ್ನೆಗೆ ಉತ್ತರವನ್ನು ''ಹಿ ಧರ್ಮಿಣಃ'' ಇತ್ಯಾದಿ ವಚನದಿಂದ ಹೇಳುತ್ತಾರೆ ''ಹಿ'' ಶಬ್ದವು ಹೇತ್ವರ್ಥದಲ್ಲಿದೆ ''ತಾದೃಕ್ತ್ವಂ''– ಪ್ರತಿಷೇಧರೂಪತೆಯು. ''ಮಾತ್ರತಾ''– ಕೇವಲ ನಿಷೇಧರೂಪತೆಯು ''ಇಹ'' ಈ ಸೂತ್ರದಲ್ಲಿ

## — ವಿಶೇಷಾರ್ಥಪ್ರದೀಪಿಕಾ —

''ಧರ್ಮದ್ವಾರಾ"–ಪ್ರಮೇಯತ್ವಮುಂತಾದ ಭಾವರೂಪ ಧರ್ಮಗಳ ಮುಖಾಂತರದಿಂದ ನಿಪಾತಗಳಿಗೆ ಅನೇಕ ಅರ್ಥಗಳಿದ್ದುದರಿಂದ ''ಚ'' ಶಬ್ದವು, "ಇವ''( ಸದೃಶ)ಎಂಬ ಅರ್ಥದ ದೆಯೆಂಬುದಾಗಿ "ಭಾವಸ್ಯ ಅಭಾವಧರ್ಮ ಇವ" ಎಂಬ ವಾಕ್ಯದಿಂದ ಹೇಳಿದ್ದಾರೆ. ''ಅಥಾಪಿ'' ಎಂಬುದಕ್ಕೆ ಸಾಕಾಂಕ್ಷತೆಯನ್ನು

एतदुक्तं भवति । स्यादयं स्वरूपासिद्ध्यादिदोषो यद्यत्र प्रतिषेधमात्रशब्देन केवलप्रतिषेधत्वं विवक्षितं स्यात् । न चैवम् । किन्तु धर्मद्वारमन्तरेण धर्मिण एव प्रतिषेधत्वम् । तच्च पक्षदृष्टान्तयोरस्त्येव । तयोर्धर्मद्वारेण विधित्वेऽपि धर्मिणोः प्रतिषेधत्वस्योभयसिद्धत्वात् । व्यावृत्तं च विपक्षात्कुलालादेः । तस्य धर्मतो निषेधत्वेऽपि धर्मि (णो विधित्वा) णोऽनिषेधत्वादिति । ननु कथमेतल्लभ्यते । उच्यते । मात्रशब्दो हि साकल्ये वर्तते । न च तत्क्वापि

— ಪದಾರ್ಥದೀಪಿಕಾ —

ಇಲ್ಲಿ ಹೇಳಿದ್ದು– "ಸೂತ್ರದಲ್ಲಿರುವ ಪ್ರತಿಷೇಧ ಮಾತ್ರ" ಈ ಶಬ್ದದಿಂದ, ಕೇವಲ ನಿಷೇಧರೂಪತ್ವವು ಅಭಿಪ್ರೇತವಾದ ಪಕ್ಷದಲ್ಲಿ ಈ ಸ್ವರೂಪಾಸಿದ್ಧಿ ಮುಂತಾದ ದೋಷವು ಬರಬಹುದಿತ್ತು ಆದರೆ ಹಾಗೆ ಅಭಿಪ್ರೇತವಿಲ್ಲ ಧರ್ಮದ ದ್ವಾರವನ್ನು ಬಿಟ್ಟು (ಧರ್ಮದ ಮುಖಾಂತರವಿಲ್ಲದೆ) ಧರ್ಮಿಯೇ ಪ್ರತಿಷೇಧರೂಪವಾಗಿರುವುದೆಂಬ ಅರ್ಥವು ಅಭಿಪ್ರೇತವಾಗಿದೆ ಇಂಥ ಧರ್ಮ ದ್ವಾರವಿಲ್ಲದೆಯೇ ಧರ್ಮಿಯೇ ಪ್ರತಿಷೇಧರೂಪವಾಗಿರುವುದೆಂಬ ಪ್ರತಿಷೇಧ ರೂಪತ್ವವು ಪಕ್ಷ ದೃಷ್ಟಾಂತಗಳೆರಡರಲ್ಲಿ ಇದ್ದೇ ಇದೆ ಏಕೆಂದರೆ ಆ ಭಾವ–ಅಭಾವಗಳಿಗೆ ಧರ್ಮ ಮುಖಾಂತರದಿಂದ ವಿಧಿರೂಪತ್ವವಿದ್ದರೂ ಧರ್ಮಿಗಳಿಗೆ ಪ್ರತಿಷೇಧರೂಪತ್ವವಿದೆಯೆಂಬುದು ಉಭಯತರಿಗೂ ಸಿದ್ಧವಾಗಿದೆ ವಿಪಕ್ಷವಾದ ಕುಲಾಲಾದಿಗಳಲ್ಲಿ ಇರುವುದೂ ಇಲ್ಲ ಕುಲಾಲಾದಿಗಳು ಧರ್ಮರೂಪದಿಂದ ನಿಷೇಧರೂಪವಾಗಿದ್ದರೂ ಅವುಗಳಿಗೆ ಧರ್ಮಿರೂಪದಿಂದ ನಿಷೇಧರೂಪತ್ವವಿಲ್ಲ" ಎಂಬುದು

ಇದು ಹೇಗೆ ಲಭಿಸುತ್ತದೆ ? ಎಂದರೆ ಹೇಳುತ್ತೇವೆ–"ಮಾತ್ರ" ಶಬ್ದವು ಸಾಕಲ್ಯಾರ್ಥದಲ್ಲಿ (ಎಲ್ಲಯೆಂಬ ಅರ್ಥದಲ್ಲಿ) ಇರುತ್ತದೆ. ಎಲ್ಲದಕ್ಕೂ (ಸಾಕ

— ವಿಶೇಷಾರ್ಥಪ್ರದೀಪಿಕಾ —

ಪರಿಹರಿಸಲು, ಅಪೇಕ್ಷಿತವಾದ ಶೇಷವನ್ನು "ಈ ಸ್ವರೂಪಾಸಿದ್ಧ್ಯಾದಿದೋಷಃ" ಎಂಬ ವಚನದಿಂದ ಪೂರೈಸುತ್ತಾರೆ

"ಉಭಯಸಿದ್ಧತ್ವಾತ್"–ಪೂರ್ವಪಕ್ಷಿ–ಸಿದ್ಧಾಂತಿ, ಉಭಯತರಿಗೆ ಸಿದ್ಧವಾದುದರಿಂದ ಹೀಗೆ ಅರ್ಥ

"ಕಥಮೇತತ್"–ಧರ್ಮಿಯೇ ನಿಷೇಧರೂಪವಾಗಿರುವುದೆಂಬುದು ಹೇಗೆ?

सम्भवति । प्रतिषेधेऽपि विधिसद्भावस्य परेणैवोक्तत्वात् । ततः प्रतिषेधमात्रशब्दो विधेरप्राधान्यं लक्षयति । अन्नमात्रं भुक्तमिति यथा । धर्मधर्मिणोश्चाप्राधान्यं धर्मस्य प्राधान्यं धर्मिणः । तेन धर्मिणः प्रतिषेधत्वं प्रतिषेधमात्रत्वमिति सिध्यति ।

— ಪದಾರ್ಥದೀಪಿಕಾ —

ಲ್ಯೇನ) ಪ್ರತಿಷೇಧರೂಪತ್ವವು ಎಲ್ಲಿಯೂ ಕಂಡಿಲ್ಲ ಏಕೆಂದರೆ ಅಭಾವವೆಂಬ ನಿಷೇಧದಲ್ಲಿಯೂ ಸಹ ಭಾವಧರ್ಮಗಳಿರುವುದೆಂಬುದನ್ನು ಪರನೇ ಹೇಳಿರುತ್ತಾನೆ ಆದುದರಿಂದ, ''ಪ್ರತಿಷೇಧ ಮಾತ್ರ'' ಶಬ್ದವು, ನಿಷೇಧಕ್ಕಿಂತ ವಿಧಿಗೆ ಅಪ್ರಾಧಾನ್ಯವನ್ನು ತೋರಿಸುತ್ತದೆ ''ಅನ್ನ ಮಾತ್ರಂ ಭುಕ್ತಂ'' ಎಂಬಲ್ಲಿ ಹೇಗೋ ಹಾಗೆ ಧರ್ಮ ಧರ್ಮಿಗಳೆರಡರಲ್ಲಿ ಧರ್ಮಕ್ಕೆ ಅಪ್ರಾಧಾನ್ಯವೂ ಧರ್ಮಿಗೆ ಪ್ರಾಧಾನ್ಯವೂ ಇರುತ್ತದೆ ಇದರಿಂದ, ''ಧರ್ಮಿಗೆ– ''ಪ್ರತಿಷೇಧತ್ವಂ''– ಕೇವಲ ಪ್ರತಿಷೇಧರೂಪತ್ವವು'' ಎಂಬುದು ಸಿದ್ಧಿಸುತ್ತದೆ

— ವಿಶೇಷಾರ್ಥಪ್ರದೀಪಿಕಾ —

ಎಂದು ಅರ್ಥ ''ಸಾಕಲ್ಯೇ ವರ್ತತೇ''–ಧರ್ಮಾತ್ಮಕವಾದ, ಆಕಾರದಿಂದಧರ್ಮಿರೂಪ ಆಕಾರದಿಂದ, ಹೀಗೆ ಸಕಲ ಆಕಾರಗಳಿಂದಲೂ ನಿಷೇಧರೂಪವಾಗಿರುವುದರಿಂದ, (ಹೀಗೆ ''ಪ್ರತಿಷೇಧಮಾತ್ರತ್ವಾತ್'' ಎಂಬಲ್ಲಿ ಅರ್ಥವೆಂದು ಭಾವ) ಈ ಅರ್ಥದಲ್ಲಿ ಇದೆಯೆಂದು ಭಾವ ''ಕ್ವಾಪಿ''-ಪಕ್ಷದಲ್ಲಿ ಹಾಗು ದೃಷ್ಟಾಂತದಲ್ಲಿ ಅದನ್ನು ' ಪ್ರತಿಷೇಧೇಽಪಿ'' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಧರ್ಮದ ಮುಖಾಂತರದಿಂದ ವಿಧಿರೂಪತ್ವವು ಇರುವುದೆಂದು ಪರನು ಒಪ್ಪಿದ್ದಾನೆಂದು ಭಾವ "ಅನ್ನಮಾತ್ರಂ ಭುಕ್ತಮಿತಿ ಯಥಾ" – ಇಲ್ಲಿ "ಮಾತ್ರ'' ಶಬ್ದವು "ಸಕಲ" ಎಂಬ ಅರ್ಥವನ್ನು ಮುಖ್ಯವಾಗಿ ಹೇಳುತ್ತದೆ ಆದರೆ ಭುಕ್ತ (ಉಂಡದ್ದು) ಯೆಲ್ಲವೂ ಅನ್ನವಾಗುವುದಿಲ್ಲ ಏಕೆಂದರೆ ವ್ಯಂಜನಾದಿಗಳನ್ನು ಬಿಡಲು ಸಾಧ್ಯವಿಲ್ಲ ಆದುದರಿಂದ, ಲಕ್ಷಣಾವೃತ್ತಿಯಿಂದ "ಅನ್ನಮಾತ್ರಂ" ಶಬ್ದವು ಅನ್ನದ ಪ್ರಾಧಾನ್ಯವನ್ನೂ ವ್ಯಂಜನಾದಿಗಳಿಗೆ ಅಪ್ರಾಧಾನ್ಯವನ್ನೂ ಹೇಳುತ್ತದೆಂದು ಒಪ್ಪುತ್ತಾರೆ ಅದರ ಹಾಗೆ ಇಲ್ಲಿಯೂ – "ಪ್ರತಿಷೇಧಮಾತ್ರತ್ವಾತ್' ಎಂಬಲ್ಲಿಯೂ ರೂಢಲಕ್ಷಣಾವೃತ್ತಿಯಿಂದ ಪ್ರಾಧಾನ್ಯೇನ ನಿಷೇಧರೂಪತ್ವವೆಂಬುದನ್ನೂ ಅಪ್ರಾಧಾನ್ಯೇನ ವಿಧಿರೂಪತ್ವವೆಂಬುದನ್ನೂ ತಿಳಿಸುತ್ತದೆ. ಹೀಗೆ ಭಾವ

बुद्धिराहित्यमेव तत् ॥

इच्छाप्रयत्नादिरूपायाः प्रवृत्तेः कर्तृतापरनामिकाया व्यापिका बुद्धिरभावाद्व्यावृत्ता तामपि व्यावर्तयतीत्युक्तम् । तत्राभावाद्बुद्धिव्यावृत्तिरेव कुत इत्यत आह ॥ बुद्धीति । तत्तस्मात्प्रतिषेधमात्रत्वादेव बुद्धिराहित्यमभावस्य घटाभाववत्सिद्ध्यतीत्यर्थः । द्विविधं हि प्रमेयम् । स्वतन्त्रं परतन्त्रं च । परतन्त्रमपि द्विविधम् । भावोऽभावश्च । भावोऽपि द्वेधा । चेतनोऽचेतनश्च । एवञ्च यदा भावस्यापि कस्यचिन्न चैतन्यं का वार्ता तदाऽभावे चैतन्यस्य । कश्चिदभावो बुद्धिमान् किन्न

ಈ ಕಾರಣದಿಂದ, ಕೇವಲ ನಿಷೇಧಸ್ವರೂಪವಿದ್ದ ಕಾರಣದಿಂದಲೇ ಪ್ರಾಗಭಾವಕ್ಕೆ ಘಟದ ಅಭಾವದ ಹಾಗೆ ಬುದ್ಧಿರಾಹಿತ್ಯವು ಸಿದ್ಧಿಸುತ್ತದೆ.

— ಪದಾರ್ಥದೀಪಿಕಾ —

ಇನ್ನು– ಇಚ್ಛಾಪ್ರಯತ್ನಾದಿರೂಪವಾದ ' ಕರ್ತೃತಾ '' ಎಂಬ ಬೇರೆ ಹೆಸರಿನ ಪ್ರವೃತ್ತಿಯನ್ನು ಕುರಿತು ವ್ಯಾಪಿಕೆಯಾದ ಬುದ್ಧಿಯು ಪ್ರಾಗಭಾವದಲ್ಲಿ ಇಲ್ಲದಿರುವಂತಹದಾಗಿದ್ದು, ಕರ್ತೃತ್ವವನ್ನೂ ಇಲ್ಲದ್ದನ್ನಾಗಿ ಮಾಡುತ್ತದೆಯೆಂದು ಹೇಳಲಾಯಿತು ಇಲ್ಲಿ ಪ್ರಾಗಭಾವದಲ್ಲಿ ಬುದ್ಧಿಯು ಇಲ್ಲವೆಂಬುದೇ ಏಕೆ ? ಈ ಆಶಂಕೆಯು ಬರುವುದರಿಂದ ಅದರ ಪರಿಹಾರವನ್ನು ''ಬುದ್ಧಿ'' ಇತ್ಯಾದಿ ವಚನದಿಂದ ಹೇಳುತ್ತಾರೆ ''ತತ್''– ಪ್ರತಿಷೇಧ ಮಾತ್ರ ರೂಪವಾಗಿರುವುದೆಂಬ ಕಾರಣದಿಂದಲೇ ಅಭಾವಕ್ಕೆ (ಪ್ರಾಗಭಾವಕ್ಕೆ) ಘಟಾಭಾವದ ಹಾಗೆ ಬುದ್ಧಿರಾಹಿತ್ಯವು ಸಿದ್ಧಿಸುತ್ತದ, ಹೀಗೆ ಅರ್ಥ ಪ್ರಮೇಯವು ಸ್ವತಂತ್ರಪರತಂತ್ರವೆಂಬುದಾಗಿ ಎರಡು ತರಹವುಳ್ಳದ್ದು ಪರತಂತ್ರ ಪ್ರಮೇಯವಾದರೋ ಭಾವ ಅಭಾವವೆಂದು ಎರಡು ವಿಧವುಳ್ಳದ್ದು ಭಾವವೂ ಚೇತನಾಚೇತನವೆಂದುಎರಡು ಪ್ರಕಾರವುಳ್ಳದ್ದು ಹೀಗಿರುವಾಗ ಯಾವದೋ ಒಂದು ಭಾವಕ್ಕೂಸಹ ಚೈತನ್ಯ(ಬುದ್ಧಿ)ವಿಲ್ಲದಿರುವಾಗ

— ವಿಶೇಷಾರ್ಥಪ್ರದೀಪಿಕಾ —

ಹೇತುವಿಗೆ (ಪ್ರತಿಷೇಧಮಾತ್ರತ್ವಾತ್ ಎಂಬ) ಸ್ವರೂಪಾಸಿದ್ಧಿಯನ್ನೂ ವ್ಯಭಿಚಾರವನ್ನೂ ಪರಿಹರಿಸಿ, ಸಾಧ್ಯಸಾಧನದಲ್ಲಿ ಅಪ್ರಯೋಜಕತ್ವವೆಂಬುದನ್ನು ಪರಿಹರಿಸಲು ಹೇಳಿದ "ಬುದ್ಧಿರಾಹಿತ್ಯ' ಎಂಬುದನ್ನು "ಇಚ್ಛಾಪ್ರಯತ್ನಾದಿರೂಪಾಯಾಃ" ಇತ್ಯಾದಿ ವಾಕ್ಯದಿಂದ ಉಪಪಾದನಮಾಡುತ್ತಾರೆ

स्यादिति चेन्न । निरुपाधिकसम्बन्धमनादृत्य निर्निमित्तायाः शङ्काया अतिप्रसङ्गित्वात् । तन्मनोऽकुरुतेति श्रुतेरिति चेन्न । अन्यथासिद्धत्वात् । अथ प्रतिषेधमात्रत्वमपि पक्षे नाभ्युपेयात् । तदाऽसदिति ब्रह्मेति च संज्ञाभेदमात्रम् । अनेकत्वादेः परेणापि त्याज्यत्वात् ।

— ಪದಾರ್ಥದೀಪಿಕಾ —

ಅಭಾವದಲ್ಲಿ ಚೈತನ್ಯದ ಸುದ್ದಿಯು (ವಾರ್ತೆಯು) ಯಾವುಥು? ಇನ್ನು ಯಾವದೋ ಒಂದು (ಲೋಕವಿಲಕ್ಷಣವಾದ) ಅಭಾವವು ಬುದ್ಧಿಯುಳ್ಳದ್ದಾಗಬಾರದೇಕೆ? ಎಂದು ಶಂಕಿಸಬಾರದು ಏಕೆಂದರೆ ನಿರುಪಾಧಿಕವಾದ ಸಂಬಂಧವನ್ನು ಅನಾದರಿಸಿ ನಿರ್ನಿಮಿತ್ತವಾದ ಆಶಂಕಯು ಅತಿಪ್ರಸಂಗವುಳ್ಳದ್ದಾಗುತ್ತದೆ "ತನ್ಮನೋಽಕುರುತ" ಎಂಬ ಶ್ರುತಿಯಿರುವದರಿಂದ ಹಾಗೆ ಹೇಳಬಹುದೆಂದು ಶಂಕಿಸುವದು ಸರಿಯಲ್ಲ ಏಕಂದರೆ ಅದು ಅನ್ಯಥಾಸಿದ್ಧವಾಗಿದೆ ಇನ್ನು, ಪಕ್ಷದಲ್ಲಿ ಪ್ರತಿಷೇಧ ಮಾತ್ರತ್ವವನ್ನೂ ಒಪ್ಪದಿದ್ದ ಪಕ್ಷದಲ್ಲಿ ಆಗ, "ಅಸತ್" ಎಂಬುದಾಗಿಯೂ "ಬ್ರಹ್ಮ" ಎಂಬುದಾಗಿಯೂ ಬೇರೆ ಬೇರೆ ಸಂಜ್ಞೆಗಳಷ್ಟೇ ಆಗುವವು ಏಕೆಂದರೆ ಅನೇಕತ್ವ ಮುಂತಾದುದನ್ನು ಪರನು ಪರಿತ್ಯಜಿಸಬೇಕಾಗುತ್ತದೆ

— ವಿಶೇಷಾರ್ಥಪ್ರದೀಪಿಕಾ —

"ಕಶ್ಚಿತ್" – ಪ್ರಲಯಕಾಲದಲ್ಲಿ ಇರುವ ಪ್ರಾಗಭಾವವು "ನಿರುಪಾಧಿಕ ಸಂಬಂಧಂ' – ನಿಷೇಧೈಕಸ್ವರೂಪಸ್ಯ– ಬುದ್ಧಿರಾಹಿತ್ಯಸ್ಯ (ನಿಷೇಧೈಕ ಸ್ವರೂಪ ವುಳ್ಳದ್ದಾಗಿರುವುದು, ಬುದ್ಧಿರಹಿತವಾಗಿರುವುದು, ಇವೆರಡಕ್ಕೆ) ಎಂಬುದಾಗಿ ಇಲ್ಲಿ ಹಚ್ಚಿಕೊಳ್ಳಬೇಕು "ಅತಿಪ್ರಸಂಗಿತ್ವಾತ್" – "ಧೂಮವು ಇರಲಿ, ಅಗ್ನಿಯು ಇಲ್ಲದಿರಲಿ, ಎಂಬುದಾಗಿ ಶಂಕಿಸುವ ಪ್ರಸಂಗವು ಬರುವುದರಿಂದ ಸದನುಮಾನ ಗಳೇ ಇಲ್ಲ (ಭಂಗ)ವಾಗುವ ಪ್ರಸಂಗವು ಬರುತ್ತದೆ ಹೀಗೆ ಅರ್ಥ. ನಿರ್ನಿಮಿತ್ತತ್ವವು ಅಸಿದ್ಧವೆಂಬುದಾಗಿ "ತನ್ಮನೋಽಕುರುತ" ಇತ್ಯಾದಿ ವಾಕ್ಯದಿಂದ ಶಂಕಿಸುತ್ತಾರೆ "ಅನ್ಯಥಾಸಿದ್ಧತ್ವಾತ್"– ಕಾರ್ಯದ ಉನ್ಮುಖವಾಗಿದೆಯೆಂಬ ಅರ್ಥವನ್ನು ಹೇಳಲು ಬರುವುದರಿಂದ ಅನ್ಯಥಾಸಿದ್ಧಿ– ಅಥವಾ ಈ ವಾಕ್ಯವು ಭಗವತ್ಪರವಾದುದರಿಂದ ಅನ್ಯಥಾಸಿದ್ಧವೆಂದು ಭಾವ

„ಸಂಜ್ಞಾಭೇದಮಾತ್ರಂ, – ಕೇವಲ ಹೆಸರುಗಳಲ್ಲಿ ಭೇದ ಅರ್ಥದಲ್ಲಿ ಭೇದವಿಲ್ಲ ಹೀಗೆ ಅರ್ಥ. ಇನ್ನು ಆಯಾಯ ಪ್ರಾಗಭಾವಗಳು ಅನೇಕಗಳೆಂದು ಒಪ್ಪಿದ್ದೇವೆ ಹಾಗು ಕಾರ್ಯದ ಉತ್ಪತ್ತಿಯಿಂದಲೇ ನಾಶಹೊಂದುತ್ತವೆ ಆದರೆ ಬ್ರಹ್ಮವು ಒಂದೇ, ಅನೇಕಗಳಲ್ಲ. ಏಕೆಂದರೆ "ಏಕಮೇವ"

**अनेकस्वातन्त्र्ये कार्योदयायोगात् । नन्विदं तत्रैव वक्तव्यम् । सत्यम् । प्रतिषेधमात्रत्वे विदिते ततो बुद्धिराहित्यप्रतीतेः सौलभ्यादि-**

— ಪದಾರ್ಥದೀಪಿಕಾ —

ಹಾಗು ಅನೇಕಗಳಿಗೆ ಸ್ವಾತಂತ್ರ್ಯವಿದ್ದಲ್ಲಿ ಕಾರ್ಯದ ಉತ್ಪತ್ತಿಯು ಸರಿಯೆನಿಸುವದಿಲ್ಲ (ಆಗುವದಿಲ್ಲ)

ಇನ್ನು ಈ ವಿಷಯವನ್ನು ಅಲ್ಲಿಯೇ ಹೇಳತಕ್ಕದ್ದು ಇದು ನಿಜ ! ಆದರೂ ಪ್ರತಿಷೇಧ ಮಾತ್ರತ್ವವನ್ನು ತಿಳಿದುಕೊಂಡನಂತರ, ಅದರಿಂದ, ಬುದ್ಧಿರಾಹಿತ್ಯದ ( ಬುದ್ಧಿರಹಿತವಾದುದೆಂಬ ಸಂಗತಿಯ ) ಜ್ಞಾನಕ್ಕೆ ಸೌಲಭ್ಯವು

— ವಿಶೇಷಾರ್ಥಪ್ರದೀಪಿಕಾ —

ಇತ್ಯಾದಿ ಶ್ರುತಿಯ ವಿರೋಧವು ಬರುವುದರಿಂದ ಬ್ರಹ್ಮಗಳು ಅನೇಕವೆಂದು ಒಪ್ಪಲು (ಭೇದವನ್ನು ಅಂಗೀಕರಿಸಲು) ಬರುವುದಿಲ್ಲ ಆದುದರಿಂದ ಕೇವಲ ಸಂಜ್ಞಾಭೇದವು ಹೇಗೆ ? ಅರ್ಥದಲ್ಲಿಯೂ ಭೇದವಿದೆ, ಈ ಆಶಂಕೆಯನ್ನು "ಅನೇಕತ್ವಾದೇಃ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ. "ಆದಿ" ಪದದಿಂದ ಅಚೇತನಪ್ರಭೇದವಾಗಿರುವುದು'' ಇದನ್ನು ಪರಿಗ್ರಹಿಸಬೇಕು ಅನೇಕತ್ವಾದಿಗಳನ್ನೇಕೆ ತ್ಯಜಿಸಬೇಕಾಗುವುದೆಂಬುದನ್ನು "ಅನೇಕಸ್ವಾತಂತ್ರ್ಯೇ". ಇತ್ಯಾದಿ ವಚನದಿಂದ ಹೇಳುತ್ತಾರೆ ಅನೇಕಸ್ವತಂತ್ರವ್ಯಕ್ತಿಗಳಲ್ಲಿ—ಒಂದೇ ತರಹದ ಜ್ಞಾನ- ಚಿಕೀರ್ಷಾಕೃತಿಗಳಿರುವವೆಂಬುದು ಪ್ರಮಾಣವಿರುದ್ಧವಾದುದರಿಂದ, ಒಬ್ಬನಲ್ಲಿ ಉತ್ಪತ್ತಿಗೆ ಅನುಕೂಲವಾದ ಜ್ಞಾನ ಇಚ್ಛಾಕೃತಿಗಳಿದ್ದರೂ ಇನ್ನೊಬ್ಬನಲ್ಲಿ ಅದಕ್ಕೆ ಪ್ರತಿಕೂಲವಾದ ಜ್ಞಾನೇಚ್ಛಾಕೃತಿಗಳಿರುವುದರಿಂದ ಕಾರ್ಯದ ಉತ್ಪತ್ತಿಗೆ ಅನುಕೂಲವಾದ ಕೃತಿಯ ಹಾಗೆ ಪ್ರತಿಕೂಲವಾದ ಕೃತಿಯೂ ಇರುವುದರಿಂದ ಕಾರ್ಯದ ಉತ್ಪತ್ತಿಯಾಗದಿರುವುದೂ ಸಂಭವಿಸುವುದರಿಂದ ಅನೇಕ ಸ್ವತಂತ್ರ ವ್ಯಕ್ತಿಗಳಿದ್ದಲ್ಲಿ ಕಾರ್ಯದ ಉತ್ಪತ್ತಿಯಾಗಲಾರದೆಂದು ಭಾವ ಇನ್ನು ಆಯಾಯ ಪ್ರಾಗಭಾವಕ್ಕೆ ಆಯಾಯ ಕಾರ್ಯವನ್ನು ಕುರಿತು ಕರ್ತೃತ್ವವನ್ನು ಹೇಳಿದರೆ ಆಯಾಯ ಕಾರ್ಯದ ಮೇಲೆ ಆಯಾಯ ಪ್ರಾಗಭಾವಕ್ಕೆ ಸ್ವಾತಂತ್ರ್ಯವು ಬರುವುದರಿಂದ ಒಂದು ಕಾರ್ಯದಲ್ಲ ಅನೇಕರಿಗೆ ಸ್ವಾತಂತ್ರ್ಯದ ಪ್ರಸಕ್ತಿಯು ಬರುವುದಿಲ್ಲವಾದುದರಿಂದ ಕಾರ್ಯದ ಉದಯಾದಿಗಳಿಗೆ ಅಡ್ಡಿಯಿಲ್ಲ, ಆದರೂ "ವಿಪ್ರತಿಪನ್ನೋಽಭಾವಃ" ಎಂಬಲ್ಲಿ ಹೇಳಿದ ತಾತ್ಪರ್ಯವನ್ನು (ಪ್ರಾಗಭಾವವೊಂದೇ ವಿಶ್ವದ ಕರ್ತೃ ಹಾಗು ಉಪಾದಾನ ಎಂಬ ತಾತ್ಪರ್ಯವನ್ನು) ತಿಳಿಯಬೇಕು.

"ಇದಂ—"ಬುದ್ಧಿರಾಹಿತ್ಯಮೇವ ತತ್" ಎಂಬುದನ್ನು "ತತ್ರೈವ"—"ಕರ್ತೃತ್ವಮಿತಿ ನಿಶ್ಚಿತಂ" ಎಂಬುದರ ಅನಂತರ ಹೇಳತಕ್ಕದ್ದು. ಹೀಗೆ ಅರ್ಥ.

होक्तम् । टीकाकारास्तु प्रमेयत्वादिभावधर्माङ्गीकारे बुद्धिरपि तथा किंन स्यादिति शङ्कावकाशादिहोक्तमित्याहुः ॥

भावस्याभावधर्मतोऽभावस्य च भावोऽपि धर्म इत्यनुपपन्नम् । भावाभावयोरभावभावधर्मित्वे प्रमाणाभावात । सम्बन्धाभावाच्च । सम्बद्धयोरेव हि शौक्ल्यपटयोर्धर्मधर्मिभावो दृष्टो नासम्बद्धयोर्मेरु-मन्दरयोः । न च भावाभावयोः सम्बन्धोऽस्ति । संयोगसमवाय-

— ಪದಾರ್ಥದೀಪಿಕಾ —

ಬರುತ್ತದೆ ಈ ಕಾರಣದಿಂದ ಇಲ್ಲಿ ಹೇಳಿದ್ದು. ಟೀಕಾಕಾರರಾದರೋ– "ಪ್ರಮೇಯತ್ವ ಮುಂತಾದ ಭಾವಧರ್ಮಗಳನ್ನೊಪ್ಪಿದರೆ ಅದರಂತೆಯೇ ಬುದ್ಧಿಯೂ ಏಕೆ ಇರಬಾರದು ? ಎಂಬ ಶಂಕೆಯು ಅವಕಾಶವಿರುವುದರಿಂದ ಇಲ್ಲಿ ಹೇಳಿದುದು'' ಎಂಬುದಾಗಿ ಹೇಳಿರುತ್ತಾರೆ

ಭಾವಕ್ಕೆ ಅಭಾವರೂಪ ಧರ್ಮವಿರುವುದರಿಂದ ಅಭಾವಕ್ಕೆ ಭಾವರೂಪ ಧರ್ಮವೂ ಇದಯೆಂಬುದಾಗಿ ಹೇಳಿದುದು ಯುಕ್ತವೆನಿಸುವುದಿಲ್ಲ ಏಕೆಂದರೆ ಭಾವ ಅಭಾವಗಳಲ್ಲಿ ಅಭಾವ ಹಾಗು ಭಾವರೂಪ ಧರ್ಮಗಳಿವೆಯೆಂಬಲ್ಲಿ ಪ್ರಮಾಣವಿಲ್ಲ ಮತ್ತು ಸಂಬಂಧವೂ ಇರುವುದಿಲ್ಲ ಏಕೆಂದರೆ ಸಂಬಂಧವಿದ್ಧವುಗಳೇ ಆದ ಶೌಕ್ಲ್ಯ (ಬಿಳಿಯ ಬಣ್ಣ) ಪಟ (ವಸ್ತ್ರ) ಇವುಗಳಲ್ಲಿ ಧರ್ಮ ಧರ್ಮಿಭಾವವು ಕಂಡಿರುತ್ತದೆಯೇ ವಿನಾ ಸಂಬಂಧರಹಿತಗಳಾದ ಮೇರು ಮಂದರಗಳಲ್ಲಿ ಧರ್ಮಧರ್ಮಿಭಾವವು ಕಂಡಿಲ್ಲ ಹಾಗು ಭಾವಅಭಾವಗಳಿಗಾ

— ವಿಶೇಷಾರ್ಥಪ್ರದೀಪಿಕಾ —

ನಾಲ್ಕು ಹೇತು (ಯುಕ್ತಿ) ಗಳಿಂದ ಧರ್ಮಧರ್ಮಿಭಾವವು ಭಾವಾಭಾವ ಗಳಿಗೆ ಸಂಭವಿಸುವುದಿಲ್ಲವೆಂಬ ಆಶಂಕಯನ್ನು ನಿರಾಸಮಾಡುವ ಅರ್ಥಪರವಾಗಿ ಮುಂದಿನ ವಾಕ್ಯದ ಅವತಾರಿಕೆಯನ್ನು 'ಭಾವಸ್ಯ'' ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ ಭಾವಾಭಾವಗಳಲ್ಲಿ, ಕ್ರಮವಾಗಿ ಅಭಾವ, ಭಾವರೂಪಗಳು ಇವೆಯೆಂಬಲ್ಲಿ ಪ್ರಮಾಣವಿಲ್ಲವಾದುದರಿಂದ, ಆ ಧರ್ಮಗಳಿಲ್ಲವೆಂಬುದಾಗಿ"ಭಾವಾ ಭಾವಯೋಃ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಸಾಧಕ ಪ್ರಮಾಣವಿಲ್ಲ ವೆಂಬುದಿಷ್ಟೇ ಅಲ್ಲ ಅನುಮಾನಬಾಧವೂ ಉಂಟೆಂಬ ಅಭಿಪ್ರಾಯದಿಂದ ಭಾವಾಭಾವಗಳಲ್ಲಿ ಅಭಾವ--ಭಾವರೂಪ ಧರ್ಮಗಳಿಲ್ಲವೆಂಬದನ್ನು ತಿಳಿಸಲು, ಯುಕ್ತಿಗಳನ್ನು "ಸಂಬಂಧಾಭಾವಾಚ್ಚ" ಎಂಬ ವಚನದಿಂದ ಹೇಳುತ್ತಾರೆ

विशेष्यतैव धर्मित्व

योर्भावनियतत्वात् । विरुद्धस्वभावत्वाच्च । यावविरुद्धस्वभावौ गुण-गुणिनौ तावेव हि धर्मधर्मिणावुपलब्धौ । न विरुद्धस्वभावावश्वमहिषौ । विरुद्धस्वभावौ च भावाभावौ । विधिनिषेधरूपत्वात् । अभेदाच्च । न हि घटः स्वयं स्वस्यैव धर्मो भवति । उक्तं च धर्मधर्म्यैक्य मित्यत आह ॥ विशेष्यतैवेति ॥ विशेषणतैव च धर्मत्वमित्यपि द्रष्टव्यम् । यो हि येन विशिष्यते व्यवच्छिद्यते स तस्य धर्मी । धर्मश्चा-

ವಿಶೇಷ್ಯವಾಗಿರುವುದೇ ಧರ್ಮಿತ್ವವು

— ಪದಾರ್ಥದೀಪಿಕಾ —

ದರೂ ಸಂಬಂಧವಿರುವುದಿಲ್ಲ ಏಕೆಂದರ ಸಂಯೋಗ ಸಮವಾಯಗಳಂತೂ ಭಾವಗಳಲ್ಲಿಯೇ ನಿಯತವಾಗಿರುತ್ತವೆ ಮತ್ತು ವಿರುದ್ಧ ಸ್ವಭಾವವುಳ್ಳವುಗಳೂ ಆಗಿವೆ ಯಾವ ಗುಣಗುಣಿಗಳು ಅವಿರುದ್ಧ ಸ್ವಭಾವವುಳ್ಳವುಗಳೋ ಅಂಥ ಗುಣ ಗುಣಿಗಳೇ ಧರ್ಮಧರ್ಮಿಗಳಾಗಿರುವುದು ಕಂಡಿರುತ್ತದೆ. ಆದರ ವಿರುದ್ಧ ಸ್ವಭಾವವುಳ್ಳ ಅಶ್ವಮಹಿಷಗಳು ಧರ್ಮಧರ್ಮಿಗಳಾಗಿಲ್ಲ ಭಾವಅಭಾವಗಳಾದರೋ ವಿರುದ್ಧ ಸ್ವಭಾವವುಳ್ಳವುಗಳು ಏಕೆಂದರೆ ವಿಧಿನಿಷೇಧರೂಪವಾಗಿವೆ. ಹಾಗು ಅಭೇದವೂ ಇರುತ್ತದೆ ಏಕೆಂದರೆ ಘಟವು ತನಗೆ ತಾನೇ ಧರ್ಮವಾಗುವುದಿಲ್ಲ ಮತ್ತು ಧರ್ಮಧರ್ಮಿಗಳಲ್ಲಿ ಐಕ್ಯವೂ ಹೇಳಲ್ಪಟ್ಟಿದೆ ಹೀಗೆ ಆಶಂಕೆಯು ಬರುವುದರಿಂದ ಉತ್ತರ ಪರಿಹಾರವನ್ನು "ವಿಶೇಷ್ಯತೈವ" ಇತ್ಯಾದಿ ವಚನದಿಂದ ಹೇಳುತ್ತಾರೆ "ವಿಶೇಷಣತ್ವವೇ ಧರ್ಮವಾಗಿರುವುದು" ( ಧರ್ಮತ್ವ ) ಎಂಬು

— ವಿಶೇಷಾರ್ಥಪ್ರದೀಪಿಕಾ —

"ಭಾವನಿಯತತ್ವಾತ್"— ಸಂಯೋಗವು ಯುತಸಿದ್ಧ ದ್ರವ್ಯದಲ್ಲಿಯೇ ಇರುತ್ತದೆ ಸಮವಾಯವು ಗುಣಗುಣ್ಯಾದಿರೂಪ ಅಯುತಸಿದ್ಧ ದ್ರವ್ಯದಲ್ಲಿಯೇ ಇರುತ್ತದೆ ಆದುದರಿಂದ ಕೇವಲ ಭಾವಮಾತ್ರದಲ್ಲಿಯೇ ಸಂಯೋಗಸಮವಾಯಗಳಿರುತ್ತವೆಯೆಂದು ಅರ್ಥ

ಅವಿರುದ್ಧವಾದ ಸ್ವಭಾವವಿರುವುದು ಧರ್ಮಿಧರ್ಮಿಭಾವ ಸಂಬಂಧದ ಪ್ರಯೋಜಕವೆಂಬುದನ್ನು ತಿಳಿಸುವ ಅನ್ವಯವ್ಯತಿರೇಕಗಳನ್ನು "ಯೌ ಅವಿರುದ್ಧಸ್ವಭಾವೌ" ಇತ್ಯಾದಿ ವಚನಗಳಿಂದ ತೋರಿಸುತ್ತಾರೆ

परः । प्रकारान्तरस्य निर्वक्तुमशक्यत्वात् । प्रतीयते च विशेष्य-
विशेषणभावो भावाभावयोः । अन्यथा घटः पटो न भवतीत्यभावः
प्रमेय इति च व्यवहारानुपपत्तेः । तत्कथं भावाभावयोर्न धर्मधर्मि-
भावः । पटशौक्ल्ययोश्च न सम्बन्धप्रयुक्तो धर्मिधर्मभावः । नापि
मेरुमन्दरयोस्तदभावः सम्बन्धाभावप्रयुक्तः । किन्तु स्वभावादेव
विशेष्यविशेषणत्वतदभावरूपः । सम्बद्धयोरपि घटपटयोस्तदभावा-

— ಪದಾರ್ಥದೀಪಿಕಾ —

ದನ್ನು ತಿಳಿಯಬೇಕು ಏಕೆಂದರೆ (ಒಂದು) ಯಾವದು (ಇನ್ನೊಂದರಿಂದ)
ಯಾವುದರಿಂದ, 'ವಿಶಿಷ್ಯತೇ"= ವ್ಯವಚ್ಛೇದಗೊಳಿಸಲ್ಪಡುವುದೋ ಅದು ಅದರ
ಧರ್ಮಿಯೆನಿಸುತ್ತದೆ ಇನ್ನೊಂದು ಧರ್ಮವೆನಿಸುತ್ತದೆ ಇದರಿಂದ ಬೇರೆಯಾದ
ಪ್ರಕಾರವನ್ನು ಹೇಳಲು ಶಕ್ಯವಿಲ್ಲ ಮತ್ತು ಭಾವ-ಅಭಾವಗಳಲ್ಲಿ ವಿಶೇಷ್ಯ
ವಿಶೇಷಣಭಾವವು ತೋರುತ್ತದೆ (ಕಂಡುಬರುತ್ತದೆ) ಏಕೆಂದರೆ ಹಾಗ
ವಿಶೇಷ್ಯವಿಶೇಷಣ ಭಾವವು ಇಲ್ಲದಿದ್ದಲ್ಲಿ ಘಟವು ಪಟವಾಗುವುದಿಲ್ಲ" ಎಂಬ,
ಹಾಗು "ಅಭಾವವು ಪ್ರಮೇಯವು" ಎಂಬ ವ್ಯವಹಾರವು ಕೂಡಲಾರದು
ಆದುದರಿಂದ, ಭಾವಅಭಾವಗಳಲ್ಲಿ ಧರ್ಮಧರ್ಮಿಭಾವವು ಹೇಗ ಇರುವುದಿಲ್ಲ?
ಪಟ, ಶೌಕ್ಲ್ಯ (ಬಿಳಿಯ ಬಣ್ಣ) ಇವುಗಳಲ್ಲಿಯಾದರೂ ಸಂಬಂಧ ಪ್ರಯುಕ್ತ
ವಾಗಿ ಧರ್ಮವು ಧರ್ಮಿಭಾವವಂದಲ್ಲ ಮತ್ತು ಮೇರುಮಂದರಗಳಲ್ಲಿ ಧರ್ಮ
ಧರ್ಮಿಭಾವವಿಲ್ಲದಿರುವುದು ಸಂಬಂಭವಿಲ್ಲದಿರುವುದರ ಮೂಲಕವಲ್ಲ ಆದರೆ
ಸ್ವಭಾವದಿಂದಲೇ ವಿಶೇಷ್ಯವಿಶೇಷಣ ಭಾವವಿರುವುದಾಗಲೀ ಇಲ್ಲದಿರುವುದಾ
ಗಲೀ ಆಗುತ್ತದೆ. ಏಕೆಂದರೆ ಸಂಬಂಧವುಳ್ಳವುಗಳಾಗಿದ್ದರೂ ಘಟ- ಪಟ

— ವಿಶೇಷಾರ್ಥಪ್ರದೀಪಿಕಾ —

"ಧರ್ಮಶ್ಚ ಅಪರಃ"– ವ್ಯವಚ್ಛೇದಕವಾದುದು ಧರ್ಮವು ಪ್ರಮಾಣವಿ
ಲ್ಲವೆಂಬ ಮೊದಲನೆಯ ಯುಕ್ತಿಯನ್ನು 'ಪ್ರತೀಯತೇ' ಇತ್ಯಾದಿ ವಚನದಿಂದ
ನಿರಾಕರಿಸುತ್ತಾರೆ 'ಪಟೋ ನ ಭವತಿ'– ಪಟದಿಂದ ಭೇದವುಳ್ಳದ್ದು,
"ಪ್ರಮೇಯಃ"– ಪ್ರಮೇಯತ್ವವುಳ್ಳದ್ದು ಹೀಗೆ ಅರ್ಥ, ಸಂಬಂಧವಿಲ್ಲವೆಂಬ
ಎರಡನೆಯ ಯುಕ್ತಿಯೂ ಧರ್ಮಧರ್ಮಿಭಾವವಿಲ್ಲದಿರುವುದೆಂಬುದರ ಪ್ರಯೋ
ಜಕವಲ್ಲವೆಂಬುದಾಗ "ಪಟಶೌಕ್ಲ್ಯಯೋಶ್ಚ' ಎಂಬ ವಚನದಿಂದ ಹೇಳುತ್ತಾರೆ
"ವಿಶೇಷ್ಯವಿಶೇಷಣತ್ವ ತದ ಭಾವರೂಪಃ" ಪಟ, ಶೌಕ್ಲ್ಯ, ಇವುಗಳಲ್ಲಿ

द्भूतलघटाभावयोस्तद्भावाच्च । एवमेव विरोधिस्वभावाभेदावपि निरस्तौ । सगुणनिर्गुणत्वेन नित्यानित्यत्वेन वा विरुद्धस्वभावयोरपि गुणगुणिनोर्धर्म्यादित्वस्य दर्शनात् । अदर्शनाच्च पटत्वशौक्ल्ययोः । दृश्यते चाभेदेऽपि तद्भावः । अस्तित्वाभिधेयत्वादीनां धर्माणां

— ಪದಾರ್ಥದೀಪಿಕಾ —

ಗಳಲ್ಲಿ ವಿಶೇಷ್ಯವಿಶೇಷಣ ಭಾವವಿರುವುದಿಲ್ಲ ಹಾಗು ಭೂತಲ-ಘಟಾಭಾವಗಳಲ್ಲಿ ವಿಶೇಷ್ಯವಿಶೇಷಣಭಾವವು ಇರುತ್ತದೆ ಇದೇ ರೀತಿಯಿಂದಲೇ ವಿರೋಧಿ ಸ್ವಭಾವ ಹಾಗು ಅಭೇದಗಳೂ ನಿರಾಕರಿಸಲ್ಪಟ್ಟಿರುತ್ತವೆ ಏಕೆಂದರೆ ಸಗುಣ ನಿರ್ಗುಣ ಭಾವದಿಂದ ಇಲ್ಲವೆ ನಿತ್ಯತ್ವ ಅನಿತ್ಯತ್ವಗಳಿಂದ ವಿರುದ್ಧ ಸ್ವಭಾವವುಳ್ಳವುಗಳು ಆದ ಗುಣಗುಣಿಗಳಲ್ಲಿ ಧರ್ಮ ಧರ್ಮಿಭಾವವು ಕಂಡು ಬಂದಿರುತ್ತದೆ ಮತ್ತು ಪಟತ್ವ ಶೌಕ್ಲ್ಯಗಳಲ್ಲಿ ಅವಿರುದ್ಧ ಸ್ವಭಾವವಿದ್ದರೂ ಧರ್ಮಧರ್ಮಿ ಭಾವವು ಕಂಡಿರುವುದಿಲ್ಲ ಅಲ್ಲದೆ ಅಭೇದವಿದ್ದರೂ ವಿಶೇಷ್ಯವಿಶೇಷಣಭಾವವು ಕಂಡಿರುತ್ತದೆ ಏಕೆಂದರೆ ಅಸ್ತಿತ್ವ- ಅಭಿಧೇಯತ್ವ ( ಪದಗಳಿಂದ ಹೇಳಲ್ಪಡು

— ವಿಶೇಷಾರ್ಥಪ್ರದೀಪಿಕಾ —

ವಿಶೇಷ್ಯತ್ವ, ವಿಶೇಷಣತ್ವರೂಪವಾದ ಧರ್ಮಿಧರ್ಮಭಾವವು. ಮೇರುಮಂದರಗಳಲ್ಲಿ ಇಂಥ ವಿಶೇಷ್ಯತ್ವ ವಿಶೇಷಣತ್ವರೂಪ ಧರ್ಮಧರ್ಮಿಭಾವವಿಲ್ಲದಿರುವುದು ಸಂಬಂಧ ಮುಂತಾದುದರಿಂದ ಧರ್ಮಿಧರ್ಮಭಾವವು ಬಂದುದಲ್ಲವೆಂಬಲ್ಲಿ, ಹೇತುವಿನ ವ್ಯಭಿಚಾರ ದೋಷವನ್ನು "ಸಂಬದ್ಧಯೋರಪಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಸಂಯೋಗ, ಸಮವಾಯುಗಳೆಂಬ ಸಂಬಂಧವಿಲ್ಲದಿದ್ದರೂ ಧರ್ಮಿಧರ್ಮಭಾವವು ಕಂಡಿದೆಯೆಂಬುದಾಗಿ 'ಭೂತಲ ಘಟಾಭಾವಯೋಃ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಧರ್ಮಿಧರ್ಮಭಾವವಿಲ್ಲದಿರುವುದರಲ್ಲಿ, ವಿರುದ್ಧಸ್ವಭಾವವಿರುವುದು, ಅಭೇದವಿರುವುದು, ಎಂಬ ಎರಡು ಯುಕ್ತಿಗಳು (೩ನೇ ಹಾಗು ೪ನೇ ಯುಕ್ತಿಗಳು ಪ್ರಯೋಜಕವಲ್ಲವೆಂದೇ ನಿರಾಕರಿಸಬೇಕೆಂಬ ಅಭಿಪ್ರಾಯದಿಂದ ಪ್ರತಿಜ್ಞಾಪೂರ್ವಕವಾಗಿ "ಅವು ಅಪ್ರಯೋಜಕಗಳು" ಎಂಬುದನ್ನು "ಏವಮೇವ" ಇತ್ಯಾದಿ ವಚನಗಳಿಂದ ತೋರಿಸುತ್ತಾರೆ "ನಿತ್ಯಾನಿತ್ಯತ್ವೇನ"- ಗಗನವು ನಿತ್ಯವಾದುದು ಶಬ್ದವು ಅನಿತ್ಯವಾದುದು. ಆತ್ಮನು ನಿತ್ಯನು, ಜ್ಞಾನವು ಅನಿತ್ಯವು, ಹೀಗೆ ನಿತ್ಯತ್ವ-ಅನಿತ್ಯತ್ವವೆಂಬ ವಿರೋಧಿ ಸ್ವಭಾವವಿದ್ದರೂ ವಿಶೇಷ್ಯ ವಿಶೇಷಣ ಭಾವರೂಪ ಧರ್ಮಿಧರ್ಮಭಾವವು ಕಂಡಿದೆಯೆಂದು ಅರ್ಥ. "ಪಟತ್ವ ಶೌಕ್ಲ್ಯಯೋಃ"—

परैर्धर्म्यभेदस्याङ्गीकृतत्वात् । भिन्नानामपि तद्भावो नोपलभ्यते । तदेवमसम्बद्धयोरपि विलक्षणस्वभावयोरपि भावाभावयोरभेदेऽपि विशेषशक्त्या विशेष्यविशेषणतालक्षणो धर्मिधर्मभावो युक्त एवेति ।

यद्येवं भावाभावयोरभावभावधर्मित्वं धर्मधर्मिणोश्चाभेदः स्यात् । तदा भावस्याप्यभावत्वेनाभावस्य च भावत्वेन घटादीनां भावत्वमेव प्रागप्रध्वंसात्यन्ताभावानामभावत्वमेवेति नियमो निर्निबन्धनः स्यात् । न चैवमस्त्विति वाच्यम् । सकललोकसिद्धस्य तथाभावानर्हत्वादित्यत आह ॥ प्रथमेति ॥ रूपशब्दो धर्मिवचनः ।

## — ಪದಾರ್ಥದೀಪಿಕಾ —

ವುದು) ಮುಂತಾದ ಧರ್ಮಗಳಿಗೆ ಪರರು ಧರ್ಮಿಯೊಡನೆ ಅಭೇದವನ್ನು ಅಂಗೀಕರಿಸಿರುತ್ತಾರೆ ಭಿನ್ನವಾದವುಗಳಿಗೂ ಧರ್ಮಧರ್ಮಿಭಾವವು ಕಂಡುಬರುವುದಿಲ್ಲ ಆದುದರಿಂದ, ಹಿಂದೆ ಹೇಳಿದ ಹಾಗೆ (ಹೀಗೆ) ಸಂಬಂಧವುಳ್ಳವುಗಳಾಗದಿದ್ದರೂ, ವಿರುದ್ಧ (ವಿಲಕ್ಷಣ) ಸ್ವಭಾವವುಳ್ಳವುಗಳಾಗಿದ್ದರೂ, ಭಾವ ಅಭಾವಗಳಲ್ಲಿ ಅಭೇದವಿದ್ದರೂ ವಿಶೇಷ ಶಕ್ತಿಯಿಂದ ವಿಶೇಷ್ಯವಿಶೇಷಣತ್ವರೂಪವಾದ ಧರ್ಮಧರ್ಮಿಭಾವವು ಯುಕ್ತವೇ ಆಗಿರುತ್ತದೆ ಹೀಗೆ ಅರ್ಥ

ಇನ್ನು ಭಾವ ಅಭಾವಗಳಲ್ಲಿ ಅಭಾವಭಾವರೂಪಧರ್ಮಗಳು ಹಾಗು ಧರ್ಮಧರ್ಮಿಗಳಿಗೆ ಅಭೇದವು ಇರುವುದಾದರೆ ಭಾವಕ್ಕೂ ಅಭಾವರೂಪತ್ವವಿರುವದರಿಂದ ಹಾಗು ಅಭಾವಕ್ಕೂ ಭಾವತ್ವವಿರುವದರಿಂದ, ಘಟಾದಿಗಳಿಗೆ ಭಾವತ್ವವೇ ಹಾಗು ಪ್ರಾಗಭಾವ-ಪ್ರಧ್ವಂಸಾಭಾವ-ಅತ್ಯಂತಾಭಾವಗಳಿಗೆ ಅಭಾವತ್ವವೇ ಇರುವದೆಂಬ ನಿಯಮವು ಕಾರಣವಿಲ್ಲದ್ದಾಗಲಿ! ಆದರೆ ಹಾಗೆ ಆಗಲೆಂದು ಹೇಳಲು ಬರುವದಿಲ್ಲ. ಏಕೆಂದರೆ ಸಕಲಲೋಕ-ಸಿದ್ಧವಾದ ಅವುಗಳಿಗೆ ನಿರ್ನಿಮಿತ್ತವಾಗಿ, ಭಾವಾಭಾವರೂಪತ್ವನಿಯಮವನ್ನು ಹೇಳಲು ಬರುವದಿಲ್ಲ ಹೀಗೆ ಆಶಂಕೆಯು ಬರುವುದರಿಂದ ಅದರ ಪರಿಹಾರವನ್ನು "ಪ್ರಥಮ" ಇತ್ಯಾದಿ ವಚನದಿಂದ ಹೇಳುತ್ತಾರೆ

## — ವಿಶೇಷಾರ್ಥಪ್ರದೀಪಿಕಾ —

(ಶೌಕ್ಲ್ಯವು) ಗುಣವಾದುದರಿಂದ, ಒಂದು ಅಧಿಕರಣದಲ್ಲಿ ಇರುವುದರಿಂದಲೂ ಅವಿರುದ್ಧಸ್ವಭಾವವಿರುವುದೆಂದು ತಿಳಿಯಬೇಕು 'ಭಿನ್ನಾನಾಮಪಿ"– ಮೇರು ಮಂದರ ಮುಂತಾದವುಗಳಿಗೆ

प्रथमप्रतिपत्तिषु ॥
निषेधविधिरूपत्व भावाभावत्वमत्र हि ॥

भावाभावत्वमिति यथायोगं सम्बन्धः । अत्रैवं सत्यपि । हिशब्दः प्रसिद्धौ ।

अयमर्थः । किं भावाभावनिबन्धनं प्रमेयरूपमन्विष्यते प्रमाणं वा । आद्यस्योत्तरार्धमुत्तरम् । यद्यपि भावाभावात्मका घटादयः प्रागभावादयश्च । तथाऽप्यत्र पदार्थसार्थे यः पिण्डो विधिधर्मिको

ಪ್ರಾಥಮಿಕ ಜ್ಞಾನಗಳಲ್ಲಿ ವಿಧಿರೂಪದಿಂದ ಹಾಗು ನಿಷೇಧರೂಪದಿಂದ ತೋರಿರುವ ಧರ್ಮಗಳು ಭಾವ ಅಭಾವ ಗಳೆನಿಸುವವೆಂದು ಇಲ್ಲಿ ವಿವಕ್ಷಿತವಾಗಿದೆ

— ಪದಾರ್ಥದೀಪಿಕಾ —

"ರೂಪ" ಶಬ್ದವು "ಧರ್ಮ" ಎಂಬ ಅರ್ಥದಲ್ಲಿದೆ, "ಭಾವಾಭಾವತ್ವಂ" ಎಂಬುದನ್ನು ಸಂಬಂಧಕ್ಕೆ ತಕ್ಕಂತೆ ಅನ್ವಯಿಸಬೇಕು "ಅತ್ರ'-ಏವಂ ಸತ್ಯಪಿ (ಹೀಗೆ ಇದ್ದರೂ) "ಹಿ" ಶಬ್ದವು ಪ್ರಸಿದ್ಧ್ಯರ್ಥದಲ್ಲಿದೆ

ಇಲ್ಲಿಯ ಅರ್ಥವಿದು-ಭಾವಾಭಾವ ನಿಬಂಧನವಾದ ಪ್ರಮೇಯದ ರೂಪವನ್ನು ಹುಡುಕುವದೋ? ಪ್ರಮಾಣವನ್ನು ಹುಡುಕುವದೋ? ಹೀಗೆ ಪ್ರಶ್ನೆ ಮೊದಲನೆಯ ಪ್ರಶ್ನೆಯ ಉತ್ತರರೂಪವಾಗಿ ಉತ್ತರಾರ್ಧವು ಹೊರಟಿದೆ ಘಟಾದಿಗಳೂ ಪ್ರಾಗಭಾವಾದಿಗಳೂ ಭಾವಅಭಾವರೂಪಗಳೇನೋ ನಿಜ ಆದರೂ- "ಅತ್ರ"=ಪದಾರ್ಥ ಸಮೂಹದಲ್ಲಿ ಧರ್ಮಿಸ್ವರೂಪದಿಂದಲೇ ವಿಧಿರೂಪವಾದ ಘಟಮುಂತಾದ ಯಾವ

— ವಿಶೇಷಾರ್ಥಪ್ರದೀಪಿಕಾ —

"ತಥಾಭಾವಾನರ್ಹತ್ವಾತ್"- ನಿರ್ನಿಬಂಧನತ್ವವನ್ನು (ಭಾವಾಭಾವರೂಪತ್ವ ನಿಯಮವು ನಿರ್ನಿಮಿತ್ತವೆಂದು) ಹೇಳುವುದು ಯುಕ್ತವಲ್ಲ

''ಅತ್ರ'' ಇದು ಅನುವಾದ ''ಏವಂ ಸತ್ಯಪಿ'' ಎಂಬುದು ವ್ಯಾಖ್ಯಾನವು ''ಅತ್ರ'' ಎಂಬುದರ ಅರ್ಥಾನುವಾದವಾಗಿ ''ತಥಾಪಿ'' ಎಂಬುದಾಗಿ ಹೇಳಿದ್ದಾರೆ ಅದರ ವ್ಯಾಖ್ಯಾನವೇ ''ಯದ್ಯಪಿ'' ಎಂಬ ಹಿಂದಿನ ವಾಕ್ಯವು ''ಸರ್ವೇಷಾಂ ಭಾವಾಭಾವರೂಪತಯಾ ದ್ವಿರೂಪತ್ವೇಽಪಿ'' (ಎಲ್ಲವುಗಳಿಗೂ ಭಾವಾಭಾವತ್ವಗಳೆಂಬ ಎರಡು ರೂಪಗಳಿದ್ದರೂ) ಹೀಗೆ ಅದರ ಅರ್ಥ. "ಅತ್ರ" ಎಂಬುದರ ಆವೃತ್ತಿಯನ್ನು ಬಗೆದು ''ಅತ್ರ'' ಎಂಬುದಾಗಿ ಅನುವಾದ ಮಾಡಿ " ಪದಾರ್ಥಸಾರ್ಥೇ " ಎಂಬುದಾಗಿ ವ್ಯಾಖ್ಯಾನಿಸಿರುತ್ತಾರೆ. "ಸಾರ್ಥಃ"-

घटादिः स भावो यस्तु निषेधधर्मिकः प्रागभावादिः सोऽभाव इति व्यवस्थोपपद्यते । अभेदेऽपि धर्मधर्मिभावो विशेषशक्त्या सङ्गच्छत इत्युक्तमेव । द्वितीयस्योत्तरं प्रथमप्रतिपत्तिष्विति । यः प्रथमं विधितया परप्रतिक्षेपरूपतां विना प्रतीयते स घटादिर्भावः । यस्तु निषेधतया परप्रतिक्षेपेण प्रतीयते प्रागभावादिः सोऽभाव इत्युत्तरार्धेनैकवाक्यतया योज्यम् । घटो हि प्रथमं विधित्वेन धर्मिरूपेण

— ಪದಾರ್ಥದೀಪಿಕಾ —

ಪಿಂಡ(ವಸ್ತು)ವೋ ಅದು ಭಾವವು. ಹಾಗು (ಆದರೆ)ನಿಷೇಧಕ್ಕೆ ಧರ್ಮಿಯಾಗಿರುವ ಪ್ರಾಗಭಾವಮುಂತಾದುದು ಯಾವದೋ ಅದು ಅಭಾವವು, ಹೀಗೆ ವ್ಯವಸ್ಥೆಯು ಸರಿಹೊಂದುತ್ತದೆ ಮತ್ತು ಅಭೇದವಿದ್ದರೂ ಧರ್ಮಧರ್ಮಿಭಾವವು ವಿಶೇಷಶಕ್ತಿಯಿಂದ ಯುಕ್ತವಾಗುತ್ತದೆಂದು ಹೇಳಿದ್ದೇ ಆಗಿದೆ ಎರಡನೆಯ ಪ್ರಶ್ನೆಯ ಉತ್ತರವಾಗಿ "ಪ್ರಥಮ ಪ್ರತಿಪತ್ತಿಷು" ಎಂಬ ವಚನವು ಹೊರಟಿದೆ "ಯಃ ಪ್ರಥಮಂ ವಿಧಿತಯಾ— ಪರಪ್ರತಿಕ್ಷೇಪರೂಪತಾಂ ವಿನಾ ಪ್ರತೀಯತೇ ಸಃ ಘಟಾದಿಃ ಭಾವಃ ಯಸ್ತುನಿಷೇಧತಯಾ ಪರಪ್ರತಿಕ್ಷೇಪೇಣ ಪ್ರತಿಯತೇ ಪ್ರಾಗಭಾವಾದಿಃ ಸಃ ಅಭಾವಃ" ಮೊದಲು ವಿಧಿರೂಪವಾಗಿ-ಇನ್ನೊಂದರ ನಿಷೇಧ ರೂಪವಾಗದೇ ಜ್ಞಾನದಲ್ಲಿಯಾವದುತೋರುವದು ಅಂಥ ಘಟಮುಂತಾದುದು ಭಾವವು ಆದರೆ ಮೊದಲು-ಯಾವದು ನಿಷೇಧರೂಪವಾಗಿ ಅಂದರೆ ಇನ್ನೊಂದರ ನಿರಾಕರಣರೂಪದಿಂದ ಜ್ಞಾನದಲ್ಲಿ ತೋರುವುದೋ ಪ್ರಾಗಭಾವ ಮುಂತಾದುದು, ಅದು ಅಭಾವವು ) ಹೀಗೆ ಉತ್ತರಾರ್ಧದೊಡನೆ ಏಕವಾಕ್ಯತೆಯನ್ನು ಮಾಡಿ ಯೋಜಿಸಬೇಕು ಏಕೆಂದರೆ ಘಟವು ಮೊದಲು ವಿಧಿರೂಪದಿಂದ— ಧರ್ಮಿಯಾಗಿ ಪ್ರತೀತವಾಗಿದ್ದು, ಅನಂತರ ಅದು ಪಟವಾಗುವುದಿಲ್ಲ" ವೆಂಬುದಾಗಿ

— ವಿಶೇಷಾರ್ಥಪ್ರದೀಪಿಕಾ —

ಸಮೂಹವು "ವಿಧಿಧರ್ಮಿಕಃ"– ಧರ್ಮಿಸ್ವರೂಪದಿಂದಲೇ ವಿಧಿಯಾದುದು ಹೊರತಾಗಿ ಧರ್ಮದ ಮುಖಾಂತರ ವಿಧಿಯಾಗಿಲ್ಲ "ವಿಧಿಯನ್ನು ಕುರಿತು ಧರ್ಮಿಯಾದುದು " ಹೀಗೆ ಅರ್ಥ ಅಂದರೆ ವಿಧಿ ಪ್ರತ್ಯಯದಲ್ಲಿ ಧರ್ಮಿಯಾಗಿ ತೋರಿದುದು, ಹೀಗೆ ಭಾವ. ಧರ್ಮಧರ್ಮಿಗಳೆರಡರಲ್ಲಿಯೂ ಅಭೇದವಿದ್ದರೆ ಧರ್ಮಿಯು ಹೇಗೆ ಆಗುತ್ತದೆ ? ಈ ಆಶಂಕೆಯನ್ನು "ಅಭೇದೇಽಪಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. "ಉಕ್ತಮೇವ"– "ತದೇವಂ" ಎಂಬ ಅವ್ಯವಹಿತವಾದ ಹಿಂದಿನ ಗ್ರಂಥದಿಂದಲೇ ಹೇಳಲಾಗಿದೆಯೆಂದು ತಿಳಿಯಬೇಕು

प्रतीतोऽनन्तरं पटो न भवतीति पटनिषेधात्मतया प्रतीयते । प्रागभावादिरपि प्रथमं निषेधत्वेन धर्मिस्वरूपेणावगतोऽनन्तरं प्रमेय इति विधितया प्रतीयत इति सकलप्रतिपत्तृप्रसिद्धमिति बहुवचनहिशब्दाभ्यां द्योतयति । विषयिविषययोराधाराधेयभावमभिप्रेत्य सप्तमीप्रयोगः ।

कारकेषु गौणमुख्यत्वविवक्षाभावस्य स्थितत्वादिति । एवं

— ಪದಾರ್ಥದೀಪಿಕಾ —

ಪಟದ ನಿಷೇಧರೂಪದಿಂದ ತೋರುತ್ತದೆ ಪ್ರಾಗಭಾವ ಮುಂತಾದುದೂ ಮೊದಲು ನಿಷೇಧರೂಪದಿಂದ ಧರ್ಮಿಯಾಗಿ ತಿಳಿಯಲ್ಪಟ್ಟದ್ದಾಗಿ, ಅನಂತರ ದಲ್ಲಿ "ಪ್ರಮೇಯವು" ಎಂಬುದಾಗಿ ಭಾವ ವಿಧಿರೂಪದಿಂದ ತೋರುತ್ತದೆ ಹೀಗೆ ಎಲ್ಲ ತಿಳಿವಳಿಕೆಯುಳ್ಳವರಿಗೆ ಪ್ರಸಿದ್ಧವಾಗಿದೆಯೆಂದು, ಬಹುವಚನ ಹಾಗು ಹಿ ಶಬ್ದಗಳಿಂದ ವ್ಯಕ್ತಪಡಿಸಿದ್ದಾರೆ. ವಿಷಯಿ–ವಿಷಯಗಳಲ್ಲಿ ಆಧಾರ-ಅಧೇಯ ಭಾವವನ್ನು ಹೃದಯದಲ್ಲಿಟ್ಟು ಸಪ್ತಮೀ ಪ್ರಯೋಗ ಮಾಡಲ್ಪಟ್ಟಿದ ಏಕೆಂದರೆ ಕಾರಕಗಳಲ್ಲಿ ಗೌಣತ್ವ ಮುಖ್ಯತೆಗಳ ವಿವಕ್ಷೆಯು ( ಹೇಳುವ ಇಚ್ಛೆಯು ) ಇರುತ್ತದೆ" ಹೀಗೆ ಇಲ್ಲಿಯ ಅರ್ಥವು

— ವಿಶೇಷಾರ್ಥಪ್ರದೀಪಿಕಾ —

''ಬಹುವಚನ''- ''ಪ್ರಥಮ ಪ್ರತಿಪತ್ತಿಷು'' ಎಂಬಲ್ಲಿಯು ಬಹುವಚನ, 'ಪ್ರತಿಪತ್ತಿಷು'' ಎಂಬಲ್ಲಿ ಸಪ್ತಮೀ ವಿಭಕ್ತಿಯ ಬಗ್ಗೆ ಉಪಪತ್ತಿಯನ್ನು ''ವಿಷಯಿ ವಿಷಯಯೋಃ'' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ''ಶಾಸ್ತ್ರದಲ್ಲಿ ವಿಷಯಿ (ವಿಷಯುಳ್ಳದ್ದನ್ನು)ಯನ್ನು ಆಧಾರವೆಂದು ಕರೆದಿಲ್ಲ. ಆದರೂ ವಿಷಯಿಯು ಆಧಾರವಾಗಲೆಂಬ ಅಭಿಪ್ರಾಯವಿರುವದರಿಂದ ಸಪ್ತಮೀ ವಿಭಕ್ತಿಯು ಪ್ರಯೋಗವು ಸರಿಯಾದುದಂದು ಭಾವವು ಇನ್ನು- ''ಆಧಾರೋಽಧಿಕರಣ''ಎಂಬ ಸೂತ್ರದಲ್ಲಿ ''ಆಧಾರವು, ಔಪಶ್ಲೇಷಿಕ, ಸಾಮೀಪಿಕ, ವಿಷಯ, ವ್ಯಾಪ್ತಿ, ಹೀಗೆ ನಾಲ್ಕು ವಿಧ" ವೆಂದು ಹೇಳಿದುದರಿಂದ ವಿಷಯಕ್ಕೆ ಆಧಾರತ್ವವು ಮುಖ್ಯವೆಂಬ ಆ ಶಂಕೆಯನ್ನು ''ಕಾರಕೇಷು ''ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ''ಕಾರಕೇಷು''– ಕರ್ತೃ, ಕರ್ಮ ಮುಂತಾದ ಆರು ಕಾರಕಗಳಲ್ಲಿ ''ಸ್ಥಿತತ್ವಾತ್''- ''ಸಾಧಕತಮಂ ಕರಣಂ''ಎಂಬಲ್ಲಿ- ಕ್ರೈಯಟದಲ್ಲಿ ಯಾವುದಕ್ಕೆ ಅತಿಶಯದ ಅಭಿಪ್ರಾಯವಿದೆಯೋ ಅದು ಆಗ ಕಾರಕವಾಗುವದು, ''ಸ್ಥಾಲ್ಯಾಂ ಪಚ್ಯತೇ" ಇತ್ಯಾದಿ ಗ್ರಂಥದಿಂದ, ಕಾರಕಗಳಲ್ಲಿ ಗೌಣ, ಮುಖ್ಯವೆಂಬ ವಿವಕ್ಷೆಯು ಇರುವುದೆಂಬುದನ್ನು ಹೇಳಿದ್ದಾರೆಂದು ತಿಳಿಯಬೇಕು ಆದುದರಿಂದ, ಅಲ್ಲಿ ಮುಖ್ಯವಾದ

# ॐ अपीतौ तद्वत्प्रसङ्गादसमञ्जसम् ॐ

पूर्वपक्ष्युत्प्रेक्षितप्रमाणसमुदायलब्धस्यार्थस्य प्रमाणविरोधो दर्शितः ।

इदानीमसत्कार्यं यथा दृष्टमित्यनुमानं विशेषतो निराचिकीर्षुः तत्प्रस्तावनायासूत्रयत्सूत्रकारः ॥ ॐ अपीतौ तद्वत्प्रसङ्गादसमञ्जसमिति ॐ ॥ असमञ्जसमेतद्विश्वस्याभावकर्तृकत्वमतम् । कुतः ।

## — ಪದಾರ್ಥದೀಪಿಕಾ —

ಹೀಗೆ ಪೂರ್ವಪಕ್ಷಿಯು ಉತ್ಪ್ರೇಕ್ಷಿಸಿದ (ಕೇವಲ ಊಹಿಸಿದ) ಪ್ರಮಾಣ ಸಮುದಾಯಗಳಿಂದ ಲಭಿಸಿದ ಅರ್ಥದ ಮೇಲೆ ಪ್ರಮಾಣ ವಿರೋಧವು ತೋರಿಸಲ್ಪಟ್ಟಿತು ಈಗ "ಅಸತ್ ಕಾರ್ಯಂ ಯಥಾ ದೃಷ್ಟಂ" ಈ ಅನುಮಾನವನ್ನು ವಿಶೇಷತಃ ನಿರಾಕರಿಸಲಪೇಕ್ಷಿಸಿದ ಸೂತ್ರಕಾರರು, ಅದರ ಪ್ರಸ್ತಾವನೆಗಾಗಿ "ಓಂ-ಅಪೀತೌ ತದ್ವತ್ಪ್ರಸಂಗಾದಸಮಂಜಸಮ್- ಓಂ- ಎಂಬ ಸೂತ್ರವನ್ನು ಮಾಡಿರುತ್ತಾರೆ ವಿಶ್ವಕ್ಕೆ ಈ ಅಭಾವ (ಪ್ರಾಗಭಾವ)ವು ಕರ್ತೃವೆಂಬ

## — ವಿಶೇಷಾರ್ಥಪ್ರದೀಪಿಕಾ —

ಆಧಾರಾದೇಯಭಾವವೆಂದು ತಾತ್ಪರ್ಯವು. "ವಿವಕ್ಷಾಭಾವಸ್ಯ" "ವಿವಕ್ಷಾಸದ್ಭಾವ ಪೂರ್ವಕ ವ್ಯವಹಾರಸ್ಯ''- ವಿವಕ್ಷೆಯು ಇರುತ್ತಿದ್ದು, ಅದರಪೂರ್ವಕವಾದ ವ್ಯವಹಾರವಿದೆಯೆಂಬುದರ

"ಪ್ರಮಾಣ ಸಮುದಾಯ ಲಬ್ಧಸ್ಯ" – ಅನ್ಯಥಾಸಿದ್ಧಿಯಿಲ್ಲದೆಯೆ ನಿಯಮದಿಂದ ಕಾರ್ಯದ ಪೂರ್ವಭಾವಿಯಾಗಿರುವುದು, ಅಂತಹದೆ ಆಗಿದ್ದು ನಿಯಮದಿಂದ ಅನಂತರಭಾವಿಯಾಗಿರುವುದು, ಭಾವತ್ವ, ಕಾರ್ಯತ್ವ, ಸಕರ್ತೃಕತ್ವನಿಯಮ, ಪರಿಶೇಷ, ಈ ಪ್ರಮಾಣಗಳ (ಯುಕ್ತಿಗಳ) ಸಮುದಾಯದಿಂದ ಸಿದ್ಧಿಸುವ ವಿಷಯಕ್ಕೆ, ಹೀಗೆ ಅರ್ಥ ''ಪ್ರಮಾಣವಿರೋಧಃ ನಿಷೇಧೈಕಸ್ವರೂಪತ್ವ'' ವೆಂಬ ಯುಕ್ತಿಪ್ರಮಾಣದಿಂದ ವಿರೋಧವು,

'ಇತ್ಯಾನುಮಾನಂ - ಈಶ್ವರ ಮುಂತಾದುದಕ್ಕೆ ಅಸತ್ವವನ್ನು ಸಾಧನ ಮಾಡುವ ''ಭಾವತ್ವ" ಯುಕ್ತಿಯನ್ನು, ಬಾಧಿತ ವಿಷಯವೆಂಬುದಾಗಿ ವಿಶೇಷ ದೋಷದಿಂದ, ''ನ ತು ದೃಷ್ಟಾಂತಭಾವಾತ್'' ಈ ಮುಂತಾದ ಎರಡು ಸೂತ್ರಗಳಿಂದ ನಿರಾಕರಿಸಲಪೇಕ್ಷಿಸಿ' ಪ್ರಸ್ತಾವನೆಗಾಗಿ ದೋಷದ ಹೇಳಿಕೆಯ ಪ್ರಸಕ್ತಿಗಾಗಿ, ಈಶ್ವರಾದಿಗಳ ಅಭಾವವನ್ನು ಒಪ್ಪುವ ಪ್ರಸಂಗವನ್ನು ಸೂತ್ರದಲ್ಲಿ ನಿಬಂಧಿಸಿರುತ್ತಾರೆ ಭಾಷ್ಯ ಹಾಗೂ ಟೀಕೆಗಳಲ್ಲಿ ಭಾವತ್ವಯುಕ್ತಿಯ

अभावस्यैव जगत्कर्तृत्वाङ्गीकारेऽपीतौ प्रलये तद्वत्प्रसङ्गाद्भाववत्त्व-प्रसङ्गात् । ईश्वरादेः सर्वस्याप्यभावाभ्युपगमप्रसङ्गादिति यावत् । न हीश्वरादौ सति तत्परित्यागेनाभावस्य जगत्कर्तृत्वमवधारयितुं शक्यमिति ।

ननु नेदमनिष्टमीश्वरादिकं प्रलयेऽसद्भवितुमर्हति । भावत्वा-द्घटवदित्यनुमानेनेश्वरादेः सर्वस्य प्रलयेऽभावाभ्युपगमादित्यत्रोक्तं सूत्रकृता न तु दृष्टान्तभावादिति । नैव प्रलये सर्वस्यासत्त्वमङ्गीकर्तु-मुचितम् । कस्मात् दृष्टान्तभावात् । दृष्टान्त इति तत्रावधारितव्याप्ति

— ಪದಾರ್ಥದೀಪಿಕಾ —

ಸಂಗತಿಯು ಅಸಮಂಜಸವು ಏಕೆ? ಅಭಾವಕ್ಕೇ ಜಗತ್ಕರ್ತೃತ್ವವನ್ನಂಗೀಕರಿಸಿ 'ದರೆ ಅಪೀತೌ-ಪ್ರಲಯದಲ್ಲಿ, 'ತದ್ವತ್ವಪ್ರಸಂಗಾತ್''- ಅಭಾವವುಳ್ಳದ್ದಾಗಿರುವು ದೆಂಬ (ಅಭಾವವಿರಲೆಂಬ) ಪ್ರಸಂಗವು ಬರುವುದರಿಂದ ಅಂದರೆ "ಈಶ್ವರನನ್ನು ಮೊದಲುಗೊಂಡು ಎಲ್ಲದರ ಅಭಾವವನ್ನು ಅಂಗೀಕರಿಸುವ ಪ್ರಸಂಗವು ಬರು ವುದರಿಂದ,'' ಹೀಗೆ ಅರ್ಥ. ಆದರೆ ಈಶ್ವರ ಮುಂತಾದುದು ಇರುತ್ತಿರಲು, ಅವುಗಳನ್ನು ಬಿಟ್ಟು, ಅಭಾವಕ್ಕೆ ಜಗತ್ಕರ್ತೃತ್ವವನ್ನು ನಿರ್ಣಯಿಸಲು ಶಕ್ಯವಿಲ್ಲ" ಹೀಗೆ ಈ ಸೂತ್ರದ ಅರ್ಥ

ಇನ್ನು- "ಇದು ಅನಿಷ್ಟವಲ್ಲ ಏಕೆಂದರೆ "ಈಶ್ವರ ಮುಂತಾದುದು ಪ್ರಲ ಯದಲ್ಲಿ ಅಸತ್ (ಇಲ್ಲದಿರುವಂತಹದು) ಆಗುತ್ತದೆ ಏಕೆಂದರೆ- ಭಾವವಾಗಿದೆ. ಇದರಲ್ಲಿ ಘಟವು ದೃಷ್ಟಾಂತವು" ಈ ಅನುಮಾನದಿಂದ ಈಶ್ವರ ಮುಂತಾದುದೆಲ್ಲ ದಕ್ಕೂ ಪ್ರಲಯದಲ್ಲಿ ಅಭಾವ (ಇಲ್ಲದಿರುವಿಕೆ ಯನ್ನು ಅಂಗೀಕರಿಸಲಾಗಿದೆ "ಹೀಗೆ ಆಶಂಕೆಯು ಬಂದಲ್ಲಿ ಉತ್ತರವಾಗಿ ಸೂತ್ರಕಾರರಿಂದ "ನತುದೃಷ್ಟಾಂತಭಾವಾತ್" ಎಂಬ ಸೂತ್ರವು ಸೂತ್ರಿಸಲ್ಪಟ್ಟಿತು "ಪ್ರಲಯದಲ್ಲಿ ಎಲ್ಲದಕ್ಕೂ ಅಸತ್ವವನ್ನು ಅಂಗೀಕರಿಸಲು ಯುಕ್ತವಲ್ಲ. ಏಕೆ? ದೃಷ್ಟಾಂತವಿರುವುದರಿಂದ "ದೃಷ್ಟಾಂತ"ವೆಂಬ

— ವಿಶೇಷಾರ್ಥಪ್ರದೀಪಿಕಾ —

ಮೇಲೆ ತರ್ಕಪರಾಹತವೆಂಬ ದೋಷವನ್ನು ಹೇಳುವುದರ ಪರವಾಗಿ ಸೂತ್ರ ವನ್ನು ವ್ಯಾಖ್ಯಾನಿಸಲಾಗಿದೆ

''ತು" ಶಬ್ದವು "ಏವ'' ಶಬ್ದದ ಅರ್ಥವುಳ್ಳದೆಂದು ಒಪ್ಪಿ "ನೈವಪ್ರ ಲಯೇ'' ಇತ್ಯಾದಿಯಾಗಿ ಹೇಳಿದ್ದಾರೆ

सर्वनाशेष्वपि सदा शिष्टत्वाद्यस्य कस्य नु ॥
नाशोऽयं विमतोऽपि स्यान्नाशत्वात्कर्तृशेषवान् ॥

मूलमनुमानमुच्यते । दृष्टान्तमात्रस्य साधनबाधनानङ्गत्वात् । तथा च प्रलये परमेश्वरादिसद्भावस्य साधकानुमानसम्भवादित्यर्थः । किं तदनुमानमित्यत आह भाष्यकारः ॥ सर्वनाशेष्वपीति ॥ अपिरभिव्याप्तौ । सर्वशब्दो वर्तमानमात्रविवक्षयाऽपि स्यादित्यत सदेत्युक्तम् । तदिदं व्यभिचारपरिहारायाभिहितम् । नुः पुरुषस्य । अयमित्यस्यैव

ಯಾವಾಗಲೂ ಎಲ್ಲ ವಸ್ತುಗಳ ನಾಶಗಳಲ್ಲೆಲ್ಲ (ನಾಶಗಳಾದಾಗ) ನಾಶದ ಕರ್ತೃವಾಗಲಿ, ಕರ್ತೃವಾಗದಿರಲಿ ಯಾವನೋ ಒಬ್ಬ ಪುರುಷನ, ಅವಶೇಷ (ಉಳಿವು) ಇರುವುದರಿಂದ, ಈ ವಿವಾದ ವಿಷಯವಾದ ಮಹಾ ಪ್ರಳಯರೂಪ ವಿನಾಶವೂ ಸಹ ನಾಶವಾಗಿರುವುದರಿಂದ ಪುರುಷಶೇಷವುಳ್ಳದ್ದು ಆಗುವದು.

## — ಪದಾರ್ಥದೀಪಿಕಾ —

ವಚನದಿಂದ, "ಆದರಲ್ಲಿ ನಿರ್ಣಯಿಸಲ್ಪಟ್ಟ ವ್ಯಾಪ್ತಿಗೆ ಮೂಲಭೂತವಾದ ಅನುಮಾನವು ಹೇಳಲ್ಪಡುತ್ತದೆ ಏಕೆಂದರೆ ಕೇವಲ ದೃಷ್ಟಾಂತವು ಸಾಧನ ಬಾಧನಗಳಿಗೆ ಅಂಗ (ಉಪಯುಕ್ತ)ವಾಗುವುದಿಲ್ಲ ಆದುದರಿಂದ "ಪ್ರಲಯದಲ್ಲಿ ಪರಮೇಶ್ವರ ಮುಂತಾದುದುದರ ಅಸ್ತಿತ್ವವನ್ನು ಸಾಧಿಸುವ ಅನುಮಾನವು ಸಂಭವಿಸುವುದರಿಂದ"(ಇರುವದರಿಂದ)ಹೀಗೆ ಅರ್ಥ. ಆ ಅನುಮಾನವು ಯಾವದು? ಈ ಪ್ರಶ್ನೆಯು ಬರುವುದರಿಂದ, ಅದರ ಉತ್ತರವಾಗಿ ಭಾಷ್ಯಕಾರರು "ಸರ್ವನಾಶೇಷ್ವಪಿ" ಇತ್ಯಾದಿ ವಚನವನ್ನು ಹೇಳಿದ್ದಾರೆ "ಅಪಿ"ಶಬ್ದವು ಅಭಿವ್ಯಾಪ್ತ್ಯರ್ಥದಲ್ಲಿ ಇರುತ್ತದೆ 'ಸರ್ವ" ಶಬ್ದವು, ಕೇವಲ ವರ್ತಮಾನಕಾಲ ದಲ್ಲಿರುವಂಥವುಗಳ ವಿವಕ್ಷೆಯಿಂದಲೂ ಹೇಳಲ್ಪಟ್ಟಿರಬಹುದೆಂಬ ಆಶಂಕೆಯು ಬರುವುದರಿಂದ, " ಸದಾ " ಎಂಬುದಾಗಿ ಹೇಳಿರುತ್ತಾರೆ. ಇದು ವ್ಯಭಿಚಾರ ದೋಷವನ್ನು ಪರಿಹರಿಸಲು ಹೇಳಲ್ಪಟ್ಟಿದ್ದು "ನುಃ"= ಪುರುಷನಿಗ (ಪುರುಷನ)

## — ವಿಶೇಷಾರ್ಥಪ್ರದೀಪಿಕಾ —

ಅಪಿರಭಿವ್ಯಾಪ್ತೌ'' - ''ಸರ್ವಶಬ್ದದ ಅರ್ಥಕ್ಕೆ ಸಂಕೋಚವಿಲ್ಲವೆಂದು ಅರ್ಥ ಹಾಗಾದರೆ ''ಸದಾ', ಎಂಬುದು ವ್ಯರ್ಥವೆಂಬ ಆಶಂಕೆಯನ್ನು ''ಸರ್ವ ಶಬ್ದಃ'' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ವರ್ತಮಾನವಾದುದೆ ಲ್ಲವೂ'' ಹೀಗೆ ಸರ್ವ ಶಬ್ದದ ಅರ್ಥವೆಂದು ಭಾವ,

विवरणं विमत इति । अत्र पूर्वार्धेन व्याप्तिरुक्ता । उत्तरार्धेन प्रतिज्ञाहेतू ।

एतदुक्तं भवति । महाप्रलयलक्षणो नाशः पुरुषशेषवान्भवितुमर्हति । नाशत्वात्सम्मतनाशवदिति । अत्र पुरुषावशेषमात्रं साध्यम् । न तु नाशकर्तुः पुरुषस्यावशिष्टता । अत एवोक्तं यस्य कस्येति । नाशस्य कर्तुरकर्तुर्वेत्यर्थः । तथाऽपि कर्तृशेषवानिति वदतेदमभिप्रेतम् । प्रलये पुरुषसद्भावमात्रसाधने सति भग्नं तावत्परस्यानुमानम् । यदपि परस्याभावकर्तृत्वं जगतोऽभिमतम् । तदप्यत एवापास्तम् ।

— ಪದಾರ್ಥದೀಪಿಕಾ —

"ಅಯಂ" ಎಂಬುದರ ವಿವರಣವೇ "ವಿಮತಃ" ಎಂಬುದು (ವಚನವು) ಇಲ್ಲಿ– ಪೂರ್ವಾರ್ಧದಿಂದ ವ್ಯಾಪ್ತಿಯು ಹೇಳಲ್ಪಟ್ಟಿವೆ ಉತ್ತರಾರ್ಧದಿಂದ ಪ್ರತಿಜ್ಞಾ ಹೇತುಗಳು ಹೇಳಲ್ಪಟ್ಟಿವೆ

ಇಲ್ಲಿ " ಮಹಾ ಪ್ರಲಯರೂಪ ನಾಶವು, ಪುರುಷ ಶೇಷವುಳ್ಳದ್ದಾಗಿರುತ್ತದೆ, ಏಕೆಂದರೆ ನಾಶವಾಗಿರುತ್ತದೆ ಇದರಲ್ಲಿ ಸಮ್ಮತ ನಾಶವು ದೃಷ್ಟಾಂತವು " ಹೀಗೆ ಹೇಳಲ್ಪಟ್ಟದ್ದಾಗುತ್ತಿದೆ. ಇಲ್ಲಿ (ಪುರುಷಾವಶೇಷವಷ್ಟೇ ಕೇವಲ ಪುರುಷರ ಅವಶೇಷವಷ್ಟೇ) ಸಾಧ್ಯವು ಹೊರತಾಗಿ ನಾಶವನ್ನು ಮಾಡುವವನು ಅವಶಿಷ್ಟ (ಪ್ರಲಯದಿಂದ ಉಳಿದವ)ನಾಗಿರುವುದು ಸಾಧ್ಯವಲ್ಲ. ಆದುದರಿಂದಲೇ 'ಯಸ್ಯ ಕಸ್ಯ" ಎಂಬುದಾಗಿ ಹೇಳಿದ್ದಾರೆ ನಾಶವನ್ನು ಮಾಡುವವನಿಗಾಗಲೀ ಮಾಡದವನಿಗಾಗಲೀ, ಹೀಗೆ ಅರ್ಥ ಆದರೂ "ಕರ್ತೃಶೇಷವಾನ್" ಎಂಬುದಾಗಿ ಹೇಳಿರುವ ಶ್ರೀಮದಾಚಾರ್ಯರಿಗೆ ಇದು ಅಭಿಪ್ರೇತವಾದುದು " ಮಹಾ ಪ್ರಲಯದಲ್ಲಿ ಪುರುಷನ ಅಸ್ತಿತ್ವವನ್ನಷ್ಟೇ ಸಾಧನ ಮಾಡುವುದರಿಂದ ಪರರ ಅನುಮಾನವು ಭಗ್ನವಾಗುತ್ತದೆ." ಎಂಬುದು

ಇನ್ನು ಪರನಿಗೆ ಅಭಿಪ್ರೇತವಾದ, " ಜಗತ್ತನ್ನು ಕುರಿತು ಅಭಾವವೇ ಕರ್ತೃವು, " ಎಂಬ ಸಂಗತಿಯಾದರೋ ಇದರಿಂದಲೇ ನಿರಾಕೃತವಾಯಿತು

— ವಿಶೇಷಾರ್ಥಪ್ರದೀಪಿಕಾ —

"ಭಗ್ನಂ ತಾವತ್ ಪರಸ್ಯಾನುಮಾನಂ" – ಭಾವತ್ವಯುಕ್ತಿಯಿಂದ ಸರ್ವಕ್ಕೂ ಅಸತ್ವ (ಅಸ್ತಿತ್ವವಿಲ್ಲ) ವನ್ನು ಸಾಧಿಸಿದಲ್ಲಿ ಪ್ರಮಾಣಬಾಧವು ಬರುವುದರಿಂದ, ಪರರ ಅನುಮಾನವು ಭಗ್ನವಾಗುವದೆಂದು ಭಾವ. "ಅತಏವ"

अवशिष्टस्य पुरुषविशेषस्यैव विश्वकर्तृत्वसम्भवेऽभावस्य तत्कल्पनाऽनवकाशात् । दृष्टानुसारिणी हि कल्पना । न हि लोके प्रागुत्पत्तेः कुलालाभावयोः सतोरभावो घटस्य कर्ता दृष्टः । किन्नाम कुलाल एवेति । अभिप्रायमजानानः कर्तृशेषवानित्युक्त्या विभ्रान्तश्चोदयति । यत्र सुन्दोपसुन्दन्यायेनाशेषा अपि पुरुषा नष्टास्तत्र नाशत्वहेतोरनैकान्तिकतेति । तत्राह ॥ न चेति । चशब्दोऽवधारणे । अशेषनृनाशस्तु

— ಪದಾರ್ಥದೀಪಿಕಾ —

ಏಕೆಂದರೆ ಪ್ರಲಯದಲ್ಲಿ ಉಳಿದ ಪುರುಷವಿಶೇಷನೊಬ್ಬನಿಗೇ ವಿಶ್ವ ಕರ್ತೃತ್ವವು ಸಂಭವಿಸುವಾಗ ಅಭಾವಕ್ಕ ವಿಶ್ವ ಕರ್ತೃತ್ವವನ್ನು ಕಲ್ಪಿಸುವುದಕ್ಕೆ ಅವಕಾಶವಿರುವುದಿಲ್ಲ ಏಕೆಂದರೆ ನೋಡಿದುದನ್ನು ಅನುಸರಿಸಿ ಕಲ್ಪನೆಯು ಹೊರಡುತ್ತದೆ. ಹಾಗು ಲೋಕದಲ್ಲಿ ಘಟದ ಉತ್ಪತ್ತಿಯಾಗುವ ಮುಂಚೆ ಕುಂಬಾರ, ಹಾಗು ಪ್ರಾಗಭಾವಗಳೆರಡೂ ಇರುವಾಗ ಪ್ರಾಗಭಾವಕ್ಕೆ ಘಟಕರ್ತೃತ್ವವು ಕಂಡಿರುವುದಿಲ್ಲ ಬದಲಾಗಿ ಕುಂಬಾರನೇ ಘಟದ ಕರ್ತೃವಾಗಿರುವುದು ಕಂಡಿರುತ್ತದೆ ಹೀಗೆ ಈ ಅಭಿಪ್ರಾಯವನ್ನು ತಿಳಿಯದೆ (ಶಿಷ್ಯನು) "ಕರ್ತೃಶೇಷವಾನ್" ಎಂಬ ಮಾತಿನಿಂದ ಭ್ರಮೆಯನ್ನು ಹೊಂದಿ, "ಸುಂದೋಪಸುಂದನ್ಯಾಯದಿಂದ ಎಲ್ಲ ಪುರುಷರೂ ಯಾವ ನಾಶದಲ್ಲಿ ನಾಶಹೊಂದಿದ್ದಾರೋ ಅಂಥ ನಾಶದಲ್ಲಿ ನಾಶತ್ವ ಯುಕ್ತಿಯು, ಪುರುಷಶೇಷವುಳ್ಳದ್ದಾಗಿರುವದೆಂಬ ಸಾಧ್ಯವನ್ನು ಬಿಟ್ಟಿರುತ್ತದೆ. ಎಂಬುದಾಗಿ ಪೂರ್ವಪಕ್ಷವನ್ನು ಮಾಡುತ್ತಾನೆ ಅದರ ಉತ್ತರವನ್ನು "ನಚಾಶೇಷ" ಇತ್ಯಾದಿವಚನದಿಂದ ಹೇಳುತ್ತಾರೆ "ಚ' ಶಬ್ದವು ಅವಧಾರಣಾರ್ಥದಲ್ಲಿ" ಇರುತ್ತದೆ "ಅಶೇಷನೃನಾಶಸ್ತು ನೈವ ಕ್ವಚಿತ್ ದೃಷ್ಟಃ"(ಎಲ್ಲ ಪುರುಷರ ನಾಶವು

— ವಿಶೇಷಾರ್ಥಪ್ರದೀಪಿಕಾ —

ಪುರುಷನಿರುವುದೆಂಬುದನ್ನಷ್ಟೇ ಸಾಧನಮಾಡುವುದರಿಂದಲೇ ! ಅದನ್ನು "ಅವಶಿಷ್ಟಸ್ಯ" ಇತ್ಯಾದಿವಾಕ್ಯದಿಂದ ವಿಶದ ಪಡಿಸುತ್ತಾರೆ "ವಿಭ್ರಾಂತಃ"- ನಾಶವನ್ನು ಮಾಡಿದ ಪುರುಷನು ಉಳಿದಿರಬೇಕೆಂಬ ಭ್ರಾಂತಿಯುಳ್ಳವನಾಗಿ, ಹೀಗೆ ಅರ್ಥ

"ಸುಂದೋಪಸುಂದ ನ್ಯಾಯೇನ" - ಸುಂದ, ಉಪಸುಂದ, ಎಂಬ ಇಬ್ಬರು ದೈತ್ಯರು ತಿಲೋತ್ತಮೆಯೆಂಬ ಅಪ್ಸರಸ್ತ್ರೀಯಳನ್ನು ಕಾಮಿಸಿ, ಪರಸ್ಪರ ನಾಶವನ್ನು ಹೊಂದಿದರು ಇದು ಪುರಾಣ ಪ್ರಸಿದ್ಧವು

न चाशेषनृनाशस्तु दृष्टो दृश्योऽस्ति वा क्वचित् ॥

नैव क्वचित् दृष्ट इत्यतीतनिषेधो दृश्यो वा नैवेत्यनागतस्य नैवास्ति वा दृश्यमान इति वर्तमानस्य । इदमुक्तं भवति । अनैकान्तिकत्वं हि प्रमिते विपक्षे हेतुवृत्त्या वक्तव्यम् । नाप्रमिते । तथा सत्यनुमानमात्रोच्छेदप्रसङ्गात् । न चाशेषपुरुषनाशः कालत्रयेऽपि प्रमितो येन

ಯಾವತ್ತೂ ಪುರುಷರ ನಾಶವಾದರೋ ಎಲ್ಲಿಯೂ (ಹಿಂದೆ) ನೋಡಲ್ಪಟ್ಟೇ ಇಲ್ಲ. ಮುಂದೆ ಕಾಣಲ್ಪಡುವಂತಹದೂ ಅಲ್ಲ ಈಗಲೂ ಕಾಣಲ್ಪಡುತ್ತಿಲ್ಲ.

## — ಪದಾರ್ಥದೀಪಿಕಾ —

ಎಲ್ಲಿಯೂ ಕಂಡಿರುವದೇ ಇಲ್ಲ) ಎಂಬುದರಿಂದ, ಹಿಂದೆ ಅಂಧನಾಶವು ಕಂಡಿಲ್ಲವೆಂದು ಅತೀತ ನಾಶವನ್ನೂ ಮುಂದೆ ಕಾಣುವಂತಹದಲ್ಲೇ ಅಲ್ಲವೆಂದು ಭವಿಷ್ಯತ್ತಿನ ನಾಶವನ್ನೂ ಈಗ ಕಾಣುವಂತಹದಲ್ಲವೆಂದು ವರ್ತಮಾನನಾಶವನ್ನೂ ನಿಷೇಧಿಸಿರುತ್ತಾರೆ

"ಪ್ರಮಿತವಾದ ವಿಪಕ್ಷದಲ್ಲಿ ಹೇತುವು ಇರುವುದೆಂಬ ಕಾರಣದಿಂದ "ಅನೈಕಾಂತಿಕತ್ವ" (ವ್ಯಭಿಚಾರ ದೋಸ)ವನ್ನು ಹೇಳತಕ್ಕದ್ದು ಹೊರತಾಗಿ ಸಾಧ್ಯದ ಅಭಾವವುಳ್ಳದೆಂದು ಪ್ರಮಾಣದಿಂದ ಪ್ರಮಿತವಾಗದ ವಿಪಕ್ಷದಲ್ಲಿ ಹೇತು ವಿನ ಇರುವಿಕೆಯಿಂದ ವ್ಯಭಿಚಾರವನ್ನು ಹೇಳಬಾರದು ಏಕೆಂದರೆ ಹಾಗೆ ಹೇಳುವದರಿಂದ ಸರ್ವಅನುಮಾನಗಳ ಉಚ್ಛೇದವಾಗುವ ಪ್ರಸಂಗವು ಬರುತ್ತದ ಹಾಗು ಎಲ್ಲ ಪುರುಷರ ನಾಶವು ಕಾಲತ್ರಯದಲ್ಲಿಯೂ ಪ್ರಮಾಣ ಸಿದ್ಧವಾಗಿಲ್ಲ

## — ವಿಶೇಷಾರ್ಥಪ್ರದೀಪಿಕಾ —

"ಅವಧಾರಣೇ"—ಸಮುಚ್ಚಯಗೊಳಿಸಲ್ಪಡುವುದಾವುದೂ ಇಲ್ಲವಾದುದರಿಂದ ಚಶಬ್ದಕ್ಕೆ ಸಮುಚ್ಚಯಾರ್ಥಕತ್ವವು ಸಂಭವಿಸುವುದಿಲ್ಲ ಮತ್ತು ವಿಪಕ್ಷವು ಸರ್ವಥಾ ಪ್ರಮಿತವಾಗಿಲ್ಲವೆಂಬ ಪ್ರಕಾರಾಂತರದಿಂದ ಲಬ್ಧವಾಗಿಲ್ಲ ಈ ಕಾರಣದಿಂದ ಅವಧಾರಣಾರ್ಥದಲ್ಲಿದೆಯೆಂದು ಹೇಳಿದ್ದಾರೆ ಹಾಗಾದರೆ ಒಂದೇ ಅವಧಾರಣವೇ ಸಾಕು ಮೂರು ಸಲ ಅವಧಾರಣವೇಕೆ? ಎಂಬ ಪ್ರಶ್ನೆಯನ್ನು "ಅಶೇಷ" ಇತ್ಯಾದಿವಾಕ್ಯದಿಂದ ಉತ್ತರಿಸುತ್ತಾರೆ

ವ್ಯಭಿಚಾರದ ಪರಿಹಾರವು ಹೇಗೆಂಬುದನ್ನು "ಇದಮುಕ್ತಂ" ಇತ್ಯಾದಿ ವಾಕ್ಯಗಳಿಂದ ತಿಳಿಸುತ್ತಾರೆ.

नाशत्वस्य तत्र व्यभिचारः स्यात् । प्रमितत्वाङ्गीकारे च प्रमातुरेवोर्वरितत्वेन व्याघातश्च स्यात् । न च नाशकर्तुः पुरुषस्यावशिष्टता-साध्यत्वेनेष्टा । येन सुन्दोपसुन्दादिनाशः प्रत्युदाह्रियेत । किन्तु पुरुषावशेषवत्त्वमात्रमिति । अनेन प्रलयकालः पुरुषवान्कालत्वादिदानीन्तनकालवदित्यप्यनुमानं सूचितम् । न च तदा कालाभावादाश्रयासिद्धिः । तथा सति तदेत्येव वक्तुमशक्यत्वात् । परकीयानुमाने च प्रलयविशेषणानुपपत्तेः ।

— ಪದಾರ್ಥದೀಪಿಕಾ —

ಹಾಗೆ ಪ್ರಮಿತವಾಗಿದ್ದರೆ ನಾಶತ್ವಯುಕ್ತಿಗೆ ಅಲ್ಲಿ ವ್ಯಭಿಚಾರವು ಬಂದೀತು ಸರ್ವ ಪುರುಷನಾಶವು ಪ್ರಮಿತವೆಂದು ಒಪ್ಪಿದರೆ ಪ್ರಮಾತೃವೇ( ಅದನ್ನು ತಿಳಿಯುವವನೇ) ಉಳಿಯುವುದರಿಂದ ವ್ಯಾಘಾತವೂ ಬರುತ್ತದೆ ಮತ್ತು [illegible] ಮಾಡುವ ಪುರುಷನು ಉಳಿದಿರುವುದು ಸಾಧ್ಯವೆಂದು ಅಭಿಪ್ರೇತವಾದ ಪಕ್ಷದಲ್ಲಿ [illegible] ಸುಂದನ್ಯಾಯವನ್ನು ಉದಾಹರಿಸಬಹುದಿತ್ತು [illegible] ಪುರುಷರು ಉಳಿದಿರುವ ದೆಂಬುದಷ್ಟೇ ಸಾಧ್ಯವೆಂಬ ಅಭಿಪ್ರಾಯವಿದೆ." ಹೀಗೆ ಇಲ್ಲಿ ಹೇಳಿದ್ದಾಗುತ್ತದೆ

ಇದರಿಂದ "ಪ್ರಲಯಕಾಲವು ಪುರುಷವುಳ್ಳದ್ದು, ಏಕೆಂದರೆ ಕಾಲವಾಗಿದೆ ಇದರಲ್ಲಿ ಈಗಿನ ಕಾಲವು ದೃಷ್ಟಾಂತವು' ಎಂಬುದಾಗಿರುವ ಅನುಮಾನವೂ ಸೂಚಿತವಾಯಿತು- ಇನ್ನು ಆವಾಗ ಕಾಲವು ಇಲ್ಲದ್ದರಿಂದ ಆಶ್ರಯವು ಅಸಿದ್ಧವೆಂದು ಹೇಳಬಾರದು ಏಕೆಂದರೆ ಹಾಗೆ ಹೇಳಿದರೆ''ತದಾ"( ಆವಾಗ) ಎಂಬುದನ್ನು ಹೇಳಬುಶಕ್ಯವೇ ಆಗಲಾರದು ಮತ್ತು ಪರರ ಅನುಮಾನದಲ್ಲಿ 'ಪ್ರಲಯ'' ವಿಶೇಷಣವು ಯುಕ್ತವಾಗಲಾರದು

— ವಿಶೇಷಾರ್ಥಪ್ರದೀಪಿಕಾ —

"ಪ್ರತ್ಯುದಾಹ್ರಿಯೇತ" - ವ್ಯಭಿಚಾರಸ್ಥಲ (ವಿಪಕ್ಷ) ರೂಪವಾಗಿ ಸುಂದೋಪಸುಂದಾದಿನಾಶವನ್ನು ಉದಾಹರಿಸಲ್ಪಡಬೇಕು "ತದೇತ್ಯೇವ ವಕ್ತುಮಶಕ್ಯತ್ವಾತ್" - ಸರ್ವೈಕಾನ್ಯಕಿಂಯತ್ತದಃ ಕಾಲೇದಾ,) ಸಪ್ತಮ್ಯಂತಗಳಾದ ಕಾಲಾರ್ಥಕಗಳ ಮುಂದೆ ಸ್ವಾರ್ಥದಲ್ಲಿ "ದಾ, ಪ್ರತ್ಯಯವು ಬರುವದು ಉದಾ—"ಸರ್ವ ಕಾಲಗಳಲ್ಲಿ" ಎಂಬ ಅರ್ಥದಲ್ಲಿ "ಸದಾ, ಸರ್ವದಾ" ಎಂಬುದಾಗಿ ಇದರಂತೆ "ಕದಾ ಅನ್ಯದಾ, ಕದಾ' ಯದಾ, ತದಾ" ಇವುಗಳು) ಈ ನಿಯಮದ ಪ್ರಕಾರ, "ತದಾ" ಎಂಬುದು 'ತಸ್ಮಿನ್‌ಕಾಲೇ'' (ಆ ಕಾಲದಲ್ಲಿ) ಎಂಬ ಅರ್ಥವನ್ನು ಹೇಳುತ್ತದೆ

यद्यप्यत्र कालोऽङ्गीक्रियते न वा । आद्ये तत्रैव भावत्वहेतो-र्व्यभिचारः । द्वितीये प्रलयविशेषणानुपपत्तिः । सकलकार्यविनाश-विशिष्टकालस्य प्रलयत्वात् । अथ कार्यविनाश एव प्रलयस्तथापी-श्वराभावस्य तेन सम्बन्धाभावादीश्वरादिकं प्रलयेऽसदिति प्रतिज्ञार्था-

— ಪದಾರ್ಥದೀಪಿಕಾ —

ಯದ್ಯಪಿ–"ಇಲ್ಲಿ (ಆಕಾಲದಲ್ಲಿಯೇ-)ಕಾಲವನ್ನು ಅಂಗೀಕರಿಸುವಿರೋ? ಇಲ್ಲವೋ? ಮೊದಲನೆಯ ಪಕ್ಷದಲ್ಲಿ ಕಾಲದಲ್ಲಿಯೇ ಭಾವತ್ವವೆಂಬ ಹೇತುವಿಗೇ ಸಾಧ್ಯವನ್ನು ಬಿಟ್ಟಿರುವುದೆಂಬ ವ್ಯಭಿಚಾರವು ಬರುತ್ತದೆ ಎರಡನೆಯ ಪಕ್ಷದಲ್ಲಿ "ಪ್ರಲಯ',ವಿಶೇಷಣವು ಯುಕ್ತವಾಗಲಾರದು ಏಕೆಂದರೆ ಸಕಲಕಾರ್ಯಗಳ ವಿನಾಶವುಳ್ಳ ಕಾಲವೇ ಪ್ರಲಯವಾಗಿರುತ್ತದೆ ಇನ್ನು–ಕಾರ್ಯಗಳ ವಿನಾಶವೇ ಪ್ರಲಯವು' ಆದರೂ, ಈಶ್ವರನಿಲ್ಲದಿರುಕೆಗೆ ಆ ಕಾರ್ಯವಿನಾಶರೂಪ ಪ್ರಲಯದೊಡನೆ ಸಂಬಂಧವಿಲ್ಲದಿರುವುದರಿಂದ, "ಈಶ್ವರಾದಿಗಳು ಪ್ರಲಯದಲ್ಲಿ ಇಲ್ಲವೆಂಬಪ್ರತಿಜ್ಞೆಯ

— ವಿಶೇಷಾರ್ಥಪ್ರದೀಪಿಕಾ —

ಆದುದರಿಂದ "ತದಾ,' ಎಂಬುದರಿಂದ,ಕಾಲದ ಅಸ್ತಿತ್ವವು (ಕಾಲವಿದೆಯೆಂಬುದು ಲಭಿಸಿದುದರಿಂದ, ''ತದಾ ಕಾಲೋ ನಾಸ್ತಿ'' ಎಂದಾಗಿ ಕಾಲವನ್ನಿಲ್ಲವೆಂದು ಹೇಳಿದರೆ, ಸ್ವವಚನವಿರೋಧವೆಂದು ಹೇಳಿದ್ದಾಗುತ್ತದೆಂದು ಭಾವ

"ಪರಕೀಯಾನುಮಾನೇ ಚ"—ಈಶ್ವರ ಮುಂತಾದುದು ಪ್ರಲಯದಲ್ಲಿ ಇಲ್ಲದ್ದಾಗುತ್ತದೆ. ಏಕೆಂದರೆ ಭಾವ ಪದಾರ್ಥವಾಗಿರುವುದು" ಇದು ಪರಕೀಯಾನುಮಾನವು. ಇಲ್ಲಿ ಸಕಲಕಾರ್ಯಗಳ ನಾಶದಿಂದ ಕೂಡಿದ ಕಾಲವೇ ಪ್ರಳಯವೆನಿಸಿದುದರಿಂದ, ಕಾಲವೇ (ಪ್ರಲಯದಲ್ಲಿ) ಇಲ್ಲವೆಂದು ಹೇಳಿದರೆ ಪ್ರಲಯವು ಅಸಿದ್ಧವಾಗುವುದರಿಂದ, ಪರಕೀಯದ ಅನುಮಾನದ ಪಕ್ಷವು ಸಾಧ್ಯಪ್ರಸಿದ್ಧಿಯಿಲ್ಲದ್ದು,, ಹೀಗೆ ಭಾವ

ಸಂಭಾವಿತನಾದ, ಮುಂದೆ ಸ್ಫೂರ್ತಿಯಿಂದ ಹೊರಡುವ ಸಾಧ್ಯಾಪ್ರಸಿದಿ ವ್ಯಭಿಚಾರ ಮುಂತಾದ ರೂಪ ದೋಷಗಳನ್ನು ಹೇಳದಿರುವುದರಿಂದ ಪ್ರಸಕ್ತವಾದ ಸೂತ್ರ—ಭಾಷ್ಯಕಾರರ ಅಚಾತುರ್ಯ , ಈ ಎರಡೂ ದೋಷಗಳನ್ನು ಉಪಪಾದನ ಮಾಡುತ್ತ, ಅದನ್ನು ಳದಿರುವುದರಲ್ಲಿ ಕಾರಣವನ್ನು ಹೇಳಿ, "ಯದ್ಯಪಿ" ಇತ್ಯಾದಿ ವಚನಗಳಿಂದ ಪರಿಹರಿಸುತ್ತಾರೆ

"ಸಂಬಂಧಾಭಾವಾತ್"- ಸಮವಾಯ, ಸಂಯೋಗ, ಈ ಸಂಬಂಧಗಳು, ಸಕಲಕಾರ್ಯ ನಾಶವೆಂಬ ಪ್ರಲಯಕ್ಕೆ ಈಶ್ವರನ ಇಲ್ಲದಿರುವಿಕೆಯೊಡನೆ ಸಂಭ

नुपपत्तिः । देशादिद्वारा सम्बन्धाभ्युपगमे तत्रैव भावत्वस्य व्यभिचारः । प्रलयविशेषणपरित्यागे चेश्वरादेः सर्वदाऽप्यभावः प्रतिज्ञातः स्यात् । तथा च स्फुटो दोष इति वक्तुं शक्यते । तथाऽपि तत् शिष्यैरेवोह्यतामिति न सूत्रभाष्यकाराभ्यामभिहितम् । सूचितं चापीताविति सूत्रकृता ॥ लये मानं च किं भवेदिति भाष्यकृताऽपि ।

— ಪದಾರ್ಥದೀಪಿಕಾ —

ವಿಷಯವು ಸಿದ್ಧಿಸಲಾರದು. ( ಯುಕ್ತವಾಗುವದಿಲ್ಲ ) ದೇಶ ಮುಂತಾದುದರ ಮುಖಾಂತರದಿಂದ ಸಂಬಂಧವನ್ನು ಅಂಗೀಕರಿಸಿದರೆ, ಅಲ್ಲಿಯೇ ಭಾವತ್ವಹೇತುವಿಗೆ ಸಾಧ್ಯವ್ಯಭಿಚಾರವು ಬರುತ್ತದೆ ಪ್ರಲಯದ ಆ ವಿಶೇಷಣವನ್ನು ತೆಗೆದು ಹಾಕಿದರೆ ಈಶ್ವರ ಮುಂತಾದುದಕ್ಕೆ ಎಲ್ಲ ಕಾಲದಲ್ಲಿಯೂ ಅಭಾವವನ್ನು ನಾರಿದ್ದಾಗುತ್ತದೆ ಹಾಗಾದಲ್ಲಿ ದೋಷವು ಸ್ಪಷ್ಟವೇ ಎಂಬುದಾಗಿ ಹೇಳಲು ಬರುತ್ತದ ಆದರೂ

ದೋಷವನ್ನು ಶಿಷ್ಯರೇ ಊಹಿಸಬೇಕೆಂಬ ಅಭಿಪ್ರಾಯದಿಂದ ಶ್ರೀ ಭಾಷ್ಯಕಾರರಾಗಲೀ ಶ್ರೀ ಸೂತ್ರಕಾರರಾಗಲೀ ಕಂಠತಃ ಹೇಳಲಿಲ್ಲ "ಅಪೀತೌ" ಎಂಬುದಾಗಿ ಸೂತ್ರಕಾರರು ಸೂಚಿಸಿರುತ್ತಾರೆ ಭಾಷ್ಯಕಾರರೂ "ಲಯೇ ಮಾನಂ ಚ ಕಿಂ ಭವೇತ್" ಎಂಬ ವಚನದಿಂದ ಸೂಚಿಸಿದ್ದಾರ

— ವಿಶೇಷಾರ್ಥಪ್ರದೀಪಿಕಾ —

ವಿಷುವುದಿಲ್ಲ ಆದುದರಿಂದ, ಸಂಬಂಧವಿಲ್ಲವೆಂದು ಭಾವ ಇನ್ನು ಕಾಲವಿಲ್ಲದಿದ್ದರೂ, ಈಶ್ವರನ ಇಲ್ಲದಿರುವಿಕೆಗೂ ಪ್ರಲಯಕ್ಕೂ ( ಕಾರ್ಯನಾಶಕ್ಕೂ ) ನಡುವೆ " ಸಮಾನದೇಶತ್ವ " ( ಸಮಾನದೇಶವುಳ್ಳದ್ದಾಗಿರುವುದು ) ಎಂಬ ಸಂಬಂಧವು ಸಂಭವಿಸಬಹುದೆಂಬ ಆಕ್ಷೇಪವನ್ನು "ದೇಶಾದಿದ್ವಾರಾ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ಆದಿ" ಪದದಿಂದ, ತತ್ಕಾಲೀನವಾದ ಪ್ರಾಗಭಾವ ಮುಂತಾದುದನ್ನು ಸಂಗ್ರಹಿಸಬೇಕು ಕಾಲನಾಶ, ಈಶ್ವರಾದ್ಯಭಾವಗಳೆರಡರಲ್ಲಿ ಸಾಮಾನಾಧಿಕರಣ್ಯ ಸಂಬಂಧವನ್ನು ಒಪ್ಪಿದರೆ, ಹೀಗ ಅರ್ಥ "ತತ್ರೈವ"– ಸಕಲನಾಶದ ಅಧಿಕರಣವಾದ, ದೇಶಾದಿಗಳಲ್ಲಿಯೇ ಭಾವತ್ವ ಹೇತುವು ಅಸತ್ವವನ್ನು ಬಿಟ್ಟಿರುವುದರಿಂದ ವ್ಯಭಿಚಾರವು, ಹೀಗ ಇಲ್ಲಿ ತಿಳಿಯಬೇಕು

'ಸ್ಫುಟೋದೋಷಃ" – ಬಾಧವು ದೃಷ್ಟಾಂತದಲ್ಲಿ ಸಾಧ್ಯವಿಲ್ಲದಿರುವಿಕೆ, ಈ ದೋಷಗಳು ಸ್ಪಷ್ಟವಿರುವವು, ಹೀಗೆ ಭಾವ "ಭಾಷ್ಯಕೃತಾ' - ಅನುಭಾಷ್ಯವನ್ನು ರಚಿಸಿದ ಶ್ರೀಮದಾಚಾರ್ಯರಿಂದ "ಸೂಚಿತಂ ಚ" – ಭಾವ

धर्माधर्माश्रयत्वेन स्वीकार्योऽपि नरो लये ॥

तदिदं जीवेश्वरसाधारणमनुमानमुक्तम् । इदानीं प्रलये जीवसद्भावसाधकमनुमानमाह ॥ धर्मेति । न केवलमुक्तानुमानेन । किन्नाम धर्माधर्माश्रयत्वेनापीति सम्बन्धः । नरो जीवात्मा । अयमत्र प्रयोगः । प्रलयकालवर्ती धर्मः साश्रयः । धर्मत्वादिदानीन्तनधर्मवत् । एवमधर्ममपि पक्षीकृत्य प್ರयोक्तव्यम् । न च धर्माधर्माश्रयो जीवात्मनोऽन्यः

ಧರ್ಮ ಅಧರ್ಮಗಳ ಆಶ್ರಯವಾಗಿರುವುದರಿಂದಲೂ ಪ್ರಲಯ ಕಾಲದಲ್ಲಿ ಜೀವಾತ್ಮನು ಅಂಗೀಕರಿಸಲ್ಪಡಬೇಕು

— ಪದಾರ್ಥದೀಪಿಕಾ

ಈ ರೀತಿಯಾಗಿ ಈ ವರೆಗಿನ ಗ್ರಂಥದಿಂದ ಪ್ರಲಯದಲ್ಲಿ ಜೀವೇಶ್ವರರ ಬಗ್ಗೆ ಸಾಧಾರಣವಾದ ಅನುಮಾನವು ಹೇಳಲ್ಪಟ್ಟಿತು ಈಗ ಪ್ರಲಯದಲ್ಲಿ ಜೀವರಿರುವರೆಂಬುದನ್ನು ಸಾಧಿಸುವ ಅನುಮಾನವನ್ನು "ಧರ್ಮಾಧರ್ಮಾಶ್ರಯತ್ವೇನ'' ಇತ್ಯಾದಿ ಪದ್ಯದಿಂದ ಹೇಳುತ್ತಾರೆ ಹಿಂದೆ ಹೇಳಿದ ಅನುಮಾನದಿಂದಷ್ಟೇ ಅಲ್ಲ "ಧರ್ಮಾಧರ್ಮಾಶ್ರಯತ್ವೇನಾಪಿ"(ಧರ್ಮ ಅಧರ್ಮಗಳ ಆಶ್ರಯವಾಗಿರುವುದೆಂಬ ಕಾರಣದಿಂದಲೂ) ಹೀಗೆ ಅನ್ವಯವಿದೆ "ನರಃ"=ಜೀವಾತ್ಮನು ಇಲ್ಲಿ ಪ್ರಯೋಗವು– "ಪ್ರಲಯಕಾಲದಲ್ಲಿರುವ ಧರ್ಮವು ಆಶ್ರಯವುಳ್ಳದ್ದಾಗಿದೆ ಏಕೆಂದರೆ ಧರ್ಮವಾಗಿದ. ಈಗಿನ ಕಾಲದಲ್ಲಿರುವ ಧರ್ಮವು ದೃಷ್ಟಾಂತವು ಹೀಗೆ ವಿವಕ್ಷಿತವಾಗಿದೆ ಇದರಂತೆ ಅಧರ್ಮವನ್ನು ಪಕ್ಷೀಕರಿಸಿಯೂ ಅನುಮಾನವನ್ನು ಪ್ರಯೋಗಿಸಬೇಕು

— ವಿಶೇಷಾರ್ಥಪ್ರದೀಪಿಕಾ —

ತ್ವಯುಕ್ತಿಯಿಂದ ಎಲ್ಲದಕ್ಕೂ ಅಸತ್ವವನ್ನು (ಅಸ್ತಿತ್ವವಿಲ್ಲವೆಂಬುದನ್ನು) ಸಾಧನ ಮಾಡಿದರೆ ಅಪೀತಿ (ಪ್ರಲಯಕಾಲದಲ್ಲಿ) ಯಲ್ಲಿ ವ್ಯಭಿಚಾರವು ಬರುವುದರಿಂದ, ಆದಿಲ್ಲದಿದ್ದರೆ (ಕಾಲವಿಲ್ಲದಿದ್ದರೆ) ಸಾಧ್ಯದ ಅಪ್ರಸಿದ್ಧಿಯೆಂಬ ಸಂಗತಿಯು ತಿಳಿದುಬರುತ್ತದೆಂದು ಭಾವ

"ಅನುಮಾನಂ' – ನಾಶತ್ವಾತ್ (ನಾಶವಾಗಿರುವುದರಿಂದ) ಕಾಲತ್ವಾತ್ (ಕಾಲವಾಗಿರುವುದರಿಂದ) ಎಂಬ ಎರಡು ಅನುಮಾನಗಳು. ಮಹಾಪ್ರಲಯ ರೂಪನಾಶವು, ಪುರುಷಶೇಷಯುಕ್ತವಾದುದು, ಏಕೆಂದರೆ ನಾಶವಾಗಿದೆ ಪ್ರಲಯಕಾಲವು ಪುರುಷಳವ್ಯುಳ್ಳದ್ದು, ಏಕೆಂದರೆ ಕಾಲವಾಗಿದೆ ಇವೆರಡರಲ್ಲಿಯೂ ಸಮ್ಮತವಾದುದು ದೃಷ್ಟಾಂತವು ಹೀಗೆ ಪ್ರಯೋಗಗಳು.

सम्भवति । एवञ्च प्रलये जीवात्मसद्भावात् भावमात्रासत्त्वसाधनमनुप-पन्नमिति । यद्वेश्वरसद्भावसाधनमिदम् । आश्रयशब्दस्याधिष्ठातृपर-त्वात् । तत्रैवं प्रयोगः । प्रलयकालवर्तिनौ धर्माधर्मौ केनचिदधिष्ठितौ । कारणत्वे सत्यचेतनत्वात् । वाश्यादिवदिति । न चातीन्द्रियधर्मा-

— ಪದಾರ್ಥದೀಪಿಕಾ —

ಮತ್ತು ಧರ್ಮಾಧರ್ಮಗಳ ಆಶ್ರಯನು ಜೀವಾತ್ಮನಿಂದ ಬೇರೆಯುವ(ಭಿನ್ನ) ನಾಗಿರುವುದು ಯುಕ್ತವಲ್ಲ ಆದುದರಿಂದ, ಈ ರೀತಿಯಾಗಿ ಪ್ರಲಯದಲ್ಲಿ ಜೀವನು ಇರುವದರಿಂದ, ಯಾವದೇ ಭಾವವು ಇಲ್ಲವೆಂದು ಸಾಧಿಸುವದು ಯುಕ್ತವಾಗ ಲಾರದು'' ಹೀಗೆ ಅರ್ಥ ಅಥವಾ- ಈಶ್ವರಸಾಧಕವಾಗಿ ಈ ಅನುಮಾ ನವು ಹೊರಟಿದೆ ಏಕೆಂದರೆ''ಆಶ್ರಯ'' ಶಬ್ದಕ್ಕೆ ''ಅಧಿಷ್ಠಾತೃ'' ಎಂಬ ಅರ್ಥ ವಿರುತ್ತದೆ ಇಲ್ಲಿ ಹೀಗೆ ಪ್ರಯೋಗವು- ''ಪ್ರಲಯ ಕಾಲದಲ್ಲಿರುವ ಧರ್ಮಾಧರ್ಮಗಳು ಯಾವನೋ ಒಬ್ಬನ ಅಧಿಷ್ಠಾನದಲ್ಲಿ ಒಳಪಟ್ಟಿವೆ ಏಕೆಂದರೆ ಅವು ಕಾರಣಗಳಾಗಿದ್ದು ಅಚೇತನಗಳಾಗಿವೆ ವಾಶ್ಯಾದಿಗಳು ಇದರಲ್ಲಿ ದೃಷ್ಟಾಂತ ಗಳು" ಎಂಬುದಾಗಿ. ಮತ್ತು ಇಂದ್ರಿಯಗಳಿಗೆ ಗೋಚರವಾಗದ ಧರ್ಮ ಅಧರ್ಮ

— ವಿಶೇಷಾರ್ಥಪ್ರದೀಪಿಕಾ —

''ನಚಧರ್ಮಾಧರ್ಮಾಶ್ರಯೋ ಜೀವಾತ್ಮನೋಽನ್ಯಃ" – ಸ್ವಸ್ವಾಮಿ ಭಾವ ರೂಪ ಸಂಬಂಧದಿಂದ, ಜೀವನೇ ಧರ್ಮಾಧರ್ಮಾಶ್ರಯನಾಗಿರುವುದರಿಂದ, ಮತ್ತೊಬ್ಬರಿಲ್ಲವೆಂದು ಹೇಳಿದುದು ''ಅಧಿಷ್ಠಾತೃಪರತ್ವಾತ್" - 'ಕಾರ್ಯೋನ್ಮು ಖವಾಗುವಂತೆ ಮಾಡುವವನು' ಅಧಿಷ್ಠಾತೃವೆಂದು ತಿಳಿಯಬೇಕು, ಯಥೇಚ್ಛ ವಾಗಿ ವಿನಿಯೋಗ (ಬಳಕೆ) ಮಾಡುವವನು ಇಲ್ಲವೇ ನಿಯಂತ್ರಿಸುವವನು ಹೀಗೆ "ಅಧಿಷ್ಠಾತೃ" ಶಬ್ದದ ಅರ್ಥ 'ಸಾಕ್ಷಾತ್ಕರ್ತೃ" ಎಂದೂ ಅರ್ಥ

"ಕಾರಣತ್ವೇ ಸತಿ ಅಚೇತನತ್ವಾತ್'' - ಇಲ್ಲಿ ಅಚೇತನತ್ವವು ಧ್ವಂಸ, ಅತ್ಯಂತಾಭಾವಗಳಲ್ಲಿದ್ದು ಅಲ್ಲಿ ''ಕೇನಚಿದಧಿಷ್ಠಿತತ್ವ'' ಸಾಧ್ಯವಿಲ್ಲದಿರುವುದರಿಂದ ಹೇತುವಿಗೆ ವ್ಯಭಿಚಾರದೋಷವು ಬರುತ್ತದೆ ಅದನ್ನು ತಪ್ಪಿಸಲು, 'ಕಾರ ಣತ್ವೇ ಸತಿ'' ಎಂಬ ವಿಶೇಷಣಗನ್ನು ಸೇರಿಸುತ್ತಾರ ''ವಾಶ್ಯಾದಿವತ್''— ಕುಠಾರದಂತೆ, ''ವಾಶೀ'' ಶಬ್ದಕ್ಕೆ ''ಕುಠಾರ''ವೆಂಬರ್ಥದಲ್ಲಿ ''ವಾಶೀಮೇಕೋ ಹಸ್ತೇ ಬಿಭರ್ತಿ ಆಯಸೀಂ" ಇತ್ಯಾದಿಶ್ರುತಿಯಲ್ಲಿ ಪ್ರಯೋಗವಿರುತ್ತದೆ ಮತ್ತು ''ವಾಶ್ಯಾದಾರುವಿದಾರಣೇ" ಎಂಬ ಕೋಶವೂ ಇದೆ (೨) ತಕ್ಷ್ಣನ (ಬಡಿಗನ) ಆಯುಧವು "ವಾಶೀ" (ಬಾಚಿ- ಉಳಿ) ಇದು ಅವನಿಂದ ಹೇಗೆ ನಿಯಮಿ

धर्मयोरधिष्ठातृत्वमीश्वरादन्यस्योपपद्यते । अतो धर्माधर्माधिष्ठातृत्वेनापि नरः परमपुरुषो लये स्वीकार्य इति ।

ननु प्रलये भावमात्रस्यासत्त्वमभ्युपगच्छतो मम तदा धर्माधर्मावपि न स्त एवेत्याश्रयासिद्धिरिति । इदमिह वक्तव्यम् । किं धर्माधर्मसंज्ञितमदृष्टमस्ति कार्यमात्रस्य कारणं च भवतीत्यभ्युपगम्य प्रलये तदभावोऽभिधीयते । उत सदपि तदकारणमित्यभ्युपेत्य । अथ तदेव नास्तीत्यङ्गीकृत्य । आद्यं दूषयति ॥ अनादित्वमिति ।

— ಪದಾರ್ಥದೀಪಿಕಾ —

ಮುಂತಾದುವಕ್ಕೆ ಈಶ್ವರನಿಂದ ಭಿನ್ನನಾದವನು ಅಧಿಷ್ಠಾತೃವಾಗಿರುವದೆಂಬುದು ಯುಕ್ತವಲ್ಲ ಆದುದರಿಂದ, ಧರ್ಮಾಧರ್ಮಗಳ ಅಧಿಷ್ಠಾತೃವಾಗಿರುವುದೆಂಬ ಕಾರಣದಿಂದಲೂ “ನರಃ”-ಪರಮ ಪುರುಷನಾದ ಈಶ್ವರನು ಪ್ರಲಯದಲ್ಲಿ ಇರುವವನೆಂಬುದಾಗಿ ಅಂಗೀಕರಿಸತಕ್ಕದ್ದು ಹೀಗೆ ಅರ್ಥ

ಇನ್ನು- ಪ್ರಲಯದಲ್ಲಿ, ಯಾವದೇ ಭಾವಕ್ಕೂ ಅಸತ್ವವನ್ನು ಹೇಳುವ ನನ್ನ ಪಕ್ಷದಲ್ಲಿ ಧರ್ಮಾಧರ್ಮಗಳೂ ಇಲ್ಲವೇ ಇಲ್ಲ ಆದುದರಿಂದ. “ಪ್ರಲಯಕಾಲದಲ್ಲಿರುವ ಧರ್ಮಾಧರ್ಮಗಳು” ಎಂಬ ಪಕ್ಷವು ಅಪ್ರಸಿದ್ಧವಾಗುತ್ತದೆ” ಯೆಂಬ ಪೂರ್ವಪಕ್ಷವು ಬರುತ್ತದೆ ಈ ಪೂರ್ವಪಕ್ಷದ ಮೇಲೆ ಹೀಗೆ ಹೇಳತಕ್ಕದ್ದು- “ಧರ್ಮ ಅಧರ್ಮಗಳೆಂಬ ಸಂಜ್ಞೆಯುಳ್ಳ ಅದೃಷ್ಟವು ಇದೆ ಅದು ಕಾರ್ಯಕ್ಕೆಲ್ಲ ಕಾರಣವಾದುದೂ ಇದೆ ಎಂದು ಅಂಗೀಕರಿಸಿ, ಪ್ರಲಯದಲ್ಲಿ ಅದರ ಅಭಾವವನ್ನು ಹೇಳುವಿಯೋ? ಅಥವಾ ಧರ್ಮಾಧರ್ಮ ಸಂಜ್ಞೆಯುಳ್ಳ ಅದೃಷ್ಟವಿದ್ದರೂ ಅದು ಕಾರಣವಲ್ಲವೆಂಬ ಅಭಿಪ್ರಾಯದಿಂದ ಆ ಅದೃಷ್ಟವಿಲ್ಲವೆಂದು ಹೇಳುವಿಯೋ? ಇಲ್ಲವೆ ಆ ಅದೃಷ್ಟವೇ ಇಲ್ಲವೆಂಬುದನ್ನು ಅಂಗೀಕರಿಸಿ ಹೇಳುವಿಯೋ? ಹೀಗೆ

— ವಿಶೇಷಾರ್ಥಪ್ರದೀಪಿಕಾ —

ಸಲ್ಪಟ್ಟಿರುವುದೋ ಹಾಗೆ ಧರ್ಮಾಧರ್ಮಾದಿಗಳು ಯಾವನೋ ಒಬ್ಬನಿಂದ ನಿಯಮಿಸಲ್ಪಟ್ಟಿವೆ ಹೀಗೆ ಅರ್ಥ ‘ಆದಿ” ಶಬ್ದದಿಂದ “ಕುಲಿಶ” ಮುಂತಾದುದನ್ನು ಪರಿಗ್ರಹಿಸಬೇಕು ಸ್ವಸಿಧ್ಧಾಂತದರೀತಿಯಿಂದ ಈಶ್ವರನಲ್ಲಿ, ಪರರೀತಿಯಿಂದ ಜೀವನಲ್ಲಿ ಕಾರಣತ್ವವೆಂಬಹೇತುವು (ವಿಶೇಷಣ)ಇದ್ದರೂ ಅಲ್ಲಿ “ಕೇನಚಿದಧಿಷ್ಠಿತತ್ವ” ಸಾಧ್ಯವಿಲ್ಲದ್ದರಿಂದ ವ್ಯಭಿಚಾರವನ್ನು ತಪ್ಪಿಸಲು “ಅಚೇತನತ್ವಾತ್” ಎಂಬುದಾಗಿ ವಿಶೇಷ್ಯಾಂಶವನ್ನು ಸೇರಿಸಿದ್ದು ಇದರಿಂದ, ಈಶ್ವರ ಸಿದ್ಧಿಯು ಹೇಗೆ ಆಯಿತೆಂಬುದನ್ನು “ನ ಚ”ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ.

अनादित्वं विनाऽदृष्टं कथं स्यात्कारणं क्वचित् ॥

अनादित्वमिवानादित्वं प्रलये सत्त्वमित्यर्थः । क्वचिदिति सृष्टिकाले । यद्यदृष्टं प्रलये न स्यात्तदाऽऽदिकालीनस्य कार्यस्य कारणं न स्यात् । असतः कारणत्वायोगात् । तथा च सर्वोत्पत्तिमता निमित्तमित्यभ्युपगमो भग्न इत्यर्थः । स्यादेतत् । अधुनातनकार्यमदृष्टकारणकं न त्वादिकालीनमिति ममाभ्युपगमः । तत्किमदृष्टस्य प्रलये सद्भावेनेत्यत आह ॥ अनादित्वमिति । अनादित्वं विना तत एवादिकालीनकार्य-

ಪ್ರಳಯದಲ್ಲಿ ಅಸ್ತಿತ್ವವಿಲ್ಲದಿದ್ದರೆ ಅದೃಷ್ಟವು ಸೃಷ್ಟಿಕಾಲದಲ್ಲಿ (ಈಗಿನ ಕಾಲ ದಲ್ಲಿ) ಕಾರಣವು ಹೇಗೆ ಆದೀತು ?

## — ಪದಾರ್ಥದೀಪಿಕಾ —

ಪ್ರಶ್ನೆ ಮೊದಲನೆಯ ಕಲ್ಪವನ್ನು "ಅನಾದಿತ್ವಂ" ಈ ಪದ್ಯದಿಂದ ನಿರಾಕರಿಸುತ್ತಾರೆ "ಅನಾದಿತ್ವದ" ಹಾಗ ಇರುವುದು ಎಂದು ಅನಾದಿತ್ವ" ಶಬ್ದಕ್ಕೆ ಅರ್ಥ ಅಂದರೆ "ಪ್ರಲಯದಲ್ಲಿ ಇರುವಿಕೆ" ಎಂದು ಅರ್ಥ "ಕ್ವಚಿತ್" ಎಂದರೆ 'ಸೃಷ್ಟಿ ಕಾಲದಲ್ಲಿ' ಎಂದು ಅರ್ಥ ಪ್ರಲಯುದಲ್ಲಿ ಅದೃಷ್ಟ ಇಲ್ಲವೆಂದರೆ, ಆದಿ (ಸೃಷ್ಟಿ) ಕಾಲದಲ್ಲಿ ಉಂಟಾಗುವ ಕಾರ್ಯಕ್ಕೆ ಕಾರಣವಿಲ್ಲವಾಗುವ ಪ್ರಸಂಗವು ಬರುತ್ತದೆ ಏಕೆಂದರೆ ಅಸತ್ಯಕ್ಕೆ (ಇಲ್ಲದಕ್ಕೆ, ಕಾರಣತ್ವವು ಯುಕ್ತವಾಗಲಾರದು ಆದುದರಿಂದ, ಹುಟ್ಟುವ ಕಾರ್ಯಕ್ಕೆಲ್ಲ ನಿಮಿತ್ತವಿರುವುದೆಂದು ಒಪ್ಪಿದುದನ್ನು ಇಲ್ಲಿ ಅಲ್ಲಗಳೆದುದ್ದಾಗುತ್ತದೆ ಇನ್ನು-ಇದಾಗಲಿ! 'ಈಗಿನ ಕಾಲದಲ್ಲಾಗುವ ಕಾರ್ಯಕ್ಕೆ ಅದೃಷ್ಟವು ಕಾರಣವು ಆದರೆ ಆದಿಕಾಲದಲ್ಲಾಗಿರುವ ಕಾರ್ಯಕ್ಕೆ ಅದೃಷ್ಟವು ಕಾರಣವಲ್ಲ," ಹೀಗೆ ನಾನು ಅಂಗಿಕರಿಸುತ್ತೇನ ಆದುದರಿಂದ ಅದೃಷ್ಟವು ಪ್ರಲಯದಲ್ಲಿ ಇರಬೇಕೆಂಬುದು ಏಕೆ ? ಈ ಆಶಂಕೆಯನ್ನು "ಅನಾದಿತ್ವಂ" ಇತ್ಯಾದಿ ಪದ್ಯದಿಂದ ಪರಿಹರಿಸುತ್ತಾರ "ಅನಾದಿತ್ವಂ ವಿನಾ" ಪ್ರಲಯದಲ್ಲಿ ಅಸ್ತಿತ್ವವಿಲ್ಲದಯೆ, ಪ್ರಲಯದಲ್ಲಿ ಅಸ್ತಿತ್ವವಿಲ್ಲವೆಂಬ ಕಾರಣದಿಂದಲೇ ಆದಿಕಾಲದ

## — ವಿಶೇಷಾರ್ಥಪ್ರದೀಪಿಕಾ —

"ಅದೃಷ್ಟಂ ಕಾರಣಂ ನೋಚೇತ್" ಇತ್ಯಾದಿ ಗ್ರಂಥದಿಂದ೨-೩ಪಕ್ಷಗಳನ್ನು ನಿರಾಕರಿಸಲಿಷ್ಟು, ಅದಕ್ಕೂ ಮುಂಚೆ ಮೊದಲನೆಯ ಪಕ್ಷದ ನಿರಾಸವೆಂಬ, ಅಭಿಪ್ರಾಯದಿಂದ 'ಆದ್ಯಂ ದೂಷಯತಿ" ಇತ್ಯಾದಿ ಗ್ರಂಥವು ಹೊರಟಿದೆ. "ಅನಾದಿತ್ವಂ ವಿನಾ" – ಪ್ರಲಯದಲ್ಲಿ ಅಸ್ತಿತ್ವವಿಲ್ಲದಿದ್ದರೆ, ಹೀಗೆ ಅರ್ಥ

कारणत्वं च विनाऽदृष्टं क्वचिदधुनातनेऽपि कार्ये कारणं कथं स्यात् । न कथञ्चित् । अधुनातनं कार्यमदृष्टकारणकं न कार्यत्वादादिकालीनकार्यवदित्यनुमानसम्भवात् । न चेदिदमिव तदप्यदृष्टकार्यमेवाङ्गीकार्यमिति । यद्वा मा भूदादिकालीनस्य कार्यस्यादृष्टं कारणम् । तथाऽपि प्रलये तद्भावोऽङ्गीकरणीयः । कुतः । अनादित्वं प्रलये सत्त्वं विनाऽदृष्टं क्वचिदिदानीन्तनेऽपि कार्ये कारणं कथं स्यात् । अन्तराल एवादृष्टोत्पत्त्ययोगादिति योज्यम् ।

नन्वदृष्टस्य सर्वोत्पत्तिमन्निमित्तत्वेऽपि न प्रलये सद्भावोऽभ्युप-

— ಪದಾರ್ಥದೀಪಿಕಾ —

ಕಾರ್ಯಕ್ಕೆ ಕಾರಣವಾಗದಯೇ, ಅದೃಷ್ಟವು, "ಕ್ವಚಿತ್" ಈಗಿನ ಕಾಲದಲ್ಲಿ ಉಂಟಾಗುವ ಕಾರ್ಯವನ್ನು ಕುರಿತು ಕಾರಣವು ಹೇಗೆ ಆದೀತು? ಯಾವದೇ ರೀತಿಯಿಂದಲೂ ಆಗಲಾರದು ಏಕೆಂದರೆ "ಈಗ ಉಂಟಾದ ಕಾರ್ಯವು ಅದೃಷ್ಟ ರೂಪ ಕಾರಣದಿಂದ ಉಂಟಾಗಿಲ್ಲ. ಏಕೆಂದರೆ ಕಾರ್ಯವಾಗಿದೆ ಇದರಲ್ಲಿ ಆದಿಕಾದಲ್ಲಾದ ಕಾರ್ಯವು ದೃಷ್ಟಾಂತವು" ಹೀಗೆ ಅನುಮಾನವು ಸಂಭವಿಸುತ್ತದೆ. ಇಲ್ಲದಿದ್ದಲ್ಲಿ ಈಗಿನ ಕಾಲದ ಕಾರ್ಯದಂತೆ ಆದಿಕಾಲದ ಕಾರ್ಯವೂ ಅದೃಷ್ಟ ಕಾರಣದಿಂದುಂಟಾದುದೆಂಬುದನ್ನೇ ಅಂಗೀಕರಿಸಬೇಕಾಗುತ್ತದೆ" ಹೀಗೆ ಅರ್ಥ

ಅಥವಾ– ಆದಿಕಾಲದ ಕಾರ್ಯಕ್ಕೆ ಅದೃಷ್ಟವು ಕಾರಣವಾಗದೆ ಇರಲಿ ! ಆದರೂ ಪ್ರಲಯದಲ್ಲಿ ಆ ಅದೃಷ್ಟವನ್ನು ಇದೆಯೆಂದು ಅಂಗೀಕರಿಸಲೇಬೇಕು. ಏಕೆಂದರೆ " ಅನಾದಿತ್ವಂ ವಿನಾ "= ಪ್ರಲಯದಲ್ಲಿ ಅಸ್ತಿತ್ವವಿಲ್ಲದಿದ್ದರೆ, ಅದೃಷ್ಟವು "ಕ್ವಚಿತ್" ಈಗಿನ ಕಾಲದ ಕಾರ್ಯವನ್ನು ಕುರಿತಾದರೂ ಕಾರಣವು ಹೇಗೆ ಆದೀತು ? ಏಕೆಂದರೆ– "ಅಂತರಾಲ ಏವಾದೃಷ್ಟೋತ್ಪತ್ತ್ಯಯೋಗಾತ್" (ನಡುವಯೇ ಅದೃಷ್ಟದ ಉತ್ಪತ್ತಿಯು ಯುಕ್ತವೆನಿಸುವುದಿಲ್ಲ) ಹೀಗೆ ಯೋಜಿಸತಕ್ಕದ್ದು

ಇನ್ನು ಅದೃಷ್ಟವು, ಹುಟ್ಟುತ್ತಿರುವ ಕಾರ್ಯಗಳಿಗೆಲ್ಲ ನಿಮಿತ್ತ ಕಾರಣ

— ವಿಶೇಷಾರ್ಥಪ್ರದೀಪಿಕಾ —

"ತತ ಏವ" – ಪ್ರಲಯದಲ್ಲಿ ಇಲ್ಲದಿರುವುದರಿಂದಲೇ ತರ್ಕವನ್ನೂ "ನಚೇತ್" ಎಂಬ ವಚನದಿಂದ ಹೇಳುತ್ತಾರೆ ಅದೃಷ್ಟಕಾರಣವುಳ್ಳದ್ದಾಗದಿದ್ದಲ್ಲಿ, ಹೀಗೆ ಅರ್ಥ 'ತದಪಿ' - ಸೃಷ್ಟಿಕಾಲದ ಅದೃಷ್ಟವು "ಉಪಾದತ್ತೇ" – ದೂಷಿಸಲು ಅನುವಾದ ಮಾಡುತ್ತಾರೆಂದು ಅರ್ಥ. "ಯದಿ' ಇದರ ಅನಂತರ, ಶೇಷ

पूर्वादृष्टात्परादृष्टं यदि नैवोत्तरं कुतः ॥

गन्तव्यः । आदिकाल एवोत्पन्नस्यापि महदादिकारणत्वोपपत्तेरिति । इदमत्र वक्तव्यम् । तदादिकाले जनिमददृष्टं ततः पूर्वादृष्टादुत्पद्यते न वेति । आद्यमुपादत्ते ॥ पूर्वेति । जायत इति शेषः । परिहरति ॥ नैवेति । एवं तर्हि तदुत्तरमादिकाले जनिमददृष्टं नैवास्माभिः

(೧) ಪೂರ್ವದಲ್ಲಿರುವ ಅದೃಷ್ಟದಿಂದ ಪರ (ಮುಂದಿನ) ಅದೃಷ್ಟವು ಒಂದು ಪಕ್ಷದಲ್ಲಿ ಹುಟ್ಟುತ್ತದೆಯಾದರೆ ಆಗ ಆದಿಕಾಲದಲ್ಲಿ ಉತ್ಪತ್ತಿಯುಳ್ಳ ಆ ಅದೃಷ್ಟವನ್ನು ನಾವು ಪಕ್ಷೀಕರಿಸುವುದಿಲ್ಲ; ಆದರೆ ಅದರ ಕಾರಣವಾದ ಪ್ರಳಯ ಕಾಲದಲ್ಲಿರುವ ಪೂರ್ವಾದೃಷ್ಟವನ್ನೇ ಪಕ್ಷೀಕರಿಸುತ್ತೇವೆ. ಆದುದರಿಂದ ಆಶ್ರಯಾಸಿದ್ಧಿಯು ಎಲ್ಲಿಂದ (ಹೇಗೆ) ? *

— ಪದಾರ್ಥದೀಪಿಕಾ —

ವಾಗಿದ್ದರೂ, ಪ್ರಲಯದಲ್ಲಿ ಅದರ ಅಸ್ತಿತ್ವವನ್ನು ಅಂಗೀಕರಿಸತಕ್ಕದ್ದಲ್ಲ ಏಕೆಂದರೆ– ಆದಿಕಾಲದಲ್ಲಿಯೇ ಹುಟ್ಟಿದ್ದರೂ ಆ ಅದೃಷ್ಟವು ಮಹದಾದಿಗಳಿಗೆ ಕಾರಣವಾಗುವುದು ಯುಕ್ತವೆನಿಸುತ್ತದೆ" ಹೀಗೆ ಆಶಂಕೆಯು ಇಲ್ಲಿ– "ಆ ಆದಿಕಾಲದಲ್ಲಿ ಹುಟ್ಟಿದ ಅದೃಷ್ಟವು ಹಿಂದಿನ ಅದೃಷ್ಟದಿಂದ ಹುಟ್ಟಿದೆಯೋ ಇಲ್ಲವೋ, ಎಂಬುದನ್ನು ಹೇಳತಕ್ಕದ್ದು ಮೊದಲನೆಯದನ್ನು "ಪೂರ್ವಾದೃಷ್ಟಾತ್' ಇತ್ಯಾದಿ ಪದ್ಯದಿಂದ ತೆಗೆದುಕೊಳ್ಳುತ್ತಾರೆ "ಜಾಯತೇ" ಎಂಬುದು ಶೇಷವು ಅದರ ಪರಿಹಾರವನ್ನು "ನೈವ" ಇತ್ಯಾದಿ ವಾಕ್ಯದಿಂದ ಮಾಡುತ್ತಾರೆ ಹಾಗಾದರೆ– "ಉತ್ತರಂ'= ಆದಿಕಾಲದಲ್ಲಿ ಜನನವುಳ್ಳ ಆ ಅದೃಷ್ಟವನ್ನು ನಾವು ಪಕ್ಷೀಕರಿಸು

— ವಿಶೇಷಾರ್ಥಪ್ರದೀಪಿಕಾ —

ವನ್ನು "ಜಾಯತೇ ಇತಿಶೇಷಃ" ಎಂಬ ವಚನದಿಂದ ಹೇಳುತ್ತಾರೆ "ಏವಂ ತರ್ಹಿ, ತತ್, ಈ ಮೂರು ಪದಗಳನ್ನು ಪರಿಷ್ಕರಿಸಲು ಬಳಸಿರುತ್ತಾರೆ

(೨)* ಪೂರ್ವದಲ್ಲಿರುವ ಅದೃಷ್ಟದಿಂದ ಮುಂದಿನ ಅದೃಷ್ಟವು ಒಂದು ಪಕ್ಷದಲ್ಲಿ ಹುಟ್ಟುವುದೇ ಇಲ್ಲವೆಂದಾದರೆ ಹಾಗಾದಲ್ಲಿ ಆ ಆದಿಕಾಲದಲ್ಲಿರುವ ಅದೃಷ್ಟವು ಯಾವುದರಿಂದ ಹುಟ್ಟುತ್ತದೆ ? (ಅದೃಷ್ಟದ ಉತ್ಪತ್ತಿಯಾಗದೇ ಇರಲಿ.)

(೩) ಸೃಷ್ಟಿಯ ಉಪಕ್ರಮದಲ್ಲಿ ಹುಟ್ಟುವ ಆ ಅದೃಷ್ಟವು ಪೂರ್ವದ ಅದೃಷ್ಟದಿಂದ ಹುಟ್ಟುವುದಿಲ್ಲ ಅದು ಅದೃಷ್ಟನಿರಪೇಕ್ಷವು; ಎಂಬ ಪಕ್ಷದಲ್ಲಿ ಮುಂದೆ ಹುಟ್ಟುವ ಮಹದಾದಿ ಕಾರ್ಯಗಳೂ ಅದೃಷ್ಟದಿಂದ ಹುಟ್ಟುವವೆಂಬುದನ್ನು ಏಕೆ ಅಂಗೀಕರಿಸತಕ್ಕದ್ದು

पक्षीक्रियते । किन्तु तत्कारणं प्रलयकालीनं पूर्वादृष्टमेवेति कुत आश्रयासिद्धिरिति । द्वितीयमुपादत्ते ॥ पूर्वेति । नैवोत्पद्यत इति शेषः । दूषयति ॥ उत्तरमिति । तर्हि तदुत्तरमादिकालीनमदृष्टं कुतो जायते । न कुतश्चिन् । सर्वोत्पत्तिमन्निमित्तस्यादृष्टस्याभावादादिकाली नादृष्टोत्पत्तिरेव न स्यादित्यर्थः । न ब्रूमो वयं सर्वं कार्यमदृष्टजन्य-मिति । किं तर्ह्यादिकाले जनिमतो महदादिकारणादृष्टादन्यदेवातो नोक्तदोष इत्याशङ्कामुत्थाप्य दूषयति ॥ पूर्वेति । यदि परादृष्टं

— ಪದಾರ್ಥದೀಪಿಕಾ —

ವುದೇ ಇಲ್ಲ ಆದರೆ ಅದರ ಕಾರಣವಾದ ಪೂರ್ವಾದೃಷ್ಟವನ್ನೇ ಪಕ್ಷೀಕರಿಸುವುದು. ಆದುದರಿಂದ ಆಶ್ರಯದ (ಪಕ್ಷದ) ಅಸಿದ್ಧಿಯು ಎಲ್ಲಿಂದ? ಹೀಗ ಉತ್ತರ ಎರಡ ನೆಯ ಪಕ್ಷವನ್ನು "ಪೂರ್ವ" ಇತ್ಯಾದಿ ವಾಕ್ಯದಿಂದ ಪರಿಗ್ರಹಿಸುತ್ತಾರೆ "ನೈವೋತ್ಪದ್ಯತೇ" ಎಂಬುದಾಗಿ ಶೇಷವು, ಅದನ್ನು "ಉತ್ತರಂ" ಇತ್ಯಾದಿ ವಚನದಿಂದ ದೂಷಿಸುತ್ತಾರೆ "ತರ್ಹಿ"– ಹಾಗಾದರೆ– "ಉತ್ತರಂ"= ಆ ಆದಿಕಾಲೀನವಾದ ಅದೃಷ್ಟವು "ಕುತಃ"= ಎಲ್ಲಿಂದ (ಯಾವು ದರಿಂದ) ಹುಟ್ಟುತ್ತದೆ? ಯಾವುದರಿಂದಲೂ ಹುಟ್ಟಲಾರದು ಹುಟ್ಟತಕ್ಕವು ಗಳಿಗೆಲ್ಲ ನಿಮಿತ್ತ ಕಾರಣವೆನಿಸಿದ ಅದೃಷ್ಟವು ಇಲ್ಲವಾದುದರಿಂದ, ಆದಿಕಾಲ ದಲ್ಲಿ ಹುಟ್ಟಬೇಕಾದ ಅದೃಷ್ಟದ ಉತ್ಪತ್ತಿಯೇ ಆಗಲಾರದು? ಹೀಗೆ ಅರ್ಥ ಇನ್ನು ಹುಟ್ಟುವುದೆಲ್ಲ ಅದೃಷ್ಟದಿಂದ ಹುಟ್ಟುತ್ತದೆಂದು ನಾವು ಹೇಳುವುದಿಲ್ಲ. ಆದರೆ– ಆದಿಕಾಲದಲ್ಲಿ ಹುಟ್ಟುವ, ಮಹದಾದಿಗಳ ಕಾರಣವಾದ ಅದೃಷ್ಟದಿಂದ ಬೇರೆಯಾದುದೇ (ಆದಿಕಾಲೀನ ಅದೃಷ್ಟವನ್ನು ಬಿಟ್ಟು ಉಳಿದುದೆಲ್ಲ) ಅದೃಷ್ಟ

— ವಿಶೇಷಾರ್ಥಪ್ರದೀಪಿಕಾ —

''ನೈವ ಅಸ್ಮಾಭಿಃ ಪಕ್ಷೀಕ್ರಿಯತೇ'- ಆದಿಕಾಲದಲ್ಲಿ ಜನನವುಳ್ಳ ಅದೃಷ್ಟವನ್ನು ಪಕ್ಷೀಕರಿಸಿ ಅಧಿಷ್ಠಾತೃವಿರುವನೆಂದು ಸಾಧನ ಮಾಡಿದರೂ, ಆಶ್ರಯಾಸಿದ್ಧಿ ದೋಷವಿಲ್ಲ ಹಾಗೂ ಈಶ್ವರಸಿದ್ಧಿಯೂ ಆಗುತ್ತದೆ ಆದರೂ ಪ್ರಲಯದಲ್ಲಿ ಆ ಈಶ್ವರನ ಅಸ್ತಿತ್ವವು ಸಿದ್ಧಿಸುವುದಿಲ್ಲ ಈ ಕಾರಣದಿಂದ ಹೀಗೆ ಹೇಳಿದ್ದು. ತರ್ಹಿ-ತತ್ ಎಂಬ ಪದಗಳನ್ನು ಹಿಂದೆ ಹೇಳಿದಂತೆ ಪರಿಷ್ಕಾರಾರ್ಥವಾಗಿ ಅನುವಾದಿಸಿರುತ್ತಾರೆ. ''ಉತ್ತರಂ'' ಎಂಬುದರ ಅರ್ಥವು "ಆದಿಕಾಲೀನಂ'' ಎಂಬುದು

सृष्ट्युपक्रमे जनिमत्पूर्वादृष्टान्नैवोत्पद्यते । अपि त्वदृष्टनिरपेक्षमेव । तद्युत्तरं महदादिकार्यमपि कुतोऽदृष्टादुत्पद्यत इत्यङ्गीकरणीयम् । अदृष्टवत्तस्याप्यदृष्टनिरपेक्षत्वसम्भवात् । अन्यथा कार्यत्वाददृष्टस्याप्यदृष्टापेक्षाऽङ्गीकार्येति ।

अस्तु तर्ह्यदृष्टं कारणमेव न भवतीति द्वितीयः पक्षः । अदृष्टमेव नास्तीति तृतीयो वा । उभयस्याप्यनुपलम्भात् । तथा चाश्र-

— ಪದಾರ್ಥದೀಪಿಕಾ —

ದಿಂದ ಹುಟ್ಟುವಂತಹದೆಂದು ಅಂಗೀಕರಿಸಿದುದರಿಂದ, ಹಿಂದೆ ಹೇಳಿದ ದೋಷವಿಲ್ಲವೆಂಬ ಆಶಂಕೆಯನ್ನು, ಹುಟ್ಟಿಸಿ, "ಪೂರ್ವಾದೃಷ್ಟಾತ್" ಇತ್ಯಾದಿ ಪದ್ಯದಿಂದ ದೂಷಿಸುತ್ತಾರ ಒಂದು ಪಕ್ಷದಲ್ಲಿ "ಪರಾದೃಷ್ಟಂ"– ಆದಿಕಾಲದಲ್ಲಿ ಹುಟ್ಟಿದ ಅದೃಷ್ಟವು, ತನಗಿಂತ ಪೂರ್ವದ ಅದೃಷ್ಟದಿಂದ ಹುಟ್ಟುವುದಿಲ್ಲವಾದರೆ, ಅಂದರೆ ಅದೃಷ್ಟವಿಲ್ಲದೆಯೇ ಹುಟ್ಟುತ್ತದೆಯಾದರ "ಉತ್ತರಂ"– ಮುಂದೆ ಹುಟ್ಟುತ್ತಿರುವ ಮಹದಾದಿ ಕಾರ್ಯವೂ ಅದೃಷ್ಟದಿಂದ ಹುಟ್ಟುತ್ತದೆಯೆಂಬುದನ್ನಾದರೂ ಏಕೆ ಒಪ್ಪತಕ್ಕದ್ದು ? ಆದಿಕಾಲೀನ ಅದೃಷ್ಟದ ಹಾಗೆ ಮಹದಾದಿ ಕಾರ್ಯಗಳಿಗೆ ಸಹ ಅದೃಷ್ಟವನ್ನವಲಂಬಿಸದೆ ಉತ್ಪತ್ತಿಯಾಗುವುದು ಸರಿಯೆನಿಸುತ್ತದೆ ಇಲ್ಲದಿದ್ದಲ್ಲಿ ಆ ಆದಿಕಾಲೀನ ಅದೃಷ್ಟವೂ ಹುಟ್ಟುತ್ತಿರುವುದರಿಂದ ಅದಕ್ಕೂ ಅದೃಷ್ಟದ ಅಪೇಕ್ಷೆಯು (ಅವಲಂಬನವು) ಇದೆಯೆಂಬುದನ್ನು ಅಂಗೀಕರಿಸಬೇಕಾಗುತ್ತದೆ . ಹೀಗೆ ಭಾವ

ಹಾಗಾದರೆ- ಇನ್ನು "ಅದೃಷ್ಟವು ಕಾರ್ಯದ ಕಾರಣವು ಅಲ್ಲವೇ ಅಲ್ಲ", ವೆಂಬ ಎರಡನೆಯ ಪಕ್ಷವು ಇರಲಿ ! ಅಥವಾ 'ಅದೃಷ್ಟವೇ ಇಲ್ಲ," ಎಂಬ ಮೂರನೆಯ ಪಕ್ಷವಾದರೂ ಇರಲಿ ! ಏಕೆಂದರೆ ಅದೃಷ್ಟವಾಗಲೀ ಅದೃಷ್ಟವು ಕಾರ್ಯದ ಕಾರಣವೆಂದಾಗಲೀ ಇವೆರಡೂ ಸಂಗತಿಗಳು ಪ್ರತ್ಯಕ್ಷದಿಂದ ಕಂಡು ಬಂದಿರುವುದಿಲ್ಲ. ಆದುದರಿಂದ ಅದೃಷ್ಟಪಕ್ಷಕ ಅನುಮಾನದ ಪಕ್ಷವು ಅಪ್ರಸಿದ್ಧ

— ವಿಶೇಷಾರ್ಥಪ್ರದೀಪಿಕಾ —

''ನೋಕ್ತದೋಷಃ' – ಆದಿಕಾಲದಲ್ಲಿರುವ ಅದೃಷ್ಟದ ಉತ್ಪತ್ತಿ ಯಾಗದಿರಲೆಂಬ ದೋಷವಿಲ್ಲವೆಂದು ಭಾವ "ಪರ್ವಾದೃಷ್ಟಂ" ಎಂಬುದು ಅನುವಾದ ಅದರ ವ್ಯಾಖ್ಯಾನವು– 'ಸೃಷ್ಟ್ಯುಪಕ್ರಮೇ ಜನಿಮತ್ ಎಂಬುದು ''ಕುತಃ' ಎಂಬುದಕ್ಕೆ ' ಅಂಗೀಕರಣೀಯಂ'' ಎಂಬುದರೊಡನೆ ಅನ್ವಯಿಸಿ, ''ಕುತಃ ಅಂಗೀಕರಣೀಯಂ" ಎಂಬುದಾಗಿ ಅರ್ಥಮಾಡಿಕೊಳ್ಳಬೇಕು ''ಅದೃಷ್ಟಸ್ಯಾಪಿ'= ಆದಿಕಾಲೀನ ಅದೃಷ್ಟಕ್ಕೂ

अदृष्टं कारणं नो चेल्लये मानं च किं भवेत् ॥

यासिद्धिरपरिहार्येत्याशङ्क्याह ॥ अदृष्टमिति । यदि प्रत्यक्षेणानुपलम्भाददृष्टं न स्यात् । सदपि वा कारणं न स्यात् । तदा लये च किं मानं भवेत् । प्रलयोऽप्यप्रामाणिकत्वाच्च स्यात् । न ह्यसावपि प्रत्यक्षेणोपलभ्यते । तथा चेश्वरादिकं प्रलयेऽसद्भवितुमर्हतीत्यप्रसिद्धविशेषणः पक्षः परस्यापि स्यात् ।

ಅದೃಷ್ಟವೇ ಇಲ್ಲ ಹಾಗು ಇದ್ದರೂ ಕಾರಣವಲ್ಲ ಹೀಗೆ ಹೇಳುವುದಾದರೆ ಆಗ ಪ್ರಳಯದ ವಿಷಯದಲ್ಲಿಯಾದರೋ ಪ್ರಮಾಣವು ಯಾವುದು ಆಗುವದು?

— ಪದಾರ್ಥದೀಪಿಕಾ —

ವಾಗಿದೆಯೆಂಬ ದೋಷವು ತಪ್ಪಿದುದಲ್ಲ. ಈ ಆಶಂಕೆಯನ್ನು ತೋರಿಸಿ "ಅದೃಷ್ಟಂ" ಇತ್ಯಾದಿ ಪದ್ಯದಿಂದ ನಿರಾಕರಿಸುತ್ತಾರೆ ಒಂದು ಪಕ್ಷದಲ್ಲಿ ಪ್ರತ್ಯಕ್ಷದಿಂದ ಕಂಡುಬಂದಿಲ್ಲವೆಂಬ ಕಾರಣದಿಂದ ಅದೃಷ್ಟವು ಇಲ್ಲವಾದರೆ--ಹಾಗು ಇದ್ದರೂ ಅದು ಕಾರಣವಾಗಲಾರದೆಂದಾದರ, ಆಗ ಲಯದ ವಿಷಯದಲ್ಲಿ ಪ್ರಮಾಣವು ಯಾವದು ಆಗುತ್ತದೆ ? (ಆದೀತು). ಪ್ರಮಾಣದಿಂದ ಸಿದ್ಧಿಸಲಿಲ್ಲವಾದುದರಿಂದ ಪ್ರಲಯವೂ ಇಲ್ಲವೆಂದಾಗಲಿ ! ಏಕೆಂದರೆ ಈ ಪ್ರಲಯವಾದರೋ ಪ್ರತ್ಯಕ್ಷದಿಂದ ಕಂಡು ಬರುವುದಿಲ್ಲ ಆದುದರಿಂದ. "ಈಶ್ವರಾದಿಕಂ ಪ್ರಲಯೇ ಅಸದ್ ಭವಿತು ಮರ್ಹತಿ" (ಈಶ್ವರ ಮುಂತಾದುವು ಪ್ರಲಯದಲ್ಲಿ ಇಲ್ಲದಿರುವಂತಹದು) ಎಂಬ ಪರನ ಅನುಮಾನದಲ್ಲಿ ಪಕ್ಷದಲ್ಲಿ ವಿಶೇಷಣವು (ಸಾಧ್ಯವು) ಅಪ್ರಸಿದ್ಧವೆಂಬ ದೋಷವು ಪರನಿಗೂ ಬರುತ್ತದೆ

— ವಿಶೇಷಾರ್ಥಪ್ರದೀಪಿಕಾ —

'ಅನುಪಲಂಭಾತ್" - ಇಲ್ಲಿ ''ಪ್ರತ್ಯಕ್ಷೇಣ' ಎಂಬುದು ಶೇಷವು ''ಆಶ್ರಯಾಸಿದ್ಧಿರಪರಿಹಾರ್ಯಾ"- ಕೊನೆಯ ಪಕ್ಷದ ಅಭಿಪ್ರಾಯದಿಂದ ಇದನ್ನು ಹೇಳಿದ್ದು. ಎರಡನೆಯ ಪಕ್ಷದಲ್ಲಿ ಹೇತುವಿನಲ್ಲಿ ''ಕಾರಣತ್ವೇ ಸತಿ" ಎಂಬ ವಿಶೇಷಣದ ಅಸಿದ್ಧಿಯನ್ನೂ ತಿಳಿಯಬೇಕು ಅಥವಾ ಎರಡನೆಯ ಪಕ್ಷದಲ್ಲಿ-ಕಾರಣವಾದ ಅದೃಷ್ಟವೇ ಪಕ್ಷೀಕರಿಸಲ್ಪಟ್ಟಿದೆ ಆದುದರಿಂದ ಈದೋಷವು (ಆಶ್ರಯಾಸಿದ್ಧಿಯು) ಎರಡೂ [illegible]ದಲ್ಲೂ ಅನ್ವಯಿಸಿದೆಯೆಂದು ತಿಳಿಯತಕ್ಕದ್ದು. "ಅಪ್ರಸಿದ್ಧವಿಶೇಷಣಃ ಪಕ್ಷಃ' ಪಕ್ಷದ ವಿಶೇಷಣವಾದ "ಪ್ರಲಯೇ ಅಸದ್‌ಭವಿತುಮರ್ಹತಿ"- ಎಂಬುದರ, ವಿಶೇಷಣವಾದ "ಪ್ರಲಯವು" ಅಸಿದ್ಧವೆಂದು ಅರ್ಥ

अथ मतम् । कालविप्रकर्षादनुपलभ्यमानोऽपि प्रलयोऽनुमान-सिद्धत्वादङ्गीकरणीयः । तथा हि । विश्वसन्तानोऽयं दृश्यसन्तान-शून्यैः सन्तानिभिरारब्धः । सन्तानत्वात् । आरणेयसन्तानवत् । वर्तमानब्रह्माण्डपरमाणवः पूर्वमुत्पादितसजातीयसन्तानान्तराः । नित्यत्वे

— ಪದಾರ್ಥದೀಪಿಕಾ —

ಇನ್ನು– "ಕಾಲವು ದೂರವಿರುವುದರಿಂದ ಕಣ್ಣಿಗ ಕಾಣಿಸದಿದ್ದರೂ ಪ್ರಲಯವನ್ನು ಅನುಮಾನ ( ಯುಕ್ತಿ ) ಸಿದ್ಧವಾದುದರಿಂದ ಅಂಗೀಕರಿಸತಕ್ಕದ್ದು. ಹೇಗೆಂದರೆ– ಈ ವಿಶ್ವಸಂತಾನವು, ಕಾಣಿಸುವ ಸಂತಾನದಿಂದ ರಹಿತವಾದ ಸಂತಾನಿಗಳಿಂದ ಹುಟ್ಟಿರುವಂತಹದು ಏಕೆಂದರೆ ಸಂತಾನವಾಗಿರುತ್ತದೆ. ಇದರಲ್ಲಿ ಆರಣೇಯ ಸಂತಾನವು, ದೃಷ್ಟಾಂತವು (೧) ಈಗಿರುವ ಬ್ರಹ್ಮಾಂಡದ ಪರಮಾಣುಗಳು, ಹಿಂದೆ ಹುಟ್ಟಿಸಲ್ಪಟ್ಟ ಸಂತಾನಗಳಿಗೆ ಸಜಾತೀಯವಾದ ಸಂತಾನಗಳುಳ್ಳವುಗಳು ಏಕೆಂದರೆ ನಿತ್ಯಗಳಾಗಿದ್ದು, ಆದರ ಆರಂಭಕ

— ವಿಶೇಷಾರ್ಥಪ್ರದೀಪಿಕಾ —

ಎರಡೂ ಅನುಮಾನಗಳು ದುಷ್ಟವಾಗಿ ಸಮವಾಗುವುದರಿಂದ. ಸತ್ಪ್ರತಿಪಕ್ಷವುಳ್ಳವುಗಳೆಂದು ತಿಳಿಯಬೇಕು

"ಆರಣೇಯಸಂತಾನವತ್"–ಅರಣಿಯಿಂದ ಉತ್ಪನ್ನವಾದ ಅಗ್ನಿಯ ಸಂತಾನದ ಹಾಗೆ, ಎಂದು ಅರ್ಥ ಸಂತಾನವೆಂದರೆ ಪರಂಪರೆಯೆಂದು ಅರ್ಥ ಈಗ; ಘಟಮುಂತಾದ ಕಾರ್ಯಸಮೂಹವು ಪ್ರವಾಹರೂಪದಿಂದ ಅನೇಕಕಾಲದಿಂದ ಇದ್ದೇ ಇರುತ್ತದೆ ಆ ಕಾರ್ಯಸಂತಾನವು, ಅದರಿಂದ ಹೀನವಾದ ಆರಂಭಕವಾದ ಸಮವಾಯಿಕಾರಣಪರಮಾಣುಗಳಿಂದ ಉಂಟಾದುದು, ಹೀಗೆ ಸಾಧನಮಾಡುವುದರಿಂದ, ವಿಶ್ವಸಂತಾನದ ಪೂರ್ವದಲ್ಲಿ ಪ್ರಲಯವಿದೆಯೆಂದು ಸಿದ್ಧಿಸುತ್ತದೆಯೆಂದು ಭಾವ. ಪ್ರಲಯಕಾಲದಲ್ಲಿರುವ ಸಂತಾನಿಗಳೇ ದೃಶ್ಯ ( ಕಾಣುವ ) ಸಂತಾನಗಳಿಲ್ಲದವುಗಳು ಅರಣಿಯಿಂದ ಉತ್ಪನ್ನವಾದ ಅಗ್ನಿಯ ಸಂತಾನವು, ದೃಶ್ಯಸಂತಾನಗಳಿಲ್ಲದಿರುವ, ಅರಣಿಯಲ್ಲಿ ಅಂತರ್ಗತವಾದ ಅಗ್ನಿಯ ಅವಯವಗಳಿಂದ ಹುಟ್ಟಿದುದು, ಹೀಗೆ ತಿಳಿಯಬೇಕು ಕಾರ್ಯ,ಕಾರಣ, ಈ ಎರಡರಲ್ಲಿರುವ ಧರ್ಮವುಳ್ಳದ್ದಾಗಿರುವುದು, ಸಂತಾನವೆನಿಸುವುದು ಇಂಥ ಸಂತಾನತ್ವವು, ದ್ವ್ಯಣುಕದಿಂದ ಆರಂಭಿಸಿ, ಅಂತ್ಯಾವಯವಿ (ಘಟ)ಪರ್ಯಂತವಾಗಿ ಸಮಾನವಾಗಿರುವದು ಹೀಗೆ ಲೀಲಾವತೀ ವರ್ಧಮಾನನು ಹೇಳುತ್ತಾನೆ "ಸಂತನೋತಿ 'ಎಂಬ ವ್ಯುತ್ಪತ್ತಿಯಿಂದ ಕಾರ್ಯಮಾತ್ರವು ಸಂತಾನವೆಂದೆನಿಸುತ್ತದೆಯೆಂದು ತರ್ಕಚಂದ್ರಿಕಾ

सति तद्वारम्भकत्वात् । प्रदीपपरमाणुवत् । सर्वे सन्तानाः कदा-

— ಪದಾರ್ಥ ದೀಪಿಕಾ —

ಗಳಂಗಿರುತ್ತವೆ ಇದರಲ್ಲಿ ಪ್ರದೀಪದ ಪರಮಾಣುಗಳು ದೃಷ್ಟಾಂತಗಳು. (೨) ಎಲ್ಲ ಸಂತಾನಗಳು, ಕದಾಚಿತ್ತಾಗಿ ( ಒಮ್ಮೊಮ್ಮೆ) ಏಕಕಾಲದಲ್ಲಿ

— ವಿಶೇಷಾರ್ಥಪ್ರದೀಪಿಕಾ —

ಕಾರನು ಹೇಳುತ್ತಾನೆ ಪರಮಾಣುವು ಯಾವಾಗಲೂ ದೃಶ್ಯಶೂನ್ಯವೇ ಆದುದ ರಿಂದ "ಸಂತಾನ" ಎಂಬ ವಿಶೇಷಣವನ್ನಿಡಲಾಗಿದಯೆಂದು ತಿಳಿಯಬೇಕು

"ಪೂರ್ವಮುತ್ಪಾದಿತಸಜಾತೀಯ ಸಂತಾನಾಂತರಾಃ' - ಇಲ್ಲಿ ಹಿಂದಿನ ಬ್ರಹ್ಮಾಂಡದ ಪರಮಾಣುಗಳಲ್ಲಿ, ಸಾಧ್ಯವು ಇಲ್ಲವಾದುದರಿಂದ ಬರುವ ಬಾಧ ದೋಷವನ್ನು ತಪ್ಪಿಸಲು "ವರ್ತಮಾನ" ಎಂಬ ವಿಶೇಷಣವನ್ನು "ಬ್ರಹ್ಮಾಂಡ ಎಂಬಲ್ಲಿ ಸೇರಿಸಿದ್ದು ಹಿಂದೆ ಹುಟ್ಟಿಸಲ್ಪಟ್ಟ ಸಂತಾನಗಳಿಗೆ ಸಜಾತೀಯಗ ಳಾದ ಬೇರೆ ಸಂತಾನವುಳ್ಳವುಗಳು, ಹೀಗ ಅರ್ಥ "ಸಂತಾನವಂತಃ" ಎಂಬ ಮಾತಿನಿಂದ, ಸಿದ್ಧಸಾಧನವು ಬರುವುದರಿಂದ, ಅದನ್ನು ತಪ್ಪಿಸಲು ಹಾಗೇ ಹೇಳದೆ, "ಸಂತನಾಂತರಾಃ" ಎಂಬುದಾಗಿ ಹೇಳಿದ್ದಾರೆ ಸಂತಾನ ಗಳು ಬೇರೆಬೇರೆಯೆಂದು ಸಿದ್ಧವಾದರೆ, ಒಂದರಲ್ಲಿ ಎರಡು ಸಂತಾನಗಳು ಸಂಭವಿಸಲಾರವು, ಆದುದರಿಂದ ಹಿಂದಿನದಕ್ಕೆ ನಾಶವಾಗಿದೆಯೆಂದು ತಿಳಿದು ಬರುವುದರಿಂದ, ಪ್ರಲಯವು ಸಿದ್ಧಿಸುತ್ತದೆಯೆಂದು ತಿಳಿಯಬೇಕು ಇಲ್ಲಿ- ಏಕಕಾಲದಲ್ಲಿ ಒಂದೇ ಕಡೆ ಎರಡು ಮೂರ್ತಪದಾರ್ಥಗಳು ಇರುವುದು ಅಸಂಭಾವಿತವಾದುದರಿಂದ, ಮೊದಲು ಉತ್ಪನ್ನವಾದ ಕಾರ್ಯವು ಇರುವಾಗ ಇನ್ನೊಂದು ಬ್ರಹ್ಮಾಂಡವು ಉತ್ಪನ್ನವಾಗಲಾರದು ಈ ಕಾರಣದಿಂದ, ಹಿಂದಿನ ಬ್ರಹ್ಮಾಂಡದ ಪ್ರಳಯವು ಆಗಿದಯೆಂದು, ಈ ಬ್ರಹ್ಮಾಂಡದ ಆರಂಭ ದಿಂದ ತಿಳಿದುಬರುತ್ತದೆ ಬ್ರಹ್ಮಾಂಡದ (ಅದರ) ಆರಂಭಕವಾಗಿರುವುದೆಂದಿಷ್ಟೇ ಹೇತುವೆಂದು ಹೇಳಿದರೆ, ಪೂರ್ವದಲ್ಲಿ ಪಟವನ್ನು ಹುಟ್ಟಿಸದ ಎಳೆ (ತಂತು)ಗಳಲ್ಲಿ ಹಿಂದೆ ಹುಟ್ಟಿಸಿದ ಸಂತಾನಗಳಿಂದ ಸಜಾತೀಯಗಳಾದ ಬೇರೆ ಸಂತಾನವುಳ್ಳವು ಗಳೆಂಬ ಸಾಧ್ಯವು ಇಲ್ಲವಾದುದರಿಂದ ಬರುವ ವ್ಯಭಿಚಾರವನ್ನು ತಪ್ಪಿಸಲು, 'ನಿತ್ಯತ್ವೇ ಸತಿ" ಎಂಬ ವಿಶೇಷಣವನ್ನಿಡಲಾಗಿದೆ ಅನಿತ್ಯವಾದ, ಹಿಂದೆ ಪಟವನ್ನು ಹುಟ್ಟಿಸದ ತಂತುಗಳಲ್ಲಿ ನಿತ್ಯತ್ವವಿಶೇಷಣವಿಲ್ಲವಾದುದರಿಂದ ವ್ಯಭಿ ಚಾರದೋಷವಿಲ್ಲ ಕೇವಲ ನಿತ್ಯತ್ವವು ಆಕಾಶದಲ್ಲಿದ್ದು, ಅಲ್ಲಿ ಸಾಧ್ಯವಿಲ್ಲ ವೆಂಬ ಕಾರಣದಿಂದ ಬರುವ ವ್ಯಭಿಚಾರದೋಷವನ್ನು ತಪ್ಪಿಸಲು, 'ತದಾರಂಭ

चित्सहोच्छिद्यन्ते । सन्तानत्वात् । प्रदीपसन्तानवत् । सर्व एव पर-
माणवः कदाचित्समग्रोपादेयप्रबन्धशून्याः । आरम्भकत्वात् । नष्ट-

— ಪದಾರ್ಥದೀಪಿಕಾ —

ಒಟ್ಟಿಗೆ ಉಚ್ಛೇದ (ನಾಶ) ಹೊಂದುತ್ತವೆ ಏಕೆಂದರೆ ಸಂತಾನಗಳಾಗಿರುತ್ತವೆ ಇದ
ರಲ್ಲಿ ಪ್ರದೀಪ ಸಂತಾನವು ದೃಷ್ಟಾಂತವು (೩) ಯಾವತ್ತೂ ಪರಮಾಣುಗಳು
ಒಮ್ಮೊಮ್ಮೆ, ಯಾವತ್ತೂ ತಂತಮ್ಮ ಉಪಾದೇಯ (ಕಾರ್ಯ) ಪ್ರಬಂಧಗ
ಳಿಲ್ಲದಿರುವವುಗಳು ಏಕೆಂದರೆ ಆರಂಭಕಗಳಾಗಿರುತ್ತವೆ ಇದರಲ್ಲಿ ನಷ್ಟವಾದ

— ವಿಶೇಷಾರ್ಥಪ್ರದೀಪಿಕಾ —

ಕತ್ವ" ವಿಶೇಷ್ಯವನ್ನು ಸೇರಿಸಿದ್ದು ಪ್ರದೀಪದ ಪರಮಾಣುಗಳು ತೈಜಸದ್ರವ್ಯ
ಗಳಾದುದರಿಂದ ಸಂಸರ್ಗ ಹೊಂದುವ ದ್ರವ್ಯವಾಗಿರುವುದೆಂಬ ದೃಷ್ಟಿಯಿಂದ,
ಹಿಂದೆ ಹುಟ್ಟಿದ ತೇಜೋಜಾತೀಯುಗಳೆನಿಸುತ್ತವೆಯಾದುದರಿಂದ ದೃಷ್ಟಾಂತಗಳಾ
ಗುತ್ತವೆಯೆಂದು ತಿಳಿಯಬೇಕು "ಸರ್ವೇ ಸಂತಾನಾಃ"– ಎಲ್ಲ ಕಾರ್ಯಪ್ರವಾ
ಹಗಳು ಪ್ರದೀಪವು, ಪ್ರತಿಕ್ಷಣಕ್ಕೂ ಪರಿಮಾಣದ ಭಿನ್ನತೆಯಿಂದ ಬೇರೆ
ಬೇರೆಯಾಗಿರುತ್ತದೆ ಆ ಪ್ರದೀಪದ ಸಂತತಿಯು ಒಮ್ಮೆ ಉಚ್ಛೇದ (ನಾಶ)
ಹೊಂದುತ್ತದೆ ಇದು ಹೇಗೋ ಹಾಗೆ, ಎಂಬುದಾಗಿ ಅರ್ಥ "ನಷ್ಟ"
ಎಂಬುದು "ಪವನ" (ಗಾಳಿಯು) ವಿಶೇಷಣವು

"ಸರ್ವಏವ ಪರಮಾಣವಃ"– ಸ್ಪರ್ಶವುಳ್ಳವುಗಳೆಂಬ (ಸ್ಪರ್ಶವಂತಃ) ವಿಶೇ
ಷಣವನ್ನೂ ಸೇರಿಸತಕ್ಕದ್ದು ಸ್ಪರ್ಶವುಳ್ಳ ಪರಮಾಣುಗಳೆಲ್ಲವೆಂದರೆ ಪೃಥಿವಿಯ,
ಜಲದ, ತೇಜಸ್ಸಿನ, ಗಾಳಿಯ ಪರಮಾಣುಗಳೆಂದು ಲಭಿಸುತ್ತದೆ "ಸ್ಪರ್ಶವುಳ್ಳ"
ಎಂಬ ವಿಶೇಷಣವನ್ನು ಸೇರಿಸದಿದ್ದಲ್ಲಿ, ಮನಸ್ಸಿನಲ್ಲಿ– "ಕದಾಚಿತ್ ಸಮಗ್ರೋ
ಪಾದೇಯ ಪ್ರಬಂಧಶೂನ್ಯತ್ವ"ವೆಂಬ ಸಾಧ್ಯವಿಲ್ಲದ್ದರಿಂದ ಅಂಶೇ ಬಾಧವು
ಬರುತ್ತದೆ ಆದ್ದರಿಂದ ಅದನ್ನು ಸೇರಿಸಬೇಕು ಯಾವದೋ ಒಂದು ಪರಮಾ
ಣುವಿನಲ್ಲಿ ಯಾವದೋ ಕಾರ್ಯವಿಲ್ಲದಿರುವುದರಿಂದ ಸಾಧ್ಯಪರ್ಯವಸಾನವಾಗಿ
ಅರ್ಥಾಂತರತ್ವವು ಬರುತ್ತದೆ ಅದನ್ನು ತಪ್ಪಿಸಲು "ಸರ್ವೇ" ಎಂಬುದಾಗಿ
ವಿಶೇಷಣವನ್ನು ಸೇರಿಸಿದ್ದಾರೆ "ಉಪಾದೇಯ" ಪದಕ್ಕೆ "ತಮ್ಮ ಉಪಾದೇಯ"
ವೆಂಬ ಅರ್ಥ ಹೇಳಬೇಕು ಇಲ್ಲದಿದ್ದಲ್ಲಿ– ಅವಾಂತರ ಪ್ರಲಯದಲ್ಲಿ ಗುಣಾದಿ
ಗಳಿರುವುದರಿಂದ, 'ಸಮಗ್ರ ಉಪಾದೇಯಶೂನ್ಯತ್ವ" ಸಾಧ್ಯವು ಬಾಧಿತವಾಗು
ತ್ತದೆ ಮತ್ತು ಬೇರೆಯದರ ಉಪಾದೇಯವು ಇಲ್ಲವಾದುದರಿಂದ ಸಿದ್ಧಸಾಧನ
ದೋಷವೂ ಬರುತ್ತದೆ ಶೂನ್ಯವೆಂದರೆ ಯಾವಾಗಾದರೊಮ್ಮೆ ಅದರ ಅಭಾವ
ವುಳ್ಳದ್ದೆಂದು ಅರ್ಥ. ಇಲ್ಲದಿದ್ದಲ್ಲಿ ಬಾಧವು ಬರುತ್ತದೆ ಅದನ್ನು ತಿಳಿಸಲು

**पवनारम्भकपरमाणुवत्। भूगोलकसन्तानः कदाचित्साकल्येनोच्छिद्यते। सन्तानत्वाद्दीपसन्तानवत् । इयं क्रिया स्वान्यावयविकालीनत्वानधि-**

— ಪದಾರ್ಥದೀಪಿಕಾ —

ಗಾಳಿಯ ಆರಂಭಕ (ಉತ್ಪಾದಕ) ಪರಮಾಣುಗಳು ದೃಷ್ಟಾಂತಗಳು (೪) ಭೂಗೋಲ ಸಂತಾನವು ಒಮ್ಮೆ ಸಮಗ್ರವಾಗಿ ನಾಶ ಹೊಂದುತ್ತದೆ ಏಕೆಂದರೆ- ಸಂತಾನವಾಗಿದೆ ಇದರಲ್ಲಿ ದೀಪಸಂತಾನವು ದೃಷ್ಟಾಂತವು (೫) ಈ ಕ್ರಿಯೆಯು, ತನ್ನಿಂದ ಬೇರೆಯಾದ ಅವಯವಿಯ ಕಾಲೀನವಾಗದ

— ವಿಶೇಷಾರ್ಥಪ್ರದೀಪಿಕಾ —

"ಕದಾಚಿತ್" ಎಂದು ಹೇಳಿದ್ದು ಆರಂಭಕವಾದುದೆಂದರೆ ದ್ರವ್ಯದ ಸಮವಾಯಿಕಾರಣವಾಗಿರುವುದೆಂದು ತಿಳಿಯಬೇಕು "ಇಯಂ ಕ್ರಿಯಾ"- ಘಟ ಮುಂತಾದುದರ ಕ್ರಿಯೆಯೊಂದನ್ನು ಇಲ್ಲಿ ಬುದ್ಧಿಯಲ್ಲಿಟ್ಟುಕೊಳ್ಳಬೇಕು "ಅನ್ಯ ಕ್ರಿಯಾವತ್" ಎಂದರೆ ಪಟ ಮುಂತಾದುದರ ಕ್ರಿಯೆಯು, ಅದು ದೃಷ್ಟಾಂತವು. "ಸ್ವಾನ್ಯಾವಯವಿಕಾಲೀನತ್ವಾನಧಿಕರಣ ಕಿಂಚಿತ್ಕಾಲೀನ ಕ್ರಿಯಾನ್ಯಾ'- "ಸ್ವಂ'- ಪಕ್ಷವೆನಿಸಿದ ಘಟಾದಿಕ್ರಿಯೆಯು "ಸ್ವಾನ್ಯತ್" ಅದರಿಂದ ಬೇರೆಯಾದ, ಅವಯವಿಯ ಕಾಲದಲ್ಲಿ ಯಾವದು ಇರುವುದೋ ಅಂತಹದು, ಅದರ ಕಾಲೀನತ್ವವಿಲ್ಲದ್ದು, ಯಾವದೋ ಕಾಲದಲಿರುವಂತಹದು ಇಂತಹ ಕ್ರಿಯೆಯಿಂದ ಭಿನ್ನವಾದುದು, ಹೀಗೆ ಅರ್ಥ ಅಂದರೆ ಅದರ ಭೇದಯುಕ್ತವಾದ (ಸ್ವಾನ್ಯತ್ವ ಸಹಿತವಾದ) ಅವಯವಿಕಾಲೀನತೆಯನ್ನು ಪಡೆಯದ, ಯಾವದೋ ಒಂದು ಕಾಲದಲ್ಲಿರುವ ಕ್ರಿಯೆಯಿಂದ ಭಿನ್ನವಾದುದೆಂದು ಸಾಧ್ಯದ ಅರ್ಥವು ಈಗಿನ ಕಾಲದ ಪಟ ಕ್ರಿಯೆಯು, ಘಟದ ಭೇದಸಹಿತವಾದ ಅವಯವಿ ಕಾಲೀನತ್ವವಿಲ್ಲದ ಹಾಗು ಯಾವದೋ ಕಾಲದಲ್ಲಿರುವ ಕ್ರಿಯೆಯೆಂದರೆ ಘಟಕ್ರಿಯೆ, ಅದರಿಂದ ಭಿನ್ನವಾಗಿದೆ, ಆದುದರಿಂದ ದೃಷ್ಟಾಂತದಲ್ಲಿ ಸಾಧ್ಯವು ಬರುತ್ತದೆ ಪಕ್ಷವಾದ ಘಟಕ್ರಿಯೆಯಾದರೋ- ಅದರ ಭೇದಸಹಿತವಾದ ಅವಯವಿಕಾಲೀನತೆಯಿಲ್ಲದ ಕ್ರಿಯಯೆಂದರೆ ಪರಮಾಣು ರೂಪ ಕ್ರಿಯೆ, ಅದರಿಂದ ಭೇದವಿದ್ದುದರಿಂದ ಸಾಧ್ಯದ ಪರ್ಯವಸಾನವಾಗುತ್ತದೆಂದು ತಿಳಿಯಬೇಕು. ಅಥವಾ "ಇಯಂ ಕ್ರಿಯಾ" ಎಂದರೆ ವರ್ತಮಾನಕ್ರಿಯೆ 'ಸ್ವಂ" ವರ್ತಮಾನಕ್ರಿಯೆ ಅದರ ಭೇದಸಹಿತವಾದ ಅವಯವಿಕಾಲೀನತ್ವವನ್ನು ಪಡೆಯದ ಕ್ರಿಯೆಯೆಂದರೆ ಪ್ರಳಯ ಕಾಲದಲ್ಲಿರುವ ಪರಮಾಣು ಕ್ರಿಯೆಯೋ! ಅದರ ಭೇದವಿರುವುದರಿಂದ ಪಕ್ಷದಲ್ಲಿ ಸಾಧ್ಯದ ಪರ್ಯವಸಾನವಾಗುತ್ತದೆ ದೃಷ್ಟಾಂತಗಳಾದ ಅತೀತ ಅನಾಗತ

करणकिञ्चित्कालीनाक्रियाऽन्या क्रियात्वादन्यक्रियावदिति । एवं तर्हि धर्माधर्मावपि स्वरूपतो विप्रकृष्टत्वादनुपलभ्यमानावपि देवदत्तशरीरादिकं देवदत्तविशेषगुणजन्यं कार्यत्वे सति देवदत्तभोगहेतुत्वात् । देव-

— ಪದಾರ್ಥದೀಪಿಕಾ —

(ಕಾಲೀನತೆಯಿಲ್ಲದ) ಯಾವದೋ ಒಂದು ಕಾಲದಲ್ಲಿರುವ ಕ್ರಿಯೆಯಿಂದ ಭಿನ್ನವಾ ಪ ಗು ಏಕಂದರೆ ಕ್ರಿಯೆಯಾಗಿದೆ ಇದರಲ್ಲಿ ಅನ್ಯಕ್ರಿಯೆಯು ದೃಷ್ಟಾಂತವು" (೬) ಹೀಗೆ ಅಭಿಪ್ರಾಯವಿರುವುದಾದರೆ– ಇದರ ಹಾಗ– ಧರ್ಮಾಧರ್ಮಗಳೂ ಸ್ವಭಾವತಃ ಇಂದ್ರಿಯಗಳಿಂದ ದೂರವಿರುವುದರಿಂದ, ಪ್ರತ್ಯಕ್ಷದಿಂದ ಕಾಣಿಸದಿದ್ದರೂ, "ದೇವದತ್ತನ ಶರೀರ ಮುಂತಾದುದು, ದೇವದತ್ತನ ವಿಶೇಷ ಗುಣದಿಂದ ಹುಟ್ಟಿರುತ್ತದೆ ಏಕೆಂದರೆ– ಕಾರ್ಯ (ಹುಟ್ಟಿದ್ದು) ವಾಗಿದ್ದು, ದೇವದತ್ತನ

— ವಿಶೇಷಾರ್ಥಪ್ರದೀಪಿಕಾ —

ಕಾಲಕ್ರಿಯೆಗಳಲ್ಲಿ— "ಸ್ವಂ" ವರ್ತಮಾನಕ್ರಿಯೆ, ಅದರ ಭೇದಸಹಿತವಾದ ಅವಯವಿಕಾಲೀನತೆಯಿಲ್ಲದ ಕ್ರಿಯೆಯೆಂದರೆ ವರ್ತಮಾನಕ್ರಿಯೆಯೇ ! ಆದರಿಂದ ಭೇದವಿರುವುದರಿಂದ, ಸಾಧ್ಯಪರ್ಯವಸಾನವಾಗುವುದೆಂದು ತಿಳಿಯಬೇಕು. ಅವಯವಿಯ ಕಾಲೀನತೆಯಿಲ್ಲದ ಯಾವದೋ ಒಂದು ಕಾಲದಲ್ಲಿರುವ ಕ್ರಿಯೆಯು ಸಿದ್ಧಿಯಾಗಲು, ಎಲ್ಲ ಅವಯವಿಗಳ ನಾಶಯುಕ್ತವಾದ ಕಾಲವೊಂದು ಸಿದ್ಧಿಸುತ್ತದೆ; ಅದೇ ಪ್ರಲಯವು ಹೀಗೆ ಭಾವವು. ಹೀಗೆ ಅನುಮಾನಗಳಿಂದ ಪ್ರಳಯವು ಸಿದ್ಧವಾಗಿದೆಯೆಂದು "ಇತಿ" ಶಬ್ದದ ಅರ್ಥ

"ದೇವದತ್ತಶರೀರಾದಿಕಂ" ಎಂಬಲ್ಲಿ "ಆದಿ" ಪದದಿಂದ, ಇಂದ್ರಿಯ, ಗೃಹ, ಆರಾಮ ಮುಂತಾದುದನ್ನು ಪರಿಗ್ರಹಿಸಬೇಕು ಅಂಶೇಬಾಧ, ಭಾಗಾಸಿದ್ಧಿಗಳನ್ನು ತಪ್ಪಿಸಲು ಪಕ್ಷದಲ್ಲಿ "ದೇವದತ್ತ" ಎಂಬ ಪದವನ್ನು ಸೇರಿಸಿದ್ದಾರೆ ಸಾಧ್ಯದಲ್ಲಿ ಈಶ್ವರನ ಗುಣದಿಂದ ಜನ್ಯವಾದುವರಿಂದ ಸಿದ್ಧಸಾಧನವನ್ನು ತಪ್ಪಿಸಲು, ವಿಶೇಷ ಪದವನ್ನು ಸೇರಿಸಿದ್ದಾರೆ ಅದರಿಂದ ಉದ್ದೇಶ್ಯವಾದುದು ಸಿದ್ಧಿಸುತ್ತದೆ ಏಕೆಂದರೆ ಆ ದೇವದತ್ತನ ವಿಶೇಷ ಗುಣವೆಂದರೆ– ಧರ್ಮ ಮುಂತಾದುದೇ ! ಹೀಗೆ ಅಭಿಪ್ರಾಯವಿದೆ ಕಾಲ ಆಕಾಶಗಳಲ್ಲಿ ವಿಶೇಷ ಗುಣಜನ್ಯತ್ವವೆಂಬ ಸಾಧ್ಯವಿಲ್ಲದಿದ್ದರೂ, ದೇವದತ್ತ ಭೋಗಹೇತುತ್ವವೆಂಬ ಹೇತುವು ಇರುವದರಿಂದ ಬರುವ ವ್ಯಭಿಚಾರವನ್ನು ತಪ್ಪಿಸಲು "ಕಾರ್ಯತ್ವೇ ಸತಿ" ಎಂಬ ವಿಶೇಷಣವನ್ನು ಸೇರಿಸಿದ್ದಾರೆ ಚೈತ್ರ ಶರೀರದಲ್ಲಿ ಕಾರ್ಯತ್ವವಿದ್ದರೂ ಸಾಧ್ಯವಿಲ್ಲದ್ದರಿಂದ (ದೇವದತ್ತನ ವಿಶೇಷಗುಣಜನ್ಯತ್ವ) ಬರುವ ವ್ಯಭಿಚಾರವನ್ನು ತಪ್ಪಿಸಲು

दत्तप्रयत्नजन्यस्रगादिवदित्याद्यनुमानेन विचित्रकार्यान्यथाऽनुपपत्त्या ज्योतिष्टोमेन स्वर्गकामो यजेत यो ब्राह्मणायावगुरेत्तं शतेन यातये-दित्यादिश्रुतसाध्यसाधनभावान्यथाऽनुपपत्त्या वा सिद्धत्वादभ्युप-गन्तव्याविति समं समाधानम् ।

— ಪದಾರ್ಥದೀಪಿಕಾ —

ಭೋಗಕಾರಣವಾಗಿದೆ ಇದರಲ್ಲಿ ದೇವದತ್ತನ ಪ್ರಯತ್ನದಿಂದ ಉಂಟಾದ [illegible] ಮುಂತಾದುದು ದೃಷ್ಟಾಂತವು." ಈ ಮುಂತಾದ ಅನುಮಾನಗಳಿಂದ, ವಿಚಿತ್ರ ಕಾರ್ಯಗಳ ಅನ್ಯಥಾ ಅನುಪಪತ್ತಿಯೆಂಬ ಯುಕ್ತಿಯಿಂದ, "ಜ್ಯೋತಿಷ್ಟೋಮೇನ ಯಜೇತ, ಯೋ ಬ್ರಾಹ್ಮಣಾಯಾವಗುರೇತ್ತಂ ಶಾತಯೇತ್" ಇತ್ಯಾದಿ ಶ್ರುತಿಯಲ್ಲಿ ಹೇಳಿದ ಸಾಧ್ಯಸಾಧನಭಾವದ ಅನ್ಯಥಾ ಅನುಪಪತ್ತಿಯೆಂಬ ಯುಕ್ತಿಯಿಂದ ಸಿದ್ಧವಾದುದರಿಂದ, ಅವುಗಳನ್ನು ಒಪ್ಪತಕ್ಕದ್ದೆಂಬ ಸಮಾಧಾನವು ಸಮಾನವಿರುತ್ತದೆ

— ವಿಶೇಷಾರ್ಥಪ್ರದೀಪಿಕಾ —

"ದೇವದತ್ತ ಭೋಗ ಹೇತುತ್ವ"ವೆಂಬ ವಿಶೇಷ್ಯಾಂಶವನ್ನು ಸೇರಿಸಿರುತ್ತಾರೆ "ವಿಚಿತ್ರ ಕಾರ್ಯಾನ್ಯಥಾನುಪಪತ್ತ್ಯಾ"= ಕಾರ್ಯದಲ್ಲಿ ವೈಚಿತ್ರ್ಯವು ಅದೃಷ್ಟದಲ್ಲಿಯ ವೈಚಿತ್ರ್ಯಮೂಲಕವಾದುದರಿಂದ, ಆ ಅನ್ಯಥಾ ಅನುಪಪತ್ತಿಯೆಂಬ ಯುಕ್ತಿಯಿಂದ ಧರ್ಮಾದಿರೂಪ ಅದೃಷ್ಟವು ಸಿದ್ಧಿಸುತ್ತದೆಯೆಂದು ಭಾವ "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ"– ಇದಕ್ಕೆ ಜ್ಯೋತಿಷ್ಟೋಮವೆಂಬ ಹೆಸರಿನ ಒಂದು ಯಾಗವು ಸ್ವರ್ಗದ ಸಾಧನವೆಂದು ಭಾವವು ಸಾಧನತ್ವವನ್ನು ತೃತೀಯಾ ವಿಭಕ್ತಿಯು (ಲಿಙ್ ಯುಕ್ತವಾದುದು) ಹೇಳುತ್ತದ "ಅವಗುರೇತ್" ಕೊಲ್ಲಲುದ್ಯುಕ್ತನಾಗುತ್ತಾನೋ! "ಶತೇನ ಯಾತಯೇತ್"— ಶತಯಾತನವೆಂಬ ನರಕದಲ್ಲಿ ಕೆಡಹಬೇಕು ಬ್ರಾಹ್ಮಣ ವಧೋದ್ಯೋಗವು ನರಕ ಸಾಧನವೆಂದು ಈ ವಾಕ್ಯದ ಅರ್ಥವು "ಶ್ರುತಸಾಧ್ಯಸಾಧನಭಾವಾನ್ಯಥಾನುಪಪತ್ತ್ಯಾ"– ಬೇಗನೇ ನಾಶ ಹೊಂದುವ ಯಾಗ, ಬ್ರಾಹ್ಮಣ ವಧೋದ್ಯೋಗ, ಮುಂತಾದುದು ಕಾಲಾಂತರದಲ್ಲಾಗಬೇಕಾದ ಸ್ವರ್ಗ ನರಕ ಮುಂತಾದುದರ ಕಾರಣವಾಗಬೇಕಾದರೆ ಮಧ್ಯದಲ್ಲಿ ಫಲಪರ್ಯಂತವಾಗಿರುವ ಧರ್ಮ ಅಧರ್ಮಾದಿಗಳು ಬೇಕು ಅವುಗಳಿಲ್ಲದೇ ಅವು ಕಾರಣವಾಗಲಾರವೆಂದು ಅರ್ಥ. ಆದುದರಿಂದ, ಹೀಗೆ ಶ್ರುತವಾದ ಸಾಧ್ಯ ಸಾಧನ ಭಾವವು ಆ ಧರ್ಮಾಧರ್ಮಗಳನ್ನು ಕಲ್ಪನ ಮಾಡಿಸು (ಒಪ್ಪಿಸಿ ಕೊಡು)ತ್ತದೆ ಹೀಗೆ ಭಾವ.

अथ मन्यसे नानुमानादिना धर्मादिसिद्धिः । तस्याभासत्वात् । तथा हि । देवदत्तशरीरादेर्देवदत्तविशेषगुणजन्यत्वं किं साक्षात्साध्यमुत परम्परया वा । नाद्यः । धर्माधर्मयोरप्यारम्भकप्रेरणादिरूपेणैवोपयोगाङ्गीकारात् । देवदत्तशरीरं न साक्षाद्देवदत्तविशेषगुणजन्यं शरीरत्वाद्यज्ञदत्तशरीरवदिति सत्प्रतिपक्षत्वाच्च । द्वितीये तु जन्मान्तरीयप्रयत्नाराधितदेवताद्वारेणोपपत्तेरर्थान्तरता । देवदत्तविशेषगुणजन्यतया विनाऽप्यकाशादेरिवेश्वरेच्छया देवदत्तभोगहेतुता सम्भवतीत्यप्रयोजकता च ।

— ಪದಾರ್ಥದೀಪಿಕಾ —

ಇನ್ನು "ಅನುಮಾನಾದಿಗಳಿಂದ ಧರ್ಮಾದಿಗಳ ಸಿದ್ಧಿಯಾಗುವುದಿಲ್ಲ. ಏಕೆಂದರೆ-ಅನುಮಾನಾದಿಗಳು ದೋಷದುಷ್ಟವಾಗಿವೆ ಹೇಗೆಂದರೆ-"ದೇವದತ್ತನ ಶರೀರಾದಿಗಳಿಗೆ ಅವನ ವಿಶೇಷಗುಣದಿಂದ ಜನ್ಯವಾಗಿರುವುದು" ಎಂಬುದು ಸಾಕ್ಷಾತ್ ಸಾಧ್ಯವೋ ಅಥವಾ ಪರಂಪರೆಯಿಂದ ಸಾಧ್ಯವೋ ? ಮೊದಲನೆಯ ಪಕ್ಷವು ಸರಿಯಲ್ಲ ಏಕೆಂದರೆ- ಧರ್ಮ ಅಧರ್ಮ ಮುಂತಾದುದಕ್ಕೂ ಆರಂಭಕಗಳ (ಪರಮಾಣು ಮುಂತಾದುದರ) ಪ್ರೇರಣೆ ಮುಂತಾದ ರೂಪದಿಂದಲೇ ಉಪಯೋಗವನ್ನು ಅಂಗೀಕರಿಸುತ್ತದೆ. "ದೇವದತ್ತನ ಶರೀರಮುಂತಾದುದು ಸಾಕ್ಷಾತ್ತಾಗಿ ದೇವದತ್ತನ ವಿಶೇಷಗುಣದಿಂದ ಜನ್ಯವಾದುದಲ್ಲ. ಏಕೆಂದರೆ ಶರೀರವಾಗಿದೆ ಯಜ್ಞದತ್ತನ ಶರೀರವು ಇದರಲ್ಲಿ ದೃಷ್ಟಾಂತವು" ಹೀಗ ಸತ್ಪ್ರತಿಪಕ್ಷ ಅನುಮಾನವು ಬರುತ್ತದೆ ಎರಡನೆಯ ಪಕ್ಷದಲ್ಲಿಯಾದರೋ ಜನ್ಮಾಂತರದ ಪ್ರಯತ್ನಗಳಿಂದ ಆರಾಧಿಸಲ್ಪಟ್ಟ ದೇವತೆಗಳ ಪ್ರಸಾದದ ದ್ವಾರದಿಂದ ಹುಟ್ಟುತ್ತದೆಂದು ಹೇಳಿದರೆ ಯುಕ್ತವಾಗುತ್ತದೆ ಆದುದರಿಂದ ಅರ್ಥಾಂತರತ್ವ ದೋಷವು ಬರುತ್ತದೆ ದೇವದತ್ತನ ವಿಶೇಷಗುಣದಿಂದ ಹುಟ್ಟಿದುದೆಂಬುದನ್ನು ಅಂಗೀಕರಿಸದಿದ್ದರೂ, ಆಕಾಶಾದಿಗಳಿಗೆ ಇರುವ ಹಾಗೆ ಈಶ್ವರನ ಇಚ್ಛೆಯಿಂದ

— ವಿಶೇಷಾರ್ಥಪ್ರದೀಪಿಕಾ —

"ಆರಂಭಕಪ್ರೇರಣಾದಿರೂಪೇಣೈವ"-- ಅದೃಷ್ಟವಾದಿಯೂ ಸಹ ದೃಷ್ಟವಾದಸಾಮಗ್ರಿಯ ಮುಖಾಂತರದಿಂದಲೇ ಧರ್ಮಾಧರ್ಮಾದಿಗಳ ಉಪಯೋಗವನ್ನು ಅಂಗೀಕರಿಸಿದ್ದಾನೆ ಆದುದರಿಂದ ಹೀಗೆ ಹೇಳಿದ್ದು "ಯಜ್ಞದತ್ತ ಶರೀವತ್"- ಯಜ್ಞದತ್ತನ ಶರೀರಾದಿಗಳು ದೇವದತ್ತನ ವಿಶೇಷ ಗುಣಗಳಿಂದ ಜನ್ಯವಲ್ಲ ಆದುದರಿಂದ ದೃಷ್ಟಾಂತದಲ್ಲಿ ಸಾಧ್ಯ ಪರ್ಯವಸಾನವಾಗುವದು

कार्यवैचित्र्यं च दृष्टकारणवैचित्र्यादेवोपपद्यते । आदिकालीनं च तत्तत्प्रागभाव एव वैचित्र्याङ्गीकारेण । स्वर्गयागादेः साध्यसाधनभाव-श्रवणं त्वसिद्धमेव । योग्यताविरहात् । अन्यथाख्यातिमाश्रित्याभ्यु-पगमेऽप्यन्यथासिद्धम् । यागाद्याराधितावज्ञातदेवताद्वारेण स्वर्गाद्युप-

— ಪದಾರ್ಥದೀಪಿಕಾ —

ದೇವದತ್ತನ ಭೋಗಕಾರಣತ್ವವು ದೇವದತ್ತ ಶರೀರಕ್ಕೆ ಸಂಭವಿಸುತ್ತದೆ ಈ ಕಾರಣದಿಂದ ಹೇತುವಿಗ ಸಾಧ್ಯವನ್ನು ಕುರಿತು ಪ್ರಯೋಜಕತ್ವವು ಇರುವುದಿಲ್ಲ (ಅಪ್ರಯೋಜಕತ್ವವು ಇದೆ) ಮತ್ತು ಕಾರ್ಯದಲ್ಲಿ ವೈಚಿತ್ರ್ಯವಾದರೋ ದೃಷ್ಟ (ಕಣ್ಣಿಗೆ ಕಾಣಿಸುವ) ಕಾರಣಗಳಲ್ಲಿರುವ ವೈಚಿತ್ರ್ಯದಿಂದಲೇ ಸರಿಯೆನಿಸುತ್ತದ ಮತ್ತು ಆದಿಕಾಲದಲ್ಲಿಯ ಕಾರ್ಯ ವೈಚಿತ್ರ್ಯವೂ ಆಯಾಯಕಾರ್ಯಗಳ ಪ್ರಾಗಭಾವಗಳಲ್ಲಿಯೇ ವೈಚಿತ್ರ್ಯವನ್ನು ಅಂಗೀಕರಿಸುವುದರಿಂದ ಯುಕ್ತವಾಗುತ್ತದೆ, ಸ್ವರ್ಗ, ಯಾಗ, ಈ ಮುಂತಾದವುಗಳಲ್ಲಿ ಸಾಧ್ಯಸಾಧನಭಾವವು ಶ್ರುತಿಯಿಂದ ತಿಳಿದು ಬರುವುದೆಂಬ ಸಂಗತಿಯು ಅಸಿದ್ಧವೇ ಆಗಿದೆ ಏಕೆಂದರೆ– ಯೋಗ್ಯತೆಯು ಇರುವುದಿಲ್ಲ. ಅನ್ಯಥಾಖ್ಯಾತಿಯನ್ನು ಅಂಗೀಕರಿಸಿ, ಒಪ್ಪಿದರೂ ಅನ್ಯಥಾಸಿದ್ಧವಾಗುತ್ತದೆ ಯಾಗಾದಿಗಳಿಂದ ಆರಾಧಿಸಲ್ಪಟ್ಟ ಹಾಗು ಅವಮಾನಗೊಳಿಸ

— ವಿಶೇಷಾರ್ಥಪ್ರದೀಪಿಕಾ —

ದೃಷ್ಟಾರ್ಥಾಪತ್ತಿಯನ್ನು 'ಕಾರ್ಯ ವೈಚಿತ್ರ್ಯಂ" ಇತ್ಯಾದಿ ವಚನದಿಂದ ಹೇಳುತ್ತಾರೆ ಆದಿಕಾಲದ ಕಾರ್ಯ ವೈಚಿತ್ರ್ಯವು ಹೇಗೆ ಎಂಬುದನ್ನು "ಆದಿಕಾಲೀನಂ ಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಇಲ್ಲಿ 'ಕಾರ್ಯವೈಚಿತ್ರ್ಯಂ" ಎಂಬುದರ ಅನುಕರ್ಷಣವಿದೆ "ವೈಚಿತ್ರ್ಯಾಂಗೀಕಾರೇಣ" – ಇಲ್ಲಿ "ಉಪಪದ್ಯತೇ" ಎಂಬುದನ್ನು ಅನುಕರ್ಷಣಮಾಡಬೇಕು "ಯೋಗ್ಯತಾ ವಿರಹಾತ್" – ನಶಿಸಿ ಹೋಗುವ ಯಾಗಾದಿಗಳಿಗೆ ಮುಂದಾಗುವ ಫಲದ ಕಾರಣತ್ವವು ಬಾಧಿತವಾಗಿದೆಯೆಂದು ಭಾವ "ಅನ್ಯಥಾಖ್ಯಾತಿಮಾಶ್ರಿತ್ಯ" - ಯೋಗ್ಯತೆಯ ಬಗ್ಗೆ ಭ್ರಮೆಯು ಬಂದಿದೆಯೆಂದು ತಿಳಿದು ಸಾಧ್ಯಸಾಧನಭಾವದ ತಿಳಿವಳಿಕೆಯಾಗಿದೆಯೆಂದು ಒಪ್ಪಿದರೂ, ಎಂದು ಅರ್ಥ ಶ್ರುತಿಯು ಪ್ರಾಮಾಣ್ಯವಿದ್ದುದರಿಂದ, ಯೋಗ್ಯತಾಭ್ರಮದಿಂದ ತಿಳಿದು ಬಂದರೂ ಸಾಧ್ಯಸಾಧನ ಭಾವವನ್ನು ಅದೃಷ್ಟದಿಂದ ನಿರ್ವಾಹ ಮಾಡಬಾರದು; ಬೇರೆ ರೀತಿಯಿಂದಲೇ ನಿರ್ವಹಿಸ ಬೇಕೆಂಬುದಾಗಿ "ಅನ್ಯಥಾ ಸಿದ್ಧಂ" ಎಂಬ ಮಾತಿನಿಂದ ಹೇಳುತ್ತಾರೆ ಅದನ್ನು "ಯಾಗಾದಿ" ಇತ್ಯಾದಿ ವಾಕ್ಯದಿಂದ ವಿಶದ

पत्तेरिति । एवं तर्हि प्रलयसाधकानुमानानामप्याभासत्वान्न तैस्तत्सिद्धिरिति तुल्यमुत्तरम् । तथा हि। विमतः कालोऽवयवियुक्तः कालत्वादिदानीन्तनकालवत् । विमतो ब्राह्मणो ब्राह्मणपूर्वको ब्राह्मणत्वात्सम्मतवदित्यादिना सत्प्रतिपक्षं तावदुक्तानुमानजातम् ।

ननु प्रलयकालपक्षीकृतावाश्रयासिद्धिः । अन्यथा सिद्धसाधनम् ।

— ಪದಾರ್ಥದೀಪಿಕಾ —

ಲ್ಪಟ್ಟ ದೇವತೆಗಳ ಮುಖಾಂತರದಿಂದ ಸ್ವರ್ಗಾದಿಗಳಾಗುವುದು ಯುಕ್ತವೆನಿಸುತ್ತದೆ" ಹೀಗೆ ಬಗೆಯುವಿಯಾದರೆ– ಹಾಗಾದಲ್ಲಿ ಪ್ರಲಯಸಾಧಕ ಅನುಮಾನಗಳೂ ಆಭಾಸ (ದುಷ್ಟ) ಗಳಾಗುವುದರಿಂದ ಅವುಗಳಿಂದ ಪ್ರಲಯದ ಸಿದ್ಧಿಯಿಲ್ಲವೆಂಬ ಉತ್ತರವು ಸಮಾನವಿದೆ ಹೇಗೆಂದರೆ— " ಸಂದಿಗ್ಧವಾದ ಕಾಲವು ಅವಯುವಿಯಿಂದ ಯುಕ್ತವಾಗಿದೆ ಏಕೆಂದರೆ– ಕಾಲವಾಗಿದೆ ಈಗಿರುವ ಕಾಲವು ಇದರಲ್ಲಿ ದೃಷ್ಟಾಂತವು ಸಂದಿಗ್ಧನಾದ ಒಬ್ಬ ಬ್ರಾಹ್ಮಣನು ಬ್ರಾಹ್ಮಣಪೂರ್ವಕನು. ( ಬ್ರಾಹ್ಮಣನಿಂದ ಹುಟ್ಟಿದವನು ) ಏಕೆಂದರೆ ಬ್ರಾಹ್ಮಣನಾಗಿರುತ್ತಾನೆ ಇದರಲ್ಲಿ ಈಗಿನ ಕಾಲದ ಬ್ರಾಹ್ಮಣನು ದೃಷ್ಟಾಂತ" ಈ ಮುಂತಾದ ಅನುಮಾನಗಳಿಂದ ಪ್ರತಿಪಕ್ಷವು ಬಂದು ಹಿಂದೆ ಹೇಳಿದ ಅನುಮಾನಗಳು ದುಷ್ಟವಾಗುತ್ತವೆ

ಇನ್ನು "ಪ್ರಲಯ ಕಾಲವನ್ನು ಪಕ್ಷೀಕರಿಸಿದಲ್ಲಿ ಆಶ್ರಯಾಸಿದ್ಧಿಯೆಂಬ ದೋಷವು ವರ್ತಮಾನಕಾಲವನ್ನು ಪಕ್ಷೀಕರಿಸಿದಲ್ಲಿ ಸಿದ್ಧಸಾಧನವೆಂಬ ದೋಷವು ಇದರ

— ವಿಶೇಷಾರ್ಥಪ್ರದೀಪಿಕಾ —

ಪಡಿಸುತ್ತಾರೆ. " ಆದಿ " ಪದದಿಂದ ಬ್ರಾಹ್ಮಣಾವಗೋರಣ ಮುಂತಾದುದನ್ನು ಪರಿಗ್ರಹಿಸಬೇಕು " ಆರಾಧಿತಾವಜ್ಞಾತ ದೇವತಾದ್ವಾರೇಣ " – ಯಾಗದಿಂದ ಆರಾಧಿಸಲ್ಪಟ್ಟ ಹಾಗು " ಆದಿ " ಪದದಿಂದ ಗ್ರಹಿಸಲ್ಪಟ್ಟ ಅವಗೋರಣ ( ವಧೋದ್ಯೋಗ ) ದಿಂದ ಅವಜ್ಞೆಗೊಳಮಾಡಲ್ಪಟ್ಟ, ಎಂಬುದಾಗಿ ಕ್ರಮವಾಗಿ ಅನ್ವಯಿಸಬೇಕು. ಇಂಥ ದೇವತೆಗಳ ಪ್ರೀತಿ ಹಾಗು ಕೋಪಗಳ ಮುಖಾಂತರದಿಂದ, 'ಸ್ವರ್ಗಾದ್ಯುಪಪತ್ತೇಃ " – ಸ್ವರ್ಗ ನರಕ ಮುಂತಾದುದು ಸಂಭವಿಸುತ್ತದೆ, ಹೀಗೆ ಭಾವ

"ವಿಮತೋ ಬ್ರಾಹ್ಮಣಃ"– ಇಲ್ಲಿ ಸರ್ಗಾದಿಕಾಲದ ಬ್ರಾಹ್ಮಣನೆಂದು ಅರ್ಥಮಾಡಬೇಕು. "ಏವಂ" - ಆಶ್ರಯಾಸಿದ್ಧಿಯು 'ಅನ್ಯಥಾ ಚ ದೋಷಃ"

एवमाद्यब्राह्मणपक्षीकारे । अन्यथा च दोष इति चेन्न । पर्वतोऽग्निमा-
नित्यादावप्यग्निमदनाग्निमत्पक्षदूषणसम्भवेन सर्वानुमानोच्छेदप्रसङ्गात् ।
नन्वग्निमत्त्वादिव्यतिरेकेणाप्यस्ति पर्वतादेः स्वरूपं शक्यं च विशेषा-
न्तरेणावधारयितुम् । तत्कथं दोषावकाश इति चेत् । तत्किमवय-
विसम्बन्धासम्बन्धौ विहाय कालविशेषस्य स्वरूपमेव नास्ति । ब्राह्मण-
व्यक्तेर्वाऽऽद्यत्वानाद्यत्वे विहाय । अवधारणं च कालादेर्हिरण्यगर्भापव-
( र्गोत्तर ) र्गानन्तरभावित्वादिना भविष्यति ।

— ಪದಾರ್ಥದೀಪಿಕಾ —

ಹಾಗೆ ಆದ್ಯಬ್ರಾಹ್ಮಣನನ್ನು ಪಕ್ಷೀಕರಿಸುವ ಅನುಮಾನದಲ್ಲಿ ಆಶ್ರಯಾಸಿದ್ಧಿಯೂ ಈಗಿನಕಾಲದ ಬ್ರಾಹ್ಮಣನನ್ನು ಪಕ್ಷೀಕರಿಸಿದಲ್ಲಿ ಸಿದ್ಧಸಾಧನವೂ ಬರುತ್ತದ." ಹೀಗೆ ಹೇಳಬಾರದು ಏಕೆಂದರೆ "ಪರ್ವತವು ಅಗ್ನಿಯುಳ್ಳದ್ದು, ಅಗ್ನಿಯಿಲ್ಲದ್ದು, ಎಂಬ ಎರಡೂ ಪಕ್ಷಗಳ ದೂಷಣವು ಸಂಭವಿಸುವುದರಿಂದ ಸಕಲ ಅನುಮಾನಗಳಿಗೆ ಉಚ್ಛೇದವು ಬರಲೆಂಬ ಪ್ರಸಂಗವು ಬರುತ್ತದೆ.

ಇನ್ನು— " ಅಗ್ನಿಯುಳ್ಳದ್ದಾಗಿರುವುದು " ಈ ಮುಂತಾದ ಸ್ಥಿತಿಯನ್ನು ಬಿಟ್ಟೂ ಸಹ ಪರ್ವತ ಮುಂತಾದುದರ ಸ್ವರೂಪವು ಇದೆ ಮತ್ತು ಬೇರೆ ಧರ್ಮಾಂತರಗಳುಳ್ಳದ್ದಾಗಿದೆಯೆಂಬುದಾಗಿ ಅವಧರಿಸುವುದೂ ಶಕ್ಯವಾಗಿದೆ. ಆದುದರಿಂದ ದೋಷವು ಹೇಗೆ ಸಂಭವಿಸುತ್ತದೆ," ಹೀಗೆ ಶಂಕಿಸುವುದಾದರೆ– ಹಾಗಾದರೆ ಅವಯವಿಯ, ಸಂಬಂಧವಿರುವುದು, ಇಲ್ಲದಿರುವುದು, ಇವುಗಳನ್ನು ಬಿಟ್ಟು ಬೇರೆಯಾದ ಸ್ವರೂಪವೇ ಕಾಲಕ್ಕೆ ಇಲ್ಲವೇನು ? ಹಾಗು ಬ್ರಾಹ್ಮಣ ವ್ಯಕ್ತಿಗೆ ಮೊದಲಿನವನಾಗಿರುವುದು, ಆಗದಿರುವುದು, ಇವುಗಳನ್ನು ಬಿಟ್ಟು ಬೇರೆಯಾದ ಸ್ವರೂಪವಿಲ್ಲವೇನು ? ಕಾಲ ಮುಂತಾದುದರ ಪಕ್ಷತ್ವದ ಅವಧಾರಣವು ಹಿರಣ್ಯಗರ್ಭೋತ್ತರಕಾಲಭಾವಿತ್ವ ಮುಂತಾದವುಗಳಿಂದ ಆಗುವದು.

— ವಿಶೇಷಾರ್ಥಪ್ರದೀಪಿಕಾ —

ಈ ಕಾಲದ ಬ್ರಾಹ್ಮಣನನ್ನು ಪಕ್ಷೀಕರಿಸಿದಲ್ಲಿ ಸಿದ್ಧಸಾಧನದೋಷವು ಹೀಗೆ ಅರ್ಥ "ದೂಷಣಸಂಭವೇನ" – ಆಶ್ರಯಾಸಿದ್ಧಿ ಮುಂತಾದ ರೂಪದೂಷಣಗಳು ಸಂಭವಿಸುವುದರಿಂದ

"ವಿಶೇಷಾಂತರೇಣ" – "ಏಷ ಪರ್ವತಃ' (ಇದು ಪರ್ವತ) ಎಂಬುದಾಗಿ ಪರ್ವತತ್ವರೂಪದಿಂದ "ಆದ್ಯತ್ವಾನಾದ್ಯತ್ವೇ ವಿಹಾಯ"– ಇಲ್ಲಿ "ಸ್ವರೂಪಮೇವ

किञ्च प्रथमप्रयोगे विश्वशब्देन किं ब्रह्माण्डमभिप्रेयते सकलकार्याणि वा । नाद्यः । आश्रयासिद्धेः । प्रलयमनभ्युपगच्छता ब्रह्माण्डस्यानङ्गीकृतत्वात् । ब्रह्माण्डाभावेऽपि कार्यान्तरावस्थितिसम्भवेन

— ಪದಾರ್ಥದೀಪಿಕಾ —

ಮತ್ತು ಮೊದಲನೆಯ ಪ್ರಯೋಗದಲ್ಲಿ "ವಿಶ್ವ" ಶಬ್ದದಿಂದ ಅಭಿಪ್ರಾಯ ಪಟ್ಟಿರುವದು ಯಾವದು? ಬ್ರಹ್ಮಾಂಡವೋ? ಅಥವಾ ಸಕಲಕಾರ್ಯಗಳೋ? ಮೊದಲನೆಯ ಪಕ್ಷವು ಸರಿಯಾದುದಲ್ಲ. ಏಕೆಂದರೆ ಆಶ್ರಯಾಸಿದ್ಧಿಯು ಏಕೆಂದರೆ ಪ್ರಲಯವನ್ನು ಅಂಗೀಕರಿಸದವನು ಬ್ರಹ್ಮಾಂಡವನ್ನು ಅಂಗೀಕರಿಸಿಲ್ಲ ಮತ್ತು ಬ್ರಹ್ಮಾಂಡವಿಲ್ಲದಿದ್ದರೂ ಬೇರೆ ಕಾರ್ಯಗಳಿಗೆ ಅವಸ್ಥಿತಿಯು (ಉಳಿಯೋಣ—ಇರುವಿಕೆ) ಸಂಭವಿಸುವುದರಿಂದ ಪ್ರಲಯದ ಸಿದ್ಧಿಯು ಆಗುವುದಿಲ್ಲ

— ವಿಶೇಷಾರ್ಥಪ್ರದೀಪಿಕಾ —

ನಾಸ್ತಿ" ಎಂಬುದರ ಅನುಕರ್ಷವಿದೆ ಸ್ವರೂಪವಿದೆ; ಆದರೆ ಅವಧಾರಣವಿಲ್ಲವೆಂಬ ಆಶಂಕೆಯನ್ನು "ಅವಧಾರಣಂಚ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ಹಿರಣ್ಯಗರ್ಭಾಪವರ್ಗೋತ್ತರಭಾವಿತ್ವಾದಿನಾ" – ಇಲ್ಲಿ 'ಆದಿ" ಪದದಿಂದ, ಚತುರ್ಮುಖಬ್ರಹ್ಮತ್ವವನ್ನು ಪರಿಗ್ರಹಿಸಬೇಕು ಅರಣ್ಯದಲ್ಲಿ ಅಗ್ನಿಯು ಇಲ್ಲದಿದ್ದರೂ ಹೇಗೆ ಅಗ್ನಿಯ ಉತ್ಪತ್ತಿಯೋ, ಗೊಬ್ಬರ ಮುಂತಾದ ವಿಜಾತೀಯದಿಂದ ಹುಟ್ಟಿದವುಗಳಿಗೂ ಸಹ ಹೇಗ ವೃಶ್ಚಿಕತ್ವತ್ವಾದಿ ಜಾತಿಯು ಹೇಗೆ ಬರುವುದೋ ಹಾಗೆಯೇ ಅಬ್ರಾಹ್ಮಣ (ಬ್ರಾಹ್ಮಣನಲ್ಲದವ) ನಿಂದ ಸರ್ಗಾದಿ ಕಾಲದ ಬ್ರಾಹ್ಮಣನಲ್ಲಿ. ವಿಶಿಷ್ಟತರಹದ ಅದೃಷ್ಟದಿಂದ ಒದಗಿದ ಪರಮಾಣುಗಳಿಂದ ಬ್ರಾಹ್ಮಣತ್ವವು ಬರುವುದರಿಂದ ( ಉಂಟಾಗುವುದರಿಂದ ) ಬ್ರಾಹ್ಮಣತ್ವವು ಬ್ರಾಹ್ಮಣಪೂರ್ವಕವಾಗಿರಬೇಕೆಂಬ ವ್ಯಾಪ್ತಿ (ನಿಯಮ)ಯು ಇಲ್ಲವಾದುದರಿಂದ, ಬ್ರಾಹ್ಮಣತ್ವ ಯುಕ್ತಿಯಿಂದ ಬ್ರಾಹ್ಮಣ ಪೂರ್ವಕತ್ವವನ್ನು ಸಾಧನಮಾಡಲು ಬರುವುದಿಲ್ಲ ಈ ಅರುಚಿಯಿಂದ ಬೇರೆ ದೂಷಣವನ್ನು "ಕಿಂಚ' ಇತ್ಯಾದಿ ವಚನದಿಂದ ಹೇಳುತ್ತಾರೆ 'ಕಾರ್ಯಾಂತರಾವಸ್ಥಿತಿ ಸಂಭವೇನ"– "ದೃಶ್ಯಸಂತಾನಶೂನ್ಯೈರಾರಬ್ಧಃ" ಎಂಬುದಕ್ಕೆ "ದೃಶ್ಯ (ಕಾಣುವ) ಬ್ರಹ್ಮಾಂಡಗಳಿಂದ ರಹಿತವಾದ', ಎಂಬ ಅರ್ಥವನ್ನು ಹೇಳಿದ್ದಾಗುತ್ತದೆ ಇದರಿಂದ; ಬ್ರಹ್ಮಾಂಡವು ಇಲ್ಲದಿದ್ದರೂ "ಅದರಲ್ಲಿ ಅಂತರ್ಗತವಾದ ಹಾಗೂ ನಾಶಹೊಂದದ ಕಾರ್ಯಾಂತರ (ಬೇರೆಕಾರ್ಯ) ವುಳ್ಳವುಗಳಿಂದ ಹುಟ್ಟಿರುವುದು" ಎಂಬ ಅರ್ಥವು ಸಂಭವಿಸುತ್ತದೆ. ಆದ್ದರಿಂದ ಪ್ರಲಯವು ಅಸಿದ್ಧವಾಗು

**प्रलयासिद्धेश्च । कपिकपोलान्तर्गतौदुम्बरोदरवर्तिमशकशरीरादिवत्**

## — ಪದಾರ್ಥದೀಪಿಕಾ —

ಇನ್ನು ಸಿಟ್ಟಿಗೆದ್ದ ಮಂಗನ ದವಡೆಯಲ್ಲಿ ಸಿಕ್ಕ ಅತ್ತಿಯ ಹಣ್ಣಿನೊಳಗಿರುವ ಮಶಕ (ಕ್ರಿಮಿ—ಹುಳ) ದ ಶರೀರದ ಹಾಗೆ ಕಾರ್ಯಾಂತರವು ಉಳಿಯುವುದು

## — ವಿಶೇಷಾರ್ಥಪ್ರದೀಪಿಕಾ —

ತ್ತದೆ ಏಕೆಂದರೆ ಸರ್ವಕಾರ್ಯಗಳ ವಿನಾಶಕಾಲವು ಪ್ರಲಯವೆನಿಸಿದೆ, ಹೀಗೆ ಭಾವವು

"ಕಾರ್ಯಾಂತರಸ್ಯ' – ಗಿರಿ, ಸಾಗರ ಮುಂತಾದರೂಪ ಕಾರ್ಯಾಂತರದ ಬ್ರಹ್ಮಾಂಡದ ನಾಶವಾಗಲು ಕಾರ್ಯಾಂತರದ (ಬೇರೆ ಕಾರ್ಯದ) ನಾಶವಾಗುತ್ತದಯೆಂಬಲ್ಲಿ ನಿಯಾಮಕವಿಲ್ಲ ಹೀಗೆ ಇಲ್ಲಿಯ ಭಾವ ಇನ್ನು– ಕಾರ್ಯಾಂತರದ ಅಸ್ತಿತ್ವವು (ಸ್ಥಿತಿಯು-ಉಳಿವು) ಕಾರಣವಿಲ್ಲದೆಯೆ ಆಗಲಾರದು ಏಕೆಂದರೆ ಹಾಗೆ ಹೇಳಿದರೆ ಕಾರ್ಯಾಂತರಕ್ಕೆ ನಿತ್ಯವಾದ ಯಾವಾಗಲೂ. ಸ್ಥಿತಿಯು ಇರಬೇಕಾಗುವದು ಕಾರ್ಯಾಂತರಕ್ಕೆ ನಿತ್ಯವಾದ ಕಾರಣವಿರುವುದೆಂದೂ ಹೇಳಬರುವುದಿಲ್ಲ ಏಕೆಂದರೆ ಹಾಗಾದಲ್ಲಿ ಅದಕ್ಕ ಕಾದಾಚಿತ್ಕತೆಯು ಬರಲಾರದು ಹೀಗೆ ಪ್ರಸಕ್ತವಾದ ಎರಡೂ ಪ್ರಕಾರಗಳು ಸಲ್ಲುವುದಿಲ್ಲವಾದುದರಿಂದ ಉಳಿದ "ಅನಿತ್ಯವಾದ ಕಾರಣದ ಮೂಲಕವಾಗಿರುವುದು ಕಾರ್ಯಾಂತರ ಸ್ಥಿತಿಯು" ಎಂಬ ಪಕ್ಷವನ್ನೇ ಹೇಳಬೇಕು ಆದುದರಿಂದ ಬ್ರಹ್ಮಾಂಡದ ನಾಶವಾದರೆ ಕಾರ್ಯಾಂತರಕ್ಕೆ ವಿಚ್ಛೇದ (ನಾಶ)ವಿಲ್ಲವೆಂಬುದು ಹೇಗೆ? ಏಕೆಂದರೆ ಯಾವ ಕಾರ್ಯದ ಸ್ಥಿತಿಯು ಯಾವುದರ ಸ್ಥಿತಿಯನ್ನು ಅವಲಂಬಿಸಿದೆಯೋ ಆ ಕಾರಣದ ಸ್ಥಿತಿಯು ಅಳಿದರೆ ಆ ಕಾರ್ಯದ ಸ್ಥಿತಿಯೂ ಉಳಿಯುವುದಿಲ್ಲ. ಅಳಿಯುವುದೆಂಬುದು ನಿಶ್ಚಿತ ಇಲ್ಲಿಯ ಅನುಮಾನ ಪ್ರಯೋಗಗಳು— "ಬ್ರಹ್ಮಾಂಡಾಂತರ್ಗತವಾದ ಗಿರಿಸಾಗರ ಮುಂತಾದುದು ವಿನಾಶವುಳ್ಳದ್ದಾಗಿರುತ್ತದ ಏಕೆಂದರೆ (೧) ಮಹತ್ತಾದ ದ್ರವ್ಯಾಂತರದಿಂದ ನಾಶಹೊಂದುವ ಆಧಾರವುಳ್ಳದ್ದಾಗಿದೆ (೨) ಮಹಾಅಗ್ನಿಯಿಂದ ಸುಡಲ್ಪಡುವ ಆಶ್ರಯವುಳ್ಳದ್ದಾಗಿದೆ (೩) ಮಹಾ ಅಗ್ನಿಯಿಂದ ಕ್ಷೋಭಹೊಂದುವ ಸಮುದ್ರದಲ್ಲಿ ಮುಳುಗಿಹೋಗುವ ಆಧಾರವುಳ್ಳದ್ದಾಗಿದೆ" ಈ ಅನುಮಾನವನ್ನು ಮನಸ್ಸಿನಲ್ಲಿಟ್ಟುಕೊಂಡು, ದೃಷ್ಟಾಂತವನ್ನು "ಕಪಿಕಪೋಲ' ಇತ್ಯಾದಿವಾಕ್ಯದಿಂದ ಹೇಳುತ್ತಾರೆ

"ಕುಂಡಬದರವತ್" – ಕುಂಡದ ನಾಶವಾದರೂ ಅದರೊಳಗೆ ಇರುವ (ಬೋರೆ) ಹಣ್ಣುಗಳು ಉಳಿಯಬಹುದು ಇದರ ಹಾಗೆ ಬ್ರಹ್ಮಾಂಡದ ನಾಶವಾದರೂ ಅದರೊಳಗಿನ ಕಾರ್ಯಾಂತರಗಳಿಗೆ ಸ್ಥಿತಿಯು (ಇರುವಿಕೆಯು) ಸಂಭವಿಸು

कार्यान्तरावस्थानमसम्भावितमिति चेन्न । कुण्डबदरवदुपपत्तेः । काला-

## — ಪದಾರ್ಥದೀಪಿಕಾ —

ಅಸಂಭಾವಿತವೆಂದು ಶಂಕಿಸುವುದು ಸರಿಯಾದುದಲ್ಲ ಏಕೆಂದರೆ– ಕುಂಡದಲ್ಲಿಯ
ಬದರಗಳ ಹಾಗೆ ಕಾರ್ಯಾಂತರವಿರುವುದು ಸಂಭವಿಸುತ್ತದೆ ಕಾಲಾಗ್ನಿ ರುದ್ರ

## — ವಿಶೇಷಾರ್ಥಪ್ರದೀಪಿಕಾ —

ತ್ತದೆ ಹೀಗೆ ಅರ್ಥ ಇನ್ನು– ಹನ್ನೆರಡು ಆದಿತ್ಯರೊಡನೆ ಏಕ ಕಾಲದಲ್ಲಿ ಉದಯ
ಹೊಂದಿದ ಕಾಲಾಗ್ನಿರುದ್ರನಿಂದ ಸಂಕರ್ಷಣನಜ್ವಾಲೆಯಿಂದ ಭಾಗವತಾದಿಗಳಲ್ಲಿ
ಹೇಳಿದ ಹಾಗೆ ಒಳಗೆ ಅಂತರ್ಗತ ಪದಾರ್ಥಗಳಿಂದ ಸಹಿತವಾಗಿ ಬ್ರಹ್ಮಾಂಡವು
ಭಸ್ಮೀಭೂತವಾಗುವಾಗ, ಕಾರ್ಯಾಂತರಗಳು ಅದರಲ್ಲಿ ಉಳಿಯುವುದು ಹೇಗೆ?
ಈ ಆಶಂಕೆಯನ್ನು "ಕಾಲಾಗ್ನಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ
ಪ್ರಲಯದ ಬಗ್ಗೆ ವಿವಾದಹೊಂದಿದ ಮೀಮಾಂಸಕನಿಗೆ ಈ ಪ್ರಕ್ರಿಯೆಯು ಅಸಿದ್ಧ
ವಾಗಿರುತ್ತದೆ ಹೀಗೆ ಅರ್ಥ ಪುರಾಣದಲ್ಲಿ ಈ ಪ್ರಕ್ರಿಯೆಯು ಹೇಳಲ್ಪಟ್ಟಿದೆ
ಆದರೂ ಇದು ಪರನಿಗೆ ಸಮ್ಮತವಲ್ಲ ಬೇರೆ ರೀತಿಯಿಂದ ನಾಶವನ್ನು ಅಂಗೀ
ಕರಿಸುತ್ತಾನೆ ಆದುದರಿಂದ ಬ್ರಹ್ಮಾಂಡದ ನಾಶವಾದರೂ ಕಾರ್ಯಾಂತರವಿರ
ಬಹುದೆಂಬ ಶಂಕೆಯು ಸಂಭವಿಸುತ್ತದೆಂದು ಭಾವ ಅಥವಾ ಕಾಲಾಗ್ನಿರುದ್ರ
ಆದಿತ್ಯ ಮುಂತಾದ ಸಕಲಜವನ ಪತಿಯಾದ ಮಹೇಶ್ವರನ ಸಂಹಾರೇಚ್ಛೆಯ
ಕಾಲದಲ್ಲಿ ಶರೀರೇಂದ್ರಿಯ ಮಹಾಭೂತಗಳ ಆರಂಭಕಗಳಾದ ಆತ್ಮರಲ್ಲಿರುವ
ಸಕಲ ಅದೃಷ್ಟಗಳ ವೃತ್ತಿಯು ನಿರುದ್ಧವಾಗುತ್ತದೆ ಆಗ ಮಹೇಶ್ವರನ
ಇಚ್ಛೆ, ಆತ್ಮ, ಅಣುಸಂಯೋಗದಿಂದುಂಟಾದ ಕರ್ಮಗಳಿಂದ ಶರೀರೇಂದ್ರಿಯ
ಕಾರಣವಾದ ಅಣುಗಳ ವಿಭಾಗವಾಗುತ್ತದೆ ಆ ವಿಭಾಗದಿಂದ ಅವುಗಳ
ಸಂಯೋಗದ ನಾಶವಾಗುತ್ತದೆ ಅದರಿಂದ ಪರಮಾಣುವಿನವರೆಗೆ ವಿನಾಶವಾಗು
ವುದು. ಇದೇ ಕ್ರಮದಿಂದಲೇ ಪೃಥ್ವಿ, ಜಲ, ಅನಲ, ಈ ಮಹಾಭೂತಗಳಿಗೆ
ಸಹ ಕ್ರಮದಿಂದ ಅನಂತರದ ಭೂತಗಳ ವಿನಾಶವಾಗಲು ಪೂರ್ವದ ವಿನಾಶ
ವಾಗುತ್ತದೆ. ಅನಂತರ ವಿಭಾಗಹೊಂದಿದ ಪರಮಾಣುಗಳು ಬಿಡಿ ಬಿಡಿಯಾಗಿ
ಉಳಿಯುತ್ತವೆ ಹೀಗೆ ಪ್ರಶಸ್ತಪಾದನ ಪ್ರಳಯ ಪ್ರಕ್ರಿಯೆಯು ಇದರಲ್ಲಿ
ಪೃಥ್ವೀರೂಪವಾದ ಬ್ರಹ್ಮಾಂಡದ ನಾಶವು ಇತರ ಎಲ್ಲ ಭೂತಗಳ ನಾಶವಾದ
ಅನಂತರದಲ್ಲಿಯೇ ಆಗುತ್ತದೆಯೆಂದು ತಿಳಿಯುತ್ತದೆ ಆದುದರಿಂದ ಬ್ರಹ್ಮಾಂ
ಡದ ನಾಶವಾದರೂ ಬೇರೆ ಕಾರ್ಯವಿರಬಹುದೆಂಬ ಆಶಂಕೆಯು ಹೇಗೆ ಯುಕ್ತ
ವೆಂಬ ಆಶಂಕೆಯನ್ನು "ಕಾಲಾಗ್ನಿ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆಂದೂ
ತಿಳಿಯಬೇಕು ಅದರಂತೆ– ವಾತ ಪಿತ್ತ ಶ್ಲೇಷ್ಮಗಳ ಪ್ರಕೋಪ, ಪ್ರಶಮನಗಳ

मिरुद्रादिप्रक्रियाया असिद्धत्वात् । द्वितीयेऽपि न प्रलयसिद्धिः । यथा हीदानीन्तनानां दहनपवनसन्तानानां क्रमेणास्तमयेऽपि न प्रलयस्तथा तरुगिरिशरीरादिसन्तानानामपि क्रमारम्भसिद्धावप्यवयविशून्यसमयासिद्धेः । अथैकदैवेति विशेषणमुपादीयेत तदा क्रमारब्धदहन-

— ಪದಾರ್ಥದೀಪಿಕಾ —

ಪ್ರಕ್ರಿಯೆಗಳು ಸಿದ್ಧಿಸಿಲ್ಲ. ಎರಡನೆಯ ಪಕ್ಷದಲ್ಲಿಯೂ ಪ್ರಲಯದ ಸಿದ್ಧಿಯಾಗುವುದಿಲ್ಲ ಏಕೆಂದರೆ– ಈಗಿರುವ ಅಗ್ನಿ, ಗಾಳಿ, ಇವುಗಳ ಸಂತಾನಗಳಿಗೆ ಕ್ರಮದಿಂದ ಅಸ್ತಮಯವಾದರೂ ಹೇಗೆ ಪ್ರಲಯವಿಲ್ಲವೊ ಹಾಗೆ, ತರು, ಗಿರಿ, ಶರೀರ, ಮುಂತಾದವುಗಳ ಸಂತಾನಗಳಿಗೆ ಸಹ ಕ್ರಮದಿಂದ ಆರಂಭವು ಸಿದ್ಧವಾದರೂ (ಏಕಕಾಲದಲ್ಲಿ ಆರಂಭವು ಸಿದ್ಧಿಸಿಲ್ಲವಾದುದರಿಂದ) ಅವಯವಿಯಿಲ್ಲದ ಸಮಯವು ಸಿದ್ಧಿಸುವುದಿಲ್ಲ ಇನ್ನು "ಏಕದೈವ" (ಏಕಕಾಲದಲ್ಲಿಯೇ) ಎಂಬ ವಿಶೇಷಣವನ್ನು ಸ್ವೀಕರಿಸುವುದಾದರೆ ಆಗ ಕ್ರಮದಿಂದ ಹುಟ್ಟಿದ ( ಆರಬ್ಧ

— ವಿಶೇಷಾರ್ಥಪ್ರದೀಪಿಕಾ —

ಕ್ರಮದಲ್ಲಿ ನಿಯಮವಿಲ್ಲದಿದ್ದರೂ ಒಂದೇ ಸಮಯದಲ್ಲಿ ತ್ರಿದೋಷಗಳ ಸನ್ನಿಪಾತ (ಮೇಲನ) ವಾಗಲು ದೇಹದ ಸಂಹಾರವು ಹೇಗೋ ಮತ್ತು ಗ್ರಹಗಳ ಗಮನದಲ್ಲಿ ನಿಯಮವಿಲ್ಲದಿದ್ದರೂ ಕದಾಚಿತ್ತಾಗಿ [illegible] ಮಂಡಲಗಳಿಗೆ ಉಪರಾಗವು (ಗ್ರಹಣವು) ಹೇಗೋ ಹಾಗೆ ಕಾಲಾನಲ ಪವನ ಸಮುದ್ರಗಳ ಸನ್ನಿಪಾತ (ಸಮ್ಮೇಳನ) ದಿಂದ ಏಕಕಾಲದಲ್ಲಿ ಸರ್ವಕಾರ್ಯನಾಶವಾಗುವುದೆಂಬ ಆಶಂಕೆಯನ್ನು "ಕಾಲಾಗ್ನಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆಂದೂ ಹೇಳಬಹುದು ಅಸಿದ್ಧತ್ವಾತ್" – ಪ್ರಮಾಣವಿಲ್ಲದಿರುವುದರಿಂದ ಅಸಿದ್ಧವೆಂದು ತಿಳಿಯಬೇಕು ಪುರಾಣಗಳು ಪ್ರಮಾಣವಾಗಿವೆಯೆಂದು ಹೇಳಬಾರದು. ಏಕೆಂದರೆ– ಅವುಗಳಿಂದಲೇ ಪ್ರಲಯದ ಸಿದ್ಧಿಯಾಗುವಾಗ ಅನುಮಾನಗಳನ್ನು ಹೇಳುವುದು ವ್ಯರ್ಥವಾಗುತ್ತವೆ ಹೀಗೆ ಭಾವ.

" ಕ್ರಮಾರಂಭಸಿದ್ಧಾವಪಿ " – ಮುಂಚೆ ತರುಸಂತಾನವು, ಅನಂತರ ಗಿರಿಸಂತಾನವು, ಅನಂತರ ಶರೀರಜನ್ಮವು, ಹೀಗೆ ಕ್ರಮದಿಂದ ಆರಂಭವು ಸಿದ್ಧಿಸಿದರೂ, ಹೀಗೆ ಅರ್ಥ. "ಅವಯವಿಶೂನ್ಯಸಮಯಾಸಿದ್ಧೇಃ" (ಅವಯವಿಯಿಲ್ಲದ ಸಮಯವು ಸಿದ್ಧಿಸುವುದಿಲ್ಲವಾದುದರಿಂದ) ಎಂಬುದಕ್ಕೆ "ಪ್ರಲಯಾಸಿದ್ಧೇಃ" (ಪ್ರಲಯದ ಸಿದ್ಧಿಯಿಲ್ಲ) ವೆಂಬುದರೊಡನೆ ಅನ್ವಯವಿದೆಯೆಂದು ತಿಳಿಯಬೇಕು.

"ಇತಿ ವಿಶೇಷಣಂ" – "ಏಕದೈವ ದೃಶ್ಯಸಂತಾನಶೂನ್ಯೈರಾರಬ್ಧೈಃ" ಎಂಬು

पवनादिसन्तानैर्व्यभिचारः स्यात् । एकदारम्भकहेतुसाकल्ये सतीति हेतुविशेषणे विशेषणासिद्धिः । द्व्यणुकादिक्रमेणारम्भस्वीकारेण बाधादि प्रसङ्गश्च । एतेन द्वितीयानुमानमपि निरस्तम् । ब्रह्माण्डानभ्युप-

— ಪದಾರ್ಥದೀಪಿಕಾ —

ವಾದ) ದಹನ ಪವನ ಮುಂತಾದವುಗಳ ಸಂತಾನಗಳಲ್ಲಿ ಹೇತುವಿಗೆ ಸಾಧಿಸಿ ಪರಿತ್ಯಾಗ ( ವ್ಯಭಿಚಾರ ) ವೆಂಬ ದೋಷವು ಬರುತ್ತದೆ "ಏಕದಾರಂಭಕ ಹೇತುಸಾಕಲ್ಯೇ ಸತಿ" ( ಏಕಕಾಲದಲ್ಲಿ ಆರಂಭಕ ಕಾರಣಗಳೆಲ್ಲ ಕೂಡಿರು ವುದು) ಎಂಬ ವಿಶೇಷಣವನ್ನು ಹೇತುವಿನಲ್ಲಿ ಸೇರಿಸಿದಲ್ಲಿ, ವಿಶೇಷಣದ ಅಸಿದ್ಧಿ ಯೆಂಬ ದೋಷವು ಬರುತ್ತದೆ ಮತ್ತು ದ್ವ್ಯಣುಕ ಮುಂತಾದವುಗಳ ಕ್ರಮ ದಿಂದ ಆರಂಭ (ಉತ್ಪತ್ತಿ) ವನ್ನು ಸ್ವೀಕರಿಸಿದುದರಿಂದ ಪ್ರಬಲ ಪ್ರಮಾಣ ವಿರೋಧ (ಬಾಧವು) ಮುಂತಾದುದರ ಪ್ರಸಂಗವೂ ಬರುತ್ತದೆ ಇದರಿಂದ ಎರಡನೆಯ ಅನುಮಾನವೂ ನಿರಾಕರಿಸಲ್ಪಟ್ಟಂತಾಯಿತು. ಏಕೆಂದರೆ ಬ್ರಹ್ಮಾಂ

— ವಿಶೇಷಾರ್ಥಪ್ರದೀಪಿಕಾ —

ದಾಗಿ ಸಾಧ್ಯದಲ್ಲಿ "ಏಕದೈವ" ಎಂಬ ವಿಶೇಷಣವನ್ನು ಸೇರಿಸಿದರೆ ದೋಷವಿಲ್ಲ. ಏಕೆಂದರ ಕ್ರಮದಿಂದ ಆರಂಭವಾಗುವ ಪಕ್ಷದಲ್ಲಿ ಕ್ರಮದಿಂದ ಸಂತಾನವಿಲ್ಲದಿ ರುವಿಕೆಯೆಂಬ ಅರ್ಥವೇ ಲಭಿಸುತ್ತದೆ, ಹೀಗೆ ಭಾವ. "ಕ್ರಮಾರಬ್ಧ ದಹನ ಪವನಾದಿ ಸಂತಾನೈಃ' - ದಹನದ ಆರಂಭವಾದ ನಂತರ ಪವನದ ಆರಂಭವು. ಈ ರೀತಿಯಾಗಿ ಕ್ರಮವನ್ನು ಇಲ್ಲಿ ತಿಳಿಯಬೇಕು

"ಇತಿವಿಶೇಷಣೇ'' – "ಏಕದಾ ಆರಂಭಕಹೇತು ಸಾಕಲ್ಯವಿಶಿಷ್ಟ ಸಂತಾನ ತ್ವಾತ್'' (ಒಂದೇ ಕಾಲದಲ್ಲಿ, ಆರಂಭಕಗಳಾದ ಕಾರಣಗಳೆಲ್ಲವುಗಳಿಂದ ಕೂಡಿದ ಸಂತಾನವಾದುದರಿಂದ) ಹೀಗೆ ಹೇತುವಿನಲ್ಲಿ ವಿಶೇಷಣವನ್ನು ಸೇರಿಸಿ ದರೆ, ಹೀಗೆ ಅರ್ಥ "ವಿಶೇಷಣಾಸಿದ್ಧಿಃ"– ಈ ವಿಶೇಷಣವು ಅಸಿದ್ಧವಾದುದರಿಂದ ವಿಶಿಷ್ಟಹೇತುವಿಗೆ ಸ್ವರೂಪಾಸಿದ್ಧಿಯೆಂಬದೋಷವು "ದ್ವ್ಯಣುಕಾದಿಕ್ರಮೇಣ ಆರಂಭ ಸ್ವೀಕಾರೇಣ" (ದ್ವ್ಯಣುಕ ಮುಂತಾದುದರ ಕ್ರಮದಿಂದ ಆರಂಭವನ್ನು ಸ್ವೀಕರಿಸುವುದರಿಂದ) ಈ ಮಾತನ್ನು ಹಿಂದಿನ ಹಾಗು ಮುಂದಿನ ಪಕ್ಷಗಳಲ್ಲಿ ಅಸಿದ್ಧಿ ಬಾಧಗಳನ್ನು ಉಪಪಾದಿಸಲು ಹೇಳಿದ್ದಾರೆಂದು ತಿಳಿಯಬೇಕು "ವಿಶ್ವ ಸಂತಾನೋಽಯಂ ದೃಶ್ಯಸಂತಾನಶೂನ್ಯೈಃ ಸಂತಾನಿಭಿಃ ಆರಬ್ಧಃ ಸಂತಾನತ್ವಾತ್ ಆರಣ್ಯಸಂತಾನವತ್" ಎಂಬ ಮೊದಲನೆಯ ಅನುಮಾನದಲ್ಲಿ–"ಏಕದಾ" ಎಂಬ ವಿಶೇಷಣವನ್ನು ಸಾಧ್ಯದಲ್ಲಿ ಸೇರಿಸಿದರೆ- (ಏಕದಾದೃಶ್ಯ ಸಂತಾನಶೂನ್ಯೈಃ ಸಂತಾ

गमात् । अभ्युपगमेऽप्यवयवानामावापोद्धाराभ्यामेवोत्पादविनाशयो-रुपपत्तेः । कार्यान्तरावस्थानोपपत्तेश्च । तृतीयेऽप्यपसिद्धान्तः । क्रमेणाच्छेदस्याभ्युपगतत्वात् । चतुर्थेऽपि पटादिभ्यः पूर्वविनष्टैस्त-न्त्वादिभिर्व्यभिचारः । परमाणुत्वेन हेतुविशेषणेऽपि द्व्यणुकाद्यवस्थान-

— ಪದಾರ್ಥ ದೀಪಿಕಾ —

ಡವನ್ನು ಅಂಗೀಕರಿಸಿಲ್ಲ. ಒಪ್ಪಿದರೂ ಅವಯವಗಳ ಪ್ರಕ್ಷೇಪ (ಇಡೋಣ– ಬರೋಣ) ಹಾಗು ಉದ್ಧಾರ (ತೆಗೆದು ಹಾಕೋಣ) ಇವುಗಳಿಂದಲೇ ಉತ್ಪತ್ತಿ– ವಿನಾಶಗಳು ಯುಕ್ತವೆನಿಸುತ್ತವೆ ಮತ್ತು ಕಾರ್ಯಾಂತರಗಳ ಇರುವಿಕೆಯೂ ಯುಕ್ತವಾಗುತ್ತದೆ ಮೂರನೆಯ ಅನುಮಾನದಲ್ಲಿಯೂ ಅಪಸಿದ್ಧಾಂತವು ಬರು ತ್ತದೆ ಏಕೆಂದರೆ ಕ್ರಮದಿಂದ ಉಚ್ಛೇದ (ನಾಶ) ವನ್ನು ಅಂಗೀಕರಿಸಲಾಗಿ ರುತ್ತದೆ ನಾಲ್ಕನೆಯ ಅನುಮಾನದಲ್ಲಿಯೂ ಪಟ ಮುಂತಾದವುಗಳಿಗಿಂತ ಪೂರ್ವದಲ್ಲಿ ನಾಶಹೊಂದಿದ ತಂತು ಮುಂತಾದವುಗಳಲ್ಲಿ ಹೇತುವು ಸಾಧ್ಯ ವನ್ನು ಪರಿತ್ಯಜಿಸಿರುತ್ತದೆಂಬ ವ್ಯಭಿಚಾರವು ಬರುತ್ತದೆ ( "ಪರಮಾಣು ವಾಗಿದ್ದು" ಎಂಬ ವಿಶೇಷಣವನ್ನು ಹೇತುವಿನಲ್ಲಿ ಸೇರಿಸಿದರೂ ದ್ವ್ಯಣುಕಾದಿ

— ವಿಶೇಷಾರ್ಥಪ್ರದೀಪಿಕಾ —

ನಿಭಿಃ ಆರಬ್ಧಃ ಎಂಬುದಾಗಿ ಹೇಳಿದರೆ) ಬಾಧವು ಬರುತ್ತದೆ "ಆದಿ" ಪದ ದಿಂದ, ದೃಷ್ಟಾಂತೇ ಸಾಧ್ಯವೈಕಲ್ಯ, ಸಾಧನವೈಕಲ್ಯ, ಈ ದೋಷಗಳನ್ನು ಗ್ರಹಿ ಸಬೇಕು

"ದ್ವಿತೀಯಾನುಮಾನಮಪಿ' - "ವರ್ತಮಾನ ಬ್ರಹ್ಮಾಂಡ ಪರಮಾಣವಃ" ಎಂಬುದಾಗಿ ಹೇಳಿದ ಅನುಮಾನವೂ "ಆವಾಪೋದ್ಧಾರಾಭ್ಯಾಂ" – ಒಂದು ಅವಯವವನ್ನು ಹಾಕು (ಇಡು)ವುದರಿಂದ ಉತ್ಪತ್ತಿಯಾಗುತ್ತದೆ ಅದನ್ನು ತೆಗೆದು ಹಾಕುವುದರಿಂದ ವಿನಾಶವಾಗುತ್ತದೆ, ಹೀಗೆ ಅಂಗೀಕರಿಸುವುದರಿಂದ ಸಾಧ್ಯದ ಪರ್ಯವಸಾನವಾಗುವುದರಿಂದ, ಪ್ರಲಯದ ಸಿದ್ಧಿಯಾಗುವುದಿಲ್ಲವೆಂದು ಭಾವ. 'ಕಾರ್ಯಾಂತರಾವಸ್ಥಾನೋಪಪತ್ತೇಶ್ಚ"– ಬ್ರಹ್ಮಾಂಡದ ನಾಶವಾದರೂ ಹಿಂದೆ ಹೇಳಿದ ರೀತಿಯಿಂದ ಬ್ರಹ್ಮಾಂಡದ ಒಳಗಿರುವ ಕಾರ್ಯಾಂತರದ ಸ್ಥಿತಿಯು ಸಂಭವಿಸುವುದೆಂದು ಅರ್ಥ ಎಲ್ಲಿ ಸಮವಾಯಿ ಕಾರಣವಾದ ತಂತುವಿನ ನಾಶದಿಂದ ಪಟದ ನಾಶವಾಗಿದೆಯೋ ಅಲ್ಲಿ ಆರಂಭಕತ್ವವಿದ್ದರೂ ಸಾಧ್ಯವಿಲ್ಲವಾದ್ದರಿಂದ ವ್ಯಭಿಚಾರವೆಂಬ ದೋಷವನ್ನು "ಪಟಾದಿಭ್ಯಃ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

सम्भवेन दृष्टान्तस्य सन्दिग्धसाध्यता । पञ्चमेऽपि किं भूगोलका एव सन्तानशब्देनोच्यन्ते तदतिरिक्तो वा कश्चित् । आद्ये सिद्धसाधनम् । अवयवानामावापोद्धाराभ्यां सन्ततोत्पत्तिविनाशसिद्धेः । द्वितीये त्वाश्रयासिद्धिः । षष्ठं त्वाभाससमानयोगक्षेमत्वादुपेक्षणीयमिति ।

— ಪದಾರ್ಥದೀಪಿಕಾ —

ಗಳ ಸ್ಥಿತಿಯು ಉಳಿಯುವ ಸಂಭವವಿರುವುದರಿಂದ ದೃಷ್ಟಾಂತದಲ್ಲಿ ಸಾಧ್ಯವು ಸಂದಿಗ್ಧವಾಗುತ್ತದೆ ಐದನೆಯ ಅನುಮಾನದಲ್ಲಿಯೂ ಭೂಗೋಲಕಗಳನ್ನೇ "ಸಂತಾನ" ಶಬ್ದದಿಂದ ಕರೆಯುವಿರೋ ಅಥವಾ ಅದರಿಂದ ಬೇರೆಯಾದ ಇನ್ನಾವದನ್ನೋ ಹೇಳುವಿರೋ? ಮೊದಲನೆಯ ಕಲ್ಪದಲ್ಲಿ ಸಿದ್ಧಸಾಧನವು ಬರುತ್ತದೆ ಏಕಂದರೆ ಅವಯುವಗಳ ಆವಾಪ– ಉದ್ಧಾರ ( ಇಡೋಣ– ತೆಗೆಯೋಣ ) ಇವುಗಳಿಂದ ಸಂತತ ಉತ್ಪತ್ತಿ ವಿನಾಶಗಳ ಸಿದ್ಧಿಯಾಗುತ್ತದೆ. ಎರಡನೆಯ ಪಕ್ಷದಲ್ಲಿಯಾದರೋ ಆಶ್ರಯಾಸಿದ್ಧಿಯು ಬರುತ್ತದೆ ಆರನೆಯ

— ವಿಶೇಷಾರ್ಥಪ್ರದೀಪಿಕಾ —

'ಸಂದಿಗ್ಧಸಾಧ್ಯತಾ" - ಪ್ರತ್ಯಕ್ಷದಿಂದ ಅನುಪಲಂಭ (ಕಾಣದಿರುವಿಕೆ) ಎಂಬ ಯುಕ್ತಿಯಿಂದ ಬಾಧಿತವಾದುದರಿಂದ ತ್ರ್ಯಣುಕದ ಸ್ಥಿತಿಯು ಯುಕ್ತವೆನಿಸದಿದ್ದರೂ, ದ್ವ್ಯಣುಕದ ಸ್ಥಿತಿಯು ಇದ್ದರೂ ಅದು ಅತೀಂದ್ರಿಯವಾದ್ದರಿಂದ ಪ್ರತ್ಯಕ್ಷವಿಷಯ ವಾಗುವುದಿಲ್ಲವಾದುದರಿಂದ ಅನುಪಲಂಭಯುಕ್ತಿಯಿಂದ ಬಾಧಿತವಾಗುವುದಿಲ್ಲ ಆದುದರಿಂದ, ಪಕ್ಷದ ಸಮಾನವಾದುದರಿಂದ ನಷ್ಟಪವನಾರಂಭಕ ಪರಮಾಣುವು ದೃಷಾಂತವಾಗಲಾರದು ಹೀಗೆ ಭಾವ

"ಸಂತತೋತ್ಪತ್ತಿವಿನಾಶಸಿದ್ಧೇಃ" – ಪೀಲುಪಾಕಪ್ರಕ್ರಿಯೆಯನ್ನು ಒಪ್ಪುವ ಪಕ್ಷದಲ್ಲಿ ಬ್ರಹ್ಮಾಂಡದ ಅವಯವಗಳಿಗೆ ಪ್ರಲಯದ ಗಾಳಿ ಬೆಂಕಿಗಳ ಉಪಘಾತ (ಹೊಡೆತ) ಬೀಳುವದರಿಂದ (ಅವುಗಳು ಹಾರಿಹೋಗಲು) ಉದ್ಧಾರವಾಗಲು ಸಂತಾನಿಗಳಾದ ಪರಮಾಣುಗಳಿಗೆ ದೃಶ್ಯವಾದ ಸಂತಾನವಿಲ್ಲವೆಂಬಸ್ಥಿತಿಯು ಬರುತ್ತದೆ ಮತ್ತೆ ದ್ವ್ಯಣುಕಾದಿಕ್ರಮದಿಂದ ಅವಯುವಗಳ ಆಗಮನವಾಗಲು ಬ್ರಹ್ಮಾಂಡದ ಉತ್ಪತ್ತಿಯಾಗುತ್ತದೆ ಹೀಗೆ ಉತ್ಪತ್ತಿವಿನಾಶಗಳು ಸಂಭವಿಸುವದರಿಂದ ಬ್ರಹ್ಮಾಂಡದ ಪರಮಾಣುಗಳಿಗೆ ಹಿಂದೆ ಹುಟ್ಟಿಸಲ್ಪಟ್ಟದ್ದಕ್ಕೆ ಸಜಾತೀಯವಾದ ಬೇರೆ ಸಂತಾನವಿರುವುದೆಂಬ ಸ್ಥಿತಿಯು ಈ ವರ್ತಮಾನಕಾಲದಲ್ಲಿಯೂ ಸಂಭವಿಸುವುದರಿಂದ ಅರ್ಥಾಂತರತ್ವವು ಬರುತ್ತದೆ ಆದುದರಿಂದ ಪ್ರಲಯದ ಸಿದ್ಧಿಯಿಲ್ಲ, ಹೀಗೆ ಭಾವ (ತಾರ್ಕಿಕರು ಹೀಗೆಯೇ ಒಪ್ಪಿರುತ್ತಾರೆಂದು ತಾತ್ಪರ್ಯ.)

**अथ मा भूदनुमानैः प्रलयसिद्धिस्तथाऽप्यागमैर्भविष्यति**

— ಪದಾರ್ಥದೀಪಿಕಾ —

ಅನುಮಾನವಾದರೋ ಆಭಾಸಸಮಾನಯೋಗಕ್ಷೇಮವುಳ್ಳದ್ದಾದುದರಿಂದ ಉಪೇಕ್ಷಿಸಲ್ಪಡಲು ಅರ್ಹವೇ ಸರಿ!" ಹೀಗೆ

ಇನ್ನು – "ಅನುಮಾನಗಳಿಂದ ಪ್ರಲಯದ ಸಿದ್ಧಿಯಾಗದಿರಲಿ! ಆದರೂ ಆಗಮಗಳಿಂದ ಅದರ ಸಿದ್ಧಿಯಾಗುತ್ತದೆ ಏಕೆಂದರೆ ಸಿದ್ಧವಾದ ಅರ್ಥಗಳ

— ವಿಶೇಷಾರ್ಥಪ್ರದೀಪಿಕಾ —

"ದ್ವಿತೀಯೇತು"=ಭೂಗೋಲಕದಿಂದ ಬೇರೆ ಯಾವದೊ ಒಂದನ್ನು ಸಂತಾನ ಶಬ್ದದಿಂದ ಹೇಳುವ ಅಭಿಪ್ರಾಯವೆಂಬ ಎರಡನೆಯ ಪಕ್ಷದಲ್ಲಿ, ಅಂತಹ ಅತಿರಿಕ್ತವಾದ ಸಂತಾನವುಸಿದ್ಧಿಸಿಲ್ಲವಾದುದರಿಂದಆಶ್ರಯಾಸಿದ್ಧಿಯು,ಹೀಗೆತಿಳಿಯಬೇಕು

"ಆಭಾಸಸಮಾನಯೋಗಕ್ಷೇಮತ್ವಾತ್"–"ಅಯಂ ಪಟಃ ಏತತ್ಪಟಾನ್ಯಾವಯವಿಕಾಲೀನತ್ವರಹಿತ ಕಿಂಚಿತ ಕಾಲೀನ ಪಟಾನ್ಯಃ ಪಟತ್ವಾತ್ ಪಟಾಂತರವತ್ (ಈ ಪಟವು ತನ್ನಿಂದ ಭಿನ್ನವಾದ ಅವಯವಿಯ ಸಮಾನಕಾಲೀನತೆಯಿಲ್ಲದ ಯಾವದೋ ಬೇರೆ ಕಾಲದಲ್ಲಿರುವ ಪಟದಿಂದ ಬೇರೆಯದು ಏಕೆಂದರೆ ಪಟವಾಗಿದ ಇದರಲ್ಲಿ ಪಟಾಂತರವು ದೃಷ್ಟಾಂತವು.) ಹೀಗೆ ಪ್ರತಿ ಅನುಮಾನವು ಸಮಾನವಾಗುತ್ತದೆ ಇದರಿಂದ ಪ್ರಲಯಕಾಲದ ಪಟದ ಸಿದ್ಧಿಯಾಗುತ್ತದೆ ಇದರ ಬಗ್ಗೆ ಮಾಡುವ ಪ್ರತೀಕಾರವು ಪ್ರಕೃತದಲ್ಲಿಯೂ ಸಮಾನವೆಂದು ಇಲ್ಲಿ ಅಭಿಪ್ರಾಯವಿದೆ ಕೆಲವರು– "ಈ ಕ್ರಿಯೆಯು ತನ್ನ ಪ್ರಾಗಭಾವದ ಕಾಲದಲ್ಲಿಲ್ಲದ ಬೇರೆ ಯಾವುದೋ ಕಾಲದಲ್ಲಿರುವ ಕ್ರಿಯೆಯಿಂದ ಭಿನ್ನವಾದುದು ಏಕೆಂದರೆ ಕ್ರಿಯೆಯಾಗಿದೆ" ಎಂಬುದಾಗಿಯೂ ಸಾಧನಮಾಡಬರುತ್ತದೆ ಇದರಿಂದ ಪ್ರಲಯದಲ್ಲಿ ಪ್ರಾಗಭಾವವೂ ಇಲ್ಲವೆಂದು ಸಿದ್ಧಿಸುವುದರಿಂದ ನಿಮ್ಮ ಇಷ್ಟಕ್ಕೆ ಹಾನಿಯಾಗುತ್ತದೆ" ಎಂದೂ ಹೇಳುತ್ತಾರೆ

"ಆಗಮೈಃ"-ಶ್ರುತಿಮುಂತಾದ ಆಗಮಗಳಿಂದ, "ಅಪಶ್ಯಮುಷ್ಯಯೋ, ಯಮುಪ್ಯೇತಿ ಭುವನಂ ಸಾಂಪರಾಯೇ, ಯತ್ ಪ್ರಯಂತಿ" ಈ ಮುಂತಾದ ಶ್ರುತಿಗಳು "ಯುಗಾಣಾಮ್ಯವರಾ ತತಃ, ಸರ್ವಸಂಹಾರಕತ್ವಾತ್" ಇತ್ಯಾದಿ ದಶಮಸ್ಕಂಧದಲ್ಲಿ ಹೇಳಲ್ಪಟ್ಟ ಸ್ಮೃತಿಗಳು; "ಸ್ರಷ್ಟಾ ಪಾತಾ ಚ ಸಂಹರ್ತಾ" ಇತ್ಯಾದಿ ಪುರಾಣವಾಕ್ಯಗಳು "ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ|| ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತ ಸಂಜ್ಞಕಾಃ" ಇತ್ಯಾದಿ ಇತಿಹಾಸ ವಾಕ್ಯಗಳು ಇವುಗಳನ್ನು ಆಗಮಗಳೆಂದು ತಿಳಿಯಬೇಕು.

तेषां सिद्धार्थेऽपि प्रामाण्यस्य साधितत्वात् । ततो नाप्रसिद्धविशेषणतेति ब्रूष तर्ह्यस्माकमपि धर्मादिसिद्धिरागमाद्भविष्यतीति कथमाश्रयासिद्धिरिति । एवं प्रलये जीवेश्वरसद्भावं साधयता धर्मादिसत्त्वमपि साधितमिति न प्रलये भावमात्रासत्त्वसाधनं युक्तम् । एवमादिकार्यं पक्षीकृत्य सोपादानत्वसाधने प्रकृत्यादिसिद्धिरपि द्रष्टव्येति ।

प्रथमसूत्रेऽभावस्य कर्तृत्वनिरासायानुमानमुक्तम् । इदानीमितोऽपि नाभावकर्तृकं जगच्चेतनकर्तृकत्वे दृष्टान्तभावादिति सूत्रस्य

— ಪದಾರ್ಥದೀಪಿಕಾ —

ಬಗೆಗೂ ವೇದಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸಲಾಗಿದೆ. ಆದುದರಿಂದ ಸಾಧ್ಯದ ಅಪ್ರಸಿದ್ಧಿಯಿಲ್ಲ" ವೆಂದು ನೀನು ಹೇಳುವಿಯಾದರೆ. ಹಾಗಾದ್ದರೆ ನಮಗೂ ಧರ್ಮಾದಿಗಳ ಸಿದ್ಧಿಯು ಆಗಮಗಳಿಂದ ಆಗುವದು ಆದುದರಿಂದ ಆಶ್ರಯಾಸಿದ್ಧಿಯೆಂಬ ದೋಷವು ಹೇಗೆ ಬರುತ್ತದೆ? ಹೀಗೆ ಸಮಾನವಿರುತ್ತದೆ ಇದರ ಹಾಗೆ ಪ್ರಲಯದಲ್ಲಿ ಜೀವ ಈಶ್ವರರ ಅಸ್ತಿತ್ವವನ್ನು ಸಾಧಿಸುವುದರಿಂದ, ಧರ್ಮಾದಿಗಳ ಅಸ್ತಿತ್ವವನ್ನು ಸಾಧನ ಮಾಡಿದ್ದಾಗುತ್ತದೆ. ಆದುದರಿಂದ, ಪ್ರಲಯದಲ್ಲಿ ಯಾವದೇ ಭಾವವಿಲ್ಲವೆಂದು ಸಾಧನಮಾಡುವದು ಯುಕ್ತವಲ್ಲ. ಹೀಗೆ ಆದಿ ಕಾರ್ಯವನ್ನು ಪಕ್ಷೀಕರಿಸಿ, ಸೋಪಾದಾನತ್ವ (ಉಪಾದಾನ ಕಾರಣಜನ್ಯವೆಂಬುದನ್ನು) ವನ್ನು ಸಾಧಿಸುವದರಿಂದ, ಪ್ರಕೃತ್ಯಾದಿಗಳ ಸಿದ್ಧಿಯೂ ಆಗುವದೆಂಬುದನ್ನು ತಿಳಿಯಬೇಕು. ಹೀಗೆ ಭಾವ

ಮೊದಲನೆಯ ಸೂತ್ರದಲ್ಲಿ ಅಭಾವ(ಪ್ರಾಗಭಾವ) ಕ್ಕೆ ಕರ್ತೃತ್ವವಿಲ್ಲವೆಂಬುದನ್ನು ತೋರಿಸುವ ಅನುಮಾನವನ್ನು ಹೇಳಿದ್ದಾಯಿತು ಈಗ, ಈ ಸೂತ್ರದಿಂದಲೂ "ಜಗತ್ತಿಗೆ ಅಭಾವವು ಕರ್ತೃವಲ್ಲ. ಏಕೆಂದರೆ ಜಗತ್ತಿಗೆ ಚೇತನವೇ ಕರ್ತೃವಾಗುವುದೆಂಬಲ್ಲಿ ದೃಷ್ಟಾಂತವಿರುತ್ತದೆ" ಎಂಬುದಾಗಿ ಬೇರೆಯಾದ ವೃತ್ತಿ

— ವಿಶೇಷಾರ್ಥಪ್ರದೀಪಿಕಾ —

"ಸಾಧಿತತ್ವಾತ್"-"ಕಾರ್ಯತಾ ಚ" ಇತ್ಯಾದಿ ವಾಕ್ಯಗಳಿಂದ ಸಾಧನಮಾಡಲಾಗಿದೆಯೆಂದು ತಿಳಿಯಬೇಕು

"ಆಗಮಾತ್"-"ಯಜೇತ" ಈ ಮುಂತಾದ ಶ್ರುತಿಯಿಂದ, "ಪುಣ್ಯೇನ ಪುಣ್ಯಲೋಕಾನ್ನಯತಿ ಪಾಪೇನ ಪಾಪಂ" ಈ ಮುಂತಾದ ಸ್ಮೃತಿವಾಕ್ಯದಿಂದ, ಹೀಗೆ ಅರ್ಥ

उत्पत्तिनाशकारी च बुद्धिमान्दृश्यते क्वचित् ॥
तद्दृष्टान्तेन सर्वत्र कर्ता किं नानुमीयते ॥

वृत्त्यन्तरमभिप्रेत्य चेतनकर्तृत्वेऽनुमानमाह ॥ उत्पत्तीति । बुद्धिमानुत्पत्तिनाशकारीति बुद्धिपूर्वं तत्कर्तेत्यर्थः । क्वचित्पटादौ । सर्वत्र विप्रतिपन्ने कार्ये । महदादिकार्य इत्येवोक्तेऽङ्कुरादौ व्यभिचारः शङ्क्येत । तदर्थं तस्यापि पक्षनिक्षेपार्थं सर्वत्रेत्युक्तम् । कर्ता बुद्धिमानिति शेषः । अन्यथाऽभावकर्तृत्ववादिनं प्रति सिद्धसाधनताप्रसङ्गात् । किमाक्षेपे ।

ಬುದ್ಧಿಪೂರ್ವಕವಾಗಿ (ಬುದ್ಧಿಯುಳ್ಳ) ಉತ್ಪತ್ತಿ ವಿನಾಶಗಳನ್ನು ಮಾಡುವ ಕರ್ತೃವು, ಪಟಾದಿ ಕೆಲವು ಪದಾರ್ಥಗಳಲ್ಲಿ ಕಂಡುಬರುತ್ತಾನೆ ಆ ದೃಷ್ಟಾಂತ ದಿಂದ ಎಲ್ಲ ಕಾರ್ಯಗಳಲ್ಲಿಯೂ ಬುದ್ಧಿಯುಳ್ಳ ಕರ್ತೃವು ಏಕೆ ಊಹಿಸಲ್ಪಡ ಬಾರದು ? (ತರ್ಕದಿಂದ ಏಕೆ ಊಹಿಸಬಾರದು ?)

## — ಪದಾರ್ಥದೀಪಿಕಾ —

(ವ್ಯಾಖ್ಯಾನ) ಯನ್ನು ಅಭಿಪ್ರಾಯದಲ್ಲಿಟ್ಟುಕೊಂಡು ಜಗತ್ತು ಚೇತನಕರ್ತೃಕ ವೆಂಬಲ್ಲಿ ಅನುಮಾನವನ್ನು " ಉತ್ಪತ್ತಿ " ಈ ವಚನದಿಂದ ಹೇಳುತ್ತಾರೆ "ಬುದ್ಧಿಮಾನ್ ಉತ್ಪತ್ತಿನಾಶಕಾರೀ" ಎಂದರೆ "ಬುದ್ಧಿಪೂರ್ವಕವಾಗಿ ಉತ್ಪತ್ತಿ ನಾಶಗಳನ್ನು ಮಾಡುವವನು" ಎಂದು ಅರ್ಥ "ಕ್ವಚಿತ್"= ಪಟ ಮುಂತಾ ದವುಗಳಲ್ಲಿ "ಸರ್ವತ್ರ"= ಸಂದಿಗ್ಧವಾದ ಎಲ್ಲ ಕಾರ್ಯಗಳಲ್ಲಿ "ಮಹದಾದಿ ಕಾರ್ಯೇ" (ಮಹತ್ತು ಮುಂತಾದ ಕಾರ್ಯಗಳಲ್ಲಿ) ಎಂಬುದಾಗಿ ಮಾತ್ರವೇ ಹೇಳಿದ್ದರೆ, ಅಂಕುರ ಮುಂತಾದವುಗಳಲ್ಲಿ ಹೇತುವಿಗೆ ಸಾಧ್ಯಪರಿತ್ಯಾಗವೆಂಬ ವ್ಯಭಿಚಾರವನ್ನು ಶಂಕಿಸಬಹುದು ಅದಕ್ಕೋಸುಗ ( ಅದನ್ನು ತಪ್ಪಿಸಲು ) ಅದಕ್ಕೂ ಪಕ್ಷದಲ್ಲಿ ಸೇರ್ಪಡೆಯಾಗಲು, " ಸರ್ವತ್ರ "= ಎಂದು ಹೇಳಿದ್ದಾರ "ಕರ್ತಾ" ಇಲ್ಲಿ "ಬುದ್ಧಿಮಾನ್" ಎಂಬುದು ಶೇಷವು ಇಲ್ಲದಿದ್ದಲ್ಲಿ (ಬುದ್ಧಿ ಮಾನ್ ಎಂಬುದನ್ನು ಶೇಷವಾಗಿ ಹಚ್ಚಿಕೊಳ್ಳದಿದ್ದರೆ) ಅಭಾವವು ಜಗತ್ಕರ್ತೃ ವೆಂದು ಹೇಳುವವನನ್ನು ಕುರಿತು ಸಿದ್ಧವಾದುದನ್ನು ಸಾಧನಮಾಡುವುದೆಂಬ ದೋಷವು ಬಂದೀತು "ಕಿಮ್" ಶಬ್ದವು ಆಕ್ಷೇಪಾರ್ಥದಲ್ಲಿದೆ ಅನುಮಾನ

## — ವಿಶೇಷಾರ್ಥಪ್ರದೀಪಿಕಾ —

'ಅನುಮಾನಂ''– ಪ್ರತಿಷೇಧಮಾತ್ರತ್ವರೂಪಯುಕ್ತಿಯು ''ಸೂತ್ರಸ್ಯ''– ''ನತು ದೃಷ್ಟಾಂತಭಾವಾತ್'' ಎಂಬ ಸೂತ್ರಕ್ಕೆ

अनुमानेन किमपि कारणम् । दृष्टान्ताभावेन प्रतिपक्षासम्भवादित्यर्थः । एतेन स्वपक्षदोषाच्चेति सूत्रमपि व्याख्यातं भवति ।

अयमत्र प्रयोगक्रमः । विमतं कार्यं चेतनोत्पाद्यं कार्यत्वाद्घटवत् । चेतनविनाश्यं च तत एव तद्वदेव । विमतोत्पत्तिश्चेतनकर्तृका उत्पत्तित्वात्पटोत्पत्तिवत् । विमतो विनाशश्चेतनकर्तृको विनाशत्वात्सम्मतवदिति । अत्र विनाशस्य चेतनकर्तृकत्वसाधनं प्रासङ्गिकम् । यद्वा केचित्कारणस्य बीजादेः प्रध्वंसेनाङ्कुरादेर्जननदर्शनात्तन्त्वादि-

— ಪದಾರ್ಥದೀಪಿಕಾ —

ದಿಂದ ಯಾವದೋ ಕಾರಣವನ್ನು ಏಕೆ ಸಾಧಿಸಬಾರದು ? ಏಕೆಂದರೆ ದೃಷ್ಟಾಂತವು ಇರುವುದಿಲ್ಲವಾದುದರಿಂದ ಪ್ರತಿಪಕ್ಷವು ಸಂಭವಿಸಲಾರದು, ಹೀಗೆ ಅರ್ಥ ಇದರಿಂದ "ಸ್ವಪಕ್ಷದೋಷಾಚ್ಚ" ಎಂಬ ಸೂತ್ರವನ್ನು ವ್ಯಾಖ್ಯಾನಿಸಿದ್ದಾಗುತ್ತದೆ

ಇಲ್ಲಿಯ ಪ್ರಯೋಗ ಕ್ರಮವು – " ಸಂದಿಗ್ಧವಾದ ಕಾರ್ಯವು ಚೇತನ ಕರ್ತೃಕವಾದುದು ಏಕೆಂದರೆ ಕಾರ್ಯವಾಗಿದೆ ಇದರಲ್ಲಿ ಘಟವು ದೃಷ್ಟಾಂತವು. ಇದೇ ಯುಕ್ತಿಯಿಂದಲೇ ಇದೇ ದೃಷ್ಟಾಂತದಿಂದಲೇ ಚೇತನದಿಂದ ವಿನಾಶ ಹೊಂದುವಂತಹದೂ ಆಗಿದೆ ಸಂದಿಗ್ಧವಾದ ಕಾರ್ಯೋತ್ಪತ್ತಿಯು ಚೇತನ ಕರ್ತೃಕವಾದುದು ಏಕೆಂದರೆ ಉತ್ಪತ್ತಿಯಾಗಿದೆ ಪಟದ ಉತ್ಪತ್ತಿಯು ಇಲ್ಲಿ ದೃಷ್ಟಾಂತವು ಹಾಗು ವಿವಾದಾಸ್ಪದ ನಾಶವು ಚೇತನನಿಂದ ಮಾಡಲ್ಪಟ್ಟದ್ದು; ಏಕೆಂದರೆ ವಿನಾಶವಾಗಿದೆ ಪಟದ ವಿನಾಶವು ಇಲ್ಲಿ ದೃಷ್ಟಾಂತವು " ಹೀಗೆ. ಇಲ್ಲಿ ವಿನಾಶವು ಚೇತನನಿಂದ ಮಾಡಲ್ಪಡುವುದೆಂಬುದನ್ನು ಸಾಧಿಸುವುದು ಪ್ರಾಸಂಗಿಕವಾದುದು ಅಥವಾ– ಕೆಲವರು– "ಬೀಜ ಮುಂತಾದವುಗಳ ಧ್ವಂಸ (ನಾಶ) ವಾಗುವುದರಿಂದ ಅಂಕುರ ಮುಂತಾದುದರ ಜನನವು ಕಂಡಿರುವುದ

— ವಿಶೇಷಾರ್ಥಪ್ರದೀಪಿಕಾ —

ವಿಮತಂ'-ಆದಿಕಾಲದಲ್ಲಿರುವುದು ಇದರಂತೆ ಮುಂದೆಯೂ ತಿಳಿಯಬೇಕು.

"ಪ್ರಾಸಂಗಿಕಂ" – ಈ ಅನುಮಾನವು (ವಿಮತೋ ನಾಶಃ ಎಂಬುದು) ಪ್ರಲಯಕ್ಕೆ ಮುಂಚೆ ಚೇತನನಿರುವುದೆಂಬುದನ್ನು ಸಾಧನಮಾಡುತ್ತದೆ ಆದು ದರಿಂದ ಪ್ರಲಯಕಾಲದಲ್ಲಿ ಚೇತನನಿರುವನೆಂಬುದನ್ನು ಸಾಧನಮಾಡುವುದಿಲ್ಲ ಆದ್ದರಿಂದ ಉತ್ಪತ್ತಿಯು ಚೇತನ ಕರ್ತೃಕವೆಂಬುದನ್ನು ಸಾಧನಮಾಡುವ

नाशेन पटादिनाशदर्शनाच्च प्रध्वंसाभावस्यैव जगज्जन्मविनाशकर्तृत्वमास्थिताः । यथोक्तम् । नानुपमृद्य प्रादुर्भावादिति । तन्मतं चाऽश्चासदित्यादिसूत्रैर्निराकृतमिति ज्ञापनार्थम् । दृष्टान्ताभावस्तु स्वयमूहनीयः ।

नन्विदमनुमानेनेश्वरस्य जगत्कर्तृत्वसाधनं सूत्रकारस्योक्तविरु-

— ಪದಾರ್ಥದೀಪಿಕಾ —

ರಿಂದ, ಹಾಗು ತಂತು ಮುಂತಾದುದರ ನಾಶದಿಂದ ಪಟಾದಿಗಳ ನಾಶವೂ ಕಂಡಿರುವುದರಿಂದ, ಪ್ರಧ್ವಂಸರೂಪ ಅಭಾವವೇ ಜಗತ್ತಿನ ಜನನ ವಿನಾಶಗಳ ಕರ್ತೃ" ವೆಂದು ಬಗೆಯುತ್ತಾರೆ "ನಾನುಪಮೃದ್ಯಪ್ರಾದುರ್ಭಾವಾದಿ" (ಕಾರಣವನ್ನು ಕೊಲ್ಲದೆ ಕಾರ್ಯದ ಉತ್ಪತ್ತಿ ವಿನಾಶಗಳು ಆಗುವುದಿಲ್ಲ) ಎಂಬುದಾಗಿ ಅವರು ಹೇಳಿರುತ್ತಾರೆ ಈ ಮತವನ್ನೂ ಇಲ್ಲಿ "ಅಸದಿತಿಚೇನ್ನ ಪ್ರತಿಷೇಧ ಮಾತ್ರತ್ವಾತ್" ಇತ್ಯಾದಿ ಸೂತ್ರಗಳಿಂದ ನಿರಾಕರಿಸಿರುವುದೆಂಬುದರ ಜ್ಞಾಪನಾರ್ಥಕವಾಗಿ, ವಿನಾಶದ ಚೇತನಕರ್ತೃಕತ್ವವನ್ನು ಸಾಧಿಸಿರುತ್ತಾರೆ ದೃಷ್ಟಾಂತವಿಲ್ಲವೆಂಬುದನ್ನಂತೂ ಸ್ವಯಂ ನೀವೇ ಊಹಿಸಬೇಕು.

— ವಿಶೇಷಾರ್ಥಪ್ರದೀಪಿಕಾ —

ಪ್ರಸಂಗವಿದ್ದುದರಿಂದ ವಿನಾಶವೂ ಚೇತನಕರ್ತೃಕವೆಂಬುದನ್ನು ಸಾಧಿಸಿರುತ್ತಾರೆ "ನಾನುಪಮೃದ್ಯ ಪ್ರಾದುರ್ಭಾವಾದಿ"— ಕಾರಣದ ನಾಶವಿಲ್ಲದೆಯೆ ಕಾರ್ಯದ ಉತ್ಪತ್ತಿವಿನಾಶವಾಗುವುದಿಲ್ಲ,'' ಹೀಗೆ ಅರ್ಥ

ಇನ್ನು ಪ್ರಧ್ವಂಸವು ಕರ್ತೃವು, ಎಂಬ ಪಕ್ಷದಲ್ಲಿಯೂ ಅದರ ನಿರಾಸಕವಾದ "ಪ್ರತಿಷೇಧಮಾತ್ರತ್ವಾತ್, ಅಪೀತೌ ತದ್ವತ್ಪ್ರಸಂಗಾದಸಮಂಜಸಂ, ನತು ದೃಷ್ಟಾಂತ ಭಾವಾತ್,'' ಈ ಮೂರು ಸೂತ್ರಗಳಲ್ಲಿ ಹೇಳಿದ ಯುಕ್ತಿಗಳು ಮೂಲದಲ್ಲಿ ಹೇಳಿದಂತೆ ವ್ಯಾಖ್ಯಾನಿಸಲ್ಪಟ್ಟಿವೆಯೆಂಬುದು ತಿಳಿಯುತ್ತದೆ ಆದರೆ 'ಸ್ವಪಕ್ಷ ದೋಷಾಚ್ಚ'' ಎಂಬ ಸೂತ್ರದಲ್ಲಿ ಹೇಳಿದ ಯುಕ್ತಿಯ ವ್ಯಾಖ್ಯಾನವು ತಿಳಿಯುವುದಿಲ್ಲ ಈ ಆಶಂಕೆಯನ್ನು ''ದೃಷ್ಟಾಂತಾಭಾವಸ್ತು" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. ವಿನಾಶ ಹೊಂದದೇ ಇರುವ ಬೀಜಾದಿಗಳಿಂದಲೇ ಅಂಕುರಾದಿಗಳ ಜನನವಾಗುತ್ತದೆ. ಸಂಯೋಗಹೊಂದದ ತಂತುಗಳ ನಾಶದಿಂದ ಪಟದ ನಾಶವು ನಿನ್ನ ಮತದಲ್ಲಿಲ್ಲ ಸಂಯೋಗ ಹೊಂದಿದ ತಂತುಗಳ ನಾಶವನ್ನು ಬಿಟ್ಟು ಬೇರೆ ಪಟದ ನಾಶವೇ ಇಲ್ಲ ಈ ಕಾರಣದಿಂದ ದೃಷ್ಟಾಂತವಿಲ್ಲವೆಂಬುದನ್ನು ಸ್ವಯಂ ಊಹಿಸಬೇಕು.

आगमानुगृहीता तु मानम्

द्धम् । शास्त्रयोनित्वादितीश्वरेऽनुमानप्रामाण्यस्य स्वयमेव निराकृत-
त्वादित्यत आह ॥ आगमेति । अनुमेति वक्ष्यमाणमत्रापि सम्ब
ध्यते । न सर्वथाऽपीश्वरेऽनुमानस्य प्रामाण्यं सूत्रकृता निराकृतम् ।
किन्त्वामागमाननुगृहीतस्य । आगमानुगृहीता त्वनुमेश्वरे मानमेवाभि-
मता । अन्यथा वेदवाक्यार्थे युक्त्यनुसन्धानरूपजिज्ञासां नारभेतेति ।

**ಆಗಮದಿಂದ ಅನುಗ್ರಹಪಡೆದ ಅನುಮಾನವಾದರೋ ಪ್ರಮಾಣವೆಂದೇ ಒಪ್ಪಿತವಾಗಿದೆ**

## — ಪದಾರ್ಥದೀಪಿಕಾ —

ಇನ್ನು— ಇದು— ಅನುಮಾನದಿಂದ ಈಶ್ವರನಿಗೆ ಜಗತ್ಕರ್ತೃತ್ವವನ್ನು ಸಾಧನಮಾಡುವ ಸೂತ್ರಕಾರರ ಈ ಕಾರ್ಯವು, ತಮ್ಮ ವಚನಕ್ಕೆ ವಿರುದ್ಧವಾದುದು ಏಕೆಂದರೆ- "ಶಾಸ್ತ್ರಯೋನಿತ್ವಾತ್" ಇತ್ಯಾದಿ ಸೂತ್ರಗಳಿಂದ ಈಶ್ವರನ ಬಗ್ಗೆ ಅನುಮಾನದ ಪ್ರಾಮಾಣ್ಯವನ್ನು ಸ್ವತಃ ಸೂತ್ರಕಾರರೇ ನಿರಾಕರಿಸಿರುತ್ತಾರೆ" ಹೀಗೆ ಬರುವ ಪ್ರಶ್ನೆಯನ್ನು "ಆಗಮಾನುಗೃಹೀತಾ" ಇತ್ಯಾದಿ ಪದ್ಯದಿಂದ ಉತ್ತರಿಸುತ್ತಾರೆ 'ಅನುಮಾ" ಎಂದು ಮುಂದ ಹೇಳುವ ಪದವು ಇಲ್ಲಿಯೂ ಅನ್ವಯಿಸುತ್ತದೆ ಸೂತ್ರಕಾರರು, ಎಲ್ಲ ಬಗೆಗಳಿಂದಲೂ ಈಶ್ವರನ ವಿಷಯದಲ್ಲಿ ಅನುಮಾನದ ಪ್ರಾಮಾಣ್ಯವನ್ನು, ನಿರಾಕರಿಸಿಲ್ಲ ಆದರೆ ಆಗಮಗಳಿಂದ ಅನುಗ್ರಹ (ಸಹಾಯ) ಹೊಂದದ ಅನುಮಾನಗಳಿಗೇ ಪ್ರಾಮಾಣ್ಯವನ್ನು ನಿರಾಕರಿಸಿದ್ದಾರೆ ಆಗಮಗಳಿಂದ ಅನುಗ್ರಹವನ್ನು ಪಡೆದ ಅನುಮಾನವು ಈಶ್ವರನ ವಿಷಯದಲ್ಲಿ ಪ್ರಮಾಣವೆಂದೇ ಸೂತ್ರಕಾರರಿಗೆ ಸಮ್ಮತಿಯಿರುತ್ತದೆ ಹಾಗಿಲ್ಲದಿದ್ದಲ್ಲಿ— ಸೂತ್ರಕಾರರು, ವೇದವಾಕ್ಯಗಳ ಅರ್ಥಗಳ ವಿಷಯದಲ್ಲಿ ಯುಕ್ತಿಯನ್ನು ಹಚ್ಚುವುದೆಂಬ ಜಿಜ್ಞಾಸೆಯನ್ನು ಆರಂಭಿಸುತ್ತಿರಲಿಲ್ಲ." ಹೀಗೆ ಅರ್ಥ.

## — ವಿಶೇಷಾರ್ಥಪ್ರದೀಪಿಕಾ —

"ಏಷಾ" ಈ ಮುಂತಾದುದು ವಾಕ್ಯಾಂತರವೆಂದು ತಿಳಿದು 'ಇತಿ ವಕ್ಷ್ಯಮಾಣಮತ್ರಾಪಿ ಸಂಬಧ್ಯತೆ" ಎಂಬುದಾಗಿ ಹೇಳಿದ್ದಾರೆ 'ತು" ಶಬ್ದದಿಂದ ಸೂಚಿತವಾದ ಪಕ್ಷಾಂತರದ ನಿರಾಸವನ್ನು "ನಸರ್ವಥಾಽಪಿ" ಇತ್ಯಾದಿ ವಾಕ್ಯಗಳಿಂದ ವಿಶದ ಪಡಿಸುತ್ತಾರೆ "ಆಗಮಾನುಗೃಹೀತ" ವೆಂದರೆ 'ಆಗಮಪಂವಾದಿಯಾಗಿರುವುದು,' (ಆಗಮದಿಂದತಿಳಿಸಲ್ಪಟ್ಟ ವ್ಯಾಪ್ತಿಮುಂತಾದುದನ್ನುಳ್ಳದ್ದಾಗಿರುವುದು,"(ಆಗಮದಿಂದ ಹೇಳಲ್ಪಟ್ಟವುಗಳಾಗಿರುವುದು,) ಎಂದು ಅರ್ಥ

एषाऽनुमाऽपि तु ॥

किमतो यद्येवमित्यत आह ॥ एषेति । आगमानुगृहीतेत्यनुवर्तते । मानमिति च । एषा सम्प्रत्युपन्यस्ताऽप्यनुमा यतो वा इमानि भूतानीत्यागमानुगृहीता । ततो भवतीश्वरे मानमिति न कश्चिद्विरोध इति ।

एवमनुमानेनाभावकर्तृत्वं विश्वस्याशङ्क्यानुमानेनैवेश्वरकर्तृकत्वं समर्थितम् । तदेतन्मतान्तरेणाक्षिप्य समादधत्सूत्रम् । ॥ ॐ तर्काप्रतिष्ठानादन्यथाऽप्यनुमेयमिति चेदेवमप्यनिर्मोक्षप्रसङ्गः ॐ ॥ तत्रा–

ಈಗ ಹೇಳಿದ ಅನುಮಾನವಾದರೂ ಆಗಮದಿಂದ ಅನುಗ್ರಹೀತವಾದುದರಿಂದ ಪ್ರಮಾಣವೇ ಆಗುತ್ತದೆ.

## — ಪದಾರ್ಥದೀಪಿಕಾ —

ಇನ್ನು– ಇದರಿಂದ– (ಹೀಗಾದರೆ) ಆದುದೇನು ? ಎಂಬ ಆಶಂಕೆಯನ್ನು "ಏಷಾ" ಈ ವಚನದಿಂದ ನಿವಾರಿಸುತ್ತಾರೆ 'ಆಗಮಾನುಗೃಹೀತಾ" ಎಂಬ ಪದವು ಮುಂದುವರೆದಿದೆ. ಹಾಗು "ಮಾನಂ" ಎಂಬ ಪದವೂ ಮುಂದುವರೆದಿದೆ "ಏಷಾ"= ಈಗ ಹೇಳಲ್ಪಟ್ಟ ಅನುಮಾನವು, "ಯತೋ ವಾ ಇಮಾನಿ ಭೂತಾನಿ" ಈ ಮುಂತಾದ ಆಗಮಗಳಿಂದ ಅನುಗ್ರಹವನ್ನು ಪಡೆದಂತಹದು ಆದುದರಿಂದ, ಈಶ್ವರನ ವಿಷಯದಲ್ಲಿ ಪ್ರಮಾಣವಾಗುತ್ತದೆ ಆದುದರಿಂದ ಯಾವದೇ ವಿರೋಧವು ಬರುವುದಿಲ್ಲ." ಹೀಗೆ ಉತ್ತರ

ಹೀಗೆ ಅನುಮಾನದಿಂದ "ವಿಶ್ವಕ್ಕೆ ಅಭಾವವು ಕರ್ತೃವು" ಎಂದು ಆಶಂಕಿಸಿ, " ವಿಶ್ವಕ್ಕೆ ಈಶ್ವರನು ಕರ್ತೃವು " ಎಂಬ ಉತ್ತರವನ್ನು ಅನುಮಾನದಿಂದಲೇ ಸಮರ್ಥಿಸಿದುದಾಯಿತು ಇದೇ ಸಂಗತಿಯನ್ನು ಮತಾಂತರದಿಂದ ಆಕ್ಷೇಪಿಸಿ ಸಮಾಧಾನಪಡಿಸುವ ಸೂತ್ರವು "ತರ್ಕಾಪ್ರತಿಷ್ಠಾನಾದನ್ಯಥಾಽಪ್ಯನುಮೇಯಮಿತಿಚೇದೇವಮಪ್ಯನಿರ್ಮೋಕ್ಷಪ್ರಸಂಗಃ" ಎಂಬುದು ಇಲ್ಲಿ ಆಕ್ಷೇ

## — ವಿಶೇಷಾರ್ಥಪ್ರದೀಪಿಕಾ —

ಹೀಗ ಕಲ್ಪಿಸುವುದೇಕೆಯೆಂಬಲ್ಲಿ ಜ್ಞಾಪಕವನ್ನು "ಅನ್ಯಥಾ" ಇತ್ಯಾದಿ ವಚನದಿಂದ ಹೇಳುತ್ತಾರೆ ಆ ಯುಕ್ತಿಗಳಲ್ಲಿ ಕೆಲವು ಆಗಮದಿಂದಲೇ ಹೇಳಲ್ಪಟ್ಟವುಗಳು" ಕೆಲವು ಆಗಮ ಸಂವಾದಿಗಳೂ ಆಗಿರುತ್ತವೆ ಆದುದರಿಂದ ಅವುಗಳನ್ನೂ ನಿರಾಕರಿಸಿದರೆ ಮೀಮಾಂಸೆಯೇ ಯುಕ್ತವಾಗದು, ಹೀಗೆ ಭಾವ

## ॐ तर्काप्रतिष्ठानादन्यथाऽप्यनुमेयमिति चेदेवमप्यनिर्मोक्षप्रसङ्गः ॐ

क्षेपस्यायमर्थः । नायमनुमानावष्टम्भेन पूर्वपक्षः सिद्धान्तो वा युज्यते। यतः प्रमाणाभासेन पूर्वपक्षः प्रमाणेन च सिद्धान्तो भवति। न चानुमानं नाम प्रमाणमस्ति । कुतः । अन्यथाऽप्यनुमेयम् । असत्प्रतिपक्षत्वं ह्यनुमानप्रामाण्यवादिभिरनुमानाङ्गमङ्गीकरणीयम् । प्रतिरुद्धस्य करणस्य क्वापि क्रियानिष्पादकत्वादर्शनात् । अनुमानप्रतिपन्नं चान्यथाऽप्यनुमेयमनुमातुं शक्यम् । कस्मात् । तर्काप्रतिष्ठानात् । एवमेवानुमातव्यम् । न पुनरन्यथेति तर्कस्य व्यवस्थाभावात् । तथा

— ಪದಾರ್ಥದೀಪಿಕಾ —

ವಾಂಶದ ಅರ್ಥವು ಇದು– "ಅನುಮಾನದ ಅವಲಂಬನೆಯಿಂದಾದ ಈ ಪೂರ್ವ ಪಕ್ಷವಾಗಲೀ ಸಿದ್ಧಾಂತವಾಗಲೀ ಯುಕ್ತವೆನಿಸುವುದಿಲ್ಲ ಏಕೆಂದರೆ– ಪ್ರಮಾಣಾಭಾಸದಿಂದ ಪೂರ್ವಪಕ್ಷವೂ ಪ್ರಮಾಣದಿಂದ ಸಿದ್ಧಾಂತವೂ ಆಗುತ್ತದೆ ಆದರೆ ಅನುಮಾನವೆಂಬುದು ಪ್ರಮಾಣವೇ ಅಲ್ಲ ಏಕೆ ? "ಅನ್ಯಥಾಪ್ಯನುಮೇಯಂ"— ವಿಪರೀತವಾಗಿಯೂ ಅನುಮಾನಮಾಡಲು ಬರುತ್ತದೆ ಅನುಮಾನದ ಪ್ರಾಮಾಣ್ಯವನ್ನು ಹೇಳುವವರು, ಸತ್ಪ್ರತಿಪಕ್ಷಾನುಮಾನವಿರಬಾರದೆಂಬ ಅಂಗವನ್ನು ಅನುಮಾನಕ್ಕೆ ಅಂಗೀಕರಿಸಬೇಕು ಏಕೆಂದರೆ ಪ್ರತಿರೋಧ ಹೊಂದಿರುವ ಕರಣವು, ಕ್ರಿಯೆಯನ್ನು ಉಂಟುಮಾಡುವುದು ಎಲ್ಲಿಯೂ ಕಂಡಿಲ್ಲ ಅನುಮಾನದಿಂದ ಊಹಿಸಲ್ಪಟ್ಟು ತಿಳಿದ ವಿಷಯದ ಬಗ್ಗೆ ವಿಪರೀತವಾಗಿಯೂ ಊಹಿಸಲು ಶಕ್ಯವು ಏಕೆ ? "ತರ್ಕಾಪ್ರತಿಷ್ಠಾನಾತ್"– ಹೀಗೆಯೇ ಅನುಮಾನಮಾಡತಕ್ಕದ್ದು, ಬೇರೆಯಾಗಿ ಅನುಮಾನಮಾಡತಕ್ಕದ್ದಲ್ಲ" ಎಂಬುದಾಗಿ ತರ್ಕಕ್ಕೆ ವ್ಯವಸ್ಥೆಯು ಇರುವುದಿಲ್ಲ ಈ ವಿಷಯವನ್ನು 'ಉಪಾಧಿ ಪ್ರತಿಪಕ್ಷೌ

— ವಿಶೇಷಾರ್ಥಪ್ರದೀಪಿಕಾ —

"ಸಂಪ್ರತ್ಯುಪನ್ಯಸ್ತಾಪಿ"–"ಉತ್ಪತ್ತಿವಿನಾಶಕಾರೀ" ಎಂಬುದಾಗಿ ಹೇಳಿದ ಅನುಮಾನವು, ಹೀಗೆ ಅರ್ಥ "ಯತ್ಪ್ರಯಂತಿ" ಎಂಬುದಾಗಿ 'ಯತೋ ವಾ" ಈ ಶ್ರುತಿಯಲ್ಲಿ ಹೇಳಿದುದರಿಂದ ಅದು ಆಗಮಾನುಗೃಹೀತವೆಂದು ತಿಳಿಯಬೇಕು

"ಮತಾಂತರೇಣ"–ತರ್ಕದ ಅಪ್ರಾಮಾಣ್ಯವನ್ನು ವಾದಿಸುವವರ ಮತದಿಂದ

चोक्तम् । उपाधिप्रतिपक्षौ तु क्व नामातीव दुर्वचाविति । नन्विदं व्यधिकरणं तर्कस्याप्रतिष्ठितत्वादन्यथाऽनुमेयमिति । मैवम् । एतदनेन ज्ञापयति सूत्रकारः । न तर्कोऽनुमानाद्भिद्यत इति । अथवा तर्कस्यानुमानस्याप्रतिष्ठानादप्रमाणत्वान्नानुमानेन पूर्वोत्तरपक्षौ युक्तौ । कथमप्रमाणत्वम् । यतोऽन्यथाऽनुमेयमिति योजना । तत्र समाधानसूत्रं

— ಪದಾರ್ಥದೀಪಿಕಾ —

ತು ಕ್ವ ನಾಮಾತೀವ ದುರ್ವಚೌ" ಎಂಬುದಾಗಿ ಪ್ರಾಚೀನರ ವಚನವಿದೆ " ಹೀಗೆ ಅರ್ಥ ಇನ್ನು 'ತರ್ಕಕ್ಕೆ ಪ್ರತಿಷ್ಠಿತತ್ವವಿಲ್ಲದಿರುವುದರಿಂದ ಅನುಮೇಯವನ್ನು ವಿಪರೀತನಾಗಿಯೂ ಊಹಿಸತಕ್ಕದ್ದು'' ಹೀಗೆ ತರ್ಕದಲ್ಲಿ ಅಪ್ರತಿಷ್ಠಿತತ್ವ, ಅನುಮಾನದಿಂದ ತಿಳಿಯಬೇಕಾದುದಕ್ಕೆ ಅನ್ಯಥಾ ಅನುಮೇಯತ್ವಗಳಲ್ಲಿ ಸಾಮಾನಾಧಿಕರಣ್ಯವಿಲ್ಲವೆಂದು ಶಂಕಿಸುವುದು ಸರಿಯಲ್ಲ ಏಕೆಂದರೆ- ಹೀಗೆ ಸೂತ್ರವನ್ನು ವಿನ್ಯಾಸಮಾಡುವುದರಿಂದ, " ಅನುಮಾನದಿಂದ ಬೇರೆಯಾದುದಲ್ಲ ತರ್ಕವು '' ಎಂಬ ಸಂಗತಿಯನ್ನು ಜ್ಞಾಪನಮಾಡುತ್ತಾರೆ ಅಥವಾ— "ತರ್ಕಸ್ಯ— ಅನುಮಾನಕ್ಕೆ, "ಅಪ್ರತಿಷ್ಠಾನಾತ್''= ಪ್ರಾಮಾಣ್ಯವಿಲ್ಲವಾದುದರಿಂದ, ಅನುಮಾನದಿಂದ ಪೂರ್ವಪಕ್ಷ ಸಿದ್ಧಾಂತಗಳನ್ನು ಮಾಡುವುದು ಯುಕ್ತವಲ್ಲ ತರ್ಕಕ್ಕೆ ಅಪ್ರಾಮಾಣ್ಯವು ಹೇಗೆ ? ಎಂದರೆ- "ಅನ್ಯಥಾಪ್ಯನುಮೇಯಂ''- "ವಿಪರೀತ

— ವಿಶೇಷಾರ್ಥಪ್ರದೀಪಿಕಾ —

"ತಥಾಚೋಕ್ತಂ"–ಹಿಂದಿನ ಪಾದದ ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆಯೆಂದು ತಿಳಿಯಬೇಕು

'"ಇದಂ ವ್ಯಧಿಕರಣಂ''-"ಅನುಮಾನಾಪ್ರತಿಷ್ಠಾನಾತ್,'' ಎಂಬುದಾಗಿಯಾಗಲೀ ''ಅನ್ಯಥಾತರ್ಕ್ಯಂ'' ಎಂಬುದಾಗಿಯಾಗಲೀ ವಾಕ್ಯವಿನ್ಯಾಸವಿರಬೇಕೆಂದು ಭಾವ ಏಕೆಂದರೆ- "ತರ್ಕಾಪ್ರತಿಷ್ಠಾನತ್ವ", ಅನ್ಯಥಾಽನುಮೇಯತ್ವಗಳೆರಡರಲ್ಲಿ ಸಾಮಾನಾಧಿಕರಣ್ಯವಿಲ್ಲ. ಅನುಮಾನದ ಅವ್ಯವಸ್ಥೆಯಿಂದ ಅನ್ಯಥಾ ಅನುಮೇಯವೆಂಬುದನ್ನು ಸಾಧನಮಾಡಿ " ಇದಂ ಅನ್ಯಥಾನುಮೇಯಂ ಅನುಮಾನಾವ್ಯವಸ್ಥಿತತ್ವಾತ್" ಎಂಬುದಾಗಿ ಹೇಳಬೇಕು ಹಿಂದೆ ಅನುಮಾನದ ಅಪ್ರಾಮಾಣ್ಯದ ಬಗ್ಗೆ " ಅನ್ಯಥಾಽಪ್ಯನುಮೇಯಂ " ಎಂಬುದಾಗಿ ಹೇತುವು ಹೇಳಲ್ಪಟ್ಟಿತು ಈಗ ಬೇರೆ ಸಾಧ್ಯವನ್ನು ಮಾಡಲು "ತರ್ಕಾಪ್ರತಿಷ್ಠಾನಾತ್" ಎಂಬುದು ಅದರಲ್ಲಿ ಹೇತುವು ಇದರ ಬಗ್ಗೆ ಹೇತುವು '' ಅನ್ಯಥಾಽಪ್ಯನುಮೇಯಂ" ಎಂಬುದು, ಹೀಗೆ ''ಅಥವಾ" ಇತ್ಯಾದಿ ವಚನದಿಂದ ಹೇಳುತ್ತಾರೆ.

आगमानुग्रहाभावे न तर्कः स्यात्प्रतिष्ठितः ॥
अक्षजागममूलस्य स्यादेवास्य प्रतिष्ठितिः ॥

सङ्गमयितुमुत्सूत्रमेव भाष्यकारस्तावदुत्तरमाह ॥ आगमेति । आगमग्रहणं प्रमाणमात्रोपलक्षणम् । अत एवोत्तरार्धेऽक्षजमपि सङ्गृहीतम् । प्रमाणानुग्रहप्रमाणमूलशब्दाभ्यां प्रतिष्ठितप्रामाण्यप्रमाणान्तरावधृतपक्षलिङ्गव्याप्तिमत्त्वं तत्संवादित्वं चोच्यते । तत्राद्ययोजनायामस्यायमर्थः । यदुक्तमनुमानस्याव्यवस्थितत्वेन सर्वत्र प्रत्यनुमान-

ಪ್ರಮಾಣದ ಅನುಗ್ರಹವಿಲ್ಲದಿದ್ದರೆ ತರ್ಕವು (ಅನುಮಾನವು) ಪ್ರಮಾಣವಾಗಲಾರದು. (ಪ್ರಮಾಣಮೂಲಕವಾದ ತರ್ಕವೇ ಪ್ರಾಮಾಣ್ಯವುಳ್ಳದ್ದು.)
ಪ್ರತ್ಯಕ್ಷ ಆಗಮ ಮುಂತಾದ ಪ್ರಮಾಣಮೂಲಕವಾದ ಈ ಅನುಮಾನಕ್ಕೆ ಪ್ರಾಮಾಣ್ಯವು ಇದ್ದೇ ಇರುತ್ತದೆ.

— ಪದಾರ್ಥದೀಪಿಕಾ —

ವಾಗಿಯೂ ಊಹಿಸಬರುತ್ತದೆ" (ಅನುಮಾನದಿಂದ) ಹೀಗೆ ಯೋಜನೆಯನ್ನು ತಿಳಿಯಬೇಕು ಹೀಗಿರುವಾಗ ಇದರ ಮೇಲೆ ಸಮಾಧಾನ ಸೂತ್ರಾಂಶವನ್ನು ಹೊಂದಿಸಲು, ಸೂತ್ರದಲ್ಲಿ (ಶಬ್ದತಃ) ಅನುಕ್ತವಾದ ಉತ್ತರವನ್ನು ಭಾಷ್ಯಕಾರರು "ಆಗಮಾನುಗ್ರಹಾಭಾವೇ" ಇತ್ಯಾದಿ ವಚನದಿಂದ ಹೇಳುತ್ತಾರೆ ಇಲ್ಲಿ "ಆಗಮ" ಪದವನ್ನು ಗ್ರಹಿಸಿದುದು, ಯಾವತ್ತೂ ಪ್ರಮಾಣಗಳ ಸಂಗ್ರಾಹಕವಾಗಿದೆ ಆದುದರಿಂದಲೇ, ಉತ್ತರಾರ್ಧದಲ್ಲಿ "ಅಕ್ಷಜ" ಎಂಬುದಾಗಿ (ಅಕ್ಷ) ಇಂದ್ರಿಯ ಜನಿತ ಜ್ಞಾನವನ್ನೂ ತರ್ಕದ ಅನುಗ್ರಾಹಕ ಪ್ರಮಾಣವಾಗಿ ಸಂಗ್ರಹಿಸಿರುತ್ತಾರೆ ಪ್ರಮಾಣಾನುಗ್ರಹ, ಪ್ರಮಾಣಮೂಲ, ಈ ಶಬ್ದಗಳಿರ ದರಿಂದ, "ಪ್ರಮಾಣವೆಂದು ನಿರ್ಣೀತವಾದ ಪ್ರಮಾಣಾಂತರದಿಂದ ನಿಶ್ಚಯಿಸಲ್ಪಟ್ಟ ಪಕ್ಷ, ಹೇತು, ಹಾಗು ಹೇತುವಿಗೆ ಸಾಧ್ಯದೊಡನೆ ಇರಬೇಕಾದ ಅವಿನಾಭಾವವೆಂಬ ನಿಯತಸಂಬಂಧ, ಇವುಗಳಿಂದ ಕೂಡಿರುವುದು, ಹಾಗು ಇಂಥ ಪ್ರಮಾಣಾಂತರದಿಂದ ಸಂವಾದವನ್ನು ಹೊಂದಿರುವುದು, ಈ ಎರಡು ಸಂಗತಿಗಳನ್ನು ಹೇಳಿರುತ್ತಾರೆ ಹೀಗಿರುವಾಗ ಮೊದಲನೆಯ ಯೋಜನೆಯಲ್ಲಿ ಈ ಅನುವ್ಯಾಖ್ಯಾನಕ್ಕೆ ಹೀಗೆ ಅರ್ಥವು— "ಅನುಮಾನಕ್ಕೆ ವ್ಯವಸ್ಥೆಯು ಇಲ್ಲ

— ವಿಶೇಷಾರ್ಥಪ್ರದೀಪಿಕಾ —

"ಸೂತ್ರಂ"-ಸೂತ್ರಾಂಶವನ್ನು "ಅಸ್ಯ"-ಸಿದ್ಧಾಂತಸೂತ್ರಕ್ಕೆ

सम्भव इति तदनुपपन्नम् । यतः प्रमाणानुग्रहाभावे तर्को न प्रतिष्ठितः स्यात् । किन्तु प्रमाणमूलस्यैवास्य प्रतिष्ठितिः स्यात् । एतदुक्तं भवति । प्रत्यनुमानं भवत्किं प्रमाणानुग्रहरहितं स्यात् । उत तन्मूलम् । आद्यं तु कथं स्वयमदृढभूमिकं परं प्रतिरुन्ध्यात् । न हि भवति तरक्षोः प्रतिपक्षो हरिणशावः । किन्त्वाद्येनैव प्रमाणमूलेन बाध्यते । द्वितीयं तु स्यादेव प्रमाणम् । आद्यं चापबाधेत । उभयथाऽपि न सर्वानुमानाप्रामाण्यम् । यदा तूभयोरपि प्रमाणमूलत्व-

— ಪದಾರ್ಥದೀಪಿಕಾ —

ವಾದುದರಿಂದ ಎಲ್ಲದರಲ್ಲೂ ಅನುಮಾನಕ್ಕೆ ಅವಕಾಶವು ಸಂಭವಿಸುತ್ತದೆಂದು ಹೇಳಿದುದು ಯುಕ್ತವೆನಿಸುವುದಿಲ್ಲ ಏಕೆಂದರೆ- ಪ್ರಮಾಣದ ಅನುಗ್ರಹವು ಇಲ್ಲದಿದ್ದಲ್ಲಿ ತರ್ಕವು ( ಅನುಮಾನವು ) ಪ್ರಮಾಣವೆನಿಸಲಾರದು ಆದರೆ ಪ್ರಮಾಣದ ಆಧಾರವುಳ್ಳದ್ದೇ ಆದ ತರ್ಕಕ್ಕೇ ಪ್ರಾಮಾಣ್ಯವು ಸಂಭವಿಸುತ್ತದೆ ಇಲ್ಲಿ- ಇದನ್ನು ಹೇಳಿದುದಾಗುತ್ತದೆ— "ಪ್ರತಿಪಕ್ಷರೂಪವಾಗಿ ಬರುವ ಅನುಮಾನವು ಯಾವದು ? ಎಂತಹದು ? ಅದು ಪ್ರಮಾಣಾಂತರದಿಂದ ಅನುಗ್ರಹವನ್ನು ಪಡೆಯದಿದ್ದುದೋ ? ಅಥವಾ ಪ್ರಮಾಣಾಂತರದ ಆಧಾರವನ್ನು ಹೊಂದಿರುವಂತಹದ್ದೋ ? ಮೊದಲನೆಯದಾದ ಅನುಮಾನವಂತೂ ತಾನೇ ನಿಲ್ಲಲು ಸ್ಥಿರವಾದ ಸ್ಥಾನವಿಲ್ಲದುದಾಗಿದ್ದು, ಎರಡನೆಯದನ್ನು (ಪ್ರಕೃತಾನುಮಾನವನ್ನು ) ಹೇಗೆ ಪ್ರತಿಬಂಧಿಸೀತು ? ಏಕೆಂದರೆ ತರಕ್ಷುವಿಗೆ ಮರಿ ಎರಳೆಯು ಪ್ರತಿಪಕ್ಷವಾಗುವುದಿಲ್ಲ ವಿಪರೀತವಾಗಿ, ಪ್ರಮಾಣವೇ ಮೂಲವಾಗಿಯುಳ್ಳ ಮೊದಲನೆಯ ಅನುಮಾನದಿಂದಲೇ ಆ ಸತ್ಪ್ರತಿಪಕ್ಷಾನುಮಾನವು ಬಾಧೆಯನ್ನು ಹೊಂದುತ್ತದೆ ಇನ್ನು ಎರಡನೆಯದು (ಪ್ರಮಾಣದ ಆಧಾರವನ್ನು ಹೊಂದಿದ ಅನುಮಾನವು) ಪ್ರಮಾಣವು ಆಗಿಯೇ ಆಗುತ್ತದೆ ಹಾಗು ಮೊದಲನೆಯ ಅನುಮಾನವನ್ನು ಬಾಧಿಸಿಯೇ ಬಾಧಿಸುತ್ತದೆ ಹೀಗೆ ಎರಡೂ ತರಹಗಳಿಂದಲೂ ಅನುಮಾನಗಳಿಗೆಲ್ಲ ಅಪ್ರಾಮಾಣ್ಯವು ಸಲ್ಲುವುದಿಲ್ಲ ಇನ್ನು ಎರಡೂ ಅನುಮಾನಗಳ

— ವಿಶೇಷಾರ್ಥಪ್ರದೀಪಿಕಾ —

"ಕಿಂತು" ಎಂಬುದನ್ನು ಅಧ್ಯಾಹರಿಸಿ ಯೋಜನವನ್ನು "ಕಿಂತು ಪ್ರಮಾಣಮೂಲಸ್ಯ" ಎಂಬ ವಾಕ್ಯದಿಂದ ತೋರಿಸುತ್ತಾರೆ ಇದು "ಅಕ್ಷಜಾಗಮಮೂಲಸ್ಯ" ಎಂಬುದರ ಅರ್ಥ "ಪ್ರತಿಷ್ಠಿತಿಃ"-ಪ್ರಾಮಾಣ್ಯವು. ಇನ್ನು- ಎರಡೂ

सन्देहस्तदाऽस्तु प्रतिरोधः । किन्तु नैवं सर्वत्र । अवधारणायां तु पूर्वैव गतिरिति ।

द्वितीययोजनायां तु प्रष्टव्यम् । किं प्रमाणानुग्रहरहितमनुमानं प्रत्यनुमानपराहतत्वादप्रमाणम् । उत तन्मूलम् । आद्ये सम्प्रतिपत्तिमुत्तरमाह ॥ आगमेति ॥ तथाऽपि नैवं सर्वत्रेति भावः । प्रतिष्ठितः

— ಪದಾರ್ಥದೀಪಿಕಾ —

ಬಗ್ಗೆಯೂ ಪ್ರಮಾಣ ಮೂಲಕಗಳೆಂಬ ಸಂಶಯವು ಬಂದರೆ ಆಗ ಪರಸ್ಪರ ಪ್ರತಿರೋಧವಾಗಲಿ! ಆದರೆ ಹೀಗೆ ಸರ್ವತ್ರ ಪ್ರಮಾಣಮೂಲಕತ್ವ ಸಂದೇಹವು ಇರುವುದಿಲ್ಲ. ಎರಡರಲ್ಲೊಂದರ ಬಗ್ಗ ಪ್ರಮಾಣಮೂಲವೆಂಬ ನಿರ್ಣಯವಿದ್ಧರಂತೂ ಪೂರ್ವದಲ್ಲಿ ಹೇಳಿದುದೇ ಗತಿಯು" ಹೀಗೆ ಭಾವ, ಎಂಬುದು

ಇನ್ನು ಎರಡನೆಯ ಯೋಜನೆಯಲ್ಲಿ– " ಪ್ರಮಾಣದ ಅನುಗ್ರಹವಿಲ್ಲದ ಅನುಮಾನವು, ವಿರುದ್ಧ ಅನುಮಾನದಿಂದ ಪರಾಭವ ಹೊಂದಿರುವುದರಿಂದ, ಅಪ್ರಮಾಣವೋ? ಇಲ್ಲವೆ ಪ್ರಮಾಣಮೂಲಕವಾದ ಅನುಮಾನವು ಅಪ್ರಮಾಣವೋ? ಹೀಗೆ ಪ್ರಶ್ನೆ ಮೊದಲನೆಯ ಕಲ್ಪದಲ್ಲಿ ಸಮ್ಮತಿಯೇ ಎಂಬ ಉತ್ತರವನ್ನು " ಆಗಮಾನುಗ್ರಹಾಭಾವೇ " ಈ ವಾಕ್ಯದಿಂದ ಹೇಳಿರುತ್ತಾರೆ ಆದರೂ ಎಲ್ಲ ಅನುಮಾನಗಳಲ್ಲಿಯೂ ಈ ಸ್ಥಿತಿಯು ಇರುವುದಿಲ್ಲ 'ಪ್ರತಿಷ್ಠಿತಃ"=

— ವಿಶೇಷಾರ್ಥಪ್ರದೀಪಿಕಾ —

ಅನುಮಾಗಳ ಬಗ್ಗೆ ಪ್ರಮಾಣಮೂಲತ್ವವಿದೆಯೋ ಇಲ್ಲವೋ ಎಂಬ ಸಂಶಯವಿದ್ದರೆ(ನಿರ್ಣಯವಿಲ್ಲದಿದ್ದರೆ) ಸರ್ವಅನುಮಾನಗಳಿಗೆ ಅಪ್ರಾಮಾಣ್ಯವು ಬಂದೇ ಬರುತ್ತದೆಂಬ ಆಶಂಕೆಯನ್ನು 'ಯದಾ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. "ಕಿಂತು"–ಎಲ್ಲ ಅನುಮಾನಗಳಲ್ಲಿ ಪ್ರಮಾಣಮೂಲತ್ವ ಸಂಶಯವಿರುವುದಿಲ್ಲ ಹಾಗಿರುತ್ತಿದ್ದಲ್ಲಿ ಸರ್ವಅನುಮಾನಗಳಗೆ ಅಪ್ರಾಮಾಣ್ಯವುಬರುತ್ತಿತ್ತು, ಹೀಗೆಭಾವ

"ಅವಧಾರಣಾಯಾಂ ತು" - ಎರಡರಲ್ಲೊಂದು ಅನುಮಾನಕ್ಕೆ ಪ್ರಮಾಣ ಮೂಲತ್ವವು ಇದೆಯೆಂದು ನಿರ್ಣಯವಾದರೆ, ಪ್ರಮಾಣಮೂಲವುಳ್ಳ ಆ ಅನುಮಾನದಿಂದ ಇನ್ನೊಂದು ಅನುಮಾನಕ್ಕೆ ಬಾಧವು ಬರುತ್ತದೆ ಆದುದರಿಂದ ಸರ್ವಾನುಮಾನಗಳಿಗೆ ಅಪ್ರಾಮಾಣ್ಯವಿಲ್ಲವೆಂದು ಹಿಂದೆ ಹೇಳಿದುದೇ ವ್ಯವಸ್ಥೆಯು

"ತಥಾಪಿ" – ಆಗಮದ ಅನುಗ್ರಹವಿಲ್ಲದಿದ್ದಲ್ಲಿ ಲೋಕದಲ್ಲಿ ತರ್ಕವು ಪ್ರತಿಷ್ಠಿತ (ಪ್ರಮಾಣ) ವಾಗದು ಆಗಮದ ಅನುಗ್ರಹವಿಲ್ಲದಿರುವುದು ಎಲ್ಲ

अन्यथाऽस्याप्रतिष्ठा च स्ववाचा व्याहतेव हि ॥

प्रमाणभूतः । द्वितीये त्वाह ॥ अक्षजेति । प्रतिष्ठितिः प्रामाण्यं; तेनैव प्रतियोगस्य बाधितत्वात् । उभयोर्वास्तवप्रमाणमूलत्वासम्भवादिति भावः। यस्त्वेतां व्यवस्थामनभ्युपगम्य सर्वत्रापि प्रतिपक्षस्यास्त्यवकाश इति सर्वमनुमानमप्रमाणमिति च मन्येत तस्य सूत्रारूढमुत्तरमाह । अन्यथेति ।। एतेनैवमुपपादितेऽपि यो नैवं मन्येत तस्य स्ववचनव्याघाताद्निर्मोक्षप्रसङ्ग इति सूत्रयोजना सूचिता। तथा हि ।

ಇದನ್ನು ಒಪ್ಪದಿದ್ದ ಪಕ್ಷದಲ್ಲಿ ಪ್ರಮಾಣ ಮೂಲಕವಾದ ಎಲ್ಲ ಅನುಮಾನ ಗಳಿಗೂ ಅಪ್ರಾಮಾಣ್ಯವು ಸೂತ್ರಕಾರರ ಸ್ವವಚನದಿಂದ ಬಾಧಿತವಾದೀತು !

— ಪದಾರ್ಥದೀಪಿಕಾ

ಪ್ರಮಾಣವಾದುದು ಇನ್ನು ಎರಡನೆಯ ಕಲ್ಪದ ಮೇಲೆ " ಅಕ್ಷಜಾಗಮ ಮೂಲಸ್ಯ " ಇತ್ಯಾದಿ ವಚನದಿಂದ ಹೇಳುತ್ತಾರ " ಪ್ರತಿಷ್ಠಿತಿಃ "= ಪ್ರಾಮಾಣ್ಯವು ಪ್ರತ್ಯಕ್ಷಾಗಮಮೂಲಕವಾದ ಅನುಮಾನದಿಂದಲೇ ಈ ಪ್ರತಿಪಕ್ಷ ಅನುಮಾನಕ್ಕೆ ಬಾಧೆಯು ಬರುತ್ತದೆ ಏಕೆಂದರೆ ಎರಡೂ ಅನುಮಾನಗಳಿಗೆ ವಾಸ್ತವವಾದ ಪ್ರಮಾಣಾಧಾರವಿರುವುದು ಸಂಭವಿಸುವುದಿಲ್ಲ ಹೀಗೆ ಅಭಿಪ್ರಾಯ ಇನ್ನು–ಯಾವನು ಈ ವ್ಯವಸ್ಥೆಯನ್ನು ಒಪ್ಪದೆ, ಎಲ್ಲ ಕಡೆಯಲ್ಲಿಯೂ ಪ್ರತಿಪಕ್ಷದ ಅವಕಾಶವಿದೆಯೆಂದೂ ಅನುಮಾನಗಳೆಲ್ಲ ಅಪ್ರಮಾಣವೆಂದೂ ಬಗೆಯುತ್ತಾನೋ ಅವನಿಗೆ ಸೂತ್ರಾರೂಢವಾದ ಉತ್ತರವನ್ನು "ಅನ್ಯಥಾ" ಎಂಬ ವಚನದಿಂದ ಹೇಳುತ್ತಾರೆ ಇದರಿಂದ, " ಯಾವನು ಹೀಗೆ ಅಂಗೀಕರಿಸುವುದಿಲ್ಲವೋ ಅವನಿಗೆ ಸ್ವವಚನ ವಿರೋಧವು ಬರುವುದರಿಂದ ಮೋಕ್ಷವಿಲ್ಲವೆನ್ನುವ

— ವಿಶೇಷಾರ್ಥಪ್ರದೀಪಿಕಾ —

ಕಡೆಗಳಲ್ಲಿ ಅನ್ವಯಿಸುವುದಿಲ್ಲ ಆದುದರಿಂದ ಪ್ರಕೃತ ನಮ್ಮ ಅನುಮಾನಕ್ಕೆ ಆಗಮದ ಅನುಗ್ರಹವಿರುವುದರಿಂದ ಪ್ರಾಮಾಣ್ಯವು ಯುಕ್ತವಾಗುತ್ತದೆಂದು ತಾತ್ಪರ್ಯವನ್ನು ತಿಳಿಯಬೇಕು

ಅನಿರ್ಮೋಕ್ಷವು (ಮೋಕ್ಷದ ಇಲ್ಲದಿರುವಿಕೆಯು) ಏಕೆ? ಎಂಬ ಪ್ರಶ್ನೆಯ ಉತ್ತರವನ್ನು "ಸ್ವವಚನವ್ಯಾಘಾತಾತ್" ಎಂಬ ವಚನದಿಂದ ಹೇಳಿರುತ್ತಾರೆ ಇದು ಸೂತ್ರದ ಶೇಷವನ್ನು ತೋರಿಸುವ ಮಾತು ಸ್ವವಚನವಿರೋಧವೆಂಬ ದೋಷವು ಬರುವುದೆಂದು ಫಲಿತಾರ್ಥವು. ಭಾಷ್ಯ ಟೀಕಾಗ್ರಂಥಗಳಲ್ಲಿ ಅಧ್ಯಾ

सर्वमनुमानप्रमाणं प्रतिपक्षप्रतिहतत्वादिति त्वदीयमनुमानं प्रतिपक्षेन पराहतं चाप्रमाणं च भवति न वा । आद्ये नानेन सर्वस्याप्रामाण्यसिद्धिः । द्वितीये त्वत्रैव बाधादीति । अन्यथोक्तव्यवस्थां विहायास्य सर्वस्याप्यनुमानस्याप्रतिष्ठाऽप्रमाणता स्ववाचैव व्याहता हीति ।

अपरे तु न विलक्षणत्वादित्यादीनि सूत्राणि ब्रह्मणो जगदुपादानत्वाक्षेपसमाधानार्थतया व्याचक्षते । तत्प्रकृत्यधिकरण एव

— ಪದಾರ್ಥದೀಪಿಕಾ —

ಪ್ರಸಂಗವು ಬರುತ್ತದ" ಎಂಬ ಸೂತ್ರದ ಯೋಜನಯನ್ನು ಸೂಚಿಸಿದ್ದಾಗುತ್ತದೆ. ಹೇಗೆಂದರೆ- ಅನುಮಾನವೆಲ್ಲವೂ ಅಪ್ರಮಾಣವು, ಏಕೆಂದರೆ ಪ್ರತಿಪಕ್ಷ ಪರಾಹತವಾಗುತ್ತವೆ" ಎಂಬುದಾಗಿರುವ ನಿನ್ನ ಅನುಮಾನವು ಪ್ರತಿಪಕ್ಷ ಪರಾಹತವೂ ಅಪ್ರಮಾಣವೂ ಆಗುವುದೋ ಇಲ್ಲವೋ? ಮೊದಲನೆಯ ಪಕ್ಷದಲ್ಲಿ ಈ ಅನುಮಾನದಿಂದ ಎಲ್ಲ ಅನುಮಾನಗಳ ಅಪ್ರಾಮಾಣ್ಯವು ಸಿದ್ಧಿಸಲಾರದು. ಎರಡನೆಯ ಪಕ್ಷದಲ್ಲಿ ಅಲ್ಲಿಯೇ ಬಾಧ ಮುಂತಾದುದು ಬರುತ್ತದೆ. "ಅನ್ಯಥಾ" -(ಇಲ್ಲದಿದ್ದಲ್ಲಿ) ಹಿಂದೆ ಹೇಳಿದ ವ್ಯವಸ್ಥೆಯನ್ನು ಬಿಟ್ಟು, ಸಕಲ ಅನುಮಾನಗಳಿಗೆ 'ಅಪ್ರತಿಷ್ಠಾ"– ಅಪ್ರಾಮಾಣ್ಯವು ತನ್ನ ವಚನದಿಂದಲೇ ವಿರುದ್ಧವಾದುದು" ಹೀಗೆ ಅರ್ಥ .

ಇನ್ನು ಕಲವರಾದರೋ– " ನ ವಿಲಕ್ಷಣತ್ವಾತ್ " ಈ ಮುಂತಾದ ಸೂತ್ರಗಳನ್ನು, ಬ್ರಹ್ಮನ ಜಗದುಪಾದಾನತ್ವದ ಮೇಲಿನ ಆಕ್ಷೇಪದ ನಿರಾಕರಣದ ಪರವಾಗಿ ವ್ಯಾಖ್ಯಾನಿಸುತ್ತಾರೆ ಬ್ರಹ್ಮವು ಜಗದುಪಾದಾನಕಾರಣವೆಂಬ ಸಂಗತಿಯನ್ನು ಪ್ರಕೃತ್ಯಧಿಕರಣದಲ್ಲಿಯೇ ನಿರಾಕರಿಸಲಾಗಿರುತ್ತದ. ಮತ್ತು ಈ

— ವಿಶೇಷಾರ್ಥಪ್ರದೀಪಿಕಾ —

ಹಾರವಿಲ್ಲದೆಯೆ " ಮೋಕ್ಷಾಭಾವಪ್ರಸಂಗಃ " ಎಂಬುದಾಗಿ "ಅನಿರ್ಮೋಕ್ಷ ಪ್ರಸಂಗಃ" ಎಂಬುದುರ ವ್ಯಾಖ್ಯಾನವನ್ನು ಮಾಡಲಾಗಿದೆ

ಸೂತ್ರದ ತಾತ್ಪರ್ಯವನ್ನು ವಿವರಿಸಿ ಮೂಲವಾಕ್ಯದ ಯೋಜನೆಯನ್ನು "ಅನ್ಯಥಾ" ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ ಇದರ ಅರ್ಥವೇ "ಉಕ್ತ ವ್ಯವಸ್ಥಾಂ ವಿಹಾಯ" (ಹಿಂದೆ ಹೇಳಿದ ವ್ಯವಸ್ಥೆಯನ್ನು ಬಿಟ್ಟು) ಎಂಬುದು.

ಪರರ ಅಪವ್ಯಾಖ್ಯಾನವನ್ನು "ಅಪರೇ ತು ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ "ತತ್"- ಬ್ರಹ್ಮನು ಜಗದುಪಾದಾನವೆಂಬುದು. ಎಲ್ಲ ವ್ಯಾಖ್ಯಾನದ ಮೇಲೆ ಚಂದ್ರಿಕಾಗ್ರಂಥದಲ್ಲಿ ದೂಷಣವನ್ನು ವಿಶದವಾಗಿ ಹೇಳಲಾಗಿದೆ.

निराकृतम् । यच्चात्र सूत्रे तर्काप्रतिष्ठानादिति वाक्यं भित्त्वा सिद्धान्ततयैव वर्णयन्ति तद्वाऽनेन सार्धश्लोकेन निराचष्टे । तथा हि । तर्कस्याप्रतिष्ठां वदन्वक्तव्यः । किं प्रमाणानुग्रहरहितस्योत तन्मूलस्य । आद्ये गूढाभिसन्धिरुत्तरमाह ॥ आगमेति । अयमाशयः । सत्यमेतत् । तथाऽपि न साङ्ख्यः स्वतर्कस्यागमाद्यनुग्रहाभावं मन्यते। स्वमतेनेदमुच्यते चेत्पौनरुक्त्यम् । शास्त्रयोनित्वात् । ईक्षतेर्नाशब्दम् । आनुमानिकमित्यादिनाऽस्यार्थस्योक्तत्वादिति । द्वितीयं दूषयति ॥

## — ಪದಾರ್ಥದೀಪಿಕಾ —

ಸೂತ್ರದಲ್ಲಿ, "ತರ್ಕಾಪ್ರತಿಷ್ಠಾನಾತ್" ಎಂಬುದಾಗಿ ವಾಕ್ಯವನ್ನು ಬಿಡಿಸಿ, ಸಿದ್ಧಾಂತಪರವಾಗಿಯೇ ವರ್ಣಿಸುತ್ತಾರೆ ಅದನ್ನು ಈ ಒಂದುವರೆ ಶ್ಲೋಕದಿಂದ ನಿರಾಕರಿಸುತ್ತಾರೆ. ಹೇಗೆಂದರೆ– ತರ್ಕದ ಅಪ್ರತಿಷ್ಠೆಯನ್ನು (ಅಪ್ರಾಮಾಣ್ಯವನ್ನು) ಹೇಳುವವನನ್ನು ಪ್ರಶ್ನಿಸತಕ್ಕದ್ದು. 'ಪ್ರಮಾಣದ ಅನುಗ್ರಹ ( ಸಹಾಯ ) ವಿಲ್ಲದ ಅನುಮಾನ ( ತರ್ಕ )ಕ್ಕೆ ಅಪ್ರತಿಷ್ಠೆಯೋ? ಅಥವಾ ಪ್ರಮಾಣದ ಅನುಗ್ರಹವಿರುವ ಅನುಮಾನಕ್ಕೆ ಅಪ್ರತಿಷ್ಠೆಯೋ? ಹೀಗೆ ಮೊದಲನೆಯ ಕಲ್ಪದಲ್ಲಿ ಗೂಢಾಭಿಸಂಧಿಯಿಂದ ಉತ್ತರವನ್ನು "ಆಗಮ" ಇತ್ಯಾದಿ ವಚನದಿಂದ ಹೇಳುತ್ತಾರೆ ಇಲ್ಲಿಯ ಅಭಿಪ್ರಾಯವು– "ಪ್ರಮಾಣಾನುಗ್ರಹವಿಲ್ಲದ ಅನುಮಾನವು ಅಪ್ರಮಾಣವೆಂಬುದು ನಿಜ! ಆದರೂ ಸಾಂಖ್ಯನು ತನ್ನ ತರ್ಕಕ್ಕೆ ಆಗಮ ಮುಂತಾದ ಪ್ರಮಾಣಗಳ ಅನುಗ್ರಹವಿಲ್ಲವೆಂದು ಬಗೆಯುವುದಿಲ್ಲ ಸ್ವಮತದಿಂದ ಹೇಳುವುದಾದರೆ ಪೌನರುಕ್ತ್ಯವು ಬರುತ್ತದೆ ಏಕೆಂದರೆ "ಶಾಸ್ತ್ರಯೋನಿತ್ವಾತ್, ಈಕ್ಷತೇರ್ನಾಶಬ್ದಂ ಆನುಮಾನಿಕಂ" ಇತ್ಯಾದಿ ಸೂತ್ರಗಳಿಂದ ಈ ವಿಷಯವು ಹೇಳಲ್ಪಟ್ಟಿದೆ" ಎಂಬುದು

## — ವಿಶೇಷಾರ್ಥಪ್ರದೀಪಿಕಾ —

"ಸಿದ್ಧಾಂತತಯಾ" — ಸಾಂಖ್ಯನು ಕಲ್ಪಿಸಿಹೇಳಿದ "ವಿಲಕ್ಷಣತ್ವಾತ್" ಈ ಮುಂತಾದ ತರ್ಕಗಳಿಂದ, ಬ್ರಹ್ಮಜಗತ್ತುಗಳಲ್ಲಿ ಉಪಾದಾನ-ಉಪಾದೇಯ ಭಾವದ ಖಂಡನವು ಅಯುಕ್ತವಾದುದು ಏಕೆಂದರೆ ತರ್ಕಗಳಿಗೆ ಅಪ್ರಾಮಾಣ್ಯವಿದೆಯೆಂಬುದಾಗಿ ಅರ್ಥವನ್ನು ಹೇಳುತ್ತಾರೆ; ಹೀಗೆ ಭಾವ.

"ಗೂಢಾಭಿಸಂಧಿಃ" ಎಂಬುದಾಗಿ ಹೇಳಿದ ಗೂಢ ಅಭಿಪ್ರಾಯವನ್ನು "ಅಯಮಾಶಯಃ" ಎಂಬ ವಚನದಿಂದ ವಿಶದಪಡಿಸುತ್ತಾರೆ.

अक्षजेति । न हि ज्ञानकरणस्य प्रमाणगृहीतव्याप्त्यादिमत्त्वेनाप्रामाण्यकारणव्यभिचारादिशङ्काकलङ्कविकलस्य प्रामाण्यं नास्तीति युक्तमिति भावः । विपक्षे बाधक चाह ॥ अन्यथेति । अन्यथोक्तानभ्युपगमेनास्य प्रमाणमूलस्याप्यनुमानस्याप्रतिष्ठा स्ववाचा व्याहतैव सूत्रकृतः स्यात् । स्वयमेव हि युक्त्यनुसन्धानरूपां ब्रह्ममीमांसामारभ्य प्रमाणमूलस्यापि तर्कस्याप्रामाण्यमभिदधानः सूत्रकारो न व्याहतभाषी कथं स्यात् ।

— ಪದಾರ್ಥದೀಪಿಕಾ —

ಎರಡನೆಯ ಪಕ್ಷವನ್ನು "ಅಕ್ಷಜಾಗಮ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ ಪ್ರಮಾಣದಿಂದ ಸಿದ್ಧವಾದ ವ್ಯಾಪ್ತಿ ಮುಂತಾದವುಗಳಿರುವುದರಿಂದ, ಅಪ್ರಾಮಾಣ್ಯಕ್ಕೆ ಕಾರಣವಾದ ವ್ಯಭಿಚಾರ ಮುಂತಾದುದರ ಶಂಕೆಯ ಕಲಂಕದ ಸಂಪರ್ಕವಿಲ್ಲದ ಅನುಮಾನಕ್ಕೆ ಪ್ರಾಮಾಣ್ಯವಿಲ್ಲವೆಂಬುದು ಯುಕ್ತವಲ್ಲ ಹೀಗೆ ಇಲ್ಲಿಯ ಭಾವ ಮತ್ತು ವಿಪಕ್ಷದಲ್ಲಿ ಬಾಧಕವನ್ನು "ಅನ್ಯಥಾ" ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ "ಅನ್ಯಥಾ"= ಇಲ್ಲದಿದ್ದಲ್ಲಿ, ಹಿಂದೆ ಹೇಳಿದುದನ್ನು ಒಪ್ಪದಿದ್ದುದರಿಂದ, ಪ್ರಮಾಣಮೂಲಕವಾದ ಈ ಅನುಮಾನಕ್ಕೆ ಅಪ್ರತಿಷ್ಠೆಯು, ಸೂತ್ರಕಾರರ, ತಮ್ಮ ವಚನದಿಂದ ವಿರುದ್ಧವೇ ಆಗುತ್ತದೆ ಏಕೆಂದರೆ ಯುಕ್ತ್ಯನು

— ವಿಶೇಷಾರ್ಥಪ್ರದೀಪಿಕಾ —

"ಸ್ವಮತೇನ" – ಮಾಯಾವಾದಿಗಳ ಮತದಿಂದ, ಹೀಗೆ ಅರ್ಥ "ಅಸ್ವಾರ್ಥಸ್ಯ"– ಮಾಯಾವಾದಿಗಳ ಮತದಲ್ಲಿ "ಶಾಸ್ತ್ರಯೋನಿತ್ವಾತ್" ಈ ಮುಂತಾದ ಸೂತ್ರಗಳಲ್ಲಿ "ಪ್ರಧಾನದಜಗತ್ಕಾರಣತ್ವವು ಆಗಮದಿಂದ ತಿಳಿಯಲ್ಪಡಲರ್ಹವಲ್ಲ. ಬ್ರಹ್ಮನ ಜಗತ್ಕಾರಣತ್ವವೇ ಆಗಮದಿಂದ ತಿಳಿದುಬರುತ್ತದೆ," ಎಂಬುದಾಗಿ ಹೇಳಿದುದರಿಂದ, ಸಾಂಖ್ಯರ ತರ್ಕಗಳಿಗೆ ಆಗಮಸಂವಾದವಿಲ್ಲವೆಂಬುದನ್ನು ಹೇಳಿದುದರಿಂದ ಪೌನರುಕ್ತ್ಯವೆಂಬು ತಿಳಿಯಬೇಕು

ಪ್ರತ್ಯಕ್ಷಮೂಲಕವಾದ ಹಾಗೂ ಆಗಮ ಮೂಲಕವಾದ ತರ್ಕಕ್ಕೆ ಅಪ್ರಾಮಾಣ್ಯವನ್ನು ಹೇಳಿದರೆ ಇನ್ನೂ ಒಂದು ಬಾಧಕವನ್ನು ಹೇಳುತ್ತಾರೆಂಬು, "ವಿಪಕ್ಷೇ ಬಾಧಕಂ ಚಾಹ" ಎಂಬ ವಾಕ್ಯಕ್ಕೆ ಅರ್ಥ

ಸ್ವವಚನದಿಂದ ವಿರೋಧವನ್ನು "ಸ್ವಯಮೇವ ಹಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

यदपि वृत्तिकारैरुक्तम् । एकेन तार्किकेणोत्प्रेक्षितं तर्कमपरो दूषयति । तेनोत्प्रेक्षितमप्यपर इत्यतः पुरुषमतिवै ( श्व ) रूप्यजन्मा तर्कः स्यादप्रतिष्ठित इति । तच्चायुक्तम् । यतोऽस्यापि तर्कस्य प्रामाण्येऽप्रामाण्ये चास्याप्रतिष्ठा च स्ववाचा व्याहतैवेति नायं वाक्यभेदो युक्त इत्युक्त एव सूत्रार्थः ।

— ಪದಾರ್ಥದೀಪಿಕಾ —

ಸಂಧಾನರೂಪವಾದ ಬ್ರಹ್ಮಮೀಮಾಂಸೆಯನ್ನು ತಾವೇ ಪ್ರಾರಂಭಿಸಿ ಪ್ರಮಾಣ ಮೂಲಕವಾದ ತರ್ಕಕ್ಕೆ ಅಪ್ರಾಮಾಣ್ಯವನ್ನು ಹೇಳುತ್ತಿರುವ ಸೂತ್ರಕಾರರು ವಿರುದ್ಧ(ವ್ಯಾಹತ) ಭಾಷಿಗಳು ಹೇಗೆ ಆಗಲಾರರು ?

ಇನ್ನು- "ಒಬ್ಬ ತಾರ್ಕಿಕನು ಕಲ್ಪಿಸಿ ಹೇಳಿದ ತರ್ಕವನ್ನು ಇನ್ನೊಬ್ಬ ತಾರ್ಕಿಕನು ದೂಷಿಸುತ್ತಾನೆ ಅವನು ಕಲ್ಪಿಸಿದುದನ್ನು ಮತ್ತೊಬ್ಬನು ದೂಷಿಸುತ್ತಾನೆ ಈ ಕಾರಣದಿಂದ, ಪುರುಷರ ವಿಚಿತ್ರ ಬುದ್ಧಿಯಿಂದ ಉದಯಿಸಿದ ತರ್ಕವು ಪ್ರತಿಷ್ಠಿತ(ಪ್ರಮಾಣ)ವಾಗಲಾರದು" ಹೀಗೆ ವೃತ್ತಿಕಾರರು ಹೇಳಿದುದೂ ಅಯುಕ್ತವಾಗುತ್ತದೆ ಏಕೆಂದರೆ ಈ ತರ್ಕಕ್ಕೂ ಸಹ ಪ್ರಾಮಾಣ್ಯ ಅಪ್ರಾಮಾಣ್ಯಗಳಿರುವ ಎರಡೂ ಪಕ್ಷಗಳಲ್ಲಿಯೂ, ಈ ತರ್ಕಕ್ಕೆ ಅಪ್ರತಿಷ್ಠೆಯು ಸ್ವವಚನ ವಿರುದ್ಧವೇ ಆಗುತ್ತದೆ ಆದುದರಿಂದ, ಈ ವಾಕ್ಯಭೇದವು ಯುಕ್ತವಲ್ಲವಾದುದರಿಂದ, ನಾವು ಹೇಳಿದುದೇ ಸೂತ್ರದ ನಿಜಾರ್ಥವು

— ವಿಶೇಷಾರ್ಥಪ್ರದೀಪಿಕಾ —

"ವೈರೂಪ್ಯಜನ್ಮಾ" – ಪುರುಷರ ಮತಿಯ ವಿಚಿತ್ರ (ವಿಲಕ್ಷಣ) ತೆಯಿಂದ ಉತ್ಪನ್ನವಾದುದು ಅಂದರೆ ವಿಚಿತ್ರವಾದ ಪುರುಷಮತಿಯಿಂದ ಉತ್ಪನ್ನವಾದುದು, ಹೀಗೆ ಅರ್ಥ

"ಪುರುಷರ ಮತಿವೈಚಿತ್ರ್ಯದಿಂದ ಉತ್ಪನ್ನವಾದುದರಿಂದ ಎಲ್ಲ ತರ್ಕಗಳೂ ಅಪ್ರಮಾಣಗಳು" ಎಂಬ ತರ್ಕಕ್ಕೆ ಸಹ ಪ್ರಾಮಾಣ್ಯವಿರುವುದಾದರೆ "ಸರ್ವತರ್ಕಾಃ ಅಪ್ರಮಾಣಂ" ( ತರ್ಕಗಳೆಲ್ಲ ಅಪ್ರಮಾಣ ) ಎಂಬ ಪ್ರತಿಜ್ಞಾರೂಪವಾದ ಸ್ವವಚನದಿಂದ ವ್ಯಾಹತಿಯು ಬರುತ್ತದೆ ಈ ತರ್ಕಕ್ಕೆ ಅಪ್ರಾಮಾಣ್ಯವಿರುವುದಾದರೆ ಸರ್ವತರ್ಕಗಳಿಗೆ ಅಪ್ರಾಮಾಣ್ಯವನ್ನು ಸಾಧಿಸುವುದಾವುದೂ ಇಲ್ಲವಾದುದರಿಂದ "ಸರ್ವತರ್ಕಗಳು ಅಪ್ರಮಾಣ" ವೆಂಬುದು ವಿರುದ್ಧವಾಯಿತು; ಹೀಗೆ 'ವ್ಯಾಹತೈವ"– ಈ ವಾಕ್ಯದ ಭಾವ

## ॐ एतेन शिष्टा अपरिग्रहा अपि व्याख्याताः ॐ

न च शिष्टागृहीतत्वं निरीशादीशवादिनः ॥

अत्र सूत्रम् ॥ ॐ एतेन शिष्टा अपरिग्रहा अपि व्याख्याताः ॐ ॥ तत्केचिद्व्याचक्षते । एतेन न विलक्षणत्वादित्यादिना प्रकृतेन शिष्टैः केनचिदंशेन परिगृहीतस्य प्रधानकारणवादस्य निराकरणेन शिष्टैर्मनुव्यासप्रभृतिभिः केनचिदप्यंशेनापरिगृहीता येऽण्वादिकारण-वादास्तेऽपि व्याख्याता द्रष्टव्या इति । तदिदं दूषयति ॥ न चेति । आस्तां तावदभ्यधिकाशङ्काप्रकारः । परिहारातिदेशप्रकारश्च । यत्ता-

ನಿರೀಶ್ವರವಾದಿ (ಸಾಂಖ್ಯನ)ಗಿಂತ ಈಶ್ವರವಾದಿ (ವೈಶೇಷಿಕರು) ಗಳಿಗೆ ಶಿಷ್ಟಾಗೃಹೀತತ್ವವು (ಶಿಷ್ಟರಿಂದ ಪರಿಗೃಹಿಸಲ್ಪಟ್ಟಿಲ್ಲವೆಂಬುದು) ಇಲ್ಲವೇ ಇಲ್ಲ.

### — ಪದಾರ್ಥದೀಪಿಕಾ —

ಓಂ || ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ || ಓಂ || ಇದು ಈ ಅಧಿಕರಣದಲ್ಲಿ ಕೊನೆಯ ಸೂತ್ರವು ಇದನ್ನು ಕೆಲವರು ಹೀಗೆ ವ್ಯಾಖ್ಯಾನಿಸುತ್ತಾರೆ- "ಏತೇನ"= "ನವಿಲಕ್ಷಣತ್ವ" ಮುಂತಾದ ಸೂತ್ರಗಳಿಂದ ಪ್ರಕೃತವಾದ, ಶಿಷ್ಟರಿಂದ ಕೆಲವು ಅಂಶಗಳಿಂದ ಪರಿಗೃಹಿಸಲ್ಪಟ್ಟ ಪ್ರಧಾನದ ಜಗತ್ಕಾರಣತ್ವವಾದದ ನಿರಾಕರಣದಿಂದ, ಶಿಷ್ಟರಾದ ಮನುವ್ಯಾಸ ಪ್ರಭೃತಿಗಳಿಂದ ಕೆಲವು ಅಂಶಗಳಿಂದ ಪರಿಗೃಹಿಸಲ್ಪಡದ ಅಣು ಮುಂತಾದುದರ ಕಾರಣತ್ವವಾದಗಳು ಯಾವವೋ ಅವುಗಳೂ ವ್ಯಾಖ್ಯಾನಿಸಲ್ಪಟ್ಟವುಗಳೆಂದು ತಿಳಿಯತಕ್ಕದ್ದು." ಹೀಗೆ ಅವರ ಈ ವ್ಯಾಖ್ಯಾನವನ್ನು "ನ ಚ" ಇತ್ಯಾದಿ ವಚನಗಳಿಂದ ನಿರಾಕರಿಸುತ್ತಾರೆ ಅಭ್ಯಧಿಕಾಶಂಕೆಯ ರೀತಿಯೂ ಪರಿಹಾರದ ಅತಿದೇಶದ ರೀತಿಯೂ ಒಂದು ಬದಿಗೆ ಇರಲಿ! ಆದರೆ ಸಾಂಖ್ಯನಿಗಿಂತಲೂ ವೈಶೇಷಿಕ ಮುಂತಾದವರ

### — ವಿಶೇಷಾರ್ಥಪ್ರದೀಪಿಕಾ —

"ಅತ್ರ" – ಈ ಅಧಿಕರಣದಲ್ಲಿ

ಅಧಿಕಾಶಂಕಾಪ್ರಕಾರ ಮುಂತಾದುದರ ದೂಷಣೆಯಿಲ್ಲದಾದುದರಿಂದ, ಅದು ಸಮ್ಮತವೆಂಬ ಭ್ರಾಂತಿಯನ್ನು "ಆಸ್ತಾಂ" ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಾರೆ. "ತಾವತ್"ಈ ಶಬ್ದದಿಂದ, ಅಭ್ಯಧಿಕಾಶಂಕಾಪ್ರಕಾರ, ಪರಿಹಾರಾ

वदुक्तम् । साङ्ख्यादपि वैशेषिकादेः अतिशयेन शिष्टागृहीतत्वम् । तदतीव विरुद्धम् । साङ्ख्यस्य निरीश्वरत्वात् । वैशेषिकादेस्तु सेश्वरत्वात् । वैपरीत्यस्यैवोचितत्वात् । इह हि ब्रह्मणो जगत्कारणत्वे विप्रतिपत्तयो निरस्यन्ते । तत्र साङ्ख्यो ब्रह्मैव नाभ्युपैति । कुतस्तदीयं जगत्कारणत्वमित्यतिशयेन वेदान्तवादविरोधित्वाच्छिष्टापरिगृहीतः । वैशेषिकादिस्तु ब्रह्म तस्य जगन्निमित्तत्वं चाङ्गीकृत्योपादानतामात्रं

— ಪದಾರ್ಥದೀಪಿಕಾ —

ಮತಗಳು ಹೆಚ್ಚು ಶಿಷ್ಟರಿಂದ ಅಪರಿಗೃಹೀತ ( ಶಿಷ್ಟ ಸಮ್ಮತವಲ್ಲ-ಶಿಷ್ಟ ವಿರುದ್ಧ )ಗಳೆಂಬ ಸಂಗತಿಯಂತೂ ಅತ್ಯಂತ ವಿರುದ್ಧವಾದುದು ಏಕೆಂದರೆ ಸಾಂಖ್ಯನಾದರೋ ನಿರೀಶ್ವರವಾದಿಯು, ವೈಶೇಷಿಕ ಮುಂತಾದವರಾದರೋ ಈಶ್ವರನನ್ನು ಅಂಗೀಕರಿಸುವವರು ಆದುದರಿಂದ, ವೈಶೇಷಿಕಾದಿಗಳಿಗಿಂತ ಸಾಂಖ್ಯನೇ ಹೆಚ್ಚು ಶಿಷ್ಟವಿರುದ್ಧನೆಂಬ ಸಂಗತಿಯೇ ಉಚಿತವಾಗುತ್ತದೆ ಏಕೆಂದರೆ ಈ ಅಧಿಕರಣದಲ್ಲಿ ಬ್ರಹ್ಮನ ಜಗತ್ಕಾರಣತ್ವದ ಮೇಲಣ ವಿವಾದ ಗಳನ್ನು ನಿರಾಸಮಾಡಲಾಗುತ್ತದೆ ಹೀಗಿರುವಾಗ, ಸಾಂಖ್ಯನು ಬ್ರಹ್ಮನನ್ನೇ ಅಂಗೀಕರಿಸುವುದಿಲ್ಲವೆಂದಮೇಲೆ ಅವನ ಜಗತ್ಕಾರಣತ್ವವನ್ನಂತೂ ಅವನು ಹೇಗೆ ಒಪ್ಪುತ್ತಾನೆ ? ಹೀಗ ( ಈ ಕಾರಣದಿಂದ ) ವೇದಾಂತಕ್ಕೆ ಅತ್ಯಂತ ವಿರೋಧಿಯಾದುದರಿಂದ ಸಾಂಖ್ಯನು ಶಿಷ್ಟರಿಂದ ಪರಿಗೃಹೀತನಲ್ಲ- ಶಿಷ್ಟ

— ವಿಶೇಷಾರ್ಥಪ್ರದೀಪಿಕಾ —

ಕದೇಶಪ್ರಕಾರ, ಇವೆರಡೂ ಅಯುಕ್ತಗಳೆಂಬುದನ್ನು ಸೂಚಿಸಿರುತ್ತಾರೆ ಚಂದ್ರಿಕಾಗ್ರಂಥದಲ್ಲಿ ಅದು ಸ್ಪಷ್ಟಮಾಡಲ್ಪಟ್ಟಿದೆ.

ಸತ್ಕಾರ್ಯವಾದ, ಮಹದಾದಿ ತತ್ತ್ವಸಮುದಾಯ, ಈ ಮುಂತಾದ, ಶಿಷ್ಟರಿಂದ ಪರಿಗೃಹೀತವಾದ ವಿಷಯಗಳನ್ನು ಅಂಗೀಕರಿಸದಿದ್ದುದರಿಂದ ವೈಶೇಷಿಕ ಮೊದಲಾದವರ ಮತಗಳು ಶಿಷ್ಟರಿಂದ ಅಪರಿಗೃಹೀತ (ಪರಿಗೃಹೀತಗಳಲ್ಲ) ವಾಗಿವೆಯೆಂಬ ಆಶಂಕೆಯನ್ನು ತಪ್ಪಿಸಲು, "ಅವರು ತತ್ತ್ವಗಳನ್ನು ಅಂಗೀಕರಿಸದಿರುವುದು ಶಿಷ್ಟರ ಅಪರಿಗ್ರಹಕ್ಕೆ ಪ್ರಯೋಜಕವಲ್ಲ ಏಕೆಂದರೆ ಸಂದಿಗ್ಧವಾದ ಪ್ರಧಾನ (ಮುಖ್ಯ) ಪ್ರಮೇಯದ ವಿಷಯದಲ್ಲಿ ಸಾಂಖ್ಯನಿಗೆ ಹೇಗೋ ಹಾಗೆ ವೈಶೇಷಿಕನಿಗೆ ಅತ್ಯಂತವಿರೋಧವಿರುವುದಿಲ್ಲ" ಈ ಅಭಿಪ್ರಾ ದಿಂದ ಸಾಂಖ್ಯರಿಗಿಂತ ವೈಶೇಷಿಕರಲ್ಲಿ ವ್ಯತ್ಯಾಸವನ್ನು "ಇಹ ಹಿ" ಇತ್ಯಾದಿ ವಚನದಿಂದ ತೋರಿಸಿರುತ್ತಾರೆ

नाङ्गीकुरत इतीषद्विरोधित्वादीषच्छिष्टापरिगृहीत इति युक्तम् । सत्कार्यवादित्वादिकं तु प्रकृतासङ्गतमेव । अन्यथा यागीयहिंसानिषेधादिना विपरिवर्तः स्यात् । अथ वेदसंवादबाहुल्याबाहुल्यप्रयुक्तमिदम् । तन्न । तत्त्वानां प्रतिपाद्यानामपरिसङ्ख्यातत्वादिति ।

## — ಪದಾರ್ಥದೀಪಿಕಾ —

ವಿರುದ್ಧನು ಆದರೆ ವೈಶೇಷಿಕ ಮುಂತಾದವರು, ಬ್ರಹ್ಮನನ್ನೂ ಅವನಿಗೆ ಜಗತ್ತಿನ ನಿಮಿತ್ತಕಾರಣತ್ವವನ್ನೂ ಅಂಗೀಕರಿಸಿ, "ಕೇವಲ ಉಪಾದಾನ ಕಾರಣತ್ವವನ್ನು ಅಂಗೀಕರಿಸುವುದಿಲ್ಲ" ಹೀಗೆ, ಈ ಕಾರಣದಿಂದ ವೇದಾಂತಕ್ಕೆ ಸ್ವಲ್ಪ ವಿರೋಧಿಗಳಾಗಿದ್ದಾರೆ ಆದುದರಿಂದ, ಶಿಷ್ಟರಿಗೆ ಸ್ವಲ್ಪ ಅಸಮ್ಮತ ರೆಂಬುದು ಯುಕ್ತವು "ಸಾಂಖ್ಯನು ಸತ್ಕಾರ್ಯವಾದಿ"ಯು, ಈ ಮುಂತಾದ ಸಂಗತಿಗಳು ಪ್ರಕೃತಕ್ಕೆ (ಸಂಬಂಧಿಸಿಲ್ಲ—ಸಂಗತಗಳಲ್ಲ) ಅಸಂಗತಗಳೇ! ಇಲ್ಲದಿದ್ದಲ್ಲಿ ಯಾಗೀಯ ಹಿಂಸೆಯನ್ನು ನಿಷೇಧಿಸುವನು, ಈ ಮುಂತಾದ ಕಾರಣ ಗಳಿಂದ ವ್ಯತ್ಯಾಸವು ಆಗಲಿ! ಇನ್ನು- ವೇದಗಳ ಸಂವಾದವು ಬಹಳವಾಗಿರು ವುದು-ಇಲ್ಲವಾಗಿರುವುದು, ಈ ಕಾರಣಗಳಿಂದ ಈ ಶಿಷ್ಟಾಪರಿಗ್ರಹದ ವ್ಯವಸ್ಥೆ ಯೆಂದು ಹೇಳುವುದು ಯುಕ್ತವಲ್ಲ ಏಕೆಂದರೆ ಪ್ರತಿಪಾದ್ಯತತ್ವಗಳಿಗೆ ಎಣಿಕೆ ಯಿರುವುದಿಲ್ಲ ಹೀಗೆ ಇಲ್ಲಿಗೆ ಪರರ ವ್ಯಾಖ್ಯಾನದ ನಿರಾಕರಣವು ಮುಗಿದುದು.

## — ವಿಶೇಷಾರ್ಥಪ್ರದೀಪಿಕಾ —

"ಪ್ರಕೃತಾಸಂಗತಂ" – ಸಂದಿಗ್ಧವಾದ ಬ್ರಹ್ಮಜಗತ್ಕಾರಣತ್ವ ವಿಷಯಕ್ಕೆ ಅಸಂಗತವಾದುದು, ಹೀಗೆ ಅರ್ಥ

"ಯಾಗೀಯಹಿಂಸಾಯಾಃ" – ಸಾಂಖ್ಯನು, ಯಾಗದಲ್ಲಿಯ ಹಿಂಸೆಯನ್ನು ನಿಷಿದ್ಧವೆಂದು ಹೇಳುತ್ತಾನೆ ವೈಶೇಷಿಕ ಮುಂತಾದವರು ಹಾಗೆ ಹೇಳುವುದಿಲ್ಲ. ಈ ಕಾರಣದಿಂದ, ಸಾಂಖ್ಯನು ಬಹುಶಿಷ್ಟಾಪರಿಗೃಹೀತನೂ ವೈಶೇಷಿಕರು ಸ್ವಲ್ಪಶಿಷ್ಟಾಪರಿಗೃಹೀತರೂ ಹೀಗೆ ವ್ಯತ್ಯಾಸವಾಗಲಿ, ಹೀಗೆ ಅರ್ಥ

'ಅಪರಿಸಂಖ್ಯಾತತ್ವಾತ್" – ಸಾಂಖ್ಯಶಾಸ್ತ್ರದಲ್ಲಿ ಹಾಗೂ ವೈಶೇಷಿಕಶಾಸ್ತ್ರ ದಲ್ಲಿ ಪ್ರತಿಪಾದ್ಯ ತತ್ತ್ವಗಳು ನಿರವಧಿಕವಾದುದರಿಂದ ಅವುಗಳ ಎಣಿಕೆಯಿರು ವುದಿಲ್ಲವೆಂದು ತಾತ್ಪರ್ಯ ಏಕೆಂದರೆ "ಪ್ರತಿಪಾದ್ಯತತ್ತ್ವಗಳು ಇಂತಿಷ್ಟು" ಎಂಬ ನಿರ್ಣಯವಿದ್ದರೆ, ಸಾಂಖ್ಯಶಾಸ್ತ್ರದಲ್ಲಿ ಬಹಳವಾದ ವೇದ ಸಂವಾದವಿದೆ ಯೆಂದೂ ಅದಕ್ಕಿಂತ ಕಡಮೆಯ ವೇದಸಂವಾದವು ವೈಶೇಷಿಕಶಾಸ್ತ್ರಕ್ಕೆ ಇದೆ ಯೆಂದೂ ನಿರ್ಣಯವಾಗಬಹುದು ಮತ್ತು ಅದರ ಮೂಲಕವಾಗಿ ಹಿಂದೆ

अतोऽवशिष्टजीवादिकर्तृताऽत्र निषिध्यते ॥

किं तर्ह्यस्य सूत्रस्याभिधेयमित्यत आह ॥ अत इति ॥ अर्थान्तरस्य निराकृतत्वादित्यर्थः । अपव्याख्याननिराकरण स्वव्याख्यानदार्ढ्यार्थत्वान्नासङ्गतमिति सूचयितुमत इत्युक्तम् । अवशिष्टा निराकृता या अभावकर्तृताया जीवादिकर्तृता जगत इति शेषः । अनेन निराकृतादवशिष्टा वेदापरिगृहीता जीवप्रधानासत्कालस्वभावादिवादा निराकृता इति व्याख्यातं भवति । तत्र शिष्टा इत्येवोक्ते ब्रह्मकारण

ಆದುದರಿಂದ, (ಬೇರೆ ಅರ್ಥಗಳನ್ನು ನಿರಾಕರಿಸಿದುದರಿಂದ) ಅಭಾವ ಕರ್ತೃತ್ವದಿಂದ ಬೇರೆಯಾಗಿ ಉಳಿದ, ಜೀವಾದಿಗಳ ಕರ್ತೃತ್ವವು ಈ ಸೂತ್ರದಲ್ಲಿ ನಿರಾಕರಿಸಲ್ಪಡುತ್ತದೆ.

— ಪದಾರ್ಥದೀಪಿಕಾ —

ಹಾಗಾದರೆ ಸೂತ್ರಾರ್ಥವು ಯಾವದು ? ಎಂದರೆ "ಅತಃ" ಇತ್ಯಾದಿ ವಚನಗಳಿಂದ ಹೇಳುತ್ತಾರೆ "ಅತಃ"= 'ಬೇರೆ ಅರ್ಥಗಳನ್ನು ನಿರಾಕರಿಸಿದುದರಿಂದ," ಎಂದು ಅರ್ಥ "ತಾವು ಮಾಡಿದ ವ್ಯಾಖ್ಯಾನವನ್ನು ದೃಢೀಕರಿಸುವುದಕ್ಕಾಗಿ ಪರರ (ಅಪ) ವ್ಯಾಖ್ಯಾನಗಳ ನಿರಾಕರಣವು ಹೊರಟಿದುದರಿಂದ ಪ್ರಕೃತಕ್ಕೆ ಅಸಂಗತವಾಗಿಲ್ಲ" ಈ ಸಂಗತಿಯನ್ನು ಸೂಚಿಸಲು "ಅತಃ" ಎಂಬುದಾಗಿ ಹೇಳಿದ್ದಾರೆ "ಅವಶಿಷ್ಟ ಜೀವಾದಿಕರ್ತೃತಾ"– ಬಾಕಿಯಾಗಿ ಉಳಿದ, ಅಭಾವ ಕರ್ತೃತ್ವ ಹಾಗು ಜೀವಾದಿಗಳ ಕರ್ತೃತ್ವ, ಈ ಮುಂತಾದವುಗಳು, ಹೀಗೆ ಅರ್ಥ ಇಲ್ಲಿ "ಜಗತಃ" (ಜಗತ್ತಿಗೆ) ಎಂಬುದು ಶೇಷವು ಇದರಿಂದ, ನಿರಾಕರಿಸಲ್ಪಡಬೇಕಾದ ಮತಗಳಲ್ಲಿ, ನಿರಾಕೃತವಾಗದೆ, ಹಾಗೇ ಉಳಿದ, ಹಾಗು ವೇದಪರಿಗ್ರಹೀತವಾಗದ, ಜೀವ, ಪ್ರಧಾನ, ಅಸತ್ತು, ಕಾಲ, ಸ್ವಭಾವ, ಇವುಗಳ ಕಾರಣತ್ವವನ್ನು ವಾದಿಸುವವರ ಮತಗಳೆಲ್ಲವೂ ನಿರಾಕೃತವಾದವು," ಎಂದು ವ್ಯಾಖ್ಯಾನಿಸಿದ್ದಾಗುತ್ತದೆ, ಇಲ್ಲಿ "ಶಿಷ್ಟಾ" ಎಂದಿಷ್ಟೇ ಹೇಳಿದ್ದರೆ

— ವಿಶೇಷಾರ್ಥಪ್ರದೀಪಿಕಾ —

ಹೇಳಿದ ವಿಭಾಗವೂ ಸಿದ್ಧಿಸಬಹುದು ಆದರೆ ಪ್ರತಿಪಾದ್ಯ ಪದಾರ್ಥಗಳ ಬಗ್ಗೆ "ಇಂತಿಷ್ಟೇ" ಎಂಬುದಾಗಿರುವ ಇಯತ್ತಾ ನಿಶ್ಚಯವು ಶಕ್ಯವೇ ಇಲ್ಲ. ಏಕೆಂದರೆ ಅವುಗಳು ಅನಂತಗಳಾದವೆ ಹೀಗೆ ಭಾವ

वादोऽपि प्राप्नोति । तदर्थमपरिग्रहा इत्युक्तम् । तन्मात्रे तूक्तेऽभावकर्तृत्ववादोऽपि गृह्येत । तथा च पुनरुक्तिरतिदेशानुपपत्तिश्च स्यात् । अतः शिष्टा इत्युक्तम् । अभ्यधिकाशङ्कासद्भावसूचनेन सूत्रारम्भोपपादनार्थं च शिष्टाः शिष्टतया प्रतीताः । न तु तत एव निराकृततयेति । ननु जीवादीत्यादिग्रहणेनासत्कर्तृकत्वं गृहीतम् । तदसत् । तस्यासदिति चेदित्यादिना निरस्तत्वेन पौनरुक्त्यादिप्रसङ्गादित्यत आह ॥ तन्मन इति । इत्यादेः प्रमाणात् । आशङ्कितेति शेषः ।

## — ಪದಾರ್ಥದೀಪಿಕಾ —

ಅವುಗಳಲ್ಲಿ ಬ್ರಹ್ಮಕಾರಣತ್ವವಾದವೂ ಬರುತ್ತದೆ ಆದುದರಿಂದ ಅದನ್ನು ತಪ್ಪಿಸಲು "ಅಪರಿಗ್ರಹಾಃ" ಎಂದೂ ಹೇಳಿದ್ದಾರೆ ಅಪರಿಗ್ರಹಾಃ ಎಂದಿಷ್ಟೇ ಹೇಳಿದರೆ ಅಭಾವ ಕರ್ತೃತ್ವವಾದವನ್ನೂ ಅವುಗಳಲ್ಲಿ ಗ್ರಹಿಸಬೇಕಾಗುತ್ತದೆ. ಇದರಿಂದ ಪುನರುಕ್ತಿ ದೋಷವು ಬರುತ್ತದೆಯಲ್ಲದೆ ಅತಿದೇಶವು ಅಯುಕ್ತವಾಗುವುದೆಂಬ ದೋಷವೂ ಬರುತ್ತದೆ ಆದುದರಿಂದ ( ಅದನ್ನು ತಪ್ಪಿಸಲು ) "ಶಿಷ್ಟಾಃ" ಎಂಬುದಾಗಿಯೂ ಹೇಳಿದ್ದಾರೆ ಅಭ್ಯಧಿಕಾಶಂಕೆಯನ್ನು ಸೂಚಿಸುವುದರಿಂದ, ಸೂತ್ರಾರಂಭವನ್ನು ಉಪಪಾದಿಸುವುದಕ್ಕಾಗಿಯೂ "ಶಿಷ್ಟಾಃ" ಎಂಬುದಾಗಿ ಹೇಳಿದ್ದಾರೆ ಅಂದರೆ ಅವಶಿಷ್ಟವೆಂದು ತೋರುತ್ತಿರುವವುಗಳು ಆದರೆ ಅದೇ ನ್ಯಾಯದಿಂದಲೇ ನಿರಾಕೃತವಾಗದಂತೆ ತೋರುವಂಥವುಗಳು ಹೀಗೆ ಅರ್ಥ ಇನ್ನು– "ಜೀವಾದಿ" ಎಂಬಲ್ಲಿ "ಆದಿ" ಪದಗ್ರಹಣದಿಂದ, ಅಸತ್ಕರ್ತೃತ್ವವಾದವು ಪರಿಗ್ರಹಿಸಲ್ಪಟ್ಟಿದೆ. ಇದು ಯುಕ್ತವಲ್ಲ, ಏಕೆಂದರ "ಅಸದಿತಿಚೇನ್ನಪ್ರತಿಷೇಧಮಾತ್ರತ್ವಾತ್" ಇತ್ಯಾದಿ ಸೂತ್ರದಿಂದ ನಿರಾಕರಿಸಲ್ಪಟ್ಟಿರುವುದರಿಂದ, ಪುನರುಕ್ತಿ ಮುಂತಾದ ದೋಷದ ಪ್ರಸಂಗವು ಬರುತ್ತದೆ ಈ ಆಶಂಕೆಯನ್ನು "ತನ್ಮನೋಕುರುತ" ಇತ್ಯಾದಿ ವಚನದಿಂದ ನಿವಾರಿಸುತ್ತಾರೆ "ಇತ್ಯಾದೇಃ" ಈ ಮುಂತಾದ ಪ್ರಮಾಣಗಳಿಂದ ಇಲ್ಲಿ "ಆಶಂಕಿತಾ" ಎಂಬುದು ಶೇಷವಾಗಿ

## — ವಿಶೇಷಾರ್ಥಪ್ರದೀಪಿಕಾ —

"ಅತಿದೇಶಾನುಪಪತ್ತಿಃ" – ಅಭೇದವಿಷ್ಟಲ್ಲಿ ಅತಿದೇಶವು ಯುಕ್ತವಲ್ಲವೆಂದು ಇಲ್ಲಿಯ ಭಾವ, "ಪೌನರುಕ್ತ್ಯಾದಿ ಪ್ರಸಂಗಃ" = ಇಲ್ಲಿ ಆದಿಪದದಿಂದ "ಅತಿದೇಶಾನುಪಪತ್ತಿ" ಯನ್ನು ಪರಿಗ್ರಹಿಸಬೇಕು

तन्मनोऽकुरुतेत्यादेरसतो मनसो जनिः ॥
निवारिता तु पूर्वत्र ह्यकस्मादिति तद्विना ॥
असतो विश्वजननमाशङ्क्यात्र निषिध्यते ॥

आदिपदेनोक्तयुक्तिर्गृह्यते । असतोऽभावस्य मनस इति ज्ञानेच्छा-प्रयत्नेभ्यो जनिर्जगत इति शेषः । पूर्वत्र त्विति सम्बन्धः । तच्च प्रतिषेधमात्रत्वादित्यादिना स्फुटमवगम्यत इति हिशब्दः । अकस्माद्धी-दमाविरासीदित्यादिश्रुत्या । तन्मनो विना । असतः शून्यात् ।

एतदुक्तं भवति । पूर्वमभावस्य जगत्कारणत्वं निराकृतमिदानीं

ಅಭಾವದ ಜ್ಞಾನೇಚ್ಛಾ ಪ್ರಯತ್ನಗಳಿಂದ ಜಗತ್ತಿನ ಉತ್ಪತ್ತಿಯು "ತನ್ಮನೋಽಕುರುತ" ಈ ಮುಂತಾದ ಪ್ರಮಾಣಗಳಿಂದಲೂ ಹಿಂದಿನ ಯುಕ್ತಿಯಿಂದಲೂ ಆಶಂಕಿಸಲ್ಪಟ್ಟಿದ್ದು ಅದು ಮೊದಲಿಗೆ ನಿವಾರಿಸಲ್ಪಟ್ಟಿತು; ಇದು ಪ್ರಸಿದ್ಧವೇ! "ಅಕಸ್ಮಾದ್ಧೀದಮಾವಿರಾಸೀತ್" ಇತ್ಯಾದಿ ಶ್ರುತಿಯಿಂದ, ಜ್ಞಾನೇಚ್ಛಾಪ್ರಯತ್ನಗಳಿಲ್ಲದಯೆ, ಶೂನ್ಯದಿಂದ ಅಥವಾ ಕಾರಣವಿಲ್ಲದೆಯೇ ವಿಶ್ವದ ಉತ್ಪತ್ತಿಯನ್ನು ಆಶಂಕಿಸಿ, ಇಲ್ಲಿ ಅದು ನಿರಾಕರಿಸಲ್ಪಡುತ್ತದೆ

— ಪದಾರ್ಥದೀಪಿಕಾ —

ಬಂದಿದೆ 'ಆದಿ" ಪದದಿಂದ ಹಿಂದೆ ಹೇಳಿದ ಯುಕ್ತಿಯು ಸಂಗ್ರಹಿಸಲ್ಪಟ್ಟಿದೆ "ಅಸತಃ"= ಅಭಾವದ "ಮನಸಃ" ಜ್ಞಾನ, ಇಚ್ಛೆ, ಪ್ರಯತ್ನಗಳಿಂದ, ಜನಿಃ= ಜನನವು. ಇಲ್ಲಿ " ಜಗತಃ " ಎಂಬುದನ್ನು ಶೇಷವಾಗಿಟ್ಟುಕೊಳ್ಳಬೇಕು " ಪೂರ್ವತ್ರ ತು " ( ಹಿಂದಿನ ಸೂತ್ರದಲ್ಲಿಯಾದರೋ ) ಎಂಬ ಪದದೊಡನೆ ಅನ್ವಯವಿದೆ ಈ ಸಂಗತಿಯು (ಅಭಾವಕ್ಕೆ ಜ್ಞಾನೇಚ್ಛಾಪೂರ್ವಕ ಕರ್ತೃತ್ವವು ನಿರಾಕೃತವೆಂಬುದು) " ಪ್ರತಿಷೇಧಮಾತ್ರತ್ವಾತ್ " ಎಂಬ ಸೂತ್ರಾಂಶದಿಂದ ಸ್ಪಷ್ಟವಾಗಿ ತಿಳಿಯುತ್ತದೆಯೆಂಬುದನ್ನು "ಹಿ" ಶಬ್ದವು ತೋರಿಸುತ್ತದೆ "ಅಕಸ್ಮಾತ್ ಇತಿ"- "ಅಕಸ್ಮಾದ್ಧೀದಮಾವಿರಾಸೀತ್" ಈ ಮುಂತಾದ ಶ್ರುತಿಯಿಂದ, "ತದ್ವಿನಾ"- ಮನಸ್ಸು ಇಲ್ಲದೆ, "ಅಸತಃ"= ಶೂನ್ಯದದೆಶೆಯಿಂದ, ಹೀಗೆ ಅರ್ಥ

— ವಿಶೇಷಾರ್ಥಪ್ರದೀಪಿಕಾ —

"ಉಕ್ತಯುಕ್ತಿಃ" - ಅಭಾವ ಕರ್ತೃತ್ವಪಕ್ಷದಲ್ಲಿ ಹೇಳಿದ ಯುಕ್ತಿ ''ತದ್ವಿನಾ' ಎಂಬುದು ಅನುವಾದವು, ''ಮನೋವಿನಾ" ಎಂಬುದು ವ್ಯಾಖ್ಯಾನವು. ಜ್ಞಾನೇಚ್ಛಾಪ್ರಯತ್ನಗಳಿಲ್ಲದೆಯೆಂದು ಅದರ ಅರ್ಥ.

तु शून्यस्य । किञ्च पूर्वं कर्तृत्वेनाधुना कर्तृतां विनैवेति न पौनरुक्त्या-दीति । यद्वा भाष्यदिशा निष्कारणैवात्र जगज्जनिराशङ्किततेति न पौनरुक्त्यादिकम् । अत्र शङ्काप्रापकप्रमाणोपन्यासस्त्वस्यैव प्रमेयभेद-स्योपपादनार्थम् । एतेनाभ्यधिका शङ्काऽपि सूचिता । तथा हि । मा भूदभावकर्तृकं जगत् तथाऽपि जीवादिभ्यो जनिमद्भविष्यात । जीवाद्भवन्ति भूतानि । प्रधानादिदमुत्पन्नम् । अकस्माद्धीदमाविरासी-दित्यादिश्रुत्यनुगृहीतेभ्यो घटदधिकण्टकतैक्ष्ण्यादिदृष्टान्तेभ्यः । न हि

— ಪದಾರ್ಥದೀಪಿಕಾ —

ಇಲ್ಲಿ "ಹಿಂದೆ ಅಭಾವಕ್ಕೆ ಜಗತ್ಕಾರಣತ್ವವು ನಿರಾಕರಿಸಲ್ಪಟ್ಟಿದೆ ಆದರೆ ಈಗ ಶೂನ್ಯದ ಜಗತ್ಕಾರಣತ್ವವು ನಿರಾಕರಿಸಲ್ಪಡುತ್ತದೆ ಮತ್ತು ಹಿಂದೆ-ಕರ್ತೃತ್ವವೆಂಬ ಕಾರಣತ್ವವು ನಿರಾಕೃತವಾಗಿದ್ದು, ಈಗ ಕರ್ತೃತ್ವವನ್ನು ಬಿಟ್ಟು ಬೇರೆಯಾದ ಕಾರಣತ್ವವು ನಿರಾಕರಿಸಲ್ಪಡುತ್ತದೆ ಆದುದರಿಂದ ಪುನರುಕ್ತಿ ಮುಂತಾದ ದೋಷಗಳು ಬರುವುದಿಲ್ಲ" ಈ ವಿಷಯವು ಹೇಳಲ್ಪಟ್ಟಂತಾಗುತ್ತದೆ ಅಥವಾ– ಭಾಷ್ಯದ ರೀತಿಯಿಂದ ಕಾರಣವಿಲ್ಲದೆಯೇ ಜಗತ್ತಿನ ಜನನವು ಇಲ್ಲಿ ಆಶಂಕಿಸಲ್ಪಟ್ಟಿದೆ, ಆದುದರಿಂದ ಪುನರುಕ್ತಿ ಮುಂತಾದ ದೋಷಗಳಿಲ್ಲ ಆದರೆ ಇಲ್ಲಿ ಶಂಕಾಪ್ರಾಪಕ ಪ್ರಮಾಣಗಳನ್ನು ಉದಾಹರಿಸಿದುದು ಇದೇ ಪ್ರಮೇಯವಿಶೇಷವನ್ನೇ ಉಪಪಾದಿಸುವುದಕ್ಕಾಗಿ ಇದರಿಂದ ಅಭ್ಯಧಿಕಾಶಂಕೆಯೂ ಸೂಚಿಸಲ್ಪಟ್ಟಿತು ಹೇಗೆಂದರೆ— ಜಗತ್ತು ಅಭಾವಕರ್ತೃಕವಾಗದೆ ಇರಲಿ ಆದರೂ ಜೀವ ಮುಂತಾದುದರಿಂದ ಜನನವುಳ್ಳದ್ದಾಗುತ್ತದೆ ಏಕೆಂದರೆ– "ಜೀವಾದ್ ಭವಂತಿ ಭೂತಾನಿ, ಪ್ರಧಾನಾದಿದಮುತ್ಪನ್ನಂ, ಅಕಸ್ಮಾದ್ಧೀದಮಾವಿರಾಸೀತ್" ಇತ್ಯಾದಿ ಶ್ರುತಿಗಳ ಅನುಗ್ರಹಪಡೆದ, ಘಟ, ದಧಿ, ಕಂಟಕ ತೈಕ್ಷ್ಣ್ಯ, ಮುಂತಾದ ದೃಷ್ಟಾಂತಗಳಿಂದ ಕೂಡಿದ, "ಜಗತ್ತು ಜೀವಕರ್ತೃಕವಾಗಿದೆ ಏಕೆಂದರೆ ಕಾರ್ಯವಾಗಿದೆ, ಘಟವು ದೃಷ್ಟಾಂತವು" ಇತ್ಯಾದಿ ಅನುಮಾನ

— ವಿಶೇಷಾರ್ಥಪ್ರದೀಪಿಕಾ —

ಪುನರುಕ್ತಿಯನ್ನು ಪರಿಹರಿಸಲು, ಕೇವಲ ಪ್ರಮೇಯವನ್ನಷ್ಟೇ ಹೇಳಬೇಕಿದ್ದರೂ ಪ್ರಮಾಣವನ್ನು ಹೇಳಿದುದು ವ್ಯರ್ಥವೆಂಬ ಆಶಂಕೆಯನ್ನು "ಅತ್ರ ಶಂಕಾಪ್ರಾಪಕ" ಇತ್ಯಾದಿವಾಕ್ಯಗಳಿಂದ ಪರಿಹರಿಸುತ್ತಾರೆ

''ದೃಷ್ಟಾಂತೇಭ್ಯಃ''– ಈ ದೃಷ್ಟಾಂತಗಳಿಂದ ನಿರ್ಣಯಿಸಲ್ಪಟ್ಟ ವ್ಯಾಪ್ತಿ

जीवादीनां प्रतिषेधमात्रत्वमस्ति । येनोक्तयुक्तिविरोधः स्यात् । असत्त्वा चेतनत्वादेरुपलक्षणमेतदिति चेत् । किमत्रासदादेः कारणत्वमात्रं नेत्युच्यते । किंवा कर्तृत्वं । नाद्यः । उक्तदृष्टान्तेषु व्यभिचारात् । न द्वितीयः । कर्तृत्वस्यास्माभिरनङ्गीकृतत्वादिति । अत एवात्र सर्वत्र कर्तृशब्दः कारणत्वमात्रपरो द्रष्टव्यः ।

— ಪದಾರ್ಥದೀಪಿಕಾ —

ಗಳಿಂದ ಜೀವಾದಿಕರ್ತೃಕವಾದವು ಸಿದ್ಧಿಸುತ್ತದ ಏಕೆಂದರೆ ಜೀವಾದಿಗಳಿಗೆ ಕೇವಲ ಪ್ರತಿಷೇಧಸ್ವರೂಪವು ಇರುವುದಿಲ್ಲ ಹಾಗೆ ಇದ್ದರೆ ಹಿಂದೆ ಹೇಳಿದ ಯುಕ್ತಿ ವಿರೋಧವು ಬರುತ್ತಿತ್ತು ಇದು ಅಸತ್ವ ಅಚೇತನತ್ವ ಮುಂತಾದುದನ್ನೂ ಸಂಗ್ರಹಿಸುತ್ತದಯೆಂದು ಹೇಳಿದರೆ– ಅಲ್ಲಿ ಅಸತ್ತು ಮುಂತಾದವುಗಳಿಗೆ ಜಗತ್ತನ್ನು ಕುರಿತು ಕಾರಣತ್ವವಷ್ಟೇ ಇಲ್ಲವೆಂದು ಹೇಳಲಾಗುವದೋ ? ಅಥವಾ ಕರ್ತೃತ್ವವು ಇಲ್ಲವೆಂದು ಹೇಳಲಾಗುವುದೋ ? ಹೀಗೆ ಪ್ರಶ್ನೆ ಮೊದಲನೆಯ ಪಕ್ಷವು ಯುಕ್ತವಲ್ಲ. ಏಕೆಂದರೆ ಹಿಂದೆ ಹೇಳಿದ ದೃಷ್ಟಾಂತಗಳಲ್ಲಿ ಸಾಧ್ಯವನ್ನು ಹೇತುವು ವ್ಯಭಿಚರಿಸುತ್ತದೆ ಎರಡನೆಯ ಪಕ್ಷವೂ ಸರಿಯಲ್ಲ ಏಕೆಂದರೆ–

— ವಿಶೇಷಾರ್ಥಪ್ರದೀಪಿಕಾ —

ಮುಂತಾದುದುಳ್ಳ ಅನುಮಾನಗಳಿಂದ, ಹೀಗೆ ಅರ್ಥ ಆ ಅನುಮಾನಗಳು ಹೀಗೆ— (೧)ಜಗತ್ತು ಜೀವಕರ್ತೃಕವು, ಏಕೆಂದರೆ ಕಾರ್ಯವಾಗಿದೆ ಘಟವು ದೃಷ್ಟಾಂತವು (೨) ಜಗತ್ತು ಅಚೇತನ ಕರ್ತೃಕವಾಗಿದೆ, ಏಕೆಂದರೆ ಕಾರ್ಯವಾಗಿದೆ ಇದರಲ್ಲಿ ದಧಿ (ಮೊಸರು) ದೃಷ್ಟಾಂತವು (೩) ಜಗತ್ತು ಅಸತ್ಕಾರಣಕವಾದುದು ಇಲ್ಲವೆ ನಿಷ್ಕಾರಣಕವಾದುದು ಏಕೆಂದರೆ ಕಾರ್ಯವಾಗಿದೆ,ಇದರಲ್ಲಿ ಕಂಟಕದ (ಮುಳ್ಳಿನ) ತೀಕ್ಷ್ಣತೆಯು ದೃಷ್ಟಾಂತವು, ಹೀಗೆ ತಿಳಿಯಬೇಕು

"ಉಕ್ತಯುಕ್ತಿ" – ಮೊದಲನೆಯ ಸೂತ್ರದಲ್ಲಿ ಹೇಳಿದ (ಪ್ರತಿಷೇಧಮಾತ್ರತ್ವಯುಕ್ತಿ

"ಉಕ್ತದೃಷ್ಟಾಂತೇಷು"– ಘಟ ಮುಂತಾದ ದೃಷ್ಟಾಂತಗಳಲ್ಲಿ ಇಲ್ಲಿ ಸರ್ವಜ್ಞತೆಯು ಇಲ್ಲದಿದ್ದರೂ (ಅಸರ್ವಜ್ಞತೆಯಿದ್ದರೂ) ಕಾರಣತ್ವದ ಇಲ್ಲದಿರುವಿಕೆಯು ಇರುವುದಿಲ್ಲ (ಕಾರಣತ್ವವೇ ಇದೆ) ಇನ್ನು "ಚೇತನವಾಗಿದ್ದು" ಎಂಬ ವಿಶೇಷಣವನ್ನು ನೇರಿಸಿದರೆ (ಜೀವನು ಕಾರಣನಲ್ಲ- ಚೇತನನಾಗಿದ್ದು ಸರ್ವಜ್ಞನಾಗಿಲ್ಲದಿರುವುದರಿಂದ, ಹೀಗೆ) ಕುಲಾಲ (ಕುಂಬಾರ)ನಲ್ಲಿ ವ್ಯಭಿಚಾರವು ಬರುತ್ತದೆ ಹೀಗೆ ಅರ್ಥ

नन्वत्र जीवादेर्विश्वकारणत्वमात्रं शङ्क्यते । तस्यैव वा । आद्ये न सिद्धान्तविरोधः । जीवस्य ह्यदृष्टाधारतया निमित्तत्वं प्रधानस्योपादानत्वमङ्गीकृतमेव । न द्वितीयः । प्रापकाभावात् । कार्यस्य सकर्तृकत्वनियमदर्शनाच्चेत्यत आह ॥ प्रापकमिति । द्वितीय एवाशङ्क्यते । तस्य च प्रापकं-न जीवात्कारणं परं, न ह्यन्यत्कारणं मतमित्यादि-

— ಪದಾರ್ಥದೀಪಿಕಾ —

ನಾವು ಕರ್ತೃತ್ವವನ್ನು ಒಪ್ಪಿರುವುದಿಲ್ಲ" ಹೀಗೆ ಆದುದರಿಂದಲೇ ಇಲ್ಲಿನ "ಕರ್ತೃ" ಶಬ್ದವು ಕೇವಲ ಕಾರಣತ್ವದಲ್ಲಿಯೇ ತಾತ್ಪರ್ಯವುಳ್ಳದ್ದೆಂದು ತಿಳಿಯಬೇಕು

ಇನ್ನು– ಇಲ್ಲಿ ಜೀವಾದಿಗಳಿಗೆ ವಿಶ್ವಕಾರಣತ್ವವಷ್ಟೇ ಶಂಕಿಸಲ್ಪಡುವುದೋ? ಇಲ್ಲವೆ ಜೀವಾದಿಗಳಿಗೇ ಕಾರಣತ್ವವೆಂಬುದು ಶಂಕಿಸಲ್ಪಡುವುದೋ? ಹೀಗೆ ಪ್ರಶ್ನೆ ಮೊದಲನೆಯ ಪಕ್ಷದಲ್ಲಿ ಸಿದ್ಧಾಂತವಿರೋಧವಿಲ್ಲ ಏಕೆಂದರೆ– ಜೀವನಿಗೆ ಅದೃಷ್ಟದ ಆಶ್ರಯನಾಗಿ (ಅದೃಷ್ಟವುಳ್ಳವನಾಗಿ) ಇರುವುದರಿಂದ ನಿಮಿತ್ತಕಾರಣತ್ವವೆಂಬುದನ್ನೂ ಪ್ರಧಾನಕ್ಕೆ ಉಪಾದಾನರೂಪವಾದ ಕಾರಣತ್ವವೆಂಬುದನ್ನೂ ಒಪ್ಪಿದ್ದೇ ಆಗಿದೆ ಎರಡನೆಯ ಪಕ್ಷವು ಸರಿಯಾದುದಲ್ಲ ಏಕೆಂದರೆ– ಜೀವಾದಿಗಳಿಗೇ ಕಾರಣತ್ವವೆಂಬ ಸಂಗತಿಯ ಪ್ರಾಪಕವು ಇರುವುದಿಲ್ಲ ಮತ್ತು ಕಾರ್ಯವು ಕರ್ತೃವಿನಿಂದ ಹುಟ್ಟಿರಬೇಕೆಂಬ ನಿಯಮವೂ ಇದೆ ಈ ಆಶಂಕೆಯನ್ನು "ಪ್ರಾಪಕಂ" ಈ ವಚನದಿಂದ ಹೇಳುತ್ತಾರೆ ಎರಡನೆಯ ಪಕ್ಷವೇ ಆಶಂಕಿಸಲ್ಪಡುತ್ತದೆ ಈ ಆಶಂಕೆಯ ಪ್ರಾಪಕಗಳು "ಜೀವನಿಂದ ಬೇರೆ ಕಾರ

— ವಿಶೇಷಾರ್ಥಪ್ರದೀಪಿಕಾ —

"ಅನಂಗೀಕೃತತ್ವಾತ್" – ಸಿದ್ಧಸಾಧನವಾದುದರಿಂದ, ದುಷ್ಟವಾಗಿ ಸತ್ಪ್ರತಿಪಕ್ಷಾನುಮಾನವಾಗಲಾರದೆಂದು ಭಾವ "ಅತಏವ" - ಕಾರಣತ್ವವಷ್ಟೇ ಪೂರ್ವಪಕ್ಷವಿಷಯವಾದುದು, ಜೀವಾದಿಗಳ ಕರ್ತೃತ್ವವು ಪೂರ್ವಪಕ್ಷದಲ್ಲಿ ಬಂದಿಲ್ಲ ಈ ಕಾರಣದಿಂದಲೇ, ಹೀಗೆ ಅರ್ಥ

"ಸರ್ವತ್ರ" - ಭಾಷ್ಯದಲ್ಲಿಯೂ ಅನುವ್ಯಾಖ್ಯಾನದಲ್ಲಿಯೂ,

"ಪ್ರಾಪಕಾಭಾವಾತ್ - ಹಿಂದೆ ಹೇಳಿದ ದೃಷ್ಟಾಂತಗಳಲ್ಲಿ ಜೀವನೊಬ್ಬನೇ ಕಾರಣನೆಂಬುದರ ಪ್ರಾಪಕ (ಸ್ಥಾಪಕ) ಯುಕ್ತಿಯು ಇರುವುದಿಲ್ಲ ಹೀಗೆ ಅರ್ಥ ಅಲ್ಲದಯೇ ಕರ್ತೃವೆಂಬ ಬೇರೆಕಾರಣದ ಪ್ರಾಪಕವೂ ಇರುತ್ತದೆಯೆಂಬುದಾಗಿ "ಕಾರ್ಯಸ್ಯ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ದ್ವಿತೀಯ ಏವ" - ಜೀವನಿಗನೇ ಕಾರಣತ್ವವೆಂಬ ಪಕ್ಷವೇ!

प्रापकं वाक्यमात्र तु परिहारोऽविशेषत. ॥

वाक्यम । न च लोकविरोधः । वाक्यमात्रसिद्धेऽर्थे तत्प्रतिपन्नमेव गृह्यते न तु लोकोऽनुगम्यत इति पूर्वपक्षी मन्यत इति ।

ननु च प्रधानकारणत्वादिमतानि द्वितीयपादे निराकरिष्यन्ते । तेषामत्रापि निराकरणे पुनरुक्तिदोषः स्यादित्यतो वाऽऽह ॥ प्रापकमिति । अत्र शङ्काप्रापकं वाक्यमात्रं न तु समय इत्यर्थः ।

"ನ ಜೀವಾತ್ ಕಾರಣಂ ಪರಂ" ಇತ್ಯಾದಿಯಾದ ಕೇವಲ ವಾಕ್ಯವಾದರೋ ಜೀವಾದಿಗಳೇ ಕಾರಣವೆಂಬ ಆಶಂಕೆಯನ್ನು ಹುಟ್ಟಿಸುವಂತಹದು ಪರಿಹಾರವು ಸಮಾನವಾಗಿದೆ

— ಪದಾರ್ಥದೀಪಿಕಾ —

ಣವಿಲ್ಲ, ಇನ್ನೊಂದು ಕಾರಣವಿಲ್ಲ" ಈ ಮುಂತಾದ ವಾಕ್ಯಗಳೇ ! ಹಾಗಾದರ ಲೋಕವಿರೋಧವೆಂದು ಬಗಯಬಾರದು ಏಕೆಂದರ– "ಕೇವಲ ವಾಕ್ಯದಿಂದಲೇ ಸಿದ್ಧಿಸುವಾಗುವ ಅರ್ಥದಲ್ಲಿ— ವಾಕ್ಯದಿಂದ ತೋರುವ ಅರ್ಥವೇ ಗೃಹಿಸಲ್ಪಡುವುದೇ ವಿನಾ ಲೋಕವನ್ನು ಅನುಸರಿಸುವುದಿಲ್ಲ" ಎಂದು ಪೂರ್ವಪಕ್ಷಿಯು ಬಗೆಯುತ್ತಾನೆ " ಹೀಗೆ ಅರ್ಥ

ಇನ್ನು " ಪ್ರಧಾನವು ಜಗತ್ಕಾರಣವು " ಇತ್ಯಾದಿಯಾದ ಮತಗಳನ್ನು ಎರಡನೆಯ ಪಾದದಲ್ಲಿ ನಿರಾಕರಿಸುವರು ಆ ಮತಗಳನ್ನು ಈ ಪಾದದಲ್ಲಿಯೂ ನಿರಾಕರಿಸಿದರ ಪುನರುಕ್ತಿ ದೋಷವು ಬರುತ್ತದೆ " ಹೀಗೆ ಆಶಂಕೆಯೂ ಬರುವುದರಿಂದ ಅದನ್ನು ಪರಿಹರಿಸಲು "ಪ್ರಾಪಕಂ" ಇತ್ಯಾದಿ ವಾಕ್ಯವನ್ನು ಹೇಳಿದ್ದಾರ ಇಲ್ಲಿ ಶಂಕಾಪ್ರಾಪಕವು ಕೇವಲ ವಾಕ್ಯವೇ ವಿನಾ ಸಮಯ

— ವಿಶೇಷಾರ್ಥಪ್ರದೀಪಿಕಾ —

'ಲೋಕವಿರೋಧಃ" – ಲೋಕದಲ್ಲಿ ಕಾರ್ಯಕ್ಕೆ ಸಕರ್ತೃಕತ್ವನಿಯಮವು ಕಂಡುಬಂದುದರಿಂದ ಲೋಕದೃಷ್ಟಿವಿರೋಧವೆಂದು ತಿಳಿಯಬೇಕು

''ದ್ವಿತೀಯ ಪಾದೇ" - ''ರಚನಾನುಪಪತ್ತೇಶ್ಚ" ಇತ್ಯಾದಿ ಸೂತ್ರಗಳಲ್ಲಿ ಪ್ರಧಾನಕಾರಣತ್ವಮತವೂ, '' ಅಭ್ಯುಪಗಮೇಽಪ್ಯರ್ಥಾಭಾವಾತ್ " ಇತ್ಯಾದಿ ಸೂತ್ರಗಳಲ್ಲಿ ಅಕಾರಣತ್ವಮತವೂ, ''ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್" ಎಂಬಲ್ಲಿ ಜೀವಕಾರಣತ್ವಮತವೂ ''ನಾಸತೋ ದೃಷ್ಟತ್ವಾತ್" ಎಂಬಲ್ಲಿ ಶೂನ್ಯ ಕಾರಣತ್ವಮತವೂ ನಿರಾಕರಿಸಲ್ಪಡುತ್ತವೆ ಹೀಗೆ ಭಾವ

इदमुक्तं भवति । अत्र श्रुत्यनुगृहीताभिर्युक्तिभिः प्राप्तं प्रधानादि-कारणत्वं निराक्रियते । उत्तरत्र तु साङ्ख्यादिसमयप्राप्तम् । अतो नोक्तदोष इति । नन्वेवं नर्ह्येतेनेत्यतिदेशः कथम् । उक्तपरिहारस्य पूर्वपक्षिणा परिहृतत्वादित्यत आह ॥ परिहार इति । यद्यपि प्रतिषेधमात्रत्वं प्रधानादिष्वसिद्धम् । अचेतनत्वादिकं च कारणमात्र-वादेऽनैकान्तिकम् । तथाऽपि पूर्वपक्षाणां युक्तिविरुद्धत्वं यत्प्रतिषेध-

— ಪದಾರ್ಥದೀಪಿಕಾ —

(ಮತ)ವಲ್ಲ ಹೀಗೆ ಅರ್ಥ 'ಇಲ್ಲಿ-- ಶ್ರುತಿಯ ಅನುಗ್ರಹವನ್ನು ಪಡೆದ ಯುಕ್ತಿಗಳಿಂದ ಉಂಟಾದ ಪ್ರಧಾನಾದಿಗಳು ಜಗತ್ಕಾರಣವೆಂಬ ಮತವು ನಿರಾಕರಿಸಲ್ಪಡುತ್ತದೆ ಮುಂದಿನ ಪಾದದಲ್ಲಿ ಸಾಂಖ್ಯ ಮುಂತಾದ ಸಮಯ ಪ್ರಾಪ್ತವಾದ ಅಸತ್ಕಾರಣತ್ವ ಮತವು ನಿರಾಕರಿಸಲ್ಪಡುತ್ತದೆ ಆದುದರಿಂದ ಹಿಂದಿನ ದೋಷವಿಲ್ಲ" ಎಂಬ ಸಂಗತಿಯನ್ನು ಹೇಳಿದ್ದಾಗುತ್ತದ ಹಾಗಾದಲ್ಲಿ "ಏತೇನ" ಎಂಬ ಅತಿದೇಶವು ಹೇಗೆ? ಏಕೆಂದರೆ ನೀವು ಹೇಳಿದ ಸಮಾಧಾನವನು ಪೂರ್ವಪಕ್ಷಿಯು ಅಲ್ಲಗಳೆದಿರುತ್ತಾನೆಂಬ ಪ್ರಶ್ನೆಯು ಬರುವುದರಿಂದ ಇದರ ಪರಿಹಾರರೂಪವಾಗಿ "ಪರಿಹಾರೋ" ಎಂಬ ವಾಕ್ಯವನ್ನು ಹೇಳಿರುತ್ತಾರ

ಕೇವಲ ಪ್ರತಿಷೇಧ ಸ್ವರೂಪತೆಯು ಪ್ರಧಾನ ಮುಂತಾದವುಗಳಲ್ಲಿ ಸಿದ್ಧವಾಗಿಲ್ಲ ಮತ್ತು ಅಚೇತನತ್ವ (ಚೇತನವಾಗದಿರುವುದು) ಮುಂತಾದುದು, ಕೇವಲ ಕಾರಣತ್ವವನ್ನು ಹೇಳುವ ವಾದದಲ್ಲಿ ಸಾಧ್ಯವನ್ನು (ಕಾರಣತ್ವವಿಲ್ಲವೆಂಬುದನ್ನು) ವ್ಯಭಿಚರಿಸುತ್ತದೆ 'ಇದು ನಿಜ ಆದರೂ ಪೂರ್ವಪಕ್ಷಗಳು, ಪ್ರತಿಷೇಧಮಾತ್ರ

— ವಿಶೇಷಾರ್ಥಪ್ರದೀಪಿಕ —

ಇಲ್ಲಿ ಶಂಕಾಪ್ರಾಪಕವು ಕೇವಲ ವಾಕ್ಯವೇ ಆದಲ್ಲಿ ಶ್ರುತಿಗಳಿಗೆ ಶ್ರುತಿ ವಿರೋಧಪರಿಹಾರಕವಾಗುವುದರಿಂದ ಈ ಅಧಿಕರಣವು ಈ ಅಧ್ಯಾಯದ ಮೂರನೆಯಪಾದದಲ್ಲಿ ಸೇರಬೇಕಾಗುವದು, ಈ ಆಶಂಕೆಯನ್ನು ''ಇದಮುಕ್ತಂ" ಇತ್ಯಾದಿ ವಾಕ್ಯಗಳಿಂದ ಪರಿಹರಿಸುತ್ತಾರೆ ''ಯುಕ್ತಿಭಿಃ"- ದೃಷ್ಟಾಂತೇಭ್ಯಃ" ಎಂಬ ವಾಕ್ಯಗಳಿಂದ ಹಿಂದೆ ಹೇಳಿದ ಯುಕ್ತಿಗಳಿಂದ, ಹೀಗೆ ಅರ್ಥ ಶ್ರುತಿಯು ಉಪಸರ್ಜನವಾಗಿ (ಅಮುಖ್ಯವಾಗಿ) ಯುಳ್ಳ ಯುಕ್ತಿಗಳ ವಿರೋಧವನ್ನು ಪರಿಹರಿಸುವುದರಿಂದ ಮೊದಲನೆಯ ಪಾದದಲ್ಲಿ ನಿವೇಶವು ಯುಕ್ತವೆಂದು ತಿಳಿಯಬೇಕು '' ಪರಿಹಾರಃ "— ಪ್ರತಿಷೇಧಮಾತ್ರತ್ವರೂಪ ಪರಿಹಾರವು ಸಮಾನವೆಂದು ತಿಳಿಯಬೇಕು

क्वचिज्जीवाकृत दृष्ट्वाऽचेतनादेव चाकृतम् ।

मात्रत्वात् दृष्टान्ताभावादिति सामान्यतः सूचितम् । यच्च स्वपक्षदोषा-च्चेत्यप्रामाणिकत्वं स परिहारोऽत्राप्यविशेषितः समान इत्यतिदेशो युज्यत इत्यर्थः ।

ननु कथं जगतो जीवकर्तृत्वादिवादस्य युक्तिविरुद्धत्वमित्यत आह ॥ क्वचिदिति । क्वचिद्देशादौ । यद्वा क्वचिज्जीवादौ । अकृतमिति च भावप्रधानो निर्देशः । कारणत्वमात्रमत्र पूर्वपक्षो न कर्तृत्वमित्य-तोऽचेतनादिति पञ्चमीप्रयोगः । अचेतनादकृतं च दृष्ट्वा । एवशब्देन

ಕೆಲವು ಕಡೆಗಳಲ್ಲಿ ಜೀವಕೃತತ್ವವಿಲ್ಲವೆಂಬುದನ್ನೂ ಅಚೇತನಕೃತತ್ವವಿಲ್ಲವೆಂಬುದನ್ನೂ ನೋಡಿ ಅವುಗಳ ಹಾಗೆಯೇ ಇನ್ನುಳಿದ (ಮಹದಾದಿ) ವಸ್ತು

— ಪದಾರ್ಥದೀಪಿಕಾ —

ಸ್ವರೂಪವುಳ್ಳದ್ದಾಗಿರುವುದು, ದೃಷ್ಟಾಂತವಿರುವುದು, ಈ ಕಾರಣಗಳಿಂದ ಯುಕ್ತಿವಿರುದ್ಧಗಳಾಗಿವೆಯೆಂಬುದು ಸಾಮಾನ್ಯವಾಗಿ ಸೂಚಿಸಲ್ಪಟ್ಟಿದೆ ಹಾಗು "ಸ್ವಪಕ್ಷದೋಷಾಚ್ಚ" ಎಂಬ ಸೂತ್ರದಿಂದ ಹೇಳಿದ ಅಪ್ರಾಮಾಣಿಕತ್ವವೂ ಹೇಳಲಾಗಿದೆ ಆ ಪರಿಹಾರವು ಇಲ್ಲಿಯೂ ಸಮಾನವು (ಅವಿಶೇಷತಃ)। ಈ ಕಾರಣದಿಂದ, "ಏತೇನ" ಎಂಬುದಾಗಿ ಹೇಳಿದ ಅತಿದೇಶವು ಯುಕ್ತವೇ ಆಗುತ್ತದೆ, ಹೀಗೆ ಅರ್ಥ

ಜೀವಾದಿಗಳನ್ನು ಕರ್ತೃಗಳೆಂದು ಹೇಳುವ ವಾದಗಳು ಯುಕ್ತಿವಿರುದ್ಧಗಳೆಂಬುದು ಹೇಗೆ? ಈ ಆಶಂಕಯನ್ನು "ಕ್ವಚಿತ್" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ಕ್ವಚಿತ್" ದೇಶಮುಂತಾದುದರಲ್ಲಿ ಅಥವಾ "ಕ್ವಚಿತ್"= ಜೀವ ಮುಂತಾದುದರಲ್ಲಿ "ಅಕೃತಂ" ಇದು ಭಾವಪ್ರಧಾನ ನಿರ್ದೇಶವು ಕೇವಲ ಕಾರಣತ್ವವಷ್ಟೇ ಇಲ್ಲಿ ಪೂರ್ವಪಕ್ಷವು, ಕರ್ತೃತ್ವವಲ್ಲ ಹೀಗೆ ಆಶಂಕೆಯು ಬರುವುದರಿಂದ ಅದನ್ನು ಪರಿಹರಿಸಲು "ಅಚೇತನಾದೇವ" ಎಂಬಲ್ಲಿ ಪಂಚಮೀ ವಿಭಕ್ತಿಯನ್ನು ಪ್ರಯೋಗಿಸಿದ್ದಾರೆ. "ಅಚೇತನಾದಕೃತಂ ಚ ದೃಷ್ಟ್ವಾ"= (ಅಚೇತನದಿಂದ ಮಾಡಲ್ಪಡದಿರುವುದನ್ನೂ ನೋಡಿ) ಇಲ್ಲಿ ಅರ್ಥ "ಏವ"

— ವಿಶೇಷಾರ್ಥಪ್ರದೀಪಿಕಾ —

ಕ್ವಚಿದ್ದೇಶಾದೌ" – ಅವ್ಯಾಕೃತ ಆಕಾಶ ಮುಂತಾದ, ನಿತ್ಯವಾದವುಗಳಲ್ಲಿ "ಪಂಚಮೀಪ್ರಯೋಗಃ" – ಕರ್ತೃತ್ವಾಭಿಪ್ರಾಯವಿದ್ದ ಪಕ್ಷದಲ್ಲಿ "ಕರ್ತೃ

तद्वदेवानुमाऽन्यत्र वस्तुत्वात्क्रियते श्रुतेः ॥ २-१-४ ॥

दृष्टान्तानामसन्दिग्धसाध्यतामाह । अनुमाऽनुमितिः । अन्यथा वस्तुत्वस्यैवानुमानत्वात्पञ्चमी न स्यात् । जीवाकृतत्वादेरिति शेषः । अन्यत्र महदादौ । अत्रैते प्रयोगाः । महदादिकार्यं न जीवकृतं वस्तुत्वाज्जीववत् । विमतं न प्रधानकार्यं वस्तुत्वात्प्रधानवत् । विमतं नासत्कार्यं वस्तुत्वाद्घटवदिति । यद्यपि जीवस्य निमित्तत्वेन प्रधान-

ಗಳಲ್ಲಿಯೂ ವಸ್ತುತ್ವವಿರುವುದರಿಂದ "ಸ ಇದಂ ಸರ್ವಮಸೃಜತ" ಇತ್ಯಾದಿ ಶ್ರುತಿಗಳಿದ್ದುದರಿಂದ, ಜೀವಾಕೃತತ್ವ ಮುಂತಾದುದರ ಅನುಮಿತಿಯು ಮಾಡಲ್ಪಡುತ್ತದೆ.

## — ಪದಾರ್ಥದೀಪಿಕಾ —

ಶಬ್ದದಿಂದ, ದೃಷ್ಟಾಂತಗಳಲ್ಲಿ ಸಾಧ್ಯವು ಅಸಂದಿಗ್ಧ( ಸಿದ್ಧ )ವೆಂಬ ಸಂಗತಿಯನ್ನು ಹೇಳಿದ್ದಾರೆ "ಅನುಮಾ'= ಅನುಮಿತಿಯು ಹಾಗಿಲ್ಲದಿದ್ದಲ್ಲಿ- ವಸ್ತುತ್ವವೇ ಅನುಮಾನ( ಯುಕ್ತಿ )ವಾದುದರಿಂದ ಪಂಚಮೀ ಪ್ರಯೋಗವು ಯುಕ್ತವಾಗಲಾರದು ಇಲ್ಲಿ "ಜೀವಾಕೃತತ್ವಾದೇಃ" ಎಂಬುದು ಶೇಷವು 'ಅನ್ಯತ್ರ"= ಮಹದಾದಿಗಳಲ್ಲಿ ಇಲ್ಲಿ ಈ ಅನುಮಾನ ಪ್ರಯೋಗಗಳು- "ಮಹದಾದಿ ಕಾರ್ಯಗಳು ಜೀವಕೃತಗಳಲ್ಲ, ಏಕೆಂದರೆ ವಸ್ತುಗಳಾಗಿವೆ ಇದರಲ್ಲಿ ಜೀವವು ದೃಷ್ಟಾಂತವು ವಿವಾದಾಸ್ಪದವಾದ ಜಗತ್ತು ಪ್ರಧಾನದಿಂದ ಹುಟ್ಟಿದುದಲ್ಲ ಏಕೆಂದರೆ ವಸ್ತುವಾಗಿದೆ ಇದರಲ್ಲಿ ಪ್ರಧಾನವು ದೃಷ್ಟಾಂತವು, ಸಂದಿಗ್ಧವಾದ ಈ ಪ್ರಪಂಚವು ಅಸತ್ತಿನಿಂದ ಹುಟ್ಟಿದುದಲ್ಲ ಏಕೆಂದರೆ ವಸ್ತುವಾಗಿದೆ ಇದರಲ್ಲಿ ಘಟವು ದೃಷ್ಟಾಂತವು" ಹೀಗೆ ಇನ್ನು ಜಗತ್ತನ್ನು ಕುರಿತು ಜೀವನಿಗ

## — ವಿಶೇಷಾರ್ಥಪ್ರದೀಪಿಕಾ —

ಕರಣಾಯೋಸ್ತೃತೀಯಾ' ಎಂಬ ವ್ಯಾಕರಣ ನಿಯಮಾನುಸಾರವಾಗಿ ತೃತೀಯಾ ಬರಬೇಕಾಗುತ್ತದೆ ಹೀಗೆ ಭಾವ "ಅನ್ಯಥಾ" – ಕರ್ತೃತ್ವದ ಬಗ್ಗೆ ಪೂರ್ವಪಕ್ಷವಿದ್ದರೆ, ಹೀಗೆ ಅರ್ಥ "ಅಚೇತನಾತ್" ಎಂಬಲ್ಲಿ ಪಂಚಮೀವಿಭಕ್ತಿಯು, 'ಅಚೇತನತ್ವಾತ್" ಎಂಬುದಾಗಿ ಅನುಮಾನ (ಯುಕ್ತಿ) ಪರವಾಗಿ ಯುಕ್ತವಾಗಬಹುದೆಂಬ ಆಶಂಕೆಯನ್ನು "ವಸ್ತುತ್ವಸ್ಯೈವ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ ಹಾಗಿದ್ದಲ್ಲಿ ತೃತೀಯಾವಿಭಕ್ತಿಯೇ ಬರುತ್ತಿದ್ದು, ಪಂಚಮೀ ವಿಭಕ್ತಿಯು ಬರಲಾರದು, ಹೀಗೆಭಾವ

स्योपादानत्वेन जगत्कारणत्वमङ्गीकृतमेव तथाऽपि स्वातन्त्र्याभावाभिप्रायेणेदं वचनमिति न विरोधः ।

नन्वेवं सत्यतिप्रसङ्गः स्यात् । विमतमीश्वरकृतं न भवति वस्तुत्वादीश्वरवदित्यपि प्रयोक्तुं शक्यत्वादित्यत आह ॥ श्रुतेरिति । स इदं सर्वमसृजतेत्यादिश्रुतेर्महदादेरीश्वरकृतत्वावधारणादतिप्रसङ्गानुमानस्य बाधितत्वेनाप्रामाण्यमिति । समं तर्हीदं भवदनुमानेषु । जीवाद्भवन्ति भूतानीत्यादिश्रुतेरित्यत आह ॥ श्रुतेरिति । भावप्रधानो

— ಪದಾರ್ಥದೀಪಿಕಾ —

ನಿಮಿತ್ತಕಾರಣತ್ವವೂ ಪ್ರಧಾನಕ್ಕೆ ಉಪಾದಾನಕಾರಣತ್ವವೂ ಅಂಗೀಕರಿಸಲ್ಪಟ್ಟದ್ದೇ ಆಗಿದೆ ಆದರೂ ಅವುಗಳಿಗ ಸ್ವಾತಂತ್ರ್ಯವು ( ಸ್ವತಂತ್ರವಾಗಿ ಅಂಥ ಜಗತ್ಕಾರಣತ್ವವು ) ಇಲ್ಲವೆಂಬ ಅಭಿಪ್ರಾಯದಿಂದ, ಈ ವಚನಗಳು ಹೊರಟಿವೆ, ಆದುದರಿಂದ ವಿರೋಧವಿಲ್ಲ

ಹಾಗಾದಲ್ಲಿ "ಈ ಜಗತ್ತು ಈಶ್ವರನಿಂದ ಹುಟ್ಟಿದುದು ( ರಚಿತವು) ಆಗಿಲ್ಲ! ಏಕೆಂದರೆ ವಸ್ತುವಾಗಿದೆ, ಇದರಲ್ಲಿ ಈಶ್ವರನು ದೃಷ್ಟಾಂತವು" ಹೀಗೆ ಪ್ರಯೋಗಿಸಲು ಶಕ್ಯವಾದುದರಿಂದ ಸತ್ಪ್ರತಿಪಕ್ಷ ಪ್ರಸಂಗವು ಬರುತ್ತದೆಂಬ ಆಶಂಕೆಯು ಬರುವುದರಿಂದ ಅದನ್ನು ಪರಿಹರಿರಲು "ಶ್ರುತೇಃ" ಎಂಬುದಾಗಿ ಹೇಳಿದ್ದಾರೆ "ಸ ಇದಂ ಸರ್ವಮಸೃಜತ" ಈ ಮುಂತಾದ ಶ್ರುತಿಗಳಿರುವುದರಿಂದ, ಮಹದಾದಿಗಳು ಈಶ್ವರಕೃತಗಳೆಂಬ ನಿರ್ಣಯವು ಉಂಟಾಗುವುದರಿಂದ ಪ್ರತಿಪಕ್ಷಾನುಮಾನಗಳು ಬಾಧಿತವಾಗುವುದರಿಂದ ಅಪ್ರಮಾಣಗಳು ! ಹೀಗೆ ಅರ್ಥ "ಹಾಗಾದಲ್ಲಿ "ಈ ಸಂಗತಿಯು ನಿಮ್ಮ ಅನುಮಾನಗಳಲ್ಲಿಯೂ ಸಮಾನವು ಏಕೆಂದರ ' ಜೀವಾದ್ಭವಂತಿ " ಇತ್ಯಾದಿ ಶ್ರುತಿಗಳಿರುತ್ತವೆ " ಈ ಆಶಂಕೆಯು ಬರುವುದರಿಂದ, ಅದರ ಪರಿಹಾರಕ್ಕಾಗಿ "ಶ್ರುತೇಃ" ಎಂಬುದಾಗಿ ಹೇಳಿದ್ದಾರೆ

— ವಿಶೇಷಾರ್ಥಪ್ರದೀಪಿಕಾ —

"ನಾಸತ್ಕಾರ್ಯಂ' ಶೂನ್ಯಕಾರಣಕವಲ್ಲ ಅಥವಾ ಅಕಾರಣಕಾರ್ಯ (ಕಾರಣವಿಲ್ಲದೆಯೇ ಇರುವ ಕಾರ್ಯ) ವಲ್ಲ ಹೀಗೆ ಅರ್ಥ "ನಿಮಿತ್ತತ್ವೇನ" ಹಿಂದೆ, ಅದೃಷ್ಟಾಧಾರನಾಗಿ ಜೀವನು ಘಟಾದಿಗಳ ನಿಮಿತ್ತನೆಂದು ಹೇಳಲಾಗಿದೆಯೆಂಬುದನ್ನಿಲ್ಲಿ ಗಮನಿಸಬೇಕು

ಆಶಂಕೆಯನ್ನು "ಸಂಮತಂ ತರ್ಹಿ" ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ.

निर्देशः । जीवादिशब्दानां ब्रह्मश्रुतित्वात् ब्रह्मनामत्वान्न श्रुतिविरोध इत्यर्थः । तत्कुत इत्यत आह ॥ श्रुतेरिति । नामानि सर्वाणि यमाविशन्तीत्यादिश्रुतेः । शेषं भाष्ये । ननु जीवादिकारणकत्वेऽपि घटादिदृष्टान्तवष्टम्भेनानुमानसम्भवात्कथमप्रामाणिकत्वमित्यत आह ॥ श्रुतेरिति । नान्योऽतोऽस्ति कर्तेत्यादिश्रुतेर्बाधितविषयत्वात् दृष्टान्तानां

— ಪದಾರ್ಥದೀಪಿಕಾ —

ಇಲ್ಲಿ ಭಾವಪ್ರಧಾನ ನಿರ್ದೇಶವಾಗಿದೆ ಜೀವಮುಂತಾದ ಶಬ್ದಗಳಿಗೆ "ಶ್ರುತೇಃ"= ಬ್ರಹ್ಮಶ್ರುತಿ (ಬ್ರಹ್ಮನಾಮ) ರೂಪತ್ವವಿದ್ದುದರಿಂದ ಶ್ರುತಿವಿರೋಧವಿಲ್ಲ ಹೀಗೆ ಅರ್ಥ ಇದು ಏಕ? ಎಂಬಲ್ಲಿ ಕಾರಣವನ್ನು "ಶ್ರುತೇಃ" ಈ ವಚನದಿಂದ ಹೇಳಿದ್ದಾರೆ 'ನಾಮಾನಿ ಸರ್ವಾಣಿ ಯಮಾವಿಶಂತಿ" ಇತ್ಯಾದಿ ಶ್ರುತಿಗಳಿರು ವುದರಿಂದ, ಹೀಗ ಅರ್ಥ ಉಳಿದ ಸಂಗತಿಯು ಭಾಷ್ಯದಲ್ಲಿ

ಇನ್ನು – ಜಗತ್ತು ಜೀವಾದಿಗಳಿಂದ ಹುಟ್ಟಿದುದೆಂಬಲ್ಲಿಯೂ ಘಟಾದಿ ದೃಷ್ಟಾಂತಗಳನ್ನವಲಂಬಿಸಿ ಯುಕ್ತಿಗಳನ್ನು ಹೇಳಲು ಬರುವುದರಿಂದ ಅಪ್ರಾಮಾ ಣಿಕತ್ವವು ಹೇಗೆ? ಈ ಆಶಂಕೆಯನ್ನು ಪರಿಹರಿಸಲು "ಶ್ರುತೇಃ" ಎಂಬು ದಾಗಿ ಹೇಳಿದ್ದಾರೆ 'ನಾನ್ಯೋಽತೋಽಸ್ತಿ ಕರ್ತಾ" ಈ ಮುಂತಾದ ಶ್ರುತಿ ಗಳಿಂದ, ಸಾಧ್ಯವು ಬಾಧಿತವಾಗುವುದರಿಂದ ಹಾಗು ದೃಷ್ಟಾಂತಗಳು ಸಾಧ್ಯ

— ವಿಶೇಷಾರ್ಥಪ್ರದೀಪಿಕಾ —

ಜೀವಾದಿಶ್ರುತಿಗಳು ಬ್ರಹ್ಮಶ್ರುತಿಗಳೆಂಬುದು ಹೇಗೆಂಬ ಆಶಂಕೆಯನ್ನು "ಶೇಷಂ ಭಾಷ್ಯೇ" ಈ ವಾಕ್ಯದಿಂದ ಪರಿಹರಿಸುತ್ತಾರೆ. ಅನುಮಾನಿಕಾ ಧಿಕರಣದಲ್ಲಿ ಹೇಳಿದ ರೀತಿಯಿಂದ "ಪ್ರಾಣಾಧಾರಕತ್ವ ಮುಂತಾದ ಪ್ರವೃತ್ತಿ ನಿಮಿ ತ್ತವಿದ್ದುದರಿಂದ, "ಜೀವೋ ವಿನಯಿತಾ ಸಾಕ್ಷೀ" ಇತ್ಯಾದಿ ಪ್ರಯೋಗ (ಸಹಸ್ರ ನಾಮ) ಗಳಿರುವುದರಿಂದ, ಜೀವಶ್ರುತಿ (ಶಬ್ದ) ಗಳು ಬ್ರಹ್ಮನಾಮರೂಪಗಳೆಂದು ತಿಳಿಯಬೇಕು ಅಥವಾ ಈ ಶ್ರುತಿಗಳು ಬ್ರಹ್ಮಶ್ರುತಿಗಳಾದಲ್ಲಿ "ಪ್ರಾಪಕಂ ವಾಕ್ಯಮಾತ್ರಂ" ಎಂಬುದಾಗಿ ಹೇಳಿದುದು ಹೇಗೆ? ಈ ಆಶಂಕೆಯನ್ನು "ಶೇಷಂ ಭಾಷ್ಯೇ" ಎಂಬ ವಾಕ್ಯದಿಂದ ಪರಿಹರಿಸುತ್ತಾರೆಂದೂ ಹೇಳಬಹುದು ಮುಖ್ಯವಾಗಿ ಬ್ರಹ್ಮವಾಚಕಗಳಾದರೂ ಅಮುಖ್ಯವೃತ್ತಿಯಿಂದ ಇತರವಾಚಕತ್ವ ವಿದ್ದುದರಿಂದ ಪೂರ್ವಪಕ್ಷವು ಹೊರಡುವುದೆಂದು ಅಲ್ಲಿ ಹೇಳಲಾಗಿದೆಯೆಂದೇ ಭಾವವು

साध्यवैकल्याच्च नानुमानाना प्रामाण्यम् । एतेनास्मदनुमानेऽकार्यत्वमुपाधिरित्यपि निरस्तम् । स्वातन्त्र्येण जीवाद्यकृतेऽपि घटादावकार्यत्वाभावात् । प्रतिपक्ष बाधादिदोषानुषङ्गाच्चेति सर्वं सुस्थम् ॥२-१-४॥

॥ ॐ भोक्त्रापत्तेरविभागश्चेत्स्याल्लोकवत् ॐ ॥ अतीताधिकरणे ब्रह्मणो जगज्जन्मादिकारणत्वे श्रुतिसंवादित्वेन प्रबलया युक्त्या विरोधः परिहृतः । इदानीं तु श्रुतिसिद्धलिङ्गत्वेन प्रबलया युक्त्या

— ಪದಾರ್ಥದೀಪಿಕಾ —

ಹೀನವಾಗುವುದರಿಂದ, ಪ್ರತಿಪಕ್ಷ ಅನುಮಾನಗಳಿಗ ಪ್ರಾಮಾಣ್ಯವು ಬರಲಾರದು. ಇದರಿಂದ, "ನಮ್ಮ ಅನುಮಾನದಲ್ಲಿಯೂ ಅಕಾರ್ಯತ್ವವು (ಕಾರ್ಯ (ಹುಟ್ಟಿದುದು) ವಾಗದಿರುವುದು) ಉಪಾಧಿಯು", ಎಂಬ ಸಂಗತಿಯೂ ನಿರಾಕರಿಸಲ್ಪಟ್ಟಿದ್ದಾಯಿತು ಏಕೆಂದರೆ- ಸ್ವತಂತ್ರವಾಗಿ ಜೀವಾದಿಗಳಿಂದ ಮಾಡಲ್ಪಡದಿದ್ದರೂ ಘಟಾದಿಗಳಲ್ಲಿ ಅಕಾರ್ಯತ್ವವೆಂಬ ಉಪಾಧಿಯು ಇರುವುದಿಲ್ಲ ಮತ್ತು ಪ್ರತಿಪಕ್ಷಾನುಮಾನದಲ್ಲಿ ಬಾಧ-ಮುಂತಾದ ದೋಷಗಳು ಹತ್ತುತ್ತವೆ ಹೀಗೆ ನಮ್ಮ ಪಕ್ಷದಲ್ಲಿ ಎಲ್ಲವೂ ಸರಿಯಾಗಿರುತ್ತದೆ ೨-೧-೪

॥ ಓಂ ॥ ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ॥ ಓಂ ॥ ಹಿಂದಿನ ಅಧಿಕರಣದಲ್ಲಿ- ಬ್ರಹ್ಮನ ಜಗತ್ಕಾರಣತ್ವದ ಬಗ್ಗೆ ಶ್ರುತಿ ಸಂವಾದಿಯಾದುದರಿಂದ ಪ್ರಬಲವಾದ ಯುಕ್ತಿಯಿಂದ ವಿರೋಧವು ಪರಿಹರಿಸಲ್ಪಟ್ಟಿತು ಈಗ ಮತ್ತೆ ಶ್ರುತಿ ಸಿದ್ಧವಾದ 'ಲಿಂಗರೂಪವಾದುದರಿಂದ ಪ್ರಬಲವಾದ ಯುಕ್ತಿ

— ವಿಶೇಷಾರ್ಥಪ್ರದೀಪಿಕಾ —

ಹಿಂದಿನ ಅಧಿಕರಣದೊಡನೆ ಸಂಗತಿಯನ್ನೂ ಆದರಿಂದ ಈ ಅಧಿಕರಣವು 'ಗತಾರ್ಥವಲ್ಲವೆಂಬುದನ್ನೂ ಸೂಚಿಸುತ್ತ ಈ ಅಧಿಕರಣದ ಉಪಾಧಿಯನ್ನು "ಅತೀತಾಧಿಕರಣೇ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಶ್ರುತಿಸಿದ್ಧಲಿಂಗತ್ವೇನ" – ಬಹುಶ್ರುತಿಗಳಿಂದ ಸಿದ್ಧವಾದ ಲಿಂಗ (ಯುಕ್ತಿ)ರೂಪವಾದುದರಿಂದ, ಹೀಗೆ ಅರ್ಥ ಏಕೆಂದರೆ ಚಂದ್ರಿಕೆಯಲ್ಲಿ ಇದರಂತೆಯೇ ಹೇಳಲಾಗಿಬರುಂದೆ "ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ" ಇತ್ಯಾದಿ ಶ್ರುತಿಸಿದ್ಧತ್ವಾತ್' ಎಂಬುದಾಗಿ ಹೇಳಲಿರುತ್ತಾರೆ ಇದರಿಂದ ಹಿಂದಿನ ಅಧಿಕರಣದಲ್ಲಿ ಶ್ರುತಿಗ ಸಿದ್ಧಾಂತಿಗೆ ಅಭಿಮತವಾದ ಅರ್ಥವನ್ನು ಸ್ವೀಕರಿಸಿದುದು ಯುಕ್ತವಾದುದು ಏಕೆಂದರೆ ಮುಖ್ಯಾರ್ಥವನ್ನು ಬಿಡುವು

विरोधः परिह्रियते । तथा हि । न ब्रह्मणो जगत्कारणत्वं वास्तवं सम्भवति । असर्वकारणेन मुक्तजीवेनात्यन्ताभिन्नत्वात् । न हि यो येनात्यन्ताभिन्नः स तद्विरुद्धस्वभावो वस्तुत इति क्वचिदुपलब्धम् । न च मुक्तस्यासर्वकारणत्वमसिद्धम् । संसारेऽनुपलम्भात् । संसारे

— ಪದಾರ್ಥದೀಪಿಕಾ —

ಯಿಂದ ವಿರೋಧವು ಪರಿಹರಿಸಲ್ಪಡುತ್ತದೆ ಹೇಗೆಂದರೆ- ಬ್ರಹ್ಮನಿಗೆ ವಾಸ್ತವವಾದ ಜಗತ್ಕಾರಣತ್ವವು ಸಂಭವಿಸುವುದಿಲ್ಲ ಏಕೆಂದರೆ- ಸರ್ವಕಾರಣನಾಗದ ಮುಕ್ತಜೀವನಿಂದ ಬ್ರಹ್ಮನು ಅತ್ಯಂತ ಅಭಿನ್ನನಾಗಿರುತ್ತಾನೆ ಯಾವನು ಯಾವನಿಂದ ಅತ್ಯಂತ ಅಭಿನ್ನನೋ ಅವನು ವಾಸ್ತವವಾಗಿ ಅವನ ವಿರುದ್ಧ ಸ್ವಭಾವದವನಾಗಿರುವುದು ಎಲ್ಲಿಯೂ ಕಂಡಿಲ್ಲ ಮತ್ತು ಮುಕ್ತನಿಗೆ ಸರ್ವಕಾರಣತ್ವವಿಲ್ಲವೆಂಬುದು ಅಸಿದ್ಧವೂ ಅಲ್ಲ ಏಕೆಂದರೆ ಸಂಸಾರದಲ್ಲಿ ಕಂಡು

— ವಿಶೇಷಾರ್ಥಪ್ರದೀಪಿಕಾ —

ದಿಲ್ಲ ಆದರೆ ಈ ಅಧಿಕರಣದಲ್ಲಿ ಸಿದ್ಧಾಂತಿಗೆ ಅಭಿಮತವಾದ ಸ್ವಾನೈಕ್ಯ ಮುಂತಾದ ಅರ್ಥವನ್ನು ಸ್ವೀಕರಿಸುವುದು ಯುಕ್ತವಲ್ಲ ಏಕೆಂದರೆ ಮುಖ್ಯಾರ್ಥವನ್ನು ಬಿಡಬೇಕಾಗುತ್ತದೆ ಆದುದರಿಂದ, ಯುಕ್ತಿಯು ಪ್ರಬಲವೆಂಬುದು ಯುಕ್ತವಾಗುತ್ತದೆ, ಹೀಗ ಪ್ರತ್ಯುದಾಹರಣಸಂಗತಿಯು ಸೂಚಿತವಾಗುತ್ತದೆ. ಇದರಿಂದ "ಶ್ರುತಿಗಣಯುಕ್ತಯಃ" ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ ಶ್ರುತಿಯು ಉಪಸರ್ಜನವುಳ್ಳಯುಕ್ತಿಗಳಲ್ಲಿ—ಶ್ರುತಿಯ ಸಂವಾದವುಳ್ಳದ್ದಾಗಿರುವುದು, ಶ್ರುತಿಸಂವಾದವುಳ್ಳ ಲಿಂಗವಾಗಿರುವುದು, ಹೀಗೆ ಎರಡು ತರಹಗಳಿರುವುದೆಂದು ಹೇಳಿದ್ದಾಗುತ್ತದೆಯೆಂದು ತಿಳಿಯಬೇಕು

ವಿರೋಧದ ರೀತಿಯನ್ನಂತೂ "ನ ಬ್ರಹ್ಮಣಃ ಇತ್ಯಾದಿ ವಚನಗಳಿಂದ ವಿಶದಪಡಿಸುತ್ತಾರೆ ಮುಕ್ತಜೀವರೊಡನೆ ಬ್ರಹ್ಮನಿಗ ಭೇದಾಭೇದವನ್ನು ಅಲ್ಲಗಳೆಯಲು "ಅತ್ಯಂತಾಭಿನ್ನತ್ವಾತ್' ಎಂದು ಹೇಳಿರುತ್ತಾರೆ ಭೇದಾಭೇದದ ನಿರಾಕರಣದ ಪ್ರಕಾರವು "ಅತಎವಚೋಪಮಾ ಸೂರ್ಯಕಾದಿವತ್' ಇತ್ಯಾದಿ ಸೂತ್ರಗಳಲ್ಲಿ ವಿಶದವಾಗಿರುತ್ತದೆ ರೂಪವಿಲ್ಲದ ಆಕಾಶದಲ್ಲಿ ಭ್ರಾಂತಿಮೂಲಕವಾದ (ಕಲ್ಪಿತ) ನೀಲವರ್ಣವು ತೋರುವಹಾಗ ಕಲ್ಪಿತವಾದ ಜಗತ್ಕಾರಣತ್ವವು ಬ್ರಹ್ಮನಲ್ಲಿ ಇರಬಹುದೆಂಬ ಆಶಂಕೆಯನ್ನು ಪರಿಹರಿಸಲು ವಸ್ತುತಃ" ಎಂಬದಾಗಿ ಹೇಳಿದ್ದಾರೆ ಮುಕ್ತನಲ್ಲಿ ಸರ್ವಕಾರಣತ್ವವಿಲ್ಲವೆಂಬುದು ಅಸಿದ್ಧವೆಂಬುದನ್ನು "ನ ಚ" ಇತ್ಯಾದಿವಾಕ್ಯದಿಂದ ನಿರಾಕರಿಸಿರುತ್ತಾರ

प्रतीयमानस्य कस्यचिदाकारस्यैवापगमो हि मोक्षो न त्वपूर्वाकारोत्पादः । अनित्यत्वप्रसङ्गात् । न चानन्दादेरिव विद्यमानस्यैवाविद्यया तिरोहितत्वात्सर्वकारणत्वस्यानुपलम्भ इति वाच्यम् । प्रमाणाभावात् । आनन्दादेः परमप्रेमास्पदत्वादिनेषदुपलब्धेश्च । न च ब्रह्मणो जगत्कारणत्वश्रवणात्सर्वथाऽनुपलभ्यमानमपि जगत्कारणत्वं संसारे कल्प्यमिति युक्तम् । श्रुतेः काल्पनिकजगत्कारणत्वानुवादित्वेनापि साव-

## — ಪದಾರ್ಥದೀಪಿಕಾ —

ಬಂದಿಲ್ಲ ಸಂಸಾರದಲ್ಲಿ (ಸಂಸಾರಾವಸ್ಥೆಯಲ್ಲಿ) ತೋರುವ ಯಾವದೋ ಒಂದು ಆಕಾರದ ಹೋಗುವಿಕೆಯೇ ಮೋಕ್ಷವು ಹೊರತು- ಪೂರ್ವದಲ್ಲಿಲ್ಲದ ಹೊಸ ಆಕಾರದ ಹುಟ್ಟುವಿಕೆಯಲ್ಲ (ಸೃಷ್ಟಿಯಲ್ಲ) ಏಕೆಂದರೆ ಹಾಗಾದಲ್ಲಿ ಮೋಕ್ಷಕ್ಕೆ ಅನಿತ್ಯತ್ವವು ಬರಬೇಕಾಗುತ್ತದ ಇನ್ನು ಆನಂದ ಮುಂತಾದವುಗಳ ಹಾಗೆ, ಇದ್ದೇ ಇರುವುದಾದರೂ ಅವಿದ್ಯೆಯಿಂದ ಮುಚ್ಚಲ್ಪಟ್ಟಿರುವುದರಿಂದ ಸರ್ವಕಾರಣತ್ವವು ಸಂಸಾರದೆಶಯಲ್ಲಿ ತೋರುವುದಿಲ್ಲವೆಂದು ಹೇಳಬಾರದು ಏಕಂದರ-- ಹಾಗೆ ಪ್ರಮಾಣವಿರುವುದಿಲ್ಲ ಮತ್ತು ಆನಂದ ಮುಂತಾದುದು ಪರಮ ಪ್ರೇಮಾಸ್ಪದ ಮುಂತಾದ ರೂಪದಿಂದ ಸ್ವಲ್ಪ ಕಂಡೂ ಬರುತ್ತದೆ ಮತ್ತು ಬ್ರಹ್ಮನ ಜಗತ್ಕಾರಣತ್ವವು ಶ್ರುತಿಯಲ್ಲಿ ಹೇಳಲ್ಪಟ್ಟಿರುವುದರಿಂದ ಯಾವದೇ (ಸರ್ವಥಾ) ರೀತಿಯಿಂದ ಕಂಡುಬಾರದಿದ್ದರೂ ಆ ಜಗತ್ಕಾರಣತ್ವವು ಸಂಸಾರದಲ್ಲಿ ಕಲ್ಪಿಸಲ್ಪಡತಕ್ಕದ್ದು, ಹೀಗ ಹೇಳುವುದು ಸರಿಯಲ್ಲ ಏಕೆಂದರ ಶ್ರುತಿಯು, ಕಾಲ್ಪನಿಕವಾದ ಜಗತ್ಕಾರಣತ್ವವನ್ನು ಅನುವಾದ ಮಾಡುವುದೆಂಬ ಕಾರಣದಿಂದಲೂ ಅದು ಸಾವಕಾಶವಾಗುತ್ತದೆ ಇನ್ನು ಅಂತಹದೇ ಲಕ್ಷಣವಾಗಲೆಂದು

## — ವಿಶೇಷಾರ್ಥಪ್ರದೀಪಿಕಾ —

"ಅನಿತ್ಯತ್ವಪ್ರಸಂಗಾತ್" – ಇಲ್ಲಿ "ಮೋಕ್ಷಸ್ಯ" ಎಂಬುದನ್ನು ಹಚ್ಚಿಕೊಳ್ಳಬೇಕು ಹಾಗಾದಲ್ಲಿ ಆನಂದ ಜ್ಞಾನಮುಂತಾದುದೂ ಜೀವರ ಸ್ವಭಾವವಾಗದಿರಲಿ ಏಕೆಂದರೆ ಸಂಸಾರದಲ್ಲಿ ಅವುಗಳು ಕಂಡುಬರುವುದಿಲ್ಲ ಈ ಆಶಂಕೆಯನ್ನು "ಆನಂದಾದೇರಪಿ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ. "ಮುಕ್ತರಿಗೆ ಸರ್ವಕಾರಣತ್ವವು ಇದ್ದೇ ಇವೆ ಅದು ಅವಿದ್ಯೆಯಿಂದ ತಿರೋಹಿತ"ವೆಂಬಲ್ಲಿ ಪ್ರಮಾಣವಿಲ್ಲ, ಈ ಸಂಗತಿಯು ಅಸಿದ್ಧವೆಂದು "ನ ಚ ಬ್ರಹ್ಮಣಃ" ಇತ್ಯಾದಿ ವಚನಗಳಿಂದ ಆಶಂಕಿಸುತ್ತಾರೆ "ಸಂಸಾರೇ" - ಸಂಸಾರಾವಸ್ಥೆಯಲ್ಲಿ

## ॐ भोक्त्रापत्तेरविभागश्चेत्स्याल्लोकवत् ॐ

कारत्वात् । न च तथाभूतमेव लक्षणमस्त्विति वाच्यम् । अनङ्गी-
कारात् । काल्पनिकस्य जगत्कारणत्वस्य प्रधानादिष्वपि सम्भवनाति-
प्रसङ्गाच्च । स्यादेतत् । मुक्तस्य ब्रह्मणैक्यमेवासिद्धमिति । मैवम् ।
कर्माणि विज्ञानमयश्चात्मा परेऽव्यये सर्व एकीभवन्तीत्यादिश्रुति-
सिद्धत्वादिति । तदिदमुक्तं सूत्रकृता भोक्तुर्जीवस्य मोक्षे ब्रह्मत्वापत्ति-
श्रवणात्तयोरविभागो भेदाभावः । ततश्च न ब्रह्मणो जगत्कारणत्वं

### — ಪದಾರ್ಥ ದೀಪಿಕಾ —

ಹೇಳುವುದು ಸರಿಯಲ್ಲ ಏಕೆಂದರೆ– ಹಾಗೆ ಒಪ್ಪಿರುವುದಿಲ್ಲ ಮತ್ತು ಕಾಲ್ಪನಿಕ ಜಗತ್ಕಾರಣತ್ವವು ಪ್ರಧಾನಾದಿಗಳಲ್ಲಿಯೂ ಸಂಭವಿಸುವುದರಿಂದ ಅತಿಪ್ರಸಂಗವೂ ಬರುತ್ತದೆ ಇದು ಇರಲಿ! ಮುಕ್ತನಿಗೆ ಬ್ರಹ್ಮನೊಡನೆ ಐಕ್ಯ (ಅಭೇದ)ವು ಅಸಿದ್ಧವೇ ಆಗಿದೆಯೆಂದು ಹೇಳತಕ್ಕದ್ದಲ್ಲ ಏಕೆಂದರೆ ಮುಕ್ತ, ಬ್ರಹ್ಮ, ಇವರಲ್ಲಿ ಐಕ್ಯವು ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀ ಭವಂತಿ" ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿರುತ್ತದೆ " ಹೀಗೆ ಈ ಪೂರ್ವ ಪಕ್ಷವನ್ನು "ಭೋಕ್ತುಃ"= ಜೀವನಿಗೆ, ಮೋಕ್ಷದಲ್ಲಿ ಬ್ರಹ್ಮಭಾವವು ಶ್ರುತವಾಗು

### — ವಿಶೇಷಾರ್ಥಪ್ರದೀಪಿಕಾ —

"ಅನಂಗೀಕಾರಾತ್"– ಸಿದ್ಧಾಂತಿಯು ಕಾಲ್ಪನಿಕವಾದ ಜಗತ್ಕಾರಣತ್ವವನ್ನು ಅಂಗೀಕರಿಸಿಲ್ಲ ಹೀಗೆ ಅರ್ಥ ಹೇತುವಿನ ವಿಶೇಷಣದ ಅಸಿದ್ಧಿಯನ್ನು (ಅಸರ್ವಕಾರಣತ್ವವಿಲ್ಲವೆಂಬುದನ್ನು) ಪರಿಹರಿಸಿ, ಮುಕ್ತರಿಂದ ಅಭೇದವೆಂಬ ವಿಶೇಷ್ಯದ ಅಸಿದ್ಧಿಯನ್ನು ಶಂಕಾಪೂರ್ವಕವಾಗಿ "ಸ್ಯಾದೇತತ್" ಇತ್ಯಾದಿವಾಕ್ಯಗಳಿಂದ ನಿರಾಕರಿಸುತ್ತಾರೆ ಶ್ರುತಿಯಲ್ಲಿ 'ಸರ್ವೇ" ಎಂಬ ಬಹುವಚನದ ಹೊಂದಾಣಿಕೆಗಾಗಿ "ಕರ್ಮಾಣಿ' ಎಂಬ ಅಂಶವನ್ನೂ ಅನುವಾದ ಮಾಡಿದ್ದಾರೆ ಅಥವಾ ಈ ಶ್ರುತಿಯು ಮುಕ್ತಿಪರವಾದುದೆಂಬುದನ್ನು ತೋರಿಸಲೂ "ಕರ್ಮಾಣಿ" ಎಂಬುದನ್ನು ಹೇಳಿದ್ದಾರೆಂದೂ ಹೇಳಬಹುದು ಏಕೆಂದರೆ ಮುಕ್ತಿಯಲ್ಲಿಯೇ ಕರ್ಮಗಳ ನಿವೃತ್ತಿಯಾಗುತ್ತದೆ "ವಿಜ್ಞಾನಮಯಃ ಆತ್ಮಾ"ಎಂದರೆ ಜೀವನೆಂದು ಅರ್ಥ.

ಈ ವರೆಗೆ ಪ್ರದರ್ಶಿಸಿದ ಪೂರ್ವಪಕ್ಷವು ಸೂತ್ರ ಬಹಿರ್ಭೂತವೆಂಬುದನ್ನು ಅಲ್ಲಗಳೆಯಲು ಅದಕ್ಕೆ ಸೂತ್ರಾರೂಢತೆಯನ್ನು 'ತದಿದಮುಕ್ತಂ" ಇತ್ಯಾದಿ

वास्तवं युक्तमिति । एवं प्राप्ते सिद्धान्तितम् । भवेदेतदखिलं यदि मुक्तस्य ब्रह्मणाऽभेद एव प्रामाणिकः स्यात् । न चैतदस्ति । श्रौतस्त्वेकीभावप्रयोगः स्याल्लोकवत् । यथा लोके उदके उदकस्यैकीभावव्यवहारः स्थानैक्यनिबन्धनः । यथा वा प्राग्विभिन्ना ब्राह्मणाः साम्प्रतमेकीभूता इति मत्यैक्यनिबन्धनः । तथा प्राग्विभिन्नस्थाना भिन्नमतयश्च जीवा मुक्तौ ब्रह्मणैकीभवन्ति । एकस्थाना एकमतयश्च

— ಪದಾರ್ಥದೀಪಿಕಾ —

ವುದರಿಂದ, ಅವರಿಬ್ಬರಲ್ಲಿ "ಅವಿಭಾಗಃ"= ಐಕ್ಯವು ( ಭೇದವಿಲ್ಲದಿರುವುದು ) ಬರುತ್ತದೆ ಆದುದರಿಂದ ವಾಸ್ತವವಾದ ಜಗತ್ಕಾರಣತ್ವವು ಬ್ರಹ್ಮನಿಗ ಸಲ್ಲುವುದಿಲ್ಲ, ಎಂಬುದಾಗಿ ಸೂತ್ರಕಾರರು ಹೇಳಿದ್ದಾರೆ ಹೀಗ ಪೂರ್ವಪಕ್ಷವು ಬರುತ್ತಿರಲು-- 'ಮುಕ್ತನಿಗ ಬ್ರಹ್ಮನಿಂದ ಐಕ್ಯವು ಪ್ರಾಮಾಣಿಕವಾಗಿದ್ದರೇ ಇದೆಲ್ಲ ಪೂರ್ವಪಕ್ಷವು ಸರಿಯಾಗಬಹುದಿತ್ತು ಆದರೆ ಹಾಗ ಅದು ಪ್ರಾಮಾಣಿಕವಲ್ಲ. ಏಕೆಂದರೆ– ಶ್ರುತಿಯಲ್ಲಿ ಹೇಳಿದ 'ಏಕೀಭವಂತಿ" ಎಂಬುದಾಗಿರುವ ಏಕೀಭಾವ ಪ್ರಯೋಗವು ಲೋಕದಲ್ಲಿ ಹೇಗೋ ಹಾಗ ಆಗುತ್ತದೆ ಹೇಗ ಲೋಕದಲ್ಲಿ ನೀರಿನಲ್ಲಿ ನೀರಿಗ ಸ್ಥಾನೈಕ್ಯಮೂಲಕ (ಒಂದೇ ಸ್ಥಾನದಲ್ಲಿ ನೀರುಗಳಿಗ ಸಮಾವೇಶವಿರುವುದುರ ಮೂಲಕವಾಗಿ)ವಾದ ಏಕೀಭಾವ ವ್ಯವಹಾರವು ಆಗುವುದೋ, ಹಾಗು " ಹಿಂದೆ ಭಿನ್ನಭಿನ್ನರಾದ ಬ್ರಾಹ್ಮಣರು ಈಗ ಏಕೀಭೂತರಾದರು " ಎಂಬುದಾಗಿ ಮತ್ಯೈಕ್ಯಮೂಲಕವಾದ ಏಕೀಭಾವ ವ್ಯವಹಾರವು ಹೇಗೆ ಆಗುವುದೋ ಹಾಗ, 'ಹಿಂದೆ ಭಿನ್ನ ಭಿನ್ನವಾದ ಸ್ಥಾನಾದಿಗಳಿಂದ ಭಿನ್ನಮತಿಗಳುಳ್ಳ ಜೀವರು ಮುಕ್ತಿಯಲ್ಲಿ ಬ್ರಹ್ಮನೊಡನೆ ಏಕೀಭೂತರಾಗುತ್ತಾರೆ ಅಂದರ ಒಂದೇ ಸ್ಥಾನವುಳ್ಳವರು ಹಾಗು ಒಂದೇ (ಸಮಾನ ವಿಷಯುಕ) ಬುದ್ಧಿಯುಳ್ಳ

— ವಿಶೇಷಾರ್ಥಪ್ರದೀಪಿಕಾ —

ವಚನಗಳಿಂದ ತೋರಿಸುತ್ತಾರೆ "ಸಿದ್ಧಾಂತಿತಂ' – ಇಲ್ಲಿ "ಸೂತ್ರಕೃತಾ" ಎಂಬುದನ್ನು ಹಚ್ಚಿಕೊಳ್ಳಬೇಕು "ಲೋಕವತ್" ಎಂಬಲ್ಲಿ "ವತುಪ್" ಪ್ರತ್ಯಯವು ಸಪ್ತಮ್ಯಂತದ ಮುಂದೆ ಬಂದಿದೆಯೆಂಬ ಅಭಿಪ್ರಾಯದಿಂದ "ಯಥಾಲೋಕೇ" ಇತ್ಯಾದಿಯಾಗಿ ಹೇಳಿದ್ದಾರೆ ' ವಿಭಿನ್ನ ಸ್ಥಾನಾಃ " ಪ್ರಾಪ್ಯವಾದ ರೂಪವಿಶೇಷದ ಅಭಿಪ್ರಾಯದಿಂದ ಹೀಗೆ ಹೇಳಿದ್ದಾರೆ ' ಏಕಮತಯಃ' – ಒಂದೇ ಅರ್ಥವನ್ನು ವಿಷಯೀಕರಿಸಿದ ಮತಿಯುಳ್ಳವರು, ಹೀಗೆ

**भवन्तीत्युपपद्यते । तस्मादसिद्धेनासिद्धसाधनमेतदिति । तदेतद-युक्तम् । मुख्यार्थे बाधकाभावात् । विना बाधकेन जघन्यवृत्त्या-श्रयणे चातिप्रसङ्गादित्यतो मुख्यार्थे बाधकयुक्तिव्युत्पादनपरत्वेनापि स्याल्लोकवदिति सूत्रखण्डं व्याचष्टे ॥ नान्यदिति ।**

— ಪದಾರ್ಥದೀಪಿಕಾ —

ವರೂ ಆಗುತ್ತಾರೆ" ಹೀಗ ಹೇಳಲು ಬರುತ್ತದೆ ಆದುದರಿಂದ, ಅಸಿದ್ಧವಾದ ಹೇತುವಿನಿಂದ ಅಸಿದ್ಧವಾದ ಸಾಧ್ಯವನ್ನು ಸಾಧನ ಮಾಡಿದ್ದು ಇದರಿಂದ ಆಗುತ್ತದೆ " ಹೀಗೆ ಸಿದ್ಧಾಂತಿಸಿರುತ್ತಾರೆ

ಆದರೆ ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ- ಮುಖ್ಯಾರ್ಥವನ್ನು ಸ್ವೀಕರಿಸಿದಲ್ಲಿ ಬಾಧಕವಿರುವುದಿಲ್ಲ ಮತ್ತು ಬಾಧಕವಿಲ್ಲದೆಯೇ ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯವೃತ್ತಿಯನ್ನು ಅವಲಂಬಿಸಿದರೆ ಅತಿಪ್ರಸಂಗವು ಬರುತ್ತದೆ ಈ ಕಾರಣದಿಂದ ಮುಖ್ಯಾರ್ಥದಲ್ಲಿ ಬಾಧಕಯುಕ್ತಿಯನ್ನು ಹೇಳುವುದೆಂಬ ವಿಷಯದ ಪರವಾಗಿ " ಸ್ಯಾಲ್ಲೋಕವತ್ " ಎಂಬ ಸೂತ್ರಾಂಶವನ್ನು "ನಾನ್ಯದ್" ಈ ವಚದದಿಂದ ವ್ಯಾಖ್ಯಾನಿಸುತ್ತಾರೆ

— ವಿಶೇಷಾರ್ಥಪ್ರದೀಪಿಕಾ —

ಅರ್ಥ "ಇತಿ' ಶಬ್ದಕ್ಕೆ " ಇತಿ ಸಿದ್ಧಾಂತಿತಂ'' ಎಂಬುದಾಗಿ ಹಿಂದಿನಿಂದ ಅನ್ವಯ

"ಜಘನ್ಯವೃತ್ತ್ಯಾ" = ಮೊದಲನೆಯ ಪಕ್ಷದಲ್ಲಿ ಲಕ್ಷಣಾವೃತ್ತಿಯು, ಕೊನೆಯ ಪಕ್ಷದಲ್ಲಿ ಲಕ್ಷಿತಲಕ್ಷಣಾ ವೃತ್ತಿಯು ಹೀಗೆ ತಿಳಿಯಬೇಕು

"ಕರ್ಮಾಣಿ ವಿಜ್ಞಾನಮಯಶ್ಚ"– ಇಲ್ಲಿ "ಗತಾಃ ಕಲಾಃ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು ॥ ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವಏಕೀ ಭವಂತಿ ॥ ಮು. ೩-೨-೭ । ಇದರ ಸಮಗ್ರಾರ್ಥ– (ಸಿದ್ಧಾಂತದಲ್ಲಿ) 'ಗತಾಃ"= ಮುಕ್ತರಾದ 'ಪಂಚದಶ"=ಹದಿನೈದು "ಕಲಾಃ"= ಕಲಾಭಿಮಾನಿಗಳಾದ ದೇವತೆಗಳೂ, ಪ್ರತಿಬಿಂಬರಾದ ಪ್ರಜೆರಲ್ಲಿ ಸ್ಥಿತಿಕಾರಣರಾದ, "ಸರ್ವೇ ದೇವಾ"= ಎಲ್ಲ ದೇವತೆಗಳೂ "ಕರ್ಮಾಣಿ"= ಕರ್ಮಾಭಿಮಾನಿ ಪುಷ್ಕರಾದಿ ದೇವತೆಗಳು "ತಥಾ"= ಹಾಗು 'ವಿಜ್ಞಾನಮಯಶ್ಚ ಆತ್ಮಾ"= ಮುಕ್ತ ಜೀವನು, "ಸರ್ವೇ"= ಇವರೆಲ್ಲರೂ "ಅವ್ಯಯೇ"= ದೇಹದಿಂದಲೂ ನಾಶರಹಿತನಾದ "ಪರೇ"= ಪರಮಾತ್ಮನನ್ನು ಹೊಂದಿ, 'ಏಕೀ ಭವಂತಿ"= ಐಕ್ಯ (ಐಕಮತ್ಯವನ್ನು )ವನ್ನು ಹೊಂದುತ್ತಾರೆ ಅಥವಾ ಮೊದಲು ಬೇರೆ ಬೇರೆ ಸ್ಥಾನದಲ್ಲಿದ್ದು, ಅವರು, ಈಗ ಶ್ವೇತದ್ವೀಪವೆಂಬ ಒಂದೇ ಸ್ಥಾನದಲ್ಲಿ ಮಿಲಿತರಾಗುತ್ತಾರೆ

नान्यदन्यत्वमापन्नं कचिद्दृष्टं कथञ्चन ॥
अतो जीवस्य न ब्रह्मभाव स्याद्धि कदाचन ॥

अत्र मुख्यमेवार्थमङ्गीकुर्वाणः प्रष्टव्यः । किं प्रागभिन्नस्यैव जीवस्य मुक्तौ ब्रह्मणैक्यमनेनोच्यते उत भिन्नस्य । अथवा भिन्नाभिन्नस्य । नाद्यः । अभूततद्भावार्थस्यैकीभवन्तीति च्विप्रत्ययस्यानुपपत्तेः । अत एव न तृतीयः । ऐक्यस्य प्राक् सिद्धत्वात् । भेद-

ಒಂದು ಬೇರೆಯಾದ ಪದಾರ್ಥವು ತನ್ನಿಂದ ಬೇರೆಯಾದ ಇನ್ನೊಂದು ವಸ್ತುವಿನಿಂದ ಅಭೇದವನ್ನು ಹೊಂದಿದುದು ಎಂದಿಗೂ ಯಾವದೇ ಉಪಾಯದಿಂದ ಕಂಡುಬಂದಿಲ್ಲ ಈ ದೃಷ್ಟಾಂತದಿಂದ ಜೀವನಿಗೂ ಮುಕ್ತಿಯಲ್ಲಿಯೂ ಬ್ರಹ್ಮಭಾವವು (ಬ್ರಹ್ಮತ್ವ–ಬ್ರಹ್ಮೈಕ್ಯವು) ಬರುವುದೇ ಇಲ್ಲ

— ಪದಾರ್ಥದೀಪಿಕಾ —

ಇಲ್ಲಿ– ಮುಖ್ಯವೇ ಆದ ಅರ್ಥವನ್ನು ಅಂಗೀಕರಿಸುವವನನ್ನು ಪ್ರಶ್ನಿಸತಕ್ಕದ್ದು ಮೊದಲು (ಪೂರ್ವದಲ್ಲಿ) ಅಭಿನ್ನನೇ ಆದ ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮನೊಡನೆ ಐಕ್ಯವು ಈ ಸೂತ್ರದಿಂದ ಹೇಳಲ್ಪಡುತ್ತದೆಯೋ? ಅಥವಾ ಭಿನ್ನನಾದ ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮೈಕ್ಯವು ಹೇಳಲ್ಪಡುವುದೋ? ಅಥವಾ ಭಿನ್ನಾಭಿನ್ನನಾದವನಿಗೆ ಹೇಳಲ್ಪಡುವುದೋ? ಹೀಗೆ ಮೊದಲನೆಯ ಕಲ್ಪವು ಯುಕ್ತವಲ್ಲ ಏಕೆಂದರೆ ಅಭೂತತದ್ಭಾವಾರ್ಥಕವಾದ (ಪೂರ್ವದಲ್ಲಿ ಇಲ್ಲದಿರುವ ಆ ಭಾವವನ್ನು ಹೇಳುವ) "ಏಕೀಭವಂತಿ" ಎಂಬುದಾಗಿ "ಚ್ವಿ" ಪ್ರತ್ಯಯವು ಯುಕ್ತವಾಗಲಾರದು ಆದುದರಿಂದಲೇ ಮೂರನೆಯ ಕಲ್ಪವೂ ಯುಕ್ತವಾಗುವುದಿಲ್ಲ ಏಕೆಂದರೆ ಐಕ್ಯವು ಮೊದಲು ಸಿದ್ಧವಾಗಿದೆ "ಭೇದದ ನಿವೃತ್ತಿಗಾಗಿ"

— ವಿಶೇಷಾರ್ಥಪ್ರದೀಪಿಕಾ —

"ಅಭೂತತದ್ಭಾವಾರ್ಥಸ್ಯ" - (ಪಾ. ಸೂ ೫–೪–೫೦) (ಪ್ರಕೃತಿಯು (ಪೂರ್ವದಲ್ಲಿಲ್ಲದ) ವಿಕಾರರೂಪತೆಯನ್ನು ಹೊಂದುವಾಗ, 'ಕರೋತಿ, ಭವತಿ, ಅಸ್ತಿ" ಇವುಗಳ ಸಂಬಂಧವಿರುವಾಗ, ವರ್ತಮಾನವಾದ ವಿಕಾರವಾಚಕ ಶಬ್ದದ ಮುಂದೆ "ಚ್ವಿ" ಪ್ರತ್ಯಯವು ಬರುತ್ತದೆ )ಈ ಸೂತ್ರದಲ್ಲಿ ಪಾಣಿನಿಯು "ಪೂರ್ವದಲ್ಲಿ ಅನೇಕತ್ವವನ್ನು ಹೊಂದದಿದ್ದವರು ಈಗ ಏಕತ್ವವನ್ನು ಹೊಂದಿದ್ದಾರೆ ಈ ಮುಂತಾದ ಅರ್ಥಗಳಲ್ಲಿ "ಚ್ವಿ" ಪ್ರತ್ಯಯವು ಬರುತ್ತದೆ, ಎಂದು ಹೇಳಿದ್ದಾನೆ ಇಲ್ಲಿ ಪೂರ್ವದಲ್ಲಿಯೂ ಐಕ್ಯವಿರುತ್ತಿದ್ದಲ್ಲಿ "ಏಕೀಭವಂತಿ"

निवृत्त्यर्थत्वे तु गौणार्थत्वापत्तेः । द्वितीयनिराकरणेन निरस्तत्वाच्च । द्वितीये त्विदमुपतिष्ठते । नान्यदिति । हिशब्दो हेतौ । यतो लोकेऽन्यद्वस्त्वन्यत्वं वस्त्वन्तरेणाभेदमापन्नम् । क्वचित्काले । कथञ्चनोपायेन

— ಪದಾರ್ಥದೀಪಿಕಾ —

ಯೆಂದು ಹೇಳಿದರೆ– ಗೌಣಾರ್ಥವನ್ನು ಹೇಳಿದ್ದಾಗುತ್ತದೆ ಮತ್ತು ಎರಡನೆಯು ಕಲ್ಪವನ್ನು ನಿರಾಕರಿಸಿದುದರಿಂದ ನಿರಾಕರಿಸಲ್ಪಟ್ಟಿದ್ದೂ ಆಗಿದೆ ಎರಡನೆಯು ಪಕ್ಷದಲ್ಲಿ "ನಾನ್ಯತ್' ಇತ್ಯಾದಿಯಾಗಿ ಹೇಳಿದ ಈ ದೋಷವು ಪ್ರಸಕ್ತವಾಗುತ್ತದೆ "ಹಿ" ಶಬ್ದವು ಹೇತ್ವರ್ಥದಲ್ಲಿದೆ ಲೋಕದಲ್ಲಿ 'ಅನ್ಯದ್ ವಸ್ತು"–ಬೇರೆಯಾದ ಒಂದು ವಸ್ತುವು, ''ಅನ್ಯತ್ವಂ''= ಇನ್ನೊಂದು ವಸ್ತುವಿನಿಂದ ಐಕ್ಯ–ಅಭೇದ ವನ್ನು ಹೊಂದುವುದು ಎಲ್ಲಿಯೂ ಯಾವಾಗಲೂ ಯಾವದೇ ಉಪಾಯದಿಂದಲೂ

— ವಿಶೇಷಾರ್ಥಪ್ರದೀಪಿಕಾ —

ಎಂಬುದಾಗಿ ಚ್ವಿಪ್ರತ್ಯಯಾಂತವಾದ ಏಕಶಬ್ದಪ್ರಯೋಗವು ಯುಕ್ತವಾಗಲಾರದು, ಹೀಗೆ ಅರ್ಥ

"ಗೌಣಾರ್ಥತ್ವಾಪತ್ತೇಃ" – ಭೇದದ ನಿವೃತ್ತಿಯು, "ಏಕೀಭವಂತಿ" ಎಂಬುದರ ಮುಖ್ಯವಾದ ಅರ್ಥವಲ್ಲ ಅದು "ಅಭೂತತದ್ಭಾವ" ವೆಂಬ ಅರ್ಥದ ಗುಣವಾಗಿದೆ ಆದುದರಿಂದ, ಆ ಮುಖ್ಯಾರ್ಥವನ್ನು ಬಿಟ್ಟು ಗೌಣಾರ್ಥವನ್ನು ಸ್ವೀಕರಿಸಿದ್ದಾಗುತ್ತದೆ, ಹೀಗೆ ಭಾವ "ದ್ವಿತೀಯನಿರಾಸೇನ ನಿರಾಕೃತತ್ವಾತ್"- "ಉತಭಿನ್ನಸ್ಯ" ಎಂಬ ಪಕ್ಷದ ಮುಂದೆ ಮಾಡಲಿರುವ ನಿರಾಕರಣದಿಂದ, ಹೀಗೆ ಅರ್ಥ ಪೂರ್ವದಲ್ಲಿ ಭಿನ್ನವಾದುದುಕ್ಕೆ ಅನಂತರ ಅಭೇದವು ಎಲ್ಲಿಯೂ ಕಂಡಿಲ್ಲ, ಹೀಗೆಭಾವ.

"ದ್ವಿತೀಯೇ ತ್ವಿದಮುಪತಿಷ್ಠತೇ" – (ಸಂಸಾರದಲ್ಲಿ) ಪೂರ್ವದಲ್ಲಿ ಅಭಿನ್ನನೇ ಆಗಿರುವ ಜೀವನಿಗೆ ಮುಕ್ತಿಯಲ್ಲಿ ಬ್ರಹ್ಮನಿಂದ ಐಕ್ಯವೆಂಬೀಪೂರ್ವ ಪಕ್ಷವನ್ನು ಅಂಗೀಕರಿಸಿ, "ಮುಕ್ತಿಯಲ್ಲಿ ಅಭೇದವಿದ್ದುದರಿಂದ ಪೂರ್ವದಲ್ಲಿ ಅಭೇದವನ್ನು ಸಾಧಿಸಲು, "ನಹ್ಯನ್ಯಸ್ಯಾನ್ಯತ್ವಂ ಯುಜ್ಯತೇ" ಎಂಬ ಪೂರ್ವಪಕ್ಷಭಾಷ್ಯವು ಹೊರಟಿದೆ "ಚ್ವಿ" ಪ್ರತ್ಯಯವು, "ಅಭೂತತದ್ಭಾವ"ಕ್ಕೆ "ಭೇದಭ್ರಮದನಿವೃತ್ತಿಯೇ" ಅರ್ಥ ಈ ಅಭಿಪ್ರಾಯವೆಂಬುದಾಗಿ ಪೂರ್ವಪಕ್ಷಿಯ ಅಭಿಪ್ರಾಯವು ''ಚ್ವಿ'' ಪ್ರತ್ಯಯದ ಸ್ವಾರಸ್ಯವನ್ನು ಅವಲಂಬಿಸಿ, ''ಪೂರ್ವದಲಿ ಭೇದವು, ಮುಕ್ತಿಯಲ್ಲಿ ಅಭೇದವು ''ನಹ್ಯನ್ಯಸ್ಯ'' ಎಂಬುದಾಗಿ ಭಾಷ್ಯದಲ್ಲಿ ಹೇಳಿದ ಯುಕ್ತಿಯು ''ಚ್ವಿ" ಪ್ರತ್ಯಯವೆಂಬ ಶ್ರುತಿಯಿಂದ ಬಾಧಿತವಾದುದು" ಈ

न दृष्टम् । अतस्तद्दृष्टान्तेन जीवस्यापि कदाचन मुक्तावपि ब्रह्मभावो ब्रह्मत्वं न स्यात् । अयमत्र प्रयोगः । जीवो न कालान्तरेऽपि ब्रह्मणैक्यमापत्स्यते । प्राक् ततोऽत्यन्तभिन्नत्वात् । यः कदाचिद्यतोऽत्यन्तं भिद्यते नासौ कदाचित्तदैक्यमापद्यते । यथा घटः पटेनेति । अथवा जीवब्रह्मभेदः सतोर्भेदिनोर्न निवृत्तिमान् भेदत्वात्स्तम्भकुम्भादिभेदवदिति । आगमबाधितमेतदिति चेन्न । आगमानां मुख्यार्थतासम्भवेऽनुमानबाधकत्वं बाधिते चानुमाने तेषां मुख्यार्थतेति परस्पराश्रयत्व-

— ಪದಾರ್ಥದೀಪಿಕಾ —

ಸಹ ಕಂಡಿಲ್ಲ ಆದುದರಿಂದ, ಮುಕ್ತಿಯಲ್ಲಿಯೂ ಜೀವನಿಗೂ ಸಹ ಆ ದೃಷ್ಟಾಂತದಿಂದ ಬ್ರಹ್ಮಭಾವವು-- ಬ್ರಹ್ಮತ್ವವು, ಬಾರದಿರಲಿ!

ಇಲ್ಲಿಯ ಪ್ರಯೋಗವು ಹೀಗೆ– "ಜೀವನು ಕಾಲಾಂತರದಲ್ಲಿಯೂ ಬ್ರಹ್ಮನಿಂದ ಐಕ್ಯವನ್ನು ಹೊಂದುವುದಿಲ್ಲ ಏಕೆಂದರೆ ಪೂರ್ವದಲ್ಲಿ ಬ್ರಹ್ಮನಿಂದ ಅತ್ಯಂತ ಭಿನ್ನನಿರುತ್ತಾನೆ ಒಬ್ಬನು ಇನ್ನೊಬ್ಬನಿಂದ ಕದಾಚಿತ್ತಾಗಿ ಅತ್ಯಂತ ಭಿನ್ನನಾಗಿರುವುದಾದರೆ- ಅವನು ಅವನಿಂದ ಎಂದಂದಿಗೂ ಐಕ್ಯವನ್ನು ಹೊಂದಲಾರನು ಇದರಲ್ಲಿ ಪಟದಿಂದ ಐಕ್ಯವನ್ನು ಘಟವು ಹೊಂದದಿರುವುದು ದೃಷ್ಟಾಂತವು ಅಥವಾ ಜೀವ ಬ್ರಹ್ಮರಲ್ಲಿರುವ ಭೇದವು, ಭೇದವುಳ್ಳವರಿರುವಾಗ ನಿವೃತ್ತಿಯನ್ನು ಹೊಂದುವಂತಹದಲ್ಲ ಏಕೆಂದರೆ ಭೇದವಾಗಿದೆ ಇದರಲ್ಲಿ ಸ್ತಂಭ ಕುಂಭಗಳಲ್ಲಿಯ ಭೇದವು ದೃಷ್ಟಾಂತವು' ಹೀಗೆ ಇನ್ನು ಈ ಅನುಮಾನವು ಆಗಮಬಾಧಿತವಾದುದೆಂದು ಬಗೆಯಬಾರದು ಏಕೆಂದರೆ ಆಗಮಗಳಿಗೆ ಮುಖ್ಯವಾದ ಅರ್ಥವು ಸಂಭವಿಸಿದಾಗ ಅನುಮಾನಬಾಧಕತ್ವವು ಬರುತ್ತದೆ ಆದರೆ ಅನುಮಾನಗಳು ಬಾಧಿತವಾದ ಮೇಲೆ ಆಗಮಗಳಿಗೆ ಮುಖ್ಯಾರ್ಥವು ಬರಬೇಕು ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದ ಮತ್ತು ಸತ್ಪ್ರತಿಪಕ್ಷವೂ ಬರುತ್ತದೆ.

— ವಿಶೇಷಾರ್ಥಪ್ರದೀಪಿಕಾ —

ಪೂರ್ವಪಕ್ಷವನ್ನು ನಿರಾಕರಿಸಲು, ಪೂರ್ವಸಿದ್ಧವಾದ ಭೇದದಿಂದ ಅನಂತರದಲ್ಲಿಯೂ ಭೇದವನ್ನು ಸಾಧಿಸಲು ''ನಾನ್ಯದನ್ಯತ್ವಮಾಪನ್ನಂ" ಈ ಮುಂತಾದ ಸಿದ್ಧಾಂತಾನುವ್ಯಾಖ್ಯಾನವು ಹೊರಟಿದೆ ಆದುದರಿಂದ, ಭಾಷ್ಯಅನುವ್ಯಾಖ್ಯಾನಗಳಲ್ಲಿ ವಿರೋಧವಿಲ್ಲವೆಂದು ತಿಳಿಯಬೇಕು

''ಯಥೋದಕಂ" – ''ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃ

प्रसङ्गात् । सत्प्रतिपक्षत्वाच्च । तथा हि श्रुतिः । यथोदकमित्यादि । प्रल्हादोऽपि परमात्मात्मनोर्योगः परमार्थ इतीष्यताम् ॥ (ते) मिथ्यैत-दन्यद्द्रव्यं हि नैति तद्द्रव्यतां यत इति ।

— ಪದಾರ್ಥದೀಪಿಕಾ —

ಹೇಗೆಂದರೆ- "ಯಥೋದಕಂ" ಈ ಮುಂತಾದ ಶ್ರುತಿಯು ಇರುತ್ತದೆ ಪ್ರಹ್ಲಾದನೂ "ಪರಮಾತ್ಮಾತ್ಮನೋರ್ಯೋಗಃ ಪರಮಾರ್ಥ ಇತೀಷ್ಯತಾಂ ॥ ಮಿಥ್ಯೈತದನ್ಯದ್ದ್ರವ್ಯಂ ಹಿ ನೈತಿ ತದ್ದ್ರವ್ಯತಾಂ ಯತಃ" ॥ ಎಂಬುದಾಗಿ ಹೇಳಿದ್ದಾನೆ.

— ವಿಶೇಷಾರ್ಥಪ್ರದೀಪಿಕಾ —

ಗೇವ ಭವತಿ ಏವಂ ಮುನೇರ್ವಿಜಾನತ ಆತ್ಮಾಭವತಿ ಗೌತಮ" ಎಂಬುದಾಗಿ ದೃಷ್ಟಾಂತಪೂರ್ವಕವಾಗಿ ಭೇದವನ್ನು ಹೇಳಿದ್ದಾಗಿದೆ ಹೀಗೆ ಇಲ್ಲಿಯ ಭಾವ ನಚಿಕೇತನನ್ನು ಕುರಿತು ಯಮನು ಹೇಳಿದ್ದು-

" ಹೇ ಗೌತಮ "- ಗೌತಮಗೋತ್ರೋತ್ಪನ್ನನಾದ ನಚಿಕೇತನನೇ ! "ಯಥಾ"= ಹೇಗೆ, "ಶುದ್ಧೇ"= ಒಂದು ಪಾತ್ರೆಯಲ್ಲಿದ್ದ ನೀರಿನಲ್ಲಿ, "ಆಸಿಕ್ತಂ ಶುದ್ಧಂ ಉದಕಂ"= ಯಥೇಷ್ಟವಾಗಿ ಹಾಕಿದ (ಬೆರೆಯಿಸಿದ) ನೀರು "ತಾದೃಗೇವ ಭವತಿ"= ಅದರ ಹಾಗೆಯೇ ಆಗುತ್ತದೆಯೋ (ಹೊರತು ಅದೇ ನೀರೇ ಅದು ಆಗುವುದಿಲ್ಲ) 'ಏವಂ'= ಹೀಗೆ- "ವಿಜಾನತಃ ಮುನೇಃ"= ತಿಳಿದುಕೊಂಡಿರುವ ಮುನಿಗಳಿಗೆ "ಆತ್ಮಾ"= ಅಧಿಪತಿಯಾದ ಹಿರಣ್ಯಗರ್ಭನೂ ಸಹ, ಪರಮಾತ್ಮನನ್ನು ಹೊಂದಿ, "ತಾದೃಗೇವ"= ಪರಮಾತ್ಮನ ಸದೃಶನೇ ಆಗುವನು ಹೊರತಾಗಿ ಪರಮಾತ್ಮನಾಗುವುದಿಲ್ಲ ಅಂದಮೇಲೆ ಉಳಿದ ಜೀವರು ಪರಮಾತ್ಮರಾಗುವುದಿಲ್ಲವೆಂಬುದನ್ನೇನು ಹೇಳತಕ್ಕದ್ದು? ಅಥವಾ- ಮನನಾದಿ ಶೀಲರಾದ ಅಪರೋಕ್ಷಜ್ಞಾನಿಗಳ ಸ್ವರೂಪವು, ಪರಮಾತ್ಮನಲ್ಲಿ ಪ್ರವೇಶಹೊಂದಿದುದು ಆಗುತ್ತದೆ ಹೊರತು ಐಕ್ಯ (ಅಭೇದ) ವನ್ನು ಹೊಂದುವುದಿಲ್ಲ, ಹೀಗೆ

"ಪರಮಾತ್ಮಾ" ಎಂಬ ಪದ್ಯವು ವಿಷ್ಣುಪುರಾಣಾಂತರ್ಗತವಾದದ್ದು. ಇದು ಪ್ರಹ್ಲಾದನು ಹೇಳಿದ್ದು ಇಲ್ಲಿ "ಪ್ರಹ್ಲಾದೋಽಪಿ" ಇದರ ಮುಂದೆ 'ಆಹ" (ಹೇಳುತ್ತಾನೆ) ಎಂಬ ಪದವನ್ನು ಹಚ್ಚಬೇಕು ಪರಮಾತ್ಮನಿಂದ ಜೀವನಿಗೆ ಸಂಬಂಧವು (ಸಾಯುಜ್ಯವು ಐಕ್ಯವು,) ಪರಮಾರ್ಥವೆಂಬ ಸಂಗತಿಯು ಮಿಥ್ಯಾಭೂತವಾದುದೆಂದು ಅಂಗೀಕರಿಸಬೇಕು. ಏಕೆಂದರೆ ಭಿನ್ನವಾದ ಒಂದು ದ್ರವ್ಯವು ಇನ್ನೊಂದು ದ್ರವ್ಯದ ಸ್ವರೂಪವನ್ನು ಹೊಂದಲಾರದು (ಪರಮಾತ್ಮನಾ ಜೀವಾತ್ಮನಃ ಯೋಗಃ ಪರಮಾರ್ಥಃ ಇತ್ಯೇತನ್ಮಿಥ್ಯಾ ಇತೀಷ್ಯತಾಂ (ಹಿಯತಃ)

अथ मतम् । नायमास्ति युक्तिविरोधः । प्रागप्यभिन्न एव ब्रह्मणा जीव इत्यङ्गीकारात् । न च च्विप्रत्ययानुपपत्तिः । प्रतीत्यपेक्षया तदुपपत्तेः । प्राग्विभिन्नतया दृष्टोऽयं जीवो ब्रह्मणः । अथेदानीं मुक्तावभिन्नतया दृश्यत इत्यत एकीभवन्तीत्युच्यत इति । अत्रेदं वक्तव्यम् । किं प्राक्तनी जीवब्रह्मणोर्भेददृष्टिर्भ्रान्तिरुत प्रमेति । नाद्यः । बाधकाभावात् । श्रुतयस्त्वद्याप्यव्यवस्थितार्था न बाधकता-

— ಪದಾರ್ಥದೀಪಿಕಾ —

ಇನ್ನು- "ಈ ಯುಕ್ತಿವಿರೋಧವು ಬರುವುದಿಲ್ಲ. ಏಕೆಂದರೆ "ಮುಂಚೆಯೂ ಸಹ ಬ್ರಹ್ಮನಿಂದ ಜೀವನು ಅಭಿನ್ನನೇ" ಎಂಬುದಾಗಿ ಒಪ್ಪಿರುತ್ತೇವೆ ಹಾಗಾದರೆ ಚ್ವಿ" ಪ್ರತ್ಯಯವು ಯುಕ್ತವೆನಿಸಲಾರದಂದು ಬಗಯಬಾರದು ಏಕೆಂದರೆ ಪ್ರತೀತಿಯ ವಿವಕ್ಷೆಯಿಂದ ಚ್ವಿ ಪ್ರತ್ಯಯವು ಯುಕ್ತವೆನಿಸುತ್ತದೆ "ಮೊದಲು ಜೀವನು ಬ್ರಹ್ಮನಿಂದ ಭಿನ್ನನೆಂದು ಕಂಡಿದ್ದನು ಈಗ ಮುಕ್ತಿಯಲ್ಲಿ ಅಭಿನ್ನನಾಗಿ ತೋರುತ್ತಾನೆ" ಈ ಕಾರಣದಿಂದ 'ಏಕೀಭವಂತಿ" ಎಂಬುದಾಗಿ ಹೇಳಲ್ಪಡುತ್ತದೆ," ಹೀಗೆ ಹೇಳುವುದಾದರೆ ಇಲ್ಲಿ ಹೀಗೆ ಕೇಳತಕ್ಕದ್ದು ಮುಂಚೆ ಉಂಟಾಗಿರುವ ಜೀವಬ್ರಹ್ಮರಲ್ಲಿಯ ಭೇದದ ತಿಳುವಳಿಕೆಯು ( ಜ್ಞಾನವು ) ಭ್ರಾಂತಿಯೋ ? ಇಲ್ಲವೆ ಯಥಾರ್ಥಜ್ಞಾನವೋ ? ಮೊದಲನೆಯ ಪಕ್ಷವು ಯುಕ್ತವಲ್ಲ ಏಕೆಂದರೆ ಬಾಧಕವಿಲ್ಲ ಶ್ರುತಿಗಳಿಗಾದರೋ ಇಲ್ಲಿಯ ವರೆಗೂ ಅರ್ಥವ್ಯವಸ್ಥೆಯು ಆಗಿಲ್ಲವಾದುದರಿಂದ ಅವು, ಬಾಧಕತ್ವವನ್ನು ಹೊಂದಲಾರವು

— ವಿಶೇಷಾರ್ಥಪ್ರದೀಪಿಕಾ —

ಅನ್ಯದ್ ದ್ರವ್ಯಂ ತದ್ದ್ರವ್ಯತಾಂ ನ ಏತಿ'' ಹೀಗೆ ಇಲ್ಲಿ ಅನ್ವಯವಿದ.) ಹೀಗೆ ಇಲ್ಲಿಯ ಅರ್ಥ

''ಜೀವರ ಬ್ರಹ್ಮರ ಭೇದದ ಪ್ರತೀತಿಯು ಭ್ರಾಂತಿಯು ಏಕೆಂದರೆ ಐಕ್ಯವನ್ನು ತಿಳಿಸುವ ಶ್ರುತಿಯು ಅದಕ್ಕೆ ಬಾಧಕವಾಗುತ್ತದೆ, ಈ ಆಶಂಕೆಯನ್ನು ''ಶ್ರುತಯುಸ್ತು" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. ಅಭೇದ ಬೋಧಕವಾಕ್ಯಗಳಿಗೆ ಮುಖ್ಯ (ಅಭೇದ) ಅರ್ಥವು ಸರಿಯೆಂದು ಸಿದ್ಧವಾದರೇ, ಅವು ಭೇದ ಪ್ರತೀತಿಗೆ ಬಾಧಕವಾಗಬಹುದು ಆದರೆ ಭೇದಪ್ರತೀತಿಯು ಬಾಧಿತವಾದರೇ ಅಭೇದಾಗಮಗಳಿಗೆ ಮುಖ್ಯಾರ್ಥವು ಸರಿಯಾಗುತ್ತದೆ ಆದುದರಿಂದ ಅನ್ಯೋನ್ಯಾಶ್ರಯವೆಂದು ಇಲ್ಲಿಯ ತಾತ್ಪರ್ಯ.

क्वचिद्भिन्नतया दृष्टं तदभिन्नतया कथम् ॥
दृश्येन्नो दृष्टपूर्वं हि तादृशं न च दृश्यते ॥

मश्नुवते । द्वितीये त्वाह ॥ क्वचिदिति । क्वचित्काले यद्वस्तु यतो भिन्नतया प्रमितं तत्कालान्तरेऽपि कथं तदभिन्नतया प्रतीयेत । न कथञ्चिदित्यर्थः । कुत इत्यत आह ॥ नो दृष्टपूर्वं हीति । तादृशं प्राग्भिन्नतया प्रमितं कालान्तरेऽभिन्नतया प्रमीयमाणम् । अयमिह प्रयोगः । जीवो न कदाचित् ब्रह्माभिन्नतया प्रमाविषयः । ततोऽत्यन्तभिन्नतया प्रमितत्वात् । यदेवं तदेवं यथा घटः पटाद्भिन्नतयेति ।

ಒಂದು ಕಾಲದಲ್ಲಿ ಯಾವ (ಒಂದು) ವಸ್ತುವು (ಇನ್ನೊಂದು ವಸ್ತುವಿನ) ಭಿನ್ನವೆಂದು ಯಥಾರ್ಥವಾಗಿ ತಿಳಿಯಲ್ಪಟ್ಟಿದೆಯೋ ಆ ವಸ್ತುವು ಕಾಲಾಂತರ ದಲ್ಲಿಯೂ ಆ ಇನ್ನೊಂದು ವಸ್ತುವಿನಿಂದ ಅಭಿನ್ನವೆಂಬುದಾಗಿ ಹೇಗೆ ತಿಳಿಯಲ್ಪ ಟ್ಟೀತು ? ಏಕಂದರೆ ಪೂರ್ವದಲ್ಲಿ ಭಿನ್ನವೆಂದು ಪ್ರಮಿತವಾದ ವಸ್ತುವು ಕಾಲಾಂ ತರದಲ್ಲಿ ಅಭಿನ್ನವೆಂದು ಪ್ರಮಿತವಾದುದು, ಹಿಂದೆ ಎಂದೂ ಕಂಡಿಲ್ಲ ಮುಂದೆ ಎಂದಿಗೂ ಹಾಗೆ ಕಂಡುಬರುವುದೇ ಇಲ್ಲ

— ಪದಾರ್ಥದೀಪಿಕಾ —

(ಬಾಧಕಗಳಾಗಲಾರವು) ಎರಡನೆಯ ಪಕ್ಷದಲ್ಲಿ 'ಕ್ವಚಿತ್" ಎಂಬುದಾಗಿ ಹೇಳಿ ದ್ದಾರೆ 'ಕ್ವಚಿತ್ '= ಒಂದು ಸಮಯದಲ್ಲಿ– ಒಂದು ವಸ್ತುವು ಇನ್ನೊಂದು ವಸ್ತುವಿನಿಂದ ಭಿನ್ನವೆಂದು ಯಥಾರ್ಥವಾಗಿ ತಿಳಿದು ಬಂದಿದ್ದರೆ, ಕಾಲಾಂತರ ದಲ್ಲಿಯೂ ಸಹ ಆ ವಸ್ತುವಿನಿಂದ ಅಭಿನ್ನವೆಂದು ಯಥಾರ್ಥವಾಗಿ ಹೇಗೆ ತೋರುತ್ತವೆ ? ಯಾವದೇ ರೀತಿಯಿಂದಲೂ ಹಾಗೆ ಯಥಾರ್ಥವಾಗಿ ತೋರ ಲಾರದು ಏಕೆ ? ಎಂಬ ಪ್ರಶ್ನೆಯು ಬರುವುದರಿಂದ ಅದರ ಉತ್ತರವನ್ನು "ನೋದೃಷ್ಟ ಪೂರ್ವಂ ಹಿ" ಈ ವಚನದಿಂದ ಹೇಳುತ್ತಾರೆ 'ತಾದೃಶಂ "= ಮುಂಚೆ ಅತ್ಯಂತ ಭಿನ್ನವೆಂದು ಯಥಾರ್ಥವಾಗಿ ತೋರಿದ್ದು, ಕಾಲಾಂತರದಲ್ಲಿ ಅಭಿನ್ನವೆಂದು ಯಥಾರ್ಥವಾಗಿ ತೋರುವ ವಸ್ತುವು ಇಲ್ಲಿಯ ಪ್ರಯೋಗವು ಇದು– 'ಜೀವನು ಕದಾಚಿತ್ತಾಗಿ ಬ್ರಹ್ಮನಿಂದ ಅಭಿನ್ನನಾಗಿ ಯಥಾರ್ಥಜ್ಞಾನ ದಲ್ಲಿ ತೋರ (ವಿಷಯನಾಗ) ಲಾರನು ಏಕೆಂದರೆ– ಬ್ರಹ್ಮನಿಂದ ಭಿನ್ನನೆಂದು ಪ್ರಮಾಣಸಿದ್ಧನಾಗಿದ್ದಾನೆ 'ಯಾವದು ಅತ್ಯಂತ ಭಿನ್ನವೆಂದು ಪ್ರಮಾಣಪ್ರಮಿ ತವಾದುದೋ ಅದು ಅಭಿನ್ನವಾಗಲಾರದು ಇದರಲ್ಲಿ ಪಟದಿಂದ ಭಿನ್ನವೆಂದು ಪ್ರಮಿತವಾದ ಘಟವು ದೃಷ್ಟಾಂತವು"

**यस्तु क्वचिदपि भेदप्रमां न मन्यते । तं प्रत्यारोपितभेदमेकं वस्तु-व्यतिरेकोदाहरणं वाच्यम् । एवञ्च प्रतीतिमुपादायापि न च्विप्रत्ययोपपत्तिः । एतदर्थत्वेनापि स्याल्लोकवदिति योज्यम् । तदेवं ग्राव-प्लवनादिश्रुतिवदुपपत्तिविरुद्धत्वेन श्रुतेर्मुख्यार्थासम्भवादमुख्यार्थ एव**

## — ಪದಾರ್ಥದೀಪಿಕಾ —

ಆದರೆ– ಯಾವನು ಎಂದಿಗೂ ( ಎಲ್ಲಿಯೂ ) ಭೇದವಿಷಯಕ ಯಥಾರ್ಥ ಜ್ಞಾನವನ್ನು ಒಪ್ಪುವುದಿಲ್ಲವೋ ಅವನನ್ನು ಕುರಿತು, ಆರೋಪಿತ ಭೇದವುಳ್ಳ ಒಂದು ವಸ್ತುವನ್ನು ವ್ಯತಿರೇಕ ದೃಷ್ಟಾಂತವೆಂದು ಹೇಳತಕ್ಕದ್ದು ಹೀಗೆ ಪ್ರತೀತಿಯನ್ನು ಸ್ವೀಕರಿಸಿದರೂ ಸಹ ಚ್ವಿ ಪ್ರತ್ಯಯವು ಸರಿಹೊಂದಲಾರದು ಹೀಗೆ ಅರ್ಥವು ಬರುವಂತೆಯೂ ' ಸ್ಯಾಲ್ಲೋಕವತ್ " ಎಂಬುದು ಅನ್ವಯವನ್ನು ಮಾಡತಕ್ಕದ್ದು ಹೀಗೆ- "ಕಲ್ಲುಗಳು ಈಜುತ್ತವೆ", ಇತ್ಯಾದಿಗಳನ್ನು ಹೇಳುವ ಶ್ರುತಿಗಳ ಹಾಗೆ ಯುಕ್ತಿವಿರುದ್ಧಗಳಾದುದರಿಂದ, "ಏಕೀಭವತಿ" ಇತ್ಯಾದಿ ಶ್ರುತಿಗಳಿಗೆ ಮುಖ್ಯಾರ್ಥವು ಸರಿಹೊಂದುವುದಿಲ್ಲವಾದುದರಿಂದ ಅಮುಖ್ಯವೇ ಆದ

## — ವಿಶೇಷಾರ್ಥಪ್ರದೀಪಿಕಾ —

"ಯಸ್ತು" – ಯಾವದು ಅತ್ಯಂತ ಭಿನ್ನವೆಂದು ಪ್ರಮಾಣಪ್ರಮಿತವೋ ಅದು ಎಂದಿಗೂ (ಒಮ್ಮೆಯೂ ಸಹ) ಅಭಿನ್ನವೆಂದು ಯಥಾರ್ಥಜ್ಞಾನದಲ್ಲಿ ತೋರಲಾರದು' ಎಂಬ ಹಿಂದೆ ಹೇಳಿದ ಅನ್ವಯವ್ಯಾಪ್ತಿಯನ್ನು ತಿಳಿಯಲು ಸಾಧ್ಯವಿಲ್ಲ ಏಕೆಂದರೆ ಭೇದದ ಬಗ್ಗ ಪ್ರಮೆಯು ಎಲ್ಲಿಯೂ ಎಂದಿಗೂ ಅವನಿಗೆ ಬಂದಿಲ್ಲ ಹೀಗೆ ಭಾವವನ್ನು ತಿಳಿಯಬೇಕು ಇಲ್ಲಿ ವ್ಯತಿರೇಕ ದೃಷ್ಟಾಂತವು ಹೀಗೆ ಆರೋಪಿತ ಭೇದವುಳ್ಳ ಘಟದಲ್ಲಿ ವಾಸ್ತವವಾಗಿ ಅಭೇದವನ್ನು ತೋರಿಸುವ ಯಥಾರ್ಥಜ್ಞಾನದಲ್ಲಿ ವಿಷಯವಾಗಿರುವುದೆಂಬುದೂ ಇದೆ ಹೀಗೆ "ಅಭಿನ್ನತಯಾ ಪ್ರಮಿತತ್ವಾಭಾವವು ಇರುತ್ತದೆ" ಎಂಬ ವ್ಯತಿರೇಕ ವ್ಯಾಪ್ತಿಯ ದೃಷ್ಟಾಂತವನ್ನು ತಿಳಿಯಬೇಕು ಹೀಗ ಇಲ್ಲಿಯ ಭಾವ

ಆರೋಪಿತಭೇದಮೇಕಂ ವಸ್ತು" – ಅಂಗುಲ್ಯವಷ್ಟಬ್ಧನೇತ್ರದಿಂದ (ಬೆರಳಿನಿಂದ ಚುಚ್ಚಿಸಿಕೊಂಡ ಕಣ್ಣಿನಿಂದ) ತೋರುವ ಚಂದ್ರಬಿಂಬ ಮುಂತಾದುದು ಚಂದ್ರಮುಂತಾದ ಒಂದು ವಸ್ತುವಿನಲ್ಲಿ ಚಂದ್ರ ಮುಂತಾದವರಿಂದ ಭೇದವು ಇಲ್ಲವಾದುದರಿಂದ, ಹೇತುಸಾಧ್ಯಗಳೆರಡರ ಅಭಾವವು ಇರುತ್ತದೆ

"ಏತದರ್ಥತ್ವೇನಾಪಿ" – "ಸ್ಯಾಲ್ಲೋಕವತ್" ಎಂಬ ಸೂತ್ರಾಂಶಕ್ಕೆ "ಲೋಕದಲ್ಲಿ ಘಟವು ಪಟದಿಂದ ಅಭಿನ್ನವೆಂದು ಪ್ರಮಿತವಲ್ಲ-ಪಟದಿಂದ ಭೇದವುಳ್ಳದ್ದು

स्वीकरणीये परकीयहेत्वोरसिद्धत्वान्न ब्रह्मणो जगत्कारणत्वे युक्तिविरोध इति सिद्धम् ॥ छ ॥

केचिदिदं सूत्रमान्यथा व्याचक्षते । पूर्वं किल चेतनाचेतनात्मकस्य प्रपञ्चस्य ब्रह्मोपादानत्वेन ब्रह्मानन्यत्वमुक्तम् । तदाक्षिप्य समाधातुमिदं सूत्रम् । तथा हि । यदि चेतनाचेतनात्मकस्य जगतो ब्रह्मानन्यत्वं स्यात्तदा चेतनो भोक्ता भोग्याश्चाचेतना विषया इत्ययं विभागो न स्यात् । कुतः । भोग्यस्यापि भोक्तृत्वापत्तेः । भोक्तुरपि भोग्यत्वापत्तेः । भवितव्यं चानेन विभागेन । प्रत्यक्षादिसिद्धत्वादिति

— ಪದಾರ್ಥದೀಪಿಕಾ —

ಅರ್ಥವನ್ನು ಸ್ವೀಕರಿಸತಕ್ಕದ್ದು ಹೀಗಿರುವಾಗ ಪರರು ಹೇಳಿದ ಯುಕ್ತಿಯು (ಹೇತುವು) ಅಸಿದ್ಧವಾದುದರಿಂದ ಬ್ರಹ್ಮನ (ವಿಷ್ಣುವಿನ) ಜಗತ್ಕಾರಣತ್ವದ ಬಗ್ಗೆ ಯುಕ್ತಿ ವಿರೋಧವಿಲ್ಲವೆಂದು ಸಿದ್ಧಿಸಿತು"

ಕೆಲವರು ಈ ಸೂತ್ರವನ್ನು ಬೇರೆ ರೀತಿಯಿಂದ ವ್ಯಾಖ್ಯಾನಿಸುತ್ತಾರೆ. ಹಿಂದಿನ ಅಧಿಕರಣದಲ್ಲಿಯುಂತೂ ಚೇತನಾ ಚೇತನಾತ್ಮಕ ಪ್ರಪಂಚಕ್ಕೆ ಬ್ರಹ್ಮವು ಉಪಾದಾನಕಾರಣವಾದುದರಿಂದ ಅದು ಬ್ರಹ್ಮನಿಂದ ಅಭಿನ್ನವೆಂದು ಹೇಳಲ್ಪಟ್ಟಿತಷ್ಟೇ ! ಆ ವಿಷಯುವನ್ನು ಆಕ್ಷೇಪಿಸಿ ಸಮಾಧಾನ ಹೇಳಲು ಈ ಸೂತ್ರವು ಹೊರಟಿದ ಹೇಗೆಂದರೆ– "ಚೇತನಾಚೇತನಾತ್ಮಕ ಪ್ರಪಂಚವು ಬ್ರಹ್ಮನಿಂದ ಅಭಿನ್ನವಾದುದಾದರೆ- ಆಗ ಚೇತನನು ಭೋಕ್ತೃವು, ಅಚೇತನಗಳು ವಿಷಯಗಳು ಹೀಗಿರುವ ಈ ವಿಭಾಗವು ಆಗದಿರಲಿ ! ಏಕೆ ? ಭೋಗ್ಯವೂ (ಭೋಗಿಸಲ್ಪಡುವಂತಹದೂ) ಭೋಕ್ತೃವಾಗಬೇಕಾಗುತ್ತದೆ ಭೋಕ್ತೃವೂ ಭೋಗ್ಯವಾಗಬೇಕಾದೀತು ! ಮತ್ತು ಈ ವಿಭಾಗವು ಇರಲೇಬೇಕು. (ಇದ್ದೇ ಇದೆ) ಏಕೆಂದರೆ ಪ್ರತ್ಯಕ್ಷಾದಿಗಳಿಂದ ಸಿದ್ಧವಾಗಿದ" ಹೀಗೆ ಪೂರ್ವಪಕ್ಷಿಸಿದರೆ– "ಹೇಗೆ ಲೋಕ,

— ವಿಶೇಷಾರ್ಥಪ್ರದೀಪಿಕಾ —

ಹೇಗೋ ಹಾಗೆ ಜೀವನೂ ಬ್ರಹ್ಮನಿಂದ ಅಭೇದವುಳ್ಳವನಲ್ಲ ಭೇದವುಳ್ಳವನು' ಹೀಗೆ ಅನ್ವಯಿಸಿ ಅರ್ಥಮಾಡಬೇಕು

"ಪರಕೀಯಹೇತ್ವೋಃ" – ಸರ್ವಕರ್ತೃವಾಗದ ಮುಕ್ತಜೀವರಿಂದ ಅಭೇದವೆಂಬ ಯುಕ್ತಿಯು, "ಕೇಚಿತ್" – ಬ್ರಹ್ಮನಿಗೆ ಪರಿಣಾಮವನ್ನು ಹೇಳುವವರು "ಪೂರ್ವಂ'–ಪ್ರಕೃತ್ಯಧಿಕರಣದಲ್ಲಿ "ಯತ್" ಎಂಬುದು ಮೂಲಾನುವ್ಯಾಖ್ಯಾನದ

भोक्तृत्वापत्तित इति यन्मतं तत्कुतो हरि ॥
भोक्त्रापत्तेरिति प्राह ॥ २-१-५ ॥

चेत् । स्याल्लोकवत् । यथा लोके समुद्रात्मनामपि फेनतरङ्गादीनां नेतरेतरभावापत्त्या विभागभङ्गः । यथा वा महाकाशात्मनामपि घटमठाद्याकाशानां तथा प्रकृतेऽपि स्यादिति । तदिदं दूषयति ॥ भोक्तृत्वेति । यद्यदि भोक्त्रापत्तेरित्यत्र भोक्तृत्वापत्तेरिति व्याख्यानं सूत्रकारस्याभिमतं स्यात् । तत्तर्हि कुतो हरिः सूत्रकृत् भोक्त्रापत्तेरिति प्राह । भोक्तृत्वापत्तेरित्येव ब्रूयात् । न चैवमब्रवीत् । ततो नायमभिप्रायः सूत्रकारस्येति ।

"ಭೋಕ್ತೃತ್ವಾಪತ್ತೇಃ" ಎಂಬುದಾಗಿ ("ಭೋಕ್ತ್ರಾಪತ್ತೇಃ" ಎಂಬುದಕ್ಕೆ) ವ್ಯಾಖ್ಯಾನವು, ಒಂದು ಪಕ್ಷದಲ್ಲಿ ಸೂತ್ರಕಾರರಿಗೆ ಸಮ್ಮತವಿದ್ದರೆ, "ಭೋಕ್ತ್ರಾಪತ್ತೇಃ" ಎಂಬುದಾಗಿ ಸೂತ್ರಕಾರರು ಏಕೆ ಹೇಳಿದರು ? ೨-೧-೫ (ಭೋಕ್ತ್ರಾಪತ್ತ್ಯಧಿ)

— ಪದಾರ್ಥದೀಪಿಕಾ —

ದಲ್ಲಿ ಸಮುದ್ರಾತ್ಮಕವಾದವುಗಳಾದರೂ ಫೇನ (ಬುರುಗು) ತರಂಗ (ತೆರೆ) ಗಳಿಗೆ ಪರಸ್ಪರ ಭಾವವು ಬರುವುದಿಲ್ಲ ಹಾಗು ವಿಭಾಗಕ್ಕೆ ಭಂಗವೂ ಬರುವದಿಲ್ಲವೋ ಹಾಗು ಮಹಾಕಾಶದಿಂದ ಅಭಿನ್ನಗಳಾದರೂ ಘಟ ಮಠಾದ್ಯಾಕಾಶಗಳಿಗೆ ಪರಸ್ಪರ ಭಾವವು ಬರುವುದರಿಂದ ವಿಭಾಗಭಂಗವಾಗುವುದಿಲ್ಲವೋ ಅದರ ಹಾಗೆಯೇ ಪ್ರಕೃತದಲ್ಲಿಯೂ ಇರಲಿ, "ಹೀಗೆ ಸಿದ್ಧಾಂತ, "ಹೀಗೆ ಹೇಳುತ್ತಾರ ಅವರ ಈ ವ್ಯಾಖ್ಯಾನವನ್ನು " ಭೋಕ್ತೃತ್ವಾಪತ್ತಿತ ಇತಿ "– ಈ ಪದ್ಯದಿಂದ ದೂಷಿಸುತ್ತಾರೆ "ಯತ್"–ಯದಿ–ಒಂದು ಪಕ್ಷದಲ್ಲಿ "ಭೋಕ್ತ್ರಾಪತ್ತೇಃ" ಎಂಬಲ್ಲಿ "ಭೋಕ್ತೃತ್ವಾಪತ್ತೇಃ" ಎಂಬುದಾಗಿ ವ್ಯಾಖ್ಯಾನವು ಸೂತ್ರಕಾರರಿಗೆ ಸಮ್ಮತವಿದ್ದರೆ– "ತತ್"–ತರ್ಹಿ– ಆಗ ಸೂತ್ರಕಾರನಾದ ಶ್ರೀ ಹರಿಯು (ವೇದವ್ಯಾಸನು) "ಭೋಕ್ತ್ರಾಪತ್ತೇಃ" ಎಂಬುದಾಗಿ ಏಕೆ ಹೇಳುತ್ತಿದ್ದರು ? "ಭೋಕ್ತೃತ್ವಾಪತ್ತೇಃ"

— ವಿಶೇಷಾರ್ಥಪ್ರದೀಪಿಕಾ —

ಅನುವಾದ "ಯದಿ" ಎಂಬುದಾಗಿ ಟೀಕಾದಲ್ಲಿ ಅದರ ವ್ಯಾಖ್ಯಾನವು, ಇದರಂತೆ "ತತ್" ಎಂಬುದು ಅನುವಾದ, "ತರ್ಹಿ" ಎಂಬುದು ವ್ಯಾಖ್ಯಾನವು, ಹೀಗೆ ತಿಳಿಯಬೇಕು

यद्यप्यत्र परेषामस्माकं चाध्याहारसाम्यम् । तथाऽपि भाव-प्रत्ययाभावः परस्याधिकः । ये तु व्याचक्षते चिदचिद्वस्तुशरीरत्वे ब्रह्मणो जीववत्सुखदुःखादिभोक्तृत्वापत्तेर्जीवब्रह्मस्वभावविभागो न स्यादिति चेन्न । यथा कान्तारनिपतितस्यापि नृपस्य न दंशमशकाद्युपद्रवस्तथाऽत्रापि स्यादिति । तेषामप्ययं शब्ददोषः समानः ।

— ಪದಾರ್ಥದೀಪಿಕಾ —

( ಭೋಕ್ತೃತ್ವವು ಬರಬೇಕಾಗುತ್ತದೆ ) ಎಂಬುದಾಗಿ ಹೇಳುತ್ತಿದ್ದರು. ಆದರೆ ಹೀಗೆ ಹೇಳಲಿಲ್ಲ ಆದುದರಿಂದ, ಹೀಗೆ ವ್ಯಾಖ್ಯಾನಿಸುವುದು (ಈ ಅರ್ಥವು) ಸೂತ್ರಕಾರರ ಅಭಿಪ್ರಾಯಕ್ಕೆ ಅನುಗುಣ (ಸಮ್ಮತ) ವಲ್ಲ ಹೀಗೆ ದೂಷಣ.

ಇನ್ನು- ಇಲ್ಲಿ ಪರನಿಗೂ ನಮಗೂ ಅಧ್ಯಾಹಾರವು ಸಮಾನವಿದೆ ಆದರೂ ಭಾವಪ್ರತ್ಯಯವು ಇಲ್ಲದಿರುವುದರಿಂದ ಅದರ ಅಧ್ಯಾಹಾರವು ಪರನಿಗೆ ಹೆಚ್ಚಿಗೆ ಬೇಕಾಗುತ್ತದ

ಇನ್ನು- "ಬ್ರಹ್ಮನಿಗೆ ಚಿದಚಿದ್ವಸ್ತುಗಳು ಶರೀರವಾದರೆ ಜೀವನಿಗೆ ಹೇಗೋ ಹಾಗೆ ಸುಖದುಃಖಾದಿ ಭೋಕ್ತೃತ್ವವು ಬರಬೇಕಾಗುತ್ತದೆ ಆದುದರಿಂದ, ಜೀವಬ್ರಹ್ಮರಲ್ಲಿ ಸ್ವಭಾವವಿಭಾಗವು ಇಲ್ಲದ್ದಾಗಲಿ, ಹೀಗೆ ಶಂಕಿಸುವುದು ಸಮಂಜಸವಲ್ಲ ಏಕೆಂದರೆ— ಕಾಂತಾರ(ಅರಣ್ಯ)ದಲ್ಲಿ ಮಲಗಿದರೂ ರಾಜನಿಗೆ ದಂಶ ಮಶಕ ಮುಂತಾದವುಗಳಿಂದ ಉಪದ್ರವವು ಹೇಗೆ ಇಲ್ಲವೋ ಹಾಗೆ ಪ್ರಕೃತ ವಿಷಯದಲ್ಲಿಯೂ ಸುಖಾದಿ ಭೋಕ್ತೃತ್ವ ಬರಲೆಂಬ ಆಪತ್ತಿಯು ಬರುವುದಿಲ್ಲ," ಹೀಗೆ ಯಾರು ವ್ಯಾಖ್ಯಾನಿಸುವರೋ ಅವರಿಗೂ ಈ ಶಬ್ದದೋಷವು ಸಮಾನವಾಗಿ ಬರುತ್ತದೆ

— ವಿಶೇಷಾರ್ಥಪ್ರದೀಪಿಕಾ —

"ಅಧ್ಯಾಹಾರಸಾಮ್ಯಂ" - ಮಾಯಾವಾದಿಗಳ ಮತದಲ್ಲಿ "ಭೋಕ್ತ್ರುವಿಗೆ ಭೋಗ್ಯತ್ವವು ಬರಬೇಕಾಗುವುದರಿಂದ; ಭೋಗ್ಯಕ್ಕೆ ಭೋಕ್ತೃತ್ವವು ಬರಬೇಕಾದುದರಿಂದ, ಹೀಗೆ "ಭೋಗ್ಯಸ್ಯ" ಎಂಬುದರ ಅಧ್ಯಾಹಾರವೂ, ನಮ್ಮ ಮತದಲ್ಲಿ "ಮೋಕ್ಷೇ ಬ್ರಹ್ಮತ್ವೇ" ಎಂಬುದರ ಅಧ್ಯಾಹಾರವೂ ಇದೆ ಆದುದರಿಂದ ಸಾಮ್ಯವೆಂದು ತಿಳಿಯಬೇಕು "ಭೋಗ್ಯಸ್ಯ ಭೋಕ್ತೃತ್ವಾಪತ್ತಿಃ" ಎಂಬುದು ಪರರ ಮತದಲ್ಲಿ ಅಧಿಕವೆಂದು ತಿಳಿಯಬೇಕು

"ಯೇತು" – ಇಲ್ಲಿ ರಾಮಾನುಜೀಯರು ಎಂದು ಅರ್ಥ. "ಅಯಂ ಶಬ್ದದೋಷಃ" ಭೋಕ್ತೃ"ಶಬ್ದಕ್ಕೆ ಭಾವಪ್ರಧಾನತ್ವವನ್ನು ಒಪ್ಪುವುದೆಂದು (ಭೋಕ್ತೃ

ननु भावप्रधाना निर्देशास्तत्र तत्र बहुलमुपलभ्यन्ते । तत्कथमयं दोषोऽभिधीयते । अयमभिसन्धिर्भाष्यकारस्य । प्रतिपाद्ये व्यवस्थिते तद्बलाच्छाब्दी गौणता कथञ्चिदनुसर्तव्या । न चास्य सूत्रस्येदं प्रतिपाद्यं व्यवस्थितम् । जगदुपादानत्वस्य प्रागनुक्तत्वेनानुक्तोपालम्भप्रसङ्गात् । जगच्छरीरत्वस्यान्तर्याम्यधिकरणे प्रसक्तत्वेऽपि सम्भोगप्राप्तिरित्यनैव परिहृतत्वात् । तत्र जीवशरीरगतत्वेन प्रसक्तं

— ಪದಾರ್ಥದೀಪಿಕಾ -

ಇನ್ನು- ಅಲ್ಲಲ್ಲಿ ( ಅನೇಕ ಕಡೆಗಳಲ್ಲಿ ) ಭಾವಪ್ರಧಾನ ನಿರ್ದೇಶಗಳು ಬಹಳವಾಗಿ ಕಂಡುಬರುತ್ತವೆ ಆದುದರಿಂದ, ಈ ಶಬ್ದದೋಷವನ್ನು ಹೇಳುವುದು ಹೇಗೆ ? ಎಂದರೆ— ಭಾಷ್ಯಕಾರರ ಅಭಿಪ್ರಾಯವಿದು. ಪ್ರತಿಪಾದ್ಯವು (ಪ್ರಮೇಯವು) ಸಿದ್ಧವಾದುದಾದರೆ ಅದರ ಬಲದಿಂದ ಶಬ್ದಕ್ಕೆ ಗೌಣತೆಯನ್ನು ಹೇಗೋ ಅನುಸರಿಸತಕ್ಕದ್ದು ಆದರೆ ಈ ಸೂತ್ರಕ್ಕೆ ಪರರು ತೋರಿಸಿದ ಈ ಅರ್ಥವು (ಪ್ರತಿಪಾದ್ಯವು) ಪ್ರಮಾಣಸಿದ್ಧವಲ್ಲ ಏಕೆಂದರೆ ಬ್ರಹ್ಮವು ಜಗತ್ತಿನ ಉಪಾದಾನ ಕಾರಣವೆಂಬ ಸಂಗತಿಯನ್ನು ಹಿಂದಿನ ಅಧಿಕರಣದಲ್ಲಿ ಸೂತ್ರಕಾರರು ಹೇಳಿಲ್ಲವಾದುದರಿಂದ "ಅನುಕ್ತೋಪಾಲಂಭ"ವೆಂಬ ದೋಷವು ಬರುತ್ತದೆ "ಜಗತ್ತು ಬ್ರಹ್ಮನ ಶರೀರವೆಂಬ ಸಂಗತಿಯು ಅಂತರ್ಯಾಮ್ಯಧಿಕರಣದಲ್ಲಿ ಪ್ರಸಕ್ತವಾದರೂ ಅದು " ಸಂಭೋಗಪ್ರಾಪ್ತಿರಿತಿ " ಎಂಬ ಸೂತ್ರದಿಂದಲೇ ಪರಿಹರಿಸಲ್ಪಟ್ಟಿದೆ " ಅಲ್ಲಿ ಜೀವವೆಂಬ ಶರೀರದಲ್ಲಿರುವುದರಿಂದ ಪ್ರಸಕ್ತವಾದ

— ವಿಶೇಷಾರ್ಥಪ್ರದೀಪಿಕಾ —

ತ್ವವೆಂಬ ಅರ್ಥವನ್ನು ಹೇಳುವುದು) ದೋಷವು ''ತತ್ರ ತತ್ರ" - ''ಮುಕ್ತೋಪಸೃಪ್ಯವ್ಯಪದೇಶಾತ್, ಅಪೀತೌ ತದ್ವತ್ಪ್ರಸಂಗಾದಸಮಂಜಸಂ'' ಇತ್ಯಾದಿ ಸೂತ್ರಗಳಲ್ಲಿ ಇಲ್ಲಿ ''ಮುಕ್ತೋಪಸೃಪ್ಯತ್ವವ್ಯಪದೇಶಾತ್, ಅಪೀತೌ ತದ್ವತ್ತ್ವ ಪ್ರಸಾಂಗಾದಸಮಂಜಸಂ" ಎಂಬುದಾಗಿ ಭಾವಪ್ರಧಾನವೆಂಬುದಾಗಿ ವ್ಯಾಖ್ಯಾನಿಸಿದುದುಂಟು, ಹೀಗೆ ಅರ್ಥ

"ಅನುಕ್ತತ್ವೇನ'' – ಪ್ರಕೃತ್ಯಧಿಕರಣಕ್ಕೆ ಬ್ರಹ್ಮನ ಜಗದುಪಾದಾನ ಕಾರಣತ್ವ ಪರತ್ವವಿಲ್ಲವೆಂಬುದನ್ನು ಅಲ್ಲಿಯೇ ಸಮರ್ಥಿಸಿದೆ ಆದುದರಿಂದ; ಹೀಗೆ ಇಲ್ಲಿಯ ಭಾವ

ರಾಮಾನುಜೀಯರ ಮತದ ಮೇಲಿಯೂ ದೋಷವನ್ನು ''ಜಚ್ಛರೀರ ತ್ವಸ್ಯ" ಇತ್ಯಾದಿ ವಚನದಿಂದ ಹೇಳುತ್ತಾರೆ

भोक्तृत्वमपास्तम् । अत्र तु जगच्छरीरत्वेनेति चेन्न । पूर्वोत्तरपक्ष-योर्न्यायाविशेषे सूत्रारम्भानुपपत्तेः । अतो निर्निमित्तः शाब्ददोषोऽपि नानुसरणार्ह इति। यद्वैतदर्थप्रतिपादनाय कथं चेत्याद्युत्तरवाक्यमत्रापि

— ಪದಾರ್ಥದೀಪಿಕಾ —

ಸುಖದುಃಖ ಭೋಕ್ತೃತ್ವವು ನಿರಾಕರಿಸಲ್ಪಟ್ಟಿದೆ ಆದರೆ ಇಲ್ಲಿ ಮಾತ್ರ ಜಗತ್ತೆಂಬ ಶರೀರದಲ್ಲಿರುವುದರಿಂದ ಸಂಭೋಗವು ನಿರಾಕರಿಸಲ್ಪಡುತ್ತದೆ" ಹೀಗೆ ಹೇಳುವುದು ಸರಿಯಲ್ಲ ಏಕೆಂದರೆ ಪೂರ್ವಪಕ್ಷ ಉತ್ತರ ಪಕ್ಷಗಳೆರಡರಲ್ಲೂ ಒಂದೇ (ಸಮಾನ) ನ್ಯಾಯವಿದ್ದರೆ ಯುಕ್ತಿ ಭೇದವಿಲ್ಲದಿದ್ದರೆ ಸೂತ್ರಾರಂಭವೇ ಯುಕ್ತವಾಗುವುದಿಲ್ಲ ಆದುದರಿಂದ, ನಿಮಿತ್ತವಿಲ್ಲದೆಯೇ ಶಬ್ದದೋಷವನ್ನು ಅನುಸರಿಸತಕ್ಕದ್ದಲ್ಲ" ಹೀಗೆ, ಅಥವಾ ಈ ಅರ್ಥವನ್ನು ಪ್ರತಿಪಾದಿಸಲು, "ಕಥಂ ಚ" ಇತ್ಯಾದಿಯಾದ ಮುಂದಿನ ವಾಕ್ಯವನ್ನು ಇಲ್ಲಿಯೂ ಯೋಜನ ಮಾಡಿ

— ವಿಶೇಷಾರ್ಥಪ್ರದೀಪಿಕಾ —

"ಜೀವಶರೀರಗತಸ್ಯ" -- ಶರೀರಾರಾಂತರದಲ್ಲಿ ಇರುವುದುಮಾತ್ರದಿಂದ ಪ್ರಸಕ್ತವಾದ ಭೋಕ್ತೃತ್ವದ ಆಶಂಕೆಯನ್ನು ಸಂಭೋಗಸೂತ್ರದಲ್ಲಿ ನಿರಾಕರಿಸ ಲಾಗಿದೆ ಆದರೆ ಇಲ್ಲಿ ಶರೀರದ ಸ್ವಾಮಿಯಾದ ಕಾರಣದಿಂದ ಪ್ರಸಕ್ತವಾದ ಭೋಕ್ತೃತ್ವವನ್ನು ನಿರಾಸಮಾಡಲಾಗುವುದು, ಹೀಗೆ ಭೇದವನ್ನು ತಿಳಿಯಬೇಕು

"ನ್ಯಾಯಾವಿಶೇಷೇ" – ಸಂಭೋಗಾಧಿಕರಣದಲ್ಲಿ "ಶರೀರದಲ್ಲಿ ಇರುವುದೇ ಸುಖದುಃಖಕಾರಣವಲ್ಲ ಆದರೆ ಪುಣ್ಯಪಾಪ ರೂಪಕರ್ಮವಶವಾಗಿರುವುದು ಸುಖದುಃಖಕಾರಣವು ಮತ್ತು ಅಪಹತಪಾಪ್ಮನಾದವನಿಗೆ (ಪಾಪಗಳನ್ನೆಲ್ಲ ಕಳೆದು ಕೊಂಡವನಿಗೆ ಕಳೆಯುವವನಿಗೆ) ಇಂಥ ಪುಣ್ಯಪಾಪರೂಪ ಕರ್ಮವಶತ್ವವು ಸಂಭವಿಸಲಾರದು" ಎಂಬುದಾಗಿ ಹೇಳಲಾಗಿದೆ ಅದರಂತೆ ಈ ಅಧಿಕರಣ ದಲ್ಲಿ "ಜೀವನಿಗೆ ಶರೀರಧಾತು ವೈಷಮ್ಯಮೂಲಕವಾಗಿ ಸುಖದುಃಖಭೋಕ್ತೃ ತ್ವವು ಶರೀರತ್ವಕೃತವಲ್ಲ ಆದರೆ ಪುಣ್ಯಪಾಪರೂಪಕರ್ಮಕೃತವಾದುದು, ಪಾಪಗಳನ್ನು ಪರಿಹರಿಸಿದ ಪರಮಾತ್ಮನಿಗೆ ಸ್ಥೂಲ ಸೂಕ್ಷ್ಮರೂಪವಾದ ಸಮಸ್ತ ಜಗತ್ತೇ ಶರೀರವಾಗಿದ್ದರೂ ಕರ್ಮಬಂಧದ ಗಂಧವೇ ಇಲ್ಲವೆಂದು ಹೇಳಲಾ ಗುತ್ತದೆ- ಆದುದರಿಂದ ಎರಡೂ ಅಧಿಕರಣಗಳಲ್ಲಿ ನ್ಯಾಯವು (ಯುಕ್ತಿಯು) ಸಮಾನವಾಗಿದೆಯೆಂದು ತಿಳಿಯಬೇಕು ಎರಡೂ ಅಧಿಕರಣಗಳಲ್ಲಿ "ಶರೀರ ದೊಳಗಿರುವುದು" ಪೂರ್ವಪಕ್ಷಯುಕ್ತಿಯು ಐಶ್ವರ್ಯವಿರುವುದು (ಅದರಿಂದ ದುಃಖಭೋಗ ಪರಿಹಾರವು) ಸಿದ್ಧಾಂತನ್ಯಾಯ

संयोज्य व्याख्येयमित्युक्त एव सूत्रार्थ इति ॥ २-१-५ ॥

ॐ तदनन्यत्वमारम्भणशब्दादिभ्यः ॐ ॥ प्राक् प्रमाणमूलत्व-तत्संवादित्वाभ्यां प्रबलया युक्त्योक्तार्थे विरोधो निरस्तः । बाहुल्य-लक्षणबलवद्युक्तिविरोधपरिहारायेदमधिकरणमारभ्यते । तदिदं ब्रह्म-

— ಪದಾರ್ಥದೀಪಿಕಾ —

ವ್ಯಾಖ್ಯಾನಿಸತಕ್ಕದ್ದು ಆದುದರಿಂದ ಅನುವ್ಯಾಖ್ಯಾನದಲ್ಲಿ ಹೇಳಿದುದೇ ಸೂತ್ರದ ಸರಿಯಾದ ಅರ್ಥವು ಹೀಗೆ ೨।೧।೫।

ಹಿಂದೆ, ಪ್ರಮಾಣಮೂಲಕತ್ವವಿದ್ದುದರಿಂದ ಹಾಗು ಪ್ರಮಾಣದ ಸಂವಾದಿಯಾದುದರಿಂದ ಪ್ರಬಲವಾದ ಯುಕ್ತಿಯಿಂದ ವಿರೋಧವು, ಹಿಂದೆ ಹೇಳಲ್ಪಟ್ಟ ಅರ್ಥದ ಬಗ್ಗೆ ಪರಿಹರಿಸಲ್ಪಟ್ಟಿತು ಬಾಹುಲ್ಯ (ಬಹುಸಂಖ್ಯೆಯುಳ್ಳದ್ದಾಗಿರುವುದು) ವೆಂಬ ಬಲವುಳ್ಳ ಯುಕ್ತಿಯಿಂದ ಬರುವ ವಿರೋಧವನ್ನು ಪರಿಹರಿಸಲು ಈ ಅಧಿಕರಣವು ಪ್ರಾರಂಭಿಸಲ್ಪಡುತ್ತದೆ

— ವಿಶೇಷಾರ್ಥಪ್ರದೀಪಿಕಾ —

"ಏತದರ್ಥಪ್ರತಿಪಾದನಾಯ"–ಅನುಕ್ತೋಪಾಲಂಭಪ್ರಸಂಗದ ಉಪಪಾದನಕ್ಕಾಗಿ, ಎಂದು ಅರ್ಥ ಅಥವಾ–"ಬ್ರಹ್ಮನ ಜಗದುಪಾದಾನತ್ವವು ಈ ಅಧಿಕರಣದ ಪ್ರತಿಪಾದ್ಯವೆಂದು ವ್ಯವಸ್ಥಿತವಲ್ಲ" ಎಂಬ ಸಂಗತಿಯನ್ನು ಪ್ರತಿಪಾದಿಸುವುದಕ್ಕಾಗಿ, ಎಂದು ಅರ್ಥ "ಸಂಯೋಜ್ಯವ್ಯಾಖ್ಯೇಯಂ"–ಜಗತಃ ಅವಿಕಾರಿತ್ವೇ ಸಾಧಿತೇ(ಉಕ್ತನ್ಯಾಯೇನ) ಕಥಂ ಚ ತದನನ್ಯತಾ ಜಗತಃ ಪ್ರತಿಪಾದ್ಯಾನ್ಯಾತ್? (ಜಗತ್ತು ಬ್ರಹ್ಮವಿಕಾರವಲ್ಲವೆಂಬುದನ್ನು ಹಿಂದಿನ ಯುಕ್ತಿಗಳಿಂದ ಸಾಧಿಸಿದ ಮೇಲೆ ಜಗತ್ತಿಗೆ ಬ್ರಹ್ಮಶರೀರವೆಂಬುದು ಹೇಗೆ ಪ್ರತಿಪಾದಿಸಲ್ಪಡಲು ಅರ್ಹವಾದೀತು?) ಹೀಗೆ ಯೋಜಿಸಿ ವ್ಯಾಖ್ಯಾನಿಸಬೇಕು ಆದುದರಿಂದ' ಪ್ರತಿಪಾದ್ಯಪ್ರಮೇಯದ ವ್ಯವಸ್ಥೆಯು ಇಲ್ಲವಾದುದರಿಂದ, ಭಾವಪ್ರಧಾನತ್ವ ಮುಂತಾದ ರೂಪವಾದ ಶಬ್ದಗೌಣತ್ವವನ್ನು ಅನುಸರಿಸತಕ್ಕದ್ದಲ್ಲವೆಂಬ ಅರ್ಥವು ಈಗ ಮೂಲದಿಂದಲೇ ದೊರೆಯುವುವೆಂದು ತಿಳಿಯಬೇಕು ೨–೧–೫

ಪೂರ್ವೋತ್ತರ ಅಧಿಕರಣಗಳ ಉಪಾಧಿಗಳಿಂದ ಬೇರೆಯಾದ ಅಧಿಕರಣದ ಉಪಾಧಿಯನ್ನು "ಪ್ರಾಕ್" ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ "ಪ್ರಮಾಣಮೂಲತ್ವ'' ವೆಂದರೆ "ಪ್ರತ್ಯಕ್ಷದಿಂದ ನಿರ್ಣಯಿಸಲ್ಪಟ್ಟ ವ್ಯಾಪ್ತಿಉಳ್ಳದ್ದಾಗಿರುವುದು, ಹಾಗೂ ಶ್ರುತಿಸಿದ್ಧವಾಗಿರುವುದು'' ಎಂದು ಅರ್ಥ "ತತ್ಸಂವಾದಿತ್ವ" ವೆಂದರೆ "ಶ್ರುತಿ ಸಂವಾದಿಯಾಗಿರುವುದು'' ಎಂದು ಅರ್ಥ.

परिणामवादी व्याचष्टे । अनन्तराधिकरणे भोग्यवर्गस्य परिणामतः सिद्धप्रातिस्विकरूपभेदानपह्नवेन लोकसिद्धं कारणाभेदमङ्गीकृत्य साङ्ख्यसिद्धान्तेन शास्त्रतो भोक्तृवर्गस्य स्वाभाविकरूपब्रह्माविभागे भोग्यस्यापि ब्रह्मैक्यवद्भोक्तृत्वापत्तिमाशङ्क्यानैकान्तिकत्वेन निरासो विहितः । सम्प्रति वैशेषिकादिमतेन स्वरूपकार्यव्यपदेशादिभेदेन

— ಪದಾರ್ಥದೀಪಿಕಾ —

ಈ ಸೂತ್ರವನ್ನು ಬ್ರಹ್ಮಪರಿಣಾಮವಾದಿಯು ಹೀಗೆ ವ್ಯಾಖ್ಯಾನಿಸುತ್ತಾನೆ. ಇದರ ಹಿಂದಿನ ಅಧಿಕರಣದಲ್ಲಿ- "ಭೋಗ್ಯವರ್ಗಕ್ಕೆ ಪರಿಣಾಮದಿಂದ ಸಿದ್ಧವಾದ ಪ್ರಾತಿಸ್ವಿಕ (ಬೇರೆಬೇರೆಯಾದ) ರೂಪಭೇದವನ್ನು ಅಲ್ಲಗಳೆಯದೆ ಲೋಕಸಿದ್ಧವಾದ 'ಕಾರಣದಿಂದ ಅಭೇದ" ವನ್ನು ಅಂಗೀಕರಿಸಿ, "ಶಾಸ್ತ್ರದಿಂದ ಭೋಕ್ತೃವರ್ಗದ, ಸ್ವಾಭಾವಿಕವಾದ ರೂಪಕ್ಕೆ ಬ್ರಹ್ಮಾಭೇದವಿದ್ದ ಪಕ್ಷದಲ್ಲಿ ಭೋಗ್ಯವಸ್ತುವಸ್ತುವಿಗೂ ಬ್ರಹ್ಮೈಕ್ಯವುಳ್ಳ ಭೋಕ್ತೃತ್ವ ಬರಲೆಂಬುದಾಗಿ ಆಪತ್ತಿಯನ್ನು ಸಾಂಖ್ಯ ಮತದಿಂದ ಆಶಂಕಿಸಿ, ಅನೈಕಾಂತಿಕತ್ವವೆಂಬ ಯುಕ್ತಿಯಿಂದ ಆ ಆಪತ್ತಿ ಆಶಂಕೆಗಳ ನಿರಾಕರಣವು" ಹೇಳಲ್ಪಟ್ಟಿತು ಈಗ, ವೈಶೇಷಿಕಾದಿಗಳ

— ವಿಶೇಷಾರ್ಥಪ್ರದೀಪಿಕಾ —

ಅಪವ್ಯಾಖ್ಯಾನದ ನಿರಾಕರಣಪರವಾಗಿ ಉತ್ತರಭಾಷ್ಯವನ್ನು (ಮುಂದಿನ ಅನುವ್ಯಾಖ್ಯಾನವನ್ನು) ಯೋಜಿಸಲು, "ತದಿದಂ" ಇತ್ಯಾದಿ ವಾಕ್ಯಗಳಿಂದ, ಪರರ ವ್ಯಾಖ್ಯಾನವನ್ನು ಅನುವಾದಮಾಡುತ್ತಾರೆ

"ಅನಂತರಾಧಿಕರಣೇ" – ಅವ್ಯವಹಿತ ಪೂರ್ವದಲ್ಲಿರುವ ಅಧಿಕರಣದಲ್ಲಿ (ಭೋಕ್ತ್ರಾಪತ್ಯಧಿಕರಣದಲ್ಲಿ) "ಭೋಗ್ಯವರ್ಗಸ್ಯ" ಎಂಬುದಕ್ಕೆ "ಲೋಕಸಿದ್ಧಕಾರಣಾಭೇದಮಂಗೀಕೃತ್ಯ" ಎಂಬ ಪದದೊಡನೆ ಅನ್ವಯವಿದೆ ಮೃತ್ತಿಕೆ ಘಟಾದಿಗಳಲ್ಲಿ ಅಭೇದವು ಲೋಕಸಿದ್ಧವಾದುದರಿಂದ "ಲೋಕಸಿದ್ಧ" ವೆಂಬುದಾಗಿ ಹೇಳಿದ್ದಾರೆ "ಸಾಂಖ್ಯಸಿದ್ಧಾಂತೇನ" "ಆಶಂಕ್ಯ" ಎಂಬಲ್ಲಿ ಅನ್ವಯವಿದೆ. "ಶಾಸ್ತ್ರತಃ" – ತತ್ತ್ವಮಸಿ" ಈ ಮುಂತಾದ ವೇದರೂಪಶಾಸ್ತ್ರದಿಂದ, ಹೀಗೆ ಅರ್ಥ 'ಬ್ರಹ್ಮೈಕ್ಯವತ್" ಎಂಬುದು ಮತುಪ್ ಅರ್ಥದಲ್ಲಿದೆ. ಭೋಗ್ಯವರ್ಗಕ್ಕೆ ಕಾರಣವಾದ ಬ್ರಹ್ಮನಿಂದ ಅಭೇದವಿದ್ದರೆ, ಆಬ್ರಹ್ಮನಿಂದ ಅಭಿನ್ನವಾದ ಭೋಕ್ತೃವಿನ ಸ್ವರೂಪವು (ಅವನೊಡನೆ ಐಕ್ಯವು–ಭೋಕ್ತೃತ್ವವು) ಬರುವುದು ಅವಶ್ಯಕವಾದುದು ಹೀಗೆ ಭಾವ "ಅನೈಕಾಂತಿಕತ್ವೇನ"– ಘೇನ

कार्यस्य कारणात्मकत्वासिद्ध्या प्रपञ्चस्य ब्रह्माद्वैतमाक्षिप्य समाधीयते । तथा हि । तदनन्यत्वं तेन ब्रह्मणाऽनन्यत्वं कार्यस्य । कुतः । आरम्भणशब्दादिभ्यः । यथा सोम्यैकेन मृत्पिण्डेन सर्वं मृण्मयं

— ಪದಾರ್ಥದೀಪಿಕಾ —

ಮತದಿಂದ, ಸ್ವರೂಪ, ಕಾರ್ಯ, ವ್ಯಪದೇಶ ಇತ್ಯಾದಿಗಳ (ಹೆಸರು) ಭೇದಗಳಿಂದ, ಕಾರ್ಯಕ್ಕೆ ಕಾರಣಾ ಭೇದವು ಇಲ್ಲವಾಗುವುದರಿಂದ ಪ್ರಪಂಚಕ್ಕೆ ಬ್ರಹ್ಮಾಭೇದ ವಿಲ್ಲವೆಂಬುದಾಗಿ ಆಕ್ಷೇಪವನ್ನು ತೋರಿಸಿ ಅದರ ಸಮಾಧಾನವನ್ನು ಹೀಗೆ ಹೇಳ ಲಾಗುತ್ತದೆ— "ತದನನ್ಯತ್ವಂ"–ತೇನ– ಆ ಬ್ರಹ್ಮನಿಂದ. "ಅನನ್ಯತ್ವಂ"-ಕಾರ್ಯ ವೆನಿಸಿದ ಪ್ರಪಂಚದಿಂದ ಅಭೇದವು, ಏಕೆ ? 'ಆರಂಭಣಶಬ್ದಾದಿಭ್ಯಃ"– ಯಥಾ "ಸೋಮ್ಯೇಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾದ್ ವಾಚಾ

— ವಿಶೇಷಾರ್ಥಪ್ರದೀಪಿಕಾ —

(ಬುರುಗು) ತರಂಗಗಳಿಗೆ ಒಂದೇ ಸಮುದ್ರವೇ ಕಾರಣವಾಗಿದ್ದರೂ ಪರಸ್ಪರ ಸಾಂಕರ್ಯವು ಬರಬೇಕಾದುದರಿಂದ ಪರಸ್ಪರ ಐಕ್ಯವಿಲ್ಲವಾದುದರಿಂದ ಅನೈಕಾಂ ತಿಕವು (ಕಾರಣಾಭೇದವಿದ್ದಲ್ಲಿ ಪರಸ್ಪರ ಅಭೇದವೆಂಬ ನಿಯಮಕ್ಕೆ ವ್ಯಭಿಚಾ ರವು) ಬರುವುದರಿಂದ, ಹೀಗೆ ಅರ್ಥತಿಳಿಯಬೇಕು

"ವೈಶೇಷಿಕಾದಿ ಮತೇನ' – ದೂಷಣದ ಸಾಂಕರ್ಯಕ್ಕಾಗಿ "ಸ್ವರೂಪ" ಎಂಬುದಾಗಿ ಅನುವಾದ ಮಾಡಲಾಗಿದೆ "ಸ್ವರೂಪಕಾರ್ಯವ್ಯಪದೇಶಭೇ ದೇನ"— ಸ್ವರೂಪಭೇದ, ಕಾರ್ಯಭೇದ, ವ್ಯವದೇಶಭೇದ, ಈ ಮುಂದಾದು ದರಿಂದ, ಹೀಗೆ ಅರ್ಥ "ಆದಿ" ಶಬ್ದದಿಂದ, ಆಕಾರಭೇದ, ಸಂಖ್ಯಾಭೇದ ಮುಂತಾದುದನ್ನು ಪರಿಗ್ರಹಿಸಬೇಕು ತಂತುತ್ವ ಪಟತ್ವ ಮುಂತಾದ ರೂಪವಾದ ಸ್ವರೂಪದಲ್ಲಿ ಭೇದವಿರುವುದು, ಜಲಾಹರಣ ಮುಂತಾದರೂಪವಾದ ಕಾರ್ಯ ಭೇದವಿರುವುದು, ಶೀತನಿವಾರಣ ಮುಂತಾದ ಕಾರ್ಯಭೇದ ವಿರುವುದು, "ಇವು ತಂತುಗಳು ಇದು ಪಟವು" ಈ ಮುಂತಾದ ವ್ಯವಹಾರ ಭೇದವಿರುವುದು, ತಂತು ಪಟಗಳಲ್ಲಿ ಆಕಾರಭೇದವಿರುವುದು, ಹಾಗು ಇವು ತಂತುಗಳೆಂಬುದಾಗಿ ಬಹುತ್ವವೂ ಇದು ಪಟವೆಂಬುದಾಗಿ ಏಕತ್ವವೂ ಇರುವದರಿಂದ ಸಂಖ್ಯಾಭೇದವಿರುವುದು, ಈ ಯುಕ್ತಿಗಳಿಂದ ಹೀಗೆ ಇಲ್ಲಿ ಅರ್ಥ

''ತದನನ್ಯತ್ವಂ" ಎಂಬುದಾಗಿರುವ ಪ್ರತಿಜ್ಞೆಯನ್ನು "ತೇನ" ಇತ್ಯಾದಿ ವಾಕ್ಯದಿಂದ ವಿವರಿಸುತ್ತಾರೆ. ಹಿಂದೆ ಹೇಳಿದ ಪ್ರತಿಜ್ಞೆಯ ಬಗ್ಗೆ ತಿಳಿಯಬೇಕಾ ಗಿರುವ ಹೇತು (ಯುಕ್ತಿ) ವಿಷಯಕವಾದ ಸೂತ್ರಭಾಗವನ್ನು "ಆರಂಭಣಶಬ್ದಾ

विज्ञातं स्याद्वाचारम्भणं विकारो नामधेयं मृत्तिकेत्येव सत्यमित्यादि शब्दात् । आदिग्रहणादैतदात्म्यमिदं सर्वं यदयमात्मा । सर्वं खल्विदं ब्रह्मेत्यादितादात्म्यावेदकश्रुतिपरिग्रह इति । विवर्तवादी तु व्याख्याति । अभ्युपगम्य चेमं व्यावहारिकं भोक्तृभोग्यलक्षणं विभागं स्याल्लोक-

— ಪದಾರ್ಥದೀಪಿಕಾ —

ರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" ಇತ್ಯಾದಿ ಶಬ್ದ ಗಳಿರುವುದರಿಂದ " ಆದಿ " ಶಬ್ದ ಗ್ರಹಣವಿರುವುದರಿಂದ, " ಐತದಾತ್ಮ್ಯಮಿದಂ ಸರ್ವಂ ಯದಯಮಾತ್ಮಾ, ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿಯಾದ ತಾದಾ ತ್ಮ್ಯವನ್ನು ತಿಳಿಸುವ ಶ್ರುತಿಗಳನ್ನು ಪರಿಗ್ರಹಿಸಬೇಕು " ಹೀಗ ( ಅವರ ವ್ಯಾಖ್ಯಾನವು )

ಆದರೆ ವಿವರ್ತವಾದಿಯು " ಈ ವ್ಯಾವಹಾರಿಕವಾದ ಭೋಕ್ತೃ, ಭೋಗ್ಯ, ರೂಪ ವಿಭಾಗ (ಭೇದ) ವನ್ನು ಅಂಗೀಕರಿಸಿ "ಸ್ಯಾಲ್ಲೋಕವತ್" ಎಂಬುದಾಗಿ

— ವಿಶೇಷಾರ್ಥಪ್ರದೀಪಿಕಾ —

ಭ್ಯಾಂ'' ಎಂಬುದಾಗಿ ಕೆಳಗಿಳಿಸುತ್ತಾರೆ ಆರಂಭಣಶಬ್ದದ ಅರ್ಥವನ್ನು "ಯಥಾ" ಇತ್ಯಾದಿವಾಕ್ಯದಿಂದ ವಿವರಿಸುತ್ತಾರೆ "ಇತ್ಯಾದಿಶಬ್ದಾತ್"— ವಾಚಾರಂಭಣವಾಕ್ಯದಲ್ಲಿ "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿ ಕೇತ್ಯೇವ ಸತ್ಯಂ" ಎಂಬ ವಾಕ್ಯದಲ್ಲಿ 'ವಿಕಾರೋ ಘಟಾದಿಃ ಆರಂಭಣಂ ಉಪಾದಾನಂ" ಎಂಬುದಾಗಿ ಅಭೇದವನ್ನು ಹೇಳಿರುವುದರಿಂದ, ಹೀಗೆ ಇಲ್ಲಿ ಅರ್ಥ.

"ವ್ಯಾಖ್ಯಾತಿ" ಇದರ ಮುಂದೆ "ಅನಂತರಾಧಿಕರಣೇ'' ಎಂಬುದನ್ನು ಅನ್ವ ಯಿಸಬೇಕು "ಸ್ಯಾಲ್ಲೋಕವತ್"– ಫೇನ ತರಂಗಗಳ ಹಾಗೆ, ಎಂದು ಅರ್ಥ ಹಿಂದಿನ ಅಧಿಕರಣದಲ್ಲಿಯೂ ಸಹ ಭೇದವನ್ನು ಗ್ರಹಿಸುವ ಪ್ರಮಾಣದಿಂದ ಅವಿರೋಧವನ್ನು ಉಪಪಾದಿಸುವುದರಿಂದ ಗತಾರ್ಥವಾಗಿದೆಯೆಂಬ ಆಶಂಕೆ ಯನ್ನು ಕಳೆಯಲು "ಅಭ್ಯುಪಗಮ್ಯ" ಎಂಬುದಾಗಿ ಹೇಳಿದ್ದಾರೆ ಭೇದಗ್ರಾಹ ಕಪ್ರಮಾಣಗಳ ಪ್ರಾಮಾಣ್ಯವನ್ನು ಅಂಗೀಕರಿಸಿ, ರೂಪಭೇದದಿಂದ ಭೇದಾ ಭೇದಗಳಲ್ಲಿಯ ವಿರೋಧವನ್ನು ಹಿಂದಿನ ಅಧಿಕರಣದಲ್ಲಿ ಪರಿಹರಿಸಿದ್ದಾಯಿತು. ಈಗ ಅಂಗೀಕರಿಸಲ್ಪಟ್ಟ ಪ್ರಾಮಾಣ್ಯವು ತತ್ತ್ವಾವೇದಕವಲ್ಲವೆಂದು ಹೇಳಿ ವ್ಯವಹಾರಿಕವೆಂಬುದಾಗಿ ನಿರ್ಣಯಿಸಲಾಗುತ್ತದೆ ಆದುದರಿಂದ ಎರಡೂ ಅಧಿಕರಣಗಳ ವಿಷಯಗಳು ಬೇರೆಬೇರೆಯಾಗಿರುವುದರಿಂದ ಪುನರುಕ್ತಿದೋಷಕ್ಕೆ ಅವಕಾಶವಿಲ್ಲವೆಂದು ಭಾವವು

## ॥ ॐ तदनन्यत्वमारम्भणशब्दादिभ्यः ॐ ॥

कथं च तदनन्यता ॥
जगतस्तद्विकार(रि)त्व उक्तन्यायेन साधिते ॥

वदिति परिहारोऽभिहितः । न त्वयं विभागः पारमार्थिकोऽस्ति । यस्मात्तदनन्यत्वं कारणाद्ब्रह्मणः कार्यस्याकाशादेः परमार्थतोऽनन्यत्वं व्यतिरेकेणाभावोऽवगम्यते । कुतः । आरम्भणशब्दादिभ्य इति ।

तत्राद्यं व्याख्यानं तावन्निराकरोति ॥ कथं चेति ॥ कथमित्याक्षेप । चशब्दः पूर्वसूत्रापव्याख्यानाक्षेपेणास्य समुच्चयार्थः । जगत इति वक्ष्यमाणमत्रापि सम्बध्यते । अत्र प्रतिपाद्या स्यादिति शेषः ।

ವಿಶ್ವಕ್ಕೆ ಬ್ರಹ್ಮವಿಕಾರತೆಯಿಲ್ಲವೆಂಬುದು ಹಿಂದೆ "ಚ ಪ್ರಕೃತಿಶಬ್ದೇನ" ಇತ್ಯಾದಿ ವಚನಗಳಿಂದ ಹೇಳಿದ ಯುಕ್ತಿಗಳಿಂದ ಸಾಧಿಸಲ್ಪಟ್ಟಿರಲು, ಬ್ರಹ್ಮನಿಂದ ಅಭೇದವು ಹೇಗೆ ಈ ಸೂತ್ರದಲ್ಲಿ ಪ್ರತಿಪಾದಿಸಲ್ಪಡುವಂತಹದಾಗುತ್ತದೆ ?

— ಪದಾರ್ಥದೀಪಿಕಾ —

ಪರಿಹಾರವು ಹೇಳಲ್ಪಟ್ಟಿತು ಆದರೆ ಈ ವಿಭಾಗವು ಪಾರಮಾರ್ಥಿಕವಾದುದಲ್ಲ ಏಕೆ – "ತದನನ್ಯತ್ವಂ"– ಕಾರಣವಾದ ಬ್ರಹ್ಮನಿಂದ ಆಕಾಶಾದಿ ಕಾರ್ಯಗಳಿಗೆ ಪಾರಮಾರ್ಥಿಕವಾದ "ಅನನ್ಯತ್ವಂ"=ಬ್ರಹ್ಮನಿಂದ ವ್ಯತಿರಿಕ್ತವಾಗಿ ಇಲ್ಲದಿರುವುದೆಂಬ ಅಭೇದವು, ಇದೆಯೆಂದು ತಿಳಿದು ಬರುತ್ತದೆ, ಏಕೆ? ಆರಂಭಣ ಶಬ್ದಾದಿಗಳಿರುವುದರಿಂದ" ಹೀಗೆ ವ್ಯಾಖ್ಯಾನಿಸುತ್ತಾನೆ

ಇವೆರಡೂ ವ್ಯಾಖ್ಯಾನಗಳಲ್ಲಿ ಮೊದಲನೆಯ ವ್ಯಾಖ್ಯಾನವನ್ನಂತೂ ಮುಂಚ "ಕಥಂ ಚ" ಇತ್ಯಾದಿ ಅನುವ್ಯಾಖ್ಯಾನದಿಂದ ನಿರಾಕರಿಸುತ್ತಾರೆ "ಕಥಂ" ಎಂಬುದು ಆಕ್ಷೇಪಾರ್ಥದಲ್ಲಿದೆ "ಚ" ಶಬ್ದವು ಹಿಂದಿನ ಸೂತ್ರದ ಅಪವ್ಯಾಖ್ಯಾನದ ಮೇಲಿನ ಆಕ್ಷೇಪದೊಡನೆ ಇದಕ್ಕೆ ಸಮುಚ್ಚಯಾರ್ಥದಲ್ಲಿದ ಮುಂದೆ ಹೇಳಲಾಗುವ "ಜಗತಃ" ಎಂಬ ಪದವು ಇಲ್ಲಿಯೂ ಅನ್ವಯಿಸಲ್ಪಡುತ್ತದೆ "ಅತ್ರ ಪ್ರತಿಪಾದ್ಯಾ ಸ್ಯಾತ್" ಎಂಬುದು ಶೇಷವಾಗಿದೆ

— ವಿಶೇಷಾರ್ಥಪ್ರದೀಪಿಕಾ —

"ಕಥಮಿತ್ಯಾಕ್ಷೇಪೇ" – "ನ ಕಥಮಪಿ" (ಹೇಗೆಯೂ ಇಲ್ಲ) ಎಂಬುದಾಗಿ ಆಕ್ಷೇಪಾರ್ಥದಲ್ಲಿದ ಏಕೆಂದರೆ ಮುಂದೆ ಪರಿಹಾರವಿಲ್ಲವಾದುದರಿಂದ ಪ್ರಶ್ನಾರ್ಥವು ಯುಕ್ತವಾಗದು, ಹೀಗೆ ಭಾವ

अयमाशयः । यो हि ब्रह्मोपादानतां जगतोऽभ्युपगम्यापि तदन्यतां मन्यते सोऽत्र पूर्वपक्षी करणीयः । न च वैशेषिकादिस्त थेति प्राप्त्यभावान्न तदनन्यत्वोक्तेरवसरोऽस्ति । ब्रह्मोपादानतामनङ्गी- कुर्वाणं प्रति तु सैव समर्थनीया । न तु तदनन्यता । तदधीनासिद्धि-

— ಪದಾರ್ಥ ದೀಪಿಕಾ —

ಇಲ್ಲಿಯ ಅಭಿಪ್ರಾಯವು ಇದು— "ಯಾವನು ಜಗತ್ತಿನ ಉಪಾದಾನ ಕಾರಣವು ಬ್ರಹ್ಮನೆಂದು ಒಪ್ಪಿಯೂ ಬ್ರಹ್ಮನಿಂದ ಭೇದವನ್ನು ಬಗೆಯುತ್ತಾನೋ ಅವನನ್ನು ಇಲ್ಲಿ ಪೂರ್ವಪಕ್ಷಿಯನ್ನಾಗಿ ಮಾಡತಕ್ಕದ್ದು ಆದರೆ ವೈಶೇಷಿಕಾದಿಗಳು ಹಾಗ ಒಪ್ಪತಕ್ಕವರಲ್ಲವಾದುದರಿಂದ ಪ್ರಾಪ್ತಿ( ಪ್ರಸಕ್ತಿ )ಯಿಲ್ಲದಿರುವುದರಿಂದ ತದನನ್ಯತ್ವ(ಬ್ರಹ್ಮಾಭಿನ್ನತ್ವ)ವನ್ನು ಹೇಳುವುದಕ್ಕೆ ಅವಕಾಶವಿರುವುದಿಲ್ಲ ಬ್ರಹ್ಮವು ಜಗದುಪಾದಾನವೆಂಬುದನ್ನಂಗೀಕರಿಸದವನನ್ನು ಕುರಿತು ಅದನ್ನೇ ಸಮರ್ಥಿಸ ತಕ್ಕದ್ದು, ಹೊರತು ಬ್ರಹ್ಮಾಭೇದ(ತದನನ್ಯತ್ವ)ವನ್ನು ಸಮರ್ಥಿಸತಕ್ಕದ್ದಲ್ಲ

— ವಿಶೇಷಾರ್ಥಪ್ರದೀಪಿಕಾ —

ಕಾರ್ಯಕ್ಕೆ ಕಾರಣಾಭೇದವು ಸೂತ್ರಪ್ರತಿಪಾದ್ಯವಲ್ಲವೆಂಬ ಸಂಗತಿಯು ಭಾಷ್ಯದಲ್ಲಿ ಹೇಳಲ್ಪಟ್ಟಿಲ್ಲ ಈ ಕಾರಣದಿಂದ ಅದರ ಲಾಭಕ್ಕಾಗಿ ಅವಶ್ಯಕ ಶೇಷವನ್ನು "ಅತ್ರ ಪ್ರತಿಪಾದ್ಯಾಸ್ಯಾತ್" ಎಂಬ ವಾಕ್ಯದಿಂದ ಪೂರೈಸುತ್ತಾರೆ "ಕಥಂ ಚ ತದನನ್ಯತಾ" ಎಂಬ ಮೂಲದಲ್ಲಿ ಆಕ್ಷೇಪಾರ್ಥಕ 'ಕಥಂ' ಶಬ್ದದಿಂದ "ನ ಕಥಂಚಿದಪಿ" (ಯಾವದೇ ರೀತಿಯಿಂದಲೂ) ಎಂಬುದಾಗಿ ಕಾರ್ಯಕ್ಕೆ ಕಾರಣಭೇದವು ಸೂತ್ರಪ್ರತಿಪಾದ್ಯವಲ್ಲವೆಂಬ ಸಂಗತಿಯು ಹೇಳಲ್ಪಟ್ಟಿತು. ಇದು ಹೇಗೆ ?' ಎಂಬುದನ್ನು ತೋರಿಸುತ್ತ, ಪೂರ್ವಪಕ್ಷದ ಅಸಂಭವದ ಕಾರ ಣವನ್ನು "ಅಯಮಾಶಯಃ" ಇತ್ಯಾದಿವಾಕ್ಯಗಳಿಂದ ಹೇಳುತ್ತಾರೆ ವೈಶೇಷಿಕ ರೀತಿಯಿಂದ, ಸ್ವರೂಪಕಾರ್ಯವ್ಯಪದೇಶಭೇದಗಳಿಂದ ಕಾರ್ಯಕ್ಕೆ ಕಾರಣಾ ಭೇದವಿಲ್ಲವೆಂದು ತೋರಿಸಿದ್ದಾಗುವುದರಿಂದ, ಇಲ್ಲಿ ಪೂರ್ವಪಕ್ಷದ ಅಸಂಭವವು ಹೇಗೆ? ಎಂದು ಪ್ರಶ್ನಿಸಿದರೆ, "ಇಲ್ಲಿ ವೈಶೇಷಿಕರು ಪೂರ್ವಪಕ್ಷಿಗಳಾದರೆ ಹಿಂದಿನ ಪೂರ್ವಪಕ್ಷವು ಸಂಭವಿಸೀತು ಆದರೆ ಅವರು ಪೂರ್ವಪಕ್ಷಿಗಳಾಗಲಾ ರರು, ಎಂಬ ಸಂಗತಿಯನ್ನು "ಯೋಹಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ವೈಶೇಷಿಕರನ್ನು ಕುರಿತು ಹೇಳಬೇಕಾದ ಮಾತು ಎಂತಹದಿರಬೇಕೆಂಬುದನ್ನು 'ಬ್ರಹ್ಮೋಪಾದಾನತಾಂ ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

(೧)"ತದಧೀನಸಿದ್ಧಿತ್ವಾದಸ್ಯಾಃ"—ಜಗತ್ತಿಗೆ ಬ್ರಹ್ಮಾಭೇದವು (ತದನನ್ಯ

त्वादस्याः । अथ ब्रह्मोपादानताऽप्यत्र समर्थ्यत इति चेत् । न । तथा सति प्रकृत्यधिकरणवैय्यर्थ्यापत्तेः । प्रकृत्यधिकरणन्यायोपपादितं ब्रह्मोपादानत्वमभ्युपेत्यापि तदन्यता मन्यमानोऽत्र पूर्वपक्षीति चेत् । किमिदं ब्रह्मोपादानत्वं ब्रह्मसमवायित्वं वा ब्रह्मपरिणामत्वं वा यत्परेणाङ्गीकारितम् । नाद्यः कल्पः । तस्यानन्यत्वविरोधात् । समवायस्य निराकरिष्यमाणत्वाच्च । द्वितीये प्रयत्नवैय्यर्थ्यमेव । न हि

— ಪದಾರ್ಥದೀಪಿಕಾ —

ಏಕೆಂದರೆ ಬ್ರಹ್ಮಾಭೇದಸಿದ್ಧಿಯು ಬ್ರಹ್ಮವು ಜಗದುಪಾದಾನಕಾರಣವೆಂಬ ಸಂಗತಿಯು ಅಧೀನವಾಗುತ್ತದೆ

ಇನ್ನು– ಈ ಅಧಿಕರಣದಲ್ಲಿ ಬ್ರಹ್ಮವು ಜಗದುಪಾದಾನಕಾರಣವೆಂಬುದನ್ನೂ ಸಮರ್ಥಿಸಲಾಗುತ್ತದೆಯೆಂದು ಹೇಳುವುದು ಸರಿಯಾದುದಲ್ಲ ಏಕೆಂದರೆ– ಹಾಗಾದಲ್ಲಿ ಪ್ರಕೃತ್ಯಧಿಕರಣವು ವ್ಯರ್ಥವಾಗುತ್ತದೆ ಪ್ರಕೃತ್ಯಧಿಕರಣದ ಯುಕ್ತಿಯಿಂದ ಉಪಪಾದಿಸಲ್ಪಟ್ಟ, ಜಗತ್ತಿಗೆ ಬ್ರಹ್ಮವು ಉಪಾದಾನಕಾರಣವೆಂಬ ಸಂಗತಿಯನ್ನು ಅಂಗೀಕರಿಸಿಯೂ ಬ್ರಹ್ಮಭೇದವನ್ನು ಬಗೆಯುವವನು ಇಲ್ಲಿ ಪೂರ್ವಪಕ್ಷಿಯು, ಹೀಗೆ ಹೇಳುವುದಾದರೆ ಪ್ರಶ್ನೆ– ಬ್ರಹ್ಮವು ಉಪಾದಾನಕಾರಣವೆಂದರೇನು ? ಬ್ರಹ್ಮವು ಸಮವಾಯಿಕಾರಣವೆಂದು ಅರ್ಥವೋ ? ಅಥವಾ ಪ್ರಕೃತ್ಯಧಿಕರಣದಲ್ಲಿ ಪರರು ಒಪ್ಪಿಸಿದ ಬ್ರಹ್ಮವು ಪರಿಣಾಮಿಕಾರಣವೆಂದು ಅರ್ಥವೋ ? ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ ಸಮವಾಯಿಕಾರಣತ್ವವು ಕಾರ್ಯದಿಂದ ಅಭೇದದ ವಿರೋಧಿಯಾಗಿರುತ್ತದೆ ಮತ್ತು ಸಮವಾಯವನ್ನು ನಿರಾಕರಿಸಿದ್ದೂ ಆಗುವುದು ಎರಡನೆಯ ಪಕ್ಷದಲ್ಲಿ ಪ್ರಯತ್ನವು ವ್ಯರ್ಥವಾಗುತ್ತದೆ ಏಕೆಂದರೆ ಯಾವನನ್ನು ಕುರಿತು ಈ ಅಧಿಕರಣವು

— ವಿಶೇಷಾರ್ಥಪ್ರದೀಪಿಕಾ —

ತ್ವವು) ಬ್ರಹ್ಮವು ಉಪಾದಾನಕಾರಣವೆಂಬ ಯುಕ್ತಿಯಿಂದಲೇ ಸಿದ್ಧಿಸುತ್ತದೆ ಏಕೆಂದರೆ ಉಪಾದನತ್ವವು ಸಿದ್ಧಿಸಿದರೆ– ಉಪಾದಾನ–ಉಪಾದೇಯಗಳಲ್ಲಿ ಭೇದವಿಲ್ಲ (ಅಭೇದ)ವೆಂಬ ಸಂಗತಿಯು ಇದು ಸಿದ್ಧಿಸದಿದ್ದರೆ ಅಭೇದವು ಸಿದ್ಧಿಸಲಾರದು, ಹೀಗೆ ಇಲ್ಲಿಯ ಭಾವ.

(೨)"ಅಂಗೀಕಾರಿತಂ" ಇಲ್ಲಿ "ಪ್ರಕೃತ್ಯಧಿಕರಣನ್ಯಾಯದಿಂದ" (ಪ್ರಕೃತ್ಯಧಿಕರಣನ್ಯಾಯೇನ") ಎಂಬುದಾಗಿ ಹಚ್ಚಿಕೊಳ್ಳಬೇಕು

कोऽपि परिणामवादमङ्गीकृत्य कार्यकारणयोरत्यन्तभेदमङ्गीकुरुते । यं प्रतीदमारभ्येतेति ।

यद्वा कथं च तदनन्यता जगतो वक्तुं शक्यते । अनन्यत्वं हि भेदाभावः । अत्यन्ताभेद इति यावत् । भेदाभेदौ च परेणाङ्गीकृतौ । अतस्तादात्म्यमिति वक्तव्यं स्यात् । नैष दोषः । यावता कार्यस्य कारणेनाभेद एव । कारणस्य तु कार्याद्भेद एवेत्येवं भेदाभेदावङ्गीकृताविति चेन्न । यदि ब्रह्म जगतोऽन्यदेव तदा कथं च तदनन्यता जगतः स्यात् । न हि यद्यतोऽत्यन्तभिन्नं तत्तेनात्यन्ताभिन्नमिति सम्भवति । अतिप्रसङ्गादिति ।

## — ಪದಾರ್ಥದೀಪಿಕಾ —

ಆರಂಭಿಸಬೇಕಾಗಿದೆಯೋ, ಯಾವನು ಬ್ರಹ್ಮ ಪರಿಣಾಮವಾದವನ್ನು ಒಪ್ಪಿರುವವನೋ ಅಂಥವನು ಯಾವನೂ ಕಾರ್ಯಕಾರಣಗಳಲ್ಲಿ ಅತ್ಯಂತ ಭೇದವನ್ನು ಒಪ್ಪುವುದಿಲ್ಲ, ಹೀಗೆ

ಅಥವಾ- " ಜಗತ್ತಿಗೆ ಬ್ರಹ್ಮನಿಂದ ಅಭೇದವನ್ನು ( ತದನನ್ಯತ್ವವನ್ನು ) ಹೇಳಲು ಹೇಗೆ ಶಕ್ಯವಾಗುತ್ತದೆ ? ಏಕೆಂದರೆ ಅನನ್ಯತ್ವವೆಂದರೆ ಭೇದದ ಅಭಾವವು ಅಂದರೆ ಅತ್ಯಂತ ಅಭೇದವಂದು ತಾತ್ಪರ್ಯವು ಮತ್ತು ಪರನು ಭೇದಾಭೇದವನ್ನು ಅಂಗೀಕರಿಸಿರುತ್ತಾನ. ಆದುದರಿಂದ, ತಾದಾತ್ಮ್ಯವೆಂದು ಹೇಳಬೇಕಾಗುತ್ತದ ಇನ್ನು- "ಇದು ದೋಷವಲ್ಲ ಏಕೆಂದರೆ "ಕಾರ್ಯಕ್ಕೆ ಕಾರಣದಿಂದ ಅಭೇದವೇ ಇದೆ ಕಾರಣಕ್ಕಾದರೋ ಕಾರ್ಯದಿಂದ ಭೇದವೇ ಇದೆ " ಹೀಗ ಭೇದಾಭೇದವನ್ನು ಅಂಗೀಕರಿಸಲಾಗಿದೆ " ಹೀಗೆ ಹೇಳುವುದು ಸರಿಯಲ್ಲ ಏಕೆಂದರೆ- ಒಂದು ವೇಳೆ ಬ್ರಹ್ಮವು ಜಗತ್ತಿನಿಂದ ಭಿನ್ನವೇ ಆದರೆ ಆಗ ಜಗತ್ತಿಗ ಬ್ರಹ್ಮನಿಂದ ಅಭೇದವು ಹೇಗ ಸಂಭವಿಸುತ್ತದೆ ಏಕೆಂದರೆ– ಒಂದು ವಸ್ತುವಿನಿಂದ ಅತ್ಯಂತ ಭಿನ್ನವಾದುದು ಅದೇ ವಸ್ತುವಿನಿಂದ ಅತ್ಯಂತ ಅಭಿನ್ನವಾಗುವುದು ಶಕ್ಯವಲ್ಲ ಏಕೆಂದರ ಅತಿಪ್ರಸಂಗವು ಬರುತ್ತದೆ " ಹೀಗೆ ಅಭಿಪ್ರಾಯ

## — ವಿಶೇಷಾರ್ಥಪ್ರದೀಪಿಕಾ —

(೩)"ತದನನ್ಯತ್ವಂ" ಎಂಬ ವಚನವು, ಭೇದಾಭೇದಾಂಗೀಕಾರ ಪಕ್ಷದಲ್ಲಿ ಯುಕ್ತವೆನಿಸುವದು; ಹೀಗೆ "ನೈಷದೋಷಃ" ಎಂಬವಾಕ್ಯದಿಂದ ಶಂಕಿಸುತ್ತಾರೆ "ತಾದಾತ್ಮ್ಯಂ" ಎಂಬುದಾಗಿ ಹೇಳಿದ ದೋಷವು ಇಲ್ಲವೆಂದು ಅರ್ಥ

अथवा कथं च तदनन्यता प्रतिज्ञातुं युक्ता । प्रमाणाभावादिति शेषः । ननु चारम्भणशब्दादिभ्य इत्युक्तत्वात्कथं प्रमाणाभाव इति चेत् । अत्र वक्तव्यम् । आरम्भणशब्दस्तावत्किं साक्षाज्जगतो ब्रह्मानन्यत्वमाचक्षीत । उत विकारस्य विकार्यनन्यत्वम् । आद्ये कथं च तदनन्यता जगतोऽस्यार्थः स्यात् । यथा सोम्येति मृत्पिण्डादेः

— ಪದಾರ್ಥದೀಪಿಕಾ —

ಇಲ್ಲವೆ–"ಬ್ರಹ್ಮಾಭೇದವನ್ನು ( ತದನನ್ಯತೆಯನ್ನು ) ಪ್ರತಿಜ್ಞಾರೂಪವಾಗಿ ಸಾರುವುದು ಹೇಗ ಯುಕ್ತವು ? ಏಕೆಂದರ– ಪ್ರಮಾಣ ಇರುವುದಿಲ್ಲ. ಹೀಗೆ ( ಕಥಂ ಚ ತದನನ್ಯತಾ ಪ್ರತಿಜ್ಞಾತುಂ ಯುಕ್ತಾ ಪ್ರಮಾಣಾಭಾವಾತ್ ) ಶೇಷ ವಿದೆಯೆಂದು ತಿಳಿಯಬೇಕು ಇನ್ನು– " ಆರಂಭಣ ಶಬ್ದಾದಿಭ್ಯಃ" ( ಆರಂಭಣ ಮುಂತಾದ ಶ್ರುತಿಗಳಿದ್ದುದರಿಂದ ) ಎಂಬುದಾಗಿ ಹೇಳಿದುದರಿಂದ, ಪ್ರಮಾಣವಿಲ್ಲ ವೆಂಬುದು ಹೇಗೆ ? ಎಂದು ಶಂಕಿಸಿದರೆ- ಇಲ್ಲಿ ಹೇಳತಕ್ಕದ್ದು— " ಆರಂಭಣ " ಶಬ್ದವಾದರೊ ಬ್ರಹ್ಮನಿಂದ ಜಗತ್ತಿಗೆ ಅಭೇದವನ್ನು ಸಾಕ್ಷಾತ್ತಾಗಿ ಹೇಳುವುದೋ ? ಇಲ್ಲವೆ ವಿಕಾರಕ್ಕೆ ವಿಕಾರಿಯಿಂದ ಅಭೇದವನ್ನು ಹೇಳುವದೋ ? ಮೊದಲನೆಯ ಪಕ್ಷದಲ್ಲಿ- " ಈ ಆರಂಭಣಾಶ್ರುತಿಗೆ "ಜಗತ್ತಿಗೆ ಬ್ರಹ್ಮನಿಂದ ಅಭೇದ" ವೆಂಬ ಅರ್ಥವು ಹೇಗೆ ಆಗುತ್ತದೆ ಏಕೆಂದರೆ- 'ಯಥಾ ಸೋಮ್ಯ" ಇತ್ಯಾದಿಯಾಗಿ

— ವಿಶೇಷಾರ್ಥಪ್ರದೀಪಿಕಾ —

"ಅತಿಪ್ರಸಂಗಾತ್"–ಅತ್ಯಂತಭಿನ್ನ ಘಟಪಟಾದಿಗಳಿಗೂ ಅಭೇದವಿರಲೆಂಬ ಪ್ರಸಂಗವು ಬರುವದರಿಂದ, ಹೀಗೆ ಅರ್ಥ

"ಆರಂಭಣ ಶಬ್ದಾದಿಭ್ಯಃ" ಎಂಬ ಸೂತ್ರಖಂಡದಿಂದ ಸೂಚಿತವಾದುದ ರಿಂದ, ಪರರು ಹೇಳಿದ ಆರಂಭಣ ಶಬ್ದರೂಪ ಪ್ರಮಾಣದ ನಿರಾಸಕವಾಗು ವಂತೆ ಈ ಅನುವ್ಯಾಖ್ಯಾನಕ್ಕೇ ಯೋಜನಮಾಡುವುದಕ್ಕೋಸ್ಕರ, ಮೊದಲು, ಜಗತ್ತಿಗೆ ಬ್ರಹ್ಮಾಭೇದ(ತದನನ್ಯತ್ವ)ದ ಪ್ರತಿಜ್ಞೆಯು, ಪ್ರಮಾಣವಿಲ್ಲವಾದುದ ರಿಂದ ಅಯುಕ್ತವೆಂಬ ಅರ್ಥಬರುವಹಾಗೆ ಅನುವ್ಯಾಖ್ಯಾನಕ್ಕೆ ಅರ್ಥವನ್ನು "ಅಥವಾ" ಇತ್ಯಾದಿವಾಕ್ಯಗಳಿಂದ ಹೇಳುತ್ತಾರೆ

"ವಿಕಾರ್ಯನನ್ಯತ್ವಂ" – ವಿಕಾರಿಯೆನಿಸಿದ ಉಪಾದಾನದಿಂದ ಅಭೇದವು "ಆದ್ಯೇ"– ಪ್ರಕೃತ ಘಟಮುಂತಾದುದನ್ನು ವಿಷಯೀಕರಿಸಿದುದರಿಂದ ಆರಂಭಣ ಶಬ್ದವು ಜಗತ್ತನ್ನು ವಿಷಯೀಕರಿಸಿಲ್ಲ ಆದುದರಿಂದ, ಜಗತ್ತಿಗೆ ಬ್ರಹ್ಮಾಭೇ ದವು ಸಿದ್ಧಿಸಲಾರದು, ಹೀಗೆ ಅಭಿಪ್ರಾಯವು

प्रकृतत्वादित्युत्तरम् । द्वितीये भवतु नाम विकारस्य विकार्यनन्यत्वम् । जगतस्तु कथं तदनन्यतेति ।

ननु विकारस्य विकार्यनन्यत्वे तेनोक्ते जगतो ब्रह्मानन्यत्वं सिद्ध्यत्येव । तस्यापि तद्विकारत्वादित्यत आह ॥ जगतस्त्विति । अविकारित्वे ब्रह्मविकारित्वाभावे । उक्तन्यायेन न च प्रकृतीत्यादिनेति शेषः । साधिते सति कथं च तदनन्यतेत्यन्वयः । यद्वा जगत इति पूर्वेणैव सम्बध्यते । अविकारत्वे ब्रह्मण इति शेषः । न विद्यते विकारोऽस्येत्यविकारम् । तस्य भावस्तत्त्वं तस्मिन् । नन्वत्रारम्भण

— ಪದಾರ್ಥದೀಪಿಕಾ —

ಮೃತ್ಪಿಂಡಾದಿಗಳು ಪ್ರಸಕ್ತವಾಗಿರುತ್ತವೆ '' ಎಂಬುದಾಗಿ ಉತ್ತರ ಎರಡನೆಯ ಪಕ್ಷದಲ್ಲಿ ವಿಕಾರಕ್ಕೆ ವಿಕಾರಿಯಿಂದ ಅಭೇದವಿದ್ದರೂ ಜಗತ್ತಿಗ ಬ್ರಹ್ಮಾಭೇದವು ಹೇಗೆ ಸಿದ್ಧಿಸುತ್ತದೆ ?'' ಹೀಗ.

ಇನ್ನು— "ವಿಕಾರಕ್ಕೆ ವಿಕಾರಿಯಿಂದ ಅಭೇದವು ಇದಯೆಂದು ಅವನು ಹೇಳಿದ ಮೇಲೆ ಜಗತ್ತಿಗೆ ಬ್ರಹ್ಮಾಭೇದವು ಸಿದ್ಧಿಯೇ ಸಿದ್ಧಿಸುತ್ತದ ಏಕೆಂದರೆ ಜಗತ್ತೂ ಸಹ ಬ್ರಹ್ಮವಿಕಾರವೇ ಆಗಿರುತ್ತದೆ" ಈ ಆಶಂಕೆಯನ್ನು "ಜಗತಸ್ತು" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ಅವಿಕಾರತ್ವೇ"— ಜಗತ್ತು ಬ್ರಹ್ಮನ ವಿಕಾರವಲ್ಲವಂಬುದು (ಸತಿಸಪ್ತಮಿ) "ಉಕ್ತನ್ಯಾಯೇನ"– ಇದಕ್ಕೆ "ನಚ ಪ್ರಕೃತಿ ಇತ್ಯಾದಿನಾ" ಎಂಬುದು ಶೇಷ, ('ನಚ ಪ್ರಕೃತಿ" ಇತ್ಯಾದಿ ಗ್ರಂಥದಿಂದ ಹೇಳಲ್ಪಟ್ಟಯುಕ್ತಿಯಿಂದ) ವು "ಸಾಧಿತೇ ಸತಿ ಕಥಂ ತದನನ್ಯತಾ'' (ಸಾಧಿಸಲ್ಪಟ್ಟ ಮೇಲೆ, ಬ್ರಹ್ಮಾಭೇದವು ಜಗತ್ತಿಗೆ ಹೇಗೆ) ಎಂಬುದಾಗಿ ಅನ್ವಯವು ಅಥವಾ– 'ಜಗತಃ'' ಎಂಬುದಕ್ಕೆ ಹಿಂದಿನ ಪದ್ಯದೊಡನೆಯೇ ಅನ್ವಯವಿದೆ "ಅವಿಕಾರತ್ವೇ'' ಇಲ್ಲಿ "ಬ್ರಹ್ಮಣಃ'' ಶೇಷವು ವಿಕಾರವು ಈ ಬ್ರಹ್ಮನಿಗೆ ಇಲ್ಲವೆಂಬ ವ್ಯುತ್ಪತ್ತಿಯಿಂದ ಬ್ರಹ್ಮವು 'ಅವಿಕಾರ'' ವೆನಿಸುತ್ತದೆ "ಅವಿಕಾರ'' ದಲ್ಲಿರುವ ಭಾವ (ಧರ್ಮ) ವು " ಅವಿಕಾರತ್ವವು ''

— ವಿಶೇಷಾರ್ಥಪ್ರದೀಪಿಕಾ —

' ನ ಚ ಪ್ರಕೃತೀತ್ಯಾದಿನಾ" – 'ನ ಚ ಪ್ರಕೃತಿಶಬ್ದೇನ ಬ್ರಹ್ಮೋಪಾದಾನಮುಚ್ಯತೇ" ಇತ್ಯಾದಿಯಾಗಿ ಹಿಂದಿನ ಅಧ್ಯಾಯದ ಕೊನೆಯ ಪಾದದಲ್ಲಿ ಹೇಳಿದ ಯುಕ್ತಿಯಿಂದ, ಹೀಗೆ ಅರ್ಥ

शब्देन उत तमादेशमित्याद्या श्रुतिरुपलक्ष्यते । तत्तात्पर्यपर्यालोचनायां जगतो ब्रह्मविकारत्वं तदनन्यत्वं चावगम्यते इति चेन्न । महावाक्या-

## — ಪದಾರ್ಥದೀಪಿಕಾ —

ಇನ್ನು– ಇಲ್ಲಿ "ಆರಂಭಣ'' ಶಬ್ದದಿಂದ, "ಉತತಮಾದೇಶಂ" ಈ ಮುಂತಾಗಿರುವ ಶ್ರುತಿಯು ಸಂಗ್ರಹಿಸಲ್ಪಡುತ್ತದೆ ಆ ವಾಕ್ಯದ ತಾತ್ಪರ್ಯದ ಪರ್ಯಾಲೋಚನಮಾಡಿದಲ್ಲಿ ಜಗತ್ತಿಗೆ ಬ್ರಹ್ಮನ ವಿಕಾರರೂಪತ್ವವೂ ಬ್ರಹ್ಮನಿಂದ ಅಭೇದವೂ ತಿಳಿದುಬರುತ್ತದೆ'' ಯೆಂದು ಶಂಕಿಸತಕ್ಕದ್ದಲ್ಲ ಏಕೆಂದರೆ– ಮಹಾವಾಕ್ಯೋಪಕ್ರಮತ್ವ, ಅವಾಂತರವಾಕ್ಯೋಪಕ್ರಮತ್ವ, ಪ್ರಧಾನವಾಚತ್ವ

## — ವಿಶೇಷಾರ್ಥಪ್ರದೀಪಿಕಾ —

"ಇತ್ಯಾದ್ಯಾಶ್ರುತಿಃ" – ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಮಿತಿ" ಎಂಬ ಶ್ರುತಿಯು (ಛಾ ೬ ೧ ೪) ಈ ವಾಕ್ಯವು "ಬ್ರಹ್ಮಜ್ಞಾನದಿಂದ ಸರ್ವವಿಜ್ಞಾನವನ್ನು ಪ್ರತಿಪಾದಿಸಲು ಉಪಕ್ರಮವಾಗಿ ಹೊರಟಿದೆ ಶ್ವೇತುಕೇತುವಿನನ್ನು ಕುರಿತು ಅವನ ತಂದೆಯು, ''ಯೇನ'' ಯಾವುದನ್ನು ಕೇಳುವುದರಿಂದ, ಮನನಮಾಡುವುದರಿಂದ, ಚನ್ನಾಗಿ ತಿಳಿದು ಕೊಳ್ಳುವುದರಿಂದ ''ಅಶ್ರುತಂ'' ಕೇಳದಿದ್ದುದು ''ಶ್ರುತಂ'' ಕೇಳಿದ್ದು ''ಭವತಿ ಆಗುತ್ತದೆಯೋ, 'ಅಮತಂ' - ಮನನ ಮಾಡಲ್ಪಡದಿದ್ದುದೂ "ಮತಂ'' ಮನನಮಾಡಲ್ಪಟ್ಟದ್ದು "ಭವತಿ" ಆಗುತ್ತದೆಯೋ ''ಅವಿಜ್ಞಾತಂ'' ಚನ್ನಾಗಿ ತಿಳಿಯಲ್ಪಡದಿದ್ದುದೂ ''ವಿಜ್ಞಾತಂ'' ಚನ್ನಾಗಿ ತಿಳಿಯಲ್ಪಟ್ಟದ್ದು ''ಭವತಿ" ಆಗುತ್ತದೆಯೋ 'ತಂ'–ಅಂಥ– ''ಆದೇಶಂ'' ಸಕಲ ವೇದ ಪ್ರಸಿದ್ಧವಾದ ( ಉದ್ದಿಶ್ಯವಾದ ) ನಾರಾಯಣವೆಂಬ ಅರ್ಥವನ್ನು ''ಅಪ್ರಾಕ್ಷ್ಯಃ — ಪ್ರಶ್ನಿಸಿರುವಿಯಾ ' ಹೀಗೆ ಸಿದ್ಧಾಂತರೀತಿಯಿಂದ ಅರ್ಥ. ''ತಾತ್ಪರ್ಯಪರ್ಯಾಲೋಚನಯಾ"— ಬ್ರಹ್ಮ (ಏಕ) ಜ್ಞಾನದಿಂದ ಸರ್ವವಿಜ್ಞಾನವೆಂಬ ಸಂಗತಿಯು, ಸರ್ವಕ್ಕೂ ಬ್ರಹ್ಮನಿಂದ ಅಭೇದವಿದೆಯೆಂಬ ತಾತ್ಪರ್ಯವಿಲ್ಲದಿದ್ದರೆ, ಯುಕ್ತವೆನಿಸುವುದಿಲ್ಲ ಹೀಗೆ ಇಲ್ಲಿಯ ಭಾವ

''ಮಹಾವಾಕ್ಯಾವಾಂತರವಾಕ್ಯೋಪಕ್ರಮತ್ವಪ್ರಧಾನವಾಚಿತ್ವಾದ್ಯಭಾವೇನ"– ಮಹಾವಾಕ್ಯದ ಉಪಕ್ರಮದಲ್ಲಿ ಬಂದಿರುವುದು, ಅವಾಂತರವಾಕ್ಯದ ಉಪಕ್ರಮದಲ್ಲಿ ಬಂದಿರುವುದು, ಪ್ರಧಾನ,ಪ್ರಮೇಯವನ್ನುಹೇಳುವುದು ವಾದಿಪರಿಗೃಹೀತವಾಗಿರುವುದು, ಈಮುಂತಾದವುಗಳಲ್ಲಿ ಯಾವುದಾದರೊಂದು ಇದ್ದರೇನೇ ಆ ಶಬ್ದವು ಆಶ್ರುತಿಯ ಉಪಲಕ್ಷಕ(ಸಂಗ್ರಾಹಕ)ವಾಗುತ್ತದೆ ಆದರೆ ಆರಂಭಣಶಬ್ದವು ಹಾಗೆ

वान्तरवाक्योपक्रमत्वप्रधानवाचित्वाद्यभावेनास्य श्रुत्युपलक्षणयोपादाने निमित्ताभावात् । अभ्युपेत्याप्युपलक्षणत्वमाह ॥ अविकारत्व इति । विकारत्वादन्यस्मिन्सादृश्यादौ श्रुत्यर्थतया उक्तन्यायेन साधिते सति श्रुतितात्पर्यपर्यालोचनया कथं च तदनन्यता सिद्ध्येदिति ।

— ಪದಾರ್ಥದೀಪಿಕಾ —

ಮುಂತಾದುದು ಇಲ್ಲವಾದುದರಿಂದ, ಈ ಆರಂಭಣ ಶ್ರುತಿಗೆ " ಉತತಮಾ ದೇಶಂ" ಇತ್ಯಾದಿಯಾದ ಶ್ರುತಿಯನ್ನು ಉಪಲಕ್ಷಣಯಾ ಸಂಗ್ರಹಮಾಡುವ ನಿಮಿತ್ತವಾವುದೂ ಇರುವುದಿಲ್ಲ.

ಇನ್ನು– ಈ "ಆರಂಭಣ" ಶಬ್ದವು, "ಉತತಮಾ ದೇಶಂ" ಇತ್ಯಾದಿಯಾದ ಶ್ರುತಿಯನ್ನು ಉಪಲಕ್ಷಣ ( ಸಂಗ್ರಹ ) ಮಾಡುತ್ತದೆಯೆಂಬುದನ್ನು ಒಪ್ಪಿಯೂ ದೋಷವನ್ನು "ಅವಿಕಾರತ್ವೇ" ಇತ್ಯಾದಿ ವಚನದಿಂದ ಹೇಳುತ್ತಾರೆ ವಿಕಾರತ್ವ (ವಿಕಾರವಾಗಿರುವುದು) ಕ್ಕಿಂತ ಭಿನ್ನ (ಬೇರೆ) ವಾದ ಸಾದೃಶ್ಯ ಮುಂತಾದುದು ಶ್ರುತಿಯ ಅರ್ಥವಾಗಿರುವುದೆಂಬುದನ್ನು ಹಿಂದೆ ಹೇಳಿದ ನ್ಯಾಯದಿಂದ ಸಮರ್ಥಿಸಿದ ಮೇಲೆ, ಶ್ರುತಿತಾತ್ಪರ್ಯದ ಪರ್ಯಾಲೋಚನೆಯನ್ನು ಮಾಡಿದಲ್ಲಿಯೂ, ಬ್ರಹ್ಮಾಭೇದವು ಜಗತ್ತಿಗೆ ಸಿದ್ಧಿಸುವುದು ಹೇಗೆ? ಹೀಗೆ ಅರ್ಥ.

— ವಿಶೇಷಾರ್ಥಪ್ರದೀಪಿಕಾ —

ಯಾವುದೇ ಉಪಕ್ರಮವಾಕ್ಯದಲ್ಲಿ ಬಂದಿಲ್ಲ ಹಾಗು ಪ್ರಧಾನಪ್ರಮೇಯವಾಚಕವೂ ಆಗಿಲ್ಲ ಮತ್ತು ವಾದಿಪರಿಗ್ರಹೀತವೂ ಆಗಿಲ್ಲ ಈ ಕಾರಣದಿಂದ ಆರಂಭಣಶಬ್ದದಿಂದ "ಉತತಮಾದೇಶಂ" ಇತ್ಯಾದಿ ಶ್ರುತಿಯನ್ನು ಉಪಲಕ್ಷಣವಾಗಿ ಸಂಗ್ರಹ ಮಾಡಲು ಬರುವುದಿಲ್ಲ. ಹೀಗೆ ಇಲ್ಲಿಯ ಭಾವ "ಆದಿ" ಪದದಿಂದ "ತಚ್ಛಬ್ದೋಪೇತತ್ವ, (ಆ ಶಬ್ದದಿಂದ ಕೂಡಿರುವುದು) "ತತ್ಪ್ರತಿಪಾದಕತ್ವ" (ಆ ಶಬ್ದದಿಂದ ಕೂಡಿರುವುದು) "ಫಲ ವಿಶೇಷ" (ವಿಶಿಷ್ಟ ಫಲವನ್ನು ಹೇಳುವುದು) ಈ ಮುಂತಾದ ಸಂಗತಿಗಳನ್ನು ಪರಿಗ್ರಹಿಸಿರುತ್ತದೆ

"ಉಕ್ತನ್ಯಾಯೇನ" – "ಅತಃ ಸಾದೃಶ್ಯವಚ। ವಿವಕ್ಷಾತ್ರ ತು ನಿತ್ಯತ್ವೇ ಪ್ರಾಧಾನ್ಯೇ ಚೋಕ್ತವರ್ತ್ಮನಾ" ಈ ಮುಂತಾದ ಪೂರ್ವಪಾದದ ಕೊನೆಯಲ್ಲಿ ಹೇಳಿದ ನ್ಯಾಯದಿಂದ, ಹೀಗೆ ಅರ್ಥ 'ಬ್ರಹ್ಮಣಃ ಅವಿಕಾರತ್ವೇ ಉಕ್ತನ್ಯಾಯೇನ ಸಾಧಿತೇ" ಎಂಬಲ್ಲಿ - 'ಉಕ್ತನ್ಯಾಯೇನ' ಎಂಬುದಕ್ಕೆ "ಅವಿಕಾರಃ ಸದಾಶುದ್ಧಃ ನಿತ್ಯ ಆತ್ಮಾ" ಎಂಬುದಾಗಿ ಹೇಳಿದ ಯುಕ್ತಿಯಿಂದ ಎಂದು ಅರ್ಥ

यदप्युक्तमादिपदगृहीतात् ऐतदात्म्यमिदं सर्वमित्यादिवाक्यात्तदन्यत्वसिद्धिरिति । तदप्यसत् । आदिपदेन वाक्यान्तरग्रहणस्यानुपपत्तेः । तथा सत्येतेषामपि शब्दत्वेनारम्भणादिशब्देभ्य इति प्रयोगप्रसङ्गात् । अस्तु वा कथञ्चिदादिपदोपात्तत्वं तेषां वाक्यानाम् तथाऽपि नैतेभ्यस्तदनन्यता सिध्यति । उपपत्तिविरुद्धत्वादित्याशयेन

— ಪದಾರ್ಥದೀಪಿಕಾ —

ಇನ್ನು– " ಆದಿ " ಪದದಿಂದ ಸಂಗ್ರಹಿಸಲ್ಪಟ್ಟ " ಐತದಾತ್ಮ್ಯಮಿದಂ ಸರ್ವಂ, " ಇತ್ಯಾದಿ ವಾಕ್ಯಗಳಿಂದ, "ಜಗತ್ತಿಗ ಬ್ರಹ್ಮಾಭೇದ" ವು ಸಿದ್ಧಿಸುತ್ತದೆಯೆಂದು ಹೇಳಿದುದೂ ಯುಕ್ತವಲ್ಲ ಏಕೆಂದರೆ- "ಆದಿ" ಪದದಿಂದ ಬೇರೆ ವಾಕ್ಯಗಳ ಗ್ರಹಣವು ಯುಕ್ತವಾಗುವುದಿಲ್ಲ ಏಕೆಂದರೆ ಹಾಗಾದಲ್ಲ ಇವುಗಳೂ ಶಬ್ದಗಳಾದುದರಿಂದ, " ಆರಂಭಣಾದಿ ಶಬ್ದೇಭ್ಯಃ " ಎಂಬುದಾಗಿ ಸೂತ್ರದಲ್ಲ ಪ್ರಯೋಗವಿರಬೇಕಾಗುತ್ತದ ಇನ್ನು–ಹೇಗೂ ಒಂದು ತರಹದಿಂದ, ಆ ವಾಕ್ಯಗಳು "ಆದಿ" ಪದದಿಂದ ಸಂಗ್ರಹೀತಗಳಾಗಬಹುದು ಆದರೂ ಈ ವಾಕ್ಯಗಳಿಂದ "ಜಗತ್ತಿಗೆ ಬ್ರಹ್ಮಾಭೇದ" ವೆಂಬ ವಿಷಯವು ಸಿದ್ಧಿಸುವುದಿಲ್ಲ ಏಕಂದರೆ

— ವಿಶೇಷಾರ್ಥಪ್ರದೀಪಿಕಾ —

"ಅನುಪಪತ್ತೇಃ" - "ವಶಿಷ್ಠಾದ್ಯಾಃ ಸಮಾಗತಾಃ" ಎಂಬುದಾಗಿ ಹೇಳಿದ ಮೇಲೆ ಅವರಿಗೆ (ವಶಿಷ್ಠರಿಗೆ) ಸಜಾತೀಯರಾದ ಋಷಿಗಳನ್ನೇ "ಆದಿ" ಪದದಿಂದ ಹೇಗೆ ಸಂಗ್ರಹಿಸುತ್ತಾರೋ ಹಾಗೆ "ಆದಿ" ಪದದಿಂದ, "ಆರಂಭಣ' ಶಬ್ದ ಸಜಾತೀಯಗಳಾದ ಶಬ್ದಗಳನ್ನೇ ಸಂಗ್ರಹಿಸಬೇಕಾಗುತ್ತದೆ ವಿನಾ ವಾಕ್ಯ (ಐತದಾತ್ಮ್ಯಮಿದಂ ಸರ್ವಂ ಎಂಬ) ವನ್ನು ಸಂಗ್ರಹಿಸಬಾರದು, ಹೀಗೆ ಅರ್ಥ

"ತಥಾಸತಿ"– "ಏತೇಷಾಂ "–"ಆದಿ" ಶಬ್ದದಿಂದ ಸಂಗ್ರಹಿಸಲ್ಪಟ್ಟ 'ಇದಂ ಸರ್ವಂ" ಈ ಮುಂತಾದವುಗಳಿಗೆ, "ಇತಿ ಪ್ರಯೋಗಃ' "ಆರಂಭಣಾದಿಶಬ್ದೇಭ್ಯಃ" ಎಂಬುದಾಗಿ ಪ್ರಯೋಗವಾಗಬೇಕೇ ವಿನಾ "ಆರಂಭಣಾಶಬ್ದಾದಿಭ್ಯಃ" ಎಂಬುದಾಗಿ ಸೂತ್ರದಲ್ಲಿ ಪ್ರಯೋಗವಾಗದಿರಬೇಕಾಗುತ್ತದೆ, ಹೀಗೆ ಅರ್ಥ "ಆರಂಭಣಾದಿಶಬ್ದೇಭ್ಯಃ' ಎಂಬುದಾಗಿ ಪ್ರಯೋಗವಾಗುವುದಾದರೆ, ಶಬ್ದವನ್ನು ಬಿಟ್ಟು ಬೇರೆ ಪ್ರಮಾಣಗಳನ್ನೇ "ಆದಿ" ಶಬ್ದದಿಂದ ಸಂಗ್ರಹಿಸಬರುವುದರಿಂದ ಬೇರೆ ವಾಕ್ಯಕ್ಕೆ (ಇದಂ ಸರ್ವಂ ಇತ್ಯಾದಿ) "ಆದಿ" ಪದದಿಂದ ಸಂಗ್ರಹವಾಗಲಾರದು, ಹೀಗೆ ಅರ್ಥ

पृच्छति ॥ कथं चेति । या सूत्रकृता प्रतिज्ञाता श्रुतिभिश्च प्रतिपादिता सा जगतस्तदनन्यता कथं किंप्रकारा । किं पिकः कोकिल इतिवदेकत्वलक्षणा किं वा मृद्घट इतिवद्विकारिविकारत्वलक्षणेति प्रश्नार्थः । आद्यमाक्षिपति ॥ कथं चेति । एकत्वलक्षणा जगतस्तदनन्यता तु कथं सूत्रकृता प्रतिज्ञायेत । कथ च श्रुतिभिः प्रतिपाद्येत न कथञ्चिदित्यर्थः । अत्र हेतुमाह ॥ अविकारत्व इति । ब्रह्मणोऽविकारत्वे उक्तन्यायेन साधिते सति जगतस्तु विकारात्मकत्वे प्रत्यक्षादिप्रमिते सति विरुद्धधर्माधिकरणत्वादिति भावः । द्वितीयमाक्षिपति ॥ कथं चेति । विकारिविकारत्वरूप इति शेषः । आक्षेपे युक्तिमाह ॥ जगतस्त्विति । व्याख्यानं पूर्ववत् ।

— ಪದಾರ್ಥದೀಪಿಕಾ —

ಅದು ಯುಕ್ತಿವಿರುದ್ಧವಾಗಿರುತ್ತದೆ" ಈ ಅಭಿಪ್ರಾಯದಿಂದ, "ಕಥಂ ಚ" ಇತ್ಯಾದಿ ವಚನದಿಂದ ಪ್ರಶ್ನಿಸುತ್ತಾರೆ ಸೂತ್ರಕಾರರಿಂದ ಪ್ರತಿಜ್ಞಾರೂಪವಾಗಿ ಹೇಳಲ್ಪಟ್ಟ, ಶ್ರುತಿಗಳಿಂದ ಪ್ರತಿಪಾದಿತವೂ ಆದ, ಜಗತ್ತಿಗೆ ಬ್ರಹ್ಮೈಕ್ಯವು ಯಾವದೋ ಅದು (ಬ್ರಹ್ಮಾಭೇದವು—ತದನನ್ಯತಾ) "ಕಥಂ"– ಯಾವ ತರಹದ್ದು? "ಪಿಕ ಕೋಕಿಲಃ" ಇತ್ಯಾದಿಗಳಲ್ಲಿ ಹೇಳಿದ ಹಾಗೆ ಏಕತ್ವ (ಐಕ್ಯ—ಒಂದುತನ) ರೂಪವಾದುದೋ? ಅಥವಾ "ಮೃದ್ ಘಟಃ" ಇತ್ಯಾದಿಗಳಲ್ಲಿ ಹೇಳಿದಂತೆ ವಿಕಾರಿ ವಿಕಾರತ್ವ ರೂಪವಾದುದೋ? ಹೀಗೆ ಪ್ರಶ್ನೆಯ ಅರ್ಥ ಮೊದಲನೆಯದರ ಮೇಲೆ ಆಕ್ಷೇಪವನ್ನು "ಕಥಂ ಚ" ಇತ್ಯಾದಿ ವಚನದಿಂದ ಮಾಡುತ್ತಾರೆ ಜಗತ್ತಿಗೆ ಏಕತ್ವ (ಐಕ್ಯ) ರೂಪವಾದ ತದನನ್ಯತೆಯಾದರೋ ಸೂತ್ರಕಾರರಿಂದ ಹೇಗೆ ಪ್ರತಿಜ್ಞಾರೂಪವಾಗಿ ಹೇಳಲ್ಪಡುತ್ತದೆ? ಮತ್ತು ಶ್ರುತಿಗಳಿಂದ ಹೇಗೆ ಪ್ರತಿಪಾದಿಸಲ್ಪಡುತ್ತದೆ? ಯಾವದೇ ರೀತಿಯಿಂದ ಪ್ರತಿಪಾದಿಸಲ್ಪಡಲಾರದು ಹೀಗೆ ಅರ್ಥ ಇದರಲ್ಲಿ ಯುಕ್ತಿಯನ್ನು "ಅವಿಕಾರತ್ವ" ಇತ್ಯಾದಿ ವಚನದಿಂದ ಹೇಳುತ್ತಾರೆ. ಬ್ರಹ್ಮನಿಗೆ ವಿಕಾರವಿಲ್ಲವೆಂಬುದನ್ನು ಹಿಂದೆ ಹೇಳಿದ ನ್ಯಾಯದಿಂದ ಸಾಧನ ಮಾಡಿದ ಮೇಲೆ, ಜಗತ್ತಿಗಾದರೊ ವಿಕಾರ ರೂಪತ್ವವು ಪ್ರತ್ಯಕ್ಷಾದಿಗಳಿಂದ ಪ್ರಮಿತವಾಗಿರಲು, ಜಗತ್ತು ವಿರುದ್ಧವಾದ ಧರ್ಮವುಳ್ಳದ್ದಾಗಿರುತ್ತದೆ ಹೀಗೆ ಇಲ್ಲಿಯ ಭಾವ ಎರಡನೆಯ ಪಕ್ಷದ ಮೇಲೆ ಆಕ್ಷೇಪವನ್ನು "ಕಥಂ ಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಇಲ್ಲಿ "ವಿಕಾರ

नन्वेवमुपपत्तिविरुद्धाऽपि जगतो ब्रह्मानन्यताऽङ्गीकरणीया । अन्यथा ऐतदात्म्यमित्यादिश्रुतीनामप्रामाण्यप्रसङ्गादित्यत आह ॥ कथं चेति । अविकारत्वे विकारत्वादन्यस्मिंस्तदधीनत्वादौ श्रुत्यर्थे "स्वातन्त्र्ये च विशिष्टत्वे"इत्युक्तन्यायेन साधिते सति कथं तदनन्यताऽङ्गीकर्तुमुचिता । सावकाशश्रुतिप्रतीतोऽप्यर्थो निरवकाशोपपत्तिविरोधात्त्याज्य एव । यथोक्तमभिमान्यधिकरण इति भावः ॥ छ ॥

— ಪದಾರ್ಥದೀಪಿಕಾ —

ವಿಕಾರತ್ವರೂಪ'' ಎಂಬುದು ಶೇಷವಾಗಿದೆ ಆಕ್ಷೇಪದಲ್ಲಿ ಯುಕ್ತಿಯನ್ನು "ಜಗತಸ್ತು'' ಇತ್ಯಾದಿ ವಚನದಿಂದ ಹೇಳುತ್ತಾರೆ ಇಲ್ಲಿ- ಮೊದಲಿನ ಹಾಗೆ ವ್ಯಾಖ್ಯಾನವು

ಇನ್ನು–"ಹೀಗೆ ಯುಕ್ತಿ ವಿರುದ್ಧವಾದರೂ ಜಗತ್ತಿಗೆ ಬ್ರಹ್ಮಾಭೇದವನ್ನು ಅಂಗೀಕರಿಸತಕ್ಕದ್ದು ಏಕೆಂದರೆ"ಐತದಾತ್ಮ್ಯಮಿದಂ"ಇತ್ಯಾದಿ ಶ್ರುತಿಗಳಿಗೆ ಅಪ್ರಾಮಾಣ್ಯವು ಬರುವ ಪ್ರಸಂಗವು ಬರುತ್ತದೆ." ಆ ಆಶಂಕೆಯನ್ನು ಪರಿಹರಿಸಲು "ಕಥಂ ಚ'' ಇತ್ಯಾದಿ ವಚನವನ್ನು ಹೇಳುತ್ತಾರೆ "ಅವಿಕಾರತ್ವೇ"- ವಿಕಾರತ್ವದಿಂದ ಬೇರೆಯಾದ ತದಧೀನತ್ವ ಮುಂತಾದುದು ಶ್ರುತ್ಯರ್ಥವೆಂದು "ಸ್ವಾತಂತ್ರ್ಯೇಚ ವಿಶಿಷ್ಟತ್ವೇ" ಇತ್ಯಾದಿಗಳಲ್ಲಿ ಹೇಳಿದ ಯುಕ್ತಿಯಿಂದ ಸಮರ್ಥನ ಮಾಡಿರಲು, ಜಗತ್ತಿಗೆ ಬ್ರಹ್ಮಾ ಭೇದವು ಅಂಗೀಕರಿಸಲ್ಪಡಲು ಹೇಗೆ ಉಚಿತವಾದೀತು? ಸಾವಕಾಶವಾದ ಶ್ರುತಿಗಳಿಂದ (ಆಪಾತದಾಗಿ) ಕಂಡು ಬಂದರೂ ಆ ಅರ್ಥವು, ನಿರವಕಾಶವಾದ ಉಪಪತ್ತಿಯಿಂದ ವಿರುದ್ಧವಾದುದರಿಂದ ಪರಿತ್ಯಾಜ್ಯವೇ! ಈ ವಿಷಯವು ಅಭಿಮಾನ್ಯಧಿಕರಣದಲ್ಲಿ ಹೇಳಲ್ಪಟ್ಟಿದೆ, ಹೀಗೆ ಭಾವ

— ವಿಶೇಷಾರ್ಥಪ್ರದೀಪಿಕಾ —

''ವ್ಯಾಖ್ಯಾನಂ ಪೂರ್ವವತ್'' – ' ಜಗತಃ ಬ್ರಹ್ಮವಿಕಾರತ್ವಾಭಾವೇ (ಅವಿಕಾರತ್ವೇ) "ನ ಚ ಪ್ರಕೃತಿಶಬ್ದೇನ" ಇತ್ಯಾದಿನಾ ಉಕ್ತನ್ಯಾಯೇನ ಸಾಧಿತೇ ಸತಿ ವಿಕಾರಿವಿಕಾರತ್ವರೂಪಾ ತದನನ್ಯಥಾ ಕಥಂ? ನ ಕಥಮಪಿ"(ಜಗತ್ತಿಗೆ ಬ್ರಹ್ಮವಿಕಾರತ್ವವಿಲ್ಲವೆಂಬುದನ್ನು ''ನ ಚ ಪ್ರಕೃತಿಶಬ್ದೇನ" ಇತ್ಯಾದಿಯಾಗಿ ಪ್ರಕೃತ್ಯಧಿಕರಣದಲ್ಲಿ ಹೇಳಿದ ಯುಕ್ತಿಗಳಿಂದ ಸಾಧನಮಾಡಿದ ಮೇಲೆ ಬ್ರಹ್ಮನಿಂದ ವಿಕಾರಿ ವಿಕಾರಭಾವ ರೂಪವಾದ ಅಭೇದವು ಹೇಗೆ ಜಗತ್ತಿಗೆ ಸಂಭವಿಸೀತು? ಹೇಗೆಯೂ ಸಂಭವಿಸುವುದಿಲ್ಲ ಹೀಗೆ ಅರ್ಥ.

अपरमपि व्याख्यानं दूषयति ॥ कथं चेति । इति प्राहेत्यनुवर्तते । यद्यत्र कार्यप्रपञ्चस्यानृतत्वं सूत्रकृतोऽभिमतं स्यात् । तदाऽनृतत्वमित्येव ब्रूयात् । तदनन्यत्वमिति कथं प्राह । न हि ब्रह्मानन्यत्वशब्दोऽनृतत्ववाची । तथा सति ब्रह्मणोऽप्यनृतत्वप्रसङ्गात् । ननु च तदनन्यत्वं तद्व्यतिरेकेणाभाव इति व्याख्यातम् । सत्यम् । न तथाऽप्यनृतत्वलाभः । तद्व्यतिरेकेण नास्तीत्युक्ते तदात्मनाऽस्तीति लभ्यते ।

## — ಪದಾರ್ಥದೀಪಿಕಾ —

ಇನ್ನೊಂದು ವ್ಯಾಖ್ಯಾನವನ್ನು "ಕಥಂ ಚ" ಇತ್ಯಾದಿ ವಾಕ್ಯದಿಂದ ದೂಷಿಸುತ್ತಾರೆ "ಇತಿ ಪ್ರಾಹ" ಎಂಬುದು ಅನುವೃತ್ತವಾಗಿರುವದು ಸೂತ್ರಕಾರರಿಗೆ ಈ ಸೂತ್ರದಲ್ಲಿ ಕಾರ್ಯಪ್ರಪಂಚದ ಅನೃತತ್ವವು (ಮಿಥ್ಯಾತ್ವವು) ಅಭಿಪ್ರೇತವಿದ್ದರೆ ಆಗ ಸೂತ್ರದಲ್ಲಿ "ಅನೃತತ್ವಂ" ಎಂಬುದಾಗಿಯೇ ಹೇಳುತ್ತಿದ್ದರು "ತದನನ್ಯತ್ವಂ" ಎಂಬುದಾಗಿ ಹೇಗೆ ಹೇಳುತ್ತಾರೆ? ಏಕೆಂದರೆ "ಬ್ರಹ್ಮಾನನ್ಯತ್ವ" (ಬ್ರಹ್ಮನಿಂದ ಅಭಿನ್ನತೆ) ಎಂಬ ಶಬ್ದವು ಮಿಥ್ಯಾತ್ವವಾಚಕವಲ್ಲ ಏಕೆಂದರೆ- ಹಾಗೆ ಮಿಥ್ಯಾತ್ವದ ವಾಚಕವಾಗಿದ್ದರೆ ಬ್ರಹ್ಮನಿಗೂ ಮಿಥ್ಯಾತ್ವವು ಬರಬೇಕಾದೀತು, ಇನ್ನು "ತದನನ್ಯತ್ವಂ" ಎಂಬುದಕ್ಕೆ "ಬ್ರಹ್ಮನಿಂದ ಬೇರೆ (ಭಿನ್ನ)ಯಾಗಿ ಇಲ್ಲದಿರುವುದು" ಎಂಬುದಾಗಿ ವ್ಯಾಖ್ಯಾನಿಸಲಾಗಿದೆಯೆಂದರೆ— ನಿಜ! ಆದರೂ ಮಿಥ್ಯಾತ್ವದ ಲಾಭವಾಗುವುದಿಲ್ಲ ಏಕೆಂದರೆ ಅದನ್ನು ಬಿಟ್ಟು ಬೇರೆಯಾಗಿಲ್ಲವೆಂದು ಹೇಳಿದರೆ ತದ್ರೂಪವಾಗಿ ಇರುತ್ತದೆಂಬ ಅರ್ಥವು ದೊರೆಯು

## — ವಿಶೇಷಾರ್ಥಪ್ರದೀಪಿಕಾ —

"ಇತ್ಯುಕ್ತನ್ಯಾಯೇನ" – ಜಿಜ್ಞಾಸಾಧಿಕರಣ ಅನುವ್ಯಾಖ್ಯಾನದಲ್ಲಿ ಹೇಳಿದ ಯುಕ್ತಿಯಿಂದ, ಹೀಗೆ ಅರ್ಥ

"ನಿರವಕಾಶೋಪಪತ್ತಿವಿರೋಧಾತ್" – ವಿರುದ್ಧ ಧರ್ಮವುಳ್ಳದ್ದಾಗಿರುವುದೆಂಬ ಯುಕ್ತಿವಿರೋಧವು ಬರುವುದರಿಂದ

"ಯಥೋಕ್ತಂ' = ಅಭಿಮಾನ್ಯಧಿಕರಣದಲ್ಲಿ, ಜಡತ್ವ ಮುಂತಾದ ಯುಕ್ತಿವಿರೋಧದಿಂದ, "ಮೃದಬ್ರವೀತ್' ಇತ್ಯಾದಿ ವಾಕ್ಯಗಳಿಗೆ ಆಪಾತವಾಗಿ ತೋರಿದ ಅರ್ಥವನ್ನು ಬಿಟ್ಟಿರುವುದು ಹೀಗೆ ಭಾವ

"ಅಪರಮಪಿ" ವಿವರ್ತವಾದಿಗಳು ಮಾಡಿದ ಸೂತ್ರವ್ಯಾಖ್ಯಾನವೂ

ಆಪಾದಕವನ್ನು ಅಧ್ಯಾಹರಿಸಿ ಯೋಜನವನ್ನು 'ಯದ್ಯತ್ರ" ಇತ್ಯಾದಿ

न पुनः सर्वथाऽप्यनृतत्वम्। अन्यथा ब्रह्मातिरेकेणासतो जीवचैतन्यस्यापि सर्वथाऽनृतत्वं स्यात्। प्रसिद्धं चैतत्। यद्विशिष्टविषयः प्रतिषेधो विशेषणमुपसङ्क्रामतीति।

सत्यम्। तथाऽपि ब्रह्मविवर्तताज्ञापनायैवमुक्तमिति चेन्न। तथा सति तत्रारोपितत्वमिति वक्तव्यत्वात्। न हि शुक्तिकाशकले कलधौतमारोपितमिति वक्तव्ये ततोऽनन्यदिति प्रयुज्यते। अथ ब्रह्म-

— ಪದಾರ್ಥದೀಪಿಕಾ —

ತ್ತ್ವವೆ, ಹೊರತು ಸರ್ವರೀತಿಗಳಿಂದ ಅಸತ್ಯ(ಸುಳ್ಳು) ಎಂಬ ಅರ್ಥವು ದೊರೆಯುವುದಿಲ್ಲ ಹಾಗಿಲ್ಲದಿದ್ದಲ್ಲಿ ಬ್ರಹ್ಮವ್ಯತಿರಿಕ್ತವಾಗಿ ಇಲ್ಲದಿರುವ ಜೀವಚೈತನಕ್ಕೂ ಸಹ ಸರ್ವಥಾ ಮಿಥಾತ್ವವು ಬರಬೇಕಾಗುವದು ಏಕೆಂದರೆ ವಿಶಿಷ್ಟವನ್ನು ವಿಷಯೀಕರಿಸಿ ಹೊರಟ ನಿಷೇಧವು ವಿಶೇಷಣಕ್ಕೆ ಸಂಬಂಧಿಸುತ್ತದೆ- ಪ್ರಾಪ್ತವಾಗುತ್ತದೆ" ಇದು ಪ್ರಸಿದ್ಧವೇ ಆಗಿದೆ ಹೀಗೆ ಅರ್ಥ (ದೂಷಣ)

"ಇದು ನಿಜ ಆದರೂ ಬ್ರಹ್ಮವಿವರ್ತತೆಯನ್ನು ತಿಳಿಸಲು ಹೀಗೆ ಹೇಳಲಾಗಿದೆ"ಯೆಂದು ಶಂಕಿಸುವುದು ಸರಿಯಲ್ಲ ಏಕೆಂದರೆ ಹಾಗಿದ್ದ ಪಕ್ಷದಲ್ಲಿ- "ತತ್ರಾರೋಪಿತಂ" (ಬ್ರಹ್ಮನಲ್ಲಿ ಆರೋಪಿತವು) ಎಂಬುದಾಗಿ ಹೇಳಬೇಕಾಗುವದು ಏಕೆಂದರೆ ಶುಕ್ತಿಶಕಲ (ಕಪ್ಪೆಚಿಪ್ಪು)ದಲ್ಲಿ ರಜತವು" ಆರೋಪಿತವಾಗಿದೆ ಎಂದು ಹೇಳಬೇಕಾದಾಗ "ತತೋಽನನ್ಯತ್" (ಶುಕ್ತಿಯಿಂದ ಬೇರೆಯಾಗಿಲ್ಲ) ವೆಂಬುದಾಗಿ ಯಾರೂ ಪ್ರಯೋಗಿಸುವುದಿಲ್ಲ

— ವಿಶೇಷಾರ್ಥಪ್ರದೀಪಿಕಾ —

ವಾಕ್ಯಗಳಿಂದ ತೋರಿಸುತ್ತಾರೆ "ಪ್ರಸಿದ್ಧಂ ಚೈತತ್" "ನ ಜೀರ್ಣಮಲವದ್ವಾಸಾಃ ಸ್ನಾತಕಃ ಸ್ಯಾಯಾತ್' ಎಂಬಲ್ಲಿ ಪ್ರಸಿದ್ಧವಾದುದು, ಹೀಗೆ ಅರ್ಥ ಬ್ರಹ್ಮವ್ಯತಿರಿಕ್ತವಾಗಿ ಕಾರ್ಯ ಪ್ರಪಂಚವು ಇರುವುದಿಲ್ಲವೆಂಬ ನಿಷೇಧವು "ಜಗತ್ತಿಗೆ ಬ್ರಹ್ಮವ್ಯತಿರಿಕ್ತವಾಗಿ ಸತ್ಯತೆಯು ಇರುವುದಿಲ್ಲ" ಈ ವಿಶಿಷ್ಟನಿಷೇಧವು, ಸತ್ಯತೆಯುಳ್ಳ ಪ್ರಪಂಚದ ಸತ್ಯತೆಯನ್ನು ಪ್ರಮಾಣಸಿದ್ಧವಾದುದರಿಂದ ನಿಷೇಧಿಸಬಾರದಿರುವುದರಿಂದ, ಸತ್ಯವಾದ ಪ್ರಪಂಚಕ್ಕೆ ಬ್ರಹ್ಮಭಿನ್ನತ್ವವೆಂಬ ವಿಶೇಷಣವನ್ನೇ ನಿಷೇಧಿಸುತ್ತದೆಯೆಂದು ಹೇಳಬೇಕು ಇದರಿಂದ, ಬ್ರಹ್ಮಸ್ವರೂಪದಿಂದ ಸತ್ಯ(ಇರುವಂತಹದು) ವೆಂದು ಹೇಳಿದ್ದಾಗುತ್ತದೆಯೆಂದು ಇಲ್ಲಿಯ ಭಾವ. "ಸತ್ಯಂ" ಎಂಬ ವಾಕ್ಯದಿಂದ ಆಶಂಕೆಯನ್ನು ತೋರಿಸುತ್ತಾರೆ.

सत्तयैवेदं सत् । नापरा सत्ताऽस्यास्तीति ज्ञापनमेतस्य प्रयोजनमिति चेत् । तर्हि परमार्थसदेवेदमित्यायातमिति कथमनृतत्वम् । अथ येयं प्रपञ्चे सत्ताऽवभासते साऽधिष्ठानब्रह्मगतैवारोपितेत्यनेन ज्ञाप्यत इति चेत् । तत्किमन्यथाख्यातिवादिवदनिर्वचनीयख्यातिवादिनोऽप्यारोपिताकारस्यान्यत्र पारमार्थ्यमावश्यकम् । तथात्वे चाकाशत्वादि-

— ಪದಾರ್ಥದೀಪಿಕಾ —

ಇನ್ನು–ಬ್ರಹ್ಮನ ಸತ್ವ (ಅಸ್ತಿತ್ವ-ಸ್ಥಿತಿ) ದಿಂದಲೇ ಇದು ಸತ್ಯವಾಗಿದೆ ಬೇರೆಯಾದ ಸತ್ವವು ( ಅಸ್ತಿತ್ವ ) ಇದಕ್ಕ ಇರುವುದಿಲ್ಲ,''ಎಂಬ ಅರ್ಥವನ್ನು ತಿಳಿಸುವುದು "ತದನನ್ಯತ್ವಂ'' ಶಬ್ದದ ಪ್ರಯೋಜನವೆಂದು ಹೇಳಿದರೆ— ಹಾಗಾದಲ್ಲಿ ಇದು (ಜಗತ್ತು) ಪರಮಾರ್ಥ ಸತ್ಯವೇ, ಎಂಬುದಾಗಿ ಹೇಳಿದ್ದಾಗುವದು, ಜಗತ್ತಿಗೆ ಮಿಥ್ಯಾತ್ವವು ಇದರಿಂದ ಹೇಗೆ ಜ್ಞಾಪಿತವಾಗುವದು? ಇನ್ನು– "ಪ್ರಪಂಚದಲ್ಲಿ ಯಾವ ಸತ್ಯತೆಯು ತೋರುತ್ತಿದಯೋ ಅದು ಅಧಿಷ್ಠಾನವೆನಿಸಿದ ಬ್ರಹ್ಮನಲ್ಲಿಯದೇ! ಅದು ಆರೋಪಿತವಾದುದು'' (ಪ್ರಪಂಚದಲ್ಲಿ) ಈ ವಿಷಯವು ಇದರಿಂದ ತಿಳಿಸಲ್ಪಡುತ್ತದೆಯೆಂದು ಹೇಳಿದರೆ- ಪ್ರಶ್ನೆ- ಹಾಗಾದರೆ ಅನ್ಯಥಾಖ್ಯಾತಿಗಳವಾದಿ ಹಾಗೆಅನಿರ್ವಚನೀಯಖ್ಯಾತಿವಾದಿಗೂ ಆರೋಪಿತವಾದ ಆಕಾರಕ್ಕೆ ಅನ್ಯತ್ರ (ಬೇರೆ ಕಡೆಯಲ್ಲಿ) ಪಾರಮಾರ್ಥಿಕತ್ವವು ( ಸತ್ಯತ್ವವು )

— ವಿಶೇಷಾರ್ಥಪ್ರದೀಪಿಕಾ —

"ಕಲಧೌತಂ" – ಬೆಳ್ಳಿ (ರಜತವು)

''ತತ್‌ಕಿಂ" - ಆರೋಪಿತವಾದ ಆಕಾರವು ಬೇರೆ ಕಡೆಯಲ್ಲಿ ಸತ್ಯವಾಗಿರಬೇಕೆಂಬುದು ಅನ್ಯಥಾಖ್ಯಾತಿವಾದಿಗಳ ಮತ ಇನ್ನು ಈ ಸಂಗತಿಯನ್ನು ಅನಿರ್ವಚನೀಯಖ್ಯಾತಿವಾದಿಯೂ ಒಪ್ಪಿದರೂ ಅವನು ಅನ್ಯಥಾಖ್ಯಾತಿಯನ್ನು ಒಪ್ಪಿದಂತಾಗುವುದಿಲ್ಲ ಎಂಬ ಆಶಂಕೆಯನ್ನು "ತಥಾತ್ವೇ" 'ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ ಆಕಾಶ ಮುಂತಾದುದು ಬ್ರಹ್ಮನಲ್ಲಿ ಆರೋಪಿತವಾದುದು ಈ ಕಾರಣದಿಂದ, ಆರೋಪಿತವಾದುದರಲ್ಲಿ ತೋರಿದುದು ಅಧಿಷ್ಠಾನದಲ್ಲಿ ಇರಬೇಕೆಂದು ಒಪ್ಪಿದುದರಿಂದ, ಆಕಾಶಾದಿಗಳಲ್ಲಿ ತೋರುವ ಆಕಾಶತ್ವ ಮುಂತಾದುದೂ ಶುಕ್ತಿಯಲ್ಲಿ ಆರೋಪಿತವಾದ ರಜತದಲ್ಲಿ ತೋರಿದ ರಜತತ್ವವೂ ಅಧಿಷ್ಠಾನವಾದ ಬ್ರಹ್ಮನಲ್ಲಿ ಹಾಗು ಶುಕ್ತಿಯಲ್ಲಿಯೇ ಇರುವಂತಹದೇ! ಅದು ಆಕಾಶಾದಿಗಳಲ್ಲಿ ತೋರುತ್ತದೆಯೆಂಬುದಾಗಿ ಅಂಗೀಕರಿಸುವ ಪ್ರಸಂಗವು ಬರುತ್ತದೆ, ಹೀಗೆಭಾವ

कमपि ब्रह्मणि पारमार्थिकमङ्गीकरणीयं स्यात् । रजतत्वादिकं च शुक्तिकायामिति । यद्वा स्याल्लोकवदिति भोक्तृभोग्यप्रपञ्चस्य सत्यतामभिधायेदानीं कथं च तदनन्यत्वेति तद्विरुद्धमनृतत्वं प्राहेति योजना । ननु सूत्रकारः परमार्थाभिप्रायेण तदनन्यत्वमित्याह । व्यवहाराभिप्रायेण तु स्याल्लोकवदिति । तत्कुतो विरोध इति चेन्न । प्रतारकत्वप्रसङ्गात । अन्यथा प्रत्याचक्षीत । अप्रत्याख्यायैव कार्य-

— ಪದಾರ್ಥದೀಪಿಕಾ —

ಆವಶ್ಯಕವೇನು ? ಹಾಗಾದ ಪಕ್ಷದಲ್ಲಿ ಆಕಾಶತ್ವ ಮುಂತಾದುದೂ ಸಹ ಬ್ರಹ್ಮನಲ್ಲಿ ಪಾರಮಾರ್ಥಿಕವೆಂದು ಅಂಗೀಕರಿಸಬೇಕಾದೀತು ! ಮತ್ತು ಶುಕ್ತಿಯಲ್ಲಿ ರಜತತ್ವ ಮುಂತಾದುದು ಸತ್ಯವೆನಿಸಬೇಕಾದೀತು! ಹೀಗೆ ಅರ್ಥ ಅಥವಾ– "ಸ್ಯಾಲ್ಲೋಕವತ್'' ಎಂಬ ಹಿಂದಿನ ಸೂತ್ರ ಖಂಡದಿಂದ ಭೋಕ್ತೃಭೋಗ್ಯ ಪ್ರಪಂಚದ ಸತ್ಯತೆಯನ್ನು ಹೇಳಿ ಈಗ "ತದನನ್ಯತ್ವಂ'' (ಬ್ರಹ್ಮಾವ್ಯತಿರೇಕೇಣ ಅಸತ್ಯತೆ) ಎಂಬುದಾಗಿ ಆ ಸತ್ಯತೆಯ ವಿರುದ್ಧವಾಗಿ ಮಿಥ್ಯಾತ್ವವನ್ನು ಹೇಗೆ ಹೇಳುತ್ತಾನೆ, ಎಂಬುದಾಗಿ ( "ಸ್ಯಾಲ್ಲೋಕವದಿತಿ ಭೋಕ್ತೃಭೋಗ್ಯಪ್ರಪಂಚಸ್ಯ ಸತ್ಯತಾಮಭಿಧಾಯೇದಾನೀಂ ಕಥಂ ಚ ತದನ್ಯತೇತಿ ತದ್ವಿರುದ್ಧ ಮನೃತತ್ವಂ ಪ್ರಾಹ" ಎಂಬುದಾಗಿ ) ಯೋಜನೆಯು ಇರುತ್ತದೆ

ಇನ್ನು– ಸೂತ್ರಕಾರರು ಪರಮಾರ್ಥಾಭಿಪ್ರಾಯದಿಂದ 'ತದನನ್ಯತ್ವಂ'' ( ಬ್ರಹ್ಮನಿಂದ ಅಭೇದ ) ವೆಂಬುದಾಗಿಯೂ ವ್ಯವಹಾರಾಭಿಪ್ರಾಯದಿಂದ ಸ್ಯಾಲ್ಲೋಕವತ್'' ಎಂಬುದಾಗಿಯೂ ಹೇಳಿರುತ್ತಾರೆ ಆದುದರಿಂದ ವಿರೋಧವೆಲ್ಲಿಯದು" ಹೀಗೆ ಹೇಳಬಾರದು ಏಕೆಂದರೆ–ಹಾಗಾದಲ್ಲಿ ಸೂತ್ರಕಾರರಿಗೆ ಪ್ರತಾರಕತ್ವದ ಪ್ರಸಂಗವು ಬರುತ್ತದೆ ಪ್ರತಾರಕತ್ವವಿಲ್ಲದಿದ್ದರೆ ನಿರಾಕರಣ

— ವಿಶೇಷಾರ್ಥಪ್ರದೀಪಿಕಾ —

''ಸತ್ಯತಾಮಭಿದಾಯ" – ಫೇನ (ಬುರುಗು) ತರಂಗಳ ದೃಷ್ಟಾಂತದಿಂದ ಭೋಕ್ತ್ರ ಹಾಗೂ ಭೋಗ್ಯ, ಇವೆರಡರಲ್ಲಿ ಸಾಂಕರ್ಯವಿಲ್ಲವೆಂದು ಹೇಳಿದ ಮೇಲೆ ಸತ್ಯತೆಯನ್ನು ಹೇಳಿದ್ದಾಗುತ್ತದೆಂದು ಭಾವವು "ಪ್ರತಾರಕತ್ವಪ್ರಸಂಗಾತ್" ಇಲ್ಲಿ "ಭೋಕ್ತ್ರಾಪತ್ತೇಃ' ಎಂಬುದಾಗಿರುವ ಪ್ರಮಾಣವೇ ಆದ ಸೂತ್ರಕ್ಕೆ ಅಪ್ರಾಮಾಣ್ಯಪ್ರಸಂಗವು ಬರುವುದೆಂಬ ಅರ್ಥವನ್ನೂ ಸಂಗ್ರಹಿಸುತ್ತಾರೆಂದು ತಿಳಿಯಬೇಕು ''ಅನ್ಯಥಾ" –ಸತ್ಯತ್ವದಬಗ್ಗೆ ಅಭಿಪ್ರಾಯವಿಲ್ಲದಿದ್ದರೆ,

प्रपञ्चपरिणामप्रक्रियामाश्रयति। सगुणेषूपासनेषूपयोक्ष्यते इतीति चेत्-किं सगुणोपासनविषयप्रयोजने प्रकृतविषयप्रयोजनानुकूले । उत तद्विरुद्धे । अथोदासीने । नाद्यः । भेदविषयत्वात् । सांसारिकफलत्वाच्च । भेदवासना हि सुदृढा तामेवोपोद्बलयेत् । अत एव न तृती-

— ಪದಾರ್ಥದೀಪಿಕಾ —

ಮಾಡುತ್ತಿದ್ದರು! ಇನ್ನು- "ಕಾರ್ಯಪ್ರಪಂಚವನ್ನು ನಿರಾಕರಣ ಮಾಡದೇ, ತತ್ಪರಿಣಾಮ ಪ್ರಕ್ರಿಯೆಯನ್ನು ಸೂತ್ರಕಾರರು ಆಶ್ರಯಿಸುತ್ತಾರೆ ಏಕೆಂದರೆ ಅದು ಸಗುಣೋಪಾಸನೆಗಳಲ್ಲಿ ಉಪಯೋಗಿಸಲ್ಪಡುವದು" ಹೀಗ ಹೇಳುವುದಾದರೆ ಪ್ರಶ್ನೆ— ಸಗುಣೋಪಾಸನೆಯ ವಿಷಯ ಪ್ರಯೋಜನಗಳು ಪ್ರಕೃತವಾದ ವಿಷಯ ಪ್ರಯೋಜನಗಳಿಗೆ ಅನುಕೂಲಗಳೋ? ಇಲ್ಲವೆ ವಿರುದ್ಧವಾದವುಗಳೋ? ಅಥವಾ ಉದಾಸೀನವಾದವುಗಳೋ? ಹೀಗೆ ಮೊದಲನೆಯ ಕಲ್ಪವು ಯುಕ್ತವಲ್ಲ ಏಕೆಂದರೆ ಆ ಉಪಾಸನಗಳು ಭೇದವನ್ನು ವಿಷಯೀಕರಿಸಿದವುಗಳು ಹಾಗು ಸಾಂಸಾರಿಕ ಫಲವುಳ್ಳವುಗಳು ಏಕೆಂದರೆ ಭೇದವಾಸನೆಯು ಸುದೃಢ ಅದನ್ನೇ ಸಗುಣೋಪಾಸನೆಯು ಪುಷ್ಟೀಕರಿಸುತ್ತದೆ ಆದುದರಿಂದಲೇ ಮೂರನೆಯ ಪಕ್ಷವೂ

— ವಿಶೇಷಾರ್ಥಪ್ರದೀಪಿಕಾ —

"ಅಪ್ರತ್ಯಾಖ್ಯಾಯೈವ" ಇತ್ಯಾದಿ ವಾಕ್ಯದಿಂದ ಆಶಂಕಿಸುತ್ತಾರೆ "ಕಾರ್ಯಪ್ರಪಂಚಂ ಅಪ್ರತ್ಯಾಖ್ಯಾಯೈವ' = 'ಕಾರ್ಯಪ್ರಪಂಚದ ಸತ್ಯತೆಯನ್ನು ನಿಷೇಧಿಸದೆಯೇ, "ತತ್ಪರಿಣಾಮಪ್ರಕ್ರಿಯಾಮೇವ" ಜಗತ್ತು- ಬ್ರಹ್ಮಪರಿಣಾಮವೆಂಬ ಪ್ರಕ್ರಿಯೆಯನ್ನು "ಆಶ್ರಯತಿ' ಸೂತ್ರಕಾರರು ಆಶ್ರಯಿಸಿದ್ದಾರೆ (ಅಂಗೀಕರಿಸುತ್ತಾರೆ)ಏಕೆಂದರೆ ಆ ಪ್ರಕ್ರಿಯೆಯು ಸಗುಣೋಪಾಸನೆಗೆ ಉಪಯುಕ್ತವಾಗುತ್ತದೆ ಆ ಸಗುಣೋಪಾಸನೆಯು ಮೋಕ್ಷಕಾರಣವಾದ ನಿರ್ಗುಣೋಪಾಸನೆಗೆ ಅವಶ್ಯವಾಗಿರುತ್ತದೆ" ಹೀಗೆ ಇಲ್ಲಿ ಅರ್ಥ "ಪ್ರಕೃತ ವಿಷಯ ಪ್ರಯೋಜನಾನುಕೂಲೇ" — ಶುದ್ಧಬ್ರಹ್ಮವೆಂಬ ವಿಷಯ, ಅದರ ಜ್ಞಾನವೆಂಬ ಪ್ರಯೋಜನ, ಇವುಗಳಿಗೆ ಅನೂಕೂಲಗಳೆಂದು ಅರ್ಥ "ಉಪೋದ್ಬಲಯೇತ್" ಎಂಬಲ್ಲಿ "ಕಾರ್ಯಪ್ರಪಂಚಪರಿಣಾಮಪ್ರಕ್ರಿಯಾ" ಎಂಬುದಕ್ಕೆ ಅಥವಾ "ಸಗುಣೋಪಾಸನಂ' ಎಂಬುದಕ್ಕೆ ಅನ್ವಯವಿದೆ ಅಂದರೆಕಾರ್ಯಪ್ರಪಂಚದ ಪರಿಣಾಮ ಪ್ರಕ್ರಿಯೆಯು ಅಥವಾ ಸಗುಣೋಪಾಸನೆಯು ಸುಧೃಢಗೊಳಿಸುತ್ತದೆಯೆಂದು ಅರ್ಥ

"ಅತಏವ"- "ಭೇದವಾಸನೆಯನ್ನು ಉಪೋದ್ಬಲಗೊಳಿಸುವುದರಿಂದಲೇ, ಅಥವಾ-ಪ್ರಕೃತ ಶುದ್ಧಬ್ರಹ್ಮರೂಪವಿಷಯ, ಅದರ ಜ್ಞಾನವೆಂಬ ಪ್ರಯೋಜನ

योऽपि । न द्वितीयः । अनाप्तत्वापरिहारादिति । अथवाऽऽस्तां तावदियं ग्रन्थार्जवचिन्ता । कथं च तदनन्यताऽनृतत्वलक्षणा जगतो युक्ता स्यात् । न कथञ्चिदिति योज्यम् । अत्र हेतुमाह ॥ जगत इति । अविकारत्वे ब्रह्मविवर्तत्वाभावे । यच्चाविकृतमित्याद्युक्तन्यायेन । एवं प्रमाणाभावपरत्वेनापि पूर्ववद्व्याख्येयमिति ।

### — ಪದಾರ್ಥದೀಪಿಕಾ —

ಯುಕ್ತವಲ್ಲ ೨ನೆಯ ಪಕ್ಷವೂ ಸರಿಯಲ್ಲ ಏಕೆಂದರೆ ಸೂತ್ರಕಾರರಿಗೆ ಅನಾಪ್ತತ್ವವನ್ನು ಪರಿಹರಿಸಲಾಗಲಿಲ್ಲ ಹೀಗೆ ದೂಷಣ . ನವಾ .. ಗ್ರಂಥದ ಸರಳತೆಯ ಬಗಗಿನ ವಿಚಾರವು ಇರಲಿ! "ಕಥಂ ಚ ತದನನ್ಯತಾ, ಅನೃತತ್ವ ಲಕ್ಷಣಾ ಜಗತೋ ಯುಕ್ತಾ ಸ್ಯಾತ್, ನ ಕಥಂ ಚಿತ್' (ಜಗತ್ತಿಗ ಮಿಥ್ಯಾತ್ವ ರೂಪವಾದ ಬ್ರಹ್ಮಾನನ್ಯತೆಯು (ತದನನ್ಯತೆಯ) ಹೇಗೆ ಯುಕ್ತವಾಗುವದು? ಹೇಗೂ ಯುಕ್ತವಲ್ಲ) ಹೀಗೆ ವಾಕ್ಯಯೋಜನೆಯು ಇದರಲ್ಲಿ ಹೇತುಭೂತ ಯುಕ್ತಿಯನ್ನು 'ಜಗತಃ" ಈ ವಚನದಿಂದ ಹೇಳುತ್ತಾರ 'ಅವಿಕಾರತ್ವೇ"= ಬ್ರಹ್ಮವಿವರ್ತವು ಜಗತ್ತು ಆಗದಿದ್ದರೆ-('ಯಚ್ಚಾವಿಕೃತಂ" ಇತ್ಯಾದಿ ವಚನದಿಂದ ಹೇಳಿದ ಯುಕ್ತಿಯಿಂದ) ಇದರಂತೆ ಪ್ರಮಾಣವಿಲ್ಲವೆಂಬ ಅರ್ಥದ ಪರವಾಗಿಯೂ ಹಿಂದಿನಂತೆ ವ್ಯಾಖ್ಯಾನಿಸಬೇಕು ಹೀಗೆ ಭಾವ

### — ವಿಶೇಷಾರ್ಥಪ್ರದೀಪಿಕಾ —

ಗಳಿಗೆ ಸಗುಣೋಪಾಸನವಿಷಯಪ್ರಯೋಜನಗಳು ಅನಾನುಕೂಲವಾದುದರಿಂದಲೇ," ಎಂಬುದಾಗಿ ಅರ್ಥ ಆದುದರಿಂದ ಔದಾಸೀನ್ಯಪಕ್ಷವು ಸರಿಯಾದುದಲ್ಲವೆಂದು ಅರ್ಥ

"ಇತ್ಯಾದ್ಯುಕ್ತನ್ಯಾಯೇನ"–'ಯಚ್ಚಾವಿಕೃತಂ' ಎಂಬ, ಹಿಂದಿನ ಪಾದದ ಅನುವ್ಯಾಖ್ಯಾನದಲ್ಲಿ ಹೇಳಿದ ಯುಕ್ತಿಯಿಂದ

" ಏವಂ ಪ್ರಮಾಣಾಭಾವ ಪರತ್ವೇನಾಪಿ "-ಕಥಂ ಚ ತದನನ್ಯಥಾ"- ಜಗತ್ತಿಗೆ ಬ್ರಹ್ಮವಿವರ್ತತೆಯು(ಜಗತ್ತು ಬ್ರಹ್ಮವಿವರ್ತ ಅಂದರೆ ಬ್ರಹ್ಮವಿಷಯಕ ಭ್ರಮದಿಂದ ಕಲ್ಪಿತವಾದುದೆಂಬುದು) ಹೇಗೆ? ಯಾವದೇ ರೀತಿಯಿಂದಲೂ ಸರಿಯಲ್ಲ ಏಕೆಂದರೆ ಪ್ರಮಾಣವಿರುವುದಿಲ್ಲ ಹೀಗೆ ಅರ್ಥ ಇನ್ನು– "ಆರಂಭಣ ಶಬ್ದಾದಿಭ್ಯಃ" ಎಂಬುದಾಗಿ ಪ್ರಮಾಣವನ್ನು ( ಹೇತು ಭೂತ ಯುಕ್ತಿಗಳನ್ನು ) ಹೇಳಿದೆಯಾದುದರಿಂದ ಪ್ರಮಾಣವಿಲ್ಲವೆಂಬುದು ಹೇಗೆ ಸರಿ ? ಎಂಬುದಾಗಿ ಶಂಕಿಸುವುದು ಯುಕ್ತವಲ್ಲ ಏಕೆಂದರೆ- " ಆರಂಭಣ " ಈ ಶಬ್ದವು ಜಗತ್ತಿಗೆ

स्वतन्त्रकारणान्यत्वं तेन ह्यत्र निषिध्यते ॥

एवं तर्हि कोऽस्यार्थ इत्यत आह ॥ स्वतन्त्रेति । यत एवं जगतो ब्रह्मानन्यत्वमनेकविधमपि नात्र प्रतिपाद्यं तेनेत्यर्थः । अनेनाप-

ಯಾವದೇ ತರಹದ ಬ್ರಹ್ಮಾಭೇದವೂ ( ಇಲ್ಲಿ ) ಪ್ರತಿಪಾದಿಸಲ್ಪಡುವುದಿಲ್ಲವಾದುದರಿಂದ ಬ್ರಹ್ಮನಿಂದ ಬೇರೆಯಾದುದಕ್ಕೆ ಸ್ವತಂತ್ರವಾಗಿ ಕಾರಣತ್ವವು ಈ ಅಧಿಕರಣದಲ್ಲಿ ನಿರಾಕರಿಸಲ್ಪಡುತ್ತದೆ.

— ಪದಾರ್ಥದೀಪಿಕಾ —

ಹಾಗಾದರೆ ಇದರ ಅರ್ಥವೇನು ? ಎಂಬ ಪ್ರಶ್ನೆಯನ್ನು "ಸ್ವತಂತ್ರ ಕಾರಣತ್ವೇನ" ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಾರೆ "ಯಾವ ಕಾರಣದಿಂದ ಜಗತ್ತಿಗೆ ಬ್ರಹಾನನ್ಯತ್ವವು (ಬ್ರಹ್ಮಾಭೇದವು) ಅನೇಕ ತರಹದ್ದಾದರೂ ( ಒಂದು ತರಹದಿಂದಲೂ ) ಇಲ್ಲಿ ಪ್ರತಿಪಾದಿಸಲ್ಪಡುವುದಿಲ್ಲವೋ ಆ ಕಾರಣ

— ವಿಶೇಷಾರ್ಥ ಪ್ರದೀಪಿಕಾ —

ಮಿಥ್ಯಾತ್ವವನ್ನು ಸಾಕ್ಷಾತ್ತಾಗಿಯೇ ಹೇಳುವುದೋ ? ವಿಕಾರದ ಮಿಥ್ಯಾತ್ವವನ್ನು ಹೇಳುವುದೋ ? ಹೀಗೆ ಪ್ರಶ್ನೆ ಒಂದನೆಯ ಕಲ್ಪದಲ್ಲಿ– "ಕಥಂ ಬ್ರಹ್ಮವಿವರ್ತತಾ ಜಗತಃ' ( ಜಗತ್ತಿಗೆ ಬ್ರಹ್ಮವಿವರ್ತತೆಯು ಹೇಗ ) ಎಂಬುದಾಗಿ ಈ ಪದ್ಯದ ಅರ್ಥ ಮೃತ್ಪಿಂಡ ಮುಂತಾದುದರ ಪ್ರಸಕ್ತಿಯಿರುವುದರಿಂದ ಜಗತ್ತು ಬ್ರಹ್ಮವಿವರ್ತವೆಂಬುದಕ್ಕೆ ಪ್ರಸಕ್ತಿಯೇ ಇಲ್ಲವಾದುದರಿಂದ, ಜಗತ್ತು ಬ್ರಹ್ಮ ವಿವರ್ತವೆಂಬುದು ಹೇಗೆ ? ಯಾವ ರೀತಿಯಿಂದಲೂ ಸರಿಯಲ್ಲ, " ಹೀಗೆ ಅರ್ಥ ಎರಡನೆಯ ಪಕ್ಷದಲ್ಲಿ– ಜಗತ್ತು ಬ್ರಹ್ಮವಿವರ್ತವೆಂಬ ಸಂಗತಿಯು ಹೇಗೆ ಪ್ರಮಾಣವುಳ್ಳದ್ದು ? (ಕಥಂ ಜಗತೋ ಬ್ರಹ್ಮವಿವರ್ತತಾ ಪ್ರಮಾಣವತೀ) ಹೀಗೆ ಅರ್ಥ. ಇನ್ನು- ವಿಕಾರವಾದುದೆಲ್ಲವೂ ಮಿಥ್ಯಾ ಎಂಬುದಾಗಿ ಸಾಧನಮಾಡಿದಮೇಲೆ ಜಗತ್ತು ಬ್ರಹ್ಮವಿಕಾರವಾದುದರಿಂದ ಸುಳ್ಳು ( ಮಿಥ್ಯಾಭೂತವಾದುದು ) ಎಂದು ಸಿದ್ಧಸುತ್ತದೆಯೆಂದು ಹೇಳುವುದು ಸಮಂಜಸವಲ್ಲ ಏಕೆಂದರೆ "ಯಚ್ಚಾವಿಕೃತಮೇವೈಕಂ" ಇತ್ಯಾದಿ ಹಿಂದಿನ ಪಾದದ ಅನುವ್ಯಾಖ್ಯಾನದಲ್ಲಿ ಹೇಳಿದ ಯುಕ್ತಿಯಿಂದ (ಉಕ್ತನ್ಯಾಯೇನ) "ಅವಿಕಾರತ್ವೇ"– (ಜಗತ್ತು ಬ್ರಹ್ಮವಿಕಾರವಲ್ಲವೆಂಬುದನ್ನು ) " ಸಾಧಿತೇ " - ಸಾಧನಮಾಡಿರಲು, ' ಕಥಂ ತದನನ್ಯತಾ " - ಜಗತ್ತು ಬ್ರಹ್ಮವಿವರ್ತವೆಂಬುದು ಹೇಗೆ ? ಈ ರೀತಿಯಾಗಿ ಪ್ರಮಾಣಾಭಾವ ಪರವಾಗಿ ವ್ಯಾಖ್ಯಾನಿಸಬೇಕು ಹೀಗೆ ಅರ್ಥ "ಅಸ್ಯ" - ಈ ಸೂತ್ರದ

"ತೇನ" - ಜಗತ್ತಿಗೆ ಬ್ರಹ್ಮಾನನ್ಯತ್ವವು ( ಬ್ರಹ್ಮಾಭೇದವು-ಬ್ರಹ್ಮವ್ಯತಿರೇಕ

व्याख्याननिराकरणं स्वव्याख्यानदृढीकरणार्थत्वान्नासङ्गतमिति स्मारयति
कर्त्रनधीनसत्ता शक्त्यादिमत्कारणान्तरसव्यपेक्षा खलु घटादिसृष्टिर्दृष्टा ।
ततो महदादिसृष्टिरपि कर्तृव्यतिरिक्तस्वतन्त्रकारणसापेक्षा । सृष्टि-

— ಪದಾರ್ಥದೀಪಿಕಾ —

ದಿಂದ,'' ಹೀಗೆ ಅರ್ಥ ಇದರಿಂದ ಅಪವ್ಯಾಖ್ಯಾನದ ನಿರಾಕರಣವು ತಮ್ಮ ವ್ಯಾಖ್ಯಾನದ ದೃಢೀಕರಣಕ್ಕಾಗಿರುವುದರಿಂದ ಅಸಂಗತವಲ್ಲವೆಂಬುದನ್ನು ಸ್ಮರಣಕ್ಕೆ ತಂದುಕೊಂಡುತ್ತಾರೆ ಕರ್ತೃವಿನ ಅಧೀನವಾಗದ ಸತ್ತಾ ( ಅಸ್ತಿತ್ವ ) ಶಕ್ತಿ ಮುಂತಾದುದುಳ್ಳ ಕಾರಣಾಂತರ ಸಾಪೇಕ್ಷವಾದುದಾಗಿಯೇ ಘಟಾದಿಗಳ ಸೃಷ್ಟಿಯು ಕಂಡು ಬಂದಿದೆ ಆದುದರಿಂದ " ಮಹದಾದಿ ಸೃಷ್ಟಿಯೂ ಕರ್ತೃ ವ್ಯತಿರಿಕ್ತವಾದ ಸ್ವತಂತ್ರ ಸಾಧನ (ಕಾರಣ) ಸಾಪೇಕ್ಷವಾದುದು ಏಕೆಂದರೆ

— ವಿಶೇಷಾರ್ಥಪ್ರದೀಪಿಕಾ —

ವಾಗಿ ಅಸತ್ಯವಾಗಿರುವುದು ಬ್ರಹ್ಮನಲ್ಲಿ ಆರೋಪಿತವಾಗಿರುವುದು ಈ ಮುಂತಾದುದು) ಎಲ್ಲ ( ಯಾವದೇ ) ತರಹಗಳಿಂದಲೂ ಇಲ್ಲಿ ಹೇಳಲ್ಪಡುವುದಿಲ್ಲ, ಈ ಕಾರಣದಿಂದ,

" ಅತೋ ಯಥಾರ್ಥಬಂಧಸ್ಯ ವಿನಾ ವಿಷ್ಣುಪ್ರಸಾದತಃ । ಅನಿವೃತ್ತೇಸ್ತದರ್ಥಂ ಹಿ ಜಿಜ್ಞಾಸಾತ್ರ ವಿಧೀಯತೇ" ಇತ್ಯಾದಿ ಅನುವ್ಯಾಖ್ಯಾನ ಪದ್ಯಗಳಲ್ಲಿ ಈ ವಿಷಯವು ಅನೇಕ ತರಹಗಳಿಂದ ಹೇಳಲ್ಪಟ್ಟಿದೆಯಾದುದರಿಂದ "ಸ್ಮಾರಯತಿ" ಎಂಬುದಾಗಿ ಹೇಳಿದ್ದಾರೆ

"ಸ್ವತಂತ್ರ ಸಾಧನ'' ಈ ಶಬ್ದದ ಅರ್ಥವನ್ನು ವಿವರಿಸುತ್ತ, ವಿರೋಧಿಯಾದ ಯುಕ್ತಿಗಳು ಹೇಗೆ ಬಹಳವಿರುವವೆಂಬುದನ್ನು "ಕರ್ತ್ರನಧೀನ ಸತ್ತಾಶಕ್ತ್ಯಾದಿ ಮತ್ಕಾರಣಾಂತರಸವ್ಯಪೇಕ್ಷಾ '' ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ. "ಸ್ವತಂತ್ರಕಾರಣ'' ಈ ಶಬ್ದಕ್ಕೆ ''ಈಶ್ವರನ ಅಧೀನವಾಗದ ಸತ್ತಾ-ಶಕ್ತಿ ಮುಂತಾದುದುಳ್ಳ ಕಾರಣ''ವೆಂದು ಅರ್ಥ ಸೂತ್ರದಲ್ಲಿರುವ ಪ್ರತಿಜ್ಞಾಂಶದ ವ್ಯಾವೃತ್ತಿಗಾಗಿ ( ಬ್ರಹ್ಮಸು-( ಕರ್ತೃ ) ಸ್ವತಂತ್ರ ಕಾರಣಾಂತರ ಸಾಪೇಕ್ಷ'' ನೆಂಬುದರ ವ್ಯಾವೃತ್ತಿಗಾಗಿ) ''ಕರ್ತೃವ್ಯತಿರಿಕ್ತ'' ಎಂಬುದಾಗಿ ಹೇಳಿದ್ದಾರೆ '' ಸೃಷ್ಟಿ '' ಶಬ್ದಕ್ಕೆ '' ಕಾರ್ಯ ವಿಷಯಕವಾಗಿರುವ ಕರ್ತೃವಿನ ವ್ಯಾಪಾರವೆಂದು ಅರ್ಥ. ಕರ್ತೃವ್ಯತಿರಿಕ್ತ ಸ್ವತಂತ್ರ ಕಾರಣಸಾಪೇಕ್ಷೋತ್ಪತ್ತಿಕಂ'', ಇಲ್ಲಿ '' ಉತ್ಪತ್ತಿ '' ಶಬ್ದಕ್ಕೆ ಕಾರ್ಯಗತವಾದ ಧರ್ಮವೆಂದು ಅರ್ಥ ಆದುದರಿಂದ, "ಸೃಷ್ಟಿ ಉತ್ಪತ್ತಿ" ಈ ಎರಡೂ ಶಬ್ದ ಪ್ರಯೋಗಗಳಲ್ಲಿ ಪುನರುಕ್ತಿಯಿಲ್ಲವೆಂದು ತಿಳಿಯಬೇಕು "ಇತಿ

त्वाद्घटस्यष्टिवत् । महदादिकं वा कर्तृव्यतिरिक्तस्वतन्त्रकारणसापेक्षो त्पत्तिकं कार्यत्वाद्घटवत् । प्रकृत्यादिकं वा स्वतन्त्रं कारणत्वान्मृदादिवत् । ईश्वरो वा स्वतन्त्रकारणान्तरसापेक्षः । कर्तृत्वात्कुलालादिवदिति युक्तिविरुद्धत्वाज्जन्मादिसूत्रेऽभिप्रेतं यत्परस्यैव ब्रह्मणः स्वातन्त्र्यं तन्नोपपद्यते । न च श्रुतिविरोधः । श्रुतीनां ब्रह्मणो जगत्कारणत्व-

— ಪದಾರ್ಥ ದೀಪಿಕಾ —

ಸೃಷ್ಟಿಯಾಗಿದೆ ಇದರಲ್ಲಿ ಘಟಾದಿ ಸೃಷ್ಟಿಯು ದೃಷ್ಟಾಂತವು ಅಥವಾ ಮಹದಾದಿಗಳು ಕರ್ತೃವ್ಯತಿರಿಕ್ತವಾದ ಸ್ವತಂತ್ರಕಾರಣಸಾಪೇಕ್ಷವಾದ ಉತ್ಪತ್ತಿಯುಳ್ಳದ್ದು ಏಕೆಂದರೆ ಕಾರ್ಯವಾಗಿದೆ ಘಟಾದಿಗಳಿದರಲ್ಲಿ ದೃಷ್ಟಾಂತವು ಅಥವಾ ಪ್ರಕೃತಿ ಮುಂತಾದುದು ಸ್ವತಂತ್ರವಾದುದು ಏಕೆಂದರೆ ಕಾರಣವಾಗಿದೆ ಇದರಲ್ಲಿ ಮೃದಾದಿಗಳು ದೃಷ್ಟಾಂತಗಳು ಇಲ್ಲವೆ ಈಶ್ವರನು ಸ್ವತಂತ್ರಸಾಧನಾಂತರ ಸಾಪೇಕ್ಷನು ಏಕೆಂದರೆ ಕರ್ತೃವಾಗಿರುತ್ತಾನೆ ಇದರಲ್ಲಿ ಕುಲಾಲಾದಿಗಳು ದೃಷ್ಟಾಂತರು " ಈ ರೀತಿಯಾದ ಯುಕ್ತಿಗಳಿಂದ ವಿರುದ್ಧವಾದುದರಿಂದ, ಜನ್ಮಾದಿ ಸೂತ್ರದಲ್ಲಿ ಅಭಿಪ್ರೇತವಾದ ಪರಬ್ರಹ್ಮನಿಗೇ ಸ್ವಾತಂತ್ರ್ಯವೆಂಬ ವಿಷಯವು ಯಾವದೇ ಅದು ಯುಕ್ತವಾಗುವುದಿಲ್ಲ ಇನ್ನು ಶ್ರುತಿವಿರೋಧವೂ ಬರುವುದಿಲ್ಲ ಏಕೆಂದರೆ ಶ್ರುತಿಗಳು ಜಗತ್ಕಾರಣತ್ವವನ್ನಷ್ಟೇ ತಿಳಿಸಲುದ್ದೇಶವು

— ವಿಶೇಷಾರ್ಥಪ್ರದೀಪಿಕಾ —

ಯುಕ್ತಿ-ವಿರುದ್ಧತ್ವಾತ್'' ಇಲ್ಲಿರುವ ''ಇತಿ'' ಶಬ್ದಕ್ಕೆ ''ಈ ಪ್ರಕಾರ'' (ಹೀಗೆ) ಎಂದು ಅರ್ಥ ''ಕಾರಣಾಂತರ'' ಎಂಬಲ್ಲಿ ''ಕಾರಣಾಂತರ', ಪದವನ್ನು ತೆಗೆದು ಹಾಕಿ ''ಅಧಿಷ್ಠಾನ''ಪದವನ್ನು ಇಡುವುದರಿಂದ, ಹಾಗು ಮುಂದೆಯೂ ಕಾರಣಾಂತರ ಮುಂತಾದ ಪದಗಳ ಬದಲಾಗಿ ''ಅಧಿಷ್ಠಾನ ಪದವನ್ನಿಡುವುದರಿಂದ. "ಕಾರಣಕ್ಕೆ ಹೇಗೋ ಹಾಗೆ ಅಧಿಷ್ಠಾನಕ್ಕೂ ಸ್ವಾತಂತ್ರ್ಯವು ಇರುವುದೆಂಬ ಯುಕ್ತಿ ವಿರುದ್ಧವಾಗಿದೆ ಹಾಗು ''ಸೃಷ್ಟಿ" ಮುಂತಾದ ಪದಗಳ (ಸ್ಥಾನಗಳಲ್ಲಿ) ಬದಲಾಗಿ ''ಸ್ಥಿತಿ, ಸಂಹಾರ'' ಮುಂತಾದ ಪದಗಳನ್ನು ಇಡುವುದರಿಂದ, ''ಪ್ರಯೋಯದಲ್ಲಿ ವ್ಯತ್ಯಾಸ (ಭೇದ) ವಾಗಿ ಅನೇಕ ಯುಕ್ತಿಗಳಿಂದ ವಿರುದ್ಧವಾಗುತ್ತದೆ ಆದುದರಿಂದ'', ಎಂಬುದಾಗಿ ಅರ್ಥವನ್ನು ತಿಳಿಯಬೇಕು ಇದರಿಂದ, ಪ್ರಯೋಗದಲ್ಲಿ ವ್ಯತ್ಯಾಸವಾದ ಮಾತ್ರದಿಂದ, ಅನೇಕ ಪ್ರಯೋಗಗಳಾಗುವುದು ಬೇರೆ ಅಧಿಕರಣಗಳಲ್ಲಿ ಶಕ್ಯವಾದುದರಿಂದ ಅತಿಪ್ರಸಂಗ'' ವೆಂಬ ಆಶಂಕೆಯು ನಿರಾಸಗೊಳಿಸಲ್ಪಟ್ಟಿತೆಂದು ಚಂದ್ರಿಕಾ ಗ್ರಂಥದಲ್ಲಿ ಹೇಳಲಾಗಿದೆ

मात्रपरत्वात् । स्वतन्त्रकारणान्तरनिरासे श्रुतेरभावात् । भावेऽप्य-पौरुषेयतया श्रुतिप्राबल्यवद्बाहुल्येन युक्तिप्राबल्यस्यापि सम्भवात् । सत्प्रतिपक्षया श्रुत्याऽभिप्रेतावधारणानुपपत्तेरित्येवं प्राप्तम् । स्वतन्त्र-कारणान्यत्व ब्रह्मणोऽन्यस्य स्वतन्त्रकारणत्वमिति यावत् । अत्राधि-करणे । तदनन्यत्वमित्यनेन निषिध्यते । महदादिसृष्टौ यत्स्वतन्त्रं कारणं तस्य तदनन्यत्वमिति । यद्यत्र स्वतन्त्रकारणाभाव इत्येव

— ಪದಾರ್ಥದೀಪಿಕಾ —

ಳ್ಳವುಗಳು, ಸ್ವತಂತ್ರವಾದ ಕಾರಣಾಂತರದ ನಿರಾಸವಮಾಡುವ ವಿಷಯದಲ್ಲಿ ಶ್ರುತಿಯು ಇರುವುದಿಲ್ಲ ಇದ್ದರೂ ಅಪೌರುಷೇಯವಾದುದರಿಂದ ಶ್ರುತಿಗ ಪ್ರಾಬಲ್ಯವಿರುವುದರಂತೆ ಬಾಹುಲ್ಯ (ಬಹು ಸಂಖ್ಯೆಯುಳ್ಳದ್ದಾಗಿರುವುದು)ವಿರುವುದ ರಿಂದ ಯುಕ್ತಿಯ ಪ್ರಾಬಲ್ಯವೂ ಸಂಭವಿಸುತ್ತದೆ ಸತ್ಪ್ರತಿಪಕ್ಷ ರೂಪವಾದ ಶ್ರುತಿಯಿಂದ ಅಭಿಪ್ರೇತವಾದ ಅವಧಾರಣವು ಯುಕ್ತವಾಗಲಾರದೆಂದು ಸಿದ್ಧ (ಪ್ರಾಪ್ತ) ವಾಗುತ್ತದೆ "ಸ್ವತಂತ್ರಕಾರಣಾನ್ಯತ್ವಂ" ಬ್ರಹ್ಮನಿಂದ ಭಿನ್ನವಾದ ಇನ್ನೊಂದಕ್ಕೆ ಸ್ವತಂತ್ರ ಕಾರಣತ್ವವು, ಹೀಗೆ ಅರ್ಥ "ಅತ್ರ"=ಈ ಅಧಿಕರಣದಲ್ಲಿ "ತದನನ್ಯತ್ವಂ" ಇದರಿಂದ ನಿರಾಕರಿಸಲ್ಪಡುತ್ತದೆ-ಮಹದಾದಿ ಸೃಷ್ಟಿಯಲ್ಲಿ ಸ್ವತಂತ್ರ ಯಾವದೋ ಕಾರಣವು ಅದು ಬ್ರಹ್ಮನಿಂದ ಅನನ್ಯವಾದುದು," ಹೀಗೆ ಇಲ್ಲಿ—

— ವಿಶೇಷಾರ್ಥಪ್ರದೀಪಿಕಾ —

"ನ ಚ ಶ್ರುತಿವಿರೋಧಃ', -"ಯತೋ ವಾ ಇಮಾನಿ ಭೂತಾನಿ, ಸದೇವ ಸೋಮ್ಯೇದಮಗ್ರ", ಈ ಮುಂತಾದ ಶ್ರುತಿವಿರೋಧವು

ಸೂತ್ರದಲ್ಲಿರುವ "ಆರಂಭಣ ಶಬ್ದಾದಿಭ್ಯಃ" ಎಂಬ ಹೇತು ಭಾಗದಿಂದ ನಿರಾಕರಿಸಲ್ಪಡುವ ಅರ್ಥವನ್ನು "ಸ್ವತಂತ್ರ ಕಾರಣಾಂತರ ನಿರಾಸೇ" ಎಂಬ ಪದದಿಂದ ತೋರಿಸಿದ್ದಾರೆ ಸೂತ್ರದಲ್ಲಿಯ "ಆದಿ" ಪದದಿಂದ ನಿರಾಕರಿಸಲ್ಪಡ ಬೇಕಾದ ಅರ್ಥವನ್ನು "ಭಾವೇಽಪಿ" ಇತ್ಯಾದಿ ವಾಕ್ಯನಿಂದ ಹೇಳುತ್ತಾರೆ

"ಸ್ವತಂತ್ರಕಾರಣಾನ್ಯತ್ವಂ" ಇತ್ಯಾದಿ ವಚನಗಳಿಂದ ಮೂಲ ಅನು ವ್ಯಾಖ್ಯಾನದ ಅನ್ವಯವನ್ನು ತೋರಿಸುತ್ತಾರ 'ತೇನ" ಎಂಬುದಕ್ಕೆ ಇನ್ನೊಂದು ಅರ್ಥವು "ತದನನ್ಯತ್ವ ಮಿತ್ಯನೇನ" (ತದನನ್ಯತ್ವಂ ಎಂಬ ಪದದಿಂದ) ಎಂಬು ದಾಗಿ ಸ್ವತಂತ್ರ ಕಾರಣಾನ್ಯತ್ವವು ಹೇಗೆ ನಿಷೇಧಿಸಲ್ಪಡುವದು? ಈ ಆಶಂಕೆ ಯನ್ನು ನಿರಾಕರಿಸಲು, ಸೂತ್ರದ ಪ್ರತಿಜ್ಞಾಂಶಕ್ಕೆ 'ಮಹದಾದಿ ಸೃಷ್ಟೌ"

ब्रूयात् । तदा ब्रह्मणोऽपि स्वातन्त्र्यं प्रतिषिद्धं स्यात् । तदनन्यत्वं स्वतन्त्रकारणस्येत्युक्ते हि स्वतन्त्रकारणं तदेव नान्यदिति लभ्यते । तदुपपादनाय यदारम्भणशब्दादिभ्य इति स्वपक्षे प्रमाणमुक्तम् । यश्च भावे चोपलब्धेरिति विपक्षे प्रमाणाभावस्तदुभयं हिशब्देन सूचयति ।

नन्वारम्भणाद्याक्षेपशब्दादिभ्य इति वक्तव्यम् । सत्यम् । लक्षितलक्षणयैष एवार्थः प्रतिपाद्यत इत्यदोषः । तथाऽपि किंस्विदा-

— ಪದಾರ್ಥದೀಪಿಕಾ —

ಒಂದು ಪಕ್ಷದಲ್ಲಿ ಸ್ವತಂತ್ರ ಕಾರಣಾಂತರವಿರುವುದಿಲ್ಲವೆಂದು ಹೇಳಿದ್ದರೆ, ಆಗ ಬ್ರಹ್ಮ ನಿಗೂ ಸ್ವಾತಂತ್ರ್ಯವು ನಿಷಿದ್ಧವಾಗುವುದು "ತದನನ್ಯತ್ವಂ" "ಸ್ವತಂತ್ರ ಕಾರ ಣಸ್ಯ" (ಸ್ವತಂತ್ರ ಕಾರಣವು ಬ್ರಹ್ಮನಿಂದ ಬೇರೆಯ.ದಲ್ಲ) ಹೀಗ ಹೇಳಿದರೆ ಮಾತ್ರ ಸ್ವತಂತ್ರ ಕಾರಣವು ವಿಷ್ಣುವೇ, ಬೇರೆಯಲ್ಲ, ಎಂಬ ವಿಷಯವು ಲಭಿಸುವದು. ಇದರ ಉಪಪಾದನಕ್ಕಾಗಿ "ಆರಂಭಣ ಶಬ್ದಾದಿಭ್ಯಃ" ಎಂಬುದಾಗಿ ಸ್ವಪಕ್ಷದಲ್ಲಿ ಪ್ರಮಾಣವನ್ನು ಹೇಳಿದುದು, ಹಾಗು "ಭಾವೇ ಚೋಪಲಬ್ಧೇಃ" (ಇದ್ದ ಪಕ್ಷದಲ್ಲಿ ಉಪಲಬ್ಧವಾಗುತ್ತಿತ್ತು) ವಿಪಕ್ಷದಲ್ಲಿ ಪ್ರಮಾಣವಿಲ್ಲವೆಂದು ಹೇಳಿದುದು, ಇವೆರಡೂ ವಿಷಯಗಳನ್ನು "ಹಿ" ಶಬ್ದದಿಂದ ಸೂಚಿಸುತ್ತಾರೆ

ಇನ್ನು- 'ಆರಂಭಣಾದ್ಯಾಕ್ಷೇಪಶಬ್ದಾದಿಭ್ಯಃ" (ಆರಂಭಣ ಮುಂತಾದ ಆಕ್ಷೇಪ ಶಬ್ದಾದಿಗಳಿಂದ) ಹೀಗೆ ಸೂತ್ರದಲ್ಲಿ ಹೇಳತಕ್ಕದ್ದು ಇದು ನಿಜ ಆದರೂ "ಲಕ್ಷಿತಲಕ್ಷಣಾ" ವೃತ್ತಿಯಿಂದ ಈ ಅರ್ಥವನ್ನು ಹೇಳಲಾಗುತ್ತದೆ ಆದುದರಿಂದ ದೋಷವಿಲ್ಲ ಆದರೂ "ಕಿಂ ಸ್ವಿದಾಸೀದಧಿಷ್ಠಾನಂ" ಎಂಬ ಶ್ರುತಿಯ

— ವಿಶೇಷಾರ್ಥಪ್ರದೀಪಿಕಾ —

ಇತ್ಯಾದಿ ವಾಕ್ಯಗಳಿಂದ ಅರ್ಥ ಹೇಳುತ್ತಾರ "ತದುಭಯಂ" ಸ್ವಪಕ್ಷದಲ್ಲಿ ಪ್ರಮಾಣವಿದೆ, ವಿಪಕ್ಷದಲ್ಲಿ ಪ್ರಮಾಣವಿಲ್ಲ, ಈ ಎರಡೂ ಸಂಗತಿಗಳನ್ನು "ಹಿ" ಶಬ್ದದಿಂದ ಸೂಚಿಸುತ್ತಾರೆ ಈ ವಿಷಯವು ಮುಂದೆ ಮೂಲ ಗ್ರಂಥದಲ್ಲಿಯೇ ಈ ಎರಡೂ ಸೂತ್ರಗಳ ಅರ್ಥವನ್ನು ವಿಶದಪಡಿಸುವುದರಿಂದ ವ್ಯಕ್ತವಾಗುತ್ತದೆ

'ಲಕ್ಷಿತ ಲಕ್ಷಣಯಾ"-ಪ್ರಧಾನವಾದ ಉಪಾದಾನವೆಂಬ ಅರ್ಥದ ವಾಚಕ ವಾದ 'ಆರಂಭಣ" ಶಬ್ದಕ್ಕೆ "ಅಧಿಷ್ಠಾನ ಮುಂತಾದ ಸಾಧನ ಸಮೂಹ" ಎಂಬ ಅರ್ಥದಲ್ಲಿ ಲಕ್ಷಣಾವೃತ್ತಿಯನ್ನು ಹೇಳಿ, ಅದರಿಂದ 'ಆ ಸಾಧನಗಳ

सीदधिष्ठानमिति श्रौतनिर्देशानुसारेणाधिष्ठानस्योपादानमुचितमिति चेन्न । शाब्दादप्यर्थप्राधान्यस्य बलवत्त्वात् साधकतमं करणमिति

— ಪದಾರ್ಥದೀಪಿಕಾ —

ನಿರ್ದೇಶಾನುಸಾರವಾಗಿ "ಅಧಿಷ್ಠಾನ"ವನ್ನು ಸ್ವೀಕರಿಸುವುದು ಉಚಿತವೆಂದು ಹೇಳುವುದು ಸರಿಯಲ್ಲ ಏಕೆಂದರೆ ಶಬ್ದಲಭ್ಯವಾದ ಪ್ರಾಧಾನ್ಯಕ್ಕಿಂತ ಅರ್ಥ ( ಅರ್ಥಲಭ್ಯ ) ಪ್ರಾಧಾನ್ಯವು ಬಲವುಳ್ಳದ್ದಾಗಿದೆ ಏಕೆಂದರೆ ಸಾಧಕತಮ ವಾದುದು ಕರಣವೆಂಬ ಪಾಣಿನಿಯ ವಚನವಿರುತ್ತದೆ ಇನ್ನು- ಸ್ವತಂತ್ರ

— ವಿಶೇಷಾರ್ಥಪ್ರದೀಪಿಕಾ —

ಆಕ್ಷೇಪ'' ವೆಂಬ ಅರ್ಥದಲ್ಲಿ ಲಕ್ಷಣಾವೃತ್ತಿಯನ್ನು ಹೇಳಲಾಗಿದೆ ಹೀಗೆ ''ಲಕ್ಷಿತ ವಾದ ಅರ್ಥದ ಮುಖಾಂತರದಿಂದ ಮಾಡಿದ ಲಕ್ಷಣಾವೃತ್ತಿಯಿಂದ'', ಹೀಗೆ ಅರ್ಥ ಒಂದು ಪದಕ್ಕೆ ಲಕ್ಷಣಾವೃತ್ತಿಯಿಂದ ಬರುವ ಅರ್ಥಕ್ಕೂ ಅನ್ವಯವು ಸಂಭವಿಸದಿರುವಾಗ, ಅದಕ್ಕೂ ಲಕ್ಷಣಾವೃತ್ತಿಯನ್ನು ಹೇಳಿದರೆ ಅದು '' ಲಕ್ಷಿತ ಲಕ್ಷಣಾ '' ಎನಿಸುತ್ತದೆ ವಾಚ್ಯವಾದ ಅರ್ಥಕ್ಕೆ ಅನ್ವಯವು ಸಂಭವಿಸದಿರು ವಾಗ ಕಲ್ಪಿಸಲ್ಪಡುವ ವೃತ್ತಿಯು ''ಲಕ್ಷಣಾ'', ಹೀಗೆ ಭೇದವನ್ನು ತಿಳಿಯಬೇಕು ಶ್ರುತಿಯಲ್ಲಿ ( ಕಿಂ ಸ್ವಿದಾಸೀದಧಿಷ್ಠಾನಂ ಇತ್ಯಾದಿಯಾಗಿ) ''ಅಧಿಷ್ಠಾನ'' ವನ್ನು ''ಆರಂಭಣ'' ಕ್ಕಿಂತ ಮುಂಚೆಯೇ ಗ್ರಹಿಸಿದುದರಿಂದ, '' ಆರಂಭಣ' ' ಕ್ಕಿಂತ ಅಧಿಷ್ಠಾನಕ್ಕೆ ಪ್ರಾಧಾನ್ಯವು ಶಬ್ದದಿಂದ ಬಂದಿರುತ್ತದೆ ಆದುದರಿಂದ ಸೂತ್ರ ದಲ್ಲಿ ''ಅಧಿಷ್ಠಾನ ಶಬ್ದಾದಿಭ್ಯಃ'' ಎಂಬುದಾಗಿಯೇ ಹೇತುವಾಚಕ ಪದವನ್ನಿಡ ಬೇಕಾಗಿತ್ತು ಅದರ ಬದಲಾಗಿ '' ಆರಂಭಣ ಶಬ್ದಾದಿಭ್ಯಃ '' ಎಂಬುದಾಗಿ ಪ್ರಯೋಗಿಸಿದುದರಲ್ಲಿ ನಿಮಿತ್ತವಿಲ್ಲವಾದುದರಿಂದ ಹೇಳಬೇಕಾದುದನ್ನು ಸೂತ್ರ ದಲ್ಲಿ ಹೇಳದೆ ಇದ್ದು ಹೇಳಬಾರದುದನ್ನು ಹೇಳಿರುತ್ತಾರೆಂಬ ಆಕ್ಷೇಪವನ್ನು ''ತಥಾಽಪಿ'' ಇತ್ಯಾದಿ ವಾಕ್ಯದಿಂದ ತೋರಿಸಿ, ''ಶಾಬ್ದಾದಪಿ'' ಇತ್ಯಾದಿ ವಾಕ್ಯ ದಿಂದ ಪರಿಹರಿಸುತ್ತಾರೆ ''ಅಧಿಷ್ಠಾನ'' ಕ್ಕೆ ''ಆರಂಭಣ'' ಕ್ಕಿಂತ ಪ್ರಾಧಾನ್ಯವು ಶಬ್ದದಿಂದ ಬಂದಿದೆ. (ಮೊದಲು ಆ ಶಬ್ದವನ್ನು ಪ್ರಯೋಗಿಸಿದುದರಿಂದ ಪ್ರಾಪ್ತವಾಗಿದೆ) ಆದರೆ "ಆರಂಭಣ" ಕ್ಕೆ ಪ್ರಾಧಾನ್ಯವು ಅರ್ಥಮೂಲಕವಾದ ಪ್ರಾಪ್ತವಾಗಿದೆ- ಅಧಿಷ್ಠಾನ ಶಬ್ದದ ಅರ್ಥಕ್ಕಿಂತ "ಆರಂಭಣ" ಶಬ್ದದ ಅರ್ಥವು ಪ್ರಧಾನವಾಗಿದೆ ಅಧಿಷ್ಠಾನ ಶಬ್ದಕ್ಕೆ ಅಧಿಕರಣವೆಂದು ಅರ್ಥ 'ಆರಂಭಣ" ಶಬ್ದಕ್ಕೆ ಉಪಾದಾನವೆಂದು ಅರ್ಥ ಇವೆರಡರಲ್ಲಿ ಉಪಾದಾನವು (ಸಾಧನ) ಮುಖ್ಯವಾದುದು ಆದ್ದರಿಂದ ಶಬ್ದದಿಂದ ತೋರಿದ ಪ್ರಾಧಾನ್ಯಕ್ಕಿಂತ ಅರ್ಥ

स्मरणात् । ननु च स्वतन्त्रकारणस्य ब्रह्मानन्यत्वं प्रतिज्ञाय कारणान्तराभावे प्रमाणोपन्यासोऽसङ्गतः । मैवम् । अस्त्यत्राभिप्रायः । वक्ष्यते हि ब्रह्मातिरिक्तप्रकृत्यादिकारणसद्भावः । आरम्भणशब्दादिभ्यस्तदभावोऽवगम्यते । ततोऽर्थात्स्वतन्त्रकारणान्तराभाव एव सिध्यतीति । ननु च युक्तीरुपलभमानोऽपि सूत्रकारः कथं स्वतन्त्र-

— ಪದಾರ್ಥದೀಪಿಕಾ —

ಕಾರಣವು ಬ್ರಹ್ಮನಿಂದ ಬೇರೆಯಾದುದಲ್ಲವೆಂಬುದನ್ನು ಪ್ರತಿಜ್ಞಾರೂಪವಾಗಿ ಹೇಳಿ, ಕಾರಣಾಂತರವಿಲ್ಲವೆಂಬ ವಿಷಯದಲ್ಲಿ ಪ್ರಮಾಣವನ್ನು ಉದಾಹರಿಸುವುದು ಅಸಂಗತವಾದುದು, ಹೀಗೆ ಶಂಕಿಸಬಾರದು ಏಕೆಂದರೆ ಇದರಲ್ಲಿ ಒಂದು ಅಭಿಪ್ರಾಯವಿದೆ, ಅದೇನೆಂದರೆ— " ಬ್ರಹ್ಮನಿಂದ ಬೇರೆಯಾದ ಪ್ರಕೃತಿ ಮುಂತಾದ ಕಾರಣಗಳಿವೆಯೆಂಬುದನ್ನು ಮುಂದೆ ಸೂತ್ರಕಾರರು ಹೇಳುವರು. ಆರಂಭಣ ಶಬ್ದಾದಿಗಳಿಂದ ಕಾರಣದ ಅಭಾವ ತಿಳಿದು ಬರುತ್ತದೆ ಆದುದರಿಂದ, ಅರ್ಥಾತ್ತಾಗಿ ಸ್ವತಂತ್ರವಾದ ಬೇರೆ ಕಾರಣವಿಲ್ಲವೆಂಬ ಅರ್ಥವೇ ಸಿದ್ಧಿಸುತ್ತದೆ " ಎಂಬುದು

ಇನ್ನು- ಯುಕ್ತಿಗಳನ್ನು ಕಂಡಿದ್ದರೂ ಸೂತ್ರಕಾರರು, ಸ್ವತಂತ್ರ ಕಾರ

— ವಿಶೇಷಾರ್ಥಪ್ರದೀಪಿಕಾ —

ದಿಂದ (ಅರ್ಥಮೂಲಕ) ಬರುವ ಪ್ರಾಧಾನ್ಯವು ಬಲಿಷ್ಠವಾದುದರಿಂದ "ಆರಂಭಣಶಬ್ದಾದಿಭ್ಯಃ" ಎಂಬುದಾಗಿಯೇ ಹೇಳಿದುದು ಸರಿಯಾದುದು, ಹೀಗೆ ಭಾವ. ಕಾರ್ಯದ ಉತ್ಪತ್ತಿಯಲ್ಲಿ ಉಪಾದಾನವು ಕಾರಣವು, ಎಂಬ ಅಭಿಪ್ರಾಯದಿಂದ ಪಾಣಿನೀಯ ಸೂತ್ರದ ಸಂವಾದವನ್ನು "ಸಾಧಕತಮಂ" ಇತ್ಯಾದಿ ವಚನದಿಂದ ತೋರಿಸುತ್ತಾರೆ "ಆರಭ್ಯತೇ ಅನೇನ" ಎಂಬ ವ್ಯುತ್ಪತ್ತಿಯಿಂದ, "ಆರಂಭಣ" ಶಬ್ದಕ್ಕೆ ಪ್ರಧಾನರೂಪ ಕರಣವೆಂದು ಅರ್ಥ ಇದು "ಅಧಿಷ್ಠಾನ" ಶಬ್ದದ "ಅಧಿಕರಣ'' ಎಂಬ ಅರ್ಥಕ್ಕಿಂತ ಪ್ರಧಾನವಾದುದು ಹೀಗೆ ಇಲ್ಲಿ ತಾತ್ಪರ್ಯ

"ಅಸಂಗತಃ" = ಕಾರಣಾಂತರವಿಲ್ಲವೆಂಬಲ್ಲಿ ಪ್ರಮಾಣವನ್ನು ಹೇಳುವುದರಿಂದ ಸ್ವತಂತ್ರ ಕಾರಣವಿಲ್ಲವೆಂಬ ಅರ್ಥವು ಸಿದ್ಧಸಲಿಲ್ಲವಾದ್ದರಿಂದ ಅಸಂಗತವೆಂದು ತಿಳಿಯಬೇಕು. (ಸೂತ್ರದಲ್ಲಿ)

"ವಕ್ಷ್ಯತೇ" = ಬ್ರಹ್ಮಾತಿರಿಕ್ತವಾದ ಪ್ರಕೃತಿ ಮುಂತಾದ ಕಾರಣಗಳಿರುವುದೆಂಬ ಸಂಗತಿಯು 'ಸತ್ತ್ವಾಚ್ಚ" ಎಂಬ ಸೂತ್ರದಲ್ಲಿ ಹೇಳಲ್ಪಡುವುದು; ಹೀಗೆ ಭಾವ

कारणान्तरभावे च प्रमाणैरुपलब्धेः प्रसङ्ग इति वदन्प्रमाणाभावमाह । एवं मन्यते । शुष्काभ्यो बह्वीयुक्तिभ्योऽपि श्रुत्यनुगृहीतानां बह्वीनां युक्तीनां प्राबल्यात्तद्विरुद्धानां पूर्वपक्षयुक्तीनामप्रामाण्यमिति ।

स्यादेतत् । अद्भ्यः सम्भूत इत्यादिवचनात्कथं ब्रह्मातिरिक्तस्य स्वतन्त्रकारणस्यानुपलब्धिः । न चात्र स्वातन्त्र्यं न श्रूयत इति वाच्यम् । पारतन्त्र्यानुक्तौ स्वातन्त್ರ್ಯस्य लोकानुरोधादेव सिद्धेरिति ।

— ಪದಾರ್ಥದೀಪಿಕಾ —

ಕಾರಣಾಂತರವಿರುವುದಾದರೆ ಪ್ರಮಾಣಗಳಿಂದ ಉಪಲಬ್ಧವಾಗಲೆಂಬುದಾಗಿ ಪ್ರಸಂಗವನ್ನು ಹೇಳುತ್ತ, ಪ್ರಮಾಣವಿಲ್ಲವೆಂಬುದಾಗಿ ಹೇಗೆ ಹೇಳುತ್ತಾರೆ? ಎಂದರೆ-"ಶುಷ್ಕವಾದ ಬಹು ಯುಕ್ತಿಗಳಿಗಿಂತಲೂ ಶ್ರುತಿಯ ಅನುಗ್ರಹ ಪಡೆದ ಬಹಳ ಯುಕ್ತಿಗಳು ಪ್ರಬಲವಾದುದರಿಂದ ಅದರ ವಿರುದ್ಧವಾದ ಪೂರ್ವಪಕ್ಷ ವ್ರಾಪಕ ಯುಕ್ತಿಗಳಿಗೆ ಪ್ರಾಮಾಣ್ಯವಿಲ್ಲ"ವೆಂಬುದಾಗಿ ಭಾವಿಸಿಯೇ ಹಾಗ ಹೇಳಿದ್ದಾರೆಂಬು ಸಮಾಧಾನವು

ಇದು ಇರಲಿ! "ಅದ್ಭ್ಯಃ ಸಂಭೂತಃ" ಇತ್ಯಾದಿ ವಚನವಿರುವುದರಿಂದ, ಬ್ರಹ್ಮಾತಿರಿಕ್ತವಾದ ಸ್ವತಂತ್ರಕಾರಣವು ಉಪಲಬ್ಧವಾಗುವುದಿಲ್ಲವೆಂಬುದು ಹೇಗೆ ಯುಕ್ತವಾಗುವದು? ಇನ್ನು ಅವುಗಳಿಗೆ ಸ್ವಾತಂತ್ರ್ಯವು ತಿಳಿದು ಬರುವುದಿಲ್ಲವೆಂದು ಹೇಳಬಾರದು ಏಕೆಂದರೆ-ಪಾರತಂತ್ರ್ಯವನ್ನು ಹೇಳದಿದ್ದಲ್ಲಿ ಸ್ವಾತಂತ್ರ್ಯವು ಲೋಕವನ್ನು ಅನುಸರಿಸಿಯೇ (ಲೋಕರೂಢಿಗನುಗುಣವಾಗಿಯೇ)

— ವಿಶೇಷಾರ್ಥಪ್ರದೀಪಿಕಾ —

ಎರಡನೆಯ ಸೂತ್ರದ ಮೇಲೆಯೂ ಅನುಪಪತ್ತಿಯನ್ನು ಆಶಂಕಿಸಿ, ಸಮಾಧಾನವನ್ನು "ನನು ಚ ಯುಕ್ತೀಃ" ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ "ಬಹ್ವೀನಾಂ ಯುಕ್ತೀನಾಂ'= ಪರತಂತ್ರವಾಗದಿರುವುದು, ಸ್ವತಂತ್ರವಾಗಿರುವುದು, ಸಾಧನಗಳಿಗೆ ಸತ್ತಾ ಮುಂತಾದುದನ್ನು ಕೊಡುವುದು, ಈ ಮುಂತಾದ ಬಹಳ ಯುಕ್ತಿಗಳಿಗೆ, ಹೀಗೆ ಅರ್ಥ ಇವೆಲ್ಲ ಯುಕ್ತಿಗಳು, ''ಆರಂಭಣಶಬ್ದಾದಿಭ್ಯಃ" ಎಂಬಲ್ಲಿರುವ "ಆದಿ' ಪದದಿಂದ ಹೇಳಲ್ಪಟ್ಟಿರುತ್ತವೆ

"ಲೋಕಾನುರೋಧಾದೇವ' = "ಚೈತ್ರನು ಹೋಗುತ್ತಾನೆ, ಮೈತ್ರನು ಉಣ್ಣುತ್ತಾನೆ' ಎಂಬಲ್ಲಿ ಸ್ವಾತಂತ್ರ್ಯವು (ಚೈತ್ರಾದಿಗಳಿಗೆ ಗಮನಾದಿಗಳಲ್ಲಿ) ಹೇಗೆ ತೋರುವದೋ ಹಾಗ 'ಅದ್ಭ್ಯಃಸಂಭೂತಃ" ಇತ್ಯಾದಿವಾಕ್ಯಗಳಿಂದ

एतत्परिहाराय सूत्रम् । ॐ सत्त्वाच्चावरस्येति ॐ ॥ तस्यायमर्थः । स्यादयं दोषो यदि वयं ब्रह्मातिरिक्तं कारणमेव नास्तीति वदामः । न चैवम् । अवरस्य तदधीनस्य प्रकृत्यादेः कारणस्य सत्त्वादिति । तदिदं परिहाराय न पर्याप्तम् । यावता पूर्वपक्षिणा पारतन्त्र्यानुक्तौ स्वातन्त्र्यमेव सेत्स्यतीत्युक्तम् । अन्यथा पूर्वपक्षस्य निर्दलत्वापत्ते-रित्यतः प्रकृत्यादेः कारणजातस्येश्वराधीनसत्ताकत्वे प्रमाणं दर्शयन्सूत्रं व्याचष्टे ॥ द्रव्यमिति । चेतना जीवाः । धृतिश्चित्प्रकृतिः । धारकत्वा-

## — ಪದಾರ್ಥದೀಪಿಕಾ —

ಸಿದ್ಧಿಸುತ್ತದೆ" ಹೀಗೆ ಶಂಕೆಯು ಬರುತ್ತದೆ ಈ ಆಶಂಕೆಯ ಪರಿಹಾರಕ್ಕಾಗಿ "ಓಂ। ಸತ್ವಾಚ್ಚಾವರಸ್ಯ ।ಓಂ॥"ಎಂಬ ಸೂತ್ರವು ಹೊರಟಿದೆ ಈ ಸೂತ್ರಕ್ಕೆ ಅರ್ಥವು ಹೀಗೆ-"ಬ್ರಹ್ಮವ್ಯತಿರಿಕ್ತವಾದ ಕಾರಣವೇ ಇಲ್ಲವೆಂದು ಹೇಳಿದಾಗ ಈ ದೋಷವು ಬರಬಹುದಿತ್ತು! ಆದರೆ ನಾವು ಹೇಳುವುದಿಲ್ಲ ಏಕೆ? "ಅವರಸ್ಯ" =ಅದರ (ಬ್ರಹ್ಮನ) ಅಧೀನವಾದ ಪ್ರಕೃತಿ ಮುಂತಾದ ಕಾರಣಕ್ಕೆ, "ಸತ್ವಾತ್"= ಅಸ್ತಿತ್ವವಿರುವುದರಿಂದ" ಹೀಗ ಆದರ ಇದಿಷ್ಟೇ ಹಿಂದೆ ತೋರಿಸಿದ ಆಶಂಕೆಯ ಪರಿಹಾರಕ್ಕೆ ಸಾಕಾಗುವದಿಲ್ಲ ಏಕೆಂದರೆ ಪೂರ್ವಪಕ್ಷಿಯು "ಪಾರತಂತ್ರ್ಯವನ್ನು ಹೇಳದಿದ್ದಲ್ಲಿ ಸ್ವಾತಂತ್ರವೇ ಸಿದ್ಧಸುತ್ತದೆ" ಎಂದು ಹೇಳಿದ್ದಾನೆ. ಹಾಗಿಲ್ಲದಿದ್ದಲ್ಲಿ ಪೂರ್ವಪಕ್ಷವು ನಿರ್ಬಲವಾಗಬೇಕಾದೀತು! ಈ ಕಾರಣದಿಂದ, ಪ್ರಕೃತಿ ಮುಂತಾದ ಕಾರಣ ಸಮುದಾಯಕ್ಕೆ ಈಶ್ವರನ ಅಧೀನವಾದ ಅಸ್ತಿತ್ವ (ಸ್ಥಿತಿ-ಸತ್ತೆ) ವಿರುವುದೆಂಬ ವಿಷಯದಲ್ಲಿ ಪ್ರಮಾಣವನ್ನು ತೋರಿಸುತ್ತ ಸೂತ್ರವನ್ನು "ದ್ರವ್ಯಂ ಕರ್ಮ

## — ವಿಶೇಷಾರ್ಥಪ್ರದೀಪಿಕಾ —

ಅಬಾದಿಗಳಿಗೆ ಸ್ವಾತಂತ್ರ್ಯವು ತೋರುವುದೆಂದು ಭಾವವು

"ಅನ್ಯಥಾ" — ಹಿಂದೆ ಹೇಳಿದಂತೆ ಸ್ವಾತಂತ್ರ್ಯವು ಹೇಳಲ್ಪಟ್ಟಿದೆಯೆಂಬ ಅರ್ಥದವರೆಗೆ ಪೂರ್ವಪಕ್ಷಿಯ ಅಭಿಪ್ರಾಯವನ್ನು ಹೇಳದಿದ್ದ ಪಕ್ಷದಲ್ಲಿ

"ಈಶ್ವರಾಧೀನಸತ್ವಾಕತ್ವೇ" = ಪ್ರಕೃತಿ ಮುಂತಾದ ಕಾರಣಗಳಿಗೆಲ್ಲ "ಅದ್ಭ್ಯಃಸಂಭೂತಃ" ಇತ್ಯಾದಿವಾಕ್ಯಗಳಲ್ಲಿ ಪಾರತಂತ್ರ್ಯವನ್ನು ಹೇಳಿರದಿದ್ದರೂ ಬೇರೆ ಶ್ರುತಿಗಳಲ್ಲಿ ಹೇಲಿರುವುದರಿಂದ ಈ 'ಅಧ್ಭ್ಯ' ಇತ್ಯಾದಿಸಾಧನಪ್ರತಿಪಾದಕ ಶ್ರುತಿಗಳಿಗೆ ಪರತಂತ್ರಸಾಧನಗಳನ್ನು ಹೇಳುವುದರಲ್ಲಿಯೇ ತಾತ್ಪರ್ಯವೆಂಬ ಅಭಿಪ್ರಾಯದಿಂದ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆಂದು ಭಾವ

## ॥ ॐ सत्त्वाच्चावरस्य ॐ ॥

## ॐ असद्व्यपदेशान्नेति चेन्न धर्मान्तरेण वाक्यशेषात् ॐ ॥

द्रव्यं कर्म च कालश्च स्वभावश्चेतना धृतिः
यत्प्रसादादिमे सन्ति न सन्ति यदुपेक्षया ॥

दिति श्रुतेः प्रकृत्यादेस्तद्वशस्य भावोऽङ्गीक्रियते । अतोऽद्भ्यः सम्भूत इत्यत्रापि स्वातन्त्र्यासिद्धेर्नानुपलब्धिरयुक्तेत्यर्थः । यद्यप्यारम्भण-शब्दादेरद्भ्यः सम्भूत इति श्रुतेश्च परस्परविरोधादर्थापत्त्यैवैषोऽर्थो लभ्यते । तथाऽपि मन्दापेक्षया स्पष्टश्रुत्युदाहरणम् । यद्वा स्वतन्त्र-कारणान्यत्वं निषिध्यत इत्यनेन परतन्त्रकारणान्तरसद्भावः सूचितः ।

"ಪ್ರಕೃತಿ ಮುಂತಾದ ದ್ರವ್ಯವು ಧರ್ಮ ಅಧರ್ಮಗಳು ಕಾಲವು ಪ್ರಕೃತ್ಯಾದಿಗಳ ಪರಿಣಾಮರೂಪ ಸ್ವಭಾವವು, ಹಾಗು ಜೀವರು ಚಿತ್ಪ್ರಕೃತಿಯು (ಮಹಾ ಲಕ್ಷ್ಮೀದೇವಿಯು) ಇವುಗಳು, ಯಾವನ ಅನುಗ್ರಹದಿಂದ ಇರುವವುಗಳೋ ಯಾವನ ಉಪೇಕ್ಷೆಯಿಂದ ಇರುವುದಿಲ್ಲವೋ" ಎಂಬುದಾಗಿ ಹೇಳುವ, "ದ್ರವ್ಯಂ"

### — ಪದಾರ್ಥದೀಪಿಕಾ —

ಚ" ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ "ಚೇತನಾಃ'=ಜೀವರು "ಧೃತಿಃ" ಚಿತ್‌ಪ್ರಕೃತಿಯು. ಏಕೆ? ಧಾರಕವಾದುದರಿಂದ. ಹೀಗೆ ಶ್ರುತಿಯು ಇರುವುದರಿಂದ, ಪ್ರಕೃತಿ ಮುಂತಾದ ಈಶ್ವರಾಧೀನವಾದ ಕಾರಣಗಳ ಅಸ್ತಿತ್ವವು (ಇರುವಿಕೆಯು) ಅಂಗೀಕರಿಸಲ್ಪಡುತ್ತದೆ ಆದುದರಿಂದ, "ಅದ್ಭ್ಯಃ ಸಂಭೂತಃ" ಎಂಬಲ್ಲಿಯೂ ಸ್ವಾತಂತ್ರ್ಯವು ಸಿದ್ಧಿಸುವುದಿಲ್ಲವಾದುದರಿಂದ ಸ್ವತಂತ್ರ ಕಾರಣವಿಲ್ಲವೆಂಬುದು ಅಯುಕ್ತವಲ್ಲ **ಯುಕ್ತವೇ!** ಇನ್ನು ಆರಂಭಣ ಶಬ್ದ ಮುಂತಾದುದಕ್ಕೂ "ಅದ್ಭ್ಯಃ ಸಂಭೂತಃ" ಈ ಶ್ರುತಿಗೂ ಪರಸ್ಪರ ವಿರೋಧವಿರುವುದರಿಂದ, ಅರ್ಥಾಪತ್ತಿಯಿಂದಲೇ ಈ ಅರ್ಥವು ದೊರೆಯುತ್ತದೆ. ಆದರೂ ಮಂದಜನರ ದೃಷ್ಟಿಯಿಂದ ಸ್ಪಷ್ಟಶ್ರುತಿಯನ್ನು ಹೇಳಿದ್ದು ಅಥವಾ "ಸ್ವತಂತ್ರವಾದ ಬೇರೆ ಕಾರಣವನ್ನು ನಿರಾಕರಿಸಲಾಗುವದು" ಈ ಮಾತಿನಿಂದ, ಪರತಂತ್ರ ಕಾರಣಾಂತರ

### — ವಿಶೇಷಾರ್ಥಪ್ರದೀಪಿಕಾ —

"ಏಷೋಽರ್ಥಃ"–"ದ್ರವ್ಯಂ ಕರ್ಮ ಚ" ಇತ್ಯಾದಿ ಪ್ರಮಾಣಗಳನ್ನು ಉದಾಹರಿಸುವುದರಿಂದ ಸಿದ್ಧಿಸುವ ಅರ್ಥವು, (ಪಾರತಂತ್ರ್ಯವು)

इति श्रुतेस्तद्वशस्य भावो

अन्यथा कारणान्यत्वमित्येव ब्रूयात् । स परतन्त्रकारणसद्भावः कुत इत्यत आह ॥ द्रव्यमिति । भावो गम्यत इति शेषः । अत्र तद्वशत्वं विधेयम् । कारणसद्भावस्य परेणाप्यङ्गीकृतत्वात् ।

ॐ असद्व्यपदेशान्नेति चेन्न धर्मान्तरेण वाक्यशेषात् ॐ ॥ इति सूत्रम् । तत्राक्षेपस्यायमर्थः । नासदासीन्नोसदासीत्तदानीमिति महाप्रलये मूर्तामूर्तादेरशेषस्यासत्त्वव्यपदेशात्कारणोपलब्धिपरिचोदना ।

ಇತ್ಯಾದಿ ಶ್ರುತಿಗಳು ಇರುವುದರಿಂದ, ಆ ಪ್ರಕೃತಿ ಮುಂತಾದ ವಿಶ್ವಕ್ಕೆ ಈಶ್ವರಾಧೀನತೆಯೂ ಅಂಗೀಕರಿಸಲ್ಪಡುತ್ತದೆ.

## — ಪದಾರ್ಥದೀಪಿಕಾ —

ವಿದೆಯೆಂಬುದು ಸೂಚಿತವಾಗುವದು ಇಲ್ಲದಿದ್ದಲ್ಲಿ "ಕಾರಣಾನನ್ಯತ್ವಂ" (ಬೇರೆ ಕಾರಣವಿಲ್ಲವೆಂಬುದು) ಎಂಬುದಾಗಿ ಮಾತ್ರವೇ ಹೇಳುತ್ತಿದ್ದರು ಇನ್ನು ಆ ಪರತಂತ್ರ ಕಾರಣವಿದೆಯೆಂಬುದು ಏಕೆ? ಈ ಪ್ರಶ್ನೆಯ ಪರಿಹಾರಕ್ಕಾಗಿ "ದ್ರವ್ಯಂ" ಇತ್ಯಾದಿ ವಚನವನ್ನು ಹೇಳಿದ್ದಾರೆ "ಭಾವಃ, ಗಮ್ಯತೇ" (ತದ್ವಶವಾದ ಕಾರಣವಿದೆಯೆಂದು ತಿಳಿದುಬರುತ್ತದೆ) ಎಂಬುದಾಗಿ ಶೇಷವಾಗಿದೆ ಇಲ್ಲಿ ಕಾರಣವು ಪರಮಾತ್ಮನ ವಶವಾಗಿರುವುದೆಂಬುದು ವಿಧೇಯವು ಏಕೆಂದರೆ ಕಾರಣವಿದೆಯೆಂಬುದನ್ನು ಪರನೂ ಒಪ್ಪಿರುತ್ತಾನೆ

ಓಂ॥ ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್ ॥ಓಂ॥ ಎಂಬುದು ಸೂತ್ರವು ಇದರಲ್ಲಿ ಆಕ್ಷೇಪಾಂಶಕ್ಕೆ ಅರ್ಥವು ಹೀಗೆ–"ನಾಸದಾಸೀನ್ನೋಸದಾಸೀತ್ತದಾನೀಂ" ಇತ್ಯಾದಿ ಶ್ರುತಿಗಳಲ್ಲಿ ಮಹಾಪ್ರಲಯದಲ್ಲಿ ಮೂರ್ತಾ ಮೂರ್ತಾತ್ಮಕ ಅಶೇಷ ಪ್ರಪಂಚಕ್ಕೆ ಅಸತ್ವ (ಇಲ್ಲದಿರುವಿಕೆ) ವನ್ನು ಹೇಳುವದರಿಂದ, ಕಾರಣವು ಉಪಲಬ್ಧವಾಗಿದೆಯೆಂಬ ಪೂರ್ವಪಕ್ಷವೂ, ಆ

## — ವಿಶೇಷಾರ್ಥಪ್ರದೀಪಿಕಾ —

"ಮೂರ್ತಂ ಸದಿತಿ ಸಂಪ್ರೋಕ್ತಂ ಅಮೂರ್ತಂ ಅಸದುಚ್ಯತೇ" ಇತ್ಯಾದಿ ಪ್ರಮಾಣವಾಕ್ಯಗಳನ್ನನುಸರಿಸಿ, "ನಾಸದಾಸೀತ್" ಇತ್ಯಾದಿ ಶ್ರುತಿಗಳ ಅರ್ಥವನ್ನು "ಮೂರ್ತಾ ಮೂರ್ತಾದೇಃ" ಇತ್ಯಾದಿವಚನದಿಂದ ಹೇಳುತ್ತಾರೆ (ಭೂಮಿ) ಪೃಥ್ವೀ, ಜಲ, ಅಗ್ನಿ, ಇವು ಮೂರು ಮೂರ್ತಪದಾರ್ಥಗಳು ವಾಯು ಅಂತ

तस्येश्वरवशस्याङ्गीकारेण समाधानं च नोपपद्यते । न चायं पक्षोऽसदिति चेत्यादिनैव निराकृतः । तत्रेश्वरस्याप्यनङ्गीकारात् । इह पुनरीश्वरमङ्गीकृत्य कारणान्तरनिराकरणात् । न चाद्भ्यः सम्भूत इत्यादिविरोधः । अत्र महाप्रलये कारणान्तरसद्भावस्याश्रवणात् । ईश्वरातिरिक्तकर्तृकासु सृष्टिष्वबादिकारणसद्भावपरत्वाच्च । एवञ्चारम्भणशब्दादयोऽपि समञ्जसा भवन्तीति । अत्र नेति सिद्धान्तांशं व्याचष्टे ॥ द्रव्यमिति । न महाप्रलये कारणान्तरस्याभावो वाच्यः ।

— ಪದಾರ್ಥದೀಪಿಕಾ —

ಕಾರಣವು ಈಶ್ವರಾಧೀನವೆಂಬುದನ್ನಂಗೀಕರಿಸಿ ಹೇಳಿದ ಸಮಾಧಾನವೂ ಯುಕ್ತವಾಗುವುದಿಲ್ಲ ಇನ್ನು ಈ ಪಕ್ಷವು, "ಅಸದಿತಿ ಚೇತ್" ಇತ್ಯಾದಿ ಸೂತ್ರಗಳಿಂದಲೇ ನಿರಾಕೃತವೆಂದು ತಿಳಿಯಬಾರದು ಏಕೆಂದರೆ ಅಲ್ಲಿಯ ಪೂರ್ವಪಕ್ಷದಲ್ಲಿ ಈಶ್ವರನನ್ನು ಒಪ್ಪಿರುವುದಿಲ್ಲ ಇಲ್ಲಿಯಾದರೋ ಮತ್ತೆ ಈಶ್ವರನನ್ನು ಒಪ್ಪಿಕೊಂಡು ಬೇರೆ ಕಾರಣವನ್ನು ನಿರಾಕರಿಸಲಾಗುತ್ತದೆ ಮತ್ತು "ಅದ್ಭ್ಯಃ ಸಂಭೂತಃ" ಇತ್ಯಾದಿ ಶ್ರುತಿ ವಿರೋಧವೂ ಇಲ್ಲ ಏಕೆಂದರೆ ಈ ಶ್ರುತಿಯಲ್ಲಿ —ಮಹಾಪ್ರಲಯದಲ್ಲಿ ಕಾರಣಾಂತರ ವಿದೆಯೆಂಬುದು ಹೇಳಲ್ಪಟ್ಟಿರುವದಿಲ್ಲ ಮತ್ತು ಈಶ್ವರನನ್ನು ಬಿಟ್ಟು ಉಳಿದವರು ಮಾಡಿದ ಸೃಷ್ಟಿಯಲ್ಲಿ ಅಬಾದಿ (ಜಲ ಮುಂತಾದವು) ಗಳು ಕಾರಣವಾಗಿವೆಯೆಂಬ ಅರ್ಥಪರವಾಗಿಯೂ "ಅದ್ಭ್ಯಃ ಸಂಭೂತಃ" ಇತ್ಯಾದಿ ಶ್ರುತಿಗಳು ಹೊರಟಿವೆ ಹೀಗೆ ಹೇಳುವುದರಿಂದ, ಆರಂಭಣ ಶಬ್ದಾದಿಗಳೂ ಸಮಂಜಸವಾಗುವವು ಹೀಗೆ ಅರ್ಥ ಇಲ್ಲಿ "ನ" ಇತ್ಯಾದಿಯಾದ ಸಿದ್ಧಾಂತಾಂಶವನ್ನು "ದ್ರವ್ಯಂ" ಇತ್ಯಾದಿ ವಚನದಿಂದ ವ್ಯಾಖ್ಯಾನಿ

— ವಿಶೇಷಾರ್ಥಪ್ರದೀಪಿಕಾ —

ದಿಕ್ಕು (ಆಕಾಶ) ಇವುಗಳು ಅಮೂರ್ತಪದಾರ್ಥಗಳು ಹೀಗೆ ತಿಳಿಯಬೇಕು

"ಏವಂ ಚ"=ಸಾಧನವೆಲ್ಲದಕ್ಕೂ ಅಸತ್ಯತೆಯನ್ನು ಅಂಗೀಕರಿಸಿದಮೇಲೆ, ಸ್ವಾತಂತ್ರ್ಯದ ಆಕ್ಷೇಪದ ಪರ್ಯಂತರ ಅರ್ಥವನ್ನು ಕಲ್ಪಿಸುವ ಕ್ಲೇಶವಿಲ್ಲದೆಯೇ, ಸ್ವರೂಪವನ್ನೇ ಆಕ್ಷೇಪಿಸುವುದೆಂಬುದಾಗಿ (ಸಾಧನಗಳ ಸ್ವಾತಂತ್ರ್ಯವನ್ನು ಆಕ್ಷೇಪಿಸುವುದಿಲ್ಲ, ಸಾಧನಗಳೇ ಇಲ್ಲವೆಂಬುದಾಗಿ ಮಹಾಪ್ರಲಯದಲ್ಲಿ ಸಾಧನಸ್ವರೂಪವನ್ನಷ್ಟೇ ಆಕ್ಷೇಪಿಸುತ್ತದೆ ಕಿಂಸ್ವಿದಾಸೀದಿತ್ಯಾದಿ ಶ್ರುತಿಯು) ಶ್ರುತಿಯನ್ನು ವ್ಯಾಖ್ಯಾನಿಸುವುದರಲ್ಲಿ ಸ್ವಾರಸ್ಯವಿದೆಯೆಂದು ಅರ್ಥ

किन्तु तद्वशस्य भाव एव । तस्य तद्वशत्वं कुत इति चेत् । द्रव्य-मिति श्रुतेरिति ।

ननु नासदासीदिति सर्वस्यासत्त्वव्यपदेशात्कथं नेत्यत उक्तं धर्मान्तरेणेति । तद्व्याचष्टे ॥ तद्वशस्येति । सावधारणं चेदम् । तद्वशस्यैव भावः प्रलये न स्वतन्त्रस्य । ततः स्वातन्त्र्यलक्षणधर्म-विशेषाभिप्रायेणासत्त्वव्यपदेशो युज्यते । उपलक्षणमेतत् । यथोक्तं भाष्ये । यत्खलु परतन्त्रमव्यक्तं कार्यानभिमुखं तदसदिति व्यप-

— ಪದಾರ್ಥದೀಪಿಕಾ —

ಸುತ್ತಾರೆ ಮಹಾ ಪ್ರಲಯದಲ್ಲಿ ಕಾರಣಾಂತರವು ಇಲ್ಲವೆಂದು ಹೇಳಬಾರದು. ಆದರ ಪರಮಾತ್ಮನ ಅಧೀನವಾದ ಕಾರಣಾಂತರವು ಇದ್ದೇ ಇದೆ ಆ ಕಾರ ಣಾಂತರವು ಪರಮಾತ್ಮನ ಅಧೀನವೇಕೆ ಎಂದರೆ " ದ್ರವ್ಯಂ " ಎಂಬುದಾಗಿ ಶ್ರುತಿಯಿರುವುದರಿಂದ ಹೀಗೆ ವ್ಯಾಖ್ಯಾನ

ಇನ್ನು- " ನಾಸದಾಸೀತ್ " ಎಂಬುದಾಗಿ ( ಶ್ರುತಿಯಲ್ಲಿ ) ಸರ್ವಕ್ಕೂ ಅಸತ್ವವು ಹೇಳಲ್ಪಟ್ಟಿದೆಯಾದುದರಿಂದ ಕಾರಣಾಂತರದ ಅಭಾವವಿಲ್ಲವೆಂಬುದು ಹೇಗೆ ? ಎಂಬ ಆಶಂಕೆಯನ್ನು ಪರಿಹರಿಸಲು "ಧರ್ಮಾಂತರೇಣ" ಎಂಬುದಾಗಿ ಹೇಳಿದ್ದಾರೆ ಆದರ ವ್ಯಾಖ್ಯಾನವನ್ನು " ತದ್ವಶಸ್ಯ " ಎಂಬ ವಚನದಿಂದ ಮಾಡುತ್ತಾರೆ ಇದು ಅವಧಾರಣ ಸಹಿತವಾದುದು ಪರಮಾತ್ಮನ ಅಧೀನವೇ ಆದ ಕಾರಣವು ಪ್ರಲಯದಲ್ಲಿ ಇದೆಯೇ ವಿನಾ ಸ್ವತಂತ್ರವಾದುದಿಲ್ಲ. ಆದುದ ರಿಂದ, ಸ್ವಾತಂತ್ರ್ಯವೆಂಬ ಧರ್ಮವಿಶೇಷದ ಅಭಿಪ್ರಾಯದಿಂದ ಅಸತ್ಯತ್ವವನ್ನು ಹೇಳಿದುದು ಯುಕ್ತವಾಗುತ್ತದೆ ಇದು ಸಂಗ್ರಾಹಕವು ಹೀಗೆ ಭಾಷ್ಯದಲ್ಲಿ ಹೇಳಲಾಗಿದೆ— "ಯಾವದು ಪರತಂತ್ರವೋ ಅವ್ಯಕ್ತವೋ ಅಂದರೆ ಕಾರ್ಯಾಭಿ ಮುಖವಲ್ಲವೋ ಆದನ್ನು "ಅಸತ್" ಎಂದು ಕರಯುತ್ತಾರೆ- ಎಂಬುದಾಗಿ ಏಕೆ

— ವಿಶೇಷಾರ್ಥಪ್ರದೀಪಿಕಾ —

"ಯಥೋಕ್ತಂ ಭಾಷ್ಯೇ" ="ಅವ್ಯಕ್ತತ್ವಪರತಂತ್ರತ್ವಾದಿ ಧರ್ಮಾಂತರೇಣ ಹಿ ತದುಚ್ಯತೇ" (ಅವ್ಯಕ್ತವಾಗಿರುವುದು, ಈ ಮುಂತಾದ ಧರ್ಮಗಳಿಂದ ಕಾರ ಣವು ಅಸತ್ಯವೆಂಬುದಾಗಿ ಹೇಳಲ್ಪಡುತ್ತದೆ) ಎಂಬುದಾಗಿ ಭಾಷ್ಯದಲ್ಲಿ ಹೇಳಲಾ ಗಿದೆಯೆಂದು ಅರ್ಥ ಧರ್ಮಾಂತರಮಪ್ಯುಕ್ತಮಿತಿ – ವ್ಯಕ್ತತ್ವಾದಿ ಧರ್ಮಾಂತರವೂ ನಿಷೇಧಿಸಲ್ಪಡುವುದಾಗಿ ಗ್ರಹಿಸಬೇಕು.

दिश्यते । कुतः श्रुतेर्मुख्यार्थपरित्यागेनामुख्यार्थोऽङ्गीक्रियते । तम आसीदित्यादिवाक्यशेषात् । न च तमो ब्रह्म आनीदवातमिति तस्य पृथगवस्थानोक्तेः । न चानन्तप्रकाशस्य तमस्त्वमुपपद्यते । किन्तु प्रकृतेरेवाच्छादकत्वादेरिति । ननु च प्रलयेऽवस्थितं चेत्प्रकृत्यादि तस्य स्वातन्त्र्यादिधर्माभावः कुतो येनैव व्याख्यायत इति चेत् । वाक्योपक्रमतच्छेषयोर्विरोधादर्थापत्त्यैवेति ब्रूमः । श्रूयते च स्पष्ट-

— ಪದಾರ್ಥ ದೀಪಿಕಾ —

ಶ್ರುತಿಗೆ ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯವಾದ ಅರ್ಥವು ಅಂಗೀಕರಿಸಲ್ಪ ಟ್ಟಿದೆ? ಎಂದರೆ, "ತಮ ಆಸೀತ್" ಎಂಬುದಾಗಿ ವಾಕ್ಯಶೇಷವಿದ್ದುದರಿಂದ ಮತ್ತು ತಮಸ್ಸು ಬ್ರಹ್ಮವಲ್ಲ ಏಕೆಂದರೆ "ಆನೀದವಾತಂ" ಇತ್ಯಾದಿಯಾಗಿ ಶ್ರುತಿಯು ಅದಕ್ಕೆ ಪ್ರತ್ಯೇಕವಾದ ಇರುವಿಕೆಯನ್ನು ಹೇಳುತ್ತದೆ ಮತ್ತು ಅನಂತಪ್ರಕಾಶ ಸ್ವರೂಪನಾದವನಿಗೆ ತಮಸ್ಸ್ವರೂಪವು ಯುಕ್ತವಾದುದಲ್ಲ ಆದರೆ ಪ್ರಕೃತಿಯೇ ತಮಸ್ಸು ಏಕೆಂದರೆ ಆವರಕ ಮುಂತಾದುದು ಆಗಿದೆ ಹೀಗೆ ಅರ್ಥ ಇನ್ನು ಪ್ರಕೃತಿ ಮುಂತಾದುದು ಪ್ರಲಯದಲ್ಲಿಯೂ ಇದ್ದುದಾದರೆ ಅದಕ್ಕೆ ಸ್ವಾತಂತ್ರ್ಯ ಮುಂತಾದ ಧರ್ಮಗಳಿಲ್ಲವೆಂಬುದು ಏಕೆ ? ಅದನ್ನಿಟ್ಟುಕೊಂಡು ಹೀಗೆ ವ್ಯಾಖ್ಯಾ ನಿಸುವುದಾದರೂ ಏಕೆ ? ಎಂದು ಕೇಳಿದರೆ— ವಾಕ್ಯದ ಉಪಕ್ರಮ, ವಾಕ್ಯಶೇಷ, ಇವುಗಳಲ್ಲಿ ಪರಸ್ಪರ ವಿರೋಧವು ಬರುವುದರಿಂದ, ಅರ್ಥಾಪತ್ತಿಯಿಂದಲೇ ಸಿದ್ಧಿಸುವುದೆಂದು ಉತ್ತರಹೇಳುತ್ತೇವೆ ಇದು ಸ್ಪಷ್ಟವಾಗಿ ಶ್ರುತಿಯಲ್ಲಿ

— ವಿಶೇಷಾರ್ಥಪ್ರದೀಪಿಕಾ —

ಸೂತ್ರಾಂಶದ ಅವತಾರಿಕೆಯನ್ನು "ಕುತಃ' ಇತ್ಯಾದಿ ವಚನದಿಂದ ಹೇಳುತ್ತಾರೆ

"ಆಚ್ಛಾದಕತ್ವಾದೇಃ'= ಗ್ಲಾನಿಯನ್ನು (ದುಃಖ-ಕಳವಳವನ್ನು) ಉಂಟು ಮಾಡುವುದು, ಜ್ಞಾನಕ್ಕೆ ತಡೆಮಾಡುವುದು, ಮುಂತಾದ ಸಂಗತಿಗಳನ್ನು "ಆದಿ" ಪದದಿಂದ ಗ್ರಹಿಸಬೇಕು.

"ವಾಕ್ಯೋಪಕ್ರಮ-ತಚ್ಛೇಷಯೋಃ' — "ನಾಸದಾಸೀತ್" ಎಂಬುದು ವಾಕ್ಯದ ಉಪಕ್ರಮವು, "ತಮಃ ಆಸೀತ್' ಎಂಬುದು ಶ್ರುತಿವಾಕ್ಯದ ಶೇಷವು ಇವುಗಳಿಗೆ ವಿರೋಧವು ಬರುವುದರಿಂದ, ಹೀಗೆ ಅರ್ಥ "ಇತಿಬ್ರೂಮಃ'= ಅರ್ಥಾಪತ್ತಿಯಿಂದಲೇ ಸ್ವಾತಂತ್ರ್ಯವಿಲ್ಲವೆಂಬ ಅರ್ಥವು ಸಿದ್ಧಿಸುವುದೆಂದು,

न पर इत्यतः ॥

मित्याशयवान्वाक्यशेषादित्येतत्प्रकारान्तरेण व्याचष्टे ॥ न पर इति । तस्माद्धान्यन्न परः किञ्च नासेत्यतो वाक्यशेषात्प्रकृत्यादीनां प्रलये स्वातन्त्र्याद्यभावोऽवगम्यत इत्यर्थः । इह हि तस्माद्ब्रह्मणोऽन्यत्प्रकृत्यादिकं परः परं स्वातन्त्र्यादिधर्मोपेतं नासेति तत्सद्भावाभ्युपगमेन परत्वं निषिध्यते । अन्यथा परशब्दवैयर्थ्यादिति ।

"ತಸ್ಮಾದ್ಧಾನ್ಯನ್ನ ಪರಃ ಕಿಂಚ ನಾಸ" ಎಂಬ ವಾಕ್ಯಶೇಷವಿದ್ದುದರಿಂದ ಪ್ರಲಯದಲ್ಲಿ ಪ್ರಕೃತ್ಯಾದಿಗಳಿಗೆ ಸ್ವಾತಂತ್ರ್ಯ ಮುಂತಾದುದರ ಅಭಾವವು ತಿಳಿದುಬರುತ್ತದೆ

— ಪದಾರ್ಥದೀಪಿಕಾ —

ಹೇಳಲ್ಪಟ್ಟಿರುತ್ತದೆ ಈ ಅಭಿಪ್ರಾಯವುಳ್ಳವರಾಗಿ "ವಾಕ್ಯಶೇಷಾತ್" ಎಂಬ ವಚನವನ್ನು ಬೇರೆ ಪ್ರಕಾರದಿಂದ "ನ ಪರಃ' ಇತ್ಯಾದಿ ವಚನದಿಂದ ವಿವರಿಸುತ್ತಾರ "ತಸ್ಮಾದ್ ಹಾನ್ಯನ್ನ ಪರಃ ಕಿಂ ಚ ನಾಸ" ಈ ವಾಕ್ಯಶೇಷದಿಂದ, ಪ್ರಕೃತಿ ಮುಂತಾದವುಗಳಿಗ ಪ್ರಲಯದಲ್ಲ ಸ್ವಾತಂತ್ರ್ಯ ಮುಂತಾದವುಗಳಿಲ್ಲವೆಂಬ ಸಂಗತಿಯು ತಿಳಿದು ಬರುತ್ತದೆ, ಹೀಗೆ ಅರ್ಥ ಇಲ್ಲಿ, ಆ ಬ್ರಹ್ಮನಿಂದ ಬೇರೆಯಾದ ಪ್ರಕೃತಿ ಮುಂತಾದುದು 'ಪರಃ"— ಪರಂ– ಸ್ವಾತಂತ್ರ್ಯ ಮುಂತಾದ ಧರ್ಮಯುಕ್ತವಾದುದು "ನಾಸ"= ಇದ್ದಿಲ್ಲ" ಹೀಗೆ, ಪ್ರಕೃತ್ಯಾದಿಗಳ ಇರುವಿಕೆಯನ್ನು ಒಪ್ಪಿಕೊಂಡು, ಅವುಗಳ ಸ್ವಾತಂತ್ರ್ಯ (ಪರತ್ವ)ವನ್ನು ನಿರಾಕರಿಸಲಾ

— ವಿಶೇಷಾರ್ಥಪ್ರದೀಪಿಕಾ —

ಕಾರಣವನ್ನು ಹೇಳುವುದುರಿಂದ, ಭಾಷ್ಯದಲ್ಲಿ ಹೇಳಿದ ಅರ್ಥದ ಸ್ಪಷ್ಟೀಕರಣವನ್ನು ಮಾಡಿದ್ದಾಯಿತೆಂದು ತಿಳಿಯಬೇಕು

"ಪ್ರಕಾರಾಂತರೇಣ" = "ವಾಕ್ಯಶೇಷದಲ್ಲಿ ತಮಸ್ಸುಮುಂತಾದ ಸಾಧನಗಳಿವೆಯೆಂದು ಹೇಳಿರುವುದು, ಅವುಗಳ ಸ್ವಾತಂತ್ರವನ್ನು ನಿಷೇಧಿಸಿದುದು, ಪರತಂತ್ರತೆಯನ್ನು ಒಪ್ಪದಿದ್ದ ಪಕ್ಷದಲ್ಲಿ ಯುಕ್ತವೆನಿಸಲಾರದು, ; ಅನ್ಯಥಾಅನುಪಪತ್ತಿಯೆಂಬ ಯುಕ್ತಿಯಿಂದಷ್ಟೇ ಅಲ್ಲ ಆದರೆ ಸ್ವಾತಂತ್ರ್ಯವನ್ನು ನಿಷೇಧಿಸುವ ವಾಕ್ಯಶೇಷವಿರುವುದರಿಂದಲೂ! ಎಂಬುದಾಗಿ "ವಾಕ್ಯಶೇಷತಯಾ" ಎಂಬುದಕ್ಕೆ ಬೇರೆ ರೀತಿಯಿಂದ ಅರ್ಥವನ್ನು ಹೇಳುತ್ತಾರೆಂದು ಇಲ್ಲಿಯ ಅರ್ಥ

"ಪರಃ" ಎಂಬುದು ಸಕಾರಾಂತನಪುಂಸಕವೆಂಬ ಅಭಿಪ್ರಾಯದಿಂದ "ಪರಃ=ಪರಂ" ಎಂಬುದಾಗಿ ವ್ಯಾಖ್ಯಾನಿಸಿರುತ್ತಾರೆ. ಬ್ರಹ್ಮನಿಂದ ಬೇರೆಯಾದುದ್ಧು

स्यादेतत् । कारणान्तरसद्भावमभ्युपगम्य तस्येश्वराधीनतां वदता सिद्धान्तिनेदं वक्तव्यम् । किमीश्वरः प्रकृत्यादिभिर्विनाऽपि कदाचित्सृष्ट्यादिकं करोत्युत तैरेवेति नियमः । आद्ये तेषां कथं कारणत्वमनियतत्वात् । अन्यथा रासभस्यापि घटकारणतापत्तेः । द्वितीये तु कथं तत्परित्यागेन कदाऽप्यकुर्वाणस्येश्वरस्य स्वातन्त्र्यम् । कथं च नियमेनापेक्षणीयानां तेषां पारतन्त्र्यम् । एवं प्रकृत्यैव

— ಪದಾರ್ಥದೀಪಿಕಾ —

ಗುತ್ತದೆ ಇಲ್ಲದಿದ್ದಲ್ಲಿ " ಪರ " ಶಬ್ದಕ್ಕೆ ವ್ಯರ್ಥತೆಯು ಎರಬೇಕಾಗುವದು " (ಎಂಬುದಾಗಿ ಪ್ರಕಾರಾಂತರದಿಂದ ವ್ಯಾಖ್ಯಾನವು)

ಇದು ಇರಲಿ ! ಬೇರೆ ಕಾರಣಗಳ ಇರುವಿಕೆಯನ್ನು ಅಂಗೀಕರಿಸಿ. ಅವುಗಳಿಗೆ ಈಶ್ವರಾಧೀನತಯನ್ನು ಹೇಳುವ ಸಿದ್ಧಾಂತಿಯು, ಪ್ರಕೃತ್ಯಾದಿಗಳನ್ನು ಬಿಟ್ಟೂ ( ಅವುಗಳಿಲ್ಲದೆಯೂ ) ಒಮ್ಮೊಮ್ಮ ಸೃಷ್ಟಿ ಮುಂತಾದುದನ್ನು ಮಾಡುವನೋ ಇಲ್ಲವೆ ಅವುಗಳಿಂದಲೇ ಮಾಡುವನೆಂಬ ನಿಯಮವೋ ? ಎಂಬುದನ್ನು ಹೇಳತಕ್ಕದ್ದು (೧) ಮೊದಲನೆಯ ಕಲ್ಪದಲ್ಲಿ ಪ್ರಕೃತ್ಯಾದಿಗಳಿಗ ಕಾರಣತ್ವವು ಹೇಗೆ ? ಏಕೆಂದರೆ (ನೈಯತ್ಯ) ನಿಯಮವಿರುವುದಿಲ್ಲ ನಿಯಮವಿಲ್ಲದಿದ್ದರೂ ಕಾರಣವಾಗುವುದಾದರೆ ರಾಸಭವೂ ಘಟದ ಕಾರಣವಾಗುವ ಪ್ರಸಂಗವು ಬರುತ್ತದೆ ಎರಡನೆಯ ಪಕ್ಷದಲ್ಲಿಯಾದರೋ ಆ ಪ್ರಕೃತ್ಯಾದಿಗಳನ್ನು ಬಿಟ್ಟು ಎಂದೆಂದಿಗೂ ಕಾರ್ಯ( ಸೃಷ್ಟಿ )ವನ್ನು ಮಾಡದ ಈಶ್ವರನಿಗೆ ಸ್ವಾತಂತ್ರ್ಯವು ಹೇಗೆ ? ಮತ್ತು ನಿಯಮದಿಂದ ಅವಶ್ಯ ಬೇಕಾಗಿರುವ ಆ ಪ್ರಕೃತ್ಯಾದಿಗಳಿಗೆ ಪಾರತಂತ್ರ್ಯನಾದರೋ ಹೇಗೆ ? ಇದರಂತೆ— (೨) ಪ್ರಕೃತಿಯಿಂದಲೇ

— ವಿಶೇಷಾರ್ಥಪ್ರದೀಪಿಕಾ —

ಯಾವದೂ ಇದ್ದಿಲ್ಲವೆಂದು ಕಾರಣಾಂತರದ ಸ್ವರೂಪವನ್ನೇ ನಿಷೇಧಿಸುವುದಂಬ ಪಕ್ಷದಲ್ಲಿ ಬಾಧಕವನ್ನು "ಅನ್ಯಥಾ" ಈ ವಾಕ್ಯದಿಂದ ಹೇಳುತ್ತಾರೆ "ಬ್ರಹ್ಮಣೋಽನ್ಯನ್ನಾಸ" ಎಂಬ ವಚನವಿನ್ಯಾಸಮಾತ್ರದಿಂದಲೇ " ಕಾರಣಾಂತರದ ಸ್ವರೂಪ ನಿಷೇಧ"ವೆಂಬ ಅರ್ಥವು ಸಿದ್ಧಿಸುವುದರಿಂದ "ಪರಃ' ಈ ಶಬ್ದವು ವ್ಯರ್ಥವಾಗುತ್ತದೆಯೆಂದು ಭಾವ

"ಯುಕ್ತೇಃ ಶಬ್ದಾಂತರಾಚ್ಚ" ಈ ಸೂತ್ರದ ಮೇಲೆ ಅವತಾರಿಕೆಯನ್ನು ತೋರಿಸಲು "ಸ್ಯಾದೇತತ್" ಇತ್ಯಾದಿ ಗ್ರಂಥವು ಹೊರಟಿದೆ "ಉಕ್ತದೋಷಾನು

महान्तं महतैवाहङ्कारमित्यादिनियमं कदाचिदपहाय सृजत्युतानेन नियमेनैव । आद्ये त्वनियतत्वेनाकारणत्वप्रसङ्गः । द्वितीये पुनरीश्वरादेः स्वातन्त्र्याद्यनुपपत्तिः । तथा प्रकृत्यादिकमुपादानीकृत्य कालादिकं निमित्तीकृत्य सृजतीति नियमे व्यत्यासे चोक्तदोषानुषङ्गः । अतो युक्ति बाधितत्वादस्यार्थस्य कारणान्तरनिरपेक्ष एव भगवान्सृष्ट्यादिकं करोतीत्येव न्यायः । एवञ्च निरर्गलमैश्वर्यमस्य समर्थितं स्यात् । न च प्रमाण-

## — ಪದಾರ್ಥದೀಪಿಕಾ —

ಮಹತ್ತತ್ತ್ವ, ಮಹತ್ತತ್ತ್ವದಿಂದಲೇ ಅಹಂಕಾರತತ್ತ್ವ, ಈ ಮುಂತಾಗಿರುವ ನಿಯಮವನ್ನು ಒಮ್ಮೊಮ್ಮೆ ಬಿಟ್ಟು ಸೃಷ್ಟಿಸುತ್ತಾನೋ? ಅಥವಾ ಅದೇ ನಿಯಮ ದಿಂದಲೇ ಸೃಷ್ಟಿಸುತ್ತಾನೋ? ಹೀಗ ಪ್ರಶ್ನೆ ಮೊದಲನೆಯ ಕಲ್ಪದಲ್ಲಿಯಾದರೋ ನೈಯತ್ಯವಿಲ್ಲವಾದುದರಿಂದ, ಪ್ರಕೃತ್ಯಾದಿಗಳಿಗೆ ಕಾರಣತ್ವವಿಲ್ಲವೆನ್ನುವ ಪ್ರಸಂಗವು ಬರುತ್ತದೆ ಎರಡನೆಯ ಪಕ್ಷದಲ್ಲಿ ಮತ್ತೆ – ಈಶ್ವರಾದಿಗಳಿಗೆ ಸ್ವಾತಂತ್ರ್ಯ ಮುಂತಾದುದು ಯುಕ್ತವಾಗಲಾರದು ಹಾಗು (೩) ಪ್ರಕೃತಿ ಮುಂತಾದು ದನ್ನು ಉಪಾದಾನವನ್ನಾಗಿಟ್ಟುಕೊಂಡು, ಕಾಲಾದಿಗಳನ್ನು ನಿಮಿತ್ತೀಕರಿಸಿ, ಸೃಷ್ಟಿಯನ್ನು ಮಾಡುತ್ತಾನೆಂಬ ನಿಯಮ ಹಾಗು ಅದರ ವ್ಯತ್ಯಾಸಪಕ್ಷದಲ್ಲಿ ಹಿಂದೆ ಹೇಳಿದ ದೋಷವು ಅನ್ವಯಿಸುತ್ತದೆ ಆದುದರಿಂದ, ಈ ಅರ್ಥವು ಯುಕ್ತಿಯಿಂದ ಬಾಧಿತವಾದುದರಿಂದ, ಕಾರಣಾಂತರದ ಅಪೇಕ್ಷೆಯಿಲ್ಲದೆಯೇ ಭಗವಾನ್ ನಾರಾ ಯಣನು ಸೃಷ್ಟಿ ಮುಂತಾದುದನ್ನು ಮಾಡುತ್ತಾನೆಂಬುದೇ ಶ್ರೇಷ್ಠವಾದುದು ಇದರಿಂದ, ಈಶ್ವರನ ನಿರವಧಿಕವಾದ ಐಶ್ವರ್ಯ(ಪ್ರಭುತ್ವ)ವು ಸಮರ್ಥಿಸಲ್ಪಟ್ಟ ದ್ದಾಗುವುದು ಮತ್ತು ಪ್ರಮಾಣಬಾಧವೂ ಇಲ್ಲ ಏಕೆಂದರೆ "ಅದ್ಭ್ಯಃ

## — ವಿಶೇಷಾರ್ಥಪ್ರದೀಪಿಕಾ —

ಷಂಗಃ" –"ಪ್ರಕೃತಿಮುಂತಾದುದನ್ನು ಉಪಾದಾನವಾಗಿಯೂ ಕಾಲಾದಿಗಳನ್ನು ನಿಮಿತ್ತವಾಗಿಯೂ ಇಟ್ಟುಕೊಂಡೇ ಸೃಷ್ಟಿಮಾಡುತ್ತಾನೆಂಬ ನಿಯಮವನ್ನುಅಂಗೀಕ ರಿಸದ ಪಕ್ಷದಲ್ಲಿ ಪ್ರಕೃತ್ಯಾದಿಗಳಿಗೆ ಉಪಾದಾನತ್ವವು ಸಿದ್ಧಿಸುವುದಿಲ್ಲ ನಿಯ ಮವನ್ನು ಅಂಗೀಕರಿಸಿದ ಪಕ್ಷದಲ್ಲಿ ಈಶ್ವರನಿಗ ಸ್ವಾತಂತ್ರ್ಯವು ಸಿದ್ಧಿಸುವುದಿಲ್ಲ," ಎಂಬುದಾಗಿ ಹಿಂದೆ ಹೇಳಿದ ದೋಷಗಳು ಅನ್ವಯಿಸುತ್ತವೆಯೆಂದು ಭಾವ.

वायः। अद्भयः सम्भूतः पृथिव्यै रसाच्चेत्यादेरनीश्वरकर्तृकावान्तरसृष्टि-विषयत्वस्योक्तत्वात्। तम आसीदित्यादौ तमःप्रभृतीनां प्रलये सत्त्वश्रवणेऽपीश्वरकर्तृकायां सृष्टौ कारणत्वाश्रवणादित्याशङ्कापनोदनार्थं सूत्रम्॥ ॐ युक्तेः शब्दान्तराच्च ॐ॥ इति। अस्यायमर्थः। नोक्तयुक्तिविरोधेन भगवतः कारणान्तरविधुरत्वमुररीकर्तव्यम्। कारणान्तरसद्भावाभ्युपगमेऽपि प्रकृत्यादेः कारणत्वस्येश्वरादिस्वातन्त्र्यादिकस्य च युक्तेः। न चैवं तर्हि विनिगमने कारणाभाव इति वाच्यम्। अद्भयः सम्भूतो

## — ಪದಾರ್ಥದೀಪಿಕಾ —

ಸಂಭೂತಃ '' ಇತ್ಯಾದಿ ಶ್ರುತಿಗಳು, ಈಶ್ವರನಿಂದ ಬೇರೆಯಾದ ಕರ್ತೃಗಳು ಮಾಡಿದ, ಅವಾಂತರ ಸೃಷ್ಟಿಯನ್ನು ವಿಷಯೀಕರಿಸಿವೆಯೆಂದು ಹೇಳಲಾಗಿದೆ ಹಾಗು "ತಮಃ ಆಸೀತ್" ಇತ್ಯಾದಿ ಶ್ರುತಿಗಳಲ್ಲಿ ತಮಸ್ಸು ಮುಂತಾದವುಗಳಿಗೆ ಪ್ರಳಯದಲ್ಲಿ ಅಸ್ತಿತ್ವ(ಇರುವಿಕೆ)ವಿದೆಯೆಂದು ಹೇಳಿದ್ದರೂ, ಈಶ್ವರನು ಮಾಡುವ ಸೃಷ್ಟಿಯಲ್ಲಿ ಅವುಗಳಿಗೆ ಕಾರಣತ್ವವನ್ನು ಹೇಳಲಾಗಿಲ್ಲವೆಂಬ ಆಶಂಕೆಯನ್ನು ಪರಿಹರಿಸಲು " ಓಂ॥ ಯುಕ್ತೇಃ ಶಬ್ದಾಂತರಾಚ್ಚ " ಓಂ॥ ಎಂಬ ಸೂತ್ರವು ಹೊರಟಿದೆ ಅದರ ಅರ್ಥವು ಇದು— "ಹಿಂದೆ ಹೇಳಿದ ಯುಕ್ತಿಗಳಿಂದ ವಿರೋಧವು ಬರುವುದೆಂಬ ಕಾರಣದಿಂದ, ಪರಮಾತ್ಮನ ಹೊರತು ಬೇರೆ ಕಾರಣಗಳಿಲ್ಲವೆಂಬುದನ್ನು ಅಂಗೀಕರಿಸತಕ್ಕದ್ದಲ್ಲ ಏಕೆಂದರೆ ಬೇರೆ ಕಾರಣಗಳಿವೆಯೆಂಬುದನ್ನು ಅಂಗೀಕರಿಸಿದರೂ ಪ್ರಕೃತಿ ಮುಂತಾದುದಕ್ಕೆ ಕಾರಣತ್ವವೂ (ಈಶ್ವರಾದಿ ಸ್ವಾತಂತ್ರ್ಯವೂ) (ಈಶ್ವರನ ಅಧೀನತೆಯೂ) ಯುಕ್ತವಾಗುತ್ತದೆ ಹೀಗಾದಲ್ಲಿ ವಿನಿಗಮನದಲ್ಲಿ ಕಾರಣವಿಲ್ಲವೆಂದು ಹೇಳಬಾರದು ಏಕೆಂದರೆ " ಅದ್ಭ್ಯಃ

## — ವಿಶೇಷಾರ್ಥಪ್ರದೀಪಿಕಾ —

"ಈಶ್ವರಾದಿಸ್ವಾತಂತ್ರ್ಯಾದಿಕಸ್ಯ"=ಇಲ್ಲಿರುವ ಮೊದಲನೆಯ 'ಆದಿ' ಪದದಿಂದ ಪ್ರಕೃತಿ ಮುಂತಾದುದನ್ನೂ, ಎರಡನೆ ಆದಿ ಪದದಿಂದ ಪಾರತಂತ್ರ್ಯ ಮುಂತಾದುದನ್ನೂ ಸಂಗ್ರಹಿಸಲಾಗಿದೆ

"ವಿನಿಗಮನೇ" - ಕಾರಣಾಂತರವು ಇರುವುದೆಂಬ ಪಕ್ಷದಲ್ಲಿ— ಪ್ರಕೃತಿ ಮುಂತಾದುದಕ್ಕೆ ಕಾರಣತ್ವವು, ಈಶ್ವರಾದಿಗಳಿಗೆ ಸ್ವಾತಂತ್ರ್ಯಮುಂತಾದುದು, ಈ ಎರಡು ಅರ್ಥಗಳ ನಿರ್ಣಯದಲ್ಲಿ, ಹೀಗೆ ಅರ್ಥ. ಕಾರಣಾಂತರವಿರುವುದೆಂಬು

हिरण्यगर्भ इत्यादिशब्दान्तरात् । पूर्वोदाहृतशब्दविलक्षणशब्दः शब्दान्तरम् । तेनेदमुक्तं भवति । यद्यपि प्रागुदाहृताः शब्दाः कथञ्चिदन्यथा नेतुं शक्यन्ते । तथाऽप्ययं न तथा । अत्रेश्वरकर्तृकायामेव सृष्टौ कारणान्तरसद्भावश्रवणात् । न हि हिरण्यगर्भसृष्टिरनीश्वरकर्तृका । तस्यैव प्रथमजत्वादिति । अत्र युक्तेरिति या स्वपक्षे कारण-

— ಪದಾರ್ಥದೀಪಿಕಾ —

ಸಂಭೂತಃ, ಹಿರಣ್ಯಗರ್ಭಃ,'' ಇತ್ಯಾದಿ ಶಬ್ದಾಂತರಗಳೂ ಇರುತ್ತವೆ ಹಿಂದೆ ಉದಾಹರಿಸಲ್ಪಟ್ಟ ಶಬ್ದದಿಂದ ಬೇರೆಯಾದ ಶಬ್ದವು "ಶಬ್ದಾಂತರ"ವು ಇದರಿಂದ ಹೇಳಲ್ಪಟ್ಟ ವಿಷಯವಿದು— ಹಿಂದೆ ಹೇಳಲ್ಪಟ್ಟ "ತಮಃ ಆಸೀತ್" ಇತ್ಯಾದಿ ಶಬ್ದಗಳನ್ನು ಹೇಗೋ ಒಂದು ರೀತಿಯಿಂದ ಬೇರೆಯಾಗಿ ವ್ಯಾಖ್ಯಾನಿಸಲು ಶಕ್ಯವಿರುತ್ತದೆ ಆದರೂ ಇದು– 'ಅದ್ಭ್ಯಃ ಸಂಭೂತಃ" ಇತ್ಯಾದಿ ಶಬ್ದವು ಹಾಗೆ ಇರುವುದಿಲ್ಲ ಏಕೆಂದರೆ ಇದರಲ್ಲಿ ಈಶ್ವರಕರ್ತೃಕ ( ಈಶ್ವರನು ಮಾಡಿದ ) ಸೃಷ್ಟಿಯಲ್ಲಿಯೇ ಕಾರಣಾಂತರವಿರುವುದೆಂಬುದು ಕೇಳಬರುತ್ತದೆ (ಶ್ರುತಿಯಲ್ಲಿ) ಏಕೆಂದರೆ ಹಿರಣ್ಯಗರ್ಭನ ಸೃಷ್ಟಿಗೆ ಈಶ್ವರನಿಲ್ಲವೆಂದಲ್ಲ ( ಈಶ್ವರನು ಆ

— ವಿಶೇಷಾರ್ಥಪ್ರದೀಪಿಕಾ —

ದನ್ನು ಅಂಗೀಕರಿಸಬೇಕು, ಹಾಗು ಕಾರಣತ್ವಾದಿಗಳು ಸಂಘಟಿಸುವವು, ಎಂಬ ಈ ಎರಡೂ ಅರ್ಥಗಳ ಬಗ್ಗೆಯೂ "ಶಬ್ದಾಂತರಾಚ್ಚ''ಎಂಬ ಸೂತ್ರಶೇಷದಿಂದ ಕಾರಣ (ಪ್ರಮಾಣ)ವನ್ನು ಹೇಳಿದುದೆಂಬುದು ಹೇಗೆ? ಈ ಆಶಂಕೆಯು ಬರುವುದರಿಂದ, ಕಾರಣಾಂತರವಿರುವುದೆಂಬ ಪಕ್ಷದಲ್ಲಿ –ಕಾರಣವಿರುವುದೆಂಬುದನ್ನಂತೂ ಮೊದಲು, ಭಾಷ್ಯದಲ್ಲಿ ಹೇಳಿದ ಅರ್ಥವನ್ನು ವಿವರಿಸುತ್ತ ''ಅದ್ಭ್ಯಃ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

"ಶಬ್ದಾಚ್ಚ" ಎಂದು ಹೇಳುವುದರ ಬದಲಾಗಿ "ಶಬ್ದಾಂತರಾಚ್ಚ" ಎಂಬುದಾಗಿ "ಅಂತರ' ಪದವನ್ನು ಹೆಚ್ಚಿಗೆ ಸೇರಿಸಿ ಏಕೆ ಹೇಳಿದ್ದಾರೆಂಬ ಆಶಂಕೆಯನ್ನು ಪರಿಹರಿಸಲು –ವೈಲಕ್ಷಣ್ಯವನ್ನು ತಿಳಿಸುವುದೆಂಬ ಅಭಿಪ್ರಾಯದ ಉತ್ತರವನ್ನು ತೋರಿಸಲು "ಶಬ್ದಾಂತರ" ಶಬ್ದದ ವ್ಯಾಖ್ಯಾನವನ್ನಾದರೂ "ಪೂರ್ವೋದಾಹೃತ" ಇತ್ಯಾದಿ ವಚನದಿಂದ ಮಾಡುತ್ತಾರೆ ವೈಲಕ್ಷಣ್ಯವನ್ನಾದರೂ ಏಕೆ ತೋರಿಸುವುದೆಂಬ ಆಶಂಕೆಯನ್ನು ಪರಿಹರಿಸಲು ಪ್ರಯೋಜನವನ್ನು "ತೇನೇದಮುಕ್ತಂ ಭವತಿ'' ಇತ್ಯಾದಿ ವಚನಗಳಿಂದ ಹೇಳುತ್ತಾರೆ

## ॥ ॐ युक्तेः शब्दान्तराच्च ॐ ॥

**शक्तोऽपि ह्यन्यथा कर्तुं स्वेच्छानियमतो हरिः ॥**
**कारणैर्नियतैरेव करोतीदं जगत्सदा ॥**

त्वादेर्घटनोक्ता सा कथमित्यपेक्षायामाह ॥ शक्तोऽपीति ॥ अन्यथा कारणैर्विना कर्तुं शक्तोऽपि हरिः कारणान्तराण्युपादायैव करिष्यामीति

ಕಾರಣವಿಲ್ಲದೆಯೆ ಕಾರ್ಯಗಳನ್ನು ಮಾಡಲು ಶಕ್ತನಾದರೂ ಹರಿಯು, ತನ್ನ ಇಚ್ಛಾನುಸಾರವಾದ ನಿಯಮಗಳಿಂದ ತನ್ನ ಅಧೀನವಾದ ಶಕ್ತಿ-ಸತ್ವಮುಂತಾದುದನ್ನುಳ್ಳ ಕ್ಲಪ್ತಗಳೇ ಆಗಿರುವ ಕಾರಣಗಳಿಂದ ಈ ಜಗತ್ತನ್ನು ಯಾವಾಗಲೂ ಸೃಷ್ಟಿಮಾಡುತ್ತಾನ

### — ಪದಾರ್ಥದೀಪಿಕಾ —

ಸೃಷ್ಟಿಯನ್ನು ಮಾಡಿಲ್ಲವೆಂದಲ್ಲ) ಏಕೆಂದರ ಅವನೇ ಪ್ರಥಮದಲ್ಲಿ ಹುಟ್ಟಿದವನು," ಎಂಬುದು ಈ ಸೂತ್ರದಲ್ಲಿ 'ಯುಕ್ತೇಃ" ಎಂಬುದಾಗಿ, ತಮ್ಮ ಪಕ್ಷದಲ್ಲಿ ಕಾರಣತ್ವಾದಿಗಳಿಗ ಸಂಘಟನೆಯನ್ನು ಹೇಳಿದುದು ಹೇಗೆ? ಎಂಬ ಆಕಾಂಕ್ಷೆಯನ್ನು ಕಳೆಯಲು "ಶಕ್ತೋಽಪಿ" ಇತ್ಯಾದಿ ವಚನವನ್ನು ಹೇಳಿದ್ದಾರೆ "ಅನ್ಯಥಾ"= ಕಾರಣಗಳಿಲ್ಲದೆ, "ಕರ್ತುಂ ಶಕ್ತೋಽಪಿ"= ಸೃಷ್ಟಿಯನ್ನು ಮಾಡಲು ಸಮರ್ಥನಾಗಿದ್ದರೂ ಹರಿಯು, "ಕಾರಣಾಂತರಗಳನ್ನು ಸ್ವೀಕರಿಸಿಯೇ ಸೃಷ್ಟಿಯನ್ನು

### — ವಿಶೇಷಾರ್ಥಪ್ರದೀಪಿಕಾ —

''ತಸ್ಯೈವ' – ಅಹಮಸ್ಮಿ ಪ್ರಥಮಜಾ ಋತಸ್ಯ' ಎಂಬ ಶ್ರುತಿಯು ಇರುವುದೆಂದು ಇಲ್ಲಿ ತಿಳಿಯಬೇಕು

''ಕಾರಣತ್ವಾದೇಃ' ಇಲ್ಲಿ 'ಆದಿ' ಪದದಿಂದ, ''ಈಶ್ವರನ ಸ್ವಾತಂತ್ರ್ಯ ಪ್ರಕೃತಿ ಮುಂತಾದ ಕಾರಣಾಂತರಗಳ ಅಸ್ವಾತಂತ್ರ್ಯ", ಇವುಗಳನ್ನು ಸಂಗ್ರಹಿಸಲಾಗಿದೆ 'ಇತ್ಯಪೇಕ್ಷಾಯಾಮಾಹ' - ''ಶಬ್ದಾಂತರಾಚ್ಚ'' ಎಂಬ ಸೂತ್ರಾಂಶಕ್ಕೆ, ''ಹೇಳಬೇಕಾದ ಅರ್ಥವನ್ನು ಪ್ರತಿಪಾದಿಸುವ ಶಬ್ದವಿಶೇಷವಿರುವುದರಿಂದಲೂ' (ಶಬ್ದವಿಶೇಷಾಚ್ಚ) ಎಂಬುದಾಗಿ ಬೇರೆ ಅರ್ಥವಿದೆ ಈ ಅಭಿಪ್ರಾಯದಿಂದ, ಆ ಶಬ್ದವಿಶೇಷವೆನಿಸಿದ ಶ್ರುತಿರೂಪವಾದ ಬೇರೆಶಬ್ದವನ್ನು ಮುಂದೆ ಹೇಳಲಪೇಕ್ಷಿಸಿ, (ಶಕ್ತೋಽಪಿ ಭಗವಾನ್ ಎಂಬಲ್ಲಿ) ಶ್ರುತಿಯ ಅಭಿಪ್ರೇತವಾದ ಅರ್ಥವನ್ನು ಸ್ವತಃ ಹೇಳುತ್ತಾರೆ, ಹೀಗೆ ಇಲ್ಲಿಯ ಅರ್ಥ

''ಕಿಮೀಶ್ವರಃ ಪ್ರಕೃತ್ಯಾದಿಭಿರ್ವಿನಾ" – ಇತ್ಯಾದಿ ವಾಕ್ಯಗಳಿಂದ ಹೇಳಿದ

स्वेच्छानियमतः कारणैरेवेदं जगत्सदा सृजति । एवमन्यथा प्रकृत्याऽहङ्कारमहङ्कारेण महान्तमित्येवम् । तथा प्रकृतिं निमित्तीकृत्य कालादिकं चोपादानीकृत्य कर्तुं शक्तौऽप्येतेनैवेदमेतदुपादानीकृत्यैवेदं स्रक्ष्यामीति स्वेच्छानियमतो नियतैः क्लृप्तैरेव तथा नियतैः स्वनियतसत्ताशक्त्यादिमद्भिरेव कारणैरिदं जगत्सदा करोतीति योजना ।

इदमुक्तं भवति । यदुक्तमीश्वरस्य कारणोपादानादिनियमोऽस्ति न वेति । तत्रास्तीति ब्रूमः । तथा च प्रकृत्यादीना कारणत्वं युक्तम् । स च नियमो न कुलालादेरिव तान्यपहाय व्यत्यस्य वा

— ಪದಾರ್ಥದೀಪಿಕಾ —

ಮಾಡುವೆನು' ಎಂಬ ಸ್ವೇಚ್ಛಾನಿಯಮದಿಂದ ಕಾರಣಗಳಿಂದಲೇ ಜಗತ್ತನ್ನು ಸದಾ ಸೃಷ್ಟಿಸುತ್ತಾನೆ ಇದೇ ರೀತಿಯಾಗಿ "ಅನ್ಯಥಾ"= "ಪ್ರಕೃತಿಯಿಂದ ಅಹಂಕಾರವನ್ನು, ಅಹಂಕಾರದಿಂದ ಮಹತ್ತತ್ತ್ವವನ್ನು,' ಹೀಗೆ—ಹಾಗು, ಪ್ರಕೃತಿಯನ್ನು ನಿಮಿತ್ತೀಕರಿಸಿ, ಕಾಲ ಮುಂತಾದುದನ್ನು ಉಪಾದಾನವನ್ನಾಗಿ ಮಾಡಿ, ಸೃಷ್ಟಿಯನ್ನು ಮಾಡಲು, ಶಕ್ತನಾದರೂ, ಇದರಿಂದಲೇ ಇದನ್ನು, ಉಪಾದಾನವನ್ನಾಗಿ ಮಾಡಿಯೇ ಇದನ್ನು ಸೃಷ್ಟಿಸುವೆನು," ಎಂಬ ತನ್ನ ಇಚ್ಛೆಯ ನಿಯಮದಿಂದಲೇ ನಿಯತವಾದ ಕ್ಲೃಪ್ತವಾದವುಗಳಿಂದ ಹಾಗು "ನಿಯತೈಃ"– ತನ್ನಿಂದ ನಿಯಮಿಸಲ್ಪಟ್ಟ ಸತ್ತಾ, ಶಕ್ತಿ ಮುಂತಾದುದುಳ್ಳ ಕಾರಣಗಳಿಂದಲೇ ಈ ಜಗತ್ತನ್ನು ಸೃಷ್ಟಿಸುತ್ತಾನೆ ಯಾವಾಗಲೂ ಎಂಬುದಾಗಿ ಯೋಜನೆಯು

ಇಲ್ಲಿ ಹೇಳಿದುದು ಇದು— "ಈಶ್ವರನಿಗೆ ಸೃಷ್ಟಿಯನ್ನು ಮಾಡುವುದರಲ್ಲಿ ಕಾರಣ- ಉಪಾದಾನಗಳ ನಿಯಮವು ಇದೆಯೋ ಇಲ್ಲವೋ ? ಎಂಬುದಾಗಿ ಪ್ರಶ್ನಿಸಲಾಗಿತ್ತಷ್ಟೇ ! ಇದಕ್ಕೆ "ಇದೆ" ಯೆಂಬ ಉತ್ತರವನ್ನು ಹೇಳುತ್ತೇವೆ. ಇದರಿಂದ ಪ್ರಕೃತ್ಯಾದಿಗಳ ಕಾರಣತ್ವವು ಯುಕ್ತವಾಗುತ್ತದೆ ಆ ನಿಯಮವಾದರೋ ಕುಂಬಾರಾದಿಗಳ ಹಾಗೆ, ಆ ಕಾರಣಾದಿಗಳನ್ನು ಬಿಟ್ಟು ಇಲ್ಲವೆ

— ವಿಶೇಷಾರ್ಥಪ್ರದೀಪಿಕಾ —

ಮೂರು ಆಕ್ಷೇಪಗಳ ನಿವಾರಕವಾಗುವ ಹಾಗೆ ಶ್ಲೋಕವನ್ನು "ಅನ್ಯಥಾ" ಇತ್ಯಾದಿ ವಚನಗಳಿಂದ ವ್ಯಾಖ್ಯಾನಿಸುತ್ತಾರೆ ಶ್ಲೋಕದ ಯೋಜನವನ್ನು ತೋರಿಸಿ ತಾತ್ಪರ್ಯವನ್ನು 'ಇದಮುಕ್ತಂ ಭವತಿ' ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ

करणे शक्त्यभावनिबन्धनः । येन तस्य स्वातन्त्र्यं । तेषां च पारतन्त्र्यं न स्यात् । किन्नाम स्वेच्छायत्त एव । ततः स्वातन्त्र्यादिकमपि युक्तम् । न च तानि स्वाधीनसत्ताशक्त्यादिमन्ति । येनैश्वर्यं निरर्गलं न स्यात् । किन्तु भगवत्येव तदीयं सत्तादिकमायतते । ततस्तत्साचिव्यमतिशयेनैश्वर्यस्य द्योतकमेव । यथोक्तम् । साधनानां साधनत्वं यदाऽऽत्माधीनमिष्यते । तदा साधनसम्पत्तिरैश्वर्यद्योतिका भवेदिति ।

— ಪದಾರ್ಥದೀಪಿಕಾ —

ವ್ಯತ್ಯಾಸಮಾಡಿ ಸೃಷ್ಟಿಯನ್ನು ಮಾಡಲು ಶಕ್ತಿಯು ಇಲ್ಲವೆಂಬ ಕಾರಣದಿಂದಲ್ಲ ಹಾಗೆ ಆಗಿದ್ದರೆ– ಈಶ್ವರನ ಸ್ವಾತಂತ್ರ್ಯವೂ ಆ ಕಾರಣಗಳ ಪಾರತಂತ್ರ್ಯವೂ ಇಲ್ಲವಾಗುತ್ತಿತ್ತು ಆದರೆ ಆ ನಿಯಮವು ತನ್ನ ಇಚ್ಛೆಯಿಂದಲೇ ನಿಯತವಾಗಿ ಬಂದುದುದಾಗಿದೆ ಆದುದರಿಂದ ಸ್ವಾತಂತ್ರ್ಯಮುಂತಾದುದೂ ಯುಕ್ತವೆನಿಸುತ್ತದೆ ಆ ಕಾರಣಗಳಾದರೋ ಸ್ವಾಧೀನವಾದ ಶಕ್ತಿಮುಂತಾದುದನ್ನುಳ್ಳದ್ದಲ್ಲ ಹಾಗೆ ಸ್ವಾಧೀನಶಕ್ತಿ ಮುಂತಾದುದನ್ನುಳ್ಳದ್ದಾಗಿದ್ದರೆ ಈಶ್ವರನ ಐಶ್ವರ್ಯವು ನಿರರ್ಗಲವಾಗುತ್ತಿರಲಿಲ್ಲ ಆದರೆ ಭಗವಂತನಲ್ಲಿಯೇ ಆ ಕಾರಣಗಳ ಸತ್ತಾ ಮುಂತಾದುದು ಅವಲಂಬಿಸಿರುತ್ತದೆ ಆದುದರಿಂದ, ಆ ಕಾರಣಗಳನ್ನು ಸ್ವೀಕರಿಸುವುದು, ಅವನ ಅತಿಶಯವಾದ ಐಶ್ವರ್ಯದ ದ್ಯೋತಕವೇ ಆಗಿದೆ ಇದನ್ನೇ "ಸಾಧನಾನಾಂ ಸಾಧನತ್ವಂ ಯದಾತ್ಮಾಧೀನಮಿಷ್ಯತೇ ॥ ತದಾ ಸಾಧನಸಂಪತ್ತಿರೈಶ್ವರ್ಯದ್ಯೋತಿಕಾ ಭವೇತ್" (ಸಾಧನಗಳ ಸಾಧನತ್ವವು ಪರಮಾತ್ಮನ ಅಧೀನವೆಂದು ಅಂಗೀಕರಿಸಿದಾಗ, ಸಾಧನಸಂಪತ್ತಿಯು ಐಶ್ವರ್ಯದ ದ್ಯೋತಕವಾಗುವದು) ಎಂಬುದಾಗಿ ಪ್ರಮಾಣವಾಕ್ಯವು ಹೇಳುತ್ತದೆ" ಎಂಬುದು

— ವಿಶೇಷಾರ್ಥಪ್ರದೀಪಿಕಾ —

"ಭಗವತ್ಯೇವ ಆಯತತೇ"= ಭಗವಂತನ ಅಧೀನವೆಂದು ಅರ್ಥ ಶ್ರೀಮದ್ಭಾಷ್ಯದಲ್ಲಿ ಹೇಳಿದ ವಚನವು ಇದರಲ್ಲಿ ಸಂವಾದವೆಂಬುದಾಗಿ "ಸಾಧನಾನಾಂ" ಇತ್ಯಾದಿವಚನದಿಂದ ಹೇಳುತ್ತಾರೆ

"ಶಕ್ತೋಽಪಿ ಹ್ಯನ್ಯಥಾ ಕರ್ತುಂ" ಎಂಬಲ್ಲಿರುವ "ಹಿ" ಶಬ್ದವು, ಆ ನಿಯಮವನ್ನು ಅನುಸರಿಸುವ ಇಚ್ಛೆಯನ್ನು ಜ್ಞಾಪಿಸುವ ಪ್ರಮಾಣಸಂಗ್ರಾ

ननु शक्तस्यापीश्वरस्य तन्नियमानुसरणेच्छा कुत इति चेत्। किं कारणं पृच्छ्यते ज्ञापकम्। आद्ये स्वभावोऽयमिति ब्रूमः। द्वितीये तु श्रुतिप्रसिद्धेरिति। तदिदमुक्तं हिशब्देन। श्रुतिं चोदाहरिष्यति। अनेन शब्दान्तराच्चेति सूत्रं प्रकारान्तरेण व्याख्यातं ज्ञातव्यम्। शब्दान्तरं च शब्दविशेषो विवक्षितार्थप्रतिपादकः शब्द इति यावत्। पटवच्च यथा प्राणादिरिति सूत्रे भाष्य एव व्यक्तेः।

— ಪದಾರ್ಥದೀಪಿಕಾ —

ಇನ್ನು- ಸರ್ವಸಮರ್ಥನಾಗಿದ್ದರೂ ಈಶ್ವರನಿಗೆ ಪ್ರಕೃತ್ಯಾದಿಗಳ ನಿಯಮ ವನ್ನನುಸರಿಸುವ ಇಚ್ಛೆಯು ಏಕೆ ? ಎಂದು ಕೇಳಿದರೆ-- ಕಾರಣವನ್ನು ಕೇಳು ವಿಯೋ ? ಇಲ್ಲವೆ ಜ್ಞಾಪಕವನ್ನು ಕೇಳುವಿಯೋ ? ಮೊದಲನೆಯ ಪಕ್ಷದಲ್ಲಿ- ಇದು ಅವನ ಸ್ವಭಾವವೆಂದು ಉತ್ತರ ಹೇಳುತ್ತೇವೆ ಎರಡನೆಯ ಪಕ್ಷದಲ್ಲಿ ಯಾದರೋ " ಶ್ರುತಿಪ್ರಸಿದ್ಧಿಯಿರುವುದರಿಂದ, " ಎಂಬ ಉತ್ತರವನ್ನು ಹೇಳು ತ್ತೇವೆ ಹಿಂದೆ ಹೇಳಿದ ಇದೆಲ್ಲ ವಿಷಯವು "ಹಿ" ಶಬ್ದದಿಂದ ಹೇಳಲ್ಪಟ್ಟಿದೆ ಶ್ರುತಿಯನ್ನು ಮುಂದೆ ಉದಾಹರಿಸುವರು ಇದರಿಂದ "ಶಬ್ದಾಂತರಾಚ್ಚ" ಎಂಬ ಸೂತ್ರವನ್ನು ಬೇರೆ ಪ್ರಕಾರದಿಂದ ವ್ಯಾಖ್ಯಾನಿಸಿದ್ದಾಗುತ್ತದೆಂದು ತಿಳಿಯ ತಕ್ಕದ್ದು ಆ ಶಬ್ದಾಂತರವೆಂದರೆ ಶಬ್ದವಿಶೇಷವು ಅಂದರೆ ಹೇಳಲಪೇಕ್ಷಿತ ವಾದ ಅರ್ಥವನ್ನು ಹೇಳುವ ಶಬ್ದವೆಂದು ತಾತ್ಪರ್ಯ ಮತ್ತು "ಪಟವಚ್ಚ, ಯಥಾ ಪ್ರಾಣಾದಿಃ" ಎಂಬ ಸೂತ್ರಭಾಷ್ಯದಲ್ಲಿಯೇ ಇದು ವ್ಯಕ್ತವಾಗಿರುತ್ತವೆ.

— ವಿಶೇಷಾರ್ಥಪ್ರದೀಪಿಕಾ —

ಹಕವಾಗಿದೆಯೆಂದು ಹೇಳಲು, ನಿಯಮವನ್ನು ಅನುಸರಿಸಿ ಇಚ್ಛೆಯು ಬರು ವುದಿಲ್ಲವೆಂಬ ಆಶಂಕೆಯನ್ನು "ನನು" ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ

"ಶ್ರುತಿಪ್ರಸಿದ್ಧೇಃ" ಎಂಬಲ್ಲಿ ಹೇಳಿದ ಶ್ರುತಿಯು ಯಾವುದೆಂಬ ಆಶಂಕೆ "ಶ್ರುತಿಂ ಚ' ಈ ವಾಕ್ಯದಿಂದ ಪರಿಹರಿಸುತ್ತಾರೆ "ಅನೇನ"="ಹಿ, ಶಬ್ದದಿಂದ ಸೂಚಿತವಾದ ಶ್ರುತಿಯ ಉದಾಹರಣದಿಂದ

"ಭಾಷ್ಯೇ ಏವ ವ್ಯಕ್ತೇಃ"- ಭಾಷ್ಯದಲ್ಲಿ ಅವುಗಳ ಅರ್ಥವನ್ನು ಸ್ಪಷ್ಟಪಡಿ ಸಿದೆ ಆದುದರಿಂದ, ಈ ಸೂತ್ರಗಳನ್ನು ವ್ಯಾಖ್ಯಾನಿಸದಿರುವುದರಿಂದ ಈ ಅನುವ್ಯಾಖ್ಯಾನಕ್ಕೆ ನ್ಯೂನತೆಯೆಂಬ ದೋಷವಿಲ್ಲವೆಂದು ಭಾವವು

ಮೊದಲನೆಯ ಸೂತ್ರದ ಮೇಲಿನ ಪರರ ಅಪವ್ಯಾಖ್ಯಾನವನ್ನು

अन्ये पुनरन्यथैतानि सूत्राणि वर्णयन्ति । तथा हि । भावे चोपलब्धेः । मृदादेः कारणस्य भाव एव घटादेः कार्यस्योपलब्धेश्चानन्यत्वं कारणात्कार्यस्य । न हि यद्यतो भिन्नं तत्तद्भाव एवोपलभ्यते । न ह्यश्वो गोऽन्तोऽन्यो गोभाव एवोपलभ्यते । किञ्च भावे तिलादौ कारणे तैलाद्युपलभ्यते । कार्ये च भावे कुण्डलादौ सुवर्णादिकम् ।

— ಪದಾರ್ಥದೀಪಿಕಾ —

ಇತರರು ಮಾತ್ರ ಈ ಸೂತ್ರಗಳನ್ನು ಬೇರೆಯಾಗಿ (ವಿಪರೀತವಾಗಿ) ವ್ಯಾಖ್ಯಾನಿಸುತ್ತಾರೆ ಹೇಗೆಂದರೆ– ಭಾವೇ ಚೋಪಲಬ್ಧೇಃ"-ಮೃತ್ತು ಮುಂತಾದ ಕಾರಣದ ಇರುವಿಕೆಯು (ಅಸ್ತಿತ್ವ) ಇದ್ದರೇ ಘಟ ಮುಂತಾದ ಕಾರ್ಯದ ಉಪಲಬ್ಧಿಯಾಗುವುದರಿಂದಲೂ ಕಾರ್ಯಕ್ಕೆ ಕಾರಣದಿಂದ ಅಭೇದವಿರುತ್ತದೆ ಏಕೆಂದರೆ– ಯಾವದು ಯಾವುದರಿಂದ ಭಿನ್ನವೋ ಅದು ಅದರ (ಭಿನ್ನವಾದ ಇನ್ನೊಂದರ) ಅಸ್ತಿತ್ವವಿದ್ದಾಗಲೇ ಉಪಲಬ್ಧವಾಗುವುದಿಲ್ಲ (ಉಪಲಬ್ಧವಾಗುವುದೆಂಬುದು ಸರಿಯಲ್ಲ) ಹೇಗೆಂದರೆ– ಗೋವಿನಿಂದ ಬೇರೆಯಾದ ಅಶ್ವವು ಗೋವಿನ ಇರುವಿಕೆಯಿದ್ದಾಗಲೇ ಉಪಲಬ್ಧವಾಗುವುದೆಂಬುದಿಲ್ಲ

ಮತ್ತು– "ಭಾವೇ"= ತಿಲಮುಂತಾದ ಕಾರಣದಲ್ಲಿ ತೈಲ ಮುಂತಾದುದು ಉಪಲಬ್ಧವಾಗುತ್ತದ ಮತ್ತು "ಭಾವೇ"– ಕುಂಡಲ ಮುಂತಾದ ಕಾರ್ಯದಲ್ಲಿ ಸುವರ್ಣಮುಂತಾದುದು ಉಪಲಬ್ಧವಾಗುತ್ತದೆ (ಸಿಗುತ್ತದೆ–ದೊರೆಯುತ್ತದೆ–

— ವಿಶೇಷಾರ್ಥಪ್ರದೀಪಿಕಾ —

ಮುಂಚೆಯೇ ನಿರಾಕರಿಸಿದುದರಿಂದ ಉಳಿದ ಸೂತ್ರಗಳ ಮೇಲಣ ಪರಾಪವ್ಯಾಖ್ಯಾನವನ್ನು "ಭಾವೇ ಚ" ಇತ್ಯಾದಿವಚನಗಳಿಂದ ಆರಂಭಿಸಿ, ಅತ್ರಸೂತ್ರ" ಇಲ್ಲಿಯ ವರೆಗೆ ಅನುವಾದ ಮಾಡುತ್ತಾರೆ "ಭಾವ" ಪದಕ್ಕೆ, "ಕಾರಣ ಕಾರ್ಯ,"ಗಳೆಂಬ ಎರಡೂ ಅರ್ಥಗಳನ್ನು ಅಂಗೀಕರಿಸಿ, ಬೇರೆಯಾದ ವ್ಯಾಖ್ಯಾನವನ್ನು "ಕಿಂಚ ಇತ್ಯಾದಿ ವಚನಗಳಿಂದ ತೋರಿಸುತ್ತಾರೆ. "ಭಾವೇ" ಎಂಬುದು ಅನುವಾದವು "ಸುವರ್ಣಾದಿಕಂ" ಎಂಬುದಕ್ಕೆ "ಉಪಲಭ್ಯತೇ' ಎಂಬುದರಿಂದ ಅನ್ವಯವಿದೆ ಪರಸ್ಪರ (ಒಂದಕ್ಕೊಂದರಲ್ಲಿ) ಸ್ವಭಾವದ ಅನುಗತಿಯು ಕಂಡಿರುವುದೆಂಬ ಕಾರಣದಿಂದಲೂ ಕಾರಣಕಾರ್ಯಗಳಲ್ಲಿ ಅಭೇದವೆಂಬ ಬೇರೆ ಅರ್ಥ, ವನ್ನು "ಕಿಂಚ" ಇತ್ಯಾದಿಯಾಗಿರುವ ಈ ವಚನಗಳಿಂದ ಹೇಳಿದ್ದಾರೆಂದು ತಿಳಿಯಬೇಕು ಕಾರಣದಿಂದ ಕಾರ್ಯಕ್ಕೆ ಅಭೇದವೆಂಬಲ್ಲಿ ಶ್ರುತಾರ್ಥಾಪತ್ತಿಯೆಂಬ

अतश्च तदभेदसिद्धिः । सत्वाच्चावरस्य । अवरकालीनस्य कार्यस्य प्रागुत्पत्तेः सदेव सोम्येदमग्र आसीदिति सत्त्वावधारणाच्चानन्यत्वं कारणात्कार्यस्य । असद्व्यपदेशान्नेति चेन्न धर्मान्तरेण वाक्यशेषात् । असदेवेदमग्र आसीदसद्वा इदमग्र आसीदिति प्रागुत्पत्तेः कार्यस्या-

— ಪದಾರ್ಥದೀಪಿಕಾ —

ಕಾಣುತ್ತದೆ) ಈ ಕಾರಣದಿಂದಲೂ ಕಾರ್ಯಕಾರಣಗಳಲ್ಲಿ ಅಭೇದವು ಸಿದ್ಧಿಸುತ್ತದೆ. "ಸತ್ವಾಚ್ಚಾವರಸ್ಯ"– ಅವರ (ಕಡಮೆಯ) ಕಾಲದಲ್ಲಿರುವ ಕಾರ್ಯಕ್ಕೆ ಉತ್ಪತ್ತಿಯ ಮುಂಚೆ "ಸದೇವ ಸೋಮ್ಯೇದಮಗ್ರ ಆಸೀತ್" ಎಂಬ ಶ್ರುತಿಯಲ್ಲಿ ಅಸ್ತಿತ್ವ ( ಸತ್ವ ) ದ ಅವಧಾರಣ ( ನಿರ್ಣಯ ) ವಿರುವುದರಿಂದಲೂ ಕಾರಣದಿಂದ ಕಾರ್ಯಕ್ಕೆ ಅಭೇದ ವಿರುತ್ತದೆ "ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್"= "ಅಸದೇವೇದಮಗ್ರ ಆಸೀತ್" ಎಂಬ ಶ್ರುತಿಯಲ್ಲಿ, ಉತ್ಪತ್ತಿಯ ಪೂರ್ವದಲ್ಲಿ ಕಾರ್ಯಕ್ಕೆ ಅಸತ್ಯತೆಯನ್ನು (ಅಸ್ತಿತ್ವ

— ವಿಶೇಷಾರ್ಥಪ್ರದೀಪಿಕಾ —

ಪ್ರಮಾಣವನ್ನೂ "ಸತ್ವಾಚ್ಚ" ಇತ್ಯಾದಿವಚನದಿಂದ ಹೇಳುತ್ತಾರೆ "ಅವರಕಾಲೀನಸ್ಯ"= ಅನಂತರ ಹುಟ್ಟಿದ ಕಾರ್ಯಕ್ಕೆ "ಅಗ್ರೇ"= ಉತ್ಪತ್ತಿಯ ಮೊದಲು "ಇದಂ" ಈಗ ಸ್ಥೂಲವಾಗಿ ಕಾಣುತ್ತಿರುವ ಕಾರ್ಯವೆಲ್ಲವೂ "ಸದೇವ"= ಸತ್ಯವೇ "ಆಸೀತ್ ಇದ್ದಿತು." ಹೀಗೆ–"ಸದೇವ ಸೋಮ್ಯೇದಮಗ್ರ ಆಸೀತ್ ಎಂಬಲ್ಲಿ ಸತ್ಯತೆಯ ಅವಧಾರಣವು ಹೇಳಲ್ಪಟ್ಟಿದೆಯೆಂದು ತಿಳಿಯಬೇಕು. "ಇದಂ" ಶಬ್ದದಿಂದ ಗ್ರಹಿಸಲ್ಪಟ್ಟ ಕಾರ್ಯವನ್ನು "ಸದೇವ" ಎಂಬುದಾಗಿ (ಸಚ್ಛಬ್ದವಾಚ್ಯವಾದ ಕಾರಣದಿಂದ ಸಾಮಾನಾಧಿಕರಣ್ಯವನ್ನು ) ಸಮಾನವಿಭಕ್ತಿಯುಳ್ಳ ಪದದಿಂದ ಹೇಳುವುದರಿಂದ, ಇದು ಬೇರೆ ರೀತಿಯಿಂದ ಅಂದರೆ ಭೇದವಿದ್ದರೆ, ಸರಿಹೊಂದಲಾರದಾದುದರಿಂದ ಆವೆರಡರಲ್ಲಿ ತಾದಾತ್ಮ್ಯ ತಿಳಿದು ಬರುವುದರಿಂದ ಕಾರ್ಯಕಾರಣಗಳಲ್ಲಿ ಭೇದವಿಲ್ಲವೆಂಬ ಅಭಿಪ್ರಾಯವಿದೆ ಉತ್ಪತ್ತಿಯ ಪೂರ್ವದಲ್ಲಿ ಕಾರ್ಯವು ಕಾರಣರೂಪದಿಂದ ಸತ್ಯವೆಂಬ ಅರ್ಥವನ್ನು ಆಕ್ಷೇಪಿಸಿ "ಅಸದ್ವ್ಯಪದೇಶಾತ್" ಇತ್ಯಾದಿಸೂತ್ರದಿಂದ ಸಮರ್ಥಿಸುತ್ತಾರೆ ಆಕ್ಷೇಪವನ್ನು ಬಿಡಿಸಿ "ಅಸದೇವ" ಇತ್ಯಾದಿವಚನದಿಂದ ತೋರಿಸುತ್ತಾರೆ "ಅಸದೇವೇದಮಗ್ರ ಆಸೀತ್" ಎಂಬಲ್ಲಿ, "ಇದಂ" ಕಾರ್ಯವೆಲ್ಲವು 'ಅಸದೇವ" ಅಸತ್ತೇ 'ಆಸೀತ್' ಆಗಿದ್ದಿತು, ಎಂಬುದಾಗಿ "ಇದಂ" ಶಬ್ದದಿಂದ ಹೇಳಲ್ಪಟ್ಟ ಕಾರ್ಯವನ್ನು "ಅಸದೇವ" ಎಂಬುದಾಗಿ ಸಮಾನವಿಭಕ್ತಿಯುಳ್ಳ ಪದದಿಂದ

सत्त्वव्यपदेशान्नेति चेन्न । भवेदेतद्यदि कार्यस्वरूपाभिप्रायेणायं व्यपदेशः स्यात्किन्तु व्यक्तत्वलक्षणधर्मान्तराभिप्रायेण । कुतः । वाक्यशेषात् । असदेवेदमग्र आसीदित्यसच्छब्देनोपक्रमे निर्दिष्टं पुनस्तत्सदासीदिति वाक्यशेषे निर्दिशति । असद्वेत्यत्रापि तदात्मानं स्वयमकुरुतेति । तेन ज्ञायते नासत्कार्यं धर्मान्तरेणैवासत्त्वव्यपदेश इति । युक्तेः शब्दान्तराच्च । युक्तेश्च कार्यस्य प्रागुत्पत्तेः सत्त्वं कारणादनन्यत्वं च गम्यते । शब्दान्तराच्च । युक्तिस्तावदसदकरणादित्यादिका

— ಪದಾರ್ಥದೀಪಿಕಾ —

ವಿಲ್ಲವೆಂಬುದನ್ನು) ಹೇಳಿದದೆಂದು ಶಂಕಿಸತಕ್ಕದ್ದಲ್ಲ ಏಕೆಂದರೆ– ಕಾರ್ಯಸ್ವರೂಪ ವಿಷಯಕವಾದ ಅಭಿಪ್ರಾಯದಿಂದ ಈ ಅಸತ್ವವ್ಯಪದೇಶವು ಹೊರಟಿದ್ದರೆ ಕಾರ್ಯವು ಅಸತ್ಯವಾಗಬಹುದಾಗಿತ್ತು ಆದರ ವ್ಯಕ್ತವಾಗುವುದಂಬ ಬೇರೆ ಧರ್ಮದ ಅಭಿಪ್ರಾಯದಿಂದ ಈ ವ್ಯಪದೇಶವಾಗಿದೆ ಏಕೆ? "ವಾಕ್ಯಶೇಷಾತ್"= "ಅಸದೇವೇದಮಗ್ರ ಆಸೀತ್" ಎಂಬುದಾಗಿ "ಅಸತ್" ಶಬ್ದದಿಂದ ಉಪಕ್ರಮ ದಲ್ಲಿ ನಿರ್ದೇಶಿಸಲ್ಪಟ್ಟುದುದನ್ನು "ತತ್ಸದಾಸೀತ್" ಎಂಬುದಾಗಿ ವಾಕ್ಯಶೇಷದಲ್ಲಿ ನಿರ್ದೇಶಿಸುತ್ತದೆ (ಶ್ರುತಿಯು) "ಅಸದ್ವಾ" ಎಂಬಲ್ಲಿಯೂ "ತದಾತ್ಮಾನಂ ಸ್ವಯಮಕುರುತ" ಎಂಬುದಾಗಿ ನಿರ್ದೇಶಿಸುತ್ತದೆ ಇದರಿಂದ, ಕಾರ್ಯವು ಅಸತ್ಯವಲ್ಲ ಬೇರೆ ಧರ್ಮದ ವಿವಕ್ಷೆಯಿಂದಲೇ ಅದಕ್ಕೆ ಅಸತ್ವವ್ಯಪದೇಶ ವಾಗಿದೆಯೆಂಬುದು ತಿಳಿದು ಬರುತ್ತದೆ "ಯುಕ್ತೇಃ ಶಬ್ದಾಂತರಾಚ್ಚ"= ಯುಕ್ತಿ ಯಿಂದಲೂ ಕಾರ್ಯಕ್ಕೆ ಕಾರಣದಿಂದ ಅಭೇದವನ್ನೂ ಹುಟ್ಟುವ ಮುಂಚ ಸತ್ಯ ತೆಯನ್ನೂ ತಿಳಿಯಬೇಕು. ಹಾಗು ಶಬ್ದಾಂತರವಿರುವುದರಿಂದಲೂ ತಿಳಿಯ ಬೇಕು. "ಅಸದಕರಣಾತ್" ಎಂಬುದಾಗಿ ಸಾಂಖ್ಯರು ಹೇಳಿದುದು ಹಾಗು

— ವಿಶೇಷಾರ್ಥಪ್ರದೀಪಿಕಾ —

ಹೇಳಿದುದರಿಂದ, ಅಭೇದವಿಲ್ಲದೆಯೇ ಈ ಸಾಮಾನಾಧಿಕರಣ್ಯವು (ಸಮಾನವಿಭಕ್ತಿ ಯುಳ್ಳ ಪದದಿಂದ ಸಹ ಪ್ರಯೋಗವು) ಯುಕ್ತವಾಗುವುದಿಲ್ಲ, ಆದುದರಿಂದ ಕಾರ್ಯವು ಅಸತ್ಯ (ಉತ್ಪತ್ತಿಯ ಮುಂಚೆ) ವಾದುದರಿಂದ, ಕಾರಣರೂಪದಿಂದ ಸತ್ಯವೆಂಬ ಅರ್ಥವನ್ನು ಇಲ್ಲಿ ಆಕ್ಷೇಪಿಸಲಾಯಿತೆಂದು ತಿಳಿಯಬೇಕು

ಕಾರ್ಯಕ್ಕೆ ಉತ್ಪತ್ತಿಯ ಪೂರ್ವದಲ್ಲಿ ಸತ್ಯತೆಯನ್ನೂ ಕಾರಣದಿಂದ ಭೇದವನ್ನೂ ಸಾಧಿಸುವ ಸಾಂಖ್ಯೋಕ್ತಯುಕ್ತಿಯನ್ನು "ಅಸದಕರಣಾತ್"

साङ्ख्योक्ता । वृत्तिविकल्पानुपपत्त्यादिका च सौगतोक्ता । शब्दान्तरं

— ಪದಾರ್ಥದೀಪಿಕಾ —

ಸೌಗತರು ಹೇಳಿದ ವೃತ್ತಿವಿಕಲ್ಪಾನ್ಯಥಾನುಪಪತ್ತಿ ಮುಂತಾದುದು ಯುಕ್ತಿಯು.

— ವಿಶೇಷಾರ್ಥಪ್ರದೀಪಿಕಾ —

ಇತ್ಯಾದಿವಚನದಿಂದ ಹೇಳುತ್ತಾರೆ. ''ಅಸದಕರಣಾತ್ ಉಪಾದಾನಗ್ರಹಣಾತ್ ಸರ್ವಸಂಭವಾಭಾವಾತ್ ‖ ಶಕ್ತಸ್ಯ ಶಕ್ಯಕರಣಾತ್ ಕಾರಣಭಾವಾಚ್ಚ ಸತ್ಕಾರ್ಯಮ್ ಇದು ಸಾಂಖ್ಯನು ಹೇಳಿದ ಕಾರಿಕೆಯು ಕಾರ್ಯಂ=ಕಾರ್ಯವು"ಪ್ರಾಕ್" ಉತ್ಪತ್ತಿಯು ಪೂರ್ವದಲ್ಲಿ ''ಸದೇವ"=ಸತ್ಯವೇ ಇರುವಂತಹದೇ!) ಏಕೆಂದರೆ? ಅಸದಕರಣಾತ್= ಅಸತ್ಯ(ಇಲ್ಲದ್ದಕ್ಕೆ) ಕ್ಕೆ ಕ್ರಿಯೆಯು (ಉತ್ಪತ್ತಿಯು) ಇಲ್ಲವಾದುದರಿಂದ! ಮತ್ತು ಉಪಾದಾನಗ್ರಹಣಾತ್" ಕಾರಣಗಳಿಗೆ ಕಾರ್ಯದೊಡನೆ ಸಂಬಂಧವಿರುವುದರಿಂದ, ಕಾರ್ಯದೊಡನೆ ಸಂಬದ್ಧವಾಗಿಯೇ ಕಾರಣವು ಕಾರ್ಯವನ್ನು ಹುಟ್ಟಿಸುತ್ತದೆ ಏಕೆ? "ಸರ್ವಸಂಭವಾಭಾವಾತ್'' ಸರ್ವವೂ ಸರ್ವದಿಂದ (ಬೇಕಾದುದೆಲ್ಲವೂ ಎಲ್ಲದರಿಂದ) ಹುಟ್ಟುವುದಿಲ್ಲವಾದುದರಿಂದ ! ಅಂದರೆ ಒಂದೊಂದು ಕಾರಣದಿಂದಲೇ ಒಂದೊಂದು ಕಾರ್ಯವು ಹುಟ್ಟುತ್ತದೆಯಾದುದರಿಂದ, ಎಂದು ಅರ್ಥ ಹೀಗೆ ಕಾರ್ಯವಿಶೇಷದ ನಿಯಮದ ಸಲುವಾಗಿ ಕಾರಣದಲ್ಲಿ ಒಂದು ವಿಶಿಷ್ಟ ಶಕ್ತಿಯನ್ನು ಅಂಗೀಕರಿಸಿದರೂ ಸಹ ''ಶಕ್ತಸ್ಯ ಶಕ್ಯಕರಣಾತ್' ಆ ಕಾರಣಗತವಾದ ಶಕ್ತಿಯು (ಆಶಕ್ತಿಯುಳ್ಳಕಾರಣವು) ಶಕ್ಯ(ಕಾರ್ಯ) ವಾದ ಘಟಾದಿಗಳೊಡನೆ ಸಂಬಂಧ ಹೊಂದಿದರೇ ಘಟಾದಿಗಳನ್ನು ಹುಟ್ಟಿಸಬಲ್ಲದು ಆಸಂಬಂಧವು ಕಾರ್ಯಕ್ಕೆ ಉತ್ಪತ್ತಿಯ ಮುಂಚೆ ಸತ್ಯತೆಇದ್ದರೇನೇ ಸಲ್ಲುತ್ತದೆ ಆದುದರಿಂದ. ಮತ್ತು ''ಕಾರಣಭಾವಾಚ್ಚ" – ಕಾರ್ಯಕ್ಕೆ ಕಾರಣ ಸ್ವರೂಪವಿರುವುದರಿಂದ ಕಾರ್ಯದ ಉತ್ಪತ್ತಿಯ ಮುಂಚೆ ಕಾರಣವು ಇರುವುದೆಂದಾಗ ಆಗ ಕಾರ್ಯಕ್ಕೆ ಸತ್ಯತೆಯು ತಪ್ಪಿದುದಲ್ಲ ಅವರ್ಜನೀಯ ಆದುದರಿಂದ ಕಾರ್ಯವು ಉತ್ಪತ್ತಿಯ ಮುಂಚೆ ಸತ್ಯವೇ ಹೀಗೆ ಈ ಶ್ಲೋಕಾರ್ಥ ಇದನ್ನು ಶ್ರೀಸುಧಾಕಾರರೇ ಸಾಂಖ್ಯಾಧಿಕರಣದಲ್ಲಿ ವಿಶದಪಡಿಸುವರು

ವೈಶೇಷಿಕಾಧಿಕರಣದಲ್ಲಿ ಮುಂದೆ ಹೇಳಲಿರುವ ಯುಕ್ತಿಯನ್ನು ''ವೃತ್ತಿವಿಕಲ್ಪಾನ್ಯಥಾನುಪಪತ್ತ್ಯಾ" ಎಂಬ ವಚನದಿಂದ ಹೇಳುತ್ತಾರೆ. "ಸ್ಥಿತಿಯ ಬಗ್ಗೆ ತೋರಿಸಿದ ವಿಕಲ್ಪಗಳಲ್ಲಿ ಯಾವ ಕಲ್ಪವು ಸರಿಹೊಂದುವುದಿಲ್ಲ" ಈ ಮುಂತಾದ ರೂಪವಾದ ಯುಕ್ತಿಯು, ಹೀಗೆ ಅರ್ಥ ಕಾರ್ಯಕಾರಣಗಳಲ್ಲಿ ಭೇದವಿದ್ದೂ, ಕಾರ್ಯವು ಕಾರಣಾಶ್ರಿತವೆಂದು ಹೇಳಿದರೆ ಪ್ರಶ್ನೆ ಕಾರ್ಯವು ತಂತುಮುಂತಾದ

चासद्व्यपदेशादन्यः सदेव सोम्येदमग्र आसीदित्यादिसद्व्यपदेशः । पटवच्च । संवेष्टितप्रसारितपटन्यायेनेदं कारणात्कार्यस्यानन्यत्वं प्रागुत्पत्तेः च प्रतिपत्तव्यम् । यथा प्राणादिः । प्राणायामेन निरुद्धा-

— ಪದಾರ್ಥದೀಪಿಕಾ —

ಮತ್ತು ಶಬ್ದಾಂತರವೆಂದರೆ- ಅಸದ್ವ್ಯಪದೇಶದಿಂದ ಬೇರೆಯದಾದ 'ಸದೇವ ಸೋಮ್ಯೇದಮಗ್ರ ಆಸೀತ್'' ಇತ್ಯಾದಿಯಾಗಿರುವ ಸದ್ವ್ಯಪದೇಶವು "ಪಟವಚ್ಚ''= ಸಂವೇಷ್ಟಿತ ಪ್ರಸಾರಿತ ಪಟನ್ಯಾಯದಿಂದ, ಕಾರಣದಿಂದ ಕಾರ್ಯಕ್ಕೆ ಅಭೇದವೆಂಬ ಈ ವಿಷಯವನ್ನು ತಿಳಿಯತಕ್ಕದ್ದು "ಯಥಾ ಪ್ರಾಣಾದಿಃ''-ಪ್ರಾಣಾಯಾಮದಿಂದ ನಿರೋಧಿಸಲ್ಪಟ್ಟ ಪ್ರಾಣ ಅಪಾನ ಮುಂತಾದುದು

— ವಿಶೇಷಾರ್ಥಪ್ರದೀಪಿಕಾ —

ಕಾರಣಗಳಲ್ಲಿ ಏಕದೇಶ (ಒಂದುಭಾಗ)ದಲ್ಲಿ ಇರುವಂತಹದೋ? ಅಥವಾ ಎಲ್ಲ ಭಾಗಗಳಲ್ಲಿಯೂ (ಎಲ್ಲಡೆಯಲ್ಲಿಯೂ) ಇರುವಂತಹದೋ? ಮೊದಲನೆಯ ಕಲ್ಪದಲ್ಲಿ ಕಾರಣವಾದ ಅವಯವಗಳಿಗೆ ಏಕದೇಶವಿರುವುದಿಲ್ಲವಾದುದರಿಂದ ಸರಿಯಲ್ಲ ಎರಡನೆಯ ಪಕ್ಷದಲ್ಲಿ -ಒಂದೊಂದು ತಂತುವಿನಲ್ಲಿಯೂ ಕಾರ್ಯ(ಪಟ)ವು ಇರುವುದಾದರೆ ಕಾರ್ಯದಲ್ಲಿ ಅನೇಕತೆಯ(ಅನೇಕಕಾರ್ಯ(ಪಟ)ಗಳಾಗುವ)ಪ್ರಸಂಗವು ಬರುತ್ತದೆ ಮತ್ತು ಒಂದು ತಂತು(ಎಳೆ)ವು ಚಲಿಸಿದಲ್ಲಿ ಇನ್ನೊಂದು ತಂತುವು ಚಲಿಸದಿರುವುದರಿಂದ ಅಚಲತ್ವವು ಬಂದು, ವಿರುದ್ಧಧರ್ಮವುಳ್ಳದ್ದಾಗುತ್ತದೆ ಈ ರೀತಿಯಾಗಿರುವ ಯುಕ್ತಿಗಳು ಹೀಗೆ ತಿಳಿಯಬೇಕು

"ಸಂವೇಷ್ಟಿತ -ಪ್ರಸಾರಿತಪಟನ್ಯಾಯೇನ" -ಸಂವೇಷ್ಟಿತ(ಮಡಿಚಲ್ಪಟ್ಟ)ವಾದಾಗ ಪಟವು(ಬಟ್ಟೆಯು) ಅವ್ಯಕ್ತವಾಗಿರುತ್ತದೆ ಪ್ರಸಾರಣಮಾಡಿದಮೇಲೆ ವ್ಯಕ್ತವಾಗುತ್ತದೆ ಇದು ಹೇಗೋ ಹಾಗೆ -ಕಾರ್ಯವು ಉತ್ಪತ್ತಿಯ ಮೊದಲು ಸತ್ಯವೇ(ಇದ್ದುದೇ) ಆದರೂ ಅವ್ಯಕ್ತವಾಗಿದ್ದು ಕರ್ತೃವಿನ ವ್ಯಾಪಾರದ ಅನಂತರ ವ್ಯಕ್ತವಾಗುತ್ತದೆ. ಈ ಯುಕ್ತಿಯಿಂದ ಕಾರ್ಯಕ್ಕೆ ಕಾರಣದಿಂದ ಅಭೇದವೆಂದು ತಿಳಿಯಬೇಕು ಹೀಗೆ ಅರ್ಥ

"ಪ್ರಾಣಾಯಾಮೇನ"=ಲೋಕದಲ್ಲಿ ಪ್ರಾಣಾಯಾಮದಿಂದ, ಪ್ರಾಣ(ಗಾಳಿ)ದ ಅವಾಂತರಭೇದಗಳಾದ ಪ್ರಾಣ ಅಪಾನ ಮುಂತಾದ ಪ್ರಾಣ(ಗಾಳಿ)ವನ್ನು ನಿರೋಧಿಸಿದಾಗ ಆ ಪ್ರಾಣಾಪಾನಾದಿ ಪ್ರಭೇದಗಳು ಕೇವಲ ಕಾರಣವಾದ ಪ್ರಾಣ (ಗಾಳಿ) ಸ್ವರೂಪದಿಂದಲೇ ಇದ್ದು ಜೀವನವನ್ನಷ್ಟೇ (ಬದುಕಿಸುವಕೆಲಸವನ್ನಷ್ಟೇ) ನಿರ್ವಹಿಸುತ್ತವೆ. ಆಕುಂಚನ ಪ್ರಸಾರಣ ಮುಂತಾದುದನ್ನು ನಿರ್ವಹಿಸು

प्राणापानादयो यथा तथा चेति । अत्र सूत्राक्षराणामार्जवानार्जवादिचिन्ता शिष्यैरेव क्रियतामित्याशयवान्यदुक्तं कारणात्कार्यस्यानन्यत्वं तत्तावन्निराकरिष्यन्किमनेन प्रबन्धेन निमित्तकारणानन्यत्वं कार्यस्योपपादितम् । उतोपादानकारणानन्यत्वमिति विकल्पं चेतसि निधायाद्यं निराकरोति ॥ नित्यभेद इति ।।

— ಪದಾರ್ಥದೀಪಿಕಾ —

ಹೇಗೋ ಹಾಗೆ, '' ಹೀಗೆ 'ಪರರ ವ್ಯಾಖ್ಯಾನವು ಇಲ್ಲಿ ಸೂತ್ರಾಕ್ಷರಗಳ ಸ್ವಪರಪಕ್ಷಗಳಲ್ಲಿ ಸರಲವಾಗುವುದು ಸರಲವಾಗದಿರುವುದು, ಈ ಮುಂತಾದುದರ ವಿಷಯಕವಾದ ವಿಚಾರವನ್ನು ಶಿಷ್ಯರೇ ಮಾಡಲಿ ! ಈ ಅಭಿಪ್ರಾಯವುಳ್ಳವರಾಗಿ "ಕಾರಣದಿಂದ ಕಾರ್ಯಕ್ಕೆ ಅಭೇದ'' ವೆಂಬುದಾಗಿ ಹೇಳಿದ ವಿಷಯವನ್ನು ಮುಂದೆ ನಿರಾಕರಿಸುತ್ತ, ಈಗ ಈ ಪ್ರಕರಣದಿಂದ ಕಾರ್ಯಕ್ಕೆ ನಿಮಿತ್ತ ಕಾರಣದಿಂದ ಅಭೇದವನ್ನು ಹೇಳಿದ್ದೀರೋ ? ಇಲ್ಲವೆ ಉಪಾದಾನ ಕಾರಣದಿಂದ ಅಭೇದವನ್ನು ಹೇಳಿದ್ದೀರೋ? ಹೀಗೆ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು, ಮೊದಲನೆಯ ಕಲ್ಪವನ್ನು "ನಿತ್ಯಭೇದೋ" ಇತ್ಯಾದಿ ಪದ್ಯದಿಂದ ನಿರಾಕರಿಸುತ್ತಾರೆ

— ವಿಶೇಷಾರ್ಥಪ್ರದೀಪಿಕಾ —

ವದಿಲ್ಲ ಆದರೆ ನಿರೋಧವು ತಪ್ಪಿದನಂತರ (ಪ್ರಾಣಾಯಾಮವಿಲ್ಲದಾಗ) ಅವೇ ಪ್ರಾಣಾದಿ ಪ್ರಭೇದಗಳು ಬದುಕಿಸುವದನ್ನಲ್ಲದೆ ಹೆಚ್ಚಿನವಾದ ಆಕುಂಚನಪ್ರಸಾರಣಾದಿಗಳನ್ನು ನಿರ್ವಹಿಸುತ್ತವೆ ಇಲ್ಲಿ–ಪ್ರಾಣಾಪಾನಾದಿಗಳಿಗೂ ಪ್ರಾಣಕ್ಕೂ ಭೇದವಿಲ್ಲ ಏಕೆಂದರೆ ಸಮೀರಣ(ಬೀಸೋಣ)ಸ್ವಭಾವವೊಂದೇ ಆಗಿದೆ ಅದರಂತೆ ಕಾರ್ಯಕ್ಕೆ ಕಾರಣದ ಸ್ವರೂಪವಿರುವುದರಿಂದ ಅಭೇದವೇ ವಿನಾ ಭೇದವಿಲ್ಲ ಹೀಗೆ ಇಲ್ಲಿಯ ಅರ್ಥ "ಆರ್ಜವಾನಾರ್ಜವಚಿಂತಾ' – ನಮ್ಮ (ಸ್ವ) ಪಕ್ಷದಲ್ಲಿ ಆರ್ಜವವನ್ನೂ (ಸಾರಲ್ಯವನ್ನೂ) ಪರರ ಪಕ್ಷದಲ್ಲಿ ಅನಾರ್ಜವವನ್ನೂ (ಸರಲತೆಯಿಲ್ಲವೆಂಬುದನ್ನೂ) ತಿಳಿಯಬೇಕು ಈ ಚರ್ಚೆಯನ್ನು ಚಂದ್ರಿಕಾಕಾರರು ಚಂದ್ರಿಕೆಯಲ್ಲಿ ಮಾಡಿದ್ದಾರೆ; ಅಲ್ಲಿಂದ ತಿಳಿಯಬೇಕು ಇಲ್ಲಿಯೂ ಮುಂದೆ ಮಾಡಲಿರುವರು (ಅನವಸ್ಥಾ ಎಂಬ ವಾಕ್ಯಕ್ಕೆ ಬೇರೆ ವ್ಯಾಖ್ಯಾನವನ್ನು ಮಾಡುವಾಗ)

"ಪ್ರಬಂಧೇನ'- "ತದನನ್ಯತ್ವಂ" ಈ ಮುಂತಾದ ಸೂತ್ರಸಂದರ್ಭದಿಂದ!

नित्यभेदो निमित्तेन ह्युपादानेन तु द्वयम् ॥

नित्यशब्दो नियमार्थः । भेद एवेति । कार्यस्येति शेषः । हीति सर्वप्रमाणप्रसिद्धिं सूचयति । तथा च सर्वमिदं बाधितविषयमिति । न द्वितीयः । प्रकृतानुपयोगात् । वियदादिप्रपञ्चस्य ब्रह्मानन्यत्वमुपपादयितुं खल्वस्योपन्यासः । तद्यदि नामोपादानानन्यत्वं कार्यस्य तदा किमायातं प्रकृते । न हि ब्रह्म प्रपञ्चोपादानमित्येदद्युक्तप्रायमिति मन्वानो दूषणान्तरमाह । उपादानेनेति । हीत्यनुवर्त्यते ।

ಕಾರ್ಯಕ್ಕೆ ನಿಮಿತ್ತ ಕಾರಣದಿಂದ ನಿಯಮೇನ ಭೇದವೇ! ಇದು ಪ್ರಮಾಣಪ್ರಸಿದ್ಧವಾದುದು. ಉಪಾದಾನ ಕಾರಣದಿಂದಾದರೂ ಭೇದಾಭೇದ (ಗಳೇ!) ಇವು ಪ್ರಮಾಣಸಿದ್ಧವಾದವುಗಳು ಕಾರಣ (ಮೃದಾದಿ) ರೂಪವಾಗಿ

## — ಪದಾರ್ಥದೀಪಿಕಾ —

"ನಿತ್ಯ' ಶಬ್ದವು, "ಭೇದ ಏವ" ಎಂಬುದಾಗಿ ಭೇದದ ನಿಯಮವನ್ನು ಹೇಳುತ್ತದ ಇಲ್ಲಿ "ಕಾರ್ಯಸ್ಯ" (ಕಾರ್ಯಕ್ಕೆ) ಎಂಬುದರ ಶೇಷವಾಗಿದೆ "ಹಿ" ಶಬ್ದದಿಂದ ಪ್ರಮಾಣ ಸಿದ್ಧಿಯನ್ನು (ಈ ವಿಷಯದಲ್ಲಿ) ಸೂಚಿಸುತ್ತಾರೆ ಆದುದರಿಂದ, ನಿಮಿತ್ತ ಕಾರಣದಿಂದ ಕಾರ್ಯಕ್ಕೆ ಅಭೇದವೆಂಬೀ ಎಲ್ಲ ವಿಷಯವು ಬಾಧಿತವಾಗುತ್ತದೆ, ಹೀಗೆ ಅರ್ಥ ಎರಡನೆಯ ಕಲ್ಪವು ಯುಕ್ತವಲ್ಲ ಏಕೆಂದರೆ– ಪ್ರಕೃತಕ್ಕೆ ಉಪಯೋಗವಿಲ್ಲ ಹೇಗೆಂದರೆ– 'ವಿಯದಾದಿ ಪ್ರಪಂಚಕ್ಕೆ ಬ್ರಹ್ಮಾಭೇದವನ್ನು ಉಪಪಾದನಮಾಡಲು ಇದನ್ನು ಹೇಳತಕ್ಕದ್ದು ಒಂದು ವೇಳೆ ಕಾರ್ಯಕ್ಕೆ ಉಪಾದಾನಕಾರಣದಿಂದ ಅಭೇದವಿರುವುದಾದರೆ- ಪ್ರಕೃತದಲ್ಲಿ ಬಂದುದೇನು ? ಏಕೆಂದರೆ ಬ್ರಹ್ಮವು ಪ್ರಪಂಚದ ಉಪಾದಾನ ಕಾರಣವಲ್ಲ" ಈ ವಿಷ

## — ವಿಶೇಷಾರ್ಥಪ್ರದೀಪಿಕಾ —

ಪ್ರಪಂಚಕ್ಕೆ ಉಪಾದಾನದಿಂದ ಅಭೇದವನ್ನು ಹೇಳುವುದರಿಂದ ಬ್ರಹ್ಮಾಭೇದವೇ ಸಿದ್ಧಿಸುತ್ತದೆ ಏಕೆಂದರೆ ಬ್ರಹ್ಮವೇ ಉಪಾದಾನವಾಗಿದೆ. ಈ ಆಶಂಕೆಯನ್ನು "ನ ಹಿ ಬ್ರಹ್ಮಪ್ರಪಂಚೋಪಾದಾನಂ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಪ್ರಕೃತ್ಯಧಿಕರಣದಲ್ಲಿ ನಿರಾಕರಿಸಲಾಗಿದೆಯೆಂದು ತಿಳಿಯಬೇಕು ''ಇತ್ಯೇತದ್" – ನ ದ್ವಿತೀಯಃ' ಇತ್ಯಾದಿ ವಚನಗಳಿಂದ ಹೇಳಿದ ಎರಡನೆಯ ಪಕ್ಷದ ಮೇಲಣದೂಷಣವು, (ಉಪಾದಾನ ಕಾರಣಾಭೇದ ಪಕ್ಷದ

असद्यत्कार्यरूपेण कारणात्मतयाऽस्ति हि ॥

उपादानेन कार्यस्य द्वयं भेदाभेदौ प्रमितौ । ततोऽस्मिन्नपि पक्षे बाधितविषयत्वमिति । कथं कार्यं कारणेन भिन्नाभिन्नं प्रमितमित्यत आह ॥ असदिति ॥ यद्घटादिकं मृदादिकारणात्मतया प्रागुत्पत्तेरस्तीति प्रमितं परेणाङ्गीकृतं च तदेव पृथुबुध्नोदराकारादिना कार्य-

ಉತ್ಪತ್ತಿಯ ಮುಂಚೆ ಇರುವವುಗಳೆಂದು ಪ್ರಮಿತವಾದ ಹಾಗು ಪರನಿಂದ ಅಂಗೀಕರಿಸಲ್ಪಟ್ಟ ಘಟ ಮುಂತಾದುದು ಉತ್ಪತ್ತಿಯ ಮುಂಚೆ ಕಾರ್ಯ (ಪೃಥುಬುಧ್ನೋದರಾಕಾರ ಮುಂತಾದ) ರೂಪದಿಂದ ಅಸತ್ಯ (ಇಲ್ಲ) ವಾದುದರಿಂದ ಉಪಾದಾನದಿಂದ (ಕಾರ್ಯವು) ಭಿನ್ನಾಭಿನ್ನವೆಂದು ನಿರ್ಣಯಿಸಲ್ಪಡುತ್ತದೆ

— ಪದಾರ್ಥದೀಪಿಕಾ —

ಯವು ಹೇಳಲ್ಪಟ್ಟಂತೆಯೇ, ಎಂಬುದಾಗಿ ತಿಳಿಯುತ್ತ, ಬೇರೆ ದೂಷಣವನ್ನು "ಉಪಾದಾನೇನ" ಇತ್ಯಾದಿ ವಚನದಿಂದ ಹೇಳುತ್ತಾರ "ಹಿ" ಎಂಬುದು ಅನುವೃತ್ತವಾಗುತ್ತದೆ ಉಪಾದಾನ ಕಾರಣದಿಂದ ಕಾರ್ಯಕ್ಕೆ ಭೇದ-ಅಭೇದಗಳೆರಡೂ ಪ್ರಮಾಣ ಸಿದ್ಧವಾಗಿರುತ್ತವೆ ಆದುದರಿಂದ, ಈ ಪಕ್ಷದಲ್ಲಿಯೂ ಪ್ರಮಾಣ ಬಾಧವೆಂಬ ದೋಷವು ಬರುತ್ತದೆ ಕಾರ್ಯವು ಕಾರಣದಿಂದ ಭಿನ್ನಾಭಿನ್ನವೆಂಬುದಾಗಿ ಹೇಗೆ ಪ್ರಮಾಣಸಿದ್ಧವು ? ಈ ಆಕ್ಷೇಪವನ್ನು "ಅಸದ್ಯತ್ ಕಾರ್ಯ ರೂಪೇಣ" ಈ ವಚನದಿಂದ ಪರಿಹರಿಸುತ್ತಾರೆ. ಯಾವ ಘಟವು ಮೃತ್ತು ಮುಂತಾದ ಕಾರಣರೂಪದಿಂದ, ಹುಟ್ಟುವುದಕ್ಕೆ ಮುಂಚೆ ಇರುವುದೆಂದು ಪರನಿಗೆ ಒಪ್ಪಿತವಾಗಿದೆಯೋ ಮತ್ತು ಪ್ರಮಾಣಸಿದ್ಧವಾಗಿದೆಯೋ ಅದೇ ಘಟವೇ ಪೃಥುಬುಧ್ನೋದರಾಕಾರ ಮುಂತಾದ ಕಾರ್ಯರೂಪದಿಂದ ಮೊದಲು "ಅಸತ್ತು" (ಇಲ್ಲದ್ದು)

— ವಿಶೇಷಾರ್ಥಪ್ರದೀಪಿಕಾ —

ಮೇಲಿನ ದೂಷಣವು) 'ಉಕ್ತಪ್ರಾಯಂ" ಪ್ರಕೃತ್ಯಧಿಕರಣದಲ್ಲಿ ಹೇಳಿದ್ದಾಗಿದೆಯೆಂದು ತಿಳಿಯಬೇಕು

"ದೂಷಣಾಂತರಂ" ಪ್ರಕೃತಾನುಪಯೋಗವೆಂಬುದೊಂದು ದೋಷ ಭಾಧಿತ ವಿಷಯ (ಸಾಧ್ಯವು ಪ್ರಬಲಪ್ರಮಾಣದಿಂದ ವಿರುದ್ಧ) ವೆಂಬುದು ಇನ್ನೊಂದು ದೂಷಣ ಹೀಗೆ ತಿಳಿಯಬೇಕು "ಹೀತ್ಯನುವರ್ತತೇ" -"ಹಿ"ಶಬ್ದವು ಪ್ರಮಾಣ ಪ್ರಸಿದ್ಧಿಯನ್ನು ಸೂಚಿಸುತ್ತದೆಯೆಂದು ಹೇಳಲಾಗಿದೆಯೆಂಬ ಅಭಿಪ್ರಾಯದಿಂದ "ಪ್ರಮಿತೌ" ಎಂಬುದಾಗಿ ಹೇಳಿದ್ದಾರೆ

रूपेण प्रागुत्पत्तेरसद्धि यस्मात्तस्मादुपादानेन भिन्नाभिन्नमिति निश्चीयते ।

एतदुक्तं भवति । परो हि घटादेः कार्यस्य प्रागुत्पत्तेः सत्त्वमभ्युपगच्छति । तत्किं पृथगेवोत मृदादिकारणात्मतयेति वक्तव्यम् । नाद्यः । अनभ्युपगमात् । अनुपलब्धेश्च । द्वितीये तु कार्यस्योपादानाभेदस्तावदङ्गीकृतः । न चात्यन्ताभेदः । घटादेः कार्याकारेण प्रागुत्पत्तेरसत्त्वात् । यदा हि घटादिकं मृदादिनाऽत्यन्ताभिन्नं स्यात् । तदा प्रागुत्पत्तेर्घटादिरूपेण सत्स्यात् । मृदादेस्तदा सत्त्वात् । न चैवम् । तेन जानीमो घटादिकं मृदादिना भिन्नाभिन्नमिति । अत्यन्ता-

— ಪದಾರ್ಥದೀಪಿಕಾ —

ಆಗಿದೆ ಈ ಕಾರಣದಿಂದ, ಉಪಾದಾನ ಕಾರಣದಿಂದ ಕಾರ್ಯವು ಭಿನ್ನಾಭಿನ್ನವೆಂದು ನಿಶ್ಚಯಿಸಲ್ಪಡುತ್ತದೆ

ಇಲ್ಲಿ ಹೇಳಲ್ಪಟ್ಟದ್ದು ಇದು-"ಘಟ ಮುಂತಾದ ಕಾರ್ಯಕ್ಕೆ ಉತ್ಪತ್ತಿಯ ಪೂರ್ವದಲ್ಲಿ ಸತ್ಯತೆಯನ್ನು ಪರನು ಒಪ್ಪುತ್ತಾನೆ ಆ ಅಸ್ತಿತ್ವವು ಪೃಥಕ್ಕಾಗಿಯೇ (ಬೇರೆಯದೇ) ಇರುವುದೋ? ಇಲ್ಲವೆ ಕಾರಣ ರೂಪದಿಂದಿರುವುದೋ? ಎಂಬುದನ್ನುಹೇಳತಕ್ಕದ್ದು ಮೊದಲನೆಯ ಕಲ್ಪವುಯುಕ್ತವಲ್ಲ ಏಕೆಂದರ ಒಪ್ಪಿರುವದಿಲ್ಲ ಅದು ಕಂಡಿಲ್ಲ ಎರಡನೆಯ ಪಕ್ಷದಲ್ಲಿಯಾದರೋ ಕಾರ್ಯಕ್ಕೆ ಉಪಾದಾನ ಕಾರಣದಿಂದ ಅಭೇದವನ್ನಂತೂ ಒಪ್ಪಲಾಗಿದ ಆದರೆ ಅತ್ಯಂತಾ ಭೇದವನ್ನು ಒಪ್ಪಿಲ್ಲ ಏಕೆಂದರೆ ಘಟಾದಿಗಳಿಗೆ, ಕಾರ್ಯಾಕಾರದಿಂದ (ಕಾರ್ಯರೂಪದಿಂದ) ಹುಟ್ಟುವುದಕ್ಕೆ ಮೊದಲು ಅಸತ್ಯತೆಯು ಇರುತ್ತದೆ (ಅಂದರೆ ಕಾರ್ಯರೂಪದಿಂದ ಘಟಕ್ಕೆ ಅಸ್ತಿತ್ವವಿರುವುದಿಲ್ಲ) ಯಾವಾಗ ಘಟ ಮುಂತಾದುದು ಮೃತ್ತು ಮುಂತಾದುದರಿಂದ ಅತ್ಯಂತ ಅಭಿನ್ನವಾಗಿದೆಯೋ ಆಗ ಉತ್ಪತ್ತಿಯ ಪೂರ್ವದಲ್ಲಿ ಆ ಘಟಾದಿರೂಪದಿಂದ ಸತ್ಯವಾಗಲಿ! ಏಕೆಂದರೆ ಮೃತ್ತು ಮುಂತಾದುದು ಆಗ ಇರುತ್ತದೆ. ಆದರೆ ಹಾಗೆ ಇರುವದಿಲ್ಲ (ಘಟಾದಿರೂಪದಿಂದ ಆಗ ಅಸ್ತಿತ್ವವಿಲ್ಲ) ಇದರಿಂದ, ಘಟ ಮುಂತಾದುದು ಮೃದಾದಿಗಳಿಂದ ಭಿನ್ನಾ ಭಿನ್ನವಾದುದೆಂದು ತಿಳಿಯ ಬರುತ್ತದೆ" ಅತ್ಯಂತ ಅಸತ್ಕಾರವಾದಿಯನ್ನು ಕುರಿತು

— ವಿಶೇಷಾರ್ಥಪ್ರದೀಪಿಕಾ —

ಈ ಪ್ರಘಟ್ಟಕೆಯ ಅಭಿಪ್ರಾಯವನ್ನು "ಏತದುಕ್ತಂ ಭವತಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

सत्कार्यवादिनं प्रति भेदाभेदसमर्थनं विरोधपरिहारश्चोत्तरत्र विधास्यत इति ।

यच्च कार्यस्य प्रागुत्पत्तेः सत्त्वमुक्तं तदपि नोपपन्नमित्याह ॥ असदिति । यद्घटादिकं प्रागुत्पत्तेरस्तीत्यावयोः सम्मतम् । तदेव तदा सच्च यस्मात्तस्मात्सदसदेवेति सत्कार्यवादोऽनुपपन्न एव । तस्यैव तदैव तत्रैव सत्त्वमसत्त्वं च विरुद्धमिति चेन्न । रूपभेदेनाविरोधादित्याशयेनोक्तं कारणात्मतया कार्यरूपेणेति । नन्वेवं सति किञ्चित्स

— ಪದಾರ್ಥದೀಪಿಕಾ —

ಭೇದಾ ಭೇದಸಮರ್ಥನೆಯೂ ವಿರೋಧದ ಪರಿಹಾರವೂ ಮುಂದೆ ಮಾಡಲ ಡಲಾಗುವದು" ಎಂಬುದು (ಹೇಳಲ್ಪಟ್ಟಿದ್ದು)

ಇನ್ನು- ಕಾರ್ಯಕ್ಕೆ ಉತ್ಪತ್ತಿಯ ಪೂರ್ವದಲ್ಲಿ ಸತ್ಯತೆ (ಅಸ್ತಿತ್ವ) ಯು ಹೇಳಲ್ಪಟ್ಟಿದೆಯಷ್ಟೇ! ಅದು ಕೂಡ ಯುಕ್ತವಾಗಲಾರದೆಂಬುದನ್ನು "ಅಸತ್" ಇತ್ಯಾದಿ ವಚನದಿಂದ ಹೇಳುತ್ತಾರೆ ಯಾವ ಘಟಾದಿಗಳು ಉತ್ಪತ್ತಿಯ ಪೂರ್ವದಲ್ಲಿ ಇವೆಯೆಂಬುದು ನಮ್ಮಿಬ್ಬರಿಗೂ ಸಮ್ಮತವಾಗಿದೆಯೋ ಅದೇ ಘಟ ಮುಂತಾದುದೇ ಆಗ ಅಸತ್ಯವೂ ಆಗಿದ ಆದುದರಿಂದ, ಕಾರ್ಯವು ಸದಸತ್ಯವಾಗಿದೆಯಾದುದರಿಂದ ಸತ್ಕಾರ್ಯವಾದವು ಅಯುಕ್ತವೇ ಆಗಿದೆ ಇನ್ನು- ಒಂದಕ್ಕೇ ಒಂದೇ ಕಾಲದಲ್ಲಿ ಒಂದೇ ಕಡೆಯಲ್ಲಿಯೇ ಸತ್ಯತೆ ಹಾಗು ಅಸತ್ಯತೆ, ಇವುಗಳೆರಡೂ ವಿರುದ್ಧಗಳೆಂದು ತಿಳಿಯಬಾರದು ಏಕಂದರೆ- ರೂಪಭೇದದಿಂದ ವಿರೋಧವಿಲ್ಲ ಈ ಅಭಿಪ್ರಾಯದಿಂದ "ಕಾರಣಾತ್ಮತಯಾ ಕಾರ್ಯರೂಪೇಣ" ಎಂಬು

— ವಿಶೇಷಾರ್ಥಪ್ರದೀಪಿಕಾ —

'ಅತ್ಯಂತಾಸತ್ಕಾರ್ಯವಾದಿನಂ" = ಇಲ್ಲದಿದ್ದುದಕ್ಕೆ ಸತ್ತೆ (ಅಸ್ತಿತ್ವ) ಯ ಸಂಬಂಧವು ಜನನವೆಂದು ಹೇಳುವ ತಾರ್ಕಿಕನನ್ನು ಕುರಿತು! "ಭೇದಾ ಭೇದ ಸಮರ್ಥನಂ" ಉಪಾದಾನ ಉಪಾದೇಯಗಳಲ್ಲಿ ಭೇದಾಭೇದವೆಂದು ಅರ್ಥ "ವಿರೋಧಪರಿಹಾರಃ" ಭೇದ ಅಭೇದಗಳಿಗೆ ಒಂದೆಡೆಯಲ್ಲಿ ಇರುವಿಕೆಯು ವಿರುದ್ಧವೆಂಬ ಆಶಂಕೆಯ ಪರಿಹಾರವು "ಉತ್ತರತ್ರ"=ವೈಶೇಷಿಕಾಧಿಕರಣದಲ್ಲಿ ಸಮವಾಯ ನಿರಾಕರಣದ ಪ್ರಸ್ತಾಪದಲ್ಲಿ

"ಅಸತ್" ಎಂಬಲ್ಲಿ "ಚಕಾರ"ರದ ಅಧ್ಯಾಹಾರಮಾಡಿ ಅರ್ಥವನ್ನು 'ಅಸಚ್ಚ' ಎಂಬುದಾಗಿ ಹೇಳಿದ್ದಾರೆ "ಹಿ"ಶಬ್ದದ ಅರ್ಥವು 'ಯಸ್ಮಾತ್" ಎಂಬುದಾಗಿ,

अनवस्थाऽन्यथा हि स्यात्सर्वत्रोत्पत्तिनाशयोः ॥

देव किञ्चिदसदेव सदसत्तु न किमपि स्यात् । न स्यात् । तयोरपि रूपयोरत्यन्तभेदाभावादिति ।

स्यादेतदुक्तम् । यद्यसत्त्वं प्रागुत्पत्तेः कार्यस्य स्यात्तदेव कुतः । तथा चात्यन्ताभिन्नं कार्यमुपादानेनेत्यतो विपक्षे बाधकप्रदर्शनेन कार्यस्य प्रागुत्पत्तेरसत्त्वमुपादानाद्भेदं चोपपादयति ॥ अनवस्थेति ।। अन्यथा कार्यस्य प्रागुत्पत्तेरात्यन्तिके सत्त्वे कारणेनात्यन्ताभेदे चाङ्गीकृते

ಹಾಗಿಲ್ಲದಿದ್ದಲ್ಲಿ- (ಉತ್ಪತ್ತಿಯ ಮುಂಚೆ ಕಾರ್ಯರೂಪದಿಂದಲೂ ಅತ್ಯಂತಿಕ ಸತ್ಯತೆಯನ್ನೂ, ಕಾರಣದಿಂದ ಅತ್ಯಂತ ಅಭೇದವನ್ನೂ, ಕಾರ್ಯಕ್ಕೆ ಅಂಗೀಕರಿಸಿದರೆ) ಎಲ್ಲ ಕಡೆಗಳಲ್ಲಿಯೂ ಉತ್ಪತ್ತಿ ವಿನಾಶಗಳಿಗೆ ಅನ್ಯವಸ್ಥೆಯುಂಟಾದೀತು !

— ಪದಾರ್ಥದೀಪಿಕಾ —

ದಾಗಿ ಹೇಳಿದ್ದಾರೆ ಹಾಗಾದಲ್ಲಿ ಕಾರಣವು ಸತ್ಯವೇ ಆದೀತು ! ಇನ್ನು ಕಾರ್ಯವು ಅಸತ್ಯವೇ ಆದೀತು ! ಸದಸತ್ಯವು ಯಾವದೂ ಆಗಲಿಲ್ಲವೆಂದು ಬಗೆಯಬಾರದು, ಎಂದರೆ ಆಗದಿರಲಿ ! ಏಕೆಂದರೆ- ಆ ರೂಪಗಳೆರಡಕ್ಕೂ ಅತ್ಯಂತ ಭೇದವಿರುವುದಿಲ್ಲ ಹೀಗೆ ಅರ್ಥ.

ಇನ್ನು- ಹೀಗೆ ಹೇಳಿದ ಈ ಸಂಗತಿಯು, ಕಾರ್ಯಕ್ಕೆ ಹುಟ್ಟುವ ಪೂರ್ವದಲ್ಲಿ ಅಸತ್ಯತೆಯು ಇದ್ದರೆ ಆಗಬಹುದು ಆದರೆ ಕಾರ್ಯಕ್ಕೆ ಹುಟ್ಟುವ ಪೂರ್ವದಲ್ಲಿ ಅಸತ್ವವೆಂಬುದೇಕೆ ? (ಇರುವದಿಲ್ಲ) ಆದುದರಿಂದ ಕಾರ್ಯವು ಉಪಾದಾನ ಕಾರಣದಿಂದ ಅತ್ಯಂತ ಅಭಿನ್ನವಾದುದೆಂಬ ಆಶಂಕೆಯು ಬರುವುದರಿಂದ, ಅದನ್ನು ಪರಿಹರಿಸಲು, ವಿಪಕ್ಷದಲ್ಲಿ ಬಾಧಕವನ್ನು ತೋರಿಸಿ, ಕಾರ್ಯಕ್ಕೆ ಉತ್ಪತ್ತಿಯ ಪೂರ್ವದಲ್ಲಿ ಅಸತ್ಯತೆಯನ್ನೂ ಉಪಾದಾನದಿಂದ ಭೇದವನ್ನೂ "ಅನವಸ್ಥಾ" ಈ ವಚನದಿಂದ ಉಪಪಾದಿಸುತ್ತಾರೆ "ಅನ್ಯಥಾ"= ಕಾರ್ಯಕ್ಕೆ ಉತ್ಪತ್ತಿಯ ಪೂರ್ವದಲ್ಲಿ ಅತ್ಯಂತ ಸತ್ಯತೆಯೂ ಕಾರಣದಿಂದ ಅತ್ಯಂತ ಅಭೇದವೂ ಅಂಗೀಕರಿಸಲ್ಪಡುವುದಾದರೆ, ಉತ್ಪತ್ತಿ ವಿನಾಶಗಳೆರಡಕ್ಕೂ ಎಲ್ಲ ಕಡೆಗಳಲ್ಲೂ

— ವಿಶೇಷಾರ್ಥಪ್ರದೀಪಿಕಾ —

"ಕಿಂಚಿತ್"=ಕಾರಣವು ಇನ್ನೊಂದು "ಕಿಂಚಿತ್" "ಕಾರ್ಯ' ವೆಂದು ಅರ್ಥ ನಿರಾಕರಣವನ್ನು "ನ ಸ್ಯಾತ್' ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ

सर्वत्रोत्पत्तिनाशयोरनवस्थाऽव्यवस्था स्यात् । तथा हि । पटस्तन्त्वात्मकः प्रागपि सन्नेव । तथा तन्तवोऽपि स्वकारणात्मकाः सन्त एवेत्यनेन क्रमेण सर्वस्य मूलकारणात्मकत्वेनात्यन्तिकं सत्त्वं स्यात् । न च मूलकारणमुत्पद्यते विनश्यति चेति पटादीनामप्युत्पत्तिविनाशौ न स्याताम् । तथा च पटादय उत्पत्तिविनाशवन्त आत्मादयस्तद्रहिता इति लोकवेदप्रसिद्धोत्पत्तिनाशव्यवस्था न स्यादिति । उपलक्षणं चैतत् । पटादीनामुत्पत्तिविनाशाभावे तत्कारकव्यापारवैफल्यं स्यादित्यपि द्रष्टव्यम् ।

यद्वोत्पत्तिनाशशब्दाभ्यां सत्त्वमसत्त्वं चोपलक्ष्यते । ततश्चायमर्थः । यदि पटस्तन्त्वात्मकः प्रागुत्पत्तेरपि सन्नेव तदाऽ (तदा)

— ಪದಾರ್ಥ ದೀಪಿಕಾ —

" ಅನವಸ್ಥೆಯು " (ಅವ್ಯವಸ್ಥೆಯು) ಉಂಟಾದೀತು ! ಹೇಗೆಂದರೆ " ತಂತು ರೂಪದಿಂದ ಪಟವು ಉತ್ಪತ್ತಿಯ ಪೂರ್ವದಲ್ಲಿಯೂ ಸತ್ಯವೇ! (ಇರುವಂತಹದೇ) ಹಾಗೂ ತಂತುಗಳೂ ತಮ್ಮ ಕಾರಣರೂಪಗಳೇ ಆಗಿದ್ದು ಕಾರಣರೂಪದಿಂದ ಇರುವವುಗಳೇ ಸರಿ ! ಈ ಕ್ರಮದಿಂದ ಎಲ್ಲವೂ ಮೂಲಕಾರಣ ರೂಪವಾದುದರಿಂದ ಅತ್ಯಂತ ಸತ್ಯವೇ ಆಗಬೇಕಾಗುವುದು ಹಾಗು ಮೂಲಕಾರಣವು ಹುಟ್ಟುವುದೂ ಇಲ್ಲ ಸಾಯುವುದೂ ಇಲ್ಲ ಹೀಗಾಗಿ ಪಟ ಮುಂತಾದುದಕ್ಕೂ ಸಹ ಉತ್ಪತ್ತಿ ವಿನಾಶಗಳು ಆಗದಿರಲಿ ! ಆದುದರಿಂದ, ಪಟಾದಿಗಳು ಉತ್ಪತ್ತಿ ವಿನಾಶಗಳುಳ್ಳವುಗಳು ಆತ್ಮಾದಿಗಳು ಉತ್ಪತ್ತಿ ವಿನಾಶವಿಲ್ಲದವುಗಳು, ಎಂಬುದಾಗಿರುವ ಲೋಕ ವೇದಪ್ರಸಿದ್ಧವಾದ ಉತ್ಪತ್ತಿವಿನಾಶವ್ಯವಸ್ಥೆಯು ಇಲ್ಲದಿರಬೇಕಾಗುವದು," ಹೀಗೆ ಇದು, ಇನ್ನೂ ಒಂದು ವಿಷಯದ ಸಂಗ್ರಾಹಕವಾಗಿದೆ "ಪಟಾದಿಗಳಿಗೆ ಉತ್ಪತ್ತಿ ವಿನಾಶಗಳಿಲ್ಲದಿರುವುದಾದರೆ — ಅವುಗಳನ್ನುಂಟು ಮಾಡುವ ಕಾರಕ ವ್ಯಾಪಾರಗಳಿಗೆ ವೈಫಲ್ಯವು (ವಿಫಲತೆಯು) ಬರುವದೆಂಬುದನ್ನು ತಿಳಿಯಬೇಕು

ಅಥವಾ—"ಉತ್ಪತ್ತಿ ನಾಶ" ಶಬ್ದಗಳಿಗೆ ಸತ್ಯತ್ವ, ಅಸತ್ಯತ್ವವೆಂಬ ಅರ್ಥವು ಲಕ್ಷಣಾವೃತ್ತಿಯಿಂದ ಹೇಳಲ್ಪಡುತ್ತದೆ, ಆದುದರಿಂದ ಇಲ್ಲಿ ಹೊರಡುವ ಅರ್ಥವಿದು—'ಪಟವು ತಂತುರೂಪವಾಗಿದ್ದು, ಉತ್ಪತ್ತಿಯ ಪೂರ್ವದಲ್ಲಿಯೂ ಸತ್ಯವೇ (ಇರುವಂತಹದೇ) ಆಗಿದ್ದ ಪಕ್ಷದಲ್ಲಿ ಆಗಲೂ (ಹುಟ್ಟುವ ಪೂರ್ವದಲ್ಲಿ

प्युपलभ्येत तन्तुवत् । यदि चानुपलभ्यमानोऽपि सन्नभ्युपेयते । तदा सर्वत्रोत्पत्तिनाशयोस्सदसत्त्वयोरनवस्था स्यात् । उपलभ्यमानं घटादिकमस्त्यनुपलभ्यमानं खरविषाणादिकं नास्तीति सर्वजनसम्मता व्यवस्था न स्यात् ।

अथवोत्पत्तिविनाशशब्दाभ्यां तदुपपादनस्योपलक्षणम् । तथा चैवं योजना । आस्तां तावदन्यत् । सत्कार्यवादे सर्वत्र शिष्यं प्रति वादिनं वा प्रत्युत्पत्तिनाशयोर्नासदुत्पद्यते न सद्विनश्यतीत्येवंरूपो-

— ಪದಾರ್ಥದೀಪಿಕಾ —

ಯೂ) ತಂತುಗಳ ಹಾಗೆ ಉಪಲಬ್ಧವಾಗಲಿ! (ದೊರೆಯಲಿ) ಕಾಣಿಸದಿದ್ದರೂ ಸತ್ಯವೆಂದು ಅಂಗೀಕರಿಸುವುದಾದರೆ- ಆಗ ಎಲ್ಲ ಕಡೆಗಳಲ್ಲೂ "ಉತ್ಪತ್ತಿ ವಿನಾ ಶಯೋಃ'= ಸತ್ಯತ್ವ ಅಸತ್ಯತ್ವ ಇವುಗಳ, "ಅನವಸ್ಥಾ ಸ್ಯಾತ್"-ಉಪಲಭ್ಯಮಾನ ವಾದ ಘಟ ಮುಂತಾದುದು ಇರುವುದೆಂಬುದಾಗಿಯೂ ಅನುಪಲಭ್ಯವಾದ ಖರ ವಿಷಾಣ (ಕತ್ತೆಯ ಕೋಡು) ಮುಂತಾದುದು (ಇಲ್ಲದಿರುವದು) ಅಸತ್ಯವೆಂಬುದಾ ಗಿಯೂ ಸರ್ವಜನಸಮ್ಮತವಾಗಿರುವ ವ್ಯವಸ್ಥೆಯು ಇಲ್ಲದ್ದಾಗಲಿ!

ಅಥವಾ- ಉತ್ಪತ್ತಿವಿನಾಶಶಬ್ದಗಳಿಂದ, ಉತ್ಪತ್ತಿವಿನಾಶಗಳ ಉಪಪಾದನ ವನ್ನು ಲಕ್ಷಣಾವೃತ್ತಿಯಿಂದ ಸಂಗ್ರಹಿಸಬೇಕು. ಆದುದರಿಂದ ಇಲ್ಲಿ ಯೋಜ ನೆಯು ಹೀಗೆ- ಇನ್ನೊಂದು ಒಂದು ಬದಿಗಿರಲಿ! ಸತ್ಕಾರ್ಯವಾದದಲ್ಲಿ ಎಲ್ಲ ಕಡೆಗಳಲ್ಲೂ ಶಿಷ್ಯನನ್ನು ಕುರಿತು ಇಲ್ಲವೆ ವಾದಿಯನ್ನು ಕುರಿತು, "ಉತ್ಪತ್ತಿ ವಿನಾಶಯೋಃ"= "ಅಸತ್ಯವು ಉತ್ಪನ್ನವಾಗುವುದಿಲ್ಲ, ಸತ್ಯವು ಅಳಿಯುವುದಿಲ್ಲ"

— ವಿಶೇಷಾರ್ಥಪ್ರದೀಪಿಕಾ —

"ಅನವಸ್ಥಾ ಸ್ಯಾತ್"=ಎಂಬುದಕ್ಕೆ ಸರ್ವಜನಸಮ್ಮತವಾದವ್ಯವಸ್ಥೆಯು ಆಗದಿರಲಿ'' ಎಂಬುದಾಗಿ ಅರ್ಥ

ಆಸ್ತಾಂ ತಾವದನ್ಯತ್"-ಬಾಧಕಾಂತರವನ್ನು ತೋರಿಸುವುದೆಂಬುದು ಬದಿಗಿ ರಲಿ! ನೀವು ಯಾವುದುಕ್ಕೋಸುಗ ಪ್ರಯತ್ನಿಸುವಿರೋ ಆ ಶಿಷ್ಯರನ್ನು ಕುರಿತು ಬೋಧಿಸುವುದೆಂಬ ಕಾರ್ಯವು ಆಗದಿರಲಿ! ಹೀಗೆ ಇಲ್ಲಿಯ ಅರ್ಥ "ಸರ್ವತ್ರ"- ನಿಮಗೆ ಒಪ್ಪಿತವಾದ ಎಲ್ಲಪ್ರಮೇಯ(ವಿಷಯ)ಗಳಬಗ್ಗೆ ಆದುದರಿಂದ, ಯಾವದೇ ಪ್ರಮೇಯವನ್ನು ಶಿಷ್ಯಾದಿಗಳನ್ನು ಬೋಧನಮಾಡುವುದು ಶಕ್ಯವಲ್ಲವೆಂದು ತಾತ್ಪರ್ಯ

पपादनस्याप्यनवस्थाऽवस्थानाभावः स्यात् । तथा हि । इदमुपपादनं किमर्थमिति वाच्यम् । शिष्यादेर्विद्योत्पत्तयेऽविद्यानाशाय वादे जल्पादौ तु ख्यात्याद्युत्पादयेति चेत् । तद्विद्यादिकं सच्चेन्नोत्पाद्यम् । सत्त्वादात्मवत् । असच्चेन्नोत्पादयितुं शक्यम् । अन्यथा सत्कार्यवाद-भङ्गप्रसङ्गात् । एवमविद्या सती चेन्न विनाश्या । अन्यथाऽपसिद्धा-न्तापत्तेः । असती चेन्नितराम् । नित्यनिवृत्तत्वात् । ततः सर्वथा प्रतिपादनासम्भव एवेति ।

यदि वोत्पत्तिनाशयोरिति विरुद्धधर्मोपलक्षणम् । तथा हि ।

— ಪದಾರ್ಥದೀಪಿಕಾ —

ಎಂಬುದಾಗಿರುವ ಉಪಪಾದನಕ್ಕೆ "ಅನವಸ್ಥಾ"= ಇಲ್ಲದಿರುವಿಕೆಯೇ ಆದೀತು ! ಹೇಗೆಂದರೆ– ಈ ಉಪಪಾದನವು ಏಕೆ ? ಎಂಬುದನ್ನು ಹೇಳಬೇಕು ವಾದ ದಲ್ಲಿ ಶಿಷ್ಯಾದಿಗಳಿಗೆ ವಿದ್ಯೆಯ ಉತ್ಪತ್ತಿಗಾಗಿ ಇಲ್ಲವೆ ಅವಿದ್ಯೆಯ ನಿವೃತ್ತಿಗಾಗಿ ಹಾಗು ಜಲ್ಪಾದಿಗಳಲ್ಲಿ ಖ್ಯಾತಿಮುಂತಾದುದನ್ನುಂಟುಮಾಡುವುದಕ್ಕಾಗಿ, ಎಂದು ಹೇಳಬಾರದು. ಏಕೆಂದರೆ ಆ ವಿದ್ಯಾದಿಗಳು ಸತ್ಯವಾದದ್ದಾದರೆ ಆತ್ಮನ ಹಾಗೆ ಉತ್ಪಾದ್ಯಗಳು (ಹುಟ್ಟತಕ್ಕವುಗಳು) ಆಗಲಾರವು ಅಸತ್ಯವಾದ ಪಕ್ಷದಲ್ಲಿ ಹುಟ್ಟಿ ಸಲು ಅದು ಯೋಗ್ಯವೇ (ಶಕ್ಯವೇ) ಅಲ್ಲ ಏಕೆಂದರೆ ಅಸತ್ಯವೂ ಹುಟ್ಟಲರ್ಹ ವೆಂದರೆ ಸತ್ಕಾರ್ಯವಾದದ ಭಂಗವೇ ಉಂಟಾದೀತು ! ಇದರಂತೆ ಅವಿದ್ಯೆಯು ಸತ್ಯ (ಇರುವಂತಹದು) ವಾಗಿದ್ದರೆ ನಾಶಹೊಂದಲಾರದು ಏಕೆಂದರೆ- ನಾಶ ಹೊಂದುವುದಾದರೆ– ಅಪಸಿದ್ಧಾಂತವಾಗುವದು ಇನ್ನು ಅಸತ್ಯವಾದ ಪಕ್ಷದಲ್ಲಿ ಯಂತೂ ವಿನಾಶಹೊಂದುವುದು ಶಕ್ಯವೇ ಇಲ್ಲ ಏಕೆಂದರೆ ನಿತ್ಯದಲ್ಲಿಯೂ ಅದು ನಿವೃತ್ತವಾಗಿರುತ್ತದೆ ಆದುದರಿಂದ, ಯಾವದೇ ತರಹದಿಂದಲೂ ಪ್ರತಿ ಪಾದನೆಯು ಅಸಂಭವವೇ ! ಹೀಗೆ ಅರ್ಥ

ಅಥವಾ-ಉತ್ಪತ್ತಿ ವಿನಾಶ ಶಬ್ದಗಳಿಂದ, ವಿರುದ್ಧಧರ್ಮಗಳನ್ನು ಸಂಗ್ರಹಿಸು ವುದಾದರೆ– ಹೇಗೆಂದರೆ– ಒಂದು ಪಕ್ಷದಲ್ಲಿ ಕಾರ್ಯವು ಉಪಾದಾನ ಕಾರಣ

— ವಿಶೇಷಾರ್ಥಪ್ರದೀಪಿಕಾ —

''ಅವಸ್ಥಾನಾಭಾವಃ'' = ಎಂಬುದರ ವ್ಯಾಖ್ಯಾನವು ''ಸರ್ವಥಾ ಪ್ರತಿಪಾ ದನಾಸಂಭವ ಏವ'' ಎಂಬುದು.

यदि कार्यमुपादानात्मकमेव सदेव च प्रागुत्पत्तेः स्यात् । तदोत्पत्ति-विनाशादिधर्माणामनवस्था स्यात । तन्तवः प्रागेव सन्तो नेदानी-मुत्पद्यन्ते । पटस्तूत्पद्यते । तन्तुष्वविनष्टेष्वेव पटो विनश्यति । तन्तवो बहवः पटस्त्वेकः । एवमाकाराभिधानबुद्धिकार्यभेदोऽपि द्रष्टव्यः । सैषा व्यवस्था न स्यादिति ।

नन्वेतत्सकलमपि पटवच्च यथा प्राणादिरिति व्यक्तयव्यक्तय-

— ಪದಾರ್ಥದೀಪಿಕಾ —

ರೂಪವೇ ಹಾಗು ಹುಟ್ಟುವ ಪೂರ್ವದಲ್ಲಿ ಸತ್ಯವೇ ಆದುದಾದರೆ= ಆಗ ಉತ್ಪತ್ತಿ ವಿನಾಶ ಮುಂತಾದ ಧರ್ಮಗಳಿಗೆ ಅನವಸ್ಥೆಯು ಉಂಟಾದೀತು ! ತಂತುಗಳು ಪೂರ್ವದಲ್ಲಿಯೇ ಇರುವವುಗಳು, ಈಗ ಉತ್ಪನ್ನವಾಗುವುದಿಲ್ಲ ಆದರ ಪಟವು ಹುಟ್ಟುತ್ತದ ತಂತುಗಳು ನಾಶಹೊಂದದೇ ಪಟವು ನಾಶ ಹೊಂದಬಹುದು ತಂತುಗಳು ಬಹಳ (ಅನೇಕ) ವಾಗಿರುತ್ತವೆ ಆದರೆ ಪಟವು ಒಂದು ಆಗಿರುತ್ತದೆ. ಹೀಗೆ, ಆಕಾರಭೇದ ಹಾಗು ಅಭಿದಾನಗಳ (ಹೆಸರು) ಭೇದವನ್ನು ಬುದ್ಧಿಭೇದ ವನ್ನೂ ಕಾರ್ಯಭೇದವನ್ನೂ ತಿಳಿಯಬೇಕು ಹೀಗೆ, ಆಗ ಈ ವ್ಯವಸ್ಥೆಯು ಇಲ್ಲ ವಾಗಲಿ ! ಹೀಗೆ ಅರ್ಥ

ಇನ್ನು– ಇದೆಲ್ಲವೂ "ಪಟವಚ್ಚ, ಯಥಾ ಪ್ರಾಣಾದಿಃ" ಎಂಬ ಸೂತ್ರದಿಂದ, ವ್ಯಕ್ತಿ, ಅವ್ಯಕ್ತಿ ಇವುಗಳನ್ನವಲಂಬಿಸಿ ಪರಿಹರಿಸಲಾಗಿದೆ ಹೇಗೆಂದರೆ- ಅಭಿ

— ವಿಶೇಷಾರ್ಥಪ್ರದೀಪಿಕಾ —

"ಏವಮಾಕಾರ"– ಹುಟ್ಟದಿರುವುದು, ಹುಟ್ಟಿರುವುದು ನಷ್ಟತ್ವ, ಅನಷ್ಟತ್ವ, ಬಹುತ್ವಏಕತ್ವ, ಈ ಮುಂತಾದ ವಿರುದ್ಧಧರ್ಮಗಳ( ಧರ್ಮಗಳಭೇದದ)ಹಾಗೆ ಆಕಾರ ಭೇದವನ್ನೂ, )ತಂತುಪಟಗಳಲ್ಲಿ) ಅಭಿಧಾನ(ಹೆಸರಿನ) ಭೇದವನ್ನೂ ಬುದ್ಧಿಭೇ ದವನ್ನೂತಿಳಿಯಬೇಕು ತಂತುಗಳಿಗೆ ಸೂಕ್ಷ್ಮ ಹಾಗೂದೀರ್ಘಆಕಾರವು, ಪಟಕ್ಕೆ ಉದ್ದ ಅಗಲಳತೆಯುಳ್ಳ ಆಕಾರವು ಹೀಗೆ ಆಕಾರಭೇದ "ಇವು ತಂತುಗಳು" ಎಂಬ ಹೆಸರು ತಂತುಗಳಿಗೆ "ಇದು ಪಟ" ವೆಂಬ ಹೆಸರು ಪಟಕ್ಕೆ ಹೀಗೆ ಅಭಿಧಾನಭೇದ ತಂತುತ್ವಪ್ರಕಾರಕ ಬುದ್ಧಿಯು ಬೇರೆ ಪಟತ್ವಪ್ರಕಾರಕ ಬುದ್ಧಿಯು ಬೇರೆ ಹೀಗೆ ಬುದ್ಧಿಭೇದ ತಂತುವಿನಿಂದ ಪಟವೆಂಬ ಕಾರ್ಯ ವಾದರೆ ಪಟದಿಂದ ಶೀತನಿವಾರಣೆಯೆಂಬ ಕಾರ್ಯವಾಗುತ್ತದೆ ಹೀಗೆ ಕಾರ್ಯ ಭೇದ ಈ ರೀತಿಯಾಗಿ ತಿಳಿಯಬೇಕು

वष्टम्भेन परिहृतम् । तथा हि । व्यक्त्यपेक्षयोत्पत्तिः पटादीनाम-व्यक्त्यपेक्षया च विनाशो युज्यते । व्यक्त्यव्यक्त्यर्थमेव च कारका-ण्युपयुज्यन्ते । व्यक्त्यव्यक्तिभ्यामेवोपलब्ध्यनुपलब्धी भवतः । अत एव प्रतिपादनं सङ्गच्छते । व्यक्ताव्यक्तरूपेणैव विरुद्धधर्मा व्यवति-ष्ठन्ते । यथा हि संवेष्टितः पटो न स्फुटं पट इति प्रतीयते । न प्राव्रियते न शीतमपनुदति । न बहुदेशव्यापी भवति । प्रसारितस्तु स्फुटप्रतीत्यादिमान् । न चैतावता भेदः । नापि प्रसारितः प्रागसन् । यथा च प्राणायामेन निरुद्धः शारीरो वायुर्जीवनमात्रं करोति नोत्क्षे-पणादि । निरोधापगमे त्वासादितव्यक्तिस्तदपि करोति । न ताव-

— ಪದಾರ್ಥದೀಪಿಕಾ —

ವ್ಯಕ್ತಿಯ ಅಭಿಪ್ರಾಯದಿಂದ ಪಟಾದಿಗಳಿಗೆ ಉತ್ಪತ್ತಿಯೂ, ಅವ್ಯಕ್ತಿಯ (ವ್ಯಕ್ತ ಯಾಗದಿರುವುದೆಂಬ) ಅಭಿಪ್ರಾಯದಿಂದ ನಾಶವೂ ಯುಕ್ತವಾಗುತ್ತದೆ ವ್ಯಕ್ತಿ, ಅವ್ಯಕ್ತಿ, ಇವುಗಳಿಗಾಗಿಯೇ ಕಾರಕಗಳು ಉಪಯುಕ್ತವಾಗುತ್ತವೆ ವ್ಯಕ್ತಿ, ಅವ್ಯಕ್ತಿ, ಇವುಗಳ ಮೂಲಕವಾಗಿಯೇ ಉಪಲಬ್ಧಿ, ಅನುಪಲಬ್ಧಿಗಳೂ ಆಗು ತ್ತವೆ ಆದುದರಿಂದ ಪ್ರತಿಪಾದನವೂ ಯುಕ್ತವಾಗುತ್ತದೆ ವ್ಯಕ್ತ, ಅವ್ಯಕ್ತ ರೂಪಗಳಿಂದ ವಿರುದ್ಧಧರ್ಮಗಳುಳ್ಳವುಗಳಾಗಿ ಉಳಿಯುತ್ತವೆ ಹೇಗೆಂದರೆ- ಉದಾ- ಸಂವೇಷ್ಟಿತ ಪಟವು ಸ್ಪಷ್ಟವಾಗಿ ಪಟವೆಂದು ತೋರುವುದಿಲ್ಲ ಅದನ್ನು ಟ್ಟುಕೊಳ್ಳುವುದಿಲ್ಲ ಹಾಗು ಅದು ಶೀತವನ್ನು ಕಳೆಯುವುದಿಲ್ಲ ಹಾಗು ಅದು ಬಹಳ ದೇಶವನ್ನು ವ್ಯಾಪಿಸುವುದಿಲ್ಲ ಆದರೆ ಅದನ್ನು ಬಿಚ್ಚಿ ಹಾಸಿದಲ್ಲಿ (ಪ್ರಸಾರ ಮಾಡಿದಾಗ) ಇದು ಪಟವೆಂದು ಸ್ಪಷ್ಟವಾಗಿ ತೋರುವುದು ಮುಂತಾದುದುಳ್ಳದಾ ಗುತ್ತದೆ ಆದರೆ ಇಷ್ಟು ಮಾತ್ರದಿಂದ ಆ ಪಟದಲ್ಲಿ ಭೇದವಿರುವುದಿಲ್ಲ ಹಾಸ ಲ್ಪಟ್ಟ ಪಟವು ಪೂರ್ವದಲ್ಲಿ ಇದ್ದಿಲ್ಲವೆಂದೂ ಅಲ್ಲ ಉದಾ- ಪ್ರಾಣಾಯಾಮ ದಿಂದ ನಿರೋಧಿಸಲ್ಪಟ್ಟ ಶರೀರದಲ್ಲಿಯ ವಾಯುವು ಜೀವನವನ್ನಷ್ಟೇ ಧಾರಣ ಮಾಡುತ್ತದ ಆದರೆ ಉತ್ಕ್ಷೇಪಣ ಮುಂತಾದ ಚೇಷ್ಟೆಯನ್ನುಂಟು ಮಾಡುವು ದಿಲ್ಲ ಆದರೆ ಪ್ರಾಣಾಯಾಮ ನಿರೋಧವು ಹೋದ (ಮುಗಿದ) ಮೇಲೆ ವ್ಯಕ್ತಿ

— ವಿಶೇಷಾರ್ಥಪ್ರದೀಪಿಕಾ —

"ಏತತ್ ಸಕಲಮಪಿ" - ಹಿಂದೆ ಹೇಳಿದ ನಾಲ್ಕೂ ಬಾಧಕಗಳು

न्मात्रेण भिद्यते । प्रागसत्त्वा । तथैवैतदपि व्यक्त्यव्यक्तिभ्यां समञ्जसमिति । अत्र ब्रूमः । केयं पटस्य प्रागुत्पत्तेरूर्ध्वं च विनाशादव्यक्तिर्मध्ये च व्यक्तिः । अनुपलब्धिरव्यक्तिरुपलब्धिर्व्यक्तिरिति चेत्तत्राह ॥ अनवस्थेति । यद्युपलब्ध्यनुपलब्धी एवोत्पत्तिविनाशौ तदा सर्वत्रोत्पत्तिनाशयोरनवस्था स्यात् । यद्यदोपलब्धं तत्तदैवोत्पन्नमनुपलब्धं च विनष्टमिति स्यादिति यावत् ।

किञ्च प्रागुत्पत्तेस्सत्त्वे पटस्य कस्मान्नोपलब्धिः । कथं चोर्ध्व-

— ಪದಾರ್ಥದೀಪಿಕಾ —

ಯನ್ನು ಹೊಂದಿದ ಆ ಶರೀರದಲ್ಲಿರುವ ವಾಯುವು ( ಗಾಳಿಯು ) ಉತ್ಕ್ಷೇಪಣ ವುಂಟಾದುದನ್ನೂ ಉಂಟುಮಾಡುತ್ತದೆ. ಇಷ್ಟು ಮಾತ್ರದಿಂದ ಅದರಲ್ಲಿ ಭೇದ ವಿರುವುದಿಲ್ಲ ಹಾಗೂ ಪೂರ್ವದಲ್ಲಿ ಇಲ್ಲವೆಂದಾಗುವುದಿಲ್ಲ. ಇದು ಹೇಗೋ ಹಾಗೆ ಉತ್ಪತ್ತಿ ವಿನಾಶಗಳ ವ್ಯವಸ್ಥೆಯೂ, ವ್ಯಕ್ತಿ, ಅವ್ಯಕ್ತಿ, ಇವುಗಳ ಮೂಲಕ ವಾಗಿ ಸಮಂಜಸವಾಗುತ್ತದೆ ಹೀಗೆ ಬರುವ ಪೂರ್ವಪಕ್ಷದ ಮೇಲೆ ಉತ್ತರ ವನ್ನು ಹೇಳುವೆವು. ಉತ್ಪತ್ತಿಯ ಪೂರ್ವದಲ್ಲಿಯೂ ವಿನಾಶದ ಅನಂತರದಲ್ಲಿಯೂ ಇರುವ ಪಟದ ಅವ್ಯಕ್ತಿಯೆಂದರೇನು ? ಹಾಗು ಉತ್ಪತ್ತಿ ವಿನಾಶಗಳ ಮಧ್ಯದಲ್ಲಿ ರುವ ಪಟದ ವ್ಯಕ್ತಿಯೆಂದರೇನು ? ಅನುಪಲಬ್ಧಿಯೇ ಅವ್ಯಕ್ತಿಯು ಉಪ ಲಬ್ಧಿಯೇ ವ್ಯಕ್ತಿಯು ಹೀಗೆ ಹೇಳುವುದಾದರೆ ಅದರ ಮೇಲೆ ದೂಷಣವನ್ನು "ಅನವಸ್ಥಾ" ಈ ವಚನದಿಂದ ಹೇಳುತ್ತಾರೆ. ಉತ್ಪತ್ತಿ ವಿನಾಶ ಶಬ್ದಗಳಿಗೆ ಉಪ ಲಬ್ಧಿ ಅನುಪಲಬ್ಧಿಯೆಂಬ ಅರ್ಥವಿದ್ದರೆ– ಉತ್ಪತ್ತಿ ವಿನಾಶಗಳಿಗೆ ಎಲ್ಲಿಯೂ ಅವಸ್ಥೆಯು ಇಲ್ಲವಾಗಲಿ ! ( ಅನವಸ್ಥೆಯು ಬರಲಿ ) ಏಕೆಂದರೆ ಯಾವದು ಯಾವಾಗ ಉಪಲಬ್ಧವಾಗುವದೋ ಯಾವಾಗ ಉಪಲಬ್ಧವಾಗುವುದಿಲ್ಲವೋ (ಕಾಣುವುದಿಲ್ಲವೋ) ಆಗೇ ಅದು ಉತ್ಪನ್ನವು ಹಾಗು ವಿನಷ್ಟವಾದುದು, ಎಂಬು ದಾಗಿ ಆಗಬೇಕಾದೀತು ಹೀಗೆ ಭಾವ

ಮತ್ತು ಪಟಕ್ಕೆ ಉತ್ಪತ್ತಿಯ ಪೂರ್ವದಲ್ಲಿ ಅಸ್ತಿತ್ವ (ಸತ್ಯತೆ) ವಿದ್ದ ಪಕ್ಷದಲ್ಲಿ ಅದು ಉಪಲಬ್ಧವೇಕೆ ಆಗುವುದಿಲ್ಲ ? ಹಾಗು ಅನಂತರ ಉಪಲಬ್ಧಿಯು ಹೇಗೆ ?

— ವಿಶೇಷಾರ್ಥಪ್ರದೀಪಿಕಾ —

ಹಿಂದೆ ಕೇಳಿದ ವ್ಯಕ್ತಿ ಅವ್ಯಕ್ತಿಗಳೆಂದರೇನೆಂಬ ಪ್ರಶ್ನೆಗಳ ಉತ್ತರವನ್ನು "ಅನುಪಲಬ್ಧಿರವ್ಯಕ್ತಿಃ" ಇತ್ಯಾದಿ ವಚನದಿಂದ ಹೇಳುತ್ತಾರೆ

मुपलब्धिरिति प्रश्नस्यानुपलब्ध्युपलब्धिभ्यामेवेति परिहारं वदन् देवानां प्रियः श्लाघनीयप्रज्ञः स्यात् । अपि च प्रागूर्ध्वं च तन्तूपलब्धौ कथं तन्मात्रस्य सतः पटस्यानुपलब्धिः । अन्यथा तन्तूनामपि सा स्यात् । अथ पटधर्मावेव व्यक्त्यव्यक्ती । तदा तावपि तन्तूनां विद्येते न वा । न चेन्न कार्यकारणयोरत्यन्ताभेदः । विद्येते चेत्तत्राह ॥ अनवस्थेति । उत्पत्तिनाशव्यवहारहेतू व्यक्तयव्यक्ती यदि तन्तुष्वपि विद्येते तदा

— ಪದಾರ್ಥದೀಪಿಕಾ —

ಈ ಪ್ರಶ್ನೆಗೆ– "ಅನುಪಲಬ್ಧಿ, ಉಪಲಬ್ಧಿಗಳಿಂದಲೇ" ಎಂಬ ಉತ್ತರವನ್ನು ಹೇಳು ವವನು, ದೇವಾನಾಂ ಪ್ರಿಯನೂ ಶ್ಲಾಘನೀಯ ಪ್ರಜ್ಞೆಯುವನೂ ಆದಾನು! ಹಾಗು ಪಟದ ಉತ್ಪತ್ತಿಯು ಮುಂಚೆ ಹಾಗು ಅನಂತರದಲ್ಲಿ ತಂತುಗಳ ಉಪಲಬ್ಧಿಯಾಗು ತ್ತಿರಲು, ತಂತುವಿನಿಂದ ಅತ್ಯಂತ ಅಭಿನ್ನವಾಗಿ ಇರುವ ಪಟಕ್ಕೆ ಉಪಲಬ್ಧಿಯಿಲ್ಲ ವೆಂಬುದು ಹೇಗೆ? ಹಾಗೆ ಉಪಲಬ್ಧಿಯಿಲ್ಲದಿದ್ದಲ್ಲಿ ತಂತುಗಳಿಗೂ ಉಪಲಬ್ಧಿ ಯಿಲ್ಲದಿರಲಿ ಇನ್ನು– ವ್ಯಕ್ತಿ, ಅವ್ಯಕ್ತಿ ಇವೆರಡೂ ಪಟದ ಧರ್ಮಗಳೇ! ಎಂದು ಹೇಳಿದರೆ-ಪ್ರಶ್ನೆ-ಈ ವ್ಯಕ್ತಿ ಅವ್ಯಕ್ತಿಗಳೂ ತಂತುಗಳಿಗೆ ಆಗ ಇರುವವೋ ಇಲ್ಲವೋ? ಇಲ್ಲವೆಂಬ ಪಕ್ಷದಲ್ಲಿ ಕಾರ್ಯಕಾರಣಗಳಿಗೆ ಅತ್ಯಂತ ಅಭೇದವು ಬರಲಾರದು. ಇದೆಯೆಂಬ ಪಕ್ಷದಲ್ಲಿ ಉತ್ತರವನ್ನು "ಅನವಸ್ಥಾ" ಈ ವಚನದಿಂದ ಹೇಳುತ್ತಾರೆ. ಉತ್ಪತ್ತಿ ವಿನಾಶಗಳ ವ್ಯವಹಾರಕ್ಕ ಕಾರಣಗಳಾದ ವ್ಯಕ್ತಿ ಅವ್ಯಕ್ತಿಗಳು ತಂತು ಗಳಲ್ಲಿಯೂ ಇರುವುದಾದರೆ ಆಗ ಸರ್ವತ್ರ ಉತ್ಪತ್ತಿವಿನಾಶಗಳ ಅನವಸ್ಥೆಯು

— ವಿಶೇಷಾರ್ಥಪ್ರದೀಪಿಕಾ —

'ದೇವಾನಾಂಪ್ರಿಯಃ=ಅನಭಿಜ್ಞ, ಮೂರ್ಖನೆಂದು ಅರ್ಥ. ಇಲ್ಲಿ ವಿಭಕ್ತಿಯ ಲೋಪವಿಲ್ಲದೆಯೇ ಅಲುಕ್ ಸಮಾಸವಾಗಿದೆ "ಶ್ಲಾಘನೀಯ ಪ್ರಜ್ಞಃ" ಎಂಬುದು ಪರಿಹಾಸಕ್ಕೆ ಬಳಸಿದ ಶಬ್ದ ಏಕೆ ಉಪಲಬ್ಧವಾಗುವುದಿಲ್ಲವೆಂದು ಕೇಳಿದಾಗ "ಉಪ ಲಭ್ಯವಾಗುವುದಿಲ್ಲವಾದುದರಿಂದ'' ಎಂಬ ಉತ್ತರವನ್ನು ಹೇಳಿದರೆ ಆತ್ಮಾಶ್ರಯ ದೋಷವು ಬರುವುದೆಂದು ಇಲ್ಲಿಯ ಭಾವ

"ಪಟಧರ್ಮಾವೇವ'' –ಇಲ್ಲಿ –"ವ್ಯಕ್ತಿ–ಅವ್ಯಕ್ತಿ'', (ಅಭಿವ್ಯಕ್ತಿಯಾಗುವುದು ಅಭಿವ್ಯಕ್ತಯಾಗದಿರುವುದು) ಇವೆರಡು ಪಟದ ಧರ್ಮಗಳೇ!(ಆದರೆ ಉಪಲಬ್ಧಿ ಅನುಪಲಬ್ಧಿಗಳಲ್ಲ) ಅವು ತಂತುಗಳಲ್ಲಿಲ್ಲ ಹೀಗೆ ಅರ್ಥ. ಈ ಪಕ್ಷದಲ್ಲಿ ಹಿಂದೆ ಹೇಳಿದ ದೋಷಗಳು ಅನ್ವಯಿಸುವದಿಲ್ಲವೆಂದು ಇಲ್ಲಿಯ "ಏವ'' ಶಬ್ದದ ಭಾವ.

सर्वत्रोत्पत्तिनाशयोरनवस्था स्यात् । तन्तवो नोत्पन्ना न नष्टाः । किन्तु पट एवेत्युत्पत्तिविनाशव्यवस्था न स्यादिति ।

किञ्चेयमभिव्यक्तिरुत्पत्त्यादिव्यवहारकारणतयोपादीयते । सा किं चक्रचीवरादिभिः प्रागसत्येवोत्पद्यते मुद्गराभिघातादिना च नाश्यति । उत प्रागपि सत्येवाविनाशिनी च । एवमव्यक्तिरपि किं प्रागसती मुद्गराभिघातादिनोत्पद्यते । किं वा प्रागपि सती । उभयत्राद्यौ दूषयति ॥ अनवस्थेति । व्यक्त्यव्यक्त्योरुत्पत्तिनाशवत्त्वे सर्वत्रोत्पत्तिनाशयोरनवस्था व्यवस्थाभावः स्यात् । न किञ्चित्सद्विनश्यति

— ಪದಾರ್ಥದೀಪಿಕಾ —

'ಬರಲಿ' ಅಂದರೆ "ತಂತುಗಳು ಉತ್ಪನ್ನಗಳಾಗಿಲ್ಲ, ನಷ್ಟಗಳೂ ಆಗಿಲ್ಲ ಆದರೆ ಪಟವೇ ಉತ್ಪತ್ತಿ ವಿನಾಶಗಳುಳ್ಳದ್ದು", ಎಂಬ ಉತ್ಪತ್ತಿ ವಿನಾಶಗಳ ವ್ಯವಸ್ಥೆಯು ಆಗದಿರಲಿ, ಹೀಗೆ ಅರ್ಥ

ಇನ್ನು– ಉತ್ಪತ್ತಿ ಮುಂತಾದ ವ್ಯವಹಾರ ಕಾರಣವೆಂದು ಅಂಗೀಕರಿಸಲ್ಪಟ್ಟ ಅಭಿವ್ಯಕ್ತಿಯೆಂದರೇನು ? ಅದು ಚಕ್ರಚೀವರ ಮುಂತಾದವುಗಳಿಂದ, ಪೂರ್ವದಲ್ಲಿ ಇಲ್ಲದ್ದೇ ಉತ್ಪನ್ನವಾಗುತ್ತದೆಯೋ ? ಮತ್ತು ಮುದ್ಗರಪ್ರಹಾರಾದಿಗಳಿಂದ ನಷ್ಟವಾಗುವದೋ ಹೇಗೆ? ಇಲ್ಲವೆ ಪೂರ್ವದಲ್ಲಿಯೂ ಇದ್ದದ್ದೇ ಆಗಿದ್ದು ಮುದ್ಗರ ಪ್ರಹಾರಾದಿಗಳಿಂದ ವಿನಾಶಹೊಂದುವುದಿಲ್ಲವೋ ಹೇಗೆ ? ಇದರಂತೆ, ಅವ್ಯಕ್ತಿ ಯೆಂಬುದಾದರೂ ಪೂರ್ವದಲ್ಲಿ ಇಲ್ಲದಿದ್ದು ಮುದ್ಗರ ಅಭಿಘಾತ ಮುಂತಾದುದರಿಂದ ಹುಟ್ಟುತ್ತದೆಯೋ ಇಲ್ಲವ ಪೂರ್ವದಲ್ಲಿಯೂ ಇದ್ದುದೇ ಆಗಿದ್ದು, ಹುಟ್ಟುತ್ತದೆಯೋ? ಹೀಗ ಪ್ರಶ್ನೆ ಎರಡೂ ವಿಷಯಗಳ ಮೇಲಿನ ಎರಡೆರಡು ಪಕ್ಷಗಳಲ್ಲಿ ಮೊದಲ ನೆಯ ಎರಡು ಪಕ್ಷಗಳನ್ನು "ಅನವಸ್ಥಾ" ಇತ್ಯಾದಿ ವಚನದಿಂದ ದೂಷಿಸುತ್ತಾರೆ ವ್ಯಕ್ತಿ ಅವ್ಯಕ್ತಿಗಳಿಗೆ ಉತ್ಪತ್ತಿ ವಿನಾಶಗಳಿರುವುದಾದರ ಎಲ್ಲ ಕಡೆಗಳಲ್ಲೂ ಉತ್ಪತ್ತಿವಿನಾಶಗಳ "ಅನವಸ್ಥೆ" ಎಂದರ- ವ್ಯವಸ್ಥೆಯ ಇಲ್ಲದಿರುವಿಕೆಯು ಪ್ರಾಪ್ತವಾಗುತ್ತದೆ ಅಂದರ 'ಯಾವದೇ ಅಸತ್ತು ಉತ್ಪನ್ನವಾಗುವುದಿಲ್ಲ

— ವಿಶೇಷಾರ್ಥಪ್ರದೀಪಿಕಾ —

"ಉಭಯತ್ರ" –ಎರಡೂ ಪಕ್ಷಗಳಲ್ಲಿ "ಅಭಿವ್ಯಕ್ತಿಯು, ಚಕ್ರಚೀವರಾದಿಗಳಿಂದ, ಪೂರ್ವದಲ್ಲಿ ಇಲ್ಲದ್ದೇ ಹುಟ್ಟುತ್ತದೆ ಹುಟ್ಟಿದಮೇಲೆ ಸತ್ಯತೆಯುಳ್ಳದ್ದಾಗಿ, ಮುದ್ಗರಪ್ರಹಾರಾದಿಗಳಿಂದ ನಾಶಹೊಂದುತ್ತದೆ," ಎಂಬುದು ವ್ಯಕ್ತಿಪಕ್ಷದಲ್ಲಿ

इति सिद्धान्तहानिः स्यादित्यर्थः। द्वितीयौ दूषयति ॥ अनवस्थेति। व्यक्त्यव्यक्त्योः सदा सत्त्वे सर्वत्रोत्पत्तिनाशयोरनवस्थाऽव्यवस्थितिः स्यात्। तथा हि। एतावन्तं कालमनुत्पन्नो घट इदानीमुत्पन्न इति तावन्न स्यात्। उत्पत्तिव्यवहारहेतोरभिव्यक्तेः प्रागपि सत्त्वात्। तथा मुद्गराभिघाताद्युत्तरकालमपि घटसत्त्वव्यवहारः स्यात्। तद्धेतोरभिव्यक्तेरविनष्टत्वात्। तथेदानीमेव नष्टो घट इत्यपि न स्यात्। विनाशव्यवहारकारणानभिव्यक्तेः प्रागपि सत्त्वादिति।

— ಪದಾರ್ಥದೀಪಿಕಾ —

ಯಾವದೇ ಸತ್ಯವು ನಾಶಹೊಂದುವುದಿಲ್ಲ" ವೆಂಬ ಸಿದ್ಧಾಂತದ ಹಾನಿಯಾಗಲಿ! ಹೀಗೆ ಅರ್ಥ ಎರಡನೆಯ ಎರಡು ಪಕ್ಷಗಳನ್ನು "ಅನವಸ್ಥಾ' ಇತ್ಯಾದಿ ವಚನ ದಿಂದ ದೂಷಿಸುತ್ತಾರೆ ವ್ಯಕ್ತಿ ಅವ್ಯಕ್ತಿಗಳು ಯಾವಾಗಲೂ ಇರುವವುಗಳಾದಲ್ಲಿ ಎಲ್ಲ ಕಡೆಗಳಲ್ಲೂ ಉತ್ಪತ್ತಿ ವಿನಾಶಗಳ "ಅನವಸ್ಥೆ" ಯೆಂದರೆ ಅವ್ಯವಸ್ಥೆಯು ಬರಲಿ! ಹೇಗೆಂದರೆ– ಇದುವರೆಗೂ ಹುಟ್ಟದ ಘಟವು ಈಗ ಉತ್ಪನ್ನವಾಯಿತು; ಎಂಬ ವ್ಯವಸ್ಥೆಯು ಇಲ್ಲವಾಗಲಿ! ಏಕೆಂದರೆ ಉತ್ಪತ್ತಿಯ ವ್ಯವಹಾರಕ್ಕೆ ಕಾರಣ ವಾದ ಅಭಿವ್ಯಕ್ತಿಯು ಪೂರ್ವದಲ್ಲಿಯೂ ಇರುತ್ತದೆ ಹಾಗು ಮುದ್ಗರ ಪ್ರಹಾರದ ಅನಂತರದಲ್ಲಿಯೂ "ಘಟವಿದೆ" ಯೆಂಬ ವ್ಯವಹಾರವು ಬರಲಿ! ಏಕೆಂದರೆ ಉತ್ಪತ್ತಿ (ಅಸ್ತಿತ್ವ) ವ್ಯವಹಾರದ ಕಾರಣವಾದ ಅಭಿವ್ಯಕ್ತಿಯು ನಾಶವಾಗಿರುವು ದಿಲ್ಲ ಹಾಗು ಈಗಲೇ ಘಟವು ನಷ್ಟವಾಯಿತೆಂಬ ವ್ಯವಸ್ಥೆಯು ಇಲ್ಲವಾಗಲಿ! ಏಕೆಂದರೆ ವಿನಾಶದ ವ್ಯವಹಾರಕ್ಕೆ ಕಾರಣವಾದ ಅವ್ಯಕ್ತಿ (ಅನಭಿವ್ಯಕ್ತಿ)ಯು ಪೂರ್ವಗಲ್ಲಿಯೂ ಇದೆ" ಹೀಗೆ ಅರ್ಥ

— ವಿಶೇಷಾರ್ಥಪ್ರದೀಪಿಕಾ —

ಮೊದಲನೆಯ ಕಲ್ಪ "ಅವ್ಯಕ್ತಿಯು(ವ್ಯಕ್ತಿಯಾಗದಿರುವಿಕೆಯು)ಪೂರ್ವದಲ್ಲಿ ಇಲ್ಲದ್ದಾಗಿದ್ದು ಮುದ್ಗರಪ್ರಹಾರಾದಿಗಳಿಂದ ಹುಟ್ಟುತ್ತದೆ," ಎಂಬುದು ಅವ್ಯಕ್ತಿಪಕ್ಷದಲ್ಲಿ ಮೊದಲನೆಯ ಕಲ್ಪ ಇವೆರಡೂ ವಿಕಲ್ಪಗಳನ್ನು ದೂಷಿಸುತ್ತಾರೆಂದು ಇಲ್ಲಿಯ ಅರ್ಥ! "ದ್ವಿತೀಯೌ" ಅಭಿವ್ಯಕ್ತಿಯು ಸತ್ಯವೇ ಆಗಿದ್ದು ಉತ್ಪತ್ತಿ ಮುಂತಾದು ದನ್ನು ಹೊಂದುವುದಿಲ್ಲ ಅವ್ಯಕ್ತಿಯು ಸತ್ಯವೇ ಆಗಿದ್ದು ಉತ್ಪತ್ತಿಹೊಂದುತ್ತದೆ. ಈ ಎರಡು (ಎರಡನೆಯ ಪಕ್ಷದ) ಕಲ್ಪಗಳನ್ನು

कारकव्यापारवैफल्यतादवस्थ्यं स्फुटमेव । अथैतद्दोषपरिहाराय व्यक्त्यव्यक्त्योरपि व्यक्त्यव्यक्ती स्वीक्रियेते । तदा तयोरप्युक्तविकल्पदोषानुषङ्गः स्यात् । अथ तत्रापि व्यक्त्यव्यक्त्यन्तराङ्गीकारस्तदाऽन-

— ಪದಾರ್ಥದೀಪಿಕಾ —

ಕಾರಕ ವ್ಯಾಪಾರಗಳ ವೈಫಲ್ಯವೆಂಬ ದೋಷವು ಅಪರಿಹಾರ್ಯವಾಗಿ ಹಾಗೇ ಉಳಿಯುವುದೆಂಬುದು ಸ್ಪಷ್ಟವೇ ಆದೆ ಇನ್ನು " ಈ ದೋಷದ ಪರಿಹಾರಕ್ಕಾಗಿ ಅಭಿವ್ಯಕ್ತಿ ಅನಭಿವ್ಯಕ್ತಿಗಳಿಗೆ ಸಹ ಅಭಿವ್ಯಕ್ತಿ ಅನಭಿವ್ಯಕ್ತಿಗಳನ್ನು ಒಪ್ಪುತ್ತೇವೆ,' ಹೀಗೆ ಹೇಳುವ ಪಕ್ಷದಲ್ಲಿ– ಅವುಗಳಿಗೂ ಹಿಂದೆ ಹೇಳಿದ ವಿಕಲ್ಪಗಳಾಗಿ ಆಯಾ ವಿಕಲ್ಪಗಳ ಮೇಲೆಹೇಳಿದ ದೋಷಗಳು ಹತ್ತಿಯೇ ಹತ್ತು

— ವಿಶೇಷಾರ್ಥಪ್ರದೀಪಿಕಾ —

ಸ್ವೀಕ್ರಿಯೇತೇ'= "ವಿನಾಶಉತ್ಪತ್ತಿಗಳ ವ್ಯವಹಾರ ಕಾರಣವಾಗಿ" ಎಂಬುದನ್ನು ಅನ್ವಯಿಸಿಕೊಳ್ಳಬೇಕು ಘಟದ ಉತ್ಪತ್ತಿಯ ವ್ಯವಹಾರಕ್ಕೆ ಕಾರಣವಾದ ಅಭಿವ್ಯಕ್ತಿಗೂ ಅಭಿವ್ಯಕ್ತಿಯನ್ನು ಅಂಗೀಕರಿಸಿದುದರಿಂದ ' ಈಗ ಘಟವು ಹುಟ್ಟಿತು" ಎಂಬ ವ್ಯವಹಾರವು ಸಂಭವಿಸುತ್ತದೆ ಅಭಿವ್ಯಕ್ತಿಯು ಸಲುವಾಗಿಯೇ ಚಕ್ರ ಚೀವರ ಮುಂತಾದ ಕಾರಕ(ಸಾಧನ) ಗಳು ಬೇಕಾಗುತ್ತವೆ ಹಾಗೂ ಉತ್ಪತ್ತಿ ವ್ಯವಹಾರ ಕಾರಣವಾದ ಅಭಿವ್ಯಕ್ತಿಗೂ ಅವ್ಯಕ್ತಿಯನ್ನು ಅಂಗೀಕರಿಸಿದುದರಿಂದ ಪ್ರಹಾರಾದಿಗಳ ಅನಂತರದಲ್ಲಿಯೂ "ಘಟವಿದೆ" ಯೆಂಬ ವ್ಯವಹಾರವು ಬರಲಾರದು ಏಕೆಂದರೆ ಅಭಿವ್ಯಕ್ತಿಯು ಅವ್ಯಕ್ತಿಯ (ತೋರದಿರುವುದರ) ಸಲುವಾಗಿಯೇ ಮುದ್ಗರ ಪ್ರಹಾರಾದಿ ಸಾಧನಗಳು ಬೇಕೆನಿಸುವವು ಇದರಂತೆ ಅನಭಿವ್ಯಕ್ತಿಗೂ ಅಭಿವ್ಯಕ್ತಿಯನ್ನು ಅಂಗೀಕರಿಸಿದುದರಿಂದ "ಈಗ ಘಟವು ನಷ್ಟವಾಯಿತು" ಎಂಬ ವ್ಯವಹಾರವು ಸಂಭವಿಸುತ್ತದೆ ಏಕೆಂದರೆ ಮುಂಚೆ ಇರುವ ಅನಭಿವ್ಯಕ್ತಿಯು ಈಗ ವ್ಯಕ್ತವಾಗಿರುತ್ತದೆ ಅನಭಿವ್ಯಕ್ತಿಗೂ ಅಭಿವ್ಯಕ್ತಿಯಿಲ್ಲದಾಗ "ನಷ್ಟ"ವೆಂಬ ವ್ಯವಹಾರವಿಲ್ಲ, ಹೀಗೆ ಅರ್ಥ

"ಉಕ್ತವಿಕಲ್ಪದೋಷಾನುಷಂಗಃ" – ಅಭಿವ್ಯಕ್ತಿ ಅವ್ಯಕ್ತಿ ಇವುಗಳಿಗೆ ಸಹ, ಉತ್ಪತ್ತಿವ್ಯವಹಾರಕಾರಣವಾಗಿ, ಕಾರಕವ್ಯಾಪಾರಗಳ ವಿಫಲತೆಯನ್ನು ತಪ್ಪಿಸಲು ಅಂಗೀಕರಿಸಿರುವ ವ್ಯಕ್ತಿಯೂ ಕೂಡ, "ಪೂರ್ವದಲ್ಲಿ ಇಲ್ಲದ್ದೇ ಆಗಿದ್ದು ಉತ್ಪನ್ನವಾಗುತ್ತದೆ, ಮುದ್ಗರಪ್ರಹಾರಾದಿಗಳಿಂದ ನಾಶವನ್ನು ಹೊಂದುವುದೆಂದು ಅಭಿಪ್ರಾಯವೋ ಅಥವಾ ಪೂರ್ವದಲ್ಲಿ ಇದ್ದದ್ದೇ ಆಗಿ ವಿನಾಶವನ್ನು ಹೊಂದುವುದಿಲ್ಲವೆಂದು ಅಭಿಪ್ರಾಯವೋ? ಇದರಂತೆ ವ್ಯಕ್ತಿಯ ವಿನಾಶದ ಕಾರಣವಾಗಿ ಅಂಗೀಕರಿ

वस्था स्यादित्याह ॥ अनवस्थेति । उत्पत्तिनाशयोरिति विषयसप्तमी । सन्त्वनन्ता व्यक्तयोऽव्यक्तयश्च । मूलक्षयाभावान्नानवस्थादोष इत्यथ

— ಪದಾರ್ಥದೀಪಿಕಾ —

ತ್ತವೆ- ಇನ್ನೂ ಅದರಲ್ಲಿಯೂ ಬೇರೆ ಬೇರೆ ಅಭಿವ್ಯಕ್ತಿ ಅನಭಿವ್ಯಕ್ತಿಗಳನ್ನು ಅಂಗೀಕರಿಸುವುದಾದರೆ ಅನವಸ್ಥೆಯು, ಎಂಬುದಾಗಿ "ಅನವಸ್ಥಾ" ಇತ್ಯಾದಿ ವಚನದಿಂದ ಹೇಳುತ್ತಾರೆ "ಉತ್ಪತ್ತಿ ವಿನಾಶಯೋಃ" ಇಲ್ಲಿ ವಿಷಯ ಸಪ್ತಮೀ ವಿಭಕ್ತಿಯು ಇದೆ ಅನಂತ ಅಭಿವ್ಯಕ್ತಿ ಅನಭಿವ್ಯಕ್ತಿಗಳಿರಲಿ! ಮೂಲ ಕ್ಷಯವಿ ಲ್ಲದ್ದರಿಂದ ಅನವಸ್ಥೆಯು ದೋಷವಾಗಲಾರದೆಂಬ ಆಶಂಕೆಯನ್ನು "ಅನವಸ್ಥಾ"

— ವಿಶೇಷಾರ್ಥಪ್ರದೀಪಿಕಾ —

ಸಲ್ಪಟ್ಟ ಅವ್ಯಕ್ತಿಯೂ ಸಹ, ಪೂರ್ವದಲ್ಲಿ ಇಲ್ಲದ್ದೇ ಆಗಿದ್ದು ಮುದ್ಗರ ಪ್ರಹಾರಾ ದಿಗಳಿಂದ ಹುಟ್ಟುವುದೆಂದು ಅಭಿಪ್ರಾಯವೋ? ಅಥವಾ ಪೂರ್ವದಲ್ಲಿ ಇದ್ದುದೇ ಆಗಿದೆಯೆಂದು ಅಭಿಪ್ರಾಯವೋ? ಹೀಗೆ ವಿಕಲ್ಪಗಳು ಈ ಪಕ್ಷಗಳ ಮೇಲೆ "ವ್ಯಕ್ತ್ಯವ್ಯಕ್ತ್ಯೋರುತ್ಪತ್ತಿವಿನಾಶವತ್ವೇ" ಎಂಬುದಾಗಿ ಹೇಳಿದ ದೋಷಗಳು ಅನ್ವಯಿಸುವವೆಂದು ಇಲ್ಲಿಯ ಭಾವ ಅಭಿವ್ಯಕ್ತಿ ಅನಭಿವ್ಯಕ್ತಿಗಳಿಗೆ ಹೇಳಿದ ಅಭಿವ್ಯಕ್ತಿಯು ಪೂರ್ವದಲ್ಲಿ ಇಲ್ಲದ್ದೇ ಆಗಿದ್ದು ಹುಟ್ಟುತ್ತದೆ ಹಾಗೂ ನಾಶಹೊಂ ದುವುದೆಂಬ ಪಕ್ಷದಲ್ಲಿಯೂ, ಅನಭಿವ್ಯಕ್ತಿಯೂ ಪೂರ್ವದಲ್ಲಿ ಇಲ್ಲದ್ದೇ ಆಗಿದ್ದು ಮುದ್ಗರ ಪ್ರಹಾರಾದಿಗಳಿಂದ ಹುಟ್ಟುತ್ತದೆಂಬ ಪಕ್ಷದಲ್ಲಿಯೂ, ಅಭಿವ್ಯಕ್ತಿ ಅನಭಿ ವ್ಯಕ್ತಿಗಳಿಗಿರುವ ಅಭಿವ್ಯಕ್ತಿ–ಅನಭಿವ್ಯಕ್ತಿಗಳು ಅಸತ್ಯಗಳಾದಲ್ಲಿ ಅವುಗಳಿಗೆ ಉತ್ಪತ್ತಿವಿನಾಶಗಳೆಂದು ಹೇಳಿದರೆ "ಯಾವುದೂ ಹುಟ್ಟುವುದಿಲ್ಲ, ಸಾಯು ವುದಿಲ್ಲ" ಎಂಬ ಸಿದ್ಧಾಂತದ ಹಾನಿಯೆಂಬ ದೋಷವು ಬರುತ್ತದೆ. ಅವುಗಳು ಪೂರ್ವದಲ್ಲಿಯೂ ಸತ್ಯಗಳೇ ಆಗಿವೆಯೆಂಬ ಪಕ್ಷದಲ್ಲಿ ಕಾರಕವ್ಯಾಪಾರಗಳ ವೈಫಲ್ಯ ವೆಂಬ ದೋಷವು ಅನ್ವಯಿಸುತ್ತದೆಂದು ತಿಳಿಯಬೇಕು.

"ತತ್ರಾಪಿ" –ಅಭಿವ್ಯಕ್ತಿ ಅನಭಿವ್ಯಕ್ತಿಗಳನ್ನು, ಅಭಿವ್ಯಕ್ತಿ ಅನಭಿವ್ಯಕ್ತಿಗ ಳಿಗೂ ಅಂಗೀಕರಿಸಿದರೆ; ಹೀಗೆ ಇಲ್ಲಿಯ ಅರ್ಥ

"ವಿಷಯಸಪ್ತಮೀ" -ಉತ್ಪತ್ತಿವಿನಾಶಗಳ ವಿಷಯದಲ್ಲಿ, ಎಂದು ಅರ್ಥ "ಮೂಲಕ್ಷಯಾಭಾವಾತ್"= "ಮೂಲಕ್ಷಯಕರೀಂ ಪ್ರಾಹುರನವಸ್ಥಾಂ ಹಿ ದೂಷಣಂ" ಎಂಬುದಾಗಿ ಹೇಳಿರುದರಿಂದ ಮೂಲಕ್ಷಯಕಾರಿಯಾಗಿಲ್ಲವಾದುದರಿಂದ ದೋಷವಿಲ್ಲವೆಂದು ಶಂಕಿಸುವವನ ಅಭಿಪ್ರಾಯವಾಗಿದೆಯೆಂದು ತಿಳಿಯಬೇಕು. ಇನ್ನು ಮೂಲದ ಕ್ಷಯವೆಂದರೇನು? ಕಲ್ಪಕ (ಕಾರಣ) ವಿಲ್ಲವೆಂದು ಅರ್ಥವೋ?

आह ॥ अनवस्थेति । अन्यथाऽनवच्छिन्नव्यक्त्यव्यक्तिपरम्पराङ्गीकारे सर्वत्र घटादावुत्पत्तिनाशयोरनवस्थाऽनवक्लृप्तिः स्यात् । उत्तरोत्तर-व्यक्त्यव्यक्तिसिद्धौ हि पूर्वपूर्वव्यक्त्यव्यक्तीनामुत्पत्तिनाशव्यवहारनि-दानत्वम् । ततः प्रयोजनपरिक्षयहेतुत्वादनवस्था दूषणमेव ।

## — ಪದಾರ್ಥದೀಪಿಕಾ —

ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ಅನ್ಯಥಾ"=ಅವಿಚ್ಛಿನ್ನವಾದ ಅಭಿವ್ಯಕ್ತಿ ಅನಭಿಕ್ತಿಗಳ ಪರಂಪರೆಯನ್ನು ಅಂಗೀಕರಿಸಿದರೆ, "ಸರ್ವತ್ರ"– ಘಟ ಮುಂತಾದ ಎಲ್ಲ ಪಧಾರ್ಥಗಳಲ್ಲಿ ಉತ್ಪತ್ತಿ ವಿನಾಶಗಳಿಗೆ "ಅನವಸ್ಥಾ"= ಕ್ಲೃಪ್ತಿಯಿಲ್ಲದಿರುವಿಕೆಯು (ಅಸಿದ್ಧಿಯು) ಬರುತ್ತದೆ ಏಕೆಂದರೆ ಮುಂದು ಮುಂದಿನ ಅಭಿವ್ಯಕ್ತಿ ಅನಭಿವ್ಯಕ್ತಿಗಳ ಸಿದ್ಧಿಯಾದರೇ ಪೂರ್ವಪೂರ್ವದ ಅಭಿವ್ಯಕ್ತಿ ಅನಭಿವ್ಯಕ್ತಿಗಳಿಗೆ ಉತ್ಪತ್ತಿವಿನಾಶಗಳ ವ್ಯವಹಾರದ ಕಾರಣತ್ವವು ! ಆದುದರಿಂದ, ಪ್ರಯೋಜನದ ಇಲ್ಲದಿರುವಿಕೆಯ (ಫಲಪ್ರತಿಬಂಧಕ ) ಕಾರಣವಾದುದರಿಂದ ಅನವಸ್ಥೆಯು ಇಲ್ಲಿ ದೂಷಣವೇ ಆಗುತ್ತದೆ

## — ವಿಶೇಷಾರ್ಥಪ್ರದೀಪಿಕಾ —

ಪ್ರಯೋಜನದ ವಿನಾಶವೆಂದರ್ಥವೋ? ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ–ಘಟದ ಸಂಬಂಧಿಯಾದ ಉತ್ಪತ್ತಿವಿನಾಶಗಳು ಅಭಿವ್ಯಕ್ತಿ ಅನಭಿವ್ಯಕ್ತಿ ರೂಪಗಳೆಂಬುದು ಪ್ರಾಮಾಣಿಕವೆಂದಾಗಿದ್ದರೆ–ಇದನ್ನು ಹೊಂದಿಸಲು ಅಭಿವ್ಯಕ್ತಿ ಅನಭಿವ್ಯಕ್ತಿಗಳಿಗೆ ಸಂಬಂಧಿಸಿದ ಉತ್ಪತ್ತಿವಿನಾಶಗಳಿಗೂ ಅಭಿವ್ಯಕ್ತಿ ಅನಭಿವ್ಯಕ್ತಿ ರೂಪತ್ವದ ಪರಂಪರೆಯನ್ನು ಕಲ್ಪಿಸಬಹುದಾಗಿತ್ತು ಆದರೆ ಹಾಗಿಲ್ಲ ಏಕೆಂದರೆ ಘಟದ ಸಂಬಂಧಿಯಾದ ಉತ್ಪತ್ತಿವಿನಾಶಗಳು ಅಭಿವ್ಯಕ್ತಿ ಅನಭಿವ್ಯಕ್ತಿರೂಪಗಳೆಂಬುದು ಅಪ್ರಾಮಾಣಿಕವಾದುದರಿಂದ, ಹೀಗೆ ಕಲ್ಪಿಸಲು ಬೇಕಾಗುವ ಕಲ್ಪಕ (ಪ್ರಮಾಣ)ವಿಲ್ಲವಾದುದರಿಂದ ಅನವಸ್ಥೆಯು ದೂಷಣವೇ! ಈದೋಷವು ಸ್ಪಷ್ಟವೇ ಇದ್ದುದರಿಂದ ಅದನ್ನು ಕಂಠತಃ ಹೇಳದೆ ಪ್ರಯೋಜನದ ಪರಿಕ್ಷಯವೆಂಬ ಎರಡನೆಯ ಪಕ್ಷವನ್ನು ''ಉತ್ತರೋತ್ತರ'' ಇತ್ಯಾದಿ ವಚನದಿಂದ ದೂಷಿಸುತ್ತಾರೆ ಇಲ್ಲಿ ಅಭಿವ್ಯಕ್ತಿ ಅನಭಿವ್ಯಕ್ತಿಗಳಿಗೆ ಸಂಬಂಧಿಸಿದ ಅಭಿವ್ಯಕ್ತಿ ಅನಭಿವ್ಯಕ್ತಿಗಳನ್ನು ಕಲ್ಪಿಸಲಾಗುತ್ತದೆ ಆದುದರಿಂದ ಮುಂದಿನಿಂದ ಕಲ್ಪಿಸಲಾಗಿರುವ ಅಭಿವ್ಯಕ್ತಿ ಅನಭಿವ್ಯಕ್ತಿಗಳ ಪರಂಪರೆಯ ಬಗ್ಗೆ ಪ್ರಮಾಣವಿಲ್ಲವಾದುದರಿಂದ ಅದು ಸಿದ್ಧಿಸುವುದಿಲ್ಲ ಆದುದರಿಂದ, ಘಟದ ಉತ್ಪತ್ತಿಯು ವ್ಯವಹಾರ ಕಾರಣವಾಗಿ ಕಲ್ಪಿಸಲ್ಪಡುವ ಘಟದ ಅಭಿವ್ಯಕ್ತಿ ಅನಭ್ಯಿವ್ಯಕ್ತಿಗಳೂ ಸಿದ್ಧಿಸುವುದಿಲ್ಲ ಆದು

नन्विदं भवतामपि समानम् । प्रागसतः सत्तासमवायो हि जनिरिष्यते । सत्तासमवायौ च सदा सन्ताविति प्राग्विनाशोत्तरमपि जनिः स्यात् । विनाशश्च न स्यादित्यत आह ॥ अनवस्थेति । इयं सर्वत्रोत्पत्तिविनाशयोरनवस्थाऽव्यवस्थितिरन्यथा समवायस्य जनित्वाङ्गीकृतावेव हि स्यात् । नास्मन्मते । प्रकारान्तरेण जनेर्वक्ष्यमाण-

— ಪದಾರ್ಥದೀಪಿಕಾ —

ಇನ್ನು- ಈ ದೋಷವು ನಿಮಗೂ (ಸಿದ್ಧಾಂತಿಗಳಿಗೂ) ಸಮಾನವಾಗುತ್ತದೆ ಹೇಗಂದರ-ಪೂರ್ವದಲ್ಲಿ ಇಲ್ಲದಿದ್ದುದಕ್ಕೆ ಸತ್ತೆಯ (ಅಸ್ತಿತ್ವ-ದೇಶ ಕಾಲಸಂಬಂಧ) ಸಂಬಂಧ ವಿಶೇಷ (ಸಮವಾಯ) ವು ಉಂಟಾಗುವದೇ "ಜನಿ" -ಜನನವೆನಿಸುತ್ತದೆ ಸತ್ತಾ ಸಮವಾಯಗಳು ಯಾವಾಗಲೂ ಇರುವವುಗಳು ಆದುದರಿಂದ ವಿನಾಶದ ಪೂರ್ವದಲ್ಲಿ ಹಾಗು ಉತ್ತರದಲ್ಲಿಯು ಜನನವಾಗಲಿ ! ವಿನಾಶವು ಆಗದೇ ಇರಲಿ! ಈ ಆಶಂಕೆಯ ಪರಿಹಾರಕವಾಗಿ 'ಅನವಸ್ಥಾ' ಇತ್ಯಾದಿ ವಚನವು ಹೊರಟಿದೆ ಈ "ಸರ್ವತ್ರ ಉತ್ಪತ್ತಿ ವಿನಾಶಗಳ ಅನವಸ್ಥೆಯೆಂದರೆ ಅವ್ಯವಸ್ಥೆಯೆಂಬ ದೋಷವು "ಅನ್ಯಥಾ"= ಸಮವಾಯವೇ ಜನಿ-ಜನನವೆಂದು ಅಂಗೀಕರಿಸುವ ಪಕ್ಷದಲ್ಲಿಯೇ ಬರುವದು ನಮ್ಮ ಮತದಲ್ಲಿ ಬರಲಾರದು ಏಕೆಂದರ ಬೇರೆ ರೀತಿಯಿಂದ ಜನನವನ್ನು ಮುಂದ ಹೇಳುವೆವು " ಹೀಗೆ ಇಲ್ಲಿ ಅರ್ಥ

— ವಿಶೇಷಾರ್ಥಪ್ರದೀಪಿಕಾ —

ದರಿಂದ, ಘಟದ ಅಭಿವ್ಯಕ್ತಿ ಅನಭಿವ್ಯಕ್ತಿಗಳ ಸಿದ್ಧಿಯೆಂಬ ಪ್ರಯೋಜನ ಪ್ರತಿಬಂಧಕವಾಗಿರುವುದರಿಂದ ಈ ಅನವಸ್ಥೆಯು ದೂಷಣವಾಗುತ್ತದೆಂದು ತಿಳಿಯಬೇಕು

ನಾಸ್ಮನ್ಮತೇ"- "ಏವಮೇವಾಸತಃ ಸತ್ತಾಸಮವಾಯೋ ಜನಿರ್ಮತಾ ॥ ತತ್ರಾಪಿ ಹ್ಯುಕ್ತದೋಷಾಣಾಂ ನೈವ ಕಿಂಚಿನ್ನಿವಾರಕಂ" ಇತ್ಯಾದಿ ವಾಕ್ಯಗಳಿಂದ "ಪ್ರಾಕ್ ಅಸತಃ ಸತ್ತಾಸಮವಾಯೋ ಜನಿಃ" ಎಂಬ ಪಕ್ಷವನ್ನು ದೂಷಿಸಲಾಗಿದೆಯೆಂದು ತಿಳಿಯಬೇಕು "ವಕ್ಷ್ಯಮಾಣತ್ವಾತ್"-ಮೃದಾದ್ಯಾಶ್ಚ ಜಾಯಂತೇ ಪರಾಧೀನವಿಶೇಷತಃ " ಈ ಮುಂತಾದ ವಿಯತ್ಪಾದದ ಮೊದಲನಯ ಅಧಿಕರಣದಲ್ಲಿ ಹೇಳಲಾಗುವುದೆಂದು ಇಲ್ಲಿ ತಿಳಿಯಬೇಕು ಇಲ್ಲಿ "ಪರಾಧೀನ ವಿಶೇಷಾವಾಪ್ತಿ" ಯೆಂಬ ಜನನವನ್ನು ಹೇಳಲಾಗಿದೆ "ಮೃದಾದಿಗಳಿಗೆ ಘಟಾದ್ಯಾಕಾರದಿಂದ ಪರಿಣಾಮವಾಗುವುದೇ ಘಟದ ಜನನ ಹೊರತು ಇಲ್ಲದ್ದಕ್ಕೆ ಸತ್ತಾಸಂಬಂಧವೆಂದಲ್ಲ" ಈ ನಮ್ಮ ಪಕ್ಷದಲ್ಲಿ, ಎಲ್ಲ ಕಡೆಗಳಲ್ಲಿಯೂ ವಿಶೇಷವನ್ನು ಅಂಗೀಕರಿಸಿದುದರಿಂದ

त्वादिति । ननु जनिः किं प्राक् सती उत कारकव्यापारजन्या आद्ये प्रागुक्त एव दोषः । द्वितीये जनेर्जनिरपि तथेत्यनवस्था । एवं विनाशेऽपीत्यत आह ॥ अनवस्थेति । सर्वत्रोत्पत्तिनाशयोरियमुक्ता-नवस्था । अन्यथा घटजनेरन्या जनेर्जनिरित्यङ्गीकार एव स्यात् । न त्वेवमङ्गीक्रियते । अपि तर्हि घटजन्मैव जन्मनो जन्मेति । यथाऽऽहुः । यथा जनेर्जनिर्नान्या तस्या वस्तुजनिर्जनिरिति घटो

— ಪದಾರ್ಥದೀಪಿಕಾ —

ಇನ್ನು-ಜನಿಯು (ಉತ್ಪತ್ತಿ-ಜನನ) ಪೂರ್ವದಲ್ಲಿ ಇರುವಂತಹದೋ? ಅಥವಾ ಪೂರ್ವದಲ್ಲಿ ಇಲ್ಲದ್ದಾಗಿದ್ದು ಕಾರಕವ್ಯಾಪಾರಗಳಿಂದ ಹುಟ್ಟುವಂತಹದೋ? ಮೊದಲನಯ ಕಲ್ಪದಲ್ಲಿ ಹಿಂದೆ ಹೇಳಿದ ದೋಷವೇ ಬರುತ್ತದ ಎರಡನೆಯ ಪಕ್ಷದಲ್ಲಿ ಜನಿಗೂ ಒಂದು ಜನಿ ಆ ಜನಿಗೂ ಇನ್ನೊಂದು ಜನಿ ಹೀಗ ಅನ ವಸ್ಥಯು ಬರುತ್ತದೆ, ಇದರ ಹಾಗ ವಿನಾಶವೂ, ಹೀಗ ಆಶಂಕಯು ಬರಲು ಅದರ ಪರಿಹಾರವನ್ನು "ಅನವಸ್ಥಾ" ಇತ್ಯಾದಿ ವಚನದಿಂದ ಹೇಳಿದ್ದಾರೆ- 'ಸರ್ವತ್ರ" -ಹಿಂದೆ ಹೇಳಿದ ಅನವಸ್ಥಯು, ಅನ್ಯಥಾ" = ಘಟದ ಉತ್ಪತ್ತಿಯಿಂದ ಬೇರಯಾದುದು 'ಉತ್ಪತ್ತಿಯ ಉತ್ಪತ್ತಿಯು" ಎಂದು ಅಂಗೀಕರಿಸಿದ ಪಕ್ಷದ ಲ್ಲಿಯೇ ಬರುತ್ತದೆ- ಆದರ ಹಾಗ ಅಂಗೀಕರಿಸಿರುವುದಿಲ್ಲ ಘಟದ ಉತ್ಪತ್ತಿಯೇ ಘಟದ ಉತ್ಪತ್ತಿಯ ಉತ್ಪತ್ತಿಯೆಂದು ಅಂಗೀಕರಿಸಿದ್ದೇವೆ ಹೀಗಯೇ 'ಯಥಾ

— ವಿಶೇಷಾರ್ಥಪ್ರದೀಪಿಕಾ —

ದೋಷವಿಲ್ಲವೆಂಬುದಾಗಿ ವೈಶೇಷಿಕಪರೀಕ್ಷೆಯಲ್ಲಿ ಬೇರ ತರಹದ, 'ಜನನ" ವನ್ನು ನಿರೂಪಿಸಲಾಗಿದೆಯೆಂದೂ ತಿಳಿಯಬೇಕು

"ಪ್ರಾಗುಕ್ತ ಏವ"- "ಏತಾವಂತಂ ಕಾಲಂ ಪ್ರಾಗನುತ್ಪನ್ನೋ ಘಟಃ ಇದಾನೀಮುತ್ಪನ್ನಃ" ಇತ್ಯಾದಿ ವಾಕ್ಯದಿಂದ ಹೇಳಿದ ದೋಷವೇ 'ಏವಂ ವಿನಾಶೇಽಪಿ''- ವಿನಾಶವು ಪೂರ್ವದಲ್ಲಿ ಇದ್ದುದೇ ಆಗಿದ್ದರ, '' ಈಗ್ಗೆಯೇ ಘಟವು ನಾಶಹೊಂದಿತು'' ಎಂಬ ವ್ಯವಹಾರವು ಬಾರದಿರಲಿ! ಎಂಬ ದೋಷವು ಬರುತ್ತದೆ ವಿನಾಶವು ಪೂರ್ವದಲ್ಲಿ ಅಸತ್ಯ (ಇಲ್ಲದ್ದು) ವೆಂದಾದರೆ ಆ ವಿನಾಶದ ಜನನದ ಪರಂಪರೆಯಮೂಲಕ ಅನವಸ್ಥಾದೋಷವು ಬರುತ್ತದೆಂದು ತಿಳಿಯಬೇಕು

" ಯಥಾಹುಃ "- ಬೃಹದಾರಣ್ಯಭಾಷ್ಯ ಮೊದಲನೆಯ ಅಧ್ಯಾಯದಲ್ಲಿ ಹೇಳಿದ್ದಾರೆಂದು ತಿಳಿಯಬೇಕು.

जायते घटजन्म जायत इत्यनयोरेकार्थतैव हि लौकिकपरीक्षकसम्मता । न च व्यक्त्यव्यक्त्योरप्येवमङ्गीकर्तुमुचितम् । जन्मविनाशावुपलब्ध्यनुपलब्धी वा विहाय व्यक्त्यव्यक्त्योरेवाप्रामाणिकत्वादिति ।

ननु यद्यसदुत्पद्येत सच्च विनश्येत्; तदा सर्वत्रोत्पत्तिनाशयोरनवस्थेव स्यात् । एवं सति हि खरविषाणमप्युत्पद्येत । आत्मा च नश्येदित्यत आह ॥ अनवस्थेति । अन्यथा कारणशक्त्यनादरणे हीयमुत्पत्तिविनाशयोरनवस्था स्यात् । न चैवं किन्तु यस्योत्पत्तिकारणमस्ति तदसदप्युत्पद्यते । यस्य च विनाशकारणं विद्यते तत्सदपि निरुध्यते । न च खरविषाणजन्मन्यात्मविनाशे वा कारण-

— ಪದಾರ್ಥದೀಪಿಕಾ —

ಜನೇರ್ಜನಿರ್ನಾನ್ಯಾ ತಸ್ಯ ವಸ್ತುಜನಿರ್ಜನಿಃ" ಎಂಬುದಾಗಿ ಪೂರ್ವಿಕರು ಹೇಳಿದ್ದಾರೆ "ಘಟವು ಹುಟ್ಟುತ್ತದೆ ಘಟದ ಜನನವು ಉಂಟಾಗುತ್ತದೆ" ಇವೆರಡೂ ಮಾತುಗಳಿಗೆ ಒಂದೇ ಅರ್ಥವಿದೆಯೆಂಬುದು ಲೌಕಿಕ ಪರೀಕ್ಷಕರಿಗೆ ಸಮ್ಮತವಾದುದು ಆದರೆ ಅಭಿವ್ಯಕ್ತಿ ಅನಭಿವ್ಯಕ್ತಿಗಳಿಗೆ ಹೀಗೆ ಅಂಗೀಕರಿಸಲು ಬರುವುದಿಲ್ಲ ಏಕೆಂದರೆ ಜನ್ಮವಿನಾಶಗಳನ್ನಾಗಲಿ ಉಪಲಬ್ಧಿ ಅನುಪಲಬ್ಧಿಗಳನ್ನಾಗಲೀ ಬಿಟ್ಟು ಬೇರೆಯಾಗಿರುವ ಅಭಿವ್ಯಕ್ತಿ ಅನಭಿವ್ಯಕ್ತಿಗಳೇ ಅಪ್ರಾಮಾಣಿಕವಾಗಿವೆ ಹೀಗೆ ಅರ್ಥ

ಹಾಗಾದರೆ– "ಅಸತ್ತು (ಪೂರ್ವದಲ್ಲಿ ಇಲ್ಲದ್ದು) ಉತ್ಪನ್ನವಾಗುವುದಾದರೆ, ಹಾಗು ಸತ್ತವು ವಿನಾಶಹೊಂದುವುದಾದರೆ— ಆಗ ಎಲ್ಲ ಕಡೆಗಳಲ್ಲಿಯೂ ಉತ್ಪತ್ತಿ ವಿನಾಶಗಳ ಅನವಸ್ಥೆಯೇ ಬರುತ್ತದೆ ಏಕೆಂದರೆ– ಹೀಗಾದಲ್ಲಿ ಖರ ವಿಷಾಣವು ಉತ್ಪನ್ನವಾಗಲಿ ಹಾಗು ಆತ್ಮನೂ ನಾಶಹೊಂದಲಿ," ಈ ಆಶಂಕೆಯನ್ನು "ಅನವಸ್ಥಾ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ 'ಅನ್ಯಥಾ''– ಕಾರಣಶಕ್ತಿಯನ್ನು (ಸ್ವಭಾವವನ್ನು) ಅಂಗೀಕರಿಸದ ಪಕ್ಷದಲ್ಲಿ, ಈ ಉತ್ಪತ್ತಿ ವಿನಾಶಗಳ ಅನವಸ್ಥೆಯು ಬರುತ್ತದೆ ಆದರೆ ಹಾಗೆ ನಾವು ಅದನ್ನು ಅನಾದರಿಸುವುದಿಲ್ಲ ಏಕೆಂದರೆ— ಯಾವುದಕ್ಕೆ ಉತ್ಪತ್ತಿಕಾರಣವಿದೆಯೋ ಅದು ಅಸತ್ತು (ಪೂರ್ವದಲ್ಲಿ ಇಲ್ಲವಾದದ್ದು) ಆದರೂ ಉತ್ಪತ್ತಿಹೊಂದುತ್ತದೆ ಹಾಗು ಯಾವುದಕ್ಕೆ ವಿನಾಶಕಾರಣವಿದೆಯೋ ಅದು ಸತ್ಯವಾಗಿದ್ದರೂ ನಾಶಹೊಂದುವದು ಆದರೆ ಖರವಿಷಾಣದ ಉತ್ಪತ್ತಿಯಲ್ಲಿಯಾಗಲೀ ಆತ್ಮನ ನಾಶದಲ್ಲಿ

मस्तीति तयोर्जननविनाशाभावः। कारणस्वभावाननुगमे तु सत्कार्यवादिनोऽप्यतिप्रसङ्ग एवेति। अथवा स्यादियमनवस्था। यद्यत्यन्तासदेवोत्पद्यते सन्मात्रं विनश्यतीति ब्रूमः। सदसदेवोत्पद्यत इति चोक्तं विनाशकारणवदेव च विनश्यतीति।

यच्चोक्तं भावे चोपलब्धेरिति सूत्रार्थत्वेन तद्व्याप्यव्यापकभावे-

— ಪದಾರ್ಥದೀಪಿಕಾ —

ಯಾಗಲೀ ಕಾರಣವಿರುವುದಿಲ್ಲ ಆದುದರಿಂದ, ಅವೆರಡಕ್ಕೂ (ಕ್ರಮವಾಗಿ) ಜನನ ವಿನಾಶಗಳಿಲ್ಲ. ಆದರೆ ಕಾರಣದ ಸ್ವಭಾವವನ್ನು ಅಂಗೀಕರಿಸದ ಪಕ್ಷದಲ್ಲಿ ಸತ್ಕಾರ್ಯವಾದಿಗೂ ಅತಿಪ್ರಸಂಗವು ತಪ್ಪಿದುದಲ್ಲ ಹೀಗೆ ಅರ್ಥ ಅಥವಾ– "ಅತ್ಯಂತ ಅಸತ್ತಾದುದೇ ಉತ್ಪನ್ನವಾಗುತ್ತದೆ ಕೇವಲ ಸತ್ಯವಾದುದೇ ನಾಶ ಹೊಂದುತ್ತದ," ಎಂದು ನಾವು ಹೇಳುವವರಾಗಿದ್ದರೆ ಆಗ ಈ ಅನವಸ್ಥೆಯು ಬರುತ್ತಿತ್ತು ಬರಲಿ! ಆದರೆ ಕಾರಣರೂಪದಿಂದ ಸತ್ಯ, ಕಾರ್ಯರೂಪದಿಂದ ಅಸತ್ವ (ಸದಸತ್ಯ)ವಾದುದೇ ಉತ್ಪನ್ನವಾಗುತ್ತದೆಂದು ಹಿಂದೆ ಹೇಳಿದೆ ಹಾಗು ವಿನಾಶದ ಕಾರಣವುಳ್ಳದ್ದೇ ವಿನಾಶ ಹೊಂದುತ್ತದೆಯೆಂದೂ ಹೇಳಿದೆ ಹೀಗೆ ಭಾವ

ಇನ್ನು -"ಭಾವೇ ಚೋಪಲಬ್ಧೇಃ" ಎಂಬ ಸೂತ್ರದ ಅರ್ಥ ರೂಪವಾಗಿ

— ವಿಶೇಷಾರ್ಥಪ್ರದೀಪಿಕಾ —

ಅತಿಪ್ರಸಂಗ ಏವ"– ಆತ್ಮನ ಹಾಗೆ ಘಟಾದಿಗಳಿಗೆ ಸತ್ಯತೆಯಿರುವುದರಿಂದ ಜನನವಾಗದಿರಲಿ! ಹಾಗು ಘಟಾದಿಗಳಂತೆ ಆತ್ಮನಿಗೂ ಜನನವಾಗಲಿ! ಹೀಗೆ ಅತಿಪ್ರಸಂಗವೆಂದು ತಿಳಿಯಬೇಕು ಕಾರಣ ಸಾಮಗ್ರಿಯು ಇದ್ದರೂ ಬಾಧವಿರುವುದರಿಂದಲೇ ಅಸತ್ಯತೆಯೆಂದು ಸ್ವಪ್ನಾಧಿಕರಣದಲ್ಲಿ ಹೇಳಿದುದರಿಂದ ಇಲ್ಲಿ ಕಾರಣವಿಲ್ಲವೆಂಬ ಕಾರಣದಿಂದ ಅಸತ್ಯತೆಯನ್ನು ಹೇಳುವುದು ಹೇಗೆ ಸರಿಯಾದೀತು ? ಏಕೆಂದರೆ– ಹಾಗೆ ಹೇಳಿದರೆ ಆ ಗ್ರಂಥವಿರೋಧವು ಬರುತ್ತದೆಂಬ ಆಕ್ಷೇಪವನ್ನು ತಪ್ಪಿಸಲು "ಅಥವಾ" ಇತ್ಯಾದಿ ಟೀಕಾವಾಕ್ಯವು ಹೊರಟಿದೆ "ಅತ್ಯಂತಾಸದೇವ"– ಯಾವದೇ ರೂಪದಿಂದ (ಆಕಾರದಿಂದ)ಲೂ ಅಸ್ತಿತ್ವ (ಸತ್ವ) ವಿಲ್ಲದ್ದು " ಸನ್ಮಾತ್ರಂ "– ಯಾವದೇ ರೂಪದಿಂದ ಅಸತ್ಯವಾಗದಂತಹದು ವಿನಾಶ ಕಾರಣದಿಂದ ರಹಿತವಾದುದು

ಸೂತ್ರಾಕ್ಷರಗಳ ಆರ್ಜವ ಅನಾರ್ಜವದ ವಿಚಾರವನ್ನು ಶಿಷ್ಯರೇ ಮಾಡಲೆಂದು ಹೇಳಲಾಗಿತ್ತು ಮೊದಲನೆಯ ಸೂತ್ರದ ಅಕ್ಷರಗಳ ಆರ್ಜವ ವಿಚಾರವು

नैवोपपन्नं नात्यन्ताभेदसाधकम् । अथ कारणोपरोक्तबुद्धिः सामानाधिकरण्यबुद्धिर्वाऽत्राभिमतेति मतम् । साऽप्यभेदमात्रेण चरितार्था नात्यन्ताभेदसाधनायालम् । किञ्चैतत् युक्तेश्चेत्यनेनैव शक्यसङ्ग्रहं न

— ಪದಾರ್ಥದೀಪಿಕಾ —

ಹೇಳಿದುದು, ವ್ಯಾಪ್ಯ ವ್ಯಾಪಕ ಭಾವದಿಂದಲೇ ಯುಕ್ತವೆನಿಸುವುದರಿಂದ ಅತ್ಯಂತ ಅಭೇದದ(ಕಾರ್ಯ ಕಾರಣಗಳಿಗೆ) ಸಾಧಕವಾಗಲಾರದು ಇನ್ನು ಕಾರಣ ಸಂಭೇದ್ಧವಾಗಿರುವುದೆಂಬ ಪ್ರತೀತಿಯಾಗಲೀ ಕಾರಣದ ಸಮಾನಾಧಿಕರಣವಾಗಿದೆಯೆಂಬ ಬುದ್ಧಿಯಾಗಲೀ (ಅನುಭವವಾಗಲೀ) ಕಾರ್ಯಕ್ಕೆ ಕಾರಣದಿಂದ ಅತ್ಯಂತಾಭೇದ ಸಾಧಕವೆಂದು ಇಲ್ಲಿಯ ಅಭಿಪ್ರಾಯವೆಂದು ಹೇಳುವುದಾದಲ್ಲಿ- ಅಭೇದವನ್ನಷ್ಟೇ ತೋರಿಸುವುದರಿಂದ ಆ ಪ್ರತೀತಿಗಳು ಚರಿತಾರ್ಥವಾದುದರಿಂದ, ಅತ್ಯಂತ ಅಭೇದದ ಸಾಧಕವಾಗಲಾರದು ಮತ್ತು ಈ ಯುಕ್ತಿಯನ್ನು 'ಯುಕ್ತೇಶ್ಚ'' ಎಂಬೀ ಸೂತ್ರದಿಂದಲೇ ಸಂಗ್ರಹ ಮಾಡಲು ಶಕ್ಯವಿದ್ದುದರಿಂದ, ಭಾವೇಚೋಪ

— ವಿಶೇಷಾರ್ಥಪ್ರದೀಪಿಕಾ —

ಹಿಂದೆಯೇ ಮಾಡಲ್ಪಟ್ಟಿದೆ ಮುಂದಿನ ಸೂತ್ರಗಳ ಅಕ್ಷರಗಳ ಆರ್ಜವ ವಿಚಾರವನ್ನು " ಯುಚ್ಯೋಕ್ತಂ " ಇತ್ಯಾದಿ ವಚನಗಳಿಂದ ಮಾಡುತ್ತಾರೆ ಮೃದಾದಿ ಕಾರಣಗಳಿದ್ದರೇ ಕಾರ್ಯದ ಉಪಲಬ್ಧಿಯಾಗುವುದರಿಂದ ಕಾರಣದಿಂದ ಕಾರ್ಯಕ್ಕೆ ಅಭೇದವೇ, ಎಂಬುದಾಗಿ ಹೇಳಿದುದು ಸರಿಯಲ್ಲ ಏಕೆಂದರೆ "ಆಲೋಕ (ಬೆಳಕು) ವಿದ್ದರೇ ರೂಪದ ಉಪಲಬ್ಧಿ (ಕಾಣುವಿಕೆ) ಯು, ಇಲ್ಲದಿದ್ದಲ್ಲಿ ಇಲ್ಲ" ಎಂಬಲ್ಲಿ ಹೇಗೋ ಹಾಗೆ ಕಾರಣದೊಡನೆ ಕಾರ್ಯಕ್ಕೆ ಅವಿನಾಭಾವ (ವ್ಯಾಪ್ತಿ-ನಿಯತ ಸಂಬಂಧ) ವಿರುವುದರಿಂದಲೇ ಕಾರ್ಯದ ಉಪಲಬ್ಧಿಯಾಗುವುದೆಂಬುದು ಸಂಭವಿಸುತ್ತದೆ ಹೀಗೆ ಅರ್ಥ ಇದರ ಮೇಲೆ ಭಾಮತೀಕಾರನು ಹೇಳಿದುದನ್ನು ಚಂದ್ರಿಕಾಕಾರರು ನಿರಾಕರಿಸಿದ್ದಾರೆ, ಅಲ್ಲಿ ನೋಡಬೇಕು "ಮೃತ್ತು ಘಟವು" ಎಂಬುದಾಗಿ, ಕಾರಣದ ಅನುವೇಧದಿಂದ ಯುಕ್ತವಾಗಿರುವುದರಿಂದ ಅಥವಾ ಸಮಾನ ವಿಭಕ್ತಿಯುಳ್ಳ ಪದಗಳಿಂದ ಹೇಳಿಸಿಕೊಂಡದ್ದಾಗಿರುವುದರಿಂದ ಕಾರ್ಯಕಾರಣಗಳಿಗೆ ಅಭೇದವೆಂದು ಸೂತ್ರತಾತ್ಪರ್ಯವನ್ನು ಆಶಂಕಿಸಿ ಅದನ್ನು "ಅಥ" ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಾರೆ

"ಶಕ್ಯಸಂಗ್ರಹಂ"-"ಅಸದಕರಣಾತ್" ಇತ್ಯಾದಿ ಸಾಂಖ್ಯೋಕ್ತವಾದ ಹಾಗು ಸೌಗತೋಕ್ತವಾದ ಯುಕ್ತಿಗಳಿರುವುದರಿಂದ ಕಾರ್ಯಕಾರಣಗಳಿಗೆ ಅಭೇದವು; ಎಂದು ಹೇಳುವಂತೆ, ಕಾರಣಾನುವೇಧವುಳ್ಳದ್ದಾಗಿ ತೋರುವುದರಿಂದ ಕಾರ್ಯ

पुनरभिधातव्यम् । अथानेन प्रत्यक्षमुपन्यस्यते तदपि नात्यन्ताभेद-साधकम् । अत एव भावाच्चोपलब्धेरिति सूत्रविपरिणामोऽपि निरस्तः । सत्त्वाच्चावरस्येति युक्तेश्चेन् युक्तेश्चेत्येतेनैव गतार्थता । श्रुति

— ಪದಾರ್ಥದೀಪಿಕಾ —

ಲಬ್ಧೇಃ" ಎಂದುದಾಗಿ ಮತ್ತೆ ಹೇಳಬೇಕಾಗುವುದಿಲ್ಲ ಇನ್ನು- ಈ ಸೂತ್ರದಿಂದ ಕಾರ್ಯಕ್ಕೆ ಕಾರಣಾಭೇದದ ಬಗ್ಗೆ ಪ್ರತ್ಯಕ್ಷವು ಹೇಳಲ್ಪಡುವುದೆಂದರೆ ಆಗಲೂ ಅದು ಅತ್ಯಂತ ಅಭೇದದ ಸಾಧಕವಾಗಲಾರದು ಆದುದರಿಂದಲೇ "ಭಾವಾಚ್ಚೋಪಲಬ್ಧೇಃ" ಎಂಬುದಾಗಿ ಸೂತ್ರದಲ್ಲಿ ಬದಲಾವಣೆಯೂ ಸರಿಯಾಗುವುದಿಲ್ಲ. "ಸತ್ವಾಚ್ಚಾವರಸ್ಯ" ಎಂಬುದು "ಯುಕ್ತೇಶ್ಚ" ಎಂಬ ಸೂತ್ರದಿಂದಲೇ

— ವಿಶೇಷಾರ್ಥಪದೀಪಿಕಾ —

ಕಾರಣಗಳಿಗೆ ಅಭೇದವೆಂದೂ ಹೇಳಲಿಕ್ಕೆ ಬರುವುದರಿಂದ, "ಭಾವೇ" ಇತ್ಯಾದಿಯಾದ ಸೂತ್ರವು ಬೇಕಿಲ್ಲ ಏಕೆಂದರೆ ಅದನ್ನೇ ಮತ್ತೆ ಹೇಳುವುದರಿಂದ ಪುನರುಕ್ತಿದೋಷವು ಬರುತ್ತದೆ ಹೀಗೆ ಭಾವವು ಇನ್ನು "ಭಾವಾಚ್ಚೋಪಲಬ್ಧೇಃ" ಎಂಬುದಾಗಿ ಪಾಠಭೇದವನ್ನು ಪರಿಗ್ರಹಿಸಿ, ಆತಾನವಿತಾನವುಳ್ಳ-ಹಾಸು ಹೊಕ್ಕಾಗಿರುವ ತಂತುಗಳೇ ಪಟವೆಂಬುದು ಕಣ್ಣಿಗೆ ಕಾಣಿಸುವುದರಿಂದ ಕಾರ್ಯಕಾರಣಗಳಿಗೆ ಅಭೇದವಿದೆಯೆಂದು ಹೇಳಿದುದರಿಂದ ಈ ಅರ್ಥವು "ಯುಕ್ತೇಃ" ಎಂಬ ಸೂತ್ರದಿಂದ ಗತಾರ್ಥವಲ್ಲವೆಂಬ ಆಶಂಕೆಯನ್ನು "ಅಥಾನೇನ" ಇತ್ಯಾದಿ ವಚನಗಳಿಂದ ನಿರಾಕರಿಸುತ್ತಾರೆ ಭೇದಾಭೇದವಿರುವುದರಿಂದಲೂ ಇಂಥ ಪ್ರತ್ಯಕ್ಷವು ಚರಿತಾರ್ಥವಾಗುವುದರಿಂದ ಅತ್ಯಂತ ಅಭೇದವು ಸಿದ್ಧಿಸುವುದಿಲ್ಲ ಹೀಗೆ ಇಲ್ಲಿಯ ಭಾವ "ಅತಏವ"- ಅತ್ಯಂತ ಅಭೇದದ ಸಾಧಕವಾಗದಿರುವುದರಿಂದಲೇ! "ಘಟವು ಮಣ್ಣು" ಎಂಬುದಾಗಿ, ಸಾಮಾನಾಧಿಕರಣ್ಯವನ್ನಾಗಲೀ ಕಾರ್ಯದಲ್ಲಿ ಕಾರಣಸ್ವಭಾವದ ಸಂಬಂಧವನ್ನಾಗಲೀ ವಿಷಯೀಕರಿಸುವ ಪ್ರತ್ಯಕ್ಷವು ಅಭೇದವನ್ನು ವಿಷಯೀಕರಿಸುವುದರಿಂದ ಅತ್ಯಂತ ಅಭೇದವನ್ನು ಮಾತ್ರವೇ ವಿಷಯೀಕರಿಸಿಲ್ಲವಾದುದರಿಂದ ಕಾರ್ಯಕಾರಣಗಳಿಗೆ ಅತ್ಯಂತ ಅಭೇದವು ಸಿದ್ಧಿಸುವುದಿಲ್ಲವೆಂದು ಇಲ್ಲಿಯ ಅರ್ಥ "ಸತ್ವಾಚ್ಚಾವರಸ್ಯ" ಇಲ್ಲಿ- ಕಡಮೆಯ ಕಾಲವುಳ್ಳ ಕಾರ್ಯಕ್ಕೆ (ಅವರಸ್ಯ) ಉತ್ಪತ್ತಿಯ ಪೂರ್ವದಲ್ಲಿ "ಸದೇವ ಸೋಮ್ಯೇದ ಮಗ್ರೇ ಆಸೀತ್" ಎಂಬ ಶ್ರುತಿಯಲ್ಲಿ ಸತ್ವ (ಅಸ್ತಿತ್ವ) ವನ್ನು ನಿರ್ಣಯಿಸಿರುವುದರಿಂದ ಕಾರ್ಯಕಾರಣಗಳಿಗೆ ಅಭೇದವೆಂದು ಪರರ ವ್ಯಾಖ್ಯಾನ. ಇಲ್ಲಿ ಸತ್ವಾವಧಾರಣ (ಸತ್ವದ ನಿರ್ಣಯ) ವೆಂಬ ಯುಕ್ತಿಯು ಅಭಿಪ್ರೇತವೋ ?

श्चेच्छब्दान्तराच्चेत्यनेन । असद्व्यपदेशादिति तु परिचोदनैवासङ्गता । परमार्थतो ब्रह्मकारणतापरत्वेनापाततस्तु शून्यस्याभावस्य वा कारणभावप्रतिपादकताप्रतिभासेन कार्यासत्त्वस्य श्रुतावप्रतीतेः । युक्तेरित्युक्तयुक्तिं तूत्तरत्रापाकरिष्यामः । शब्दान्तरं त्वाचार्येणैवान्यत्रान्य-

— ಪದಾರ್ಥದೀಪಿಕಾ —

ಗತಾರ್ಥವಾಗುತ್ತದೆ ಶ್ರುತಿಯೆಂದು ಹೇಳಿದರೆ "ಶಬ್ದಾಂತರಾಚ್ಚ" ಎಂಬ ಅಂಶದಿಂದ ಅದು ದೊರೆಯುತ್ತದೆ "ಅಸದ್ವ್ಯಪದೇಶಾತ್" ಇತ್ಯಾದಿ ಸೂತ್ರದಿಂದ ಮಾಡಿದ ಪರಿಚೋದನೆಯೇ ಸಂಗತವು ಏಕೆಂದರೆ ಪರಮಾರ್ಥದಲ್ಲಿ ಬ್ರಹ್ಮಕಾರಣವೆಂಬ ಅರ್ಥವಿರುವುದರಿಂದ, ಆಪಾತವಾಗಿ ಶೂನ್ಯಕ್ಕೆ ಅಥವಾ ಅಭಾವಕ್ಕೆ ಕಾರಣತ್ವವನ್ನು ಹೇಳುವುದೆಂಬುದಾಗಿ ತೋರುವುದರಿಂದ ಕಾರ್ಯದ ಅಸತ್ವವು ಶ್ರುತಿಯಲ್ಲಿ ತೋರುವುದಿಲ್ಲ "ಯುಕ್ತೇಃ," ಎಂಬಲ್ಲಿ ಹೇಳಿದ ಯುಕ್ತಿಯನ್ನು ಮುಂದೆ ನಿರಾಕರಿಸುವೆವು "ಶಬ್ದಾಂತರಾಚ್ಚ"

— ವಿಶೇಷಾರ್ಥಪ್ರದೀಪಿಕಾ —

ಇಲ್ಲವೆ, ಸತ್ವವನ್ನು ಹೇಳುವುದಾಗಿ ಶ್ರುತಿಯು ಅಭಿಪ್ರೇತವೋ? ಇವೆರಡೂ ಪಕ್ಷಗಳನ್ನು ಕ್ರಮದಿಂದ 'ಯುಕ್ತೇಶ್ಚೇತ್'' ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಾರೆ "ಶಬ್ದಾಂತರಾಚ್ಚೇತ್ಯನೇನ್ಯವ" ಇಲ್ಲಿ "ಗತಾರ್ಥತಾ" ಎಂಬುದನ್ನು ಹಚ್ಚಿಕೊಳ್ಳಬೇಕು "ಶಬ್ದಾಂತರಾತ್" ಎಂಬುದಕ್ಕೆ- "ಸದೇವ ಸೋಮ್ಯೇದಮಗ್ರ ಆಸೀತ್" ಎಂಬ ಶಬ್ದಾಂತರ (ಬೇರೆ ಶ್ರುತಿಯು) ವಿರುವದರಿಂದ, ಎಂಬುದಾಗಿ ವ್ಯಾಖ್ಯಾನಿಸಿದುದರಿಂದ ಗತಾರ್ಥತೆಯೆಂದು ತಿಳಿಯಬೇಕು

"ಬ್ರಹ್ಮಕಾರಣತಾಪರತ್ವೇನ"- "ಅಸದೇವ ಸನ್ಮನೋಽಕುರುತ" ಈ ಮುಂತಾದ ವಾಕ್ಯಶೇಷವಿರುವುದರಿಂದ ಬ್ರಹ್ಮಕಾರಣತ್ವದಲ್ಲಿ ತಾತ್ಪರ್ಯವುಳ್ಳದ್ದೆಂದು ತಿಳಿಯಬೇಕು ಈ ವಾಕ್ಯಶೇಷದಲ್ಲಿರುವ "ಅಸತ್" ಶಬ್ದಕ್ಕೆ "ಸನ್ಮನೋಽಕುರುತ" ಎಂಬುದಾಗಿ ಹೇಳಿದ ಅರ್ಥವು ಸರಿಹೊಂದುವುದಿಲ್ಲವಾದುದರಿಂದ, "ಅಸತ್" ಶಬ್ದಕ್ಕೆ "ತುಚ್ಛ" ಎಂಬ ಅರ್ಥವು ಸಂಭವಿಸುವುದಿಲ್ಲ ಆದರೂ "ಶೂನ್ಯ, ಅಭಾವ," ಗಳಲ್ಲಿ ಯಾವದಾದರೊಂದು ಅರ್ಥವು ಸಂಭವಿಸಬಹುದು ಆದುದರಿಂದ ಶೂನ್ಯಸ್ಯ" ಎಂಬುದಾಗಿ ಹೇಳಿದ್ದಾರೆ "ಕಾರಣಭಾವ" ವೆಂದರೆ "ಕಾರಣತ್ವ" ಐದನೆಯ ಸೂತ್ರದ ವರರ ಅರ್ಥವನ್ನು "ಯುಕ್ತೇರಿತ್ಯುಕ್ತ ಯುಕ್ತಿಂ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ "ಅಸದಕರಣಾತ್" ಇತ್ಯಾದಿ ಸಾಂಖ್ಯೋಕ್ತ ಯುಕ್ತಿಯನ್ನು ಹಾಗು ಬೌದ್ಧ (ಸೌಗತ) ಸು

थैव व्याख्यानम् । पटे प्राणादौ च नात्यन्तानुपसञ्जातविशेषत्व-मित्यनुदाहरणमेवेत्यलं प्रपञ्चेन ॥ छ ॥

यदुक्तं शक्तोऽपि हीति यच्च नित्यभेद इति । तदुभयं

— ಪದಾರ್ಥದೀಪಿಕಾ —

ಎಂಬಲ್ಲಿ ಹೇಳಿದ "ಶಬ್ದಾಂತರ"ವನ್ನು ಶ್ರೀಮದಾಚಾರ್ಯರೇ ಬೇರೆ ಕಡೆಯಲ್ಲಿ ಬೇರೆಯಾಗಿ ವ್ಯಾಖ್ಯಾನಿಸಿದ್ದಾರೆ ಪಟದಲ್ಲಿ ಹಾಗು ಪ್ರಾಣಾದಿಗಳಲ್ಲಿ ಅತ್ಯಂತ ಅಭೇದವಿಲ್ಲದಿರುವುದರಿಂದ ಅವುಗಳು ಉದಾಹರಣಗಳೇ ಆಗಲಾರವು ಹೀಗ ಇಲ್ಲಿಯ ವಿಸ್ತರವು ಸಾಕು

ಇನ್ನು- "ಶಕ್ತೋಽಪಿ ಹಿ, ನಿತ್ಯಭೇದಃ" ಎಂಬುದಾಗಿ ಹೇಳಿದ ಎರಡೂ

— ವಿಶೇಷಾರ್ಥಪ್ರದೀಪಿಕಾ —

ಹೇಳಿದ "ವೃತ್ತಿವಿಕಲ್ಪಾನ್ಯಥಾನುಪಪತ್ತಿ" ಯೆಂಬ ಯುಕ್ತಿಯನ್ನು, ಉತ್ತರತ್ರ '- ಸಾಂಖ್ಯಾಧಿಕರಣದಲ್ಲಿ "ಅಸದಕರಣಾತ್" ಎಂಬ ಸಾಂಖ್ಯೋಕ್ತಯುಕ್ತಿಯನ್ನೂ, ವೈಭಾಷಿಕಾಧಿಕರಣದಲ್ಲಿ ಬೌದ್ಧನು ಹೇಳಿದ ಯುಕ್ತಿಯನ್ನೂ ನಿರಾಕರಿಸುವರು, ಹೀಗೆ ಭಾವ "ಅನ್ಯತ್ರ"- ಆರನೆಯ ಅಧ್ಯಾಯ ಛಾಂದೋಗ್ಯ ಭಾಷ್ಯದಲ್ಲಿ "ಸದೇವ ಸೋಮ್ಯ" ಎಂಬ ಶ್ರುತಿಯನ್ನು ವಿಷ್ಣುಪರವಾಗಿ ವ್ಯಾಖ್ಯಾನಿಸಲಾಗಿದೆ ಆದುದರಿಂದ, ಆ ಶ್ರುತಿಯು ಕಾರ್ಯದ ಸತ್ವವನ್ನು ಪ್ರತಿಪಾದಿಸುವ ತಾತ್ಪರ್ಯ ವುಳ್ಳದ್ದೆಂಬುದು ಸರಿಯುಲ್ಲವೆಂದು ಭಾವ ದಾರ್ಷ್ಟಾಂತಿಕದಲ್ಲಿ ವ್ಯತ್ಯಾಸವೆಂಬ ಯುಕ್ತಿಯಿಂದ, ದೃಷ್ಟಾಂತೋಕ್ತಿಪರವಾದ ಪರರ ಎರಡೂ ಸೂತ್ರಗಳ ಮೇಲಣ ವ್ಯಾಖ್ಯಾನವನ್ನು ಪಟೇ ಪ್ರಾಣಾದೌ ಚ" ಇತ್ಯಾದಿ ವಚನದಿಂದ ನಿರಾಕರಿಸು ತ್ತಾರೆ "ಅನುಪಸಂಜಾತವಿಶೇಷತ್ವಂ"= ಅನುಪಸಂಜಾತಃ- ಅವಿದ್ಯಮಾನವಾದ, "ವಿಶೇಷಃ"= ಭೇದವು ಯಾವುದರಲ್ಲಿ ಇದೆಯೋ ಅದು ಅನುಪಸಂಜಾತವಿಶೇಷಃ, ಅಂದರೆ ಅಭೇದವೆಂದು ಅರ್ಥ. ಅತ್ಯಂತ ಅಭೇದವು, ಎರಡೂ ದೃಷ್ಟಾಂತ ಗಳಲ್ಲಿ ಇರುವುದಿಲ್ಲವೆಂದು ಅರ್ಥ ಜಗತ್ತಿನಲ್ಲಿ (ದಾರ್ಷ್ಟಾಂತಿಕದಲ್ಲಿ) ಅತ್ಯಂತ ಉಪಸಂಜಾತವಿಶೇಷವು (ಭೇದವು) ಇರುತ್ತದೆ. ಪಟ ಹಾಗು ಪ್ರಾಣಗಳಲ್ಲಿ (ದೃಷ್ಟಾಂತಗಳಲ್ಲಿ) ಸಂಕೋಚವಿಕಾಸಗಳಷ್ಟೇ ಇರುತ್ತವೆ ಹೀಗೆ ದೃಷ್ಟಾಂತ ದಾರ್ಷ್ಟಾಂತಿಕಗಳಲ್ಲಿ ವ್ಯತ್ಯಾಸವಿರುವುದರಿಂದ ಉದಾಹರಣವಾಗಲಾರದು, ಹೀಗೆ ಇಲ್ಲಿಯ ಭಾವ. ಪಟ ಪ್ರಾಣಾದಿಗಳಲ್ಲಿಯೂ ಸಹ ಅವಸ್ಥಾಂತರವಾಗುವುದೆಂಬ ವಿಶೇಷವಿರುವುದರಿಂದ ಕಾರ್ಯಕಾರಣಗಳು ಅತ್ಯಂತ ಅಭೇದದ ಬಗ್ಗೆ ಉದಾ ಹರಣಗಳಾಗಲಾರವು, ಹೀಗೆ ಇಲ್ಲಿಯ ಭಾವ ಹೆಚ್ಚಿನ ವಿವರಣವನ್ನು ಚಂದ್ರಿಕಾ

शक्तोऽपि भगवान्विष्णुरकर्तुं कर्तुमन्यथा ॥
स्वभिन्नं कारणाभिन्नं भिन्नं विश्वं करोत्यजः ॥

श्रुत्याऽपि साधयति ॥ शक्तोऽपीति । अकर्तुं शक्तोऽपि करोति । अन्यथा विना कारणैस्तद्व्यत्यासेन च कर्तुं शक्तोऽपि नियतैः कारणैः करोतीच्छयेति योज्यम् । स्वस्मान्निमित्तकारणाद्भिन्नम् । उपादान-कारणेनाभिन्नं भिन्नं च । संसारिणो हि विष्टिगृहीता इवेश्वरप्रेरिता

ಉತ್ಪತ್ತಿರಹಿತನಾದ ಭಗವಾನ್ ನಾರಾಯಣನು, ಮಾಡದೇ ಇರಲು ಹಾಗು ಕಾರಣಗಳಿಲ್ಲದೆಯೆ ಅಥವಾ ಕಾರಣಗಳಲ್ಲಿ ವ್ಯತ್ಯಾಸಮಾಡಿಯೂ ಕಾರ್ಯವನ್ನು ಮಾಡಲು, ಸಮರ್ಥನಾಗಿದ್ದರೂ ನಿಮಿತ್ತಕಾರಣದಿಂದ ಭಿನ್ನವಾಗಿಯೂ ಉಪಾದಾನಕಾರಣದಿಂದ ಭಿನ್ನಾಭಿನ್ನವನ್ನಾಗಿಯೂ ಈ ಜಗತ್ತನ್ನು, ಸ್ವೇಚ್ಛಾನುಸಾರನಿಯಮಗಳಿಂದ ತನ್ನ ಅಧೀನವಾದ ಸತ್ವ–ಶಕ್ತ್ಯಾದಿಗಳುಳ್ಳ ಕ್ಲೃಪ್ತ ಕಾರಣಗಳಿಂದ

## — ಪದಾರ್ಥದೀಪಿಕಾ —

ಸಂಗತಿಗಳನ್ನು "ಶಕ್ತೋಽಪಿ" ಇತ್ಯಾದಿ ವಚನದಿಂದ ಸಾಧನ ಮಾಡುತ್ತಾರೆ. ಮಾಡದಿರಲು ಸಮರ್ಥನಾಗಿದ್ದರೂ ಮಾಡುತ್ತಾನೆ. "ಅನ್ಯಥಾ– ಕಾರಣಗಳಿಲ್ಲದೆ ಹಾಗು ವ್ಯತ್ಯಾಸದಿಂದಲೂ ಮಾಡಲು ಸಮರ್ಥನಿದ್ದರೂ "ನಿಯತೈಃ"= ಕ್ಲೃಪ್ತ ಕಾರಣಗಳಿಂದ, ತನ್ನ ಇಚ್ಛೆಗೆ ತಕ್ಕಂತೆ ಮಾಡುತ್ತಾನೆಯೆಂದು ಯೋಜಿಸಿ ಅರ್ಥ ಮಾಡಬೇಕು "ಸ್ವಭಿನ್ನಂ"= ತನ್ನಿಂದ– (ನಿಮಿತ್ತ ಕಾರಣದಿಂದ) ಭಿನ್ನವಾದುದು "ಕಾರಣಾಭಿನ್ನಂ"– ಉಪಾದಾನ ಕಾರಣದಿಂದ ಅಭಿನ್ನವೂ ಭಿನ್ನವೂ ಆದುದು ಸಂಸಾರದಲ್ಲಿರುವವರು ವೇತನ ಭಾಗಿಗಳಾದ ಸೇವಕರ ಹಾಗೆ ಈಶ್ವರ

## — ವಿಶೇಷಾರ್ಥಪ್ರದೀಪಿಕಾ —

ಗ್ರಂಥದಲ್ಲಿ ತಿಳಿಯಬೇಕು. ದೂರದೂರದಲ್ಲಿರುವ ಪದಗಳಿಗೆ ಅನ್ವಯವನ್ನು "ಅಕರ್ತುಂ ಶಕ್ತೋಽಪಿ ಕರೋತಿ" ಎಂಬುದಾಗಿ ತೋರಿಸುತ್ತಾರೆ "ಅನ್ಯಥಾ" ಎಂಬುದು ಮೂಲಾನುವಾದ. "ವಿನಾ ಕಾರಣೈಃ ತದ್ವ್ಯತ್ಯಾಸೇನ ಚ" ಎಂಬುದು ಅದರ ವ್ಯಾಖ್ಯಾನ. "ತದ್ವ್ಯತ್ಯಾಸೇನ ಚ"— ಕಾರಣದ ವ್ಯತ್ಯಾಸದಿಂದ. "ಶಕ್ತೋಽಪಿ ಹಿ" ಎಂಬುದಾಗಿ ಹಿಂದೆ ಹೇಳಿದ ಅರ್ಥದಲ್ಲಿ ಸಂವಾದವು ಹೊರಡುವ ಹಾಗೆ ಶೇಷವನ್ನು ಹೇಳಿ ಯೋಜನವನ್ನು "ನಿಯತೈಃ ಕಾರಣೈಃ ಕರೋತಿ ಇಚ್ಛಯಾ ಇತಿ ಯೋಜ್ಯಂ" ಎಂಬ ವಾಕ್ಯದಿಂದ ತೋರಿಸುತ್ತಾರೆ ಮಾಡದಿರಲು (ಅಕರ್ತುಂ) ಶಕ್ತಿಯು ಎಂಥ ಮಹಿಮೆಯು ? ಎಂಬ ಪ್ರಶ್ನೆಯನ್ನು

इति श्रुतेरवसित उक्तोऽर्थोऽयमशेषत ॥ २-१-६ ॥

अनिष्टमपि धारकप्रयत्नेनाकृत्वा न स्थातुमीशते । न च भगवांस्तथेत्यकर्तुं शक्तोऽपीत्युक्तम् । अशेषतः प्रागिदानीं चोक्तो न तु सन्निहित एवेत्यर्थः ॥ २-१ ६ ॥

॥ ॐ इतरव्यपदेशाद्धिताकरणादिदोषप्रसक्तिः ॐ ॥ अस्मिन्न-

ಸೃಷ್ಟಿಮಾಡುತ್ತಾನೆ. ಹೀಗೆ (ಈ ರೀತಿಯಾಗಿ) ವೇದಗಳಿಂದ, ಪೂರ್ವದಲ್ಲಿಯೂ ಈಗಲೂ ಕೂಡ ಹೇಳಲ್ಪಟ್ಟ ಈ ವಿಷಯವು ನಿರ್ಣಯಿಸಲ್ಪಟ್ಟಿತು ೨-೧-೬

— ಪದಾರ್ಥದೀಪಿಕಾ —

(ಸ್ವಾಮಿ–ಒಡೆಯ) ನಿಂದ ಪ್ರೇರಿತರಾಗಿ, ಅನಿಷ್ಟವಾದುದನ್ನೂ ಸಹ ಧಾರಕನ ಪ್ರಯತ್ನದಿಂದ ಮಾಡದೆ ಇರಲು ಸಮರ್ಥರಾಗುವುದಿಲ್ಲ ಆದರೆ ಪರಮಾತ್ಮನೂ ಹಾಗೆ ಮಾಡದೆ ಇರಲು ಅಸಮರ್ಥನಲ್ಲ ಈ ಅಭಿಪ್ರಾಯದಿಂದ "ಅಕರ್ತುಂ ಶಕ್ತೋಽಪಿ" ಎಂಬುದಾಗಿ ಹೇಳಿದ್ದಾರೆ "ಅಶೇಷತಃ"= ಪೂರ್ವದಲ್ಲಿಯೂ ಈಗ್ಯೂ ಹೇಳಲ್ಪಟ್ಟದ್ದು, ಕೇವಲ ಸನ್ನಿಹಿತವಾದುದಷ್ಟೇ ಅಲ್ಲ ಹೀಗೆ ಅರ್ಥ ॥೨, ೧, ೬॥

॥ ಓಂ ॥ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ॥ ಓಂ ॥ " ಈ ಅಧಿಕರಣದಲ್ಲಿ ಶ್ರುತಿಪ್ರಾಪ್ತವಾದ ಜೀವಕರ್ತೃತ್ವ ಪಕ್ಷವು ವಿಸ್ತರದಿಂದ

— ವಿಶೇಷಾರ್ಥಪ್ರದೀಪಿಕಾ —

"ಸಂಸಾರಿಣೋ ಹಿ" ಈ ವಾಕ್ಯದಿಂದ ಉತ್ತರಿಸುತ್ತಾರೆ "ವಿಷ್ಟಿಗೃಹೀತಾಃ"= ವೇತನವನ್ನು ಕೊಡದೆಯೆ ರಾಜಭಟರು ಬಲಾತ್ಕಾರದಿಂದ ಎಳೆದು ಕೆಲಸಕ್ಕ ಯಾರನ್ನು ಹಚ್ಚಿರುತ್ತಾರೋ ಅವರು "ಧಾರಣಪ್ರಯತ್ನೇನ"– ಮಾಡದಿರಲು ಅನುಕೂಲವಾದ ದಾರ್ಢ್ಯವನ್ನು ತಂದು ಕೊಡುವ ಪ್ರಯತ್ನದಿಂದ ಮಾಡದೆ ಇರುವವನಾಗಿ, ಹೀಗೆ ಅರ್ಥ "ಧಾರಕ" ಎಂಬ ವಾರದಲ್ಲಿ-ಸುಮ್ಮನಿರುವಂತೆ ಮಾಡುವ ಪ್ರಯತ್ನದಿಂದ ಕಾರ್ಯಮಾಡದೆ, ಹೀಗೆ ಅರ್ಥ "ಅಶೇಷತಃ" ಎಂಬುದು ಅನುವಾದವು " ಪ್ರಾಗಿದಾನೀಂ ಚ '' ಎಂಬುದು ವ್ಯಾಖ್ಯಾನವು "ಶಕ್ತೋಽಪಿ'' ಎಂಬುದಾಗಿ ಹಿಂದೆ ಹೇಳಿದ ಅರ್ಥ ಹಾಗು "ನಿತ್ಯಭೇದೇ'' ಎಂಬುದಾಗಿ ಹೇಳಿದ ಅರ್ಥ, ಇವುಗಳ ವಿಷಯದಲ್ಲಿ, ಹೀಗೆ ಅರ್ಥ ೨-೧-೬

' ಸ್ವಯಂ ಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ'' ಎಂಬುದಾಗಿ ಹೇಳಿದುದರಿಂದ, ಈ (ಮುಂದೆ ಹೊರಡಲಿರುವ) ಅನುವ್ಯಾಖ್ಯಾನವು ಭಾಷ್ಯದ ವಿವರಣ ಪರವಾಗಿ ಹೊರಟಿದೆಯೆಂದು ತೋರಿಸುತ್ತ ಭಾಷ್ಯವಾಕ್ಯ

धिकरणे जीवकर्तृत्वपक्षः श्रुतिप्राप्तो विस्तरान्निराक्रियत इति भाष्यम् । अत्र वक्तव्यम् । किमत्र जीवस्य सर्वथा कर्तृत्वं निराक्रियते । उतेश्वराधीनं तदङ्गीकृत्य स्वातन्त्र्यमात्रम् । नाद्यः । तथा सति कर्ता शास्त्रार्थवत्त्वादित्यादिवक्ष्यमाणविरोधापत्तेः । स्वतःकर्तृत्वानुपपत्तिरित्यादिविशेषणवैयर्थ्यप्रसङ्गाच्च । न द्वितीयः । हिताकरणादिदोष-

— ಪದಾರ್ಥದೀಪಿಕಾ —

ನಿರಾಕರಿಸಲ್ಪಡುತ್ತದೆ" ಎಂಬುದಾಗಿ ಭಾಷ್ಯವು ಹೊರಟಿದೆ ಇಲ್ಲಿ ಜೀವನಿಗೆ ಯಾವದೇ ವಿಧದಿಂದಲೂ ಕರ್ತೃತ್ವವಿಲ್ಲವೆಂಬುದನ್ನು ಇಲ್ಲಿ ಹೇಳಲಾಗುವವೋ? ಅಥವಾ ಈಶ್ವರನ ಅಧೀನವಾದ ಕರ್ತೃತ್ವವನ್ನು ಒಪ್ಪಿ, ಕೇವಲ ಜೀವ ಸ್ವಾತಂತ್ರ್ಯವನ್ನಷ್ಟೇ ನಿರಾಕರಿಸಲಾಗುವದೋ? ಎಂಬುದನ್ನು ಹೇಳಬೇಕು ಮೊದಲನೆಯ ಪಕ್ಷವು ಯುಕ್ತವಲ್ಲ ಏಕೆಂದರೆ- ಹಾಗಾದಲ್ಲಿ "ಕರ್ತಾ ಶಾಸ್ತ್ರಾರ್ಥ ವತ್ವಾತ್ " ಇತ್ಯಾದಿಯಾಗಿ ಮುಂದೆ ಹೇಳಲಾಗುವ ವಿಷಯದಿಂದ ವಿರೋಧವು ಬರುತ್ತದೆ. ಮತ್ತು "ಸ್ವತಃ ಕರ್ತೃತ್ವಾನುಪಪತ್ತಿಃ" ಈ ಮುಂತಾದ ವಿಶೇಷಣ ಗಳಿಗೆ ವ್ಯರ್ಥತೆಯೂ ಬರಬೇಕಾಗುತ್ತದೆ. ಎರಡನೆಯ ಪಕ್ಷವು ಸರಿಯಾದುದಲ್ಲ " ಹಿತಾಕರಣಾದಿದೋಷಪ್ರಸಕ್ತಿಃ " ಈ ಮುಂತಾದ ಸೂತ್ರಗಳಿಗೆ ಜೀವ

— ವಿಶೇಷಾರ್ಥಪ್ರದೀಪಿಕಾ —

ವನ್ನು ಓದಿ ಅದರ ವಿವರಣಕ್ಕೆ ಕಾರಣವಾದ ಅನುಪಪತ್ತಿಯನ್ನು ''ಅಸ್ಮಿನ್'' ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ

''ಇತ್ಯಾದಿ ವಕ್ಷ್ಯಮಾಣ ವಿರೋಧಾಪತ್ತೇಃ'' – ಆದಿಪದದಿಂದ "ವಿಹಾರೋಪದೇಶಾತ್" ಈ ಮುಂತಾದ ಸೂತ್ರಗಳನ್ನು ಸಂಗ್ರಹಿಸಬೇಕು ಇಲ್ಲಿ ಕರ್ತೃತ್ವವಿದೆಯೆಂಬುದನ್ನು ಸಮರ್ಥಿಸಲಾಗುವುದು ಆದುದರಿಂದ ವಿರೋಧವು

''ವಿಶೇಷಣವೈಯ್ಯರ್ಥ್ಯ ಪ್ರಸಂಗಾತ್'' – ''ಅಶ್ಮಾದಿವಚ್ಚ ತದನುಪಪತ್ತಿಃ ಎಂಬ ಸೂತ್ರದ ಮೇಲಿನ ಭಾಷ್ಯದಲ್ಲಿ 'ಚೇತನತ್ವೇಽಪಿ ಅಶ್ಮಾದಿವತ್ ಅಸ್ವ ತಂತ್ರತ್ವಾತ್ ಸ್ವತಃ ಕರ್ತೃತ್ವಾನುಪಪತ್ತಿಃ ಜೀವಸ್ಯ'' ಎಂಬುದಾಗಿ ಹೇಳಲಾಗಿದೆ ಅಲ್ಲಿ "ಸ್ವತಃ ಕರ್ತೃತ್ವಾನುಪಪತ್ತಿಃ ಜೀವಸ್ಯ'' ಎಂಬಲ್ಲಿ "ಸ್ವತಃ'' ಎಂಬ ವಿಶೇಷಣಕ್ಕೆ ವ್ಯರ್ಥತೆಯು ಬರಬೇಕಾಗುವುದೆಂಬ ಪ್ರಸಂಗವು ಬರುತ್ತದೆ ಹೀಗೆ ಭಾವ "ಆದಿ''ಪದದಿಂದ ''ಜೀವೇ ದೃಶ್ಯಮಾನೋಽಪಿ ಕಾರ್ಯೋಪ ಸಂಹಾರೋ ಅಸ್ವಾತಂತ್ರ್ಯಾತ್ ಪರಕೃತ ಏವ'' (ಜೀವನು ಮಾಡಿದ ಕಾರ್ಯದ

प्रसक्तिरित्यादिसूत्राणां स्वातन्त्र्यनिराकरणपरत्वेन शक्ययोजनत्वेऽपि कृत्स्नप्रसक्तिर्निरवयत्वशब्दकोपो वेत्यस्य सूत्रस्याशक्यव्याख्यानत्वात्। इदं हि सूत्रं सर्वथा कर्तृत्वं निराकुर्वदुपलभ्यते। तथा हि। कर्तृत्वं कृत्स्नैकदेशाभ्यां व्याप्तम्। तत्र कृत्स्नप्रसक्तावनुभवविरोधः।

— ಪದಾರ್ಥದೀಪಿಕಾ —

ಸ್ವಾತಂತ್ರ್ಯ ನಿರಾಕರಣ ಪರವಾಗಿ ಯೋಜನೆಯನ್ನು ಮಾಡಲು ಶಕ್ಯವಿದ್ದರೂ "ಕೃತ್ಸ್ನಪ್ರಸಕ್ತಿರ್ನಿರವಯತ್ವ ಶಬ್ದಕೋಪೋವಾ ಎಂಬೀ ಸೂತ್ರಕ್ಕೆ ವ್ಯಾಖ್ಯಾನ ಮಾಡುವುದು ಅಶಕ್ಯವಾಗುತ್ತದೆ ಏಕೆಂದರೆ ಈ ಸೂತ್ರವು ಜೀವ ಕರ್ತೃತ್ವವನ್ನು ಸರ್ವಥಾ ನಿಷೇಧಿಸುವುದಾಗಿ ಕಂಡುಬರುತ್ತದೆ ಹೇಗಂದರೆ- "ಕರ್ತೃತ್ವವು ಸರ್ವಸಾಮರ್ಥ್ಯದಿಂದ ಹಾಗು ಏಕದೇಶದಿಂದ ವ್ಯಾಪ್ತವಾಗಿದೆ (ನಿಯತ ಸಂಬಂಧ ಹೊಂದಿದೆ) ಇವೆರಡರಲ್ಲಿ ಸರ್ವಸಾಮರ್ಥ್ಯವು ಪ್ರಸಕ್ತವಾದರೆ (ತೃಣೋದ್ಧಾರಾದಿ ಕಾರ್ಯದಲ್ಲಿ ಸರ್ವಸಾಮರ್ಥ್ಯವನ್ನು ತೊಡಗಿಸುವನೆಂದರೆ) ಅನುಭವವಿರೋಧವು ಬರುತ್ತದೆ ಏಕದೇಶಸಾಮರ್ಥವನ್ನು

— ವಿಶೇಷಾರ್ಥಪ್ರದೀಪಿಕಾ —

ಉಪಸಂಹಾರವು (ಅವಸಾನ-ಮುಕ್ತಾಯವು) ಅಸ್ವಾತಂತ್ರ್ಯ ಕಾರಣದಿಂದ ಪರಮಾತ್ಮನಿಂದ ಮಾಡಲ್ಪಟ್ಟದ್ದೇ ಆಗಿದೆ) ಎಂಬ ಭಾಷ್ಯೋಕ್ತವಾಕ್ಯಗಳನ್ನು ಹೇಳಿದ ವಿಶೇಷಣಗಳನ್ನು ಸಂಗ್ರಹಿಸಿರುತ್ತಾರ ಕರ್ತೃವೇಇಲ್ಲವೆಂದು ಹೇಳುವುದಿದ್ದರೆ "ಅಶ್ಮಾದಿವತ್ ಅಸ್ವತಂತ್ರತ್ವಾತ್' ಎಂಬುದರ ಬದಲಾಗಿ "ಅಶ್ಮಾದಿವತ್ ಅಕರ್ತೃತ್ವಾತ್" ಎಂಬುದಾಗಿ ಹೇಳುತ್ತಿದ್ದರೆಂದು ಭಾವವು "ಶಕ್ಯಯೋಜನತ್ವೇಽಪಿ "ಯದಿ ಜೀವಃ ಸ್ವತಂತ್ರಕರ್ತಾ ಇತ್ಯುಚ್ಯತೇ ತರ್ಹಿ ಹಿತಾಕರಣಂ ಅಹಿತಕರಣಂ ಚ ನಸ್ಯಾತ್। ನಹಿ ಪ್ರೇಕ್ಷಾವಾನ್ ಸ್ವಹಿತಂ ನ ಕರೋತಿ ಸ್ವಾಹಿತಂ ಚ ಕರೋತಿ ಇತಿ ಸಂಭವತಿ ತಥಾಚ ಸಕಲಸ್ಯಾಪಿ ಜನಸ್ಯ ನಿಜನಿರ್ದುಃಖಃಪೂರ್ಣಾನಂದತ್ವ ಪ್ರಸಕ್ತಿಃ॥ ಇತ್ಯತೋ ನ ಸ್ವತಂತ್ರಕರ್ತಾ'' (ಜೀವನು ಸ್ವತಂತ್ರ ಕರ್ತೃವೆಂದು ಹೇಳಿದರೆ "ಹಿತವನ್ನು ಮಾಡದಿರುವುದು, ಅಹಿತವನ್ನು ಮಾಡುವುದೆಂಬ ಎಂಬೀ ಸಂಗತಿಯು ಸರಿಹೊಂದುವುದಿಲ್ಲ ಏಕೆಂದರ ಬುದ್ಧಿವಂತನು ತನ್ನ ಹಿತವನ್ನು ಮಾಡುವುದಿಲ್ಲ. ಅಹಿತವನ್ನು ಮಾಡಿಕೊಳ್ಳುತ್ತಾನೆ'' ಎಂಬುದು ಸಂಭವಿಸುವುದಿಲ್ಲ ಆದುದರಿಂದ ಎಲ್ಲ ಜನರಿಗೂ ತಮ್ಮ ನಿರ್ದುಃಖ ಪೂರ್ಣಾನಂದವಿರಲೆಂಬ ಪ್ರಸಂಗವು ಬರುತ್ತದೆ. ಆದುದರಿಂದ ಜೀವನು ಸ್ವತಂತ್ರ ಕರ್ತೃವಲ್ಲ) ಹೀಗೆ ಯೋಜನಮಾಡಲು ಶಕ್ಯವಿದ್ದರೂ, ಹೀಗೆ ಅರ್ಥ

एकदेशाङ्गीकारे चाथ यः स जीवः स नित्यो निरवयव इत्यनंशत्व-श्रुतिव्याकोपः स्यात् । न हि सामर्थ्यापरपर्यायं प्रयत्नादिरूप कर्तृत्व-मस्माकं जीवाद्भिन्नम् । येन तस्य विचित्रत्वेऽपि जीवस्य निरंशत्वं न व्याहन्येत । ततो व्यापकनिवृत्त्या व्याप्यं कर्तृत्वमपि निवर्तत इति खल्वत्र तात्पर्यं प्रतीयते । प्रसङ्गस्य विपर्यये पर्यवसानावश्यम्भावात् ।

## — ಪದಾರ್ಥದೀಪಿಕಾ —

ತೊಡಗಿಸುವದೆಂದು ಅಂಗೀಕರಿಸಿದಲ್ಲಿ "ಅಥ ಯಃ ಸ ಜೀವಃ ಸ ನಿತ್ಯೋ ನಿರವಯವಃ'' ಎಂಬುದಾಗಿರುವ ಅಂಶವಿಲ್ಲವೆಂದು ಹೇಳುವ ಶ್ರುತಿಯಿಂದ ವಿರೋಧವು (ಶ್ರುತಿವ್ಯಾಕೋಪವು) ಬಂದೀತು! ಏಕೆಂದರೆ ಸಾಮರ್ಥ್ಯವೆಂಬ ಬೇರೆ ಹೆಸರಿನಿಂದ ಕರೆಯಲ್ಪಟ್ಟ ಪ್ರಯತ್ನಾದಿ ರೂಪವಾದ ನಮ್ಮ ಕರ್ತೃತ್ವವು ಜೀವರಿಂದ ಭಿನ್ನವಾದುದಲ್ಲ ಹಾಗೆ ಜೀವನಿಂದ ಬೇರೆಯಾಗಿದ್ದರೆ, ಅದು ವಿಚಿತ್ರವಾಗಿದ್ದರೂ ಜೀವನ ನಿರಂಶತ್ವವು ಅಳಿಯುತ್ತಿರಲಿಲ್ಲ ಆದುದರಿಂದ, ವ್ಯಾಪಕದ ನಿವೃತ್ತಿಯಿಂದ ವ್ಯಾಪ್ಯವಾದ ಕರ್ತೃತ್ವವೂ ನಿವೃತ್ತವಾಗುತ್ತದೆ'' ಎಂಬುದಾಗಿಯೇ ಈ ಸೂತ್ರದ ತಾತ್ಪರ್ಯವೆಂದು ತೋರುತ್ತದೆ ಏಕೆಂದರೆ ತರ್ಕಕ್ಕೆ ವಿಪರ್ಯಯ ಪರ್ಯವಸಾನವೆಂಬ ಅಂಗವು ಅವಶ್ಯವಾಗಿ ಇರಲೇಬೇಕು.

## — ವಿಶೇಷಾರ್ಥಪ್ರದೀಪಿಕಾ —

"ಕೃತ್ಸ್ನ ಪ್ರಸಕ್ತಿಃ'' ಎಂಬಲ್ಲಿ ''ತೃಣೋದ್ಧಾರಾದೌ ಕಾರ್ಯೇ" (ಹುಲ್ಲು ಎತ್ತುವುದು ಮುಂತಾದ ಕಾರ್ಯದಲ್ಲಿ) ಎಂಬುದನ್ನು ಸೇರಿಸತಕ್ಕದ್ದು "ಪ್ರಯತ್ನಾದಿರೂಪಂ" ಎಂಬಲ್ಲಿ "ಆದಿ" ಪದದಿಂದ, ಜೀವನಲ್ಲಿ ಕಂಡುಬರುವ ಬುದ್ಧಿ ಇಚ್ಛಾ ಇವುಗಳನ್ನು ಸಂಗ್ರಹಿಸಬೇಕು

'ವ್ಯಾಪಕನಿವೃತ್ತ್ಯಾ" – ಕೃತ್ಸ್ನ-ಏಕದೇಶ ಸಾಮರ್ಥ್ಯರೂಪವ್ಯಾಪಕದ ಇಲ್ಲದಿರುವಿಕೆಯಿಂದ "ಅತ್ರ"= "ಕೃತ್ಸ್ನಪ್ರಸಕ್ತಿಃ ಇತ್ಯಾದಿ ಸೂತ್ರದಲ್ಲಿ ಈ ಸೂತ್ರದಲ್ಲಿ "ಜೀವನಿಗೆ ಸರ್ವಸಾಮರ್ಥ್ಯದಿಂದ ಪ್ರವೃತ್ತಿಯನ್ನಂಗೀಕರಿಸಿದರೆ ತೃಣೋದ್ಧಾರಾದಿ ಕಾರ್ಯಗಳಲ್ಲಿ ಸರ್ವಸಾಮರ್ಥ್ಯದಿಂದ ಪ್ರವೃತ್ತಿಯಾಗಲಿ! ಏಕದೇಶಸಾಮರ್ಥ್ಯದಿಂದ ಪ್ರವೃತ್ತಿಯನ್ನಂಗೀಕರಿಸಿದರೆ ನಿರವಯತ್ವ ಪ್ರತಿಪಾದಕ ಶಬ್ದ(ಶ್ರುತಿ) ವಿಕೋಪವು ಬರಲಿ! ಹೀಗೆ ಆಪಾದ್ಯವನ್ನಷ್ಟೇ ಹೇಳಿದೆ ಆದುದರಿಂದ ಕರ್ತೃತ್ವದ ಇಲ್ಲದಿರುವಿಕೆಯಬಗ್ಗೆ ತಾತ್ಪರ್ಯವನ್ನು ಹೇಳಿದುದು ಹೇಗೆ? ಈ ಆಶಂಕೆಯನ್ನು "ಪ್ರಸಂಗಸ್ಯ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ "ವಿಪರ್ಯ

अथ जीवकर्तृत्वस्येश्वराधीनतानङ्गीकार एवैतौ प्रसङ्गावुक्तौ न कर्तृत्वमात्रे । तथा चेश्वराधीनत्वमेव विपर्ययपर्यवसानलभ्यं भविष्यतीति चेन्न । स्यादप्येवं जीवकर्तृत्वस्येश्वराधीनत्वाङ्गीकारेणेमौ प्रसङ्गौ शक्यसमाधानौ स्याताम् । न चैवं; पराधीनेनापि खल्वनेन कृत्स्नेन वा कर्तव्यमेकदेशेन वा । तृतीयप्रकाराभावात् । भावे वा तेनैवापराधीनत्वेऽपि कर्तृत्वोपपत्तेः । अतो विपर्ययापर्यवसानान्नैवं व्याख्यानं युक्तमिति कर्तृत्वाभाव एव तात्पर्यम् । तथा च वक्ष्यमाण-

— ಪದಾರ್ಥದೀಪಿಕಾ —

ಇನ್ನು- ಜೀವನ ಕರ್ತೃತ್ವವು ಈಶ್ವರಾಧೀನವೆಂದು ಒಪ್ಪದ ಪಕ್ಷದಲ್ಲಿಯೇ ಈ ತರ್ಕಗಳೆರಡನ್ನು ಹೇಳಲಾಗಿದೆ, ಹೊರತು ಕೇವಲ ಕರ್ತೃತ್ವದ ಪಕ್ಷದ ಮೇಲೆ ಹೇಳಲಾಗಿಲ್ಲ ಆದುದರಿಂದ, ಆ ಜೀವಕರ್ತೃತ್ವವು ಈಶ್ವರಾಧೀನವೆಂಬುದಾಗಿಯೇ ವಿಪರ್ಯಯದಲ್ಲಿ ತರ್ಕಕ್ಕೆ ಪರ್ಯವಸಾನಮಾಡುವುದರಿಂದ ಸಿದ್ಧವಾಗುವದೆಂದು ಶಂಕಿಸಬಾರದು ಏಕೆಂದರೆ ಜೀವಕರ್ತೃತ್ವವು ಈಶ್ವರಾಧೀನವೆಂದು ಒಪ್ಪುವುದರಿಂದ ಇವೆರಡು ತರ್ಕಗಳಿಗೆ ಸಮಾಧಾನವನ್ನು ಹೇಳುವುದು ಶಕ್ಯವೆಂದಾದಾಗ್ಗೆ ಹಿಂದೆ ಹೇಳಿದಂತೆ ಆಗಬಹುದು ಆದರೆ ಹಾಗ ಸಮಾಧಾನ ಹೇಳುವುದು ಶಕ್ಯವಿಲ್ಲ ಏಕಂದರ ಪರಾಧೀನನಾದ ಈ ಜೀವನು ಸಮಗ್ರರೂಪದಿಂದಲೋ ಏಕದೇಶಸಾಮರ್ಥ್ಯದಿಂದಲೋ ಕಾರ್ಯವನ್ನು ಮಾಡತಕ್ಕದ್ದು ಏಕಂದರ ಮೂರನಯ ತರಹವಿರುವುದಿಲ್ಲ ಇದ್ದರೆ, ಅದರಿಂದಲೇ ಸ್ವಾತಂತ್ರ್ಯವು (ಅಪರಾಧೀನತೆಯು) ಇದ್ದರೂ ಕರ್ತೃತ್ವವು ಯುಕ್ತವಾಗುತ್ತದೆ ಆದುದರಿಂದ ವಿಪರ್ಯಯದಲ್ಲಿ ತರ್ಕಕ್ಕ ಪರ್ಯವಸಾನವಿಲ್ಲವಾದುದರಿಂದ ಹೀಗೆ ವ್ಯಾಖ್ಯಾನಿಸುವುದು ಯುಕ್ತವಲ್ಲ ಆದುದರಿಂದ, ಜೀವನಿಗೆ ಕರ್ತೃತ್ವವಿಲ್ಲವೆಂಬ ಅರ್ಥ

— ವಿಶೇಷಾರ್ಥಪ್ರದೀಪಿಕಾ —

ಯಾಪರ್ಯವಸಾನಾತ್"– ವಿಪರ್ಯಯದಲ್ಲಿ ಪರ್ಯವಸಾನಹೊಂದಿದ ಪರಾಧೀನ ಕರ್ತೃತ್ವವೂ ಸಹ ಕೃತ್ಸ್ನಪ್ರಸಕ್ತ್ಯಾದಿಯುಕ್ತಿಬಾಧಿತವಾಗುವುದರಿಂದ ವಿಪರ್ಯಯಪರ್ಯವಸಾನವಿಲ್ಲವೆಂದು ಭಾವ

"ನೈವಂ"- "ಅಥ ಜೀವಕರ್ತೃತ್ವಸ್ಯ" ಇತ್ಯಾದಿ ವಚನದಿಂದ ಹೇಳಲ್ಪಟ್ಟ ವ್ಯಾಖ್ಯಾನವು " ವಕ್ಷ್ಯಮಾಣ ವಿರೋಧಃ" "ಕರ್ತಾ ಶಾಸ್ತ್ರಾರ್ಥವತ್ವಾತ್ " ಎಂಬುದಾಗಿ ಮುಂದೆ ಹೇಳಲ್ಪಡುವ ಸೂತ್ರಗಳಿಂದ ವಿರೋಧವು

अनंशस्यापि जीवस्य किञ्चित्सामर्थ्ययोजनं ॥
कार्येषु य करोत्यद्धा नमस्तस्मै स्वयम्भुवे ॥

विरोधः । अथ वस्तुतो नास्त्येव जीवस्य कर्तृत्वमाभिमानिकं तु तद्भिर्याविरोधः । मैवम् । विहारोपदेशादित्यादिना वास्तवस्यैव तस्य साधयिष्यमाणत्वात् । अतो दुर्घटमेतदधिकरणमित्यतो द्वितीयपक्ष मङ्गीकृत्य प्रसङ्गौ जीवकर्तृत्वस्येश्वराधीनतानङ्गीकारविषयौ व्याकरिष्यन्नादौ तावदीश्वराधीनताङ्गीकारे प्रसङ्गनिवृत्तिप्रकारमागमवाक्यादाहरणेन दर्शयति ॥ अनंशस्यापीति ॥ किञ्चित्सामर्थ्ययोजनं कार्यानु-

ಅಂಶವಿಲ್ಲದವನಾಗಿದ್ದರೂ ಜೀವನಿಗೆ ಕಾರ್ಯಕ್ಕೆ ಅನುರೂಪವಾದ ಸಾಮರ್ಥ್ಯ ಪ್ರಯೋಗವನ್ನು, ಕಾರ್ಯಗಳಲ್ಲಿ ಯಾವನು ಚನ್ನಾಗಿ ಮಾಡುತ್ತಾನೆಯೋ ಅಂಥ ಸ್ವತಂತ್ರನಾದ ಶ್ರೀ ನಾರಾಯಣನಿಗೆ ನಮಸ್ಕಾರವು ಈ ವಚನದಿಂದ ಈ ಅಭಿಪ್ರೇತವಾದ ಅರ್ಥವು ನಿಶ್ಚಯಿಸಲ್ಪಟ್ಟದ್ದಾಗಿದೆ

## — ಪದಾರ್ಥದೀಪಿಕಾ —

ದಲ್ಲಿಯೇ ತಾತ್ಪರ್ಯವಿರುತ್ತದ ಆದುದರಿಂದ ಮುಂದೆ ಹೇಳಲಾಗುವ ವಿಷಯದಿಂದ ವಿರೋಧವು ಬರುತ್ತದೆ ಇನ್ನು ವಾಸ್ತವವಾಗಿ ಜೀವನಿಗೆ ಕರ್ತೃತ್ವವು ಇಲ್ಲವೇ ಇಲ್ಲ ಆದರೆ ಆ ಕರ್ತೃತ್ವವು ಅಭಿಮಾನಿಕವಾದುದು ಆದುದರಿಂದ ವಿರೋಧವಿಲ್ಲ ಹೀಗೆ ಶಂಕಿಸಬಾರದು ಏಕೆಂದರೆ "ವಿಹಾರೋಪದೇಶಾತ್" ಇತ್ಯಾದಿ ಸೂತ್ರಗಳಿಂದ ವಾಸ್ತವವಾದ ಕರ್ತೃತ್ವವನ್ನೇ ಸಾಧನಮಾಡಲಾಗುವದು ಆದುದರಿಂದ ಈ ಅಧಿಕರಣವು ದುರ್ಘಟವು ಹೀಗೆ ಪೂರ್ವಪಕ್ಷವು ಬರುವುದರಿಂದ, ಎರಡನೆಯ ಪಕ್ಷವನ್ನು ಅಂಗೀಕರಿಸಿ, ತರ್ಕಗಳು ಜೀವಕರ್ತೃತ್ವವು ಈಶ್ವರಾಧೀನವಲ್ಲವೆಂದು ಹೇಳುವ ಪಕ್ಷದಮೇಲೆ ಹೊರಟಿರುತ್ತದೆಯೆಂದು ವ್ಯಾಖ್ಯಾನಿಸುತ್ತ, ಮೊದಲು ಈಶ್ವರಾಧೀನವಾದುದು ಜೀವಕರ್ತೃತ್ವವೆಂಬುದನ್ನು ಒಪ್ಪಿದರೆ, ತರ್ಕದ ಪರಿಹಾರ (ಸಮಾಧಾನ) ವಾಗುವ ಪ್ರಕಾರವನ್ನು "ಅನಂಶಸ್ಯಾಪಿ" ಇತ್ಯಾದಿ ಅನುವ್ಯಾಖ್ಯಾನದಿಂದ ತೋರಿಸುತ್ತಾರೆ "ಕಿಂಚಿತ್ ಸಾಮ

## — ವಿಶೇಷಾರ್ಥಪ್ರದೀಪಿಕಾ —

"ವಾಸ್ತವಸ್ಯೈ"ವ- ಮುಕ್ತಿಯಲ್ಲಿರುವ ವಿಹಾರ ಕರ್ತೃತ್ವವನ್ನು "ವಿಹಾರೋಪದೇಶಾತ್' ಎಂಬಲ್ಲಿ ಹೇಳಿದುದರಿಂದ, ಕರ್ತೃತ್ವವು ವಾಸ್ತವವಾದುದು

## ॥ ॐ इतरव्यपदेशाद्धिताकरणादिदोषप्रसक्तिः ॐ ॥

रूपसामर्थ्यप्रयोगम् । स्वयम्भुवे स्वतन्त्राय । इति वचनादवसित: अयमभिप्रेतोऽर्थ इत्यनुवर्तते ।

ततश्चैतदुक्तं भवति । यदि जीवः परमेश्वराधीनतया कर्ता अङ्गीक्रियते । तदोपपद्यते एव तस्य कर्तृत्वम् । प्रसङ्गयोः समाधातुं शक्यत्वात । अनंशत्वस्याभ्युपगमे (न) हि न निरवयत्वशब्दकोपः । अनंशस्यापि परमेश्वराचिन्त्यशक्तिवशेन कार्यानुरूपसामर्थ्यप्रयोग-सम्भवान्न कृत्स्नप्रसक्तिरिति । एतच्चानुपदं स्फुटीभविष्यति ।

— ಪದಾರ್ಥದೀಪಿಕಾ —

ರ್ಥ್ಯಯೋಜನಾಂ"- ಕಾರ್ಯಕ್ಕೆ ಅನುರೂಪವಾದ ಸಾಮರ್ಥ್ಯದ ಪ್ರಯೋಗವನ್ನು "ಸ್ವಯಂಭುವೇ"- ಸ್ವತಂತ್ರನಾದವನಿಗೆ. "ಇತಿ ವಚನಾದವಸಿತೋಽಯಮಭಿಪ್ರೇತೋಽರ್ಥಃ" (ಹೀಗೆ ವಚನವಿರುವುದರಿಂದ, ಅಭಿಪ್ರೇತವಾದ ಈ ಅರ್ಥವು ಹೊರಡುತ್ತದೆ) ಎಂಬ ವಾಕ್ಯಶೇಷವು ಅನುವೃತ್ತಿಗೊಳಿಸಲ್ಪಟ್ಟಿದೆ

ಇಲ್ಲಿ ಈ ವಿಷಯವನ್ನು ಹೇಳಿದ್ದಾಗುತ್ತದೆ – "ಜೀವನು ಪರಮೇಶ್ವರನ ಆಧೀನವಾಗಿ ಕರ್ತೃವೆಂದು ಅಂಗೀಕರಿಸುವುದಾದರೆ, ಆಗ ಅವನಿಗೆ ಕರ್ತೃತ್ವವು ಹೊಂದುತ್ತದೆ ಏಕೆಂದರೆ ತರ್ಕಗಳಿಗೆ ಸಮಾಧಾನ ಹೇಳಲು ಶಕ್ಯವಿದೆ ಅಂಶವಿಲ್ಲ (ಜೀವರಿಗೆ) ವೆಂಬುದನ್ನು ಅಂಗೀಕರಿಸಿದರೆ ನಿರವಯವತ್ವವನ್ನು ಪ್ರತಿಪಾದಿಸುವ ಶ್ರುತಿಯ (ಶಬ್ದದ) ವ್ಯಾಕೋಪವಿಲ್ಲ ಅಂಶವಿಲ್ಲದಿದ್ದರೂ ಜೀವನಿಗೆ ಪರಮೇಶ್ವರನ ಅಚಿಂತ್ಯ ಅದ್ಭುತ ಶಕ್ತಿಯ ವಶದಿಂದ ಕಾರ್ಯಕ್ಕೆ ತಕ್ಕವಾದ ಸಾಮರ್ಥ್ಯದ ಪ್ರಯೋಗವು ಸಂಭವಿಸುವುದರಿಂದ, ಕೃತ್ಸ್ನಪ್ರಸಕ್ತಿಯೆಂಬ

— ವಿಶೇಷಾರ್ಥಪ್ರದೀಪಿಕಾ —

"ಪ್ರಸಂಗನಿವೃತ್ತಿ ಪ್ರಕಾರಂ" ಕೃತ್ಸ್ನ ಪ್ರಸಕ್ತಿ ಮುಂತಾದ ಯುಕ್ತಿಬಾಧ ವೆಂಬ ಅನಿಷ್ಟಾಪಾದನ(ಪ್ರಸಂಗ)ದ ನಿವೃತ್ತಿಯಾಗುವ ಪ್ರಕಾರವನ್ನು "ಪ್ರಸಂಗಯೋಃ" - ಕೃತ್ಸ್ನಪ್ರಸಕ್ತಿ, ನಿರವಯವತ್ವ ಶ್ರುತಿವ್ಯಾಕೋಪಗಳೆಂಬ ಪ್ರಸಂಗಗಳು "ಅನುಪದಂ"-ನೈವಮೇವ ಹಿ ಚೇತನಾ" ಇತ್ಯಾದಿ ಅನುವ್ಯಾಖ್ಯಾನಗಳಲ್ಲಿ ಆದುದರಿಂದ, "ವ್ಯತಿರೇಕೋ ಗಂಧವತ್ ಎಂಬ ಸೂತ್ರದಲ್ಲಿ ಹೇಳಲಾಗುವ ಜೀವ ಸಾಂಶತ್ವದಿಂದ ವಿರೋಧವಿಲ್ಲವೆಂದು ಭಾವವು.

यदि भागेन कार्येषु जीवशक्तिं न योजयेत् ॥
हरिस्तदा हि सर्वत्र कृत्स्नयत्नोऽंशिताऽपि वा ॥

एवमुपोद्घातप्रक्रियया विपर्ययपर्यवसानोपपत्तिमुक्त्वेदानीं विवक्षितार्थे सूत्रं योजयति ॥ यदीति । भागेन कार्यानुगुणांशेन । अत्र यदीश्वराधीनतया कर्ता न स्यादिति वक्तव्ये यदि भागेनेत्यादिवचनं प्रसङ्गस्फुटीकरणार्थम् । ईश्वराधीनत्वप्रकारप्रपञ्चनार्थं च । सर्वत्र तृणादानादावपि कृत्स्नयत्नोऽंशिता वा प्रसज्येत । तथा चानुभव-

ಒಂದು ಪಕ್ಷದಲ್ಲಿ ಹರಿಯು ಕಾರ್ಯಗಳಲ್ಲಿ ಕಾರ್ಯದ ಅನುಗುಣವಾದ ಅಂಶದಿಂದ ಜೀವನಿಗೆ ಶಕ್ತಿಯನ್ನು ಯೋಜನಮಾಡುವುದಿಲ್ಲವಾದರೆ– ಆಗ ತೃಣಾದಾನ ಮುಂತಾದ ಎಲ್ಲ ಕಾರ್ಯಗಳಲ್ಲಿಯೂ ಸಮಗ್ರ ಪ್ರಯತ್ನವುಳ್ಳವನೂ ಇಲ್ಲವೆ ಏಕದೇಶ ಪ್ರವೃತ್ತಿಯಲ್ಲಿ ಅಂಶಿಯೂ(ಅಂಶವುಳ್ಳವನು) ಆಗಬೇಕಾಗುವದು (ಆದರೆ ಇದು ಶ್ರುತಿಅನುಭವಗಳಿಂದ ವಿರುದ್ಧವು, ಆದ್ದರಿಂದ ಈಶ್ವರಾಧೀನನಾಗಿಯೇ ಜೀವನು ಕರ್ತೃವು )

— ಪದಾರ್ಥದೀಪಿಕಾ —

ದೋಷಕ್ಕೂ ಅವಕಾಶವಿಲ್ಲ" ಹೀಗೆ ಇದು ಮುಂದೆ ಕೂಡಲೇ ಸ್ಪಷ್ಟವಾಗುತ್ತದೆ

ಹೀಗೆ ಉಪೋದ್ಘಾತಪ್ರಕ್ರಿಯೆಯಿಂದ ವಿಪರ್ಯಯಪರ್ಯವಸಾನವು ಯುಕ್ತವೆಂಬುದನ್ನು ಹೇಳಿ, ಈಗ ಅಭಿಪ್ರೇತವಾದ (ಹೇಳಬೇಕಾದ) ಅರ್ಥದ ವಿಷಯದಲ್ಲಿ ಸೂತ್ರವನ್ನು "ಯದಿ" ಇತ್ಯಾದಿ ವಚನದಿಂದ ಯೋಜಿಸುತ್ತಾರೆ. "ಭಾಗೇನ" – ಕಾರ್ಯಕ್ಕೆ ಅನುಗುಣವಾದ ಅಂಶದಿಂದ ಇಲ್ಲಿ "ಯದೀಶ್ವರಾಧೀನತಯಾ ಕರ್ತಾ ನ ಸ್ಯಾತ್" (ಈಶ್ವರಾಧೀನವಾಗಿ ಜೀವನು ಕರ್ತೃವಾಗದಿದ್ದರೆ) ಎಂಬುದಾಗಿ ಹೇಳುವುದರ ಬದಲಾಗಿ "ಯದಿ ಭಾಗೇನ" ಇತ್ಯಾದಿಯಾಗಿ ಹೇಳಿದುದು, ತರ್ಕವನ್ನು ಸ್ಪಷ್ಟೀಕರಿಸುವುದಕ್ಕಾಗಿ ಅಥವಾ ಈಶ್ವರನ ಅಧೀನತೆಯು ಹೇಗೆಂಬ ಪ್ರಕಾರವನ್ನು ವಿಶದಪಡಿಸುವುದಕ್ಕಾಗಿ "ಸರ್ವತ್ರ'= ತೃಣವನ್ನು ತೆಗೆದು ಕೊಳ್ಳುವುದು ಮುಂತಾದ ವ್ಯಾಪಾರಗಳಲ್ಲಿಯೂ 'ಕೃತ್ಸ್ನ

— ವಿಶೇಷಾರ್ಥಪ್ರದೀಪಿಕಾ —

"ಸರ್ವತ್ರ" ಎಂಬುದು ಮೂಲಾನುವಾದ "ತೃಣಾದಾನಾದಾವಪಿ" ಎಂಬುದು ವ್ಯಾಖ್ಯಾನವು "ಅಂಶಿತಾ" – ಇಲ್ಲಿ "ಏಕದೇಶದಿಂದ ಪ್ರವೃತ್ತಿಯಾದಲ್ಲಿ" ಎಂಬದನ್ನು ಸೇರಿಸಿ, ಸಾಂಶತೆಯು ಬರುವುದೆಂದು ಅರ್ಥಮಾಡಬೇಕು

श्रुतिविरोधः। तस्मात्परमेश्वराधीन एव जीवः कर्तेति शेषः। न चापाधिकृताशकल्पनया कर्तृत्वस्याविद्यकत्वेन वोपपत्तिः। अनंशस्यापीत्यादिप्रमाणासिद्धोपपन्नोपपादकपरित्यागेनाप्रामाणिकानुपपन्नस्वीकारस्यानुक्तत्वात्।

ननु जीवशक्त्यैवेदं घटताम्। मैवम्। तस्याघटितघटकाचिन्त्यशक्त्यभावात्। भावे वा हिताकरणादिदोषप्रसक्तिः। न ह्यत्रा-

## — ಪದಾರ್ಥದೀಪಿಕಾ —

ಯತ್ನಃ"= ಸಂಪೂರ್ಣವಾದ ಸಾಮರ್ಥ್ಯ (ಪ್ರಯತ್ನರೂಪ) ವುಳ್ಳವನಾಗುವ ಇಲ್ಲವ ಅಂಶಿತಾ"= ಅಂಶವುಳ್ಳವನಾಗುವ "ಪ್ರಸಜ್ಯತೇ" = ಪ್ರಸಂಗವು ಬರುತ್ತದೆ ಹೀಗಾದಲ್ಲಿ ಅನುಭವ ಶ್ರುತಿಗಳಿಂದ ವಿರೋಧವು ಬರುತ್ತದೆ "ತಸ್ಮಾತ್ ಪರಮೇಶ್ವರಾಧೀನ ಏವ ಜೀವಃ ಕರ್ತಾ" (ಆದುದರಿಂದ ಪರಮೇಶ್ವರನ ಅಧೀನನಾಗಿಯೇ ಜೀವನು ಕರ್ತೃವು) ಎಂಬುದಾಗಿ ಶೇಷವು ಉಪಾಧಿಮೂಲಕವಾಗಿ ಅಂಶಗಳ ಕಲ್ಪನೆಯಿಂದಾಗಲೀ ಕರ್ತೃತ್ವವು ಅವಿದ್ಯಾಮೂಲಕವೆಂಬ ಕಲ್ಪನೆಯಿಂದಾಗಲೀ ಇದು ಯುಕ್ತವೆಂದು ಹೇಳಬಾರದು ಏಕೆಂದರೆ–"ಅನಂಶಸ್ಯಾಪಿ" ಈ ಮುಂತಾದ ಪ್ರಮಾಣಸಿದ್ಧವಾದ ಹಾಗು ಯುಕ್ತಿಯುಕ್ತವಾದ ಉಪಪಾದಕವನ್ನು ಪರಿತ್ಯಜಿಸಿ, ಅಪ್ರಾಮಾಣಿಕ ಹಾಗು ಅಯುಕ್ತವಾದುದನ್ನು ಸ್ವೀಕರಿಸುವುದು ಯುಕ್ತಿಪೂಪ್ಷಿತವಾಗಲಾರದು

ಇನ್ನು– "ಜೀವನ ಶಕ್ತಿಯಿಂದಲೇ (ಕರ್ತೃತ್ವವು) ಯುಕ್ತವಾಗಬಹುದು ಎಂದು ಶಂಕಿಸಬಾರದು ಏಕೆಂದರೆ– ಅಘಟಿತವಾದುದನ್ನು ಘಟನಮಾಡುವ ಅಚಿಂತ್ಯವಾದ ಶಕ್ತಿಯು ಜೀವನಿಗೆ ಇರುವುದಿಲ್ಲ ಇರುವುದಾದರೆ ಹಿತಾಕರಣ

## — ವಿಶೇಷಾರ್ಥಪ್ರದೀಪಿಕಾ —

"ಅನುಭವಶ್ರುತಿವಿರೋಧಃ'' – ಕ್ರಮದಿಂದ ಕೃತ್ಸ್ನಪ್ರಸಕ್ತಿಯು ಅನುಭವದಿಂದ, ಸಾಂಶತ್ವವು ನಿರವಯವತ್ವಶ್ರುತಿಯಿಂದ ವಿರುದ್ಧವೆಂದು ವಿರೋಧವನ್ನು ತಿಳಿಯಬೇಕು

''ಹಿತಾಕರಣಾದಿದೋಷಪ್ರಸಕ್ತಿಃ'' – ಹಿತಾಕರಣ ಅಹಿತಕರಣಗಳು ದೋಷವೆಂದು ಹೇಳಿದುದು ಅಯುಕ್ತವಾಗುವ ಪ್ರಸಂಗವು ಬರುತ್ತದೆ ಏಕೆಂದರೆ ಅಚಿಂತ್ಯಶಕ್ತಿಯುಳ್ಳವನಿಗೆ ಹಿತಾಕರಣ ಮುಂತಾದುದು ಯುಕ್ತವಲ್ಲವೆಂದು ಭಾವ

धिकरणे पूर्वपक्षिणा महदादिसकलकार्यकर्तृत्वं जीवस्याशङ्कितम् । किन्तु घटादिकर्तृत्वम् । तत्तावदनुभवसिद्धत्वात्कुलालादीनां न त्यक्तुं शक्यम् । तत्रेश्वरस्यापि कर्तृत्वाङ्गीकारे कल्पनागौरव स्यादित्यतो नेश्वरस्य सर्वकर्तृत्वमिति । तथा च कथमचिन्त्यशक्तिप्रसक्तिः ।

ननु च व्यतिरेकोगन्धवदिति जीवानामनेकरूपतां सूत्रकारः

— ಪದಾರ್ಥದೀಪಿಕಾ —

ಮುಂತಾದ ದೋಷಗಳು ಪ್ರಸಕ್ತವಾಗುತ್ತವೆ ಏಕೆಂದರೆ ಈ ಅಧಿಕರಣದಲ್ಲಿ ಪೂರ್ವಪಕ್ಷಿಯು "ಮಹದಾದಿ ಸಕಲ ಕಾರ್ಯಗಳಿಗೆ ಜೀವನು ಕರ್ತನು" ಎಂಬುದಾಗಿ ಆಶಂಕಿಸಿಲ್ಲ ಆದರೆ ಘಟಾದಿಗಳ ಬಗ್ಗ ಜೀವನಿಗೆ ಕರ್ತೃತ್ವವಿದೆಯೆಂಬುದನ್ನು ಶಂಕಿಸಿದ್ದಾನೆ ಆ ಕರ್ತೃತ್ವವಂತೂ ಅನುಭವಸಿದ್ಧವಾದುದರಿಂದ ಕುಲಾಲಾದಿಗಳಿಗೆ ಅದನ್ನು (ಅಲ್ಲಗಳೆಯಲು) ಬಿಡಲು ಶಕ್ಯವಿಲ್ಲ ಅದರಲ್ಲಿ ಈಶ್ವರನಿಗೂ ಕರ್ತೃತ್ವವನ್ನು ಅಂಗೀಕರಿಸಿದರೆ ಕಲ್ಪನಾಗೌರವದೋಷವು ಬರುವದು ಈ ಕಾರಣದಿಂದ ಈಶ್ವರನಿಗೆ ಸರ್ವಕರ್ತೃತ್ವವಿಲ್ಲ ಆದುದರಿಂದ ಅಚಿಂತ್ಯಶಕ್ತಿಯ ಪ್ರಸಕ್ತಿಯು ಹೇಗೆ ?

ಇನ್ನು— ' ವ್ಯತಿರೇಕೋ ಗಂಧವತ್ " ಎಂಬ ಸೂತ್ರಾಂಶದಿಂದ, ಜೀವರಿಗೆ ಅನೇಕರೂಪಗಳಿವೆಯೆಂದು ಸೂತ್ರಕಾರರೇ ಮುಂದೆ ಹೇಳುವರು ಮತ್ತು

— ವಿಶೇಷಾರ್ಥಪ್ರದೀಪಿಕಾ —

ಮಹದಾದಿಸಕಲಕಾರ್ಯಕರ್ತೃತ್ವವು ಜೀವನಿಗೆ ಇದೆಯೆಂದು ಪೂರ್ವಪಕ್ಷವನ್ನು ಮಾಡುವ ಪೂರ್ವವಾದಿಯ ಮತದಲ್ಲಿ ಜೀವನಿಗೆ ಅಚಿಂತ್ಯಶಕ್ತಿಯು ಇಲ್ಲವೆಂಬುದು ಹೇಗೆ? ಈ ಆಶಂಕೆಯನ್ನು ''ನಹಿ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ. ಇನ್ನು ''ದೇವಾದಿವದಪಿ ಲೋಕೇ'' ಎಂಬ ಸೂತ್ರದಲ್ಲಿ, ಈಶ್ವರನಿಲ್ಲವೆಂಬುದನ್ನು ಸೂಚಿಸಿದುದರಿಂದ, ಜೀವಕರ್ತೃತ್ವವನ್ನು ಹೇಳುವ ಪೂರ್ವಪಕ್ಷವು ಸೂಚಿಸಲ್ಪಟ್ಟಿದುದರಿಂದ ಈ ಸೂತ್ರ ವಿರೋಧವು ಹಾಗು ಟೀಕಾಗ್ರಂಥದಲ್ಲಿ ಎಲ್ಲದರಲ್ಲೂ ಜೀವಕರ್ತೃಕ ಪೂರ್ವಪಕ್ಷವನ್ನು ಹೇಳುವುದರಿಂದ ಆ ಟೀಕಾವಿರೋಧವು; ಹೀಗೆ ಶಂಕಿಸಬಾರದು- ಏಕೆಂದರೆ ಚಂದ್ರಿಕಾ ಗ್ರಂಥದಲ್ಲಿ ''ಮಹದಾದಿ ಕಾರ್ಯಕರ್ತೃತ್ವವನ್ನು ಅಂಗೀಕರಿಸಿದರೆ ಅನುಭವ ವಿರೋಧವೆಂಬ ಪಕ್ಷದ ಬಗ್ಗೆ ಅಸಂತೋಷವೇ ವಿನಾ ಮಹದಾದಿ ಕಾರ್ಯಗಳಲ್ಲಿ ಜೀವಕರ್ತೃತ್ವ ಪಕ್ಷವು ಸರ್ವಥಾ ಅಭಿಪ್ರೇತವಲ್ಲವೆಂದಲ್ಲ, ಹೀಗೆ ತಾತ್ಪರ್ಯವನ್ನು ಹೇಳಲಾಗಿದೆ

अंशिनो हि पटाद्या ये भिन्नैरेव परस्परम् ॥
अंशैरंशिन उच्यन्ते नैवमेव हि चेतना ॥

एव वक्ष्यति । उत्क्रान्तिगत्यागतीनामित्यणुत्वं च । न चाणोर्युगपदनेकरूपत्वं विना सांशतयोपपद्यत इति सांगताऽपि तत एव सिद्धा । तत्कथमत्र निरवयवत्वशब्दकोपो वेत्यवादीदिति गूढाभिसन्धेराशङ्कामविदिताभिप्राय इव परिहरति ॥ अंशिनो हीत्यादिना

ಪಟ ಮುಂತಾದ ಪ್ರಸಿದ್ಧವಾದ ಅಂಶಿಗಳು ಯಾವವೊ ಆವುಗಳು ಪರಸ್ಪರವಾಗಿಯೂ ಅಂಶಿಯಿಂದಲೂ ಭಿನ್ನಾಭಿನ್ನಗಳೇ ಆದ (ತಂತ್ವಾದಿ) ಅಂಶಗಳಿಂದ, ಅಂಶಿಗಳೆಂದು ಹೇಳಲ್ಪಡುತ್ತವ ಆದರೆ ಚೇತನರು, ಪಟಾದಿಗಳ ಹಾಗೆ ಹಿಂದೆ ಹೇಳಿದ (ಭಿನ್ನಾಭಿನ್ನ) ಅಂಶಗಳಿಂದ ಅಂಶಿಗಳು ಆಗುವುದಿಲ್ಲ. ಆದುದರಿಂದ,

## — ಪದಾರ್ಥದೀಪಿಕಾ —

"ಉತ್ಕ್ರಾಂತಿಗತ್ಯಾಗತೀನಾಂ" ಎಂಬ ಸೂತ್ರದಿಂದ ಜೀವರಿಗೆ ಅಣುತ್ವವನ್ನು ಹೇಳುವರು ಆದರೆ ಅಣುವಾದ ಜೀವನಿಗೆ ಏಕಕಾಲದಲ್ಲಿ ಅನೇಕ ರೂಪಗಳು ಅವನಿಗೆ ಅಂಶಗಳಿರಲಾರದೆ (ಸಾಂಶತೆಯನ್ನು ಬಿಟ್ಟರೆ) ಯುಕ್ತವಾಗಲಾರವು ಆದುದರಿಂದ, ಸೂತ್ರಗಳಿಂದಲೇ ಸಾಂಶತೆಯೂ ಸಿದ್ಧಿಸುತ್ತದೆ ಆದುದರಿಂದ, ಈ ಅಧಿಕರಣದಲ್ಲಿ "ನಿರವಯವತ್ವಶಬ್ದಕೋಪೋ ವಾ" ಎಂಬುದಾಗಿ ಹೇಳಿದುದು ಹೇಗೆ ? ಹೀಗಿರುವ ಗೂಢಾಭಿಸಂಧಿಯ ಆಶಂಕೆಯನ್ನು, ಅಭಿಪ್ರಾಯವನ್ನು ತಿಳಿಯದವನ ಹಾಗೆ "ಅಂಶಿನೋ ಹಿ" ಇಲ್ಲಿಂದಾರಂಭಿಸಿದ ಎರಡೂವರೆ ಶ್ಲೋಕದಿಂದ ಪರಿಹರಿಸುತ್ತಾರೆ ಅಲ್ಲಿ "ಬಹುರೂಪತಾಖ್ಯಾ" ಎಂಬೀ ವಚನ

## — ವಿಶೇಷಾರ್ಥಪ್ರದೀಪಿಕಾ —

"ಗೂಢಾಭಿಸಂಧೇಃ" -ಮುಂದೆ ಹೇಳಲಿರುವ ಜೀವನಿಗೆ ಬಹುರೂಪತ್ವ ಅಣುತ್ವ, ಇವೆರಡರ ಅನ್ಯಥಾಅನುಪಪತ್ತಿಯೆಂಬ ಯುಕ್ತಿಯಿಂದ ಸಿದ್ಧವಾದ ಸಾಂಶತೆ, ಭಿನ್ನಾಂಶರಹಿತತ್ವ (ಭಿನ್ನವಾದ ಅಂಶಗಳಿಲ್ಲದಿರುವುದು) ಈ ಧರ್ಮಗಳಿಂದ, ''ಕೃತ್ಸ್ನಪ್ರಸಕ್ತಿ, ನಿರವಯವತ್ವಶಬ್ದಕೋಪ''ಗಳೆಂಬ ಎರಡು ದೋಷಗಳ ಪರಿಹಾರವು ಸಂಭವಿಸುವುದರಿಂದ, ಸ್ವತಂತ್ರವಾದ ಜೀವಕರ್ತೃತ್ವವೇ ಸಂಭವಿಸುವಾಗ ಈಶ್ವರಾಧೀನಕರ್ತೃತ್ವವನ್ನು ಕಲ್ಪಿಸುವುದು ವ್ಯರ್ಥವೆಂಬ ಅಭಿಪ್ರಾಯವು ಗೂಢವಾದುದು ಹೀಗೆ ಇಲ್ಲಿ ತಿಳಿಯಬೇಕು ಅವಿದಿತಾಭಿಪ್ರಾಯ ಇವ" - ಅಭಿಪ್ರಾಯವನ್ನು ತಿಳಿದವರಾಗಿದ್ದರೆ, ಬಹುತ್ವೇನಾವಿನಾಭಾವಾತ್"

अतोऽनंशिन इत्येव श्रुतिरेतेषु वर्तते ॥
अप्यनेकस्वरूपेषु विशेषादेव केवलम् ॥

**सार्धेन श्लोकद्वयेन । तत्र बहुस्वरूपताख्येत्यनेन वक्ष्यमाणमभ्युपैति । बह्वित्यनेकत्वोपलक्षणम् । बहुस्वरूपतया ख्यायत इति बहुस्वरूपताख्या । तुशब्दः श्रुतिनिषेध्याया वैशिष्ट्यद्योतकः । तेषु चेतनेषु । हिशब्दः प्रमाणप्रसिद्धिं द्योतयति । अत एवाम्त्येवेत्यवधारणम् ।**

ಪ್ರಸಿದ್ಧ ಅಂಶಿ (ಪಟಾದಿ) ಗಳಿಂದ ವ್ಯತ್ಯಾಸವಿದ್ದುದರಿಂದಲೇ, ಅಭೇದವಿದ್ದರೂ ಭೇದ ಕಾರ್ಯಕಾರಿಯೂ ಭೇದ ಪ್ರತಿನಿಧಿಯೂ ಆದ ವಿಶೇಷದಿಂದಲೇ ಬಹು ಸ್ವರೂಪವುಳ್ಳ (ಸಾಂಶರಾದ) ಈ ಚೇತನರುಗಳಲ್ಲಿ, "ಅನಂಶಿನಃ" (ಅಂಶವಿಲ್ಲದವರು) ಇತ್ಯಾದಿ ಶ್ರುತಿಯು ಹೊರಟಿರುತ್ತದೆ

## — ಪದಾರ್ಥದೀಪಿಕಾ —

ದಿಂದ, ಮುಂದೆ ಹೇಳಲಾಗುವ ವಿಷಯವನ್ನು ಒಪ್ಪುತ್ತಾರೆ 'ಬಹು" ಎಂಬ ಶಬ್ದವು " ಅನೇಕ " ಎಂಬ ಅರ್ಥವನ್ನು ಸಂಗ್ರಹಿಸುತ್ತದೆ 'ಬಹು ಸ್ವರೂಪತಯಾ ಖ್ಯಾಯತೇ" (ಬಹು ಸ್ವರೂಪಗಳಿಂದ ಹೇಳಲ್ಪಡುತ್ತದೆ) ಈ ವ್ಯುತ್ಪತ್ತಿಯಿಂದ "ಬಹು ಸ್ವರೂಪತಾಖ್ಯಾ" ಎಂದೆನಿಸುತ್ತದೆ "ತು' ಶಬ್ದವು ಶ್ರುತಿಯಿಂದ ನಿಷೇಧಿಸಲ್ಪಡುವ ಸಾಂಶತೆಗೆ ವೈಶಿಷ್ಟ್ಯವನ್ನು ತೋರಿಸುವಂತಹದು "ತೇಷು"— ಚೇತನಗಳಲ್ಲಿ "ಹಿ" ಶಬ್ದವು ಪ್ರಮಾಣಪ್ರಸಿದ್ಧಿಯನ್ನು ಸ್ಪಷ್ಟಪಡಿಸುತ್ತದೆ ಆದುದರಿಂದಲೇ "ಅಸ್ತ್ಯೇವ" ಎಂಬುದಾಗಿ ಅವಧಾರಣವು ಇಲ್ಲಿಯ ಅರ್ಥವಿದು—

## — ವಿಶೇಷಾರ್ಥಪ್ರದೀಪಿಕಾ —

ಈ ಮುಂತಾದುದನ್ನಷ್ಟೇ ಹೇಳುತ್ತಿದ್ದರು ಈ ಸಾರ್ಧಶ್ಲೋಕವನ್ನು ಹೇಳತಕ್ಕದ್ದಲ್ಲ ಹೀಗೆ ಇಲ್ಲಿಯ ಭಾವ

"ವಕ್ಷ್ಯಮಾಣಂ'' ಅಣುತ್ವ, ಬಹುರೂಪತ್ವ, ಅದರಿಂದ ಲಭಿಸುವ ಸಾಂಶತ್ವ ಇವುಗಳನ್ನು ಎರಡುರೂಪಗಳ ಸಂಗ್ರಹಕ್ಕಾಗ "ಬಹ್ವಿತ್ಯನೇಕತ್ವೋಪಲಕ್ಷಣಂ" ಎಂಬ ವಚನವನ್ನು ಹೇಳಿದ್ದಾರೆ ಆದುದರಿಂದ ಮೂಲದಲ್ಲಿ 'ಅನೇಕಸ್ವರೂಪೇಷು'' ಇತ್ಯಾದಿಯಾಗಿ ಹೇಳಿರುತ್ತಾರೆ

"ಬಹುಸ್ವರೂಪತಾಖ್ಯಾ" ಇಲ್ಲಿ "ಬಹುಸ್ವರೂಪತಯಾ ಖ್ಯಾಯತೇ ಇತಿ" ಎಂಬುದಾಗಿ ವಿಗ್ರಹ "ಖ್ಯಾಯತೇ" ಎಂಬಲ್ಲಿ ಕರ್ಮಣಿವ್ಯುತ್ಪತ್ತಿಯು ಇದರಿಂದ, "ಬಹುಸ್ವರೂಪತ್ವವನ್ನು ಹೇಳುವ ವಚನದ ಅನ್ಯಥಾ ಅನುಪಪತ್ತಿಯಿಂದ ತಿಳಿ

ततश्चायमर्थः । अस्त्येव वक्ष्यमाणानेकस्वरूपताऽणुत्वं च तदन्यथानुपपत्तिसिद्धा सांशता च प्रामाणिकस्य त्यक्तुमशक्यत्वादिति । तर्हि कथमत्र तद्विरुद्धमुक्तमित्यत उक्तमंशिन इत्यादि । आद्यो हिशब्दः प्रमाणप्रसिद्धौ । द्वितीयो यस्मादित्यर्थे । ये पटाद्या अंशिनः प्रसिद्धास्ते परस्परं भिन्नैरेवांशैरंशिना च वक्ष्यमाणप्रकारेण भिन्ना-

— ಪದಾರ್ಥದೀಪಿಕಾ —

"ಮುಂದೆ ಹೇಳಲಾಗುವ ಅನೇಕ ಸ್ವರೂಪವುಳ್ಳದ್ದಾಗಿರುವಿಕೆಯೂ ಅಣುತ್ವವೂ ಜೀವರಿಗೆ ಇದ್ದೇ ಇದೆ ಮತ್ತು ಸಾಂಶತೆಯನ್ನು ಒಪ್ಪದಿದ್ದಲ್ಲಿ ಇದು ಸಿದ್ಧವಾಗುವುದಿಲ್ಲವಾದುದರಿಂದ, ಈ ಅನ್ಯಥಾ ಅನುಪಪತ್ತಿಯಿಂದ ಸಿದ್ಧವಾದ ಸಾಂಶತೆಯೂ ಇದೆ ಏಕೆಂದರೆ ಪ್ರಾಮಾಣಿಕವಾದುದನ್ನು ಬಿಡುವುದು ಅಶಕ್ಯವಾದುದು" ಹೀಗ ಹಾಗಾದರ ಈ ಅಧಿಕರಣದಲ್ಲಿ, ಮುಂದ ಹೇಳಲಾಗುವುದರ ವಿರುದ್ಧವಾದುದನ್ನು ಹೇಳಿದುದು ಹೇಗೆ? ಎಂಬ ಆಶಂಕೆಯನ್ನು ಪರಿಹರಿಸಲು, "ಅಂಶಿನಃ" ಇತ್ಯಾದಿಯಾಗಿ ಹೇಳಿದ್ದಾರ ಮೊದಲನೆಯ 'ಹಿ" ಶಬ್ದವು ಪ್ರಮಾಣಪ್ರಸಿದ್ಧಿಯೆಂಬ ಅರ್ಥವನ್ನು ಹೇಳುತ್ತದ ಎರಡನೆಯ "ಹಿ" ಶಬ್ದವು "ಯಸ್ಮಾತ್" (ಯಾವ ಕಾರಣದಿಂದ) ಎಂಬ ಅರ್ಥದಲ್ಲಿ ಇದೆ ಪಟ ಮಂತಾದ ಪ್ರಸಿದ್ಧವಾದ ಅಂಶಿ (ಅಂಶವುಳ್ಳವು)ಗಳು ಯಾವವೋ ಅವು ಪರಸ್ಪರ ಭಿನ್ನಗಳೇ ಆದ ಅಂಶಗಳಿಂದ ಹಾಗು, ಅಂಶಿಯಿಂದ ಮುಂದ ಹೇಳಲಾಗುವ ರೀತಿಯಿಂದ

— ವಿಶೇಷಾರ್ಥಪ್ರದೀಪಿಕಾ —

ಯಲ್ಪಟ್ಟ" ಎಂಬ ಅರ್ಥವು ಲಭಿಸುತ್ತದೆ ಇದು "ಸಾಂಶತಾ" ಎಂಬುದರ ವಿಶೇಷಣವು

"ಶ್ರುತಿ ನಿಷೇಧ್ಯಾಯಾಃ" –"ಅಥ ಯಃ ಸಜೀವಃ ಸನಿತ್ಯಃ ನಿರವಯವಃ" ಎಂಬ ಶ್ರುತಿಯಿಂದ ನಿಷೇಧಿಸಲ್ಪಡುವ ಸಾಂಶತೆಗೆ, "ಪರಸ್ಪರವಾಗಿಯೂ ಅಂಶಿಯಿಂದಲೂ ಭಿನ್ನಾಂಶವಾಗಿರುವುದು," ಎಂಬ ವೈಶಿಷ್ಟ್ಯವನ್ನು ತೋರಿಸುತ್ತದೆ. "ತು ಶಬ್ದವು ಹೀಗೆ ಅರ್ಥ

"ಖ್ಯಾ" ಎಂಬ ಪದದ ಅರ್ಥವನ್ನು "ತದನ್ಯಥಾನುಪಪತ್ತಿಸಿದ್ಧಾ "ಎಂಬ ವಚನನಿಂದ ಹೇಳಿದ್ದಾರೆ "ಅತ್ರ"–"ನಿರವಯವತ್ವಶಬ್ದಕೋಪೋ ವಾ" ಎಂಬ ಸೂತ್ರದಲ್ಲಿ, "ವಿರುದ್ಧಂ"=ಮುಂದೆ ಹೇಳಲಾಗುವ ಅನೇಕರೂಪತ್ವಕ್ಕೆ ವಿರುದ್ಧವಾದ ನಿರವಯವತ್ವವು ಹೇಗೆ ಹೇಳಲ್ಪಟ್ಟಿತು? ಹೀಗೆ ಅರ್ಥ ಇಲ್ಲಿ ಹೇಳಲ್ಪ

भिन्नैरेव न त्वत्यन्ताभिन्नैस्तन्त्वादिभिरंशैरंशिन उच्यन्ते। चेतनास्त्वेव-मेव पटादिवदुक्तरूपैरंशैरंशिनो न भवन्ति । किन्तु परस्परमंशिना चात्यन्ताभिन्नैः । यस्मादेवमतः प्रसिद्धांशिवैधर्म्यादेवानेकस्वरूपेषु तत एव सांशेष्वप्येतेषु चेतनेष्वनंशिन इति श्रुतिर्वर्तते । न तु सर्वथा अंशराहित्याभिप्रायेण । अतो न विरोध इति ।

ननु यदि भेदो नास्ति कथं तर्ह्यनेकत्व तस्य भेदव्याप्त-

— ಪದಾರ್ಥದೀಪಿಕಾ —

ಭಿನ್ನಾಭಿನ್ನಗಳೇ ಅದ ಅಂಶಗಳಿಂದ ಅಂಶಿಗಳೆಂದು ಹೇಳಲ್ಪಡುವವೇ ವಿನಾ ಅತ್ಯಂತ ಅಭಿನ್ನವಾದ ತಂತು ಮುಂತಾದ ಅಂಶಗಳಿಂದ ಅಂಶಿಗಳೆಂದು ಹೇಳಲ್ಪಡುವುದಿಲ್ಲ. ಆದರೆ ಚೇತನರು ಮಾತ್ರ ಇದರಂತೆಯೇ ಪಟಾದಿಗಳ ಹಾಗ ಹಿಂದೆ ಹೇಳಿದಂಥ ಅಂಶಗಳಿಂದ ಅಂಶಿಗಳೆಂದಾಗುವುದಿಲ್ಲ ಆದರೆ ಪರಸ್ಪರವಾಗಿಯೂ ಅಂಶಿಯಿಂದಲೂ ಅತ್ಯಂತ ಅಭಿನ್ನಗಳಾದ ಅಂಶಗಳಿಂದ ಅಂಶಿಗಳಾಗುತ್ತಾರೆ ಹೀಗಿರುವ ಕಾರಣದಿಂದ, ಪ್ರಸಿದ್ಧವಾದ ಪಟಾದಿ ಅಂಶಿಗಳಿಂದ ವ್ಯತ್ಯಾಸವಿರುವುದರಿಂದಲೇ, ಅನೇಕ ಸ್ವರೂಪವುಳ್ಳ, ಆದುದರಿಂದಲೇ ನಾಂಶರಾದ ಈ ಚೇತನಗಳ ಬಗ್ಗೆ "ಅನಂಶಿನಃ" (ಅಂಶವುಳ್ಳವರಲ್ಲ) ಎಂಬ ಶ್ರುತಿಯು ಹೊರಟಿರುತ್ತದೆ ಹೊರತಾಗಿ ಸರ್ವಥಾ ಅಂಶಗಳೇ ಇಲ್ಲವೆಂಬ ಅಭಿಪ್ರಾಯದಿಂದ ಆ ಶ್ರುತಿಯು ಹೊರಟಿಲ್ಲ ಆದುದರಿಂದ ವಿರೋಧವಿಲ್ಲ " ಹೀಗೆ ಅರ್ಥ

ಇನ್ನು– ಭೇದವಿಲ್ಲದಿದ್ದಲ್ಲಿ ಅನೇಕತ್ವವು ಹೇಗೆ ? ಏಕೆಂದರ ಅನೇಕತ್ವವು

— ವಿಶೇಷಾರ್ಥಪ್ರದೀಪಿಕಾ —

ಡದ "ಭಿನ್ನಾಭಿನ್ನೈಃ" ಎಂಬುದನ್ನು ಏಕೆ ಹೇಳುವುದೆಂಬ ಆಶಂಕೆಯನ್ನು "ವಕ್ಷ್ಯಮಾಣಪ್ರಕಾರೇಣ" ಎಂಬ ವಚನದಿಂದ ಪರಿಹರಿಸುತ್ತಾರೆ "ಅಂಶಿನೋಽಂಶೈರ-ಭೇದೋಽಯಂ ಅಂಶೇನ ತು ಭಿದಾ ಭಿದಾ॥ ಸರ್ವಪ್ರತ್ಯಕ್ಷವಿಷಯಃ ಕಥಮೇವ ಹ್ಯಪೋದ್ಯತೇ,' ಎಂಬ, ವೈಶೇಷಿಕಾಧಿರಣದಲ್ಲಿ ಸಮವಾಯ ನಿರಾಸಪ್ರಸ್ತಾವದಲ್ಲಿ ಹೇಳುವ ರೀತಿಯಿಂದ, ಹೀಗೆ ಅರ್ಥ "ಹಸ್ತವಿತಸ್ತಿ" ಮುಂತಾದ ಅಂಶಗಳಿಂದ ಅತ್ಯಂತ ಅಭೇದವಿರುವುದರಿಂದ, "ತಂತ್ವಾದಿಭಿಃ' ಎಂಬುದಾಗಿ ಹೇಳಿರುತ್ತಾರೆ

"ಅನಂಶಿನಃ ಇತಿ ಶ್ರುತಿಃ"= ಹಿಂದೆ ಹೇಳಿದ ನಿರವಯತ್ವ ಪ್ರತಿಪಾದವಾದ "ಅಥ ಯಃ ಸ ಜೀವಃ, ಸ ನಿತ್ಯಃ ನಿರವಯವಃ" ಎಂಬುದು

बहुस्वरूपताख्या हि तेष्वस्त्येव हि सांशता ॥

त्वात् । कथं चांशित्वम् । मत्वर्थस्य भेदेन विनाऽनुपपत्तेरित्यत उक्तं विशेषादेवेति । भेदाभावेऽपि केवलं तत्प्रतिनिधेर्विशेषादेवानेकस्वरूपेष्विति योजना । यद्वाऽप्यनेकस्वरूपेष्वित्यनेनैव वक्ष्यमाणमङ्गीकृत्यांशिन इत्यादिना विरोधः परिहृतः । तत्र भेदाभावे कथमनेकत्वमंशित्वं चेत्याशङ्कां विशेषादेवेत्यादिपादत्रयेण परिहरति । केवलमेव भेदेन विनैव तेषु बहुस्वरूपता तया ख्यायमाना सांशता चास्ति । कथम् । विशेषादेवेति । कुत एतत्कल्प्यते । श्रुतिद्वयविरोधादेवेति हिशब्देनाह । अत्र जीवस्येति प्रकृतेऽपि यच्चेतना

---

ಅನೇಕ ಸ್ವರೂಪವುಳ್ಳವರೆಂಬ ಉಕ್ತಿಯು ಅನ್ಯಥಾಅನುಪಪತ್ತಿಯಿಂದ ತಿಳಿದು ಬಂದ ಸಾಂಶತೆಯೂ ಆ ಚೇತನರಲ್ಲಿ ಇದ್ದೇ ಇದೆ ಇದು ಪ್ರಮಾಣಪ್ರಸಿದ್ಧವು.

---

## — ಪದಾರ್ಥದೀಪಿಕಾ

ಭೇದವ್ಯಾಪ್ತವಾಗಿದೆ ಮತ್ತು ಅಂಶಿತ್ವವಾದರೋ ಹೇಗೆ? ಏಕೆಂದರೆ–ಮತುಪ್ ಪ್ರತ್ಯಯದ ಅರ್ಥವು (ಉಳ್ಳದ್ದು ಎಂಬ ಅರ್ಥವು) ಭೇದವಿಲ್ಲದೆ ಯುಕ್ತವಾಗಲಾರದು ಈ ಆಶಂಕೆಯನ್ನು ಪರಿಹರಿಸಲು 'ವಿಶೇಷಾದೇವ" ಎಂಬುದಾಗಿ ಹೇಳಿದ್ದಾರೆ "ಭೇದವಿಲ್ಲದಿದ್ದರೂ ಕೇವಲ, ಭೇದದ ಪ್ರತಿನಿಧಿಯಾದ ವಿಶೇಷದ ಬಲದಿಂದಲೇ ಅನೇಕ ಸ್ವರೂಪಗಳುಳ್ಳ" (ವಿಶೇಷಾದೇವಾನೇಕಸ್ವರೂಪೇಷು) ಎಂಬುದಾಗಿ ಯೋಜನೆಯನ್ನು ಮಾಡಬೇಕು (ಅರ್ಥಹೇಳಬೇಕು) ಅಥವಾ– " ಅನೇಕಸ್ವರೂಪೇಷು " ಎಂಬೀ ವಚನದಿಂದಲೇ, ಮುಂದೆ ಹೇಳಲಾಗುವುದನ್ನು ಅಂಗೀಕರಿಸಿ, "ಅಂಶಿನಃ" ಇತ್ಯಾದಿ ವಚನದಿಂದ ವಿರೋಧವು ಪರಿಹರಿಸಲ್ಪಟ್ಟಿತು ಹೀಗಿರಲು, (ಅದರಲ್ಲಿ) ಭೇದವಿಲ್ಲದಿದ್ದಲ್ಲಿ ಅಂಶಿತ್ವವು (ಅಂಶವುಳ್ಳದ್ದಾಗಿರೋಣ) ಹೇಗೆ ? ಈ ಆಶಂಕೆಯನ್ನು ಮೂರುಪಾದಗಳಿಂದ ಪರಿಹರಿಸುತ್ತಾರೆ. ಕೇವಲವೇ ಆದ ಅಂದರೆ, ಭೇದವಿಲ್ಲದೆಯೇ, ಆ ಚೇತನರಲ್ಲಿ ಬಹುರೂಪವುಳ್ಳದ್ದಾಗಿರುವುದು (ಇರುತ್ತದೆ) ಇದರಿಂದ ಹೇಳಲ್ಪಡುವ ಸಾಂಶತೆಯೂ ಇರುತ್ತದೆ ಹೇಗೆ ? ಎಂದರೆ– 'ವಿಶೇಷಾದೇವ"– ವಿಶೇಷದ ಬಲದಿಂದಲೇ, ಎಂಬುದಾಗಿ ಉತ್ತರ. ಇದನ್ನು ಕಲ್ಪಿಸುವುದೇಕೆ? ಎಂದರೆ– ಎರಡೂ ಶ್ರುತಿಗಳಲ್ಲಿ ವಿರೋಧವು ಬರುವುದರಿಂದಲೇ! ಎಂಬುದನ್ನು "ಹಿ" ಶಬ್ದ

इति सामान्येनोक्तम् । तेन चेतनमात्रेऽप्ययं न्याय इति सूचयति । अथवा यद्यंशिनो जीवास्तर्हि पटादिवदेव स्युरित्यस्याचेतनत्वमुपाधिमनेन द्योतयति ।

नन्वेवं तर्हि किं जीवकर्तृत्वस्येश्वराधीनत्वकल्पनया । तद्-

— ಪದಾರ್ಥದೀಪಿಕಾ —

ದಿಂದ ಹೇಳಿದ್ದಾರೆ ಇಲ್ಲಿ "ಜೀವಸ್ಯ" (ಜೀವನಿಗೆ) ಎಂದು ಪ್ರಸಕ್ತವಾಗಿದ್ದರೂ, "ಚೇತನಾಃ" ಎಂಬುದಾಗಿ ಸಾಮಾನ್ಯವಾಗಿ ಹೇಳಿದ್ದುಂಟು ಇದರಿಂದ ಚೇತನರೆಲ್ಲರಲ್ಲಿಯೂ ಈ ನ್ಯಾಯುವಿದೆಯೆಂಬುದನ್ನು ಸೂಚಿಸುತ್ತಾರೆ. ಅಥವಾ ಜೀವರು ಅಂಶಿಗಳಾದರೆ ಪಟಾದಿಗಳ ಹಾಗಯೇ ಆಗಿರಲಿ! ಎಂಬುದಾಗಿರುವ ತರ್ಕಕ್ಕೆ ಅಚೇತನತ್ವವೆಂಬ ಉಪಾಧಿಯನ್ನು ಇದರಿಂದ ತೋರಿಸುತ್ತಾರೆ

ಇನ್ನು – ಹೀಗಾದರೆ –ಜೀವಕರ್ತೃತ್ವಕ್ಕೆ ಈಶ್ವರಾಧೀನತ್ವವನ್ನು ಏಕೆ ಕಲ್ಪಿಸಬೇಕು ? ಏಕೆಂದರೆ ಈಶ್ವರಾಧೀನತೆಯು ಇಲ್ಲದಿದ್ದರೂ ಸ್ವತಃ (ಸ್ವತಂತ್ರ

— ವಿಶೇಷಾರ್ಥಪ್ರದೀಪಿಕಾ —

"ಶ್ರುತಿದ್ವಯವಿರೋಧಾದೇವ"– "ಅಥ ಯಃ ಸ ಜೀವಃ, ಸ ನಿತ್ಯಃ ನಿರವಯವಃ" ಎಂಬುದೊಂದು ನಿರಂಶತ್ವಪ್ರತಿಪಾದಕ ಶ್ರುತಿ "ಅಂಶಿನೋ ಜೀವಾದಂಶಾಃ ಪೃಥಕ್ ಗಚ್ಛಂತಿ" ಎಂಬುದು, ಸಾಂಶತ್ವ ಪ್ರತಿಪಾದಕ ಶ್ರುತಿ. ಇವೆರಡು ಶ್ರುತಿಗಳಿಗೆ ಪರಸ್ಪರವಿರೋಧವು ಬರುವುದರಿಂದಲೇ!"ಅಯಂ ನ್ಯಾಯಃ" ವಿಶೇಷದಿಂದ ಅನೇಕ ರೂಪಗಳಿರುವುದೆಂಬುದರ ಉಪಪಾದನವು, ಹೀಗೆ ಅರ್ಥ

" ಚೇತನಮಾತ್ರೇऽಪಿ " - ಪರಮಾತ್ಮ ಶ್ರೀತತ್ವ (ಲಕ್ಷ್ಮೀ) ಗಳಲ್ಲಿಯೂ ಈ ನ್ಯಾಯವನ್ನು ತಿಳಿಯಬೇಕೆಂದು ಹೇಳಿದ್ದಾಗುತ್ತದೆ " ಪಟಾದಿವದೇವ ಸ್ಯುಃ= ಉತ್ಪತ್ತಿವಿನಾಶವುಳ್ಳವರಾಗಲೀ, ಹೀಗೆ ಅರ್ಥ " ಸ್ಯುಃ " ಭಿನ್ನಾಂಶಗಳಿಂದ ಕೂಡಿದವರಾಗಲಿ, ಹೀಗೆಯೂ ಅರ್ಥ ಇದರಿಂದ, "ಜೀವರು ಭಿನ್ನಅಂಶಗಳಿಂದ ಯುಕ್ತರಾದವರು ಏಕೆಂದರೆ ಸಾಂಶರಾಗಿರುತ್ತಾರೆ ಇದರಲ್ಲಿ ಪಟವು ದೃಷ್ಟಾಂತವು " ಈ ರೀತಿಯಾಗಿ ಅನುಮಾನವನ್ನು ಹೇಳಿದ್ದಾಗುತ್ತದೆ "ಅನೇನ"="ಚೇತನಾ" ಎಂಬುದಾಗಿ ಹೇಳುವುದರಿಂದ, ಭಿನ್ನ ಹಾಗೂ ಅಭಿನ್ನಅಂಶಗಳಿಂದಲೂ ಯುಕ್ತವಾದ ಪಟಾದಿಗಳಲ್ಲಿ ಅಚೇತನತ್ವವಿರುವುದರಿಂದ ಸಾಧ್ಯವ್ಯಾಪಕವೂ, ಸಾಂಶತ್ವವೆಂಬ ಸಾಧನವುಳ್ಳ ಪಕ್ಷೀಭೂತರಾದ ಜೀವರಲ್ಲಿ ಅಚೇತನತ್ವವು ಇಲ್ಲದಿರುವುದರಿಂದ ಸಾಧನದ ಅವ್ಯಾಪಕವೂ ಆಗಿದೆ ಆದುದರಿಂದ, ಅಚೇತನತ್ವವು ಉಪಾಧಿಯಾಗುತ್ತದೆಯೆಂದು ಭಾವವು

बहुत्वेनाविनाभावाद्भिन्नता नियमाद्भवेत् ॥
यदि नैवं नियमकृद्भगवान्पुरुषोत्तम ॥ २-१-७ ॥

भावेऽपि स्वतो बहुरूपत्वसद्भावेनैकदेशतः क्रियोपपत्तौ कृत्स्नप्रसक्तेरभावात् । विभिन्नांशाभावेन निरवयत्वशब्दकोपस्यापि परिहारात् । एतदतिरिक्तस्य चेश्वरकृत्यस्यादर्शनादिति पूर्वपक्षिणा स्वाभिसन्धावुद्घाटिते सत्याह ॥ बहुत्वेनेति ॥ यदि भगवान्पुरुषोत्तम एवं न नियमकृत् बहुत्वेऽपि भेदो जीवेषु मा भूदिति व्यवस्थायाः कर्ता न

ಗುಣಪರಿಪೂರ್ಣನಾದ ನಾರಾಯಣನು "ಬಹುತ್ವ ಸಂಖ್ಯೆಯು ಇದ್ದರೂ ಜೀವರಲ್ಲಿ ಭೇದವಿಲ್ಲದಿರಲಿ" ಎಂಬ ವ್ಯವಸ್ಥೆಯನ್ನು ಮಾಡುವವನಾಗದಿದ್ದ ಪಕ್ಷದಲ್ಲಿ- ಬಹುತ್ವ ಸಂಖ್ಯೆಗೆ ಭಿನ್ನತೆಯೊಡನೆ (ಭೇದದಿಂದ) ನಿಯತವಾದ ಸಂಬಂಧ ವಿರುವುದರಿಂದ ಬಹುತ್ವ ಹೇತುವಿನಿಂದ ಜೀವರಲ್ಲಿಯೂ ಭೇದವು ಬರಬೇಕಾಗುವದು. ॥ ೨-೧-೭ ॥

## — ಪದಾರ್ಥದೀಪಿಕಾ —

ವಾಗಿ— ಈಶ್ವರನಿರಪೇಕ್ಷವಾಗಿ) ಬಹುರೂಪತೆಯು ಇರುವುದರಿಂದ ಏಕದೇಶದಿಂದ ಕ್ರಿಯೆಯಾಗುತ್ತಿರಲು ಕೃತ್ಸ್ನಪ್ರಸಕ್ತಿಯು ಇರುವುದಿಲ್ಲ ವಿಭಿನ್ನವಾದ ಅಂಶಗಳಿಲ್ಲದಿರುವುದರಿಂದ ನಿರವಯತ್ವಶಬ್ದದ ವ್ಯಾಕೋಪದ ಪರಿಹಾರವಾಗುತ್ತದೆ. ಇದಕ್ಕೆ ಬೇರೆಯಾದ ಈಶ್ವರನ ಕೃತ್ಯ (ಕೆಲಸ) ವೇನು ಕಾಣುವುದಿಲ್ಲ ಈ ರೀತಿಯಾಗಿ ಪೂರ್ವಪಕ್ಷಿಯು ಗೂಢವಾದ ಅಭಿಸಂಧಿಯನ್ನು ಉದ್ಭಾವನ ಮಾಡಲು (ತೋರಿಸಲು) ಉತ್ತರವಾಗಿ "ಬಹುತ್ವೇನ" ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ. ಭಗವಾನ್ ಪುರುಷೋತ್ತಮನು "ಏವಂ ನ ನಿಯಮಕೃತ್"— ಹೀಗೆ ನಿಯಮವನ್ನು ಮಾಡಿದವನಾಗದಿದ್ದಲ್ಲಿ- ಬಹುತ್ವವಿದ್ದರೂ ಭೇದವು ಜೀವರಲ್ಲಿ ಇಲ್ಲದಿರಲಿ, ಎಂಬ ವ್ಯವಸ್ಥೆಯನ್ನು ಮಾಡದಿದ್ದಲ್ಲಿ, ಆಗ ಬಹುತ್ವವಿರುವದೆಂಬ

## — ವಿಶೇಷಾರ್ಥಪ್ರದೀಪಿಕಾ —

"ಏತದತಿರಿಕ್ತಸ್ಯ"= ಕೃತ್ಸ್ನಪ್ರಸಕ್ತಿ, ನಿರವಯವತ್ವ ಶಬ್ದವ್ಯಾಕೋಪ, ಇವೆರಡರ ಪರಿಹಾರಗಳನ್ನು ಬಿಟ್ಟು ಬೇರೆಯಾದ ಪ್ರಯೋಜನವಿಲ್ಲವೆಂದು ಇಲ್ಲಿ ತಿಳಿಯಬೇಕು

"ಏವಂ ನ ನಿಯಮಕೃತ್" ಎಂಬುದು ಅನುವಾದವು. "ಬಹುತ್ವೇऽಪಿ ಭೇದೋ ಜೀವೇಷು ಮಾಭೂತ್, ಇತಿ ವ್ಯವಸ್ಥಾಯಾಃ ಕರ್ತಾ ನ ಸ್ಯಾತ್"

स्यात् । तदा बहुत्वेन हेतुना जीवेष्वपि भिन्नता भवेत । बहुत्व-संख्याया भिन्नत्वेनाविनाभावलक्षणान्नियमात् । यथोक्तम् । तदनु-विधानात्पृथक्त्वमिति ।

एतदुक्तं भवति । परमेश्वरानपेक्षस्य जीवस्य कर्तृत्वाङ्गीकारे

— ಪದಾರ್ಥದೀಪಿಕಾ —

ಕಾರಣದಿಂದ ಜೀವರಲ್ಲಿ ಭೇದವೂ ಬರಲಿ! ಏಕೆಂದರೆ ಬಹುತ್ವಸಂಖ್ಯೆಗೆ ಭೇದದೊಡನೆ ಅವಿನಾಭಾವವೆಂಬ ನಿಯತ ಸಂಬಂಧರೂಪ ವ್ಯಾಪ್ತಿ (ನಿಯಮ) ಇರುತ್ತದ ಇದನ್ನು 'ತದನುವಿಧಾನಾತ್ ಪೃಥಕ್ತ್ವಂ" ಎಂಬುದಾಗಿ ಹೇಳಿದ್ದಾರೆ ( ತಾರ್ಕಿಕರು )

ಇಲ್ಲಿ ಹೇಳಲ್ಪಟ್ಟದ್ದು ಇದು– ಈಶ್ವರನ ನಿರಪೇಕ್ಷನಾದ ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಿದ ಪಕ್ಷದಲ್ಲಿ ಸರ್ವಥಾ ಹಿಂದೆ ಹೇಳಿದ ತರ್ಕಗಳೆರಡಕ್ಕೂ

— ವಿಶೇಷಾರ್ಥಪ್ರದೀಪಿಕಾ —

ಎಂಬುದು ಅದರ ವ್ಯಾಖ್ಯಾನವು "ಯಥೋಕ್ತಂ" = ತಾರ್ಕಿಕರು ಹೇಳಿದ್ದಾರೆಂದು ತಿಳಿಯಬೇಕು "ತದನುವಿಧಾನಾದೇಕ ಪೃಥಕ್ತ್ವಂ' ಎಂಬುದಾಗಿ ವೈಶೇಷಿಕ ಸೂತ್ರ ೨ನೇ ಅಧ್ಯಾಯ ೧ನೇ ಆಹ್ನಿಕದ ಕೊನೆಯಲ್ಲಿ ಹೇಳಲಾಗಿದೆ "ತದನುವಿಧಾನಾತ್" = ಬಹುತ್ವಸಂಖ್ಯೆಯ ವಿಧಾನದಿಂದ "ಪೃಥಕ್ತ್ವಂ"= ಭೇದವು; ಹೀಗೆ ಅರ್ಥ ಅಂದರೆ ಬಹುತ್ವವು ಪೃಥಕ್ತ್ವದಿಂದ (ಭೇದದಿಂದ) ವ್ಯಾಪ್ತವಾದುದು, ಹೀಗೆ ಭಾವವು

ಪರಮಾತ್ಮನಿರಪೇಕ್ಷವಾದ ಜೀವನ ಕರ್ತೃತ್ವವನ್ನು ಅಂಗೀಕರಿಸಿದರೆ–ಬಹುತ್ವವಿದ್ದುದರಿಂದ ಭಿನ್ನತೆ(ಭೇದ)ಯಷ್ಟೇ ಆಪಾದಿಸಲ್ಪಡುತ್ತದೆ ಆದರೆ ಕೃತ್ಸ್ನಪ್ರಸಕ್ತಿಮುಂತಾದ ದೋಷವಿಲ್ಲ ಆದುದರಿಂದ ಸ್ವತಂತ್ರ ಜೀವಕರ್ತೃತ್ವದ ಮೇಲಿನ ಈ ದೋಷಗಳನ್ನು ಈ ವಚನವು ಹೇಗೆ ಉಪಪಾದಿಸುವುದು? ಇನ್ನು "ಭಿನ್ನತೆಯನ್ನು ಆಪಾದಿಸುವುದರ ಮೂಲಕವಾಗಿ ನಿರವಯವತ್ವ ಶ್ರುತಿಯ ವಿರೋಧವನ್ನು ಸೂಚಿಸುವುದರಿಂದ, ಜೀವಕರ್ತೃತ್ವದ ಮೇಲೆ ದೋಷಗಳನ್ನು ಉಪಪಾದಿಸುವುದೆಂದು ಹೇಳಬಾರದು ಏಕೆಂದರೆ –ಆದರೂ ಇದರಿಂದ ಕೃತ್ಸ್ನಪ್ರಸಕ್ತಿಯು ಬಾರದಿರುವುದರಿಂದ, ಎರಡೂ ಅನಿಷ್ಟಪ್ರಸಂಗಗಳನ್ನು ಉಪಪಾದನಮಾಡುವುದೆಂಬುದು ಸರಿಯಾಗುವದಿಲ್ಲ, ಎಂಬ ಆಶಂಕೆಯು ಬರುವುದರಿಂದ ಅದನ್ನು ಪರಿಹರಿಸಲು "ಏತದುಕ್ತಂ ಭವತಿ." ಇತ್ಯಾದಿ ಗ್ರಂಥದಿಂದ, ಪ್ರಸಂಗಗಳ (ತರ್ಕಗಳೆರಡರ) ಉಪಪಾದಕವಾಗಿದೆಯೆಂಬುದನ್ನು ತಿಳಿಸುತ್ತಾರೆ.

न सर्वथोक्तप्रसङ्गद्वयपरिहारः। तथा हि। कृत्स्नप्रसक्तिस्तावत्कथं परिहरणीया। बहुत्वसद्भावेनेति चेत्। तर्हि बहुत्वस्य लोके भेदाविनाभूतत्वेन जीवस्य बहुत्वे भिन्नत्वमप्यापद्येत। तथा च दुरात्मा निरवयवत्वशब्दकोपो दुष्परिहरः। अथ तत्परिहारार्थं भेदो नेष्यते। तदा व्यापकनिवृत्त्या व्याप्यनिवृत्तेरावश्यकत्वाद्बहुत्वसङ्ख्याऽपि त्याज्या स्यात्। तथा च पुनः सैव कृत्या कृत्स्नप्रसक्तिरास्कन्देत। अथ जडेष्वेव यत्र बहुत्वं तत्र भेद इति नियमो न चेतनेष्विति चेत्। कुत एतत्। तथा दर्शनादिति चेन्न। यतः कारकप्रश्नोऽयं न

— ಪದಾರ್ಥ ದೀಪಿಕಾ —

ಪರಿಹಾರವು ದೊರೆಯುವುದಿಲ್ಲ ಹೇಗೆಂದರೆ– ಕೃತ್ಸ್ನ ಪ್ರಸಕ್ತಿಯನ್ನು ಪರಿಹರಿಸುವುದು ಹೇಗೆ ? ಬಹುತ್ವ ಸಂಖ್ಯೆಯು ಇರುವುದರಿಂದ, ಎಂಬುದಾಗಿ ಹೇಳುವುದು ಸರಿಯಲ್ಲ ಏಕೆಂದರೆ– ಹಾಗಾದರೆ– ಲೋಕದಲ್ಲಿ ಬಹುತ್ವ ಸಂಖ್ಯೆಗ ಭೇದದೊಡನೆ ನಿಯತಸಂಬಂಧವಿರುವುದರಿಂದ ಜೀವನಿಗೆ ಬಹುತ್ವವಿದ್ದಲ್ಲಿ ಭಿನ್ನತೆಯೂ (ಭೇದವು) ಬರಬೇಕಾಗುತ್ತದೆ ಅದ್ದರಿಂದ, ನಿರವಯುವತ್ವಶಬ್ದವ್ಯಾಕೋಪವು ತಪ್ಪಿದ್ದಲ್ಲ. ಇನ್ನು– ಈ ನಿರವಯುವತ್ವಶಬ್ದ (ಶ್ರುತಿ) ವ್ಯಾಕೋಪವನ್ನು ತಪ್ಪಿಸಲು ಭೇದವನ್ನು ಅಂಗೀಕಾರಮಾಡುವುದಿಲ್ಲವೆಂದಾದರೆ ಆಗ ವ್ಯಾಪಕದ ನಿವೃತ್ತಿಯಿಂದ ವ್ಯಾಪ್ಯದ ನಿವೃತ್ತಿಯು ಆವಶ್ಯಕವಾದುದರಿಂದ ಭೇದದ ನಿವೃತ್ತಿಯಿಂದ ಬಹುತ್ವಸಂಖ್ಯೆಯೂ ತ್ಯಾಜ್ಯವಾಗಬೇಕಾಗುತ್ತದೆ ಆದುದರಿಂದ ಆ ಕೃತ್ಸ್ನ ಪ್ರಸಕ್ತಿಯೆಂಬ ಕೃತ್ಯೆಯು ಮತ್ತೆ ಬೆನ್ನುಹತ್ತುವ ಪ್ರಸಂಗವು ಬರುತ್ತದೆ ಇನ್ನು ಬಹುತ್ವವಿದ್ದಲ್ಲೆಲ್ಲ ಭೇದವಿರುವುದೆಂಬ ನಿಯಮವು ಜಡಗಳಲ್ಲಿಯೇ ! ಚೇತನಗಳಲ್ಲಿ ಆ ನಿಯಮವಿಲ್ಲವೆಂದು ಹೇಳಿದರೆ– ಹೀಗೆ ಏಕೆ ? ಎಂದು ಪ್ರಶ್ನೆ ಹಾಗೆ ಕಂಡಿರುವುದೆಂದು ಹೇಳುವುದು ಸರಿಯಲ್ಲ ಏಕೆಂದರೆ– ಇದು ಕಾರಕದ ವಿಷಯಕವಾದ ಪ್ರಶ್ನೆಯೇ ಹೊರತು ಪ್ರಮಾಣ ವಿಷಯಕ

— ವಿಶೇಷಾರ್ಥಪ್ರದೀಪಿಕಾ —

"ಯತಃ ಕಾರಕಪ್ರಶ್ನೋಽಯಂ"="ಕುತಃ ಏತತ್" –ಎಂಬ ಪ್ರಶ್ನೆಯು 'ಕುತೋ ಜ್ಞಾಪಕಾತ್' =ಯಾವ ಜ್ಞಾಪಕ(ಪ್ರಮಾಣ)ದಿಂದ? ಎಂಬ ಅಭಿಪ್ರಾಯವುಳ್ಳದ್ದಾದಲ್ಲಿ "ತಥಾದರ್ಶನಾತ್" (ಹಾಗೆ ಕಂಡಿದೆ)ಯೆಂಬ ಸಮಾಧಾನವು

प्रमाणप्रश्नः । स्वभावोऽयं पदार्थानामिति चेन्न । अनीश्वरवादपादप्रसारिकापानात् । किञ्च विरुद्धश्च स्वभावश्चेति कथम् । न हि स्वयमेव स्वेन सद्वितीय इति युक्तम् । प्रमितत्वान्न विरोध इति तु प्रत्युक्तम् । चैतन्यसामर्थ्यादिदं घटत इति चेत् । धूमवानपि कश्चित्

— ಪದಾರ್ಥದೀಪಿಕಾ —

ಪ್ರಶ್ನೆಯಲ್ಲ ಇದು ಪದಾರ್ಥಗಳ ಸ್ವಭಾವವೆಂದು ಹೇಳುವುದು ಯುಕ್ತವಲ್ಲ. ಏಕೆಂದರೆ ನಿರೀಶ್ವರವಾದವು ಕಾಲನ್ನಿಡಬೇಕಾಗುವ ಪ್ರಸಂಗವು ಬರುತ್ತದೆ. ಮತ್ತು ವಿರುದ್ಧವಾದುದು ಸ್ವಭಾವವಾದುದೆಂಬುದು ಹೇಗೆ ? ಏಕೆಂದರೆ-- ತನ್ನಿಂದ ತಾನೇ ಸದ್ವಿತೀಯ (ಅನೇಕ) ನಾಗುವುದೆಂಬುದು ಸಮಂಜಸವಲ್ಲ. ಪ್ರಮಾಣ ಪ್ರಮಿತವಾಹುದರಿಂದ ವಿರೋಧವಿಲ್ಲವೆಂಬ ಸಂಗತಿಯನ್ನಾದರೋ ಈ ಮುಂಚೆಯೇ ನಿರಾಕರಿಸಲಾಯಿತು ಇನ್ನು ಚೈತನ್ಯದ ಸಾಮರ್ಥ್ಯದಿಂದಲೇ ಇದು (ವಿರುದ್ಧ ಧರ್ಮವು ಸ್ವಭಾವವಾಗುವದು) ಸಂಘಟನವಾಗುತ್ತದೆಯೆಂದರೆ—

— ವಿಶೇಷಾರ್ಥಪ್ರದೀಪಿಕಾ —

ಸರಿಹೊಂದುತ್ತಿತ್ತು! ಆದರೆ ''ಕುತಃ ಕಾರಣಾತ್ –(ಕಥಂ ಏತತ್) ಜಡಯೋರೇತದ್ವೈಷಮ್ಯಂ'' (ಯಾವ ನಿಮಿತ್ತ(ಕಾರಣ)ದಿಂದ ಜಡಗಳಲ್ಲಿಯೇ ಬಹುತ್ವವಿದ್ದಲ್ಲಿ ಭೇದವೆಂಬ ನಿಯಮವು,, ಚೇತನರಲ್ಲಿಲ್ಲ,'' ಎಂಬ ವೈಷಮ್ಯವು?) ಈ ಅಭಿಪ್ರಾಯದ ಪ್ರಶ್ನೆಯು ಇರುವಾಗ 'ಏತಸ್ಮಾನ್ನಿಮಿತ್ತಾತ್'' (ಈಕಾರಣದಿಂದ) ಎಂಬುದಾಗಿ ಹೇಳಬೇಕು ಹೊರತಾಗಿ ''ತಥಾದರ್ಶನಾತ್'' ಎಂಬ ಉತ್ತರವು ಸರಿಯಾಗಲಾರದು. ಇನ್ನು ಈ ವೈಷಮ್ಯದಲ್ಲಿ ಆಯಾಯ ವಸ್ತುಸ್ವಭಾವವೇ ಕಾರಣವೆಂಬ ಸ್ವಭಾವವಾದವನ್ನು ಆಶಂಕಿಸಿ ನಿರಾಕರಣವನ್ನು ''ಸ್ವಭಾವೋಽಯಂ''? ಈ ವಾಕ್ಯದಿಂದ ಮಾಡುತ್ತಾರ

''ಪ್ರತ್ಯುಕ್ತಂ'' = ''ಯತಃ ಕಾರಕಪ್ರಶ್ನೋಽಯಂ ನ ಪ್ರಮಾಣಪ್ರಶ್ನಃ'' ಎಂಬ ವಚನದಿಂದ ನಿರಾಕರಿಸಲ್ಪಟ್ಟಿದೆಯೆಂದು ತಿಳಿಯಬೇಕು ವಿರುದ್ಧವಾದುದನ್ನೂ ಸ್ವಭಾವವನ್ನಾಗಿ ಮಾಡುವುದರಿಂದ, ಅವರಲ್ಲಿ ಈಶ್ವರಾಧೀನತೆಯನ್ನು ಅವಶ್ಯವಾಗಿ ಅಂಗೀಕರಿಸಬೇಕಾದುದರಿಂದ, ಈಶ್ವರನಿರಪೇಕ್ಷ ಜೀವಕರ್ತೃತ್ವವು ಇರುವುದಿಲ್ಲ' ಇನ್ನು –ಹಿಂದೆ ಹೇಳಿದ ನಿಯಮದ ಕಾರಕವಾಗಿ ಈಶ್ವರನಿಂದ ಬೇರೆ ಯಾದುದು ಇರಬಹುದು ಹೀಗೆ ಶಂಕಿಸಿದರೆ ಅದು ಯಾವದು? ಚೈತನ್ಯದ (ಜೀವನ) ಸಾಮರ್ಥ್ಯವೋ? ವಿಶೇಷಶಕ್ತಿಯೋ? ವಿಶೇಷಶಕ್ತಿಯ ವಿಚಿತ್ರತೆಯೋ

निरग्निको घटताम् । अथ विशेषशक्त्येदमुपपद्यत इति चेत् । घटेऽप्युपपद्यताम् । न हि तत्र विशेषो नास्ति । विशेषवैचित्र्यान्नेति चेत् । तदेव कुतः । तस्माद्भगवानेव स्वरूपस्वभावविशेषाणां नियामकः चैतन्यमवच्छेदकं विधाय विशेषं निमित्तीकृत्य विरुद्धे अप्यभेदबहुत्वे समावेश्याभेदेन निरवयवत्वशङ्कोपमपास्य बहुत्वेन कृत्स्नप्रसक्तिं न्यक्कृत्य कार्यानुरूपं सामर्थ्यविशेषं योजयन् जीवेन कारयतीत्यङ्गीकर्तव्यमिति ।

## — ಪದಾರ್ಥದೀಪಿಕಾ —

ಧೂಮವುಳ್ಳ ಒಂದು ಪರ್ವತವೂ ಅಗ್ನಿಯಿಲ್ಲದ್ದಾಗಿ ಸಂಘಟಿಸಲಿ ! ಇನ್ನು ವಿಶೇಷ ಶಕ್ತಿಯಿಂದ ಇದು ಯುಕ್ತವೆನಿಸುವುದಾದರೆ– ಘಟದಲ್ಲಿಯೂ ಯುಕ್ತವೆನಿಸಲಿ ! ಏಕೆಂದರ ಘಟದಲ್ಲಿ ವಿಶೇಷವಿಲ್ಲವೆಂದಲ್ಲ ವಿಶೇಷದಲ್ಲಿ ಒಂದು ವೈಚಿತ್ರ್ಯವಿದ. ಆದುದರಿಂದ, ಘಟದಲ್ಲಿಯೂ ತನ್ನಿಂದ ತನಗೆ ಅನೇಕ ರೂಪತ್ವವೆಂಬ ಸದ್ವಿತೀಯತ್ವವು ಬರಲೆಂಬುದು ಯುಕ್ತವಾಗುವುದಿಲ್ಲವೆಂದು ಹೇಳಿದರ ಆ ವೈಚಿತ್ರ್ಯವೇ ಏಕೆ (ಯಾವ ಕಾರಣದಿಂದ) ಬಂದಿತೆಂದು ಪ್ರಶ್ನೆ ಆದುದರಿಂದ, ಭಗವಾನ್ ಪರಮೇಶ್ವರನೇ ಸ್ವರೂಪ, ಸ್ವಭಾವ– ವಿಶೇಷಗಳಿಗ ನಿಯಾಮಕನಾಗಿದ್ದು, ಚೈತನ್ಯವನ್ನು ಅವಚ್ಛೇದಕ (ಸ್ಥಾನ) ವನ್ನು ಮಾಡಿ, ಅದರಲ್ಲಿ ವಿಶೇಷವನ್ನು ನಿಮಿತ್ತಮಾಡಿ, ವಿರುದ್ಧವಾಗಿದ್ದರೂ ಅಭೇದ–ಬಹುತ್ವ ಇವೆರಡನ್ನೂ ಒಂದು ಕಡೆಯಲ್ಲಿ ಸೇರಿಸಿ, ಅಭೇದದಿಂದ ನಿರವಯವತ್ವ ಶ್ರುತಿಯ ವಿರೋಧವನ್ನೂ ನಿರಾಕರಿಸಿ, ಬಹುತ್ವಧರ್ಮದಿಂದ ಕೃತ್ಸ್ನಪ್ರಸಕ್ತಿಯೆಂಬುದನ್ನೂ ಪರಾಭವಗೊಳಿಸಿ, ಕಾರ್ಯಾನುರೂಪವಾದ ಸಾಮರ್ಥ್ಯವಿಶೇಷವನ್ನು ಚೇತನರಲ್ಲಿ ಯೋಜನಮಾಡುತ್ತ, ಜೀವನಿಂದ ಕೆಲಸ ಮಾಡಿಸುತ್ತಾನೆಂಬುದನ್ನು ಒಪ್ಪತಕ್ಕದ್ದು." ಹೀಗ ಹೇಳಿದ್ದಾಗುತ್ತದೆ

## — ವಿಶೇಷಾರ್ಥಪ್ರದೀಪಿಕಾ —

ಈ ಮೂರರಲ್ಲಿ ಮೊದಲನೆಯದನ್ನು "ಧೂಮವಾನ್" ಈ ವಾಕ್ಯದಿಂದ ನಿರಾಕರಿಸುತ್ತಾರೆ "ಪರ್ವತ ಸಾಮರ್ಥ್ಯಾತ್" ಎಂಬುದು ಶೇಷವು ಎನೇಪಕ್ಷವನು "ಅಥ" ಇತ್ಯಾದಿ ವಚನದಿಂದ ಆಶಂಕಿಸಿ ನಿರಾಕರಿಸುತ್ತಾರೆ ೩ನೇಪಕ್ಷವನ್ನು "ವಿಶೇಷಶಕ್ತಿವೈಚಿತ್ರ್ಯಾತ್" ಇತ್ಯಾದಿಯಾಗಿ ಆಶಂಕಿಸಿ ನಿರಾಕರಿಸುತ್ತಾರೆ

नन्वेतत्सर्वं जीवसामर्थ्यादिनाऽशक्यसम्पादनं कथं भगवानपि सम्पादयेदित्यत आह ॥ तस्य त्विति ।* तदेवमस्य सूत्रस्यैवं तात्पर्यव्याख्याने न कश्चिद्विरोध इति स्थितम् ॥ २-१-७ ॥

॥ ॐ श्रुतेस्तु शब्दमूलत्वात् ॐ ॥ नन्वीश्वरस्यापि कर्तृत्वं न युज्यते । जीववत्कृत्स्नप्रसक्तेः । न हि ब्रह्माण्डपिपीलिकाण्डनिर्माणे

— ಪದಾರ್ಥದೀಪಿಕಾ —

ಇದಲ್ಲ ಜೀವನ ಸಾಮರ್ಥ್ಯದಿಂದ ಸಂಪಾದಿಸಲು ಅಶಕ್ಯವಾದುದು. ಇದನ್ನು ಪರಮಾತ್ಮನಾದರೂ ಹೇಗ ಸಂಪಾದಿಸುತ್ತಾನೆಂಬ ಆಶಂಕೆಯ ಉತ್ತರವಾಗಿ 'ತಸ್ಯತು" ಎಂಬ ವಚನವನ್ನು ಹೇಳಿರುತ್ತಾರೆ ಈ ಸೂತ್ರಕ್ಕೆ ಹೀಗೆತಾತ್ಪರ್ಯವನ್ನು ಹೇಳಿದರೆ ಯಾವದೇ ವಿರೋಧವಿಲ್ಲವಂದು ಸಿದ್ಧವಾಯಿತು॥೨।೧।೭॥

ಓಂ॥ ಶ್ರುತೇಸ್ತು ಶಬ್ದಮೂಲತ್ವಾತ್ ॥ಓಂ॥ ಈಶ್ವರನಿಗೂ ಕರ್ತೃತ್ವವು ಯುಕ್ತವಾಗುವದಿಲ್ಲ ಏಕೆಂದರೆ- ಜೀವನಿಗೆ ಹೇಗೋ ಹಾಗೆ ಕೃತ್ಸ್ನ ಪ್ರಸಕ್ತಿಯು ಬರುತ್ತದೆ ಏಕೆಂದರ ಬ್ರಹ್ಮಾಂಡ, ಪಿಪೀಲಿಕಾಂಡ (ಇರುವೆಯ ತತ್ತಿ) ಗಳ

— ವಿಶೇಷಾರ್ಥಪ್ರದೀಪಿಕಾ —

"ಅಂಗೀಕರ್ತವ್ಯಮಿತಿ" ಇಲ್ಲಿರುವ "ಇತಿ" ಶಬ್ದಕ್ಕೆ "ಏತದುಕ್ತಂ ಭವತಿ" ಎಂಬ ಹಿಂದಿನ ವಾಕ್ಯದೊಡನೆ ಅನ್ವಯವಿದೆ "ಅಸ್ಯ ಸೂತ್ರಸ್ಯ" ="ಕೃತ್ಸ್ನ ಪ್ರಶಕ್ತಿ ನಿರವಯವತ್ವ ಶಬ್ದಕೋಪೋ ವಾ" ಎಂಬ ಸೂತ್ರಕ್ಕೆ "ಏವಂ ತಾತ್ಪರ್ಯಂ"= "ಯದಿ ಭಾಗೇನ" ಎಂಬ ಅನುವ್ಯಾಖ್ಯಾನವಾಕ್ಯೋಕ್ತ ತಾತ್ಪರ್ಯವು 'ನ ಕಶ್ಚಿದ್ವಿರೋಧಃ"- ಕರ್ತಾಶಾಸ್ತ್ರಾರ್ಥವತ್ವಾತ್, ವ್ಯತಿರೇಕೋ ಗಂಧವತ್ ಇತ್ಯಾದಿ ಸೂತ್ರಗಳಿಂದ ವಿರೋಧವಿಲ್ಲವೆಂದು ಸಿದ್ಧವಾಯಿತು ೨-೧-೭

"ತಸ್ಯ ತ್ವಶೇಷಶಕ್ತಿತ್ವಾತ್" ಇತ್ಯಾದಿ ವಚನಗಳಿಂದ ತಾತ್ಪರ್ಯವನ್ನು ಹೇಳುವುದರಲ್ಲಿ ಸಂಗತಿಯು ಯಾವದು? ಎಂಬ ಆಶಂಕೆಯನ್ನು ಕಳೆಯಲು, ಈ ವಚನದಿಂದ ನಿವಾರಿಸಲ್ಪಡಬೇಕಾದ ಆಕ್ಷೇಪವನ್ನು "ನನು" ಇತ್ಯಾದಿ ವಚನಗಳಿಂದ ಹೇಳುತ್ತಾರೆ. ಮೊದಲನೆಯ ಸೂತ್ರದಿಂದ ನಿವಾರಿಸಲ್ಪಡಬೇಕಾದುದನ್ನು "ಜೀವವತ್" ಈ ವಾಕ್ಯದಿಂದ ಹೇಳುತ್ತಾರೆ ಇದರಿಂದ ಪೂರ್ವಾಧಿಕರಣದ ಸಿದ್ಧಾಂತನ್ಯಾಯ(ಯುಕ್ತಿ)ದಿಂದ ಪ್ರಾಪ್ತವಾದ ಪೂರ್ವಪಕ್ಷವನ್ನು ನಿವಾರಿಸುವುದರಿಂದ ಅಪವಾದಕೀಸಂಗತಿಯು ಸೂಚಿತವಾಗುವುದೆಂದು ತಿಳಿಯಬೇಕು

* ಈ ಅನುವ್ಯಾಖ್ಯಾನಶ್ಲೋಕ ಹಾಗು ಅರ್ಥವನ್ನು ಮುಂದಿನ ಅಧಿಕರಣದಲ್ಲಿ ೭೩ ನೇ ಪುಟದಲ್ಲಿ ನೋಡಬಹುದು

समं सामर्थ्यं प्रयुञ्जानः प्रेक्षावान्भवति । गत्यन्तराभावान्न दोष इति चेन्न । ईश्वरत्वव्याघातात् । अथैतत्परिहारार्थमेकदेशेन प्रवृत्तिरङ्गीक्रियते । तदा नेह नानेत्यादिनिरवयत्वशब्दकोपः स्यात् । शरीरेन्द्रियादिविकलत्वाच्च न कर्तृत्वम् । न हि कश्चिच्छरीरादिविकलः कर्तोपलब्धः । भूम्याद्याधारविधुरत्वाच्च । एवं दौर्घट्येऽपि यदि कर्तृत्वमीश्वरस्य स्यात्तदा जीवस्यापि किन्न स्यात् । विशेषादर्शनात् ।

## — ಪದಾರ್ಥದೀಪಿಕಾ —

ನಿರ್ಮಾಣದಲ್ಲಿ ಸಮಾನವಾದ ಶಕ್ತಿಯನ್ನು ಪ್ರಯೋಗಿಸುವವನು ಜಾಣನೆನಿಸುವುದಿಲ್ಲ ಬೇರೆ ಗತಿಯೇ ಇಲ್ಲವಾದುದರಿಂದ ಅದು ದೋಷವಾಗುವದಿಲ್ಲವೆಂಬುದು ಸರಿಯಲ್ಲ ಏಕೆಂದರೆ ಈಶ್ವರತ್ವಕ್ಕೆ ವ್ಯಾಘಾತವು ಬರುತ್ತದೆ ಇನ್ನು ಈ ಕೃತ್ಸ್ನಪ್ರಸಕ್ತಿಯ ಪರಿಹಾರಕ್ಕಾಗಿ ಏಕದೇಶದಿಂದ ಪ್ರವೃತ್ತಿಯನ್ನು ಅಂಗೀಕರಿಸುವುದಾದರೆ–"ನೇಹ ನಾನಾಸ್ತಿ" ಇತ್ಯಾದಿಯಾದ, ನಿರವಯವತ್ವ ಪ್ರತಿಪಾದಕ ಶ್ರುತಿಗಳ ಕೋಪವು (ವಿರೋಧವು) ಬರುತ್ತದೆ ಮತ್ತು ಶರೀರ–ಇಂದ್ರಿಯ ವಿಲ್ಲದವನಾದುದರಿಂದ ಈಶ್ವರನಿಗೆ ಕರ್ತೃತ್ವವು ಯುಕ್ತವಾಗುವುದಿಲ್ಲ ಏಕೆಂದರೆ ಶರೀರೇಂದ್ರಿಯವಿಲ್ಲದ ಯಾವನೊಬ್ಬನೂ ಕರ್ತೃವಾಗಿರುವುದು ಕಂಡಿಲ್ಲ ಮತ್ತು ಭೂಮಿ ಮುಂತಾದ ಆಧಾರವೂ ಇರುವುದಿಲ್ಲ ಈ ರೀತಿಯಾಗಿ ಈಶ್ವರನಿಗೆ ಕರ್ತೃತ್ವವು ದುರ್ಘಟ ( ಅಸಂಭಾವಿತ ) ವಾದರೂ ಇರುವುದಾದರೆ ಜೀವನ್ನಿಗಾದರೂ ಅದು ಏಕೆ ಇರಬಾರದು ? ಏಕಂದರೆ ಯಾವದೇ ವಿಶೇಷವು ಕಂಡು

## — ವಿಶೇಷಾರ್ಥಪ್ರದೀಪಿಕಾ —

ಜೀವನ ಹಾಗೆ ಕೃತ್ಸ್ನಪ್ರಸಕ್ತಿಯು ಇರಲಿ, ದೋಷವೇನೆಂಬ ಆಶಂಕೆಯನ್ನು "ನ ಹಿ" ಈ ವಾಕ್ಯದಿಂದ ಪರಿಹರಿಸುತ್ತಾರೆ

"ಏಕದೇಶೇನ"=ಇಲ್ಲಿ 'ಪಿಪೀಲಿಕಾಂಡನಿರ್ಮಾಣಾದೌ" ಎಂಬುದನ್ನು ಸೇರಿಸಿ "ಪಿಪೀಲಿಕಾಂಡನಿರ್ಮಾಣಾದಿಗಳಲ್ಲಿ ಏಕದೇಶದಿಂದ ಸಾಮರ್ಥ್ಯವನು ಪ್ರಯೋಗಿಸಿ ಪ್ರವೃತ್ತಿಸುವನು" ಹೀಗೆ ಅರ್ಥಮಾಡಬೇಕು

"ವಿಕರಣತ್ವಾನ್ನೇತಿ ಚೇತ್" ಎಂಬ ಸೂತ್ರಭಾಗದಿಂದ ತೋರಿಸಿದ ಆಶಂಕೆಯನ್ನು "ಶರೀರಾದಿವಿಕಲಃ" ಇತ್ಯಾದ ವಾಕ್ಯದಿಂದ ವಿಶದಿಸುತ್ತಾರೆ "ಆತ್ಮನಿ ಚೈವಂ ವಿಚಿತ್ರಾಶ್ಚ ಹಿ"ಈ ಸೂತ್ರದಿಂದ ನಿವಾರಿತವಾಗುವ ಆಶಂಕೆಯನ್ನು "ಏವಂ ದೌರ್ಘಟ್ಯೇಽಪಿ" ಎಂಬ ವಾಕ್ಯದಿಂದ ತೋರಿಸುತ್ತಾರೆ

## ॥ ॐ श्रुतेस्तु शब्दमूलत्वात् ॐ ॥

तस्य त्वशेषशक्तित्वाद्युज्यते सर्वमेव च ॥

एवञ्च सर्वकर्तृत्वं दूरनिरस्तमित्ययं पूर्वपक्षोऽत्राधिकरणे निरस्यते । तस्य तात्पर्यमाह ॥ तस्य त्विति । तुशब्दो जीवाद्विशेषं द्योतयति । चशब्दो हेतुसमुच्चये । ईश्वरस्यालौकिकत्वश्रुतेरागमैकगम्यत्वेन युक्ति-

ಜೀವನಿಂದ ವಿಶೇಷವುಳ್ಳ ಆ ನಾರಾಯಣನಿಗೆ, ಶ್ರುತಿಯಲ್ಲಿ ಅಲೌಕಿಕತ್ವವು ಹೇಳಲ್ಪಟ್ಟಿರುವದರಿಂದಲೂ, ಶಾಸ್ತ್ರೈಕ ಸಮಧಿಗಮ್ಯನಾದುದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲದಿರುವುದರಿಂದಲೂ ವಿಚಿತ್ರಾನೇಕ ಶಕ್ತಿಗಳಿರುವವೆಂದು ತಿಳಿದು ಬರುವುದರಿಂದಲೂ ಸರ್ವವೂ ಯುಕ್ತವಾಗುತ್ತದೆ

### — ಪದಾರ್ಥದೀಪಿಕಾ —

ಬರುವುದಿಲ್ಲ ಆದುದರಿಂದ ಸರ್ವ ಕರ್ತೃತ್ವವಂತೂ ದೂರದಿಂದಲೇ ನಿರಾಕರಿಸಲ್ಪಟ್ಟಿತು" ಈ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗುತ್ತದೆ ಈ ಅಧಿಕರಣದ ತಾತ್ಪರ್ಯವನ್ನು "ತಸ್ಯ ತು" ಇತ್ಯಾದಿ ವಚನದಿಂದ ಹೇಳುತ್ತಾರೆ "ತು" ಶಬ್ದವು ಜೀವನಿಗಿಂತ ವಿಶೇಷ (ವ್ಯತ್ಯಾಸ) ವನ್ನು ತೋರಿಸುತ್ತದೆ "ಚ" ಶಬ್ದವು ಹೇತುಗಳ ಸಮುಚ್ಚಯಾರ್ಥದಲ್ಲಿದ "ಈಶ್ವರನು ಅಲೌಕಿಕನೆಂದು ಶ್ರುತಿಯು ಹೇಳುವುದರಿಂದ ಕೇವಲ ಆಗಮದಿಂದ

### — ವಿಶೇಷಾರ್ಥಪ್ರದೀಪಿಕಾ —

'ಚಶಬ್ದಃ ಹೇತು ಸಮುಚ್ಚಯೇ'' – 'ಆತ್ಮನಿ ಚೈವಂ" ಇತ್ಯಾದಿ ಸೂತ್ರದಿಂದ ಹೇಳಲ್ಪಟ್ಟ "ವಿಚಿತ್ರಾಶೇಷಶಕ್ತ್ಯಾದಿಗಳುಳ್ಳವನಾಗಿರುವುದು'' ಎಂಬ ಹೇತುವಿನೊಡನೆ, "ಶ್ರುತೇಸ್ತು'' ಎಂಬ ಸೂತ್ರೋಕ್ತವಾದ ಅಲೌಕಿಕತ್ವಶ್ರವಣ, "ಆಗಮೈಕ ಗಮ್ಯತ್ವ"ವೆಂಬ ಹೇತುಗಳಿಗೆ ಸಮುಚ್ಚಯಾರ್ಥದಲ್ಲಿ ಚಶಬ್ದವಿದೆಯೆಂದು ಅರ್ಥ ಇದನ್ನೇ ವಿಶದಪಡಿಸುತ್ತ "ಶ್ರುತೇಸ್ತು" ಎಂಬ ಸೂತ್ರೋಕ್ತ ಹೇತುವಿನ ಅರ್ಥವನ್ನು "ಈಶ್ವರಸ್ಯಾಲೌಕಿಕತ್ವಶ್ರುತೇಃ'' ಎಂಬ ವಚನದಿಂದ ಹೇಳುತ್ತಾರೆ "ಯೋಽಸೌ ವಿರುದ್ಧೋಽವಿರುದ್ಧೋ ಮನುರಮನುರನಾಗ್ನಿರಿಂದ್ರೋಽನಿಂದ್ರಃ ಪ್ರವೃತ್ತಿರಪ್ರವೃತ್ತಿಃ ಸ ಪರಃ ಪರಮಾತ್ಮಾ" ಎಂಬ ಭಾಷ್ಯದಲ್ಲಿ ಹೇಳಿದ ಪೈಂಗಿ ಶ್ರುತಿಯಲ್ಲಿ ಅಲೌಕಿಕತ್ವವು ಶ್ರುತ(ಹೇಳಲ್ಪಟ್ಟದ್ದು)ವಾಗುವುದರಿಂದ, ಹೀಗೆ ಅರ್ಥ "ಶಬ್ದಮೂಲತ್ವಾತ್'' ಎಂಬ ಸೂತ್ರಾಂಶದ ತಾತ್ಪರ್ಯವನ್ನು ಆಗಮೈಕಗಮ್ಯ-

विरोधानवकाशाद्विचित्रशक्तिः पुरुषः सर्वैर्युक्ता शक्तिर्देवता सेत्यादि-श्रुतिभिर्विचित्राशेषशक्तित्वावगमाच्च । सर्वं भिन्नांशरहितस्यापि कार्येषु कृत्स्नप्रसक्त्यभावः स्वरूपांशबाहुल्येऽपि भेदाभावोंऽशतः कार्यकरणेऽपि निरवयत्वशब्दकोपाभावो देहादिरहितस्यापि कर्तृत्व-निर्वाह इत्यादि युज्यत इति ।

— ಪದಾರ್ಥದೀಪಿಕಾ —

ತಿಳಿಯಲ್ಪಡತಕ್ಕವನಾದುದರಿಂದ ಯುಕ್ತಿ ವಿರೋಧಕ್ಕೆ ಅವಕಾಶವಿಲ್ಲವಾದುದರಿಂದಲೂ "ವಿಚಿತ್ರ ಶಕ್ತಿಃ ಪುರುಷಃ, ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ" ಇತ್ಯಾದಿ ಶ್ರುತಿಗಳಿಂದ ವಿಚಿತ್ರವಾದ ಎಲ್ಲ ಶಕ್ತಿಯುಳ್ಳವನೆಂದು ತಿಳಿದು ಬರುವುದರಿಂದಲೂ, "ಸರ್ವಂ"- ಭಿನ್ನವಾದ ಅಂಶಗಳಿಂದ ರಹಿತನಾದರೂ ಈಶ್ವರನಿಗೆ ಕಾರ್ಯಗಳನ್ನು ಮಾಡುವ ವಿಷಯದಲ್ಲಿ ಸಮಗ್ರಶಕ್ತಿಯ ಪ್ರಸಕ್ತಿಯು ಇಲ್ಲವೆಂಬುದು. ಸ್ವರೂಪ (ಅಭಿನ್ನ) ಅಂಶಗಳು ಬಹಳವಿರುತ್ತಿದ್ದರೂ ಸಹ ಭೇದವಿಲ್ಲದಿರುವುದು, ಅಂಶದಿಂದ ಕಾರ್ಯವನ್ನು ಮಾಡಿದರೂ ನಿರವಯವತ್ವ ಶ್ರುತಿಯ ವ್ಯಾಕೋಪವಿಲ್ಲದಿರುವುದು, ದೇಹಾದಿಗಳಿಲ್ಲದವನಿಗೂ ಕರ್ತೃತ್ವದ ನಿರ್ವಾಹವಾಗುವುದು, ಈ ಮುಂತಾದುದು ಯುಕ್ತವಾಗುತ್ತದ" ಹೀಗೆ ಅರ್ಥ

— ವಿಶೇಷಾರ್ಥಪ್ರದೀಪಿಕಾ —

ತ್ವೇನ" ಎಂಬ ವಚನದಿಂದ ಹೇಳಿದ್ದಾರೆ ' ಯುಕ್ತಿವಿರೋಧಾನವಕಾಶಾತ್" -- "ಶಾಸ್ತ್ರಯೋನಿತ್ವಾತ್" ಎಂಬ ಸೂತ್ರದಲ್ಲಿ "ಯುಕ್ತಿಗೆ ಅಲೌಕಿಕ ಅರ್ಥದ ಬಗ್ಗೆ ಸಾಧಕತ್ವವು ಇಲ್ಲ" ಎಂಬುದಾಗಿ ಹೇಳಲ್ಪಟ್ಟಿದೆ ಈ ಅಧಿಕರಣದಲ್ಲಿ "ಯುಕ್ತಿಯು ವಿರೋಧಕವಾಗುವುದಿಲ್ಲ" ಎಂಬುದಾಗಿ ಹೇಳಲ್ಪಡುವುದರಿಂದ, ಶಾಸ್ತ್ರಯೋನಿತ್ವ ಸೂತ್ರದಿಂದ ಈ ಸೂತ್ರಕ್ಕೆ ಗತಾರ್ಥತೆಯು ಇಲ್ಲವೆಂಬುದು ಇದರಿಂದ ಸೂಚಿತವಾಗುವದೆಂದು ತಿಳಿಯಬೇಕು "ಆತ್ಮನಿ ಚೈವಂ ವಿಚಿತ್ರಾಶ್ಚ ಹಿ, ಸರ್ವೋಪೇತಾ ಚ ತದ್ದರ್ಶನಾತ್" ಈ ಎರಡು ಸೂತ್ರಗಳಿಂದ ಹೇಳಿದ, ಮೂಲದಲ್ಲಿ ಗ್ರಹಿಸಲ್ಪಟ್ಟ ಯುಕ್ತಿ(ಹೇತು)ಯನ್ನು ಸಪ್ರಮಾಣವಾಗಿ "ವಿಚಿತ್ರಶಕ್ತಿಃ" ಈ ವಾಕ್ಯದಿಂದ ಹೇಳುತ್ತಾರೆ "ಭಾಷ್ಯದಲ್ಲಿ ಹೇಳಿದ ಶ್ರುತಿಗಳಿಂದ" ಎಂದು ಇಲ್ಲಿ ತಿಳಿಯಬೇಕು "ವಿಚಿತ್ರಶಕ್ತಿಃ ಪುರುಷಃ ಪುರಾಣೋ ನ ಚಾನ್ಯೇಷಾಂ ಶಕ್ತಯಸ್ತಾದೃಶಾಃ ಸ್ಯುಃ ॥ ಏಕೋ ವಶೀ ಸರ್ವಭೂತಾಂತರಾತ್ಮಾ ಸರ್ವಾನ್ ದೇವಾನೇಕ ಏವಾನುವಿಷ್ಟಃ" ಇತ್ಯಾದಿ ಶ್ವೇತಾಶ್ವತರ ಶ್ರುತಿವಾಕ್ಯಗಳನ್ನಿಲ್ಲಿ ತಿಳಿಯಬೇಕು

"ಸರ್ವಂ" ಎಂಬುದು ಮೂಲಾನುವಾದ "ಭಿನ್ನ" ಎಂಬುದರಿಂದ

ननु दुर्घटमपि जीवकर्तृत्वमीश्वरशक्त्या घटत इत्यतीताधिकरणेऽभिहितम् । तथा च कथमत्र पूर्वपक्षावकाशः । यो हि परत्र प्रमितं घटयितुमीष्टे । सः स्वस्मिन्नेष्टे इत्यसम्भावितम् । उच्यते । नैषोऽर्थः सूत्रकृताऽतीताधिकरणेऽभिहितः । किन्त्वागामिनमर्थं मनसि निधाय जीवकर्तृत्ववादनिरास एव विहितः । भाष्यकारेण तु शिष्य - हितैषिणा वक्ष्यमाणमप्यर्थमाकृष्य पूर्वोत्तरविरोधः परिहृत इति ।

— ಪದಾರ್ಥದೀಪಿಕಾ —

ಇನ್ನು- " ದುರ್ಘಟವಾದ ಜೀವಕರ್ತೃತ್ವವೂ ಈಶ್ವರನ ಅಚಿಂತ್ಯ ಶಕ್ತಿಯಿಂದ ಯುಕ್ತವೆನಿಸುವುದೆಂಬ ಸಂಗತಿಯು ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟದೆ ಆದುದರಿಂದ, ಇಲ್ಲಿ ಪೂರ್ವಪಕ್ಷಕ್ಕೆ ಅವಕಾಶವು ಹೇಗೆ? ಏಕಂದರೆ- ಎರಡನಯುವರಲ್ಲಿ ಕಾರ್ಯದ ಘಟನೆಯನ್ನು ಮಾಡಲು ಸಮರ್ಥನು ಯಾವನೋ ಅವನು ತನ್ನಲ್ಲಿ ಆ ಕಾರ್ಯ ಘಟನೆಯನ್ನು ಮಾಡಲು ಸಮರ್ಥ ನಲ್ಲವೆಂದಲ್ಲ " (ಸಮರ್ಥನೇ) ಹೀಗೆ ಪ್ರಶ್ನೆಯು ಬರುತ್ತದೆ ಅದರ ಉತ್ತರವನ್ನು "ಈ ಅರ್ಥವು ಹಿಂದಿನ ಅಧಿಕರಣದಲ್ಲಿ ಸೂತ್ರಕಾರರಿಂದ ಹೇಳಲ್ಪಟ್ಟಿಲ್ಲ ಆದರೆ, ಮುಂದೆ ಹೇಳಲಾಗುವ ಈ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು, ಜೀವಕರ್ತೃತ್ವದ ವಾದವಷ್ಟೇ ನಿರಾಕರಿಸಲ್ಪಟ್ಟಿತು ಆದರೆ ಭಾಷ್ಯಕಾರರು, ಶಿಷ್ಯರಿಗೆ ಹಿತ ಬಯಸುವವರಾದುದರಿಂದ, ಮುಂದೆ ಹೇಳಬೇಕಾದ ಅರ್ಥವನ್ನೂ ಎಳೆದು ಹೇಳಿ, ಪೂರ್ವೋತ್ತರ ವಿರೋಧವನ್ನು ಪರಿಹರಿಸುತ್ತಾರೆ" ಹೀಗೆ ಹೇಳುತ್ತೇವೆ

— ವಿಶೇಷಾರ್ಥಪ್ರದೀಪಿಕಾ —

ಆರಂಭಿಸಿ, " ಇತ್ಯಾದಿ " ಇಲ್ಲಿಯವರೆಗಿನ ಗ್ರಂಥವು ಅದರ ವ್ಯಾಖ್ಯಾನವು

"ವಕ್ಷ್ಯಮಾಣಂ" = "ಶ್ರುತೇಸ್ತು" ಎಂಬಲ್ಲಿ ಹೇಳಲಾಗುವ "ಪೂರ್ವೋತ್ತರವಿರೋಧಃ" —"ಕೃತ್ಸ್ನಪ್ರಸಕ್ತಿರ್ನಿರವಯವತ್ವಶಬ್ದಕೋಪೋ ವಾ' ಎಂಬುದಾಗಿ ಮಾಡಿದ ಜೀವಕರ್ತೃತ್ವದ ಆಕ್ಷೇಪಕ್ಕೂ ಅನಂತರ ಹೇಳುವ · ಕರ್ತಾ ಶಾಸ್ತ್ರಾರ್ಥವತ್ವಾತ್" ಎಂಬ ಸೂತ್ರೋಕ್ತವಾದ ಜೀವಕರ್ತೃತ್ವಕ್ಕೂ ಇರುವ ವಿರೋಧವು ಅಚಿಂತ್ಯಶಕ್ತಿಯುಳ್ಳ ಪರಮೇಶ್ವರಾಧೀನ ಕರ್ತೃತ್ವದಲ್ಲಿ "ಕರ್ತಾ" ಎಂಬುದಕ್ಕೆ ತಾತ್ಪರ್ಯವಿದ್ದುದರಿಂದ, ಈಶ್ವರಾಧೀನ ಕರ್ತೃತ್ವದ ಮೇಲೆ ಆಕ್ಷೇಪವೆಂದು ಹೇಳಿದುದರಿಂದ ವಿರೋಧವು ಪರಿಹರಿಸಲ್ಪಟ್ಟಿತು, ಹೀಗೆ ಭಾವ

ಪರಮತದಲ್ಲಿ - " ಕೃತ್ಸ್ನಪ್ರಸಕ್ತಿಃ " ಇತ್ಯಾದಿ ಸೂತ್ರವು ಪೂರ್ವಪಕ್ಷ

परिणामवादिनो विवर्तवादिनश्च ब्रह्मणो जगदुपादानत्वं कृत्स्नप्रसक्तिरित्यनेनाक्षिप्य श्रुतेस्त्वित्यादिना समाधीयत इति व्याचक्षते । तथा हि । न ब्रह्म जगदुपादानम् । यतस्तथात्वे कृत्स्नस्यापि ब्रह्मणः कार्याकारताप्रसक्तिः स्यात् । स्थितौ च ब्रह्माभावे तद्दर्शनोपदेशानर्थक्यादि स्यात् । अथैतद्दोषपरिजिहीर्षया ब्रह्म एकदेशेन परिणमते । एकदेशेन चावतिष्ठत इत्युच्यते । तदा निष्कलं शान्तमित्यादिनिर-

— ಪದಾರ್ಥದೀಪಿಕಾ —

ಪರಿಣಾಮವಾದಿಗಳೂ ವಿವರ್ತವಾದಿಗಳೂ "ಬ್ರಹ್ಮನು ಜಗದುಪಾದಾನ ಕಾರಣವೆಂಬುದನ್ನು " ಕೃತ್ಸ್ನಪ್ರಸಕ್ತಿಃ " ಎಂಬುದಾಗಿರುವ ಸೂತ್ರದಿಂದ ಆಕ್ಷೇಪಿಸಿ, " ಶ್ರುತೇಸ್ತು " ಇತ್ಯಾದಿ ಸೂತ್ರಗಳಿಂದ ಅದರ ಸಮಾಧಾನವು ಹೇಳಲ್ಪಡುವುದು " ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ ಹೇಗೆಂದರೆ– ಬ್ರಹ್ಮವು ಜಗತ್ತಿನ ಉಪಾದಾನಕಾರಣವಲ್ಲ ಏಕೆಂದರೆ ಸಮಗ್ರವಾದ ಬ್ರಹ್ಮನಿಗೂ ಕಾರ್ಯಾಕಾರಪರಿಣಾಮದ ಪ್ರಸಂಗವು ಬರುತ್ತದೆ ಇದರಿಂದ ಅನಿತ್ಯವಾಗುವುದರಿಂದಬ್ರಹ್ಮವು ಇಲ್ಲದಂತಾಗಿ, ಬ್ರಹ್ಮದರ್ಶನ, ಉಪದೇಶ. ಇವುಗಳಿಗೆ ಆನರ್ಥಕ್ಯವು ಬರಬೇಕಾಗುತ್ತದೆ ಇನ್ನು ಈ ದೋಷವನ್ನು ಪರಿಹರಿಸುವ ಅಪೇಕ್ಷೆಯಿಂದ, "ಬ್ರಹ್ಮವು ತನ್ನ ಏಕದೇಶದಿಂದ ಪರಿಣಾಮವನ್ನು ಹೊಂದುತ್ತದೆ ಏಕದೇಶದಿಂದ ಪರಿಣಮಿಸುವುದಿಲ್ಲ," ಎಂದು ಹೇಳುವುದಾದರೆ– ಆಗ "ನಿಷ್ಕಲಂ,

— ವಿಶೇಷಾರ್ಥಪ್ರದೀಪಿಕಾ —

ಸೂತ್ರವು " ಶ್ರುತೇಸ್ತು " ಈ ಮುಂತಾದ ಮೂರು ಸೂತ್ರಗಳು ಸಿದ್ಧಾಂತಸೂತ್ರಗಳು "ಸರ್ವೋಪೇತಾ ಚ" ಇತ್ಯಾದಿಯಾದ ಎರಡು ಸೂತ್ರಗಳು ಸೇರಿ ಪ್ರತ್ಯೇಕವಾದ–ಬೇರೆ-ಅಧಿಕರಣವು ಹೀಗಿರುವಾಗ ಅವುಗಳಲ್ಲಿ ನಾಲ್ಕು ಸೂತ್ರಗಳ ತಾತ್ಪರ್ಯಾರ್ಥವನ್ನು "ಪರಿಣಾಮವಾದಿನೋ" ಇತ್ಯಾದಿ ವಚನಗಳಿಂದ ಹೇಳುತ್ತಾರೆ ಪೂರ್ವಪಕ್ಷಸೂತ್ರಾರ್ಥವನ್ನು ' ನ ಬ್ರಹ್ಮ" ಇತ್ಯಾದಿ ವಾಕ್ಯಗಳಿಂದ ಅನುವಾದ ಮಾಡುತ್ತಾರೆ "ತದ್ದರ್ಶನೋಪದೇಶಾನರ್ಥಕ್ಯಾದಿ" — "ಆತ್ಮಾವಾ ಅರೇ ದ್ರಷ್ಟವ್ಯಃ," ಎಂಬುದಾಗಿ ಬ್ರಹ್ಮದರ್ಶನಕ್ಕಾಗಿ ಶ್ರವಣಾದಿಗಳ ಉಪದೇಶವೂ, "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬುದಾಗಿ ಬ್ರಹ್ಮಸ್ವರೂಪದ ಉಪದೇಶವೂ ವ್ಯರ್ಥವಾಗಲಿ, ಹೀಗೆ ಭಾವ ಇಲ್ಲಿ "ಆದಿ" ಪದದಿಂದ, "ಬ್ರಹ್ಮಭಾವಾಪತ್ತಿಯೆಂಬ ಮೋಕ್ಷದ ಅಭಾವ" ಮುಂತಾದುದರ ಸಂಗ್ರಹವಿದೆ

वयत्वशब्दकोपः स्यादिति । अत्रोच्यते । नायं दोषः । तदात्मानं स्वयमकुरुतेत्यादिश्रुतेर्ब्रह्मणो जगदुपादानत्वस्य कृत्स्नपरिणामाभावस्य चावगमात् । शब्दमूलत्वेन युक्तिविरोधानवकाशाच्च । अपि च सर्व-शक्त्युपेता च परदेवता श्रूयते । सर्वकर्मा सर्वकाम इत्यादि । ततो निरवयवस्यापि ब्रह्मणः कृत्स्नप्रसक्त्यभावेनैव जगदुपादानत्वमुपपन्न-मित्यादि ।

— ಪದಾರ್ಥದೀಪಿಕಾ —

ಶಾಂತಂ" ಇತ್ಯಾದಿಯಾಗಿರುವ, ನಿರವಯವತ್ವ(ಅವಯವ(ಅಂಶ)ಗಳಿಲ್ಲವೆಂಬು ದನ್ನು) ವನ್ನು ಪ್ರತಿಪಾದಿಸುವ ಶ್ರುತಿಯ ವಿರೋಧವು ಬರುತ್ತದೆ." ಹೀಗೆ ಪೂರ್ವಪಕ್ಷವು ಬಂದರೆ– ಇದರ ಮೇಲೆ ಹೀಗೆ ಉತ್ತರ ಹೇಳುತ್ತೇವೆ 'ಇದು ದೋಷವಲ್ಲ ಏಕೆಂದರೆ– "ತದಾತ್ಮಾನಂ ಸ್ವಯಮಕುರುತ" ಇತ್ಯಾದಿ ಶ್ರುತಿ ಗಳಿಂದ ಬ್ರಹ್ಮವು ಜಗತ್ತಿನ ಉಪಾದಾನಕಾರಣವೆಂಬ ಸಂಗತಿಯೂ ಅದಕ್ಕೆ ಕೃತ್ಸ್ನ (ಸಮಗ್ರ) ಪರಿಣಾಮವಿಲ್ಲವೆಂಬ ಸಂಗತಿಯೂ ತಿಳಿದು ಬರುತ್ತದೆ. ಮತ್ತು ಶಬ್ದ (ವೇದ) ಗಳೇ ಮೂಲಪ್ರಮಾಣವಾದುದರಿಂದ ಯುಕ್ತಿಯಿಂದ ವಿರೋಧಕ್ಕೆ ಅವಕಾಶವಿರುವುದಿಲ್ಲ ಮತ್ತು ಸರ್ವಶಕ್ತಿಯಿಂದ ಕೂಡಿದುದೆಂಬು ದಾಗಿ ಪರದೇವತೆಯು "ಸರ್ವಕರ್ಮಾ ಸರ್ವಕಾಮ" ಇತ್ಯಾದಿಯಾಗಿ ಶ್ರುತಿಯಲ್ಲಿ ಹೇಳಲ್ಪಡುತ್ತದೆ ಆದುದರಿಂದ, ನಿರವಯವವಾದರೂ ಬ್ರಹ್ಮಕ್ಕೆ ಸಮಗ್ರ ಪರಿ ಣಾಮ (ಪ್ರಸಂಗ) ವಿಲ್ಲವಾದುದರಿಂದಲೇ ಜಗತ್ತಿನ ಉಪಾದಾನಕಾರಣತ್ವವು ಯುಕ್ತವೆನಿಸುತ್ತದೆ" ಇತ್ಯಾದಿಯಾಗಿ ಅವರ ವ್ಯಾಖ್ಯಾನ

— ವಿಶೇಷಾರ್ಥಪ್ರದೀಪಿಕಾ —

"ಅತ್ರೋಚ್ಯತೇ— ಹೀಗೆ ಪೂರ್ವಪಕ್ಷವು ಬರಲು ಸಿದ್ಧಾಂತವು ಹೇಳ ಲ್ಪಡುತ್ತದೆಯೆಂದು ಅರ್ಥವು ಪರರ ರೀತಿಯಿಂದ ಸೂತ್ರಾರ್ಥಗಳನ್ನು ವಿಶದ ಪಡಿಸಿ, ಅವರ ಸಿದ್ಧಾಂತವನ್ನು "ನಾಯಂ ದೋಷಃ" ಇತ್ಯಾದಿ ವಚನಗಳಿಂದ ಅನುವಾದಮಾಡುತ್ತಾರೆ

"ಅಪಿ ಚ" –ಹಿಂದಿನ ವಾಕ್ಯದಿಂದ "ಶ್ರುತೇಸ್ತು' ಇತ್ಯಾದಿ ಸೂತ್ರಾರ್ಥ ವನ್ನು ಅನುವಾದಿಸಿ, ಈಗ ಈ ವಾಕ್ಯದಿಂದ "ಸರ್ವೋಪೇತಾ ಚ" ಎಂಬ ಸೂತ್ರಾರ್ಥ ವನ್ನು ಅನುವಾದಿಸುತ್ತಾರೆ

ಬ್ರಹ್ಮತಂತ್ರದಲ್ಲಿ-ನಾರಾಯಣನ ಪ್ರಸಕ್ತಿಯು ಯಾವುದು? ಈ ಆಶಂಕೆ

विरोधः सर्ववैशिष्ट्ये यो द्वितीये निरस्यते ॥
नारायणस्य त्वध्याये

तदेतद्व्याख्यानमनुपपन्नम् । एवं सत्येषां सूत्राणामेतदध्यायान्तर्भावलक्षणसङ्गत्यभावप्रसङ्गात् । तत्कथमित्यत आह ॥ विरोध इति । तुशब्दोऽवधारणे । परब्रह्मणो नारायणस्य सर्वस्माच्चेतनादचेतनाच्च वैशिष्ट्ये वैलक्षण्ये परमोत्कृष्टत्वेऽत्यन्तव्यावृत्तत्वे च यो युक्त्यादिविरोधः स एवात्र द्वितीयेऽध्याये निरस्यते । न तु सकल-

ಪರಬ್ರಹ್ಮನಾದ ನಾರಾಯಣನಿಗೆ, ಚೇತನಾಚೇತನರೂಪ ಪ್ರಪಂಚದಿಂದ ವೈಲಕ್ಷಣ್ಯ, ಸರ್ವೋತ್ತಮತ್ವ ಮುಂತಾದ ರೂಪ ವೈಶಿಷ್ಟ್ಯದ ವಿಷಯದಲ್ಲಿ ಯಾವ ಯುಕ್ತ್ಯಾದಿ ವಿರೋಧವೋ ಅದೇ ಈ (೨ನೇ) ಅಧ್ಯಾಯದಲ್ಲಿ ಪರಿಹರಿಸಲ್ಪಡುತ್ತದೆ.

## — ಪದಾರ್ಥದೀಪಿಕಾ —

ಇವರ ಈ ವ್ಯಾಖ್ಯಾನವು ಅಯುಕ್ತವಾದುದು ಏಕೆಂದರೆ– ಹಾಗಾದಲ್ಲಿ ಈ ಸೂತ್ರಗಳಿಗೆ ಈ ಅಧ್ಯಾಯದಲ್ಲಿ ಅಂತರ್ಭಾವರೂಪ ಸಂಗತಿಯು ಇಲ್ಲವಾಗುವ ಪ್ರಸಂಗವು ಬರುತ್ತದೆ ಅದು ಹೇಗೆ? ಎಂಬ ಪ್ರಶ್ನೆಯನ್ನು ಉತ್ತರಿಸಲು "ವಿರೋಧಃ' ಇತ್ಯಾದಿ ವಚನವನ್ನು ಹೇಳಿರುತ್ತಾರೆ "ತು" ಶಬ್ದವು ಅವಧಾರಣಾರ್ಥದಲ್ಲಿದೆ ಪರಬ್ರಹ್ಮನಾದ ನಾರಾಯಣನಿಗ "ಸರ್ವವೈಶಿಷ್ಟ್ಯೇ"= ಸರ್ವಸ್ಮಾತ್– ಎಲ್ಲ ಚೇತನಾಚೇತನರೂಪ ವಿಶ್ವದಿಂದ "ವೈಶಿಷ್ಟ್ಯೇ"= ಪರಮೋತ್ಕರ್ಷವೆಂಬ ವೈಲಕ್ಷಣ್ಯದ ವಿಷಯದಲ್ಲಿ ಹಾಗು ಅತ್ಯಂತ ಭಿನ್ನತೆಯ ವಿಷಯದಲ್ಲಿ ಯಾವ ಯುಕ್ತಿವಿರೋಧವೋ ಅದೇ "ಅತ್ರ"— ಈ ದ್ವಿತೀಯಾಧ್ಯಾ

## — ವಿಶೇಷಾರ್ಥಪ್ರದೀಪಿಕಾ —

ಯನ್ನು "ಪರಬ್ರಹ್ಮಣಃ'' ಇತ್ಯಾದಿ ವಾಕ್ಯಗಳಿಂದ ಪರಿಹರಿಸುತ್ತಾರೆ "ಸ ಏವ ಬ್ರಹ್ಮಶಬ್ದಾರ್ಥಃ ನಾರಾಯಣಪದೋದಿತಃ" ಎಂಬುದಾಗಿ ಹಿಂದೆ ಜಿಜ್ಞಾಸಾಧಿಕರಣದಲ್ಲಿಯೇ ಹೇಳಲಾಗಿದೆ ಆದುದರಿಂದ ನಾರಾಯಣನ ಪ್ರಸಕ್ತಿಯೆಂದು ಭಾವವು

"ಪಂಚಮೀ ಭಯೇನ" ಎಂಬಲ್ಲಿ ಯೋಗವಿಭಾಗವಿರುವುದರಿಂದ, ಸಮಾಸವಾಗಿದೆಯೆಂಬ ಅಭಿಪ್ರಾಯದಿಂದ ''ಸರ್ವವೈಶಿಷ್ಟ್ಯೆ ಎಂಬುದರ ಅರ್ಥವನ್ನು ''ಸರ್ವಸ್ಮಾತ್" ಎಂಬ ವಚನದಿಂದ ಹೇಳುತ್ತಾರೆ. ''ವೈಲಕ್ಷಣ್ಯೇ" – ಜಗಜ್ಜನಕತ್ವಾದಿರೂಪವಾದ ವಿಶಿಷ್ಟಲಕ್ಷಣತ್ವವಿರಲು ಅಥವಾ ಲೋಕದಲ್ಲಿ ಅಂತರ್ಗತನಾಗದಿರುವುದರಿಂದ, ಅಲೌಕಿಕನಾಗಿರಲು, ಹೀಗೆ ಅರ್ಥ

जगदुपादानत्वम् । सकलजगदुपादानत्वेन सर्वात्मकत्वं तु न सर्ववैशिष्ट्यम् । नापि तदुपयुक्तम् । प्रत्युत विरुद्धमेव । तत्कथं तत्र विरोधपरिहारोऽत्रान्तर्भावमासादयेत् ।

ननु जगदुपादानत्वादेव सर्ववैशिष्ट्यं ब्रह्मणः । न हि जगज्जगदुपादानमिति चेत् । तत्किमुपादानोपादेययोर्भेदं मन्यसे । तथा च तदनन्यत्वमित्युक्तविरोधः । जगत् ब्रह्मणो न भिद्यते ब्रह्म तु जगतो भिद्यत इति चेत् । न । उक्तोत्तरत्वात् । प्राग्ब्रह्मोपादानत्वस्यानुक्त-

— ಪದಾರ್ಥದೀಪಿಕಾ —

ಯದಲ್ಲಿ ನಿರಾಕರಿಸಲ್ಪಡುತ್ತದೆ ಹೊರತಾಗಿ ಜಗದುಪಾದಾನತ್ವವು ಇಲ್ಲಿ ಹೇಳಲ್ಪಡುವುದಿಲ್ಲ ಜಗದುಪಾದಾನವೆಂಬ ಕಾರಣದಿಂದ ಬರುವ ಸರ್ವಾತ್ಮಕತ್ವವಾದರೋ ಸರ್ವದಿಂದ (ವಿಶ್ವದಿಂದ) ವೈಶಿಷ್ಟ್ಯವೆನಿಸುವುದಿಲ್ಲ ಮತ್ತು ಅದು ಉಪಯುಕ್ತವೂ ಅಲ್ಲ ಬದಲಾಗಿ ವಿರುದ್ಧವೇ ಆದುದು ಆದುದರಿಂದ ಜಗದುಪಾದಾನಕಾರಣತ್ವದ ಬಗೆಗಿನ ವಿರೋಧ ಪರಿಹಾರವು ಈ ಅಧ್ಯಾಯದಲ್ಲಿ ಅಂತರ್ಭಾವವನ್ನು ಹೇಗೆ ಹೊಂದುತ್ತದೆ ?

ಇನ್ನು– "ಜಗತ್ತಿನ ಉಪಾದಾನಕಾರಣವಾದುದರಿಂದಲೇ ಬ್ರಹ್ಮನಿಗೆ ಸರ್ವವೈಶಿಷ್ಟ್ಯವು ಏಕೆಂದರೆ ಜಗತ್ತು, ಜಗತ್ತಿನ ಉಪಾದಾನವಾಗಲಾರದು" ಹೀಗೆ ಹೇಳುವುದಾದರೆ– ಉಪಾದಾನ-ಉಪಾದೇಯಗಳಲ್ಲಿ ಭೇದವೆಂದು ತಿಳಿಯುವಿರೋ ? ಹಾಗಾದಲ್ಲಿ "ತದನನ್ಯತ್ವಂ" ಇತ್ಯಾದಿ ಅಧಿಕರಣವಿರೋಧವು ಬರುತ್ತದೆ ಜಗತ್ತು ಬ್ರಹ್ಮನಿಂದ ಭಿನ್ನವಾಗುವುದಿಲ್ಲ ಆದರೆ ಬ್ರಹ್ಮವು ಜಗತ್ತಿನಿಂದ ಭಿನ್ನವಾಗುತ್ತದೆಂಬ ಹೇಳಿಕೆಯು ಸರಿಯಾದುದಲ್ಲ ಏಕೆಂದರೆ– ಈ ಮಾತಿಗೆ ಹಿಂದೆ ಉತ್ತರ ಹೇಳಲಾಗಿದೆ ಹಿಂದೆ ಬ್ರಹ್ಮವು ಉಪಾದಾನವೆಂಬ

— ವಿಶೇಷಾರ್ಥಪ್ರದೀಪಿಕಾ —

"ತು" ಶಬ್ದದ ಅರ್ಥವನ್ನೇ "ಸ ಏವ' ಎಂಬುದಾಗಿ ಹೇಳಿದ್ದಾರೆ

"ವಿರುದ್ಧಮೇವ' - ಸರ್ವರಿಂದ ಅಭೇದವಿದ್ದರೆ, 'ಸರ್ವರಿಂದ ವೈಶಿಷ್ಟ್ಯವು ಯುಕ್ತವೆನಿಸಲಾರದು ಈ ವಿರೋಧದ ಪರಿಹಾರವನ್ನು "ನನು ಜಗದುಪಾದಾನತ್ವಾದೇವ" ಈ ವಾಕ್ಯದಿಂದ ಆಶಂಕಿಸುತ್ತಾರೆ

"ಉಕ್ತೋತ್ತರತ್ವಾತ್" - "ಭೋಕ್ತ್ರಾಪತ್ತೇಃ" ಎಂಬ ಅಧಿಕರಣದಲ್ಲಿ "ನಾನ್ಯದನ್ಯತ್ವಮಾಪನ್ನಂ ಕ್ವಚಿದ್ ದೃಷ್ಟಂ ಕಥಂಚನ" ಎಂಬ ಅನುವ್ಯಾ

त्वात्कृत्स्नप्रसक्त्यादिपरिचोदनैवानवकाशा । परिणामप्रतिपादकश्रुतेरभावेन गगनादिप्रपञ्चात्मकस्य तदसम्भवि शब्दमूलत्वसर्वशक्तित्वाद्यसम्भवेन च समाधानमप्ययुक्तम् ।

विवर्तवादे तु सर्वथाऽपि नैषा शङ्काऽवकाशमश्नुते । शुक्त्यादिकामिव रजताद्यारोपस्य ब्रह्म आविद्यकप्रपञ्चारोपस्याधिष्ठानमिति स्पष्टमारम्भणाधिकरणेऽभिहितम् । तत्र कथं कृत्स्नैकदेशविचारः । उक्ता-

— ಪದಾರ್ಥದೀಪಿಕಾ —

ಸಂಗತಿಯನ್ನು ಹೇಳಿಲ್ಲವಾದುದರಿಂದ, "ಕೃತ್ಸ್ನಪ್ರಸಕ್ತಿಃ" ಇತ್ಯಾದಿಯಾದ ಪರಿಚೋದನೆಗೆ ಅವಕಾಶವೇ ಇಲ್ಲ ಮತ್ತು ಪರಿಣಾಮ ಪ್ರತಿಪಾದಕ ಶ್ರುತಿಯು ಇಲ್ಲವಾದುದರಿಂದ, ಗಗನಾದಿ ಪ್ರಪಂಚರೂಪವಾದ ಬ್ರಹ್ಮವಸ್ತುವಿಗೆ ಅಲ್ಲಿ ಅಸಂಭಾವಿತವಾದ ಶಬ್ದಮೂಲತ್ವ, ಸರ್ವಶಕ್ತಿತ್ವ ಮುಂತಾದುದು ಸಂಭವಿಸುವುದಿಲ್ಲವಾದುದರಿಂದ, ಅವರು ಹೇಳಿದ ಸಮಾಧಾನವೂ ಯುಕ್ತವಲ್ಲ

ವಿವರ್ತವಾದದಲ್ಲಿಯಂತೂ ಈ ಶಂಕೆಯು ಸರ್ವಥಾ ಅವಕಾಶವನ್ನು ಪಡೆಯುವುದಿಲ್ಲ ಏಕೆಂದರೆ–ರಜತ ಮುಂತಾದುದಕ್ಕೆ ಶುಕ್ತಿಮುಂತಾದುದು ಹೇಗೋ ಹಾಗೆ ಅವಿದ್ಯೆಯಿಂದ ಕಲ್ಪಿತವಾದ ಪ್ರಪಂಚಕ್ಕೆ ಬ್ರಹ್ಮವು ಅಧಿಷ್ಠಾನವೆಂದು ಸ್ಪಷ್ಟವಾಗಿ ಆರಂಭಣಾಧಿಕರಣದಲ್ಲಿ ಹೇಳಲ್ಪಟ್ಟಿದೆ ಅದರ ಮೇಲೆ ಕೃತ್ಸ್ನ ಹಾಗು ಏಕದೇಶದ ಬಗ್ಗೆ ವಿಚಾರವು ಹೇಗೆ ಹೊರಡುವುದು ? ಹಿಂದೆ ಹೇಳಿ

— ವಿಶೇಷಾರ್ಥಪ್ರದೀಪಿಕಾ —

ಖ್ಯಾನದ ವಿವರಣಸಮಯದಲ್ಲಿ "ಯಃ ಕದಾಚಿತ್ ಯತೋಽತ್ಯಂತಂ ಭಿದ್ಯತೇ ನಾಸೌ ಕದಾಚಿತ್ ತದೈಕ್ಯಮಾಪದ್ಯತೇ ಯಥಾ ಘಟಃ ಪಟೇನ" ಇತ್ಯಾದಿ ವಾಕ್ಯಗಳಿಂದ ಹೇಳಲಾಗಿದೆಯೆಂದು ತಿಳಿಯಬೇಕು "ಅನುಕ್ತತ್ವಾತ್" ಪ್ರಕೃತಿ ಮುಂತಾದ ಅಧಿಕರಣಗಳನ್ನು ಬೇರೆ ಅರ್ಥಪರವಾಗುವ ಹಾಗೆ ವ್ಯಾಖ್ಯಾನ ಮಾಡಿದುದರಿಂದ ಜಗದುಪಾದಾನತ್ವವೆಂಬ ಸಂಗತಿಯು ಹೇಳಲ್ಪಟ್ಟಿಲ್ಲ, ಹೀಗೆ ಭಾವ ತಿಳಿಯಬೇಕು "ಪರಿಣಾಮಪ್ರತಿಪಾದಕಶ್ರುತೇರಭಾವೇನ" - "ತದಾತ್ಮಾನಂ ಸ್ವಯಮಕುರುತ"ಎಂಬ, ಪರಿಣಾಮಪ್ರತಿಪಾದಕವೆಂದು ಪರನು ಗ್ರಹಿಸಿದ ಶ್ರುತಿಯನ್ನು"ಆತ್ಮಕೃತೇಃ ಪರಿಣಾಮಾತ್"ಎಂಬಲ್ಲಿ ಬೇರೆ ಅರ್ಥಪರವಾಗಿ ವ್ಯಾಖ್ಯಾನಿಸಲಾಗಿದೆ ಆದುದರಿಂದ, ಪರಿಣಾಮ ಪ್ರತಿಪಾದಕ ಶ್ರುತಿಯಿಲ್ಲವೆಂದು ಭಾವ

ವಿವರ್ತವಾದದಲ್ಲಿ ಶಂಕೆಯ ಅವಕಾಶವಿಲ್ಲವೆಂಬುದನ್ನು "ಶುಕ್ತ್ಯಾದಿಕಮಿವ

नवधानाच्छङ्केति चेत्। तर्ह्युक्तं स्मरेति वक्तव्यम् । स्पष्टं चारोपितत्वं प्रपञ्चस्य ब्रह्मण्युपपादनीयम्। श्रुतेस्त्वित्यादेस्तु का सङ्गतिः ।

कश्चित्परिहारादर्शनसम्भ्रान्तचित्त आह । अविद्यासंवलितं खलु ब्रह्म जगदुपादानम्। तत्राविद्योपादानत्वस्यायमाक्षेपः परिहारश्चेति। तदतीवमन्दम्। न ह्यविद्याया उपादानत्वमपि वास्तवम्। तस्याविचारितरमणीयतयैव शङ्काविषयत्वात् । किञ्चकृत्स्नप्रसक्तिः सावयवत्वं चाविद्यायां किं करिष्यति। समाधाने तु सर्वथाऽप्य-

— ಪದಾರ್ಥದೀಪಿಕಾ —

ದುದರ ಬಗ್ಗೆ ಅವಧಾನವಿಲ್ಲದಿರುವುದರಿಂದ ಈ ಆಶಂಕೆಯು ಬರುವುದೆಂದು ಹೇಳಿದಲ್ಲಿ- ಹಾಗಾದರೆ ಹಿಂದೆ ಹೇಳಿದುದನ್ನು ನೆನಪಿಗೆ ತರಬೇಕೆಂಬ ಉತ್ತರ ವನ್ನು ಹೇಳತಕ್ಕದ್ದು ಹಾಗು ಸ್ಪಷ್ಟವಾಗಿ ಬ್ರಹ್ಮನಲ್ಲಿ ಜಗತ್ತು ಆರೋಪಿತ ವೆಂಬುದನ್ನು ಉಪಪಾದಿಸತಕ್ಕದ್ದು "ಶ್ರುತೇಸ್ತು" ಇತ್ಯಾದಿ ಸೂತ್ರಗಳಿಗೆ ಸಂಗತಿಯು (ಸಂಬಂಧವು) ಯಾವದು ?

" ಇನ್ನು—ಅವಿದ್ಯಾಸಂವಲಿತ(ಅವಿದ್ಯಾಸಂಬಂಧಯುಕ್ತ)ವಾದ ಬ್ರಹ್ಮವೇ ಜಗತ್ತಿನ ಉಪಾದಾನಕಾರಣವಾದುದು ಹೀಗಿರುವಾಗ ಅವಿದ್ಯೆಯು ಜಗತ್ತಿನ ಉಪಾದಾನವೆಂಬಲ್ಲಿ ಆಕ್ಷೇಪವು ಹಾಗು ಸಮಾಧಾನವು." ಹೀಗೆ, ಒಬ್ಬನು, ಪರಿಹಾರವು ತೋರದಿರುವುದರಿಂದ ಭ್ರಾಂತಚಿತ್ತನಾಗಿ ಹೇಳುತ್ತಾನೆ. ಅದು ಅತ್ಯಂತ ಅಸಮಂಜಸವಾದುದು. ಏಕೆಂದರೆ ಅವಿದ್ಯೆಯು ಜಗತ್ತಿನ ಉಪಾದಾನ ಕಾರಣವೆಂಬುದೂ ವಾಸ್ತವವಲ್ಲ ಏಕೆಂದರೆ ವಿಚಾರಿಸದಿದ್ದಾಗ ಮಾತ್ರವೇ ಅದರ ರಮಣೀಯತೆಯು ತೋರುವುದು ಆದುದರಿಂದಲೇ ಶಂಕೆಯ ವಿಷಯುವಾಗದು. ಮತ್ತು ಕೃತ್ಸ್ನಪ್ರಸಕ್ತಿಯೆಂಬುದಾಗಲೀ ಸಾವಯವತ್ವವಾಗಲೀ ಅವಿದ್ಯೆಯಲ್ಲಿ ಏನನ್ನು ಮಾಡುತ್ತದೆ ? ಸಮಾಧಾನವಂತೂ ಅತ್ಯಂತ ಅಸಂಗತವೇ ಆದುದು.

— ವಿಶೇಷಾರ್ಥಪ್ರದೀಪಿಕಾ —

ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ. "ಆರಂಭಣಾಧಿಕರಣೇ"- "ತದನನ್ಯತ್ವ ಮಾರಂಭಣಶಬ್ದಾದಿಭ್ಯಃ" ಎಂಬಲ್ಲಿ.

"ಶಂಕಾವಿಷಯತ್ವಾತ್"-"ಶಂಕಾಯಾಃ ಅವಿಷಯತ್ವಾತ್" ಎಂಬುದಾಗಿ ವಿಗ್ರಹ "ಕಿಂ ಕರಿಷ್ಯತಿ"-ಕೃತ್ಸ್ನಸಾಮರ್ಥ್ಯದಿಂದ ಪ್ರವೃತ್ತಿಯನ್ನೊಪ್ಪಿದರೆ "ತದ್ದರ್ಶನೋಪದೇಶಾಭಾವೇನಾನರ್ಥಕ್ಯಂ"ಎಂಬ ದೋಷದ ಭಯವಿಲ್ಲ ನಿರವಯವತ್ವ

सङ्गतमेव । एतेन विकरणत्वादित्याक्षेपपरिहारावप्यसङ्गतौ वेदितव्यौ । न हि भ्रमाधिष्ठानता शरीरादिकमपेक्षते । ईश्वरविषयं तदिति चेन्न । तस्य विकरणत्वाभावेनाक्षेपानुदयादित्यादिकं स्वयमेव शिष्यैरवगन्तव्यमित्यसङ्गतिरेवाचार्येणोक्ता । स्यादेवमसङ्गतिर्यदि

— ಪದಾರ್ಥದೀಪಿಕಾ —

ಇದರಿಂದ, "ವಿಕರಣತ್ವಾತ್' ಎಂಬುದಾಗಿರುವ ಆಕ್ಷೇಪ ಹಾಗು ಅದರ ಪರಿಹಾರ, ಇವೆರಡೂ ಅಸಂಗತಗಳೆಂದು ತಿಳಿಯಬೇಕು ಏಕಂದರೆ ಭ್ರಮದ ಅಧಿಷ್ಠಾನವಾಗಿರುವದಕ್ಕೆ ಶರೀರ ಮುಂತಾದುದಿರಬೇಕಾದುದಿಲ್ಲ ಮಾಯಾ ಶಬಲ (ವಿಶಿಷ್ಟ) ಬ್ರಹ್ಮರೂಪ ಈಶ್ವರನ ವಿಷಯದಲ್ಲಿ ಆ ಸೂತ್ರವು ಹೊರಟಿದೆ ಹೀಗೆ ಹೇಳುವುದೂ ಸರಿಯಲ್ಲ ಏಕೆಂದರ ಈಶ್ವರನಿಗೆ ವಿಕರಣತ್ವವಿಲ್ಲವಾದುದರಿಂದ, ಆಕ್ಷೇಪವು ಹುಟ್ಟುವುದೇ ಇಲ್ಲ ಇತ್ಯಾದಿಯಾಗಿರುವ ದೂಷಣಗಳನ್ನು ಶಿಷ್ಯರು ತಾವೇ (ಸ್ವತಃ) ತಿಳಿದುಕೊಳ್ಳಬೇಕೆಂಬ ಭಾವದಿಂದ ಶ್ರೀಮದಾಚಾರ್ಯರು ಕೇವಲ ಅಸಂಗತಿಯನ್ನಷ್ಟೇ ಇಲ್ಲಿ ದೂಷಣ ರೂಪವಾಗಿ ಹೇಳಿದ್ದಾರೆ ಇನ್ನು ಈ ಅಸಂಗತಿಯು ಬ್ರಹ್ಮನಿಗ ಸರ್ವ(ವಿಶ್ವ) ವೈಶಿಷ್ಟ್ಯದ ಮೇಲಿನ ವಿರೋಧ

— ವಿಶೇಷಾರ್ಥಪ್ರದೀಪಿಕಾ —

ಶ್ರುತಿಯು (ಅವಿದ್ಯೆಗೆ) ಇಲ್ಲವಾದುದರಿಂದ ನಿರವಯವತ್ವಶ್ರುತಿವ್ಯಾಕೋಪವೂ ಇಲ್ಲ ಹೀಗೆ ಅರ್ಥ "ಸರ್ವಥಾಪ್ಯಸಂಗತಮೇವ"–ಬ್ರಹ್ಮನ ವಿಷಯದಲ್ಲಿ ಶಬ್ದಮೂಲತ್ವ (ಆಗಮೈಕಗಮ್ಯತ್ವ)ವನ್ನು ಪ್ರತಿಪಾದಿಸುವ "ಔಪನಿಷದಃ ಪುರುಷ," ಇತ್ಯಾದಿ ಶ್ರುತಿಯು ಇರುವ ಹಾಗೆ ಅವಿದ್ಯೆಯ ವಿಷಯದಲ್ಲಿ ಇರುವದಿಲ್ಲ. ಹೀಗೆ ಭಾವ

ವಿವರ್ತವಾದಿಗಳ ಮತದಲ್ಲಿ ಹೇಳಿದ, ಬೇರೆ ಸೂತ್ರಗಳ ಅರ್ಥವನ್ನೂ "ಏತೇನ" ಇತ್ಯಾದಿವಾಕ್ಯಗಳಿಂದ ನಿರಾಕರಿಸುತ್ತಾರೆ ಅದರ ವಿಶದೀಕರಣವನ್ನು "ನಹಿ' ಇತ್ಯಾದಿವಚನದಿಂದ ಮಾಡುತ್ತಾರೆ

"ತತ್'' –''ವಿಕರಣತ್ವಾತ್'' ಎಂಬ ಸೂತ್ರವು, ಮಾಯಾಶಬಲ–ವಿಶಿಷ್ಟ ಬ್ರಹ್ಮರೂಪ ಈಶ್ವರವಿಷಯಕವಾಗಿಲ್ಲ ಭ್ರಮದ ಅಧಿಷ್ಠಾನವಾದ ಉದಾಸೀನವಾದ ಬ್ರಹ್ಮವಿಷಯಕವೂ ಆಗಿಲ್ಲ ಆದುದರಿಂದ, ಆಕ್ಷೇಪಪರಿಹಾರಗಳೆರಡೂ ಅಸಂಗತಗಳೆಂದು ಇಲ್ಲಿಯ ಭಾವ "ವಿಕರಣತ್ವಾಭಾವೇನ"– ಐಚ್ಛಿಕಮಾಯಾವಿಗ್ರಹವುಳ್ಳವನಾದುದರಿಂದ ವಿಕರಣತ್ವವು (ಶರೀರೇಂದ್ರಿಯಾದಿಗಳಿಲ್ಲದಿರುವುದು) ಇಲ್ಲ, ಹೀಗೆ ತಿಳಿಯಬೇಕು ''ಇತ್ಯಾದಿಕಂ" ಇಲ್ಲಿಯ ಹೆಚ್ಚಿನ ವಿವರಣವನ್ನು ಚಂದ್ರಿಕಾ ಗ್ರಂಥದಲ್ಲಿ ನೋಡಬಹುದು

तदन्ये तत्र तत्रगाः ॥

ब्रह्मणः सर्ववैशिष्ट्ये विरोधपरिहारोऽध्यायार्थः स्यात्तदेव कुत इत्यत आह ॥ तदन्य इति । तस्मात्सर्ववैशिष्ट्यविषयादन्ये विरोधास्तत्र तत्रैवाधिकरणेषु गता परिहृताः ।

एतदुक्तं भवति । अविरोधलक्षणो द्वितीयोऽध्याय इति तावत् सम्मतम् । न चानुक्तेऽर्थे विरोधपरिहारः सङ्गत इति प्रथमाध्यायार्थे अविरोधो द्वितीयस्यार्थः । प्रथमे चादिसूत्रेण शास्त्रीयविषयप्रयोजनप्रदर्शनमुखेन ब्रह्मजिज्ञासायाः कर्तव्यत्वमुक्तम् । तत् चतुरध्यायीपरिसमाप्यं नैकत्र पर्यवस्यति । ततः किं तद् ब्रह्म । किं जीवोऽथ

ಆ ಸರ್ವವೈಶಿಷ್ಟ್ಯವನ್ನು ವಿಷಯೀಕರಿಸಿದ ವಿರೋಧದಿಂದ ಬೇರೆಯಾಗಿರುವ ವಿರೋಧಗಳು ಆಯಾಯ ಅಧಿಕರಣಗಳಲ್ಲಿಯೇ ಪರಿಹರಿಸಲ್ಪಟ್ಟವೆ

— ಪದಾರ್ಥದೀಪಿಕಾ —

ಪರಿಹಾರವೇ ಈ ಅಧ್ಯಾಯದ ಅರ್ಥ(ಪ್ರಯೋಜನ)ವೆಂದು ಆದರೆ ಮಾತ್ರ ಬರಬಹುದು ಆದರೆ ಅದೇ ಏಕೆ? ಈ ಆಶಂಕೆಯು ಬರುವುದರಿಂದ, ಅದರ ಸಮಾಧಾನವನ್ನು "ತದನ್ಯೇ" ಇತ್ಯಾದಿ ವಚನದಿಂದ ಹೇಳುತ್ತಾರೆ "ತದನ್ಯೇ"—"ತಸ್ಮಾತ್ ಅನ್ಯೇ"=ಸರ್ವವೈಶಿಷ್ಟ್ಯವನ್ನು ವಿಷಯೀಕರಿಸಿದ ವಿರೋಧದಿಂದ ಬೇರೆಯಾಗಿರುವ ವಿರೋಧಗಳು, "ತತ್ರ ತತ್ರ ಹಿ"= ಆಯಾಯ ಅಧಿಕರಣಗಳಲ್ಲಿಯೇ "ಗತಾಃ'= ಪರಿಹರಿಸಲ್ಪಟ್ಟವುಗಳಾಗಿವೆ.

ಇಲ್ಲಿ ಹೇಳಲ್ಪಟ್ಟಿದ್ದು ಇದು—"ದ್ವಿತೀಯಾಧ್ಯಾಯವು ಅವಿರೋಧವನ್ನು ಹೇಳುವಂತಹದೆಂಬುದಂತೂ ಸರ್ವಸಮ್ಮತವಾದುದು ಮತ್ತು ಹಿಂದೆ ಹೇಳಲ್ಪಡದ ವಿಷಯದ ಮೇಲೆ ವಿರೋಧವನ್ನು ಪರಿಹರಿಸುವುದು ಸಂಗತವಲ್ಲ ಈ ಕಾರಣದಿಂದ, ಪ್ರಥಮಾಧ್ಯಾಯದಲ್ಲಿ ಹೇಳಲ್ಪಟ್ಟ ವಿಷಯದ ಮೇಲಿನ ವಿರೋಧಪರಿಹಾರವೇ (ಅವಿರೋಧ) ಎರಡನೆಯ ಅಧ್ಯಾಯದ ಅರ್ಥವಾಗುತ್ತದೆ. ಮತ್ತು ಮೊದಲನೆಯ ಅಧ್ಯಾಯದಲ್ಲಿ ಮೊದಲನೆಯ ಸೂತ್ರದಿಂದ ಶಾಸ್ತ್ರದ ವಿಷಯ ಪ್ರಯೋಜನಗಳ ಪ್ರದರ್ಶನದ ಮುಖಾಂತರದಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯವೆಂಬ ವಿಷಯವು ಹೇಳಲ್ಪಟ್ಟಿತು ಆ ಜಿಜ್ಞಾಸೆಯು ನಾಲ್ಕು ಅಧ್ಯಾಯರೂಪವಾದ ಶಾಸ್ತ್ರದಿಂದ ಮುಗಿಯಬೇಕಾದುದು, ಹೊರತು, ಒಂದು ಅಧ್ಯಾಯದಲ್ಲಿ ಮುಗಿಯುವಂತಹದಲ್ಲ ಆದುದರಿಂದ, ಆ ಬ್ರಹ್ಮವು ಯಾವುದು?

जडमिति स्वरूपजिज्ञासायां शृङ्गग्राहिकया प्रदर्शयितुमशक्यत्वात्, द्वितीयसूत्रे सर्वतो वैलक्षण्यप्रदर्शनेन सर्वोत्कृष्टं सर्वस्माद्व्यावृत्तं चेति प्रतिपादितम् । सजातीयविजातीयासम्भावितधर्मस्य लक्षणत्वात् । सकलेतरव्यावृत्तेश्च तत्प्रयोजनत्वात् । तृतीयसूत्रे शास्त्रं तत्र प्रमाणमभिधाय तस्योत्तरप्रबन्धेन सामान्यतो विशेषतश्च सकलजीवजडव्यावृत्तवस्तुविषयता समर्थिता । एवञ्च द्वये विरोधाः परिहरणीया

— ಪದಾರ್ಥದೀಪಿಕಾ —

ಜೀವವೋ ? ಜಡವೋ ? ಎಂಬುದಾಗಿ ಆ ಬ್ರಹ್ಮಸ್ವರೂಪ ವಿಷಯಕವಾದ ಜಿಜ್ಞಾಸೆಯು ಪ್ರಾಪ್ತವಾಗಲು, ಕೋಡನ್ನು ಹಿಡಿದೆಳೆದು ಪಶುಗಳನ್ನು ತೋರಿಸುವಂತೆ ಬ್ರಹ್ಮಸ್ವರೂಪವನ್ನು ತೋರಿಸುವುದು ಅಶಕ್ಯವಾದುದರಿಂದ, ಎರಡನೆಯ ಸೂತ್ರದಲ್ಲಿ ಬ್ರಹ್ಮವಸ್ತುವಿಗೆ ಸರ್ವವಿಶ್ವದಿಂದ ವೈಲಕ್ಷಣ್ಯವನ್ನು ತೋರಿಸುವುದರಿಂದ "ಅದು ಸರ್ವೋತ್ತಮವು, ಸರ್ವವಿಲಕ್ಷಣವು" ಎಂಬುದಾಗಿ ಹೇಳಲಾಗಿದೆ ಏಕೆಂದರೆ ಸಜಾತೀಯ ವಿಜಾತೀಯ ವಸ್ತುಗಳಲ್ಲಿ ಇಲ್ಲದ (ಅಸಂಭಾವಿತವಾದ) ಲಕ್ಷ್ಯದ ಧರ್ಮವೇ ಲಕ್ಷಣವೆನಿಸಿದುದು ಹಾಗು ಇತರ ಎಲ್ಲ ವಸ್ತುಗಳಿಂದ ವೈಲಕ್ಷಣ್ಯ (ಭಿನ್ನವಾದುದೆಂಬ) ಜ್ಞಾನವು ಲಕ್ಷಣದ ಪ್ರಯೋಜನವಾಗಿರುತ್ತದೆ ಮೂರನೆಯ ಸೂತ್ರದಲ್ಲಿ- ಇದರ ಬಗ್ಗೆ ಶಾಸ್ತ್ರವನ್ನು ಪ್ರಮಾಣವೆಂದು ಹೇಳಿ, ಉತ್ತರ ಪ್ರಬಂಧದಿಂದ, ಸಾಮಾನ್ಯವಾಗಿಯೂ ವಿಶೇಷವಾಗಿಯೂ ಸಕಲ ಜೀವಜಡಗಳಿಂದ, ಭಿನ್ನವಾದ ವಸ್ತು (ಬ್ರಹ್ಮ) ವಿಷಯವು ಆ ಶಾಸ್ತ್ರಕ್ಕೆ ವಿಷಯವಾಗಿದೆಯೆಂಬುದನ್ನು ಸಮರ್ಥಿಸಲಾಗಿದೆ ಹೀಗೆ ಎರಡನೆಯ ಸೂತ್ರದಲ್ಲಿ ಸಿದ್ಧವಾದ ಸರ್ವವೈಶಿಷ್ಟ್ಯದ ವಿಷಯಕವಾದ ವಿರೋಧ ಹಾಗು ಶಾಸ್ತ್ರಸಮನ್ವಯದ ವಿಷಯಕವಾದ ವಿರೋಧಗಳು, ಹೀಗೆ ಎರಡು ತರಹದ ವಿರೋಧಗಳನ್ನು

— ವಿಶೇಷಾರ್ಥಪ್ರದೀಪಿಕಾ —

'ಶೃಂಗಗ್ರಾಹಿಕಯಾ" –ಶೃಂಗಗ್ರಹಣದಿಂದ

"ಸರ್ವತೋ ವೈಲಕ್ಷಣ್ಯಪ್ರದರ್ಶನೇನ"– ಇತರರಲ್ಲಿಲ್ಲದ ಅಸಾಧಾರಣವಾದ ಧರ್ಮವನ್ನು ಪ್ರದರ್ಶಿಸುವುದರಿಂದ "ಸಾಮಾನ್ಯತಃ' –"ತತ್ತು ಸಮನ್ವಯಾತ್' ಎಂಬ ಸೂತ್ರದಿಂದ ಸಾಮಾನ್ಯವಾಗಿ, "ಆನಂದಮಯೋಽಭ್ಯಾಸಾತ್'' ಇತ್ಯಾದಿ ಸೂತ್ರಗಳಿಂದ ವಿಶೇಷವಾಗಿ, ಹೀಗೆ ಉತ್ತರಸೂತ್ರಗಳಿಂದ ಸಾಮಾನ್ಯವಾಗಿಯೂ ವಿಶೇಷವಾಗಿಯೂ ಶಾಸ್ತ್ರಕ್ಕೆ ಈಶ್ವರವಿಷಯಕತ್ವವನ್ನು ನಿರೂಪಿಸಿದ್ದಾಗಿದೆ

सृष्टिसंहारवाक्यानां जीवरूपाभिधायिनाम् ॥
अप्यन्योन्याविरोधस्तु द्वितीयाध्यायगोचर. ॥

भवन्ति । द्वितीयसूत्रसिद्धसर्ववैशिष्ट्यविषयाः शास्त्रसमन्वयविषयश्च । तत्र द्वितीया विकारशब्दादित्यादिना तत्र तत्रैवाधिकरणे परिहृता इति परिशेषात्सर्ववैशिष्ट्यविषयविरोधपरिहार एव द्वितीयार्थ इति ज्ञायत इति।

ननु च श्रुतीनां परस्परविरोधोऽपि द्वितीयेऽध्याये न वियदश्रुतेरित्यादिना परिहृतः । तत्कथमुच्यते ब्रह्मणः सर्ववैशिष्ट्ये विरोधो द्वितीये निरस्यत इति तत्राह ॥ सृष्टीति ॥ जीवरूपाभिधायिनां

ಇಲ್ಲಿ– ಜೀವರ ಸ್ವರೂಪವನ್ನೂ ಪ್ರಾಣಾದಿಗಳನ್ನೂ ಹೇಳುವ ವಾಕ್ಯಗಳಿಗೂ ಸೃಷ್ಟಿ ಸಂಹಾರಗಳನ್ನು ಪ್ರತಿಪಾದಿಸುವ ವಾಕ್ಯಗಳಿಗೂ, ಎರಡನೆಯ ಅಧ್ಯಾಯದ ವಿಷಯವಾದ ಪರಸ್ಪರವಿರೋಧಪರಿಹಾರವು ಸಹ ಸರ್ವವೈಶಿಷ್ಟ್ಯ ಪರಿಹಾರವೇ ಆಗಿರುತ್ತದೆ.

## — ಪದಾರ್ಥದೀಪಿಕಾ —

ಪರಿಹರಿಸಬೇಕಾಗುತ್ತದೆ ಇವೆರಡರಲ್ಲಿ ಎರಡನೆಯ ತರಹದ ವಿರೋಧಗಳು "ವಿಕಾರ ಶಬ್ದಾತ್" ಇತ್ಯಾದಿ ಸೂತ್ರಗಳಿಂದ ಆಯಾಯ ಅಧಿಕರಣಗಳಲ್ಲಿಯೇ ಪರಿಹರಿಸಲ್ಪಟ್ಟಿವೆ ಆದುದರಿಂದ, ಪರಿಶೇಷದಿಂದ ಸರ್ವವೈಶಿಷ್ಟ್ಯದ ವಿಷಯವಾಗಿ ಹೊರಟ ವಿರೋಧಗಳ ಪರಿಹಾರವೇ ಎರಡನೆಯ ಅಧ್ಯಾಯದ ಅರ್ಥವೆಂಬುದು ತಿಳಿದು ಬರುತ್ತದೆ" ಹೀಗೆ ಹೇಳಿದ್ದು

ಇನ್ನು– ಶ್ರುತಿಗಳ ಪರಸ್ಪರ ವಿರೋಧವೂ ಎರಡನೆಯ ಅಧ್ಯಾಯದಲ್ಲಿ "ನ ವಿಯದಶ್ರುತೇಃ" ಇತ್ಯಾದಿ ಸೂತ್ರಗಳಿಂದ ಪರಿಹರಿಸಲ್ಪಟ್ಟಿದೆ ಆದುದರಿಂದ, ಬ್ರಹ್ಮನ ಸರ್ವವೈಶಿಷ್ಟ್ಯದ ವಿಷಯದಲ್ಲಿಯೇ ವಿರೋಧವು ಎರಡನೆಯ ಅಧ್ಯಾಯದಲ್ಲಿ ಪರಿಹರಿಸಲ್ಪಡುತ್ತದೆಂಬುದನ್ನು ಹೇಗೆ ಹೇಳುತ್ತೀರೆಂಬ ಆಶಂಕೆಯನ್ನು "ಸೃಷ್ಟಿ" ಇತ್ಯಾದಿ ವಚನಗಳಿಂದ ಪರಿಹರಿಸುತ್ತಾರೆ "ಜೀವರೂಪಾಭಿಧಾ

## — ವಿಶೇಷಾರ್ಥಪ್ರದೀಪಿಕಾ —

ಯೆಂದು ತಿಳಿಯಬೇಕು "ದ್ವಯೀ" ಎಂಬುದು ಬಹುವಚನಾಂತವಿದ್ದು, "ವಿರೋಧಾಃ" ಎಂಬುದರ ವಿಶೇಷಣವು "ದ್ವಿರೂಪಾಃ" (ಎರಡುತರಹವುಳ್ಳವುಗಳು) ಎಂಬ ಅರ್ಥವನ್ನು "ದ್ವಯೀ" ಎಂಬಲ್ಲಿ ತಿಳಿಯಬೇಕು ಅದನ್ನೇ "ದ್ವಿತೀಯಾಃ" ಇತ್ಯಾದಿ ವಚನದಿಂದ ವಿವರಿಸುತ್ತಾರೆ

वाक्यानाम् । उपलक्षणमेतत् । प्राणादिविषयाणां चेत्यपि द्रष्टव्यम् । सृष्ट्यादिविशेषणमुपपत्तिसूचनार्थम् । तुशब्दो विशेषार्थः । यो द्वितीयाध्यायगोचरो वाक्यानामन्योन्याविरोधः सोऽपि पारमेश्वरसर्ववैशिष्ट्यविरोधपरिहार एव । किन्तु प्रथमद्वितीयपादयोः साक्षात् तृतीयचतुर्थयोस्तु व्यवधानेनेति शेषः । तथा हि । श्रुतीनां परस्परविरोध-

## — ಪದಾರ್ಥದೀಪಿಕಾ —

ಯಿನಾಂ" ಈ ವಚನವು ಸಂಗ್ರಾಹಕವಾಗಿದೆ ಪ್ರಾಣಾದಿವಿಷಯಕಾಣಾಂ ಚ (ಪ್ರಾಣಾದಿಗಳ ವಿಷಯಕವಾದ ವಾಕ್ಯಗಳು) ಎಂಬುದನ್ನು ತಿಳಿಯಬೇಕು ಸೃಷ್ಟ್ಯಾದಿ ವಿಶೇಷಣವು ಉಪಪತ್ತಿಯನ್ನು ಸೂಚಿಸಲು ಹೊರಟಿದೆ "ತು" ಶಬ್ದವು ವಿಶೇಷದ್ಯೋತಕವು ವಾಕ್ಯಗಳ ಪರಸ್ಪರ ಅವಿರೋಧವೆಂಬ ಎರಡನಯ ಅಧ್ಯಾಯದ ವಿಷಯವಾದ ಅವಿರೋಧವೂ ಪರಮೇಶ್ವರನ ಸರ್ವವೈಶಿಷ್ಟ್ಯದ ವಿಷಯಕವಾದ ವಿರೋಧದ ಪರಿಹಾರರೂಪವೇ ಸರಿ! "ಕಿಂತು ಪ್ರಥಮ ದ್ವಿತೀಯ ಪಾದಯೋಃ ಸಾಕ್ಷಾತ್, ತೃತೀಯ ಚತುರ್ಥಯೋಸ್ತು ವ್ಯವಧಾನೇನ" (ಆದರೆ ಒಂದನೆಯ ಹಾಗು ಎರಡನೆಯ ಪಾದಗಳಲ್ಲಿ ಸಾಕ್ಷಾತ್ತಾಗಿಯೂ ಮೂರನೆಯ ನಾಲ್ಕನೆಯ ಪಾದಗಳಲ್ಲಿಯಾದರೋ ಪರಂಪರೆಯಿಂದ (ವ್ಯವಧಾನದಿಂದ)ಲೂ ಆ ವಿರೋಧಪರಿಹಾರವೇ ಮಾಡಲ್ಪಡುತ್ತದೆ) ಎಂಬುದು ಇಲ್ಲಿ ಶೇಷವಾಗಿದೆ ಹೇಗೆಂದರೆ ಶ್ರುತಿಗಳ ಪರಸ್ಪರ ವಿರೋಧ ಪರಿಹಾರಕ್ಕೆ ಕೇವಲ

## — ವಿಶೇಷಾರ್ಥಪ್ರದೀಪಿಕಾ —

"ಸೃಷ್ಟಿಸಂಹಾರವಾಕ್ಯಾನಾಂ" ಎಂಬಲ್ಲಿ ಸಮಾಸದಲ್ಲಿ ಸೇರಿದ "ವಾಕ್ಯಾನಾಂ ಎಂಬ ಪದವನ್ನು, ಬುದ್ಧಿಯಿಂದ ವಿವೇಚಿಸಿ, "ಜೀವರೂಪಾಭಿಧಾಯಿನಾಂ" ಎಂಬಲ್ಲಿಯೂ ಅದರ ಅನ್ವಯವು ವಿಶೇಷ್ಯರೂಪದಿಂದ ಇದೆಯೆಂಬ ಅಭಿಪ್ರಾಯದಿಂದ "ಜೀವರೂಪಾಭಿಧಾಯಿನಾಂ ವಾಕ್ಯಾನಾಂ" ಎಂದು ಹೇಳಿದ್ದಾರೆ

''ಉಪಪತ್ತಿಸೂಚನಾರ್ಥಂ' = ಆ ಉಪಪತ್ತಿಯೋ "ಕಿಂಚೈವಂ" ಇತ್ಯಾದಿ ಸುಧಾ ವಾಕ್ಯಗಳಿಂದ ಮುಂದೆ ವಿಶದವಾಗಿ ನಿರೂಪಿತವಾಗುವದು "ವಿಶೇಷಾರ್ಥಃ"- "ತು" ಶಬ್ದದ ಅರ್ಥವಾದ ಈ ವಿಶೇಷವಾದರೂ "ಕಿಂ ತು ಪ್ರಥಮ ದ್ವಿತೀಯಪಾದಯೋಃ" ಇತ್ಯಾದಿಯಾದ ಸುಧಾವಚನಗಳಿಂದ ಮುಂದ ವಿಶದವಾಗುವದು. ವಾಕ್ಯದ ಯೋಜನವನ್ನು "ಯೋ ದ್ವಿತೀಯಾಧ್ಯಾಯಗೋಚರೋ" ಇತ್ಯಾದಿ ವಚನದಿಂದ ತೋರಿಸುತ್ತಾರ "ಅವಿರೋಧ" ಪದಕ್ಕೆ ವಿರೋಧ

परिहारः किं तत्प्रामाण्यनिर्णयमात्रफलः । किंवा प्रमेयनिर्णयफलः । नाद्यः । मीमांसाया न्यायशास्त्रत्वापत्तेः । किञ्चैवं सति वियदादि-सृष्ट्यादिविषयवाक्यविरोधपरिहार एव कस्मात्क्रियते । उदितहोमादि-वाक्यानामपि न्यायदर्शन इवोपादानोपपत्तेः । आकाशवाय्वादि-

— ಪದಾರ್ಥದೀಪಿಕಾ —

ಅವುಗಳ ಪ್ರಾಮಾಣ್ಯದ ನಿರ್ಣಯವಷ್ಟೇ ಫಲವೋ ? ಅಥವಾ ಶ್ರುತಿಯ ಪ್ರಮೇಯ(ಅರ್ಥ)ದ ನಿರ್ಣಯವು ಫಲವೋ ? ಹೀಗೆ ವಿಕಲ್ಪಗಳು ಇವುಗಳಲ್ಲಿ ಮೊದಲನೆಯ ಕಲ್ಪವು ಯುಕ್ತವಲ್ಲ ಏಕೆಂದರೆ ಮೀಮಾಂಸೆಯು ನ್ಯಾಯಶಾಸ್ತ್ರ ವಾಗುವ ಪ್ರಸಂಗವು ಬರುತ್ತದೆ ಮತ್ತು ಹೀಗಾದಲ್ಲಿ- ವಿಯದಾದಿಗಳ ಸೃಷ್ಟಿ ವಿಷಯದಲ್ಲಿರುವ ವಾಕ್ಯಗಳ ಪರಸ್ಪರ ವಿರೋಧದ ಪರಿಹಾರವನ್ನು ಮಾಡುವುದು ಏಕೆ (ಯಾವ ಕಾರಣದಿಂದ) ನ್ಯಾಯ ದರ್ಶನದಲ್ಲಿ ಹೇಗೋ ಹಾಗೆ ಉದಿತ ಹೋಮಾದಿ ವಾಕ್ಯಗಳನ್ನು (ವಿರೋಧ ಪರಿಹಾರಕ್ಕೆ) ಪರಿಗ್ರಹಿಸಲು ಬರುತ್ತದೆ. ಮತ್ತು ಶ್ರುತಿ ವಿರೋಧ ಪರಿಹಾರಕ್ಕೆ ಪ್ರಾಮಾಣ್ಯ ನಿರ್ಣಯವಷ್ಟೇ ಫಲವೆಂದಾದರೆ, ಆಕಾಶ ವಾಯು, ಈ ಮುಂತಾದುದರಲ್ಲಿರುವ ಕ್ರಮವಂತೂ ಇಲ್ಲಿ ಅತ್ಯಂತ

— ವಿಶೇಷಾರ್ಥಪ್ರದೀಪಿಕಾ —

ಪರಿಹಾರವೆಂಬ ಅರ್ಥ ಈ ಅಭಿಪ್ರಾಯದಿಂದ "ಸೋಽಪಿ" ಎಂಬ ವಚನವನ್ನು ಹೇಳಿದ್ದಾರೆ "ವ್ಯವಧಾನೇನ"— ಪರಸ್ಪರ ವಿರೋಧವನ್ನು ಪರಿಹರಿಸುವುದರ ಮುಖಾಂತರದಿಂದ 'ಸೋಽಪಿ" ಎಂಬುದಾಗಿ ಹೇಳಿದುದನ್ನು "ತಥಾ ಹಿ" ಇತ್ಯಾದಿ ವಚನಗಳಿಂದ ವಿಶದಪಡಿಸುತ್ತಾರೆ

"ಮೀಮಾಂಸಾಯಾ ನ್ಯಾಯಶಾಸ್ತ್ರತ್ವಾಪತ್ತೇಃ" – ಇಲ್ಲಿ "ನ್ಯಾಯಶಾಸ್ತ್ರ' ವೆಂದರೆ ಬ್ರಹ್ಮತರ್ಕವೆಂದು ಅರ್ಥ ಅಂದರೆ ಪ್ರಮಾಣಶಾಸ್ತ್ರವೇ ಆಗಲಿ; ಪ್ರಮೇಯಶಾಸ್ತ್ರವಾಗದಿರಲೆಂಬ ಪ್ರಸಂಗವು ಬರುತ್ತದೆಂದು ಭಾವ "ಏವಂ ಸತಿ" – ಶ್ರುತಿಯ ಪ್ರಾಮಾಣ್ಯದ ನಿರ್ಣಯವನ್ನಷ್ಟೇ ತಂದುಕೊಡುವುದರಿಂದ ಮೀಮಾಂಸೆಯು ತರ್ಕಶಾಸ್ತ್ರವಾಗುವುದು ಇಷ್ಟವೆಂದಾದರೆ, "ಉದಿತ ಹೋಮಾದಿವಾಕ್ಯಾನಾಮಪಿ– "ಪ್ರಾತಃ ಪ್ರಾತರನೃತಂ ತೇ ವದಂತಿ, ಪುರೋದಯಾಚ್ಚ ಜುಹ್ವತಿ ಯೇಽಗ್ನಿಹೋತ್ರಂ, ದಿವಾಕೀರ್ತ್ಯಮದಿವಾ ಕೀರ್ತಯಂತೇ" ಹಾಗು, "ಯಥಾಽತಿಥಯೇ ಪ್ರದ್ರುತಾಯಾನ್ನಂ ಹರೇಯುಃ ತಾದೃಕ್ ತದ್ಯದ್ಯುದಿತೇ ಜುಹೋತಿ" ಎಂಬುದಾಗಿ ಪರಸ್ಪರ ನಿಂದೆ ಮಾಡುವುದರಿಂದ ಬರುವ, ಉದಿತಹೋಮ ಅನುದಿತ ಹೋಮಪ್ರತಿಪಾದಕ ವಾಕ್ಯಗಳ ವಿರೋಧದ

क्रमश्चात्र नात्यन्तमुपयुज्यते । द्वितीयेऽपि किं सृष्ट्यादिकमेव प्रमेयमुत तदङ्गिभूतमन्यत् । नाद्यः तस्य स्वरूपतोऽप्रयोजनत्वात् । प्रथमा प्रतिपाद्यत्वाच्च । अन्यथा पुनरुदितहोमादिवाक्यविरोधपरिहारोऽपि

— ಪದಾರ್ಥದೀಪಿಕಾ —

ನಿರುಪಯುಕ್ತವಾದುದು ಎರಡನೆಯ ಪಕ್ಷದಲ್ಲಿಯಾದರೋ ಸೃಷ್ಟಿ ಮುಂತಾದುದೇ ಪ್ರಮೆಯವೋ? ಅಥವಾ ಅದರ ಅಂಗಿಯಾದ ಬೇರೊಂದು ವಿಷಯವು ಪ್ರಮೇಯವೋ? ಹೀಗೆ ಪ್ರಶ್ನೆ ಮೊದಲನೆಯ ಪಕ್ಷವು ಯುಕ್ತವಲ್ಲ ಏಕೆಂದರ ಸೃಷ್ಟಿ ಮುಂತಾದುದು, ಸ್ವರೂಪತಃ ಪ್ರಯೋಜನವಲ್ಲ, (ಆದರ ಸ್ವರೂಪದಿಂದ ಪ್ರಯೋಜನವಿಲ್ಲ) ಮತ್ತು ಪ್ರಥಮಾಧ್ಯಾಯಪ್ರತಿಪಾದ್ಯವೂ ಆಗಿಲ್ಲ ಇಲ್ಲದಿದ್ದಲ್ಲಿ ಮತ್ತೆ ಉದಿತ ಹೋಮಾದಿ ವಾಕ್ಯಗಳ ವಿರೋಧ ಪರಿಹಾರವನ್ನು ಮಾಡಬೇ

— ವಿಶೇಷಾರ್ಥಪ್ರದೀಪಿಕಾ —

ಪರಿಹಾರವನ್ನು ಬ್ರಹ್ಮತರ್ಕಶಾಸ್ತ್ರದಲ್ಲಿ ಮಾಡುವ ಹಾಗೆ ಇಂಥ ವಾಕ್ಯಾಂತರಗಳನ್ನೂ ವಿರೋಧಪರಿಹಾರಕ್ಕಾಗಿ ಇಲ್ಲಿಯೂ ಪರಿಗ್ರಹಿಸಬೇಕಾಗುವದು ಹೀಗ ಭಾವ

"ಆಕಾಶವಾಯ್ವಾದಿಕ್ರಮಶ್ಚ" –"ನವಿಯದಶ್ರುತೇಃ, ಏತೇನ ಮಾತರಿಶ್ವಾ ವ್ಯಾಖ್ಯಾತಃ, ತೇಜೋಽತಸ್ತಥಾಹ್ಯಾಹ, ಆಪಃ, ಪೃಥಿವ್ಯಧಿಕಾರರೂಪ ಶಬ್ದಾಂತರಾದಿಭ್ಯಃ, ಇತ್ಯಾದಿ ಸೂತ್ರಗಳಲ್ಲಿ, ಕ್ರಮದಿಂದ ಆಕಾಶಾದಿ ಪ್ರತಿಪಾದಕ ವಾಕ್ಯಗಳ ವಿರೋಧವಷ್ಟೇ ಪರಿಹರಿಸಲ್ಪಡುತ್ತದೆ ಈ ಕ್ರಮವು, ಮೀಮಾಂಸೆಗೆ ಕೇವಲ ಶ್ರುತಿಪ್ರಾಮಣ್ಯದ ನಿರ್ಣಯವಷ್ಟೇ ಫಲವೆಂಬ ಪಕ್ಷದಲ್ಲಿ ಅನುಪಯೋಗಿಯು (ಉಪಯೋಗವಿಲ್ಲದ್ದು) ಆಗುತ್ತದೆ ಪ್ರಮೇಯದ ನಿರ್ಣಯವೆಂಬ ಫಲವಿದಯೆಂದು ಹೇಳಿದರೆ, ಭಾಷ್ಯಾದಿಗಳಲ್ಲಿ ಹೇಳಿದ ರೀತಿಯಿಂದ ಪರಮಾತ್ಮನ ಸ್ವಾತಂತ್ರ್ಯಮುಂತಾದಗುಣಗಳ ನಿರ್ಣಯವಾಗುವುದೆಂಬ ಫಲವು ದೊರೆಯುವದರಿಂದ ಕ್ರಮಕ್ಕೆ ಉಪಯೋಗವು ಇದೆ ಹೀಗೆ ಭಾವ

"ತದಂಗಿಭೂತಂ" –ಸೃಷ್ಟಿಮುಂತಾದ ಪ್ರಮೇಯ(ವಿಷಯ)ಗಳನ್ನು ಅಂಗವಾಗಿಟ್ಟುಕೊಂಡು ಪ್ರಧಾನವಾಗಿ ಯಾವ ಪ್ರಮೇಯವಿರುವುದೋ ಅದು- "ಸ್ವರೂಪತೋಽಪ್ರಯೋಜಕತ್ವಾತ್" – ಸೃಷ್ಟಿಲಯ ಮುಂತಾದುದರ ಕೇವಲ ಸ್ವರೂಪನಿರ್ಣಯವು ಮುಕ್ತಿಯ ಉಪಾಯವಾಗಿಲ್ಲ ಹೀಗ ಭಾವ "ಪ್ರಥಮಾಪ್ರತಿಪಾದ್ಯತ್ವಾತ್" –ಪ್ರಥಮಾಧ್ಯಾಯದಲ್ಲಿ ಹೇಳಲ್ಪಟ್ಟ ವಿಷಯಗಳ ಬಗೆಗಿನ ನಿರ್ಣಯವೇ, ಎರಡನೆಯ ಅಧ್ಯಾಯದಲ್ಲಿ ವಿರೋಧನಿರಸನದಿಂದ ಮಾಡಲ್ಪಡಬೇಕಾದುದರಿಂದ, ಹೀಗೆ ಅರ್ಥ "ಅನ್ಯಥಾ"– ಪ್ರಥಮಾಧ್ಯಾಯದಲ್ಲಿ ಹೇಳಲ್ಪಡದ

कार्यः स्यात् । सृष्ट्यादिविषयनिष्कर्षोऽपि निर्हेतुकः । अतो द्वितीय एव परिशिष्यते । न चान्यदस्ति सृष्ट्यादिप्रमेयस्याङ्गि प्रथमोक्तं द्वितीयसूत्राभिहिताद् ब्रह्मणः सर्ववैशिष्ट्यात् । अतो युक्तमुक्तम् । तदेव परोक्तसूत्रार्थस्य द्वितीयाध्यायान्तर्भावलक्षणसङ्गत्यभावाद्विरोधाच्चोक्त एव सूत्रार्थ इति सिद्धम् ।

— ಪದಾರ್ಥದೀಪಿಕಾ —

ಕಾದೀತು ! ಸೃಷ್ಟ್ಯಾದಿವಿಷಯಗಳ ನಿಷ್ಕರ್ಷಕ್ಕೆ ಕಾರಣವಿರುವುದಿಲ್ಲ ಆದುದರಿಂದ, ಎರಡನೆಯದೇ ಪರಿಶೇಷದಿಂದ ಸಿದ್ಧಿಸುತ್ತದೆ ಒಂದನೆಯ ಅಧ್ಯಾಯದಲ್ಲಿ ಮೊದಲು ಹೇಳಲ್ಪಟ್ಟ ಎರಡನಯ ಸೂತ್ರದಲ್ಲಿ ಹೇಳಲ್ಪಟ್ಟಿರುವ ಬ್ರಹ್ಮನ ಸರ್ವವೈಶಿಷ್ಟ್ಯವೆಂಬ ಪ್ರಮೇಯದ ಹೊರತಾಗಿ ಬೇರೆಯಾದ ಸೃಷ್ಟ್ಯಾದಿ ಪ್ರಮೇಯಕ್ಕೆ ಅಂಗಿಯಾಗಿರುವ ವಿಷಯವು (ಪ್ರಮೇಯವು) ಇನ್ನಾವದೂ ಇಲ್ಲ ಅದುದರಿಂದ, ಹಿಂದೆ ಹೇಳಿದುದು ಯುಕ್ತವು ಹೀಗ ಪರರು ಹೇಳಿದ ಸೂತ್ರಾರ್ಥಕ್ಕೆ ಎರಡನೆಯ ಅಧ್ಯಾಯದಲ್ಲಿ ಅಂತರ್ಭಾವವೆಂಬ ಸಂಗತಿಯು ಇಲ್ಲವಾದುದರಿಂದ ಹಾಗು ಅದಕ್ಕೆ ವಿರುದ್ಧವಾದುದರಿಂದ, ಶ್ರೀಮದಾಚಾರ್ಯರು ಹೇಳಿದುದೇ ಸೂತ್ರಾರ್ಥವೆಂದು ಸಿದ್ಧವಾಯಿತು

— ವಿಶೇಷಾರ್ಥಪ್ರದೀಪಿಕಾ —

ಪ್ರಮೇಯದ ಬಗ್ಗೆ ವಿರೋಧದ ನಿರಾಸವು ಎರಡನೆಯ ಅಧ್ಯಾಯದಿಂದ ಆಗುವುದೆಂದು ಹೇಳಿದರ ದ್ವಿತೀಯ ಏವ''–''ಅಂಗಿಯಾದುದೊಂದು ಬೇರ ಇದೆ' ಎಂಬ ಪಕ್ಷವೇ!

ಅಂಗಿಯಾದ(ಪ್ರಧಾನ)ವಿಷಯವು ಸರ್ವವೈಶಿಷ್ಟ್ಯವೆಂಬುದೇ ಏಕೆ? ಎಂಬ ಪ್ರಶ್ನೆಯನ್ನು 'ನಚ'' ಈ ವಾಕ್ಯದಿಂದ ಉತ್ತರಿಸುತ್ತಾರ ಪ್ರಥಮಾಧ್ಯಾಯದಲ್ಲಿ ಹೇಳಿದ ಅಂಗಿಯಾದ (ಪ್ರಧಾನ) ವಿಷಯವು ಪರಮಾತ್ಮನ ಸರ್ವವೈಶಿಷ್ಟ್ಯವೇ! ಬೇರೆಯದಲ್ಲ ಹೀಗೆ ಭಾವವು

"ವಿರೋಧಾಚ್ಚ" – ಸರ್ವಕ್ಕೆ ಉಪಾದಾನವಾಗುವುದರಿಂದ ಬರುವ ಸರ್ವಾತ್ಮಕತ್ವವು (ಸರ್ವಾಭೇದವು) ಪ್ರಥಮಾಧ್ಯಾಯೋಕ್ತವಾದ ಪರಮಾತ್ಮನ ಸರ್ವವೈಶಿಷ್ಟ್ಯ (ಸರ್ವೋತ್ತಮತ್ವಾದಿ ಕ್ಕೆ ವಿರೋಧಿಯಾಗುವುದರಿಂದ, ಅಥವಾ ಪ್ರಕೃತ್ಯಾದ್ಯಧಿಕರಣದಲ್ಲಿ ಹಿಂದೆ ಮಾಯಾವಾದಿಗಳು ಅಂಗೀಕರಿಸಿದ ವಿವರ್ತವಾದದಿಂದ ವಿರೋಧವು ಬರುವುದರಿಂದ, ಹೀಗೆ ಅರ್ಥ ವಿವರ್ತವಾದದಲ್ಲಿ

अत्रेश्वरस्य शरीरेन्द्रियादिकरणरहितत्वात्कर्तृत्वं नोपपद्यते इत्याक्षेपसमाधानार्थं सूत्रम् ॥ ॐ विकरणत्वान्नेति चेत्तदुक्तम् ॐ ॥ इति । एतदनारम्भणीयम् । पुनरुक्तत्वात । श्रुतेस्तु शब्दमूलत्वात् । आत्मनि चैवं विचित्राश्च हि । सर्वोपेता च तद्दर्शनादिति सूत्रैरेवालौकिकत्वशब्दैकसमधिगम्यत्वविचित्रानन्तशक्तित्वादियुक्तिभिः सर्वस्यापि दौर्घट्यस्य परिहृतत्वात् । यो हि साक्षात्कारकाधिष्ठानस्य नेष्टे स शरीरव्यवधानमपेक्षते । यस्य चागन्तुकं ज्ञानं स तदर्थमिन्द्रियाणि । यश्च गुरुशरीरो नावस्थातुं शक्नोति स क्षित्यादिकमाधारम् ।

— ಪದಾರ್ಥ ದೀಪಿಕಾ —

ಇಲ್ಲಿ- ಈಶ್ವರನಿಗೆ, ಶರೀರ ಇಂದ್ರಿಯಾದಿ ಕರಣಗಳಿಲ್ಲದಿರುವುದರಿಂದ ಕರ್ತೃತ್ವವು ಯುಕ್ತವಾಗುವುದಿಲ್ಲವೆಂಬ ಆಕ್ಷೇಪದ ಸಮಾಧಾನಕ್ಕಾಗಿ "॥ ಓಂ ॥ ವಿಕರಣತ್ವಾನ್ನೇತಿ ಚೇತ್ತದುಕ್ತಂ ॥ ಓಂ ॥" ಎಂಬ ಸೂತ್ರವು ಹೊರಟಿದೆ ಇದು ಅನಾರಂಭಣೀಯವಾಗಿದೆ ಏಕೆಂದರೆ ಪುನರುಕ್ತಿಯು ಬರುತ್ತದೆ " ಶ್ರುತೇಸ್ತು ಸಬ್ದಮೂಲತ್ವಾತ್, ಆತ್ಮನಿ ಚೈವಂ ವಿಚಿತ್ರಾಶ್ಚ ಹಿ, ಸರ್ವೋಪೇತಾ ಚ ತದ್ದರ್ಶನಾತ್ " ಈ ಸೂತ್ರಗಳಿಂದಲೇ, ಅಲೌಕಿಕತ್ವ ಶಬ್ದೈಕ ಸಮಧಿಗಮ್ಯತ್ವ ವಿಚಿತ್ರಾನಂತ ಶಕ್ತಿಯುಕ್ತತ್ವ ಮುಂತಾದ ಯುಕ್ತಿಗಳಿಂದ ಎಲ್ಲ ದೌರ್ಘಟ್ಯವನ್ನು ಪರಿಹರಿಸಲಾಗಿದ ಏಕೆಂದರೆ ಸಾಕ್ಷಾತ್ತಾಗಿ ಚಕ್ರದಂಡಾದಿಕಾರಕಗಳನ್ನು ಪ್ರೇರಿಸುವುದರಲ್ಲಿ ಯಾವನು ಸಮರ್ಥನಲ್ಲವೋ ಅವನು ಶರೀರವೆಂಬ ಮಧ್ಯಂತರ (ವ್ಯವಧಾನ ದ್ವಾರ)ವನ್ನು ಅಪೇಕ್ಷಿಸುತ್ತಾನೆ ಮತ್ತು ಯಾವನ ಜ್ಞಾನವು ಆಗಂತುಕವೋ ಅವನು ಆ ಜ್ಞಾನಕ್ಕಾಗಿ ಇಂದ್ರಿಯಗಳನ್ನಪೇಕ್ಷಿಸುತ್ತಾನೆ ಹಾಗು ನಿಲ್ಲಲು ಸ್ವತಃ ಸಮರ್ಥನಾಗದ ಭಾರ(ಗುರು)ವಾದ ಶರೀರವುಳ್ಳವನು ಯಾವನೋ ಅವನು ಕ್ಷಿತಿ ಮುಂತಾದ ಆಧಾರವನ್ನು ಅವಲಂಬಿಸುತ್ತಾನೆ ಆದರೆ ಪರಮಾ

— ವಿಶೇಷಾರ್ಥಪ್ರದೀಪಿಕಾ —

ಯಂತೂ ಕೃತ್ಸ್ನಪ್ರಸಕ್ತಿ ಮುಂತಾದ ಚೋದನೆ (ಆಕ್ಷೇಪ–ಆಪಾದನೆ)ಗಳಿಗೆ ಅವಕಾಶವೇ ಇಲ್ಲವೆಂಬುದನ್ನು ಹಿಂದೆಯೇ ಹೇಳಿದ್ದಾಗಿದೆ, ಹೀಗೆ ಭಾವ

"ಅತ್ರ" - "ಶ್ರುತೇಸ್ತು" ಎಂಬ ಅಧಿಕರಣದಲ್ಲಿ "ಸೂತ್ರಂ"- ಈ ಅಧಿಕರಣದ ಕೊನೆಯ ಸೂತ್ರವು ಸಕಲ ದೌರ್ಘಟ್ಯಗಳ ಪರಿಹಾರವು ಹೇಗೆ ಆಯಿತೆಂಬುದನ್ನು "ಯೋ ಹಿ" ಇತ್ಯಾದಿ ವಾಕ್ಯಗಳಿಂದ ವಿಶದಪಡಿಸುತ್ತಾರೆ.

# ॥ ॐ विकरणत्वान्नेति चेतदुक्तम् ॐ ॥

मानमेयविशेषेण पुनरुक्तिर्न जायते ॥ २-१-८ ॥

भगवांस्तु सर्वशक्तिः सर्वज्ञः किमर्थमपेक्षेतेति । न च काचिदभ्यधिका शङ्काऽस्ति । येन न पुनरारम्भः स्यादित्यत आह ॥ मानेति । यथा अत एव प्राण इत्यादौ मानैक्येऽपि मेयविशेषेण न पुनरुक्ति दोषस्तथाऽत्र मेयैक्येऽपि मानविशेषेण न पुनरुक्तिदोषः ।

"ಅತ ಏವ ಪ್ರಾಣಃ," ಇತ್ಯಾದಿಗಳಲ್ಲಿ ಪ್ರಮಾಣವು ಒಂದೇ ಆಗಿದ್ದರೂ ಪದಾರ್ಥಗಳ (ಪ್ರಮೇಯ)ಗಳಲ್ಲಿ ವಿಶೇಷವಿರುವುದರಿಂದ ಪುನರುಕ್ತಿಯು ಬರದಿರುವ ಹಾಗೆ ಪ್ರಮೇಯಗಳಲ್ಲಿ (ಏಕತ್ವ) ವಿದ್ದರೂ ಪ್ರಮಾಣಗಳಲ್ಲಿ ವಿಶೇಷ (ಭೇದ-ಅನೇಕತೆ) ವಿರುವುದರಿಂದ ಪುನರುಕ್ತಿಯು ಅನ್ವಯಿಸುವುದಿಲ್ಲ. ॥೨-೧-೮॥

## — ಪದಾರ್ಥದೀಪಿಕಾ —

ತ್ಮನು ಸರ್ವಶಕ್ತಿಯುಳ್ಳವನು, ಸರ್ವಜ್ಞನು, ಅವನೇಕೆ ಇವುಗಳನ್ನು ಅಪೇಕ್ಷಿಸುತ್ತಾನೆ? ಹೀಗೆ ಆಶಂಕೆಯು ಬರುತ್ತದೆ ಇಲ್ಲಿ ಅಭ್ಯಧಿಕಾಶಂಕೆಯು ಯಾವದೂ ಬಂದಿಲ್ಲ ಹಾಗೆ ಬಂದಿದ್ದರ ಈ ಸೂತ್ರಕ್ಕೆ ಆರಂಭಣೀಯತ್ವವು ಬರಬಹುದಿತ್ತು (ಪುನರುಕ್ತಿಯಾಗಲಿಕ್ಕಿಲ್ಲ) ಹೀಗೆ ಆಕ್ಷೇಪವು ಬರಲು ಸಮಾಧಾನವನ್ನು "ಮಾನಮೇಯ ವಿಶೇಷೇಣ" ಇತ್ಯಾದಿ ಪದ್ಯದಿಂದ ಹೇಳುತ್ತಾರೆ "ಅತ ಏವ ಪ್ರಾಣಃ" ಇತ್ಯಾದಿ ಸೂತ್ರಗಳಲ್ಲಿ ಪ್ರಮಾಣವು ಒಂದೇ ಆದರೂ ಪ್ರಮೇಯವು ಬೇರೆ ಬೇರೆಯಾದುದರಿಂದ ಹೇಗೆ ಪುನರುಕ್ತಿದೋಷವು ಬರುವುದಿಲ್ಲವೋ ಅದರ ಹಾಗೆ ಇಲ್ಲಿ ಪ್ರಮೇಯವು ಒಂದೇ ಆಗಿದ್ದರೂ ಪ್ರಮಾಣಗಳು ಬೇರೆಬೇರೆಗಳಾದುದರಿಂದ ಪುನರುಕ್ತಿದೋಷವಿಲ್ಲ

## — ವಿಶೇಷಾರ್ಥಪ್ರದೀಪಿಕಾ —

'ಮೇಯವಿಶೇಷೇಣ" ಎಂಬ ಅನುವ್ಯಾಖ್ಯಾನವಚನಕ್ಕೆ ಇಲ್ಲಿ ಉಪಯೋಗವಿಲ್ಲದಿದ್ದರೂ ದೃಷ್ಟಾಂತದ ಹೇಳಿಕಗಾಗಿ ಅದರ ಉಪಯೋಗವೆಂಬುದಾಗಿ "ಯಥಾ" ಇತ್ಯಾದಿ ವಚನದಿಂದ ಹೇಳುತ್ತಾರೆ "ಇತ್ಯಾದೌ" ಎಂಬಲ್ಲಿಯ "ಆದಿ" ಪದದಿಂದ,"ಜ್ಯೋತಿಶ್ಚರಣಾಭಿಧಾನಾತ್, ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಂ" ಇತ್ಯಾದಿ ಸೂತ್ರ (ಅಧಿಕರಣ)ಗಳನ್ನು ಸಂಗ್ರಹಿಸಬೇಕು 'ಮಾನೈಕ್ಯೇಽಪಿ'— ತದ್ಧರ್ಮೋಪದೇಶಾತ್,

एतदुक्तं भवति । किमुक्तार्थोक्तिमात्रं दोषः । किं वोक्तानतिरिक्तोक्तिः । नाद्यः । उक्तपरिहारातिदेशोक्तेरपि दोषत्वानुषङ्गात् । द्वितीयस्तु प्रकृते न सिद्धः । प्रमेयैक्येऽपि प्रमाणभेदस्य सत्त्वात् ।

— ಪದಾರ್ಥದೀಪಿಕಾ —

ಇದು ಇಲ್ಲಿ ಹೇಳಲ್ಪಟ್ಟದಾಗಿದೆ— ಹೇಳಿದುದನ್ನು ಹೇಳುವುದು ಮಾತ್ರದಿಂದಲೇ ದೋಷವೋ ? ಅಥವಾ ಹೇಳಿದುದಕ್ಕಿಂತ ಅತಿರಿಕ್ತ (ಬೇರೆ) ವಾಗದ್ದನ್ನು ಹೇಳುವುದು ದೋಷವೋ ? ಹೀಗೆ ಪ್ರಶ್ನೆ ಮೊದಲನೆಯ ಪಕ್ಷವು ಯುಕ್ತವಲ್ಲ ಏಕೆಂದರೆ- ಹಿಂದೆ ಹೇಳಿದ ಪರಿಹಾರದ ಅತಿದೇಶವನ್ನು ಹೇಳುವುದು ದೋಷವೆನಿಸುವ ಪ್ರಸಂಗವು ಬರುತ್ತದೆ ಎರಡನೆಯ ಪಕ್ಷವಾದರೋ ಪ್ರಕೃತದಲ್ಲಿ ಸಿದ್ಧಿಸಿಲ್ಲ ಏಕೆಂದರೆ ಪ್ರಮೇಯವು ಒಂದೇ ಇದ್ದರೂ ಪ್ರಮಾಣ

— ವಿಶೇಷಾರ್ಥಪ್ರದೀಪಿಕಾ —

ತಲ್ಲಿಂಗಾತ್, ಎಂಬುದಾಗಿ. ಅಂತಸ್ತಾಧಿಕರಣ ಆಕಾಶಾಧಿಕರಣಗಳಲ್ಲಿ ನಿರವಕಾಶಲಿಂಗವೆಂಬ ಪ್ರಮಾಣದಿಂದ ನಿರ್ಣಯವಾಗಿದ ಹಾಗೂ "ಅತ ಏವ ಪ್ರಾಣಃ' ಎಂಬಲ್ಲಿಯೂ ನಿರವಕಾಶಲಿಂಗದಿಂದಲೇ ನಿರ್ಣಯವಾಗಿದೆ ಹೀಗೆ ನಿರವಕಾಶಲಿಂಗವಾಗಿರುವುದೆಂಬ ಒಂದೇ ಪ್ರಮಾಣವಿದ್ದರೂ, ಹಿಂದಿನ ಅಧಿಕರಣಗಳಲ್ಲಿ ಅಧಿದೈವ, ಆಧಿಭೂತಗತ ಶಬ್ದಗಳ ಪ್ರವೃತ್ತಿ ನಿಮಿತ್ತವು ಈಶ್ವರನಲ್ಲಿ ಇರುವಂತಹದು, ಹಾಗು ಉಳಿದವರಲಿ ಈಶ್ವರಾಧೀನವಾದುದು, ಹೀಗೆ ಹೇಳುವುದರಿಂದ ಆ ಅಧಿದೈವ ಅಧಿಭೂತಗತ ಶಬ್ದಗಳಿಗೆ ಪರಮಾತ್ಮನಲ್ಲಿ ಶಕ್ತಿತಾತ್ಪರ್ಯಗಳೆಂಬ ಪ್ರಮೇಯಗಳು ಹೇಳಲ್ಪಟ್ಟಿವೆ 'ಅತಏವ ಪ್ರಾಣಃ" ಇತ್ಯಾದಿ ಸೂತ್ರಗಳಲ್ಲಿಯಾದರೋ ಜೀವನಕಾರಣತ್ವ ಮುಂತ ದ ರೂಪವಾದ ಅಧ್ಯಾತ್ಮಾದಿಗತವಾದ ಪ್ರಾಣಾಎಶಬ್ದಗಳ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿಯೇ ಇರುವಂತಹದು, ಇತರರಲ್ಲಿ ತದಧೀನವಾಗಿದೆ. ಹೀಗೆ ಹೇಳುವುದರಿಂದ ಪ್ರಾಣಾದಿ ಶಬ್ದಗಳಿಗೆ ಪರಮಾತ್ಮನಲ್ಲಿ ಶಕ್ತಿತಾತ್ಪರ್ಯಗಳೆಂಬ ಸಂಗತಿಯು ಹೇಳಲ್ಪಡುತ್ತದ ಆದುದರಿಂದ ಪ್ರಮೇಯಗಳು ಬೇರೆ ಬೇರೆಯಿರುವುದರಿಂದ ಪುನರುಕ್ತಿಯು ಇಲ್ಲವೆಂದು ತಿಳಿಯಬೇಕು "ಮೇಯೈಕ್ಯೇಽಪಿ" ವಿಷಯವು (ಪ್ರಮೇಯ) ಒಂದೇ ಇದ್ದರೂ ಪ್ರಮಾಣಗಳು ಬೇರೆ ಬೇರೆ, ಈ ವಿಷಯಗಳನ್ನು "ಯೋ ಹಿ" ಇತ್ಯಾದಿ ವಚನಗಳಿಂದ ಹಿಂದೆ ಹೇಳಿದ್ದಾಗಿದೆ "ಮಾನವಿಶೇಷೇಣ"— "ಜ್ಞಪಾಣಿ ಪಾದಃ ಇತ್ಯಾದಿಯಾಗಿ, ಆ ಬೇರೆ ಪ್ರಮಾಣಗಳನ್ನು ಮುಂದೆ ನಿರೂಪಿಸಲಾಗುವದು

इह हि चिदानन्दाद्यात्मकदिव्यमङ्गलविग्रहवतो महापुरुषस्य प्राकृतशरीराद्यभावेऽपि सकलकार्यकर्तृत्वमपाणिपाद इत्यादिश्रुतिमाश्रित्योक्तमिति । यद्वा मानमेययोर्विशेषेणेति योज्यम् । तथा चायमर्थः । पूर्वसूत्रैः सामान्यविषयप्रमाणान्याश्रित्य सामान्यत एव सर्वानुपपत्तिपरिहारो विहितः । इह तु विशेषविषयेणैव प्रमाणेन विशेषानुपपत्तिपरिहारः क्रियत इति कथं पुनरुक्तिदोषावकाश इति । तथाऽप्याक्षेपो नोपपद्यत इति चेन्न । विशेषजिज्ञासयोपपत्तेरिति ॥ २-१-८ ॥

— ಪದಾರ್ಥದೀಪಿಕಾ —

ಗಳಲ್ಲಿ ಭಿನ್ನತೆಯು ಇರುತ್ತದೆ ಹೇಗೆಂದರೆ– ಚಿದಾನಂದ ಮುಂತಾದ ರೂಪವಾದ ದಿವ್ಯಮಂಗಲ ಶರೀರವುಳ್ಳ ಮಹಾಪುರುಷನಿಗೆ ಪ್ರಾಕೃತಶರೀರಾದಿಗಳಿಲ್ಲದಿದ್ದರೂ ಸಕಲ ಕಾರ್ಯಕರ್ತೃತ್ವವು "ಅಪಾಣಿ ಪಾದಃ" ಇತ್ಯಾದಿ ಶ್ರುತಿಗಳನ್ನು ಅವಲಂಬಿಸಿ ಹೇಳಲ್ಪಟ್ಟಿರುತ್ತದೆ" ಅಥವಾ– "ಮಾನಮೇಯಯೋಃ ವಿಶೇಷೇಣ" ಎಂಬುದಾಗಿ ಯೋಜಿಸಬೇಕು ಇದರಿಂದ ಲಭಿಸಿದ ಅರ್ಥವಿದು— "ಪೂರ್ವ ಸೂತ್ರಗಳಿಂದ, ಸಾಮಾನ್ಯವಿಷಯಕವಾದ ಪ್ರಮಾಣವನ್ನವಲಂಬಿಸಿ, ಸಾಮಾನ್ಯವಾಗಿಯೇ ಎಲ್ಲ ಅನುಪಪತ್ತಿಗಳ ಪರಿಹಾರವು ಮಾಡಲ್ಪಟ್ಟಿತು ಆದರೆ ಇಲ್ಲಿ ವಿಶೇಷ ವಿಷಯಕವಾದ ಪ್ರಮಾಣಗಳಿಂದಲೇ ವಿಶೇಷವಾಗಿಯೇ ಅನುಪಪತ್ತಿಗಳನ್ನು ಪರಿಹರಿಸಲಾಗುವದು ; ಆದುದರಿಂದ, ಪುನರುಕ್ತಿದೋಷಕ್ಕೆ ಅವಕಾಶವು ಹೇಗ ಸಿಗುತ್ತದೆ ? ಹೀಗೆ ಭಾವ ಆದರೂ ಆಕ್ಷೇಪವು ಯುಕ್ತವೆನಿಸುವುದಿಲ್ಲವೆಂದು ಶಂಕಿಸಬಾರದು ಏಕೆಂದರೆ ವಿಶೇಷ ವಿಷಯಕವಾದ ಜಿಜ್ಞಾಸೆಯಿಂದ ಅದು ಯುಕ್ತವಾಗುತ್ತದೆ. ಹೀಗೆ ಅರ್ಥ ೨೧೮

— ವಿಶೇಷಾರ್ಥಪ್ರದೀಪಿಕಾ —

ಪ್ರಮಾಣಭೇದಗಳನ್ನು "ಇಹ ಹಿ" ಇತ್ಯಾದಿವಚನಗಳಿಂದ ವಿಶದಪಡಿಸುವರು "ಮೇಯವಿಶೇಷೇಣ" ಎಂಬ ಅನುವ್ಯಾಖ್ಯಾನ ವಚನಕ್ಕೆ, ಪ್ರಕೃತ ಅರ್ಥಕ್ಕೆ ಉಪಯೋಗವಾಗುವ ಹಾಗ (ದೃಷ್ಟಾಂತ ಕಥನರೂಪ ಪ್ರಯೋಜನ ಪರತ್ವವಿಲ್ಲದೆಯೇ) ಯೋಜನೆವನ್ನು "ಯದ್ವಾ" ಇತ್ಯಾದಿವಚನದಿಂದ ಹೇಳುತ್ತಾರೆ "ವಿಶೇಷವಿಷಯೇಣ" — ದೇಹೇಂದ್ರಿಯ ಮುಂತಾದ ವಿಶೇಷ ವಿಷಯಕವಾದ ಪ್ರಮಾಣದಿಂದ, "ದೇಹಹೀನನಾದವನಿಗೆ ಜಗತ್ಕರ್ತೃತ್ವವಿಲ್ಲ" ಎಂಬ ವಿಶೇಷ ಅನುಪಪತ್ತಿಯನ್ನು ಪರಿಹರಿಸಲಾಗುವದು, ಹೀಗೆ ಅರ್ಥ

॥ ॐ न प्रयोजनवत्त्वात् ॐ ॥ ॥ ॐ लोकवत्तु लीलाकैवल्यम् ॐ ॥ यत्प्रयोजनार्थं सृष्ट्यादिस्तदूनत्वादपूर्णतेत्याक्षेपपरिहारायेदमधिकरणमारभ्यते । तदेतदनुपपन्नमिवाभाति । तथा हि । यद्यत्र कर्तृत्वेन प्रयोजनवत्त्वं प्रसाध्यापूर्णत्वसाधनं पूर्वपक्षिणो विवक्षितं स्यात्तदा प्रथमसूत्रमयुक्तं स्यात् । अपूर्णतासाधकं प्रति प्रयोजनवत्त्व-

— ಪದಾರ್ಥದೀಪಿಕಾ —

॥ಓಂ॥ ನ ಪ್ರಯೋಜನವತ್ತ್ವಾತ್ ॥ಓಂ॥ ಲೋಕವತ್ತು ಲೀಲಾ ಕೈವಲ್ಯಂ ॥ಓಂ॥ ಯಾವ ಪ್ರಯೋಜನಕ್ಕೆ ಸೃಷ್ಟ್ಯಾದಿಗಳೋ ಅದರಿಂದ ಕಡಿಮೆಯುವನಾದುದರಿಂದ ಅಪೂರ್ಣತೆಯು ಪ್ರಾಪ್ತವಾಗುತ್ತದೆ ಈ ಆಕ್ಷೇಪದ ಪರಿಹಾರಕ್ಕಾಗಿ ಈ ಅಧಿಕರಣವು ಆರಂಭಿಸಲ್ಪಡುತ್ತದೆ ಆದರೆ ಇದು ಅಯುಕ್ತವೆಂಬಂತೆ ತೋರುತ್ತದ ಹೇಗಂದರೆ— ಒಂದು ವೇಳೆ, ಇಲ್ಲಿ ಕರ್ತೃತ್ವದಿಂದ ಪ್ರಯೋಜನವಿದೆಯೆಂಬುನ್ನು ಸಾಧನಮಾಡಿ, ಅಪೂರ್ಣತೆಯನ್ನು ಸಾಧನಮಾಡುವುದು ಪೂರ್ವಪಕ್ಷಿಗೆ ಅಭಿಪ್ರೇತವಾಗಿದ್ದರೆ, ಆಗ ಪ್ರಥಮ ಸೂತ್ರವು ಅಯುಕ್ತವಾದೀತು ಏಕೆಂದರೆ ಅಪೂರ್ಣತೆಯನ್ನು ಸಾಧನಮಾಡುವವನನ್ನು ಕುರಿತು

— ವಿಶೇಷಾರ್ಥಪ್ರದೀಪಿಕಾ —

"ತಥಾಪಿ" – ಪುನರುಕ್ತಿಯಿಲ್ಲದಿದ್ದರೂ, ಎಲ್ಲ ಅನುಪಪತ್ತಿಗಳನ್ನು ಪರಿಹರಿಸಿದುದರಿಂದ, "ವಿಕರಣತ್ವಾನ್ನೇತಿ ಚೇತ್" ಎಂಬ ಸೂತ್ರದಿಂದ ಮಾಡಿದ ಆಕ್ಷೇಪವು ಯುಕ್ತವಲ್ಲ, ಹೀಗೆ ಅರ್ಥವು "ವಿಶೇಷಜಿಜ್ಞಾಸಯಾ"–ಪ್ರಮಾಣವಿಶೇಷವನ್ನೇ ವಿಶೇಷಬುಭುತ್ಸೆಯಿಂದ (ಹೆಚ್ಚಿನದನ್ನು ತಿಳಿಯಬೇಕೆಂಬ ಲವಲವಿಕೆಯಿಂದ)ಆಕ್ಷೇಪವನ್ನು ಮಾಡುವುದು ಯುಕ್ತವಾಗುತ್ತದೆಯೆಂದು ಭಾವ. ತ್ರಿ ೧.ಅ.

"ಸ್ವಯಂ ಕೃತಾಽಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ" ಎಂಬ ತಮ್ಮ ಪ್ರತಿಜ್ಞೆಗೆ ಅನುಗುಣವಾಗಿ, "ಸದಾ ಪ್ರವೃತ್ತಿರೀಶಸ್ಯ" ಈ ಮುಂತಾದ ವಚನಗಳಿಂದ, ಶ್ರೀಮದಾಚಾರ್ಯರು ಈ ಅಧಿಕರಣದ ಭಾಷ್ಯದಲ್ಲಿ ಹೇಳಿದುದನ್ನು ವಿವರಿಸುತ್ತಾರೆ ಈ ಅಭಿಪ್ರಾಯದಿಂದ, ಆ ವಿವರಣದ ಕಾರಣವಾದ ಅನುಪಪತ್ತಿಯನ್ನು, ಅಧಿಕರಣಾರ್ಥವನ್ನು ಹೇಳುವ ವ್ಯಾಜದಿಂದ ಭಾಷ್ಯವಾಕ್ಯದ ಪಠನದೊಂದಿಗ "ಯತ್ಪ್ರಯೋಜನಾರ್ಥಂ" ಇಲ್ಲಿಂದಾರಂಭಿಸಿ. "ನೈವಂ" ಇಲ್ಲಿಯವರೆಗಿನ ಗ್ರಂಥದಿಂದ ಟೀಕಾಕಾರರು ತೋರಿಸುತ್ತಾರೆ

"ಪ್ರಯೋಜನವತ್ತ್ವಹೇತೋರಸಿದ್ಧತ್ವಾತ್" –ಪರಮಾತ್ಮನಿಗೆ, ಸೃಷ್ಟಿಮುಂ

हेतोरसिद्धत्वात्। अथ कर्ता चेत्प्रयोजनवान् स्यात्। तथा चापूर्णः स्यादित्यापादनं विवक्षितम्। तदा व्यर्थमेवेदं सूत्रम्। न चापूर्णस्ततो न प्रयोजनवानिति परेणैवाङ्गीकृतत्वात्। अन्यथा विपर्ययापर्यवसानात्। लोकवत्तु लीलाकैवल्यमिति द्वितीयसूत्रं तु पक्षद्वयेऽप्ययुक्तम्। साधनापादनदूषणस्यानुद्भावनादिति। मैवम्। ईश्वरस्य सृष्ट्यादिना प्रयोजनमस्ति न वा। आद्येऽपूर्णत्वं प्रसज्येत। द्वितीये

— ಪದಾರ್ಥದೀಪಿಕಾ —

'ಪ್ರಯೋಜನವಿರುವುದೆಂಬ ಯುಕ್ತಿಯು ಅಸಿದ್ಧವಾದುದು ಇನ್ನು ಕರ್ತೃವಾದರೆ ಪ್ರಯೋಜನವುಳ್ಳವನಾಗಬೇಕಾದೀತು ಆದರಿಂದ ಅಪೂರ್ಣನಾದಾನು! ಹೀಗೆ ಆಪಾದನವು ಅಭಿಪ್ರೇತವಾದ ಪಕ್ಷದಲ್ಲಿ ಈ ಸೂತ್ರವು ವ್ಯರ್ಥವೇ! ಏಕಂದರೆ ಅಪೂರ್ಣನೂ ಅಲ್ಲ, ಆದ್ದರಿಂದ, ಪ್ರಯೋಜನವುಳ್ಳವನೂ ಅಲ್ಲ ಹೀಗೆ ಪರನೇ ಒಪ್ಪಿರುತ್ತಾನೆ ಇಲ್ಲದಿದ್ದಲ್ಲಿ ವಿಪರ್ಯಯ ಪರ್ಯವಸಾನವಾಗುವದಿಲ್ಲ "ಲೋಕವತ್ತು ಲೀಲಾಕೈವಲ್ಯಂ" ಎಂಬ ಎರಡನೆಯ ಸೂತ್ರವಾದರೋ ಎರಡೂ ಪಕ್ಷಗಳಲ್ಲಿಯೂ ಅಯುಕ್ತವು ಏಕಂದರೆ- ಸಾಧನ -ಆಪಾದನ, ಇವೆರಡೂ ಪಕ್ಷಗಳ ಮೇಲೆ ದೂಷಣವನ್ನು ತೋರಿಸಲಿಲ್ಲ ಹೀಗೆ ಆಶಂಕೆಯು ಬರುತ್ತದೆ ಇದು ಸಮಂಜಸವಲ್ಲ ಏಕೆಂದರೆ- ಈಶ್ವರನಿಗೆ ಸೃಷ್ಟ್ಯಾದಿಗಳಿಂದ ಪ್ರಯೋಜನ ಇದೆಯೋ ಇಲ್ಲವೋ? ಪ್ರಶ್ನೆ ಮೊದಲಿಯ ಪಕ್ಷದಲ್ಲಿ ಅಪೂರ್ಣತೆಯು ಬರಬೇಕಾದೀತು! ಎರಡನೆಯ ಪಕ್ಷದಲ್ಲಿಯಾದರೋ ಕರ್ತೃತ್ವವು ಅಯುಕ್ತವಾಗುತ್ತದೆ

— ವಿಶೇಷಾರ್ಥಪ್ರದೀಪಿಕಾ —

ತಾದವುಗಳಿಂದ ಹೊಂದಬೇಕಾದ ಪ್ರಯೋಜನವು, ಸೃಷ್ಟಿಯ ಮುಂಚೆಯೇ ಸಿದ್ಧವೇ ಆಗಿರುವುದೆಂಬ ಅರ್ಥವನ್ನು "ಕೃತಕೃತ್ಯತ್ವಾತ್ ನ ಪ್ರಯೋಜನಾಯ ಸೃಷ್ಟಿಃ" ಎಂಬ ಭಾಷ್ಯದಲ್ಲಿಯೇ ಹೇಳಿದುದರಿಂದ "ಪ್ರಯೋಜನವತ್ವ' ಯುಕ್ತಿಯು ಈಶ್ವರನಲ್ಲಿ ಅಸಿದ್ಧವಾದುದು, ಹೀಗೆ ಭಾವ

"ನಪ್ರಯೋಜನವತ್ವಾತ್'' ಎಂಬಲ್ಲಿ, ನಞ್ಸಮಾಸವಿದ್ದು, ಒಂದೇ ಪದವೆಂಬ ಅಭಿಪ್ರಾಯದಿಂದ, "ಸೃಷ್ಟಿಮುಂತಾದುದರಿಂದ ಲಭಿಸುವ ಪ್ರಯೋಜನವು ಯಾವುದೋ ಅಂಥ ಪ್ರಯೋಜನವತ್ವವು ಇರುವುದಿಲ್ಲ'' ಎಂಬ, ಭಾಷ್ಯದಲ್ಲಿ ಹೇಳಿದ ಮತ್ತೊಂದು ಅರ್ಥದ ಬಗ್ಗೆಯೂ ಅನುಪಪತ್ತಿಯನ್ನು ಪಕ್ಷಭೇದದಿಂದ 'ಅಥ'' ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ

तु कर्तृत्वानुपपत्तिः । तस्य प्रयोजनस्याप्तत्वादित्युभयथाऽपीश्वरस्य जगत्सृष्ट्यादिकर्तृत्वानुपपत्तिरित्यत्र पूर्वपक्षिणो विवक्षितम् । तत्र प्रथमसूत्रेण प्रयोजनाभावपक्षं सयुक्तिकमुपादत्ते । तत्रोक्तदोषपरिहारार्थं द्वितीयं सूत्रम् । यद्वा कर्तृत्वेन प्रयोजनस्य तेन चापूर्णत्वस्येदं साधनं विवक्षितमुतापादनमिति सिद्धान्ती विकल्प्याद्यमाद्येन

## — ಪದಾರ್ಥದೀಪಿಕಾ —

ಏಕೆಂದರೆ- ಅದು ಪ್ರಯೋಜನವುಳ್ಳದ್ದೆಂಬುದರಿಂದ ನಿಯತ ಸಂಬಂಧವನ್ನಿಟ್ಟುಕೊಂಡಿದೆ ಹೀಗೆ ಎರಡೂ ರೀತಿಗಳಿಂದಲೂ ಈಶ್ವರನಿಗೆ ಜಗತ್ಸೃಷ್ಟ್ಯಾದಿ ಕರ್ತೃತ್ವವು ಯುಕ್ತವಾಗುತ್ತದೆ ಹೀಗೆ ಇಲ್ಲಿ ಪೂರ್ವಪಕ್ಷಿಗೆ ಹೇಳುವ ಅಭಿಪ್ರಾಯವುಂಟು- ಅದರಲ್ಲಿ ಪ್ರಥಮ ಸೂತ್ರದಿಂದ ಪ್ರಯೋಜನವಿಲ್ಲವೆಂಬ ಪಕ್ಷವನ್ನು ಸಯುಕ್ತಿಕ (ಯುಕ್ತಿ ಪೂಷ್ಪಿತ) ವಾದುದರಿಂದ ಸ್ವೀಕರಿಸಿದ್ದಾರೆ ಅದರ ಮೇಲೆ ಹೇಳಿದ ದೋಷಗಳ ಪರಿಹಾರಕ್ಕಾಗಿ ಎರಡನೆಯ ಸೂತ್ರವನ್ನು ಹೇಳಿದ್ದಾರೆ ಅಥವಾ ಕರ್ತೃತ್ವವಿದ್ದುದರಿಂದ ಪ್ರಯೋಜನವಿದೆಯೆಂಬುದಕ್ಕೆ ಹಾಗು ಅದರಿಂದ ಅಪೂರ್ಣತೆಯೆಂಬುದಕ್ಕೆ ಈ ಸಾಧನವನ್ನು ಹೇಳಬೇಕಾಗಿರುವದೋ ಅಥವಾ ಆಪಾದನವನ್ನು ಮಾಡಬೇಕಾಗಿದೆಯೋ? ಹೀಗೆ ಸಿದ್ಧಾಂತಿಯು ವಿಕಲ್ಪಿಸಿ, ಮೊದಲನೆಯ ಪಕ್ಷವನ್ನು ಮೊದಲನೆಯ ಸೂತ್ರದಿಂದ ನಿರಾಕರಿಸುತ್ತಾರೆ ಕರ್ತೃತ್ವದಿಂದ

## — ವಿಶೇಷಾರ್ಥಪ್ರದೀಪಿಕಾ —

ಮೂಲಕಾರರಿಗೆ ಅಭಿಮತವಾದ, ಎರಡೂ ಸೂತ್ರಗಳ ತಾತ್ಪರ್ಯವನ್ನು ಎರಡು ರೀತಿಗಳಿಂದ "ಈಶ್ವರಸ್ಯ" ಇತ್ಯಾದಿಯಾದ, 'ನಿರಾಕರೋತಿ" ಇಲ್ಲಿಯವರೆಗಿನ ಗ್ರಂಥದಿಂದ, "ಸೃಷ್ಟಿಮುಂತಾದುದರಿಂದ ಈಶ್ವರನಿಗೆ ಪ್ರಯೋಜನವಿಲ್ಲ. ಏಕೆಂದರೆ ಅದರಿಂದ ಬರಬೇಕಾದ ಪ್ರಯೋಜನವು ಅದಕ್ಕೂ ಮುಂಚೆಯೇ ಅವನಲ್ಲಿ ಇದ್ದೇ ಇದೆ ಏಕೆಂದರೆ ಅವನು, "ಆಪ್ತಕಾಮನು" ಈ ರೀತಿಯಾಗಿ ಸೂತ್ರದ ಅರ್ಥವನ್ನು ಹೃದಯದಲ್ಲಿಟ್ಟುಕೊಂಡು "ಪ್ರಯೋಜನಾಭಾವಪಕ್ಷಂ ಸಯುಕ್ತಿಕಂ ಉಪಾದತ್ತೆ" ಎಂಬುದಾಗಿ ಹೇಳಿದ್ದಾರೆ.

"ತತ್ರೋಕ್ತದೋಷಪರಿಹಾರಾರ್ಥಂ" = ಪ್ರಯೋಜನವಿಲ್ಲವೆಂಬ ಪಕ್ಷದಲ್ಲಿ ಹೇಳಿದ, "ಕರ್ತೃತ್ವವು ಯುಕ್ತವಾಗುವುದಿಲ್ಲ" ವೆಂಬ ದೋಷದ ಪರಿಹಾರದ ಸಲುವಾಗಿ ಆ ಪರಿಹಾರವು ಮೂಲದ ವ್ಯಾಖ್ಯಾನದ ಸಮಯದಲ್ಲಿ ವಿಶದವಾಗುವುದು.

निराचष्ट । न कर्तृत्वेन प्रयोजनवत्त्वं साध्यम् । कृतकृत्यत्वेन प्रयो-जनाभावस्यैव निश्चितत्वात् । न चासिद्धो हेतुः । अथैष एव परम आनन्दो निरनिष्टो निरवद्य इति श्रुतेः । प्रयोजनवत्त्वेनापूर्णतानुमानं तु गर्भस्रावेणैव गतमिति । आद्यस्य दूषणान्तरं वदन्द्वितीयं द्वितीयेन निराकरोतीति ।

## — ಪದಾರ್ಥದೀಪಿಕಾ —

ಪ್ರಯೋಜನವಿದೆಯೆಂಬುದನ್ನು ಸಾಧಮಾಡುವಹಾಗೆ ಇಲ್ಲ. ಏಕೆಂದರೆ ಕೃತಕೃತ್ಯತ್ವನಾದುದರಿಂದ (ಮಾಡಬೇಕಾದುದನ್ನು ಮಾಡಿರುವುದರಿಂದ) ಪ್ರಯೋಜನವಿಲ್ಲವೆಂಬ ವಿಷಯುವೇ ನಿಶ್ಚಿತವಾದುದು ಮತ್ತು ಹೇತುವು ಅಸಿದ್ಧವಲ್ಲ ಏಕೆಂದರೆ "ಅಥೈಷ ಏವ ಪರಮ ಆನಂದೋನಿರನಿಷ್ಟೋ ನಿರವದ್ಯಃ" ಇತ್ಯಾದಿ ಶ್ರುತಿಗಳಿರುತ್ತವೆ ಪ್ರಯೋಜನವಿದೆಯೆಂಬ ಹೇತುವಿನಿಂದ ಅಪೂರ್ಣತೆಯನ್ನು ಸಾಧಿಸುವುದಂತೂ ಗರ್ಭಸ್ರಾವದಿಂದಲೇ ಹೋಯಿತು," ಹೀಗೆ ಮೊದಲನೆ

## — ವಿಶೇಷಾರ್ಥಪ್ರದೀಪಿಕಾ —

"ನಿರಾಚಷ್ಟೇ" (ನಿರಾಕರಿಸುತ್ತಾರೆ) ಎಂಬುದನ್ನು, ಸೂತ್ರಾರ್ಥವನ್ನು ಹೇಳುತ್ತ "ನ ಕರ್ತೃತ್ವೇನ" ಇತ್ಯಾದಿ ವಾಕ್ಯದಿಂದ ವಿಶದ ಪಡಿಸುತ್ತಾರೆ. "ಪ್ರಯೋಜನವತ್ವಾತ್" ಎಂಬುದರ ಅರ್ಥವೇ "ಕೃತಕೃತ್ಯತ್ವೇನ" ಎಂಬುದು "ಪ್ರಯೋಜನಾಭಾವಸ್ಯೈವ" ಎಂಬುದು (ಪ್ರಯೋಜನವಿಲ್ಲದಿರುವಿಕೆಯೆಂಬುದೇ) ತಾತ್ಪರ್ಯಾರ್ಥವು ಅಥವಾ ಸೂತ್ರದಲ್ಲಿರುವ "ನ" ಎಂಬೀಪದವು ಸಮಾಸದಲ್ಲಿ ಸೇರಿದುದೂ, ಸೇರದಿದ್ದುದೂ ಆಗಿದೆ ಹೀಗೆ ಒಪ್ಪಿ "ಸೇರದಿದ್ದುದು" ಎಂಬ ಪಕ್ಷದಲ್ಲಿ ಆದರ ಅರ್ಥವನ್ನು "ನ ಕರ್ತೃತ್ವೇನ" ಇತ್ಯಾದಿಯಾಗಿ ಹೇಳಿದ್ದಾರೆ. ಸಮಾಸದಲ್ಲಿ ಸೇರಿದುದೆಂಬ ಫಕ್ಷದಲ್ಲಿ ಅರ್ಥವನ್ನು "ಪ್ರಯೋಜನಾಭಾವಸ್ಯ ನಿಶ್ಚಯಾತ್" ಎಂಬ ವಾಕ್ಯದಿಂದ ಹೇಳಿದ್ದಾರೆ ಹೀಗೆಯೂ ಹೇಳಬಹುದು. ಇದರಲ್ಲಿ ಯುಕ್ತಿಯು 'ಕೃತಕೃತ್ಯತ್ವೇನ' ಎಂಬುದು ಪೂರ್ವಪಕ್ಷದ ಅನುಮಾನವು ಬಾಧಿತವಾದುದೆಂದು ಅಭಿಪ್ರಾಯವಿದೆ ಅಥೈಷ ಪರಮಃ ಆನಂದಃ ನಿರನಿಷ್ಟೋ ನಿರವದ್ಯಃ' — 'ಏಷಃ' = ಈ ಪರಮಾತ್ಮನೇ 'ಪರಮಾನಂದಃ (ಪರಮಃ ಆನಂದಃ) ಪೂರ್ಣಾನಂದನು (ಬೃ ೬ ೩-೩೩) ಅನಿಷ್ಟರಹಿತನು, ದೋಷರಹಿತನು" ಅಪೂರ್ಣತೆಯು ಸಾಧನದ ನಿರಾಸವು ಸೂತ್ರದಲ್ಲಿ ಬಂದಿಲ್ಲವೆಂಬ ಆಶಂಕೆಯನ್ನು 'ಪ್ರಯೋಜನವತ್ವೇನ' ಈ ವಾಕ್ಯದಿಂದ ಪರಿಹರಿಸುತ್ತಾ ಹೇತುವು ಅಸಿದ್ಧವೇ ಎಂದು ಭಾವ

## ॥ ॐ न प्रयोजनवत्त्वात् ॐ ॥

**सदा प्रवृत्तिरीशस्य स्वभावादेव केवलम् ॥**

ननूक्तमत्र लोकवदिति सूत्रेण साधनस्यापादनस्य वा न किञ्चित् दूषणमुद्भाव्यत इति । मैवम् । बाधादेरुद्भावनादित्याशयवान्द्वितीयसूत्रस्य तात्पर्यमाह ॥ सदेति । यथा लोके ज्वलनपव-

ಅಗ್ನಿ ವಾಯ್ವಾದಿಗಳಿಗೆ ಊರ್ಧ್ವಗಮನಾದಿ ಪ್ರವೃತ್ತಿಯಂತೆ, ಈಶ್ವರನಿಗೂ ಯಾವಾಗಲೂ ಸೃಷ್ಟ್ಯಾದಿಗಳಲ್ಲಿ ಪ್ರಯೋಜನವಿಲ್ಲದೆಯೇ ಸ್ವಭಾವದಿಂದಲೇ ಪ್ರವೃತ್ತಿಯು ಪ್ರಮಾಣಪ್ರಮಿತವಾದುದು.

### — ಪದಾರ್ಥದೀಪಿಕಾ —

ಯದಕ್ಕೆ ಬೇರೆ ದೂಷಣವನ್ನು ಹೇಳುತ್ತ, ಎರಡನೆಯದನ್ನು ಎರಡನೆಯದರಿಂದ ನಿರಾಕರಿಸುತ್ತಾರೆ, ಹೀಗೆ

ಇನ್ನು– ಇಲ್ಲಿ "ಲೋಕವತ್" ಎಂಬ ಸೂತ್ರದಿಂದ ಸಾಧನಕ್ಕೆ ಇಲ್ಲವೆ ಆಪಾದನಕ್ಕೆ ಯಾವದೇ ದೂಷಣವನ್ನು ಹೇಳಿಲ್ಲವೆಂದು ಹೇಳಿದೆಯಲ್ಲ! ಎಂದು ಶಂಕಿಸಬಾರದು ಏಕೆಂದರೆ— ಬಾಧಮುಂತಾದುದುದನ್ನು ಉದ್ಭಾವಿಸಲಾಗಿದೆ ಯೆಂಬ ಅಭಿಪ್ರಾಯವುಳ್ಳ ಶ್ರೀಮದಾಚಾರ್ಯರು ಎರಡನೆಯ ಸೂತ್ರದ ತಾತ್ಪರ್ಯವನ್ನು "ಸದಾ" ಇತ್ಯಾದಿ ಶ್ಲೋಕದಿಂದ ಹೇಳುತ್ತಾರ ಲೋಕದಲ್ಲಿ ಅಗ್ನಿ

### — ವಿಶೇಷಾರ್ಥಪ್ರದೀಪಿಕಾ —

'ಆದ್ಯಸ್ಯ" –ಮೊದಲನೆಯದಾದ, ಕರ್ತೃತ್ವಯುಕ್ತಿಯಿಂದ ಪ್ರಯೋಜನ ಸಮರ್ಥನವೆಂಬ ಪಕ್ಷದ ಮೇಲೆ ಹಿಂದೆ ಹೇಳಿದ ಬಾಧವೆಂಬ ದೋಷವನ್ನು ಬಿಟ್ಟು ಬೇರೆಯಾದ 'ಅನೈಕಾಂತಿಕತ್ವ' (ಹೇತುವು ಸಾಧ್ಯವದ್ದೂ ಬಿಟ್ಟೂ ಇರುತ್ತದೆ) ಎಂಬ ದೋಷವನ್ನು ಹೇಳುತ್ತ, ಹೀಗೆ ಅರ್ಥ ಎರಡನೆಯದಾದ ಅಪಾದನವೆಂಬ ಪಕ್ಷವನ್ನು ಎರಡನೆಯ ಪಕ್ಷದಿಂದ ನಿರಾಕರಿಸುವರು ಆ ನಿರಾಕರಣಪ್ರಕಾರವು ಮುಂದೆ ವಿಶದವಾಗುವದು

"ಜ್ವಲನಪವನಾದೀನಾಂ" - ಅಗ್ನಿ, ಗಾಳಿ ಮುಂತಾದವುಗಳಿಗೆ ಊರ್ಧ್ವಗಮನ, ತಿರ್ಯಗ್ಗಮನ ಮುಂತಾದ ಪ್ರವೃತ್ತಿಯು ಸ್ವಾಭಾವಿಕವು ಹೀಗೆ ಅರ್ಥ "ಪ್ರಮಿತೇತಿ ಶೇಷಃ"– ' ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ ಎಂಬ ಶ್ರುತಿಯಿರುವುದರಿಂದ ಪ್ರಮಿತವೆಂದು ತಿಳಿಯಬೇಕು

## ॥ ॐ लोकवत्तु लीलाकैवल्यम् ॐ ॥

नादीनां तथेशस्यापि सदा सृष्ट्यादौ केवलं प्रयोजनेन विना स्वभावादेव प्रवृत्तिः प्रमितेति शेषः । तदनेनेश्वरस्य प्रवृत्त्या प्रयोजनसाधनमनैकान्तिकं बाधितविषयं च । प्रसङ्गस्तु व्याप्तिविकलो विपर्ययापर्यवसायी चेत्युक्तं भवति ।

अथ मन्येत । चेतनप्रवृत्तिर्न प्रयोजनेन विना दृष्टा । अतो

### — ಪದಾರ್ಥದೀಪಿಕಾ —

ಗಾಳಿ ಮುಂತಾದವುಗಳಿಗೆ ಹೇಗೋ ಹಾಗೆ ಈಶನಿಗಾದರೂ ಸದಾ ಸೃಷ್ಟಿ ಮುಂತಾದುದರಲ್ಲಿ "ಕೇವಲಂ"= ಪ್ರಯೋಜನವಿಲ್ಲದೆಯೇ ಸ್ವಭಾವದಿಂದಲೇ ಪ್ರವೃತ್ತಿಯು, "ಪ್ರಮಿತಾ" ಪ್ರಮಾಣಪ್ರಮಿತವೆಂದು ಶೇಷವು ಇದರಿಂದ, "ಈಶ್ವರನಿಗ ಪ್ರವೃತ್ತಿಯೆಂಬ ಯುಕ್ತಿಯಿಂದ ಪ್ರಯೋಜನವಿದೆಯೆಂದು ಸಾಧನಮಾಡುವುದರಲ್ಲಿ ಅನೈಕಾಂತ್ಯವೆಂಬ ದೋಷವೂ, ಸಾಧ್ಯವು ಬಾಧಿತವೆಂಬ ದೋಷವೂ, ಬರುತ್ತದೆ ತರ್ಕವಾದರೋ ವ್ಯಾಪ್ತಿರಹಿತವಾದುದು ಆದುದರಿಂದ ವಿಪರ್ಯಯದಲ್ಲಿ ಪರ್ಯವಸಾನಹೊಂದಲಾರದು" ಎಂಬುದನ್ನು ಹೇಳಿದ್ದಾಗುತ್ತದೆ

ಇನ್ನು– ಚೇತನರ ಪ್ರವೃತ್ತಿಯು ಪ್ರಯೋಜನವಿಲ್ಲದೆ (ಉಂಟಾಗುವುದು)

### — ವಿಶೇಷಾರ್ಥಪ್ರದೀಪಿಕಾ —

ಅನೈಕಾಂತಿಕಂ" –ಅಗ್ನಿವಾಯು ಮುಂತಾದವುಗಳ ಪ್ರವೃತ್ತಿಯಲ್ಲಿ, ಪ್ರವೃತ್ತಿತ್ವಯುಕ್ತಿಯು "ಪ್ರಯೋಜನವತ್ವ" ಸಾಧ್ಯವನ್ನು ಬಿಟ್ಟಿರುತ್ತದೆ "ಬಾಧಿತವಿಷಯಂ ಚ"" –ಸೃಷ್ಟಿಮುಂತಾದುದರಲ್ಲಿ ಸ್ವಭಾವದಿಂದಲೇ ಈಶ್ವರನಿಗೆ ಪ್ರವೃತ್ತಿಯೆಂಬುದು"ದೇವಸ್ಯೈಷ" ಇತ್ಯಾದಿ ಶ್ರುತಿ ಪ್ರಮಿತವಾದುದರಿಂದ, "ಪ್ರಯೋಜನವತ್ವ" ಸಾಧ್ಯವು ಬಾಧಿತವಾಗುವದು, ಹೀಗೆ ಭಾವ "ಪ್ರಸಂಗಸ್ತು'' – "ಕರ್ತೃವಾದರೆ ಪ್ರಯೋಜನವುಳ್ಳವನಾಗಲಿ, ಪ್ರಯೋಜನವುಳ್ಳವನಲ್ಲವಾದುದರಿಂದ ಕರ್ತೃವು ಆಗಲಾರನು", ಎಂಬ ತರ್ಕವು ''ವ್ಯಾಪ್ತಿವಿಕಲಃ"– ಅಗ್ನಿಮುಂತಾದವುಗಳ ಊರ್ಧ್ವಗಮನಾದಿ ಕೃತಿಗಳಲ್ಲಿ, ಪ್ರಯೋಜನವಿಲ್ಲದಿರುವುದರಿಂದ, ಹೇತುವಿಗೆ ವ್ಯಾಪ್ತಿಯು ಇಲ್ಲ ಈಶ್ವರನ ಸೃಷ್ಟ್ಯಾದಿಪ್ರವೃತ್ತಿಯು ಪ್ರಮಾಣಪ್ರಮಿತವಾದುದರಿಂದ, "ಸೃಷ್ಟ್ಯಾದಿಗಳ ಕರ್ತೃವಾಗಲಾರ"ನೆಂಬುದಾಗಿ ಪ್ರಮಾಣವಿರುದ್ಧವಾಗಿ ಆಪಾದಿಸಲು –ವಿಪರ್ಯಯದಲ್ಲಿ ಪರ್ಯವಸಾನಮಾಡಲು ಶಕ್ಯವಿಲ್ಲ ಹೀಗೆ ಭಾವ

अङ्गचेष्टा यथा पुंसः काश्चिदुद्देशवर्जिता ॥

नानैकान्त्यादीति । तदपि नास्ति । मत्तस्य सुखोद्रेकादेव नृत्तगानादि-प्रवृत्तिदर्शनात् । ननु च प्रेक्षावत्प्रवृत्तिर्न प्रयोजनोद्देशेन विनोपलब्धेयं च प्रेक्षावत्प्रवृत्तिः । अतः प्रयोजनोद्देशवती स्यादिति साध्यमापाद्यं चेत्यत आह ॥ अङ्गेति । काश्चिद्व्याख्यानादावङ्गुलिचालनादिकाः । उद्देशवर्जिताः प्रयोजनोद्देशवर्जिताः । तथेशस्यापि प्रवृत्तिरिति पूर्वेणा-न्वयः । तथाऽप्यनैकान्त्याद्यनिस्तार इति भावः । यदुक्तमीश्वरस्य

ಪುರುಷನ (ವ್ಯಾಖ್ಯಾತೃವಿನ) ಅಂಗುಲಿಚಾಲನ ಮುಂತಾದ ಕೆಲವು ವ್ಯಾಪಾರಗಳು (ವ್ಯಾಖ್ಯಾನಾದಿಗಳಲ್ಲಿ) ಪ್ರಯೋಜನೋದ್ದೇಶವಿಲ್ಲದವುಗಳಾಗಿರುವಂತೆ, ಈಶ್ವರನ ಸೃಷ್ಟ್ಯಾದಿ ಪ್ರವೃತ್ತಿಯು ಪ್ರಯೋಜನೋದ್ದೇಶವಿಲ್ಲದ್ದು

## — ಪದಾರ್ಥದೀಪಿಕಾ —

ಕಂಡು ಬಂದಿಲ್ಲ ಆದುದರಿಂದ, ಅನೈಕಾಂತ್ಯದೋಷವಿಲ್ಲವೆಂದು ಶಂಕಿಸುವುದೆಂದರೆ– ಅದುವೂ ಇಲ್ಲ. ಏಕೆಂದರೆ– ಮತ್ತನಿಗೆ ಸುಖೋದ್ರೇಕದಿಂದಲೇ ನೃತ್ತಗಾನ ಮುಂತಾದುದರಲ್ಲಿ ಪ್ರವೃತ್ತಿಯು ಕಂಡಿರುತ್ತದೆ ಇನ್ನು— ಜ್ಞಾನಿಗಳ ಪ್ರವೃತ್ತಿಯು ಪ್ರಯೋಜನದ ಉದ್ದೇಶವಿಲ್ಲದೆ ಆಗುವುದು ಕಂಡಿಲ್ಲ ಈ ಸೃಷ್ಟ್ಯಾದಿಪ್ರವೃತ್ತಿಯಾದರೋ ಜ್ಞಾನಿಯ ಪ್ರವೃತ್ತಿಯೇ? ಆದುದರಿಂದ ಪ್ರಯೋಜನದ ಉದ್ದೇಶವುಳ್ಳದ್ದಾಗಿರಲಿ ! ಹೀಗೆ ಸಾಧ್ಯವೂ ಆಪಾದ್ಯವೂ ಇರುತ್ತದೆ ಹೀಗೆ ಬರುವ ಆಶಂಕೆಯನ್ನು "ಅಂಗಚೇಷ್ಟಾ" ಇತ್ಯಾದಿ ಪದ್ಯದಿಂದ ಪರಿಹರಿಸುತ್ತಾರೆ "ಕಾಶ್ಚಿತ್"– ವ್ಯಾಖ್ಯಾನಾದಿಗಳನ್ನು ಮಾಡುವಾಗ ಅಂಗುಲಿಚಾಲನ (ಬೆರಳು ನಡುಗಿಸೋಣ) ಮುಂತಾದವುಗಳು "ಉದ್ದೇಶವರ್ಜಿತಾಃ"– ಪ್ರಯೋಜನದ ಉದ್ದೇಶವಿಲ್ಲದವುಗಳು. "ತಥಾ ಈಶಸ್ಯಾಪಿ ಪ್ರವೃತ್ತಿಃ" (ಅದರಂತೆ ಈಶನಿಗೂ ಪ್ರವೃತ್ತಿಯು) ಹೀಗೆ ಹಿಂದಿನ ಪದ್ಯದೊಡದೆ ಅನ್ವಯವಿದೆ ಆದರೂ ಅನೈಕಾಂತ್ಯಮುಂತಾದುದು ತಪ್ಪಿದ್ದಲ್ಲ" ಹೀಗೆ ಇಲ್ಲಿ ಭಾವ ಇನ್ನು

## — ವಿಶೇಷಾರ್ಥಪ್ರದೀಪಿಕಾ —

"ನೃತ್ತಗಾನಾದಿಕಾ ಸುಖಾತ್"–ಎಂಬ ಆನಂದಮಯಾಧಿಕರಣದ ಅನುವ್ಯಾಖ್ಯಾನದ ಅರ್ಥವನ್ನು ಹೃದಯದಲ್ಲಿ ತಂದುಕೊಂಡು, "ಮತ್ತಸ್ಯ" ಎಂಬುದಾಗಿ ಹೇಳಿರುತ್ತಾರೆ ಮತ್ತನು ಜ್ಞಾನಿಯಲ್ಲವೆಂದು "ನನು ಚ" ಇತ್ಯಾದಿ ವಚನದಿಂದ ಶಂಕಿಸುತ್ತಾರೆ

देवस्यैष स्वभावोऽयमित्याह श्रुतिरञ्जसा ॥

प्रवृत्तिः प्रयोजनेन विना स्वभावादेव प्रमितेति । तत्प्रमाणमिदानीमाह ॥ देवस्येति । देवस्यैष स्वभावोऽयमाप्तकामस्य का स्पृहेति श्रुतिरञ्जसा स्फुटमुक्तमर्थमाह । देवस्यायं सृष्ट्यादिविषय एष इच्छा । तत्पूर्विका प्रवृत्तिरिति यावत् । स्वभाव एव । न प्रयोजनाय । कुतः । आप्तकामस्य प्रयोजनस्पृहाऽसम्भवादित्यर्थः ।

" ದೇವಸ್ಯೈಷ ಸ್ವಭಾವೋಽಯಂ " ಎಂಬ ಶ್ರುತಿಯು ಸ್ಪಷ್ಟವಾಗಿ ಸೋಕ್ತ ಹೇಳಲ್ಪಟ್ಟ ಅರ್ಥವನ್ನು ಹೇಳುತ್ತದೆ

## — ಪದಾರ್ಥದೀಪಿಕಾ —

ಈಶ್ವರನ ಸೃಷ್ಟ್ಯಾದಿಪ್ರವೃತ್ತಿಯು ಪ್ರಯೋಜನವಿಲ್ಲದೆಯೇ ಸ್ವಭಾವದಿಂದಲೇ ಪ್ರಮಿತವಾದುದೆಂಬುದಾಗಿ ಹೇಳಿತ್ತು ಆ ಪ್ರಮಾಣವನ್ನೀಗ "ದೇವಸ್ಯ" ಇತ್ಯಾದಿ ವಚನದಿಂದ ಹೇಳುತ್ತಾರೆ "ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯಕಾ ಸ್ಪೃಹಾ" ಎಂಬುದಾಗಿ ಶ್ರುತಿಯು ಸ್ಪಷ್ಟವಾಗಿ ಹಿಂದೆ ಹೇಳಿದ ಅರ್ಥವನ್ನು ಹೇಳುತ್ತದೆ "ದೇವಸ್ಯ'= ದೇವನಾದ ಪರಮಾತ್ಮನಿಗೆ " ಅಯಂ "– ಸೃಷ್ಟಿ ಮುಂತಾದದರ ವಿಷಯಕವಾದ "ಏಷಃ' ಇಚ್ಛೆಯು ಅಂದರೆ ಇಚ್ಛಾಪೂರ್ವಕ ವಾದ ಪ್ರವೃತ್ತಿಯೆಂದು ಭಾವ ಅದು ಸ್ವಭಾವವೇ, ಪ್ರಯೋಜನಕ್ಕಾಗಿ ಅಲ್ಲ. ಏಕೆ ? ಆಪ್ತಕಾಮನಾದ ಪರಮಾತ್ಮನಿಗೆ ಪ್ರಯೋಜನದ ವಿಷಯಕವಾದ ಇಚ್ಛೆಯು ಸಂಭವಿಸುವುದಿಲ್ಲವಾದುದರಿಂದ ! ಹೀಗೆ ಅರ್ಥ

## — ವಿಶೇಷಾರ್ಥಪ್ರದೀಪಿಕಾ —

"ತಥಾಽಪಿ'' –"ಜ್ಞಾನಿಯ ಪ್ರವೃತ್ತಿಯಾಗಿರುವುದು'' ಎಂಬುದಾಗಿ ಪ್ರಯೋಜನಸಾಧಕ ಹೇತುವನ್ನು ಮಾಡಿದ ಪಕ್ಷದಲ್ಲಿಯೂ ಅಂಗಚೇಷ್ಟಾದಿ ಪ್ರವೃತ್ತಿಯಲ್ಲಿ ಹೇತುವಿಗೆ ಅನೈಕಾಂತ್ಯವೂ ಸಾಧ್ಯಕ್ಕೆ ಬಾಧವೂ, ತರ್ಕಪಕ್ಷದಲ್ಲಿ ಆಪಾದ್ಯ ಆಪಾದಕಗಳಿಗೆ ವ್ಯಾಪ್ತಿಯಿಲ್ಲದಿರುವುದೂ, ವಿಪರ್ಯಯದಲ್ಲಿ ಪರ್ಯವಸಾನವಾಗದಿರುವುದೂ, ಈ ದೋಷಗಳು ಅಪರಿಹಾರ್ಯಗಳಾಗುವವು, ಹೀಗೆ ಭಾವ. "ದೇವಸ್ಯ" ಎಂಬ ಶ್ರುತಿಯ ಅರ್ಥವನ್ನು "ದೇವಸ್ಯ" ಇತ್ಯಾದಿವಚನದಿಂದ ಹೇಳುತ್ತಾರೆ. "ಏಷಃ'' ಎಂಬುದು ಅನುವಾದವು, ''ಇಚ್ಛಾ'' ಎಂಬುದು ಅದರ ವ್ಯಾಖ್ಯಾನವು. ಇಚ್ಛಾರ್ಥಕವಾಗದಿದ್ದಲ್ಲಿ "ಅಯಂ'' ಎಂಬ ವಚನವಿದ್ದುದರಿಂದ "ಏಷಃ'' ಎಂಬುದು ಪುನರುಕ್ತವಾಗುವದು ಹೀಗೆ ಭಾವ

क्रीडां प्रयोजनं कृत्वा सृष्टिः श्रुतिविरोधिनी ॥
इति केवललीलैव निर्णीता प्रभुणा स्वयम् ॥

केचिदिदं सूत्रमन्यथा व्याचक्षते । यथालोके सप्तद्वीपां मेदिनीमधितिष्ठतः सम्पूर्णशौर्यवीर्यपराक्रमस्यापि महाराजस्य केवललीलैकप्रयोजनाः कन्दुकाद्यारम्भा दृश्यन्ते । तथैव परस्यापि ब्रह्मणः स्वसङ्कल्पमात्रावक्लृप्तजगज्जन्मस्थितिध्वंसादलीलैव प्रयोजनमिति तदेतन्निराकरोति ॥ क्रीडामिति । भोगार्थं सृष्टिरित्यन्ये क्रीडार्थमिति चापरे इति क्रीडाप्रयोजना भगवतः सृष्ट्यादिप्रवृत्तिं वदतः पूर्व-

ಕ್ರೀಡೆಯನ್ನು ಪ್ರಯೋಜನವನ್ನಾಗಿ ಮಾಡಿ ಸೃಷ್ಟಿಯು ಶ್ರುತಿಯು ವಿರೋಧಿಯಾದುದು ಈ ಕಾರಣದಿಂದ ಶ್ರುತ್ಯನುಸಾರಿಯಾಗಿರುವ ವೇದವ್ಯಾಸರಿಂದ ಸಾಕ್ಷಾತ್ತಾಗಿ ಕೇವಲ ಲೀಲೆಯೇ ಸೃಷ್ಟ್ಯಾದಿಪ್ರವೃತ್ತಿಯೆಂದು "ಲೀಲಾಕೈವಲ್ಯಂ" ಎಂಬುದಾಗಿ ನಿರ್ಣಯಿಸಲ್ಪಟ್ಟಿದೆ

— ಪದಾರ್ಥದೀಪಿಕಾ —

ಬೇರೆ ಕೆಲವರು– "ಈ ಸೂತ್ರವನ್ನು ವಿಪರೀತವಾಗಿ ವ್ಯಾಖ್ಯಾನಿಸುತ್ತಾರೆ ಹೇಗೆಂದರೆ– ಲೋಕದಲ್ಲಿ ಸಪ್ತದ್ವೀಪವುಳ್ಳ ಭೂಮಿಯನ್ನು ಆಳುವ ಸಂಪೂರ್ಣ ಶೌರ್ಯ ವೀರ್ಯ ಪರಾಕ್ರಮವುಳ್ಳ ಮಹಾರಾಜನಿಗೂ ಕೇವಲ ಲೀಲೆಯೇ ಪ್ರಯೋಜನವುಳ್ಳ ಕಂದುಕಕ್ರೀಡಾದಿಗಳು ಕಂಡುಬಂದಿರುತ್ತವೆ. ಇದು ಹೇಗೋ, ಇದರ ಹಾಗೆ ಪರಿಪೂರ್ಣನಾದ ಬ್ರಹ್ಮನಿಗೂ ತನ್ನ ಸಂಕಲ್ಪಮಾತ್ರದಿಂದಲೇ ಕ್ಲೃಪ್ತವಾಗುವ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಾದಿಗಳಿಗೆ ಲೀಲೆಯೇ ಒಂದು ಪ್ರಯೋಜನವು" ಹೀಗೆ ಇರುವ ಅವರ ವ್ಯಾಖ್ಯಾನವನ್ನು "ಕ್ರೀಡಾಂ" ಇತ್ಯಾದಿ ಪದ್ಯದಿಂದ ನಿರಾಕರಿಸುತ್ತಾರೆ 'ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ (ಸೃಷ್ಟಿಯು ಭೋಗಾರ್ಥವೆಂದು ಕೆಲವರೂ ಬೇರೆ ಕೆಲವರು ಕ್ರೀಡಾರ್ಥವೆಂದು ಹೇಳುತ್ತಾರೆ) ಹೀಗೆ, ಭಗವಂತನ ಸೃಷ್ಟ್ಯಾದಿ ಪ್ರವೃತ್ತಿಯು ಭೋಗಾದಿ ಪ್ರಯೋಜನವುಳ್ಳದ್ದೆಂದು ಹೇಳುವವರನ್ನು ಪೂರ್ವಪಕ್ಷಿಗಳನ್ನಾಗಿ

— ವಿಶೇಷಾರ್ಥಪ್ರದೀಪಿಕಾ —

"ಕೇಚಿತ್" –ಮಾಯಾವಾದಿಗಳು ಹಾಗು ರಾಮಾನುಜೀಯರು "ಸಯುಕ್ತಿಕಂ=" "ಆಪ್ತಕಾಮಸ್ಯ ಕಾ ಸ್ಪೃಹಾ"(ಪ್ರಾಪ್ತಪ್ರಯೋಜನನಾದವನಿಗೆ ಪ್ರಯೋಜನೇಚ್ಛೆಯು ಸಂಭವಿಸುವುದಿಲ್ಲ) ಎಂಬುದಾಗಿ ಹೇಳಿದ ಯುಕ್ತಿಯಿಂದಸಹಿತವಾಗಿ-

पक्षीकृत्य देवस्यैष स्वभावोऽयमिति सयुक्तिकं प्रयोजनलेशाभावः श्रुत्या सिद्धान्तितः । अतः श्रुतिविरुद्धत्वादप्याख्यानमेवैतत् । सूत्राक्षराऽननुगुणं चैतद्व्याख्यानमित्याह ॥ इतीति । यत एवं क्रीडां प्रयोजनं कृत्वा सृष्टिः श्रुतिविरोधिनी । इति तस्माच्छ्रुत्यनुसारिणा प्रभुणा स्वयं साक्षात्स्पष्टं केवललीलैव सृष्ट्यादिप्रवृत्तिर्निर्णीता। लीला-कैवल्यमिति । न तु लीलार्थेति ततोऽप्ययुक्तमिदं व्याख्यानमिति । यद्वा पूर्ववाक्योक्तो हेतुरयं साध्यनिर्देशः । यस्माल्लीलां प्रयोजनं कृत्वा

— ಪದಾರ್ಥದೀಪಿಕಾ —

ಮಾಡಿ, "ದೇವಸ್ಯೈಷ ಸ್ವಭಾವೋಽಯಂ" ಎಂಬುದಾಗಿ ಸಯುಕ್ತಿಕವಾಗಿ ಪ್ರಯೋಜನದ ಲೇಶವೂ ಇಲ್ಲವೆಂದು ಶ್ರುತಿಯಿಂದ ಸಿದ್ಧಾಂತವಾಡಲ್ಪಟ್ಟಿದೆ. ಆದುದರಿಂದ, ಶ್ರುತಿವಿರುದ್ಧವಾದುದುದರಿಂದ ಅವರ ವ್ಯಾಖ್ಯಾನವು ಅಯುಕ್ತವೇ ಆದುದು ಮತ್ತು ಈ ವ್ಯಾಖ್ಯಾನವು ಸೂತ್ರಾಕ್ಷರಗಳಿಗೆ ಅನನುಗುಣವೂ ಆಗಿದೆ ಯೆಂದು "ಇತಿ" ಇತ್ಯಾದಿ ವಚನದಿಂದ ಹೇಳುತ್ತಾರೆ ಯಾವ ಕಾರಣದಿಂದ ಹೀಗೆ ಕ್ರೀಡೆಯನ್ನು ಪ್ರಯೋಜನವನ್ನಾಗಿಮಾಡಿ ಸೃಷ್ಟಿಯನ್ನು ಮಾಡುವನೆಂಬುದು ಶ್ರುತಿಗೆ ವಿರುದ್ಧವಾದುದೋ "ಇತಿ"– ಆ ಕಾರಣದಿಂದ ಶ್ರುತ್ಯನುಸಾರಿಯಾಗಿರುವ ಪ್ರಭುವಾದ ಬಾದರಾಯಣರಿಂದ "ಸ್ವಯಂ"— ಸಾಕ್ಷಾತ್ತಾಗಿ ಸ್ಪಷ್ಟವಾಗಿ, "ಕೇವಲ ಲೀಲಾರೂಪವೇ ಆದುದು ಸೃಷ್ಟ್ಯಾದಿಪ್ರವೃತ್ತಿಯು," ಎಂದು "ಲೀಲಾ ಕೈವಲ್ಯಂ" ಎಂಬ ವಚನದಿಂದ ನಿರ್ಣಯಿಸಲ್ಪಟ್ಟಿದೆ ಆದರೆ ಲೀಲಾರ್ಥಕ ವೆಂದು ನಿರ್ಣಯಿಸಲ್ಪಡಲಿಲ್ಲ ಈ ಕಾರಣದಿಂದಲೂ ಈ ಅವರ ವ್ಯಾಖ್ಯಾನವು ಅಯುಕ್ತವಾದುದು" ಹೀಗೆ ಅರ್ಥ ಅಥವಾ– ಹಿಂದಿನ ವಾಕ್ಯದಲ್ಲಿ ಹೇಳಿದುದು ಹೇತುವು. ಇದು ಸಾಧ್ಯನಿರ್ದೇಶವು. ಯಾವ ಕಾರಣದಿಂದ ಲೀಲೆ

— ವಿಶೇಷಾರ್ಥಪ್ರದೀಪಿಕಾ —

"ಇತಿ" ಶಬ್ದವು "ಹೇತ್ವರ್ಥದಲ್ಲಿದೆ" ಎಂದು ಅಂಗೀಕರಿಸಿ, "ಇತಿ– ಯಸ್ಮಾತ್" ಎಂಬುದಾಗಿ ಹೇಳಿರುತ್ತಾರೆ

"ಪೂರ್ವವಾಕ್ಯೋಕ್ತೋ ಹೇತುಃ– "ಕ್ರೀಡಾಂ ಪ್ರಯೋಜನಂ ಕೃತ್ವಾ ಸೃಷ್ಟಿಃ ಶ್ರುತಿವಿರೋಧಿನೀ" ಎಂಬುದು ಪೂರ್ವವಾಕ್ಯವು. "ಲೀಲಾರೂಪ ಪ್ರಯೋಜನವನ್ನಿಟ್ಟುಕೊಂಡು ಸೃಷ್ಟಿಯನ್ನು ಈಶ್ವರನು ಮಾಡುವನೆಂಬ ಅರ್ಥವು ಶ್ರುತಿ ವಿರೋಧಿಯಾದುದು" ಹೀಗೆ ಇದರ ಅರ್ಥ ಇದು ಯುಕ್ತಿಯು (ಹೇತುವು) 'ಅಯಂ'

स्रष्टिः श्रुतिविरोधिनी तस्मादेतत्सूत्रे केवललीलैव सूत्रकृता निर्णीता व्याख्याता न पुनर्लीलार्थेति ।

किञ्च कर्तृत्वेन प्रयोजनवत्तां साधयन्नापादयन्वा प्रष्टव्यः । किं प्रयोजनं स्वसम्बन्धि विवक्षितम् । उत परसम्बन्धि । अथ साधारणम् । आद्ये साधनेऽनैकान्त्यम् । आपादने व्याप्त्यभावः ।

— ಪದಾರ್ಥದೀಪಿಕಾ —

ಯನ್ನು ಪ್ರಯೋಜನವನ್ನು ಮಾಡಿ ಸೃಷ್ಟಿಯು ಶ್ರುತಿಯ ವಿರುದ್ಧವಾದುದೋ ಆ ಕಾರಣದಿಂದ, ಈ ಸೂತ್ರದಲ್ಲಿ 'ಕೇವಲ ಲೀಲೆಯೇ" ಎಂಬುದಾಗಿ ಸೂತ್ರಕಾರರಿಂದ "ನಿರ್ಣೀತಾ" ವ್ಯಾಖ್ಯಾನಿಸಲ್ಪಟ್ಟಿದೆ ಹೊರತಾಗಿ "ಲೀಲಾರ್ಥಾ" (ಲೀಲೆಗಾಗಿ) ಎಂಬುದಾಗಿ ವ್ಯಾಖ್ಯಾನಿಸಲ್ಪಟ್ಟಿಲ್ಲ" ಹೀಗ ಅರ್ಥ

ಮತ್ತು– ಕರ್ತೃತ್ವವಿದ್ದುದರಿಂದ ಪ್ರಯೋಜನವುಳ್ಳವನೆಂಬುದನ್ನು ಸಾಧನ ಮಾಡುವವನನ್ನಾಗಲೀ ಆಪಾದಿಸುವವನನ್ನಾಗಲೀ ಹೀಗ ಪ್ರಶ್ನಿಸತಕ್ಕದ್ದು ಆ ಪ್ರಯೋಜನವು ತನಗ ಸಂಬಂಧಿಸಿದುದೆಂದು ಅಭಿಪ್ರಾಯವೋ? ಎರಡನೆಯವನಿಗೆ ಸಂಬಂಧಿಸಿದುದೆಂದು ಅಭಿಪ್ರಾಯವೋ? ಅಥವಾ ಸಾಧಾರಣವೋ? ಮೊದಲನೆಯ ಪಕ್ಷದಲ್ಲಿ–ಸಾಧನದಲ್ಲಿ ಅನೈಕಾಂತ್ಯವೆಂಬ ದೋಷವು ಆಪಾದನ

— ವಿಶೇಷಾರ್ಥಪ್ರದೀಪಿಕಾ —

'ಇತಿ" ಕೇವಲಲೀಲೈವ ನಿರ್ಣೀತಾ" ಎಂಬೀ ವಾಕ್ಯದಲ್ಲಿ ಹೇಳಿದ ಕೇವಲ ಲೀಲಾರೂಪವೆಂಬುದಾಗಿಯೇ ಸೂತ್ರಕಾರರಿಂದ ನಿರ್ಣಯಿಸಲ್ಪಟ್ಟಿರುವುದು, ಇದು ಸಾಧ್ಯವು ಹೀಗೆ ಅರ್ಥ

"ಯದ್ವಾ'' ಇತ್ಯಾದಿ ವಚನದಿಂದ ಹೇಳಿದುದನ್ನು "ಯಸ್ಮಾತ್ ಇತ್ಯಾದಿ ವಚನಗಳಿಂದ ವಿಶದಪಡಿಸುತ್ತಾರೆ "ಕೃತ್ವಾ ಸೃಷ್ಟಿಃ'' ಇದರ ಮುಂದೆ "ಪ್ರವರ್ತತೇ'' ಎಂಬುದು ಶೇಷವು ಇದರಿಂದ, 'ಕೃತ್ವಾ'' ಎಂಬಲ್ಲಿಯು 'ಕ್ತ್ವಾ' ಪ್ರತ್ಯಯವು ಸಮಂಜಸವಾಗುವುದು

'ಅಂಗಚೇಷ್ಟಾ ಯಥಾ ಪುಂಸಃ'' ಇತ್ಯಾದಿಯಾದ ವಾಕ್ಯಕ್ಕೆ "ದಯಾಪೂರ್ವಂ ಪ್ರವೃತ್ತಯಃ" (ದಯಾ ಪೂರ್ವಕವಾಗಿ ಪ್ರವೃತ್ತಿಗಳು)ಎಂಬುದಾಗಿಯೂ "ಉದ್ದೇಶವರ್ಜಿತಾಃ" ಎಂಬುದಕ್ಕೆ "ಸ್ವಪ್ರಯೋಜನೋದ್ದೇಶ ವರ್ಜಿತಾಃ"– ತನ್ನ ಪ್ರಯೋಜನದ ಉದ್ದೇಶರಹಿತವಾದವುಗಳು) ಎಂದು ಅರ್ಥವು ಹೀಗೆ ಒಪ್ಪಿ, ಬೇರೆ ವ್ಯಾಖ್ಯಾನವನ್ನು "ಕಿಂಚ" ಇತ್ಯಾದಿವಾಕ್ಯಗಳಿಂದ ಪ್ರಾರಂಭಿಸುತ್ತಾರೆ

विपर्ययपर्यवसाने व्यभिचार एव । दृश्यन्ते हि कृपालवः स्वप्रयोजन-मनुद्दिश्य परप्रयोजनार्थमेव प्रवर्तमानाः । न चादृष्टार्थमिति वाच्यम् । पशूनां पशुप्रायाणां चापत्यपालनादौ प्रवृत्तिदर्शनात् । न च प्रयोजनो-

— ಪದಾರ್ಥದೀಪಿಕಾ —

ಪಕ್ಷದಲ್ಲಿ ವ್ಯಾಪ್ತಿಯಿಲ್ಲವೆಂಬ ದೋಷವು ವಿಪರ್ಯಯ ಪರ್ಯವಸಾನ ಮಾಡಿದರ ವ್ಯಭಿಚಾರವೇ ! ಏಕೆಂದರೆ ಕೃಪಾಲುಗಳು ತಮ್ಮ ಪ್ರಯೋಜನವನ್ನು ಉದ್ದೇಶ ಮಾಡದೆ, ಪರರ ಪ್ರಯೋಜನಕ್ಕಾಗಿಯೇ ಪ್ರವೃತ್ತರಾಗುವುದು ಕಂಡಿರುತ್ತದೆ. ಅವರು ಅದೃಷ್ಟದ ಸಲುವಾಗಿ ಪ್ರವೃತ್ತಿಸುವರೆಂದು ಹೇಳಬಾರದು. ಏಕೆಂದರೆ ಪಶುಗಳಿಗೂ ಪಶುಗಳಂತಿರುವವರಿಗೂ ಮಕ್ಕಳುಗಳ ಪಾಲನಾದಿಗಳಲ್ಲಿ ಪ್ರವೃತ್ತಿಯು ಕಂಡಿರುತ್ತದೆ ಮತ್ತು ಪ್ರಯೋಜನದ ಉದ್ದೇಶವುಳ್ಳವನಾಗಿರುವುದೂ

— ವಿಶೇಷಾರ್ಥಪ್ರದೀಪಿಕಾ —

"ಸಾಧಾರಣಂ" – ಉಭಯ ಸಂಬಂಧಿಯಾದುದು (ಸ್ವ–ಪರ–ಉಭಯತರರಿಗೂ ಆಗುವಂತಹದು) "ಆದ್ಯೇ"– ಸ್ವಸಂಬಂಧಿಯೆಂಬ ಪಕ್ಷದಲ್ಲಿ 'ಸಾಧನೇ' ಸೃಷ್ಟ್ಯಾದಿಕರ್ತೃತ್ವ (ಪ್ರವೃತ್ತಿ) ರೂಪ ಯುಕ್ತಿಯಿಂದ ಪ್ರಯೋಜನವತ್ವವನ್ನು ಸಾಧನಮಾಡಿದ ಪಕ್ಷದಲ್ಲಿ

ಅನೈಕಾಂತ್ಯ ಮುಂತಾದ ಮೂರು ದೋಷಗಳನ್ನು "ದೃಶ್ಯಂತೇ" ಇತ್ಯಾದಿ ವಚನದಿಂದ ವಿಶದಪಡಿಸುತ್ತಾರೆ- ಕೃಪಾಲುಜನರ ಪ್ರವೃತ್ತಿಯಲ್ಲಿ ಪ್ರವೃತ್ತಿಗೆ ಸ್ವಸಂಬಂಧಿ ಪ್ರಯೋಜನವತ್ವವೆಂಬ ಸಾಧ್ಯವು ಇಲ್ಲವಾದುದರಿಂದ ಸಾಧನಪಕ್ಷದಲ್ಲಿ ಹೇತುವಿಗೆ ಸಾಧ್ಯವ್ಯಭಿಚಾರವು ಆಪಾದನ ಪಕ್ಷದಲ್ಲಿ ಕೃಪಾಲುವಿನ ಪ್ರವೃತ್ತಿಯಲ್ಲಿಯೇ ಪ್ರವೃತ್ತಿತ್ವವೆಂಬ ಆಪಾದಕವಿದ್ದರೂ ಸ್ವಸಂಬಂಧಿಪ್ರಯೋಜನವತ್ವವೆಂಬ ಆಪಾದ್ಯವು ಇಲ್ಲವಾದುದರಿಂದ, ಆಪಾದ್ಯಾಪಾದಕಗಳಲ್ಲಿ ವ್ಯಾಪ್ತಿಯಿಲ್ಲದಿರುವುದೆಂಬ ದೋಷವು ಮತ್ತು "ನ ಭವತಿ ಸ್ವಸಂಬಂಧಿ ಪ್ರಯೋಜನವಾನ್ ತಸ್ಮಾತ್ ಪ್ರವೃತ್ತಿಮಾನ್ನ ಸ್ಯಾತ್'' (ಸ್ವಸಂಬಂಧಿ ಪ್ರಯೋಜನವುಳ್ಳವನಲ್ಲ, ಆದುದರಿಂದ ಪ್ರವೃತ್ತಿಯುಳ್ಳವನಾಗದಿರಲಿ) ಎಂಬುದಾಗಿ ವಿಪರ್ಯಯ ಪರ್ಯವಸಾನಮಾಡಿದಲ್ಲಿ ಕೃಪಾಲುಪ್ರವೃತ್ತಿಯಲ್ಲಿಯೇ ವ್ಯಭಿಚಾರವು ಹೀಗೆ ಮೂರು ದೋಷಗಳು ಇನ್ನು ಕೃಪಾಲುಗಳಲ್ಲಿಯೂ ಅದೃಷ್ಟರೂಪ ಸ್ವಪ್ರಯೋಜನವತ್ವವು ಇರುವುದರಿಂದ ಹೇತುವಿಗೆ ಸಾಧ್ಯವ್ಯಭಿಚಾರವಿಲ್ಲವೆಂದು ಶಂಕಿಸಿದರೆ ಪಶುಮುಂತಾದವುಗಳ ಸಂತಾನಪೋಷಣ ಮುಂತಾದ ಪ್ರವೃತ್ತಿಯಲ್ಲಿ ಸ್ವಪ್ರಯೋಜನವತ್ವ ಸಾಧ್ಯವು ಇಲ್ಲವಾದುದರಿಂದ ವ್ಯಭಿಚಾರವು ಬಂದೇ ಬರುವುದೆಂಬ

द्वेशिता कृपालुत्वं चेति सम्भवति । द्वितीयेऽप्यनैकान्त्यादिकमेव । स्वप्रयोजनार्थं प्रवृत्तेर्बहुलमुपलम्भात् । भगवतोऽपि स्वप्रयोजना-

— ಪದಾರ್ಥದೀಪಿಕಾ —

ಕೃಪಾಲುವಾಗಿರುವುದೂ ಇವೆರಡೂ ಒಂದೆಡೆಗೆ ಸಂಭವಿಸುವುದಿಲ್ಲ ಎರಡನೆಯ ಪಕ್ಷದಲ್ಲಿಯೂ ಅನೈಕಾಂತ್ಯ ಮುಂತಾದ ದೋಷಗಳು ಬಂದೇ ಬರುತ್ತವೆ ಏಕೆಂದರೆ ತಮ್ಮ ಪ್ರಯೋಜನಕ್ಕಾಗಿ ಪ್ರವೃತ್ತಿಯು ಬಹಳವಾಗಿ ಕಂಡಿರುತ್ತದೆ. ಪರಮಾತ್ಮನಿಗೂ ಸಹ ತನ್ನ ಪ್ರಯೋಜನವಿಲ್ಲದಿದ್ದರೂ ಪರರ ಪ್ರಯೋಜನದ

— ವಿಶೇಷಾರ್ಥಪ್ರದೀಪಿಕಾ —

ದೋಷವನ್ನು "ಪಶೂನಾಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಇದನ್ನು ಅಂಗೀಕರಿಸಿ ಹೇಳಿದ್ದು ವಾಸ್ತವವಾಗಿ ಕೃಪಾಲು ಪ್ರವೃತ್ತಿಗೆ ಅದೃಷ್ಟಪ್ರಯೋಜನೋದ್ದೇಶವು ಯುಕ್ತವಾಗುವುದಿಲ್ಲ. ಈ ಅಭಿಪ್ರಾಯದಿಂದ, ಅದೃಷ್ಟಾರ್ಥವಿಲ್ಲ ಮೆಂಬುದನ್ನು "ನ ಚ" ಇತ್ಯಾದಿ ವಚನಗಳಿಂದ ಹೇಳುತ್ತಾರೆ ನಿರುಪಾಧಿಕ ವಾಗಿ ಪರರ ದುಃಖನಿವಾರಣೆಯ ಇಚ್ಛೆಯೇ 'ಕೃಪಾಲುತೆ' ಯು ಹೀಗೆ ಭಾವ

''ದ್ವಿತೀಯೇಽಪಿ''— ಪರಸಂಬಂಧಿ ಪ್ರಯೋಜನವತ್ವವೆಂಬ ಪಕ್ಷದಲ್ಲಿಯೂ. ಅನೈಕಾಂತ್ಯಮುಂತಾದವುಗಳನ್ನು ಸ್ಥಲಗಳೊಂದಿಗೆ "ಸ್ವಪ್ರಯೋಜನಾರ್ಥಂ" ಇತ್ಯಾದಿವಾಕ್ಯಗಳಿಂದ ಉಪಪಾದಿಸುತ್ತಾರೆ ತಮ್ಮ ಪ್ರಯೋಜನಾರ್ಥವಾದ ಪ್ರವೃತ್ತಿಯಲ್ಲಿ ಪ್ರವೃತ್ತಿತ್ವವಿದ್ದರೂ ಪರಸಂಬಂಧಿ ಪ್ರಯೋಜನೋದ್ದೇಶವೆಂಬ ಸಾಧ್ಯವಿಲ್ಲದಿದ್ದುದರಿಂದ ಸಾಧನ ಪಕ್ಷದಲ್ಲಿ ( ಅನುಮಾನದಲ್ಲಿ ) ವ್ಯಭಿಚಾರವು, ಆಪಾದನಪಕ್ಷದಲ್ಲಿ ಅದೇ ಪ್ರವೃತ್ತಿಯಲ್ಲಿಯೇ ಪ್ರವೃತ್ತಿತ್ವವಿದ್ದರೂ (ಆಪಾದಕ) ಪರಪ್ರಯೋಜನೋದ್ದೇಶವತ್ವ(ಆಪಾದ್ಯ)ವಿಲ್ಲವಾದುದರಿಂದ ಆಪಾದ್ಯ ಪಾದಕಗಳಿಗೆ ವ್ಯಾಪ್ತಿಯಿಲ್ಲದಿರುವುದು ಮತ್ತು ಪರಸಂಬಂಧಿಪ್ರಯೋಜನವುಳ್ಳ ವನಲ್ಲವಾದುದರಿಂದ ಪ್ರವೃತ್ತಿವುಳ್ಳವನಾಗದಿರಲಿ, ಹೀಗೆ ವಿಪರ್ಯಯಪರ್ಯವ ಸಾನಮಾಡಿದಲ್ಲಿ ಅದೇ ಪ್ರವೃತ್ತಿಯಲ್ಲಿಯೇ ವ್ಯಭಿಚಾರವು, ಹೀಗೆ ತಿಳಿಯಬೇಕು. ಇದರಿಂದ ''ಕಾಶ್ಚಿದಂಗಚೇಷ್ಟಾಃ - ಕೇವಲ ಸ್ವಕಾರ್ಯಾರ್ಥವಾಗಿ ಪ್ರವೃತ್ತರಾಗು ವವರ ಪ್ರವೃತ್ತಿಗಳು, "ಉದ್ದೇಶವರ್ಜಿತಾಃ'' ಪರಪ್ರಯೋಜನೋದ್ದೇಶವಿಲ್ಲದ ದವುಗಳು, ಹೀಗೆ ಮೂಲದ ಅರ್ಥವು ಸೂಚಿತವಾಯಿತು.

"ಭೂತ್ಯೈ ನಿಜಾಶ್ರಿತಜನಸ್ಯ ಹಿ ಸೃಷ್ಟ್ಯಾಸೃಷ್ಟಾವೀಕ್ಷಾ ಬಭೂವ" (ತಾ. ನಿ. ಅ. ೧) ಎಂಬ ವಚನಗಳನ್ನನುಸರಿಸಿ, ಈಶಸ್ಯ ಸದಾಪ್ರವೃತ್ತಿಃ ಸ್ವಪ್ರಯೋಜನಾಭಾವಾದೇವ" (ಈಶ್ವರನ ಪ್ರವೃತ್ತಿಯು ಯಾವಾಗಲೂ ಸ್ವಪ್ರ

भावेऽपि परप्रयोजनोद्देशिताङ्गीकारेण क्रमेण सिद्धसाधनेष्टापादना-सिद्धत्वप्रसङ्ग (ङ्गा) श्च । अत एव न तृतीयोऽपि । अत एव (येन) केनचित्कर्तृत्वविशेषणं प्रवृत्तिस्वभावत्वे सदा प्रवर्तेतेत्यति-प्रसञ्जनं च प्रत्युक्तम् ।

— ಪದಾರ್ಥದೀಪಿಕಾ —

ಉದ್ದೇಶವಿರುವುದೆಂಬುದನ್ನು ಅಂಗೀಕರಿಸಿದುದರಿಂದ, ಕ್ರಮದಿಂದ ಸಿದ್ಧಸಾಧನ, ಇಷ್ಟಾಪಾದನ, ಅಸಿದ್ಧಿಗಳ ಪ್ರಸಂಗವು ಬರುತ್ತದ ಆದುದರಿಂವಲೇ ಮೂರನೆಯ ಪಕ್ಷವೂ ಸರಿಯಾದುದಲ್ಲ ಮತ್ತು ಈ ಕಾರಣದಿಂದಲೇ, ಯಾವನೋ ಒಬ್ಬನು ಹೇಳುವ ಕರ್ತೃತ್ವದಲ್ಲಿ ವಿಶೇಷಣವನ್ನು ಸೇರಿಸುವುದೂ ಪ್ರವೃತ್ತಿಯು ಸ್ವಭಾವವಾಗಿದ್ದರ ಸದಾ ಪ್ರವೃತ್ತನಾಗಲೆಂಬ ಆಪಾದನವೂ ನಿರಾಕೃತವೆಂದು ತಿಳಿಯತಕ್ಕದ್ದು

— ವಿಶೇಷಾರ್ಥಪ್ರದೀಪಿಕಾ —

ಯೋಜನವಿಲ್ಲದಿರುವುದರಿಂದಲೇ– ಪರಪ್ರಯೋಜನೋದ್ದೇಶದಿಂದಲೇ ) ಎಂಬ ಮೂಲಾರ್ಥವನ್ನು ಭಾವಿಸಿ 'ಭಗವತೋಽಪಿ" ಇತ್ಯಾದಿವಚನದಿಂದ ಹೇಳುತ್ತಾರೆ "ಕ್ರಮೇಣ"–ಸಾದವನಕ್ಷದಲ್ಲಿ ಪರಪಯೋಜನವನ್ನು ಒಪ್ಪಿದುದರಿಂದ ಸಿದ್ಧಸಾಧನವು ಆಪಾದನಪಕ್ಷದಲ್ಲಿ ಇಷ್ಟಾಪತ್ತಿಯು, ವಿಪರ್ಯಯಪರ್ಯವಸಾನದಲ್ಲಿ ಹೇತುವಿಗೆ ಅಸಿದ್ಧಿಯು, ಹೀಗೆ ತಿಳಿಯಬೇಕು

"ಅತಏವ"– ಸ್ವ–ಪರ–ಅನ್ಯತರ ಮಾತ್ರ ಪ್ರಯೋಜನದ ಉದ್ದೇಶವಿರುವುದರಿಂದ, ಕೃಪಾಲು ಹಾಗೂ ಮೂರ್ಖರ ಪ್ರವೃತ್ತಿಗಳಲ್ಲಿ ಅನೈಕಾಂತ್ಯ ಮುಂತಾದ ದೋಷಗಳು ಸಂಭವಿಸುವುದರಿಂದಲೇ!

"ಅತಏವ" – ವಿಶೇಷಣವನ್ನು ಕರ್ತೃತ್ವದಲ್ಲಿ ಸೇರಿಸಿದರೂ ವ್ಯಭಿಚಾರಾದಿಗಳನ್ನು ತೋರಿಸಿದುದರಿಂದಲೇ! ಅಗ್ನಿ ಮುಂತಾದವರಲ್ಲಿ ಪ್ರಯೋಜನವತ್ವವೆಂಬ ಸಾಧ್ಯವನ್ನು ಕರ್ತೃತ್ವ (ಪ್ರವೃತ್ತಿಯು) ಹೇತುವು ಬಿಟ್ಟಿರುವುದೆಂಬ ದೋಷವನ್ನು ತಪ್ಪಿಸಲು "ಚೇತನತ್ವೇ ಸತಿ" ಎಂದು ಕರ್ತೃತ್ವದಲ್ಲಿ ವಿಶೇಷಣವನ್ನು ಸೇರಿಸಿದರೆ "ಚೇತನತ್ವೇಸತಿಕರ್ತೃತ್ವ" ಈ ಯುಕ್ತಿಯು ನೃತ್ತಗಾನಾದಿಗಳನ್ನು ಮಾಡುವವನಲ್ಲಿ ಸಾಧ್ಯವನ್ನು ಬಿಟ್ಟಿರುತ್ತದೆ "ಪ್ರೇಕ್ಷಾವತ್ವೇಸತಿ" (ಜ್ಞಾನಿಯಾಗಿದ್ದು) ಎಂಬ ವಿಶೇಷಣವನ್ನು ಸೇರಿಸಿದರೂ, ಅಂಗುಲಿಚಲನಾದಿಗಳನ್ನು ಮಾಡುವ ವ್ಯಾಖ್ಯಾತೃವಿನಲ್ಲಿ ಹೇತುವಿಗೆ ಸಾಧ್ಯವ್ಯಭಿಚಾರವು. "ದಯಾಲುತ್ವೇಸತಿ" ಎಂಬ ವಿಶೇಷಣವನ್ನಿಟ್ಟರೂ ಸ್ವಪ್ರಯೋಜನೋದ್ದೇಶ ರಹಿತ

आत्मप्रयोजनार्थाय स्पृहां श्रुतिरवारयत् ॥
न प्रयोजनवत्त्वेनेत्यत आह जगद्गुरुः ॥

स्यादेतदेवम् । यदीश्वरप्रवृत्तौ परप्रयोजनोद्देशः स्यान्न चासा वङ्गीकर्तुमुचितः । का स्पृहा न काऽपीति श्रुत्या नेति सूत्रकारेण च सर्वथा प्रयोजनोद्देशस्य निवारितत्वादित्यत आह ॥ आत्मेति । श्रुतिरिति सूत्रकृतोऽप्युपलक्षणम् । परप्रयोजनार्थतां त्वङ्गीकुरुत एवेति

"ಆಪ್ತ ಕಾಮಸ್ಯ ಕಾಸ್ಪೃಹಾ" ಎಂಬ ಶ್ರುತಿಯೂ ಹಾಗು ಸೂತ್ರಕಾರರು ತನ್ನ ಪ್ರಯೋಜನ ಸಲುವಾಗಿ ಈಶ್ವರನ ಸೃಷ್ಟ್ಯಯನ್ನು ನಿರಾಕರಿಸಿರುತ್ತಾರೆ. ಏಕೆಂದರೆ– ಸ ಪ್ರಯೋಜನವಿಲ್ಲದಿದ್ದರೂ "ನಪ್ರಯೋಜನತ್ವಾತ್" ಎಂಬುದಾಗಿ ಹೇತುವನ್ನು ಜಗದ್ಗುರುಗಳಾದ ವೇದವ್ಯಾಸರು ಸೂತ್ರದಲ್ಲಿ ಹೇಳಿದ್ದಾರೆ ಇಲ್ಲದಿದ್ದಲ್ಲಿ ಹಾಗೆ ಹೇಳುತ್ತಿರಲಿಲ್ಲ

— ಪದಾರ್ಥದೀಪಿಕಾ —

ಇದು– ಈಶ್ವರನ ಸೃಷ್ಟ್ಯಾದಿಗಳಿಗೆ ಪರಪ್ರಯೋಜನದ ಉದ್ದೇಶವಾಗಿದ್ದರೆ ಹೀಗಾಗಬಹುದು ಆದರೆ ಹಾಗ ಪರಪ್ರಯೋಜನದ ಉದ್ದೇಶವಿದೆಯೆಂಬುದನ್ನು ಒಪ್ಪುವುದು ಉಚಿತವಲ್ಲ ಏಕೆಂದರೆ "ಕಾ ಸ್ಪೃಹಾ ? (ಯಾವ ಇಚ್ಛೆಯು) "ನ ಕಾಪಿ" (ಯಾವದೇ ಇಚ್ಛೆಯು ಇಲ್ಲ) ಎಂಬುದಾಗಿ ಶ್ರುತಿಯಿಂದ, ಹಾಗು "ನ" ಎಂಬುದಾಗಿ ಸೂತ್ರಕಾರರಿಂದಲೂ ಯಾವದೇ ರೀತಿಯಿಂದಲೂ ಪ್ರಯೋಜನದ ಉದ್ದೇಶವಿದೆಯೆಂಬುದು ನಿರಾಕರಿಸಲ್ಪಟ್ಟಿದೆ ಈ ಆಕ್ಷೇಪದ ಪರಿಹಾರವನು "ಆತ್ಮ" ಇತ್ಯಾದಿ ವಚನದಿಂದ ಹೇಳುತ್ತಾರೆ "ಶ್ರುತಿಃ" ಎಂಬ

— ವಿಶೇಷಾರ್ಥಪ್ರದೀಪಿಕಾ —

ರಾದವರೂ ದಯೆಯಿಂದ ಪ್ರವೃತ್ತಿಸುವವರೂ ಆದ ಲೌಕಿಕರಲ್ಲಿಹೇತುವು ಸಾಧ್ಯವನ್ನು ವ್ಯಭಿಚರಿಸುತ್ತದೆ ಸ್ವ–ಪರ ಎಂಬ ವಿಶೇಷಗಳನ್ನೂ ಅಭಿಪ್ರಾಯದಲ್ಲಿ ತರಲಾರದೆ, ಕೇವಲ ಪ್ರಯೋಜನವತ್ವವನ್ನು ಸಾಧನಮಾಡುವ ಪಕ್ಷದಲ್ಲಿ ಸಿದ್ಧಸಾಧನ ಮುಂತಾದ ಹಿಂದೆ ಹೇಳಿದ ದೋಷಗಳು ಬರುತ್ತವೆ. ಆದುದರಿಂದ, ಚೇತನತ್ವ ಮುಂತಾದ ವಿಶೇಷಣಗಳನ್ನೂ ಕರ್ತೃತ್ವದಲ್ಲಿ ಸೇರಿಸಿ ಹೇಳುವವನ ಮತವೂ ಯುಕ್ತವೆಂದು ಸಿದ್ಧಿಸಿತೆಂದು ತಿಳಿಯಬೇಕು ಜ್ವಲನ(ಅಗ್ನಿ)ಮುಂತಾದುದರಲ್ಲಿ ಸ್ವಭಾವವಿದ್ದರೂ ಸದಾಪ್ರವೃತ್ತಿಯಿಲ್ಲವಾದುದರಿಂದ, "ಸದಾಪ್ರವರ್ತೇತ" ಎಂಬ ಆಪಾದನವೂ ಅಯುಕ್ತವೆಂದು ಹೇಳಿದ್ದಾಯಿತೆಂದು ತಿಳಿಯಬೇಕು

शेषः । कुत एतदवगम्यत इत्यत आह ॥ नेति । यतः परप्रयोजनमङ्गीकृत्यात्मप्रयोजनार्थतामेव नेति न्यवारयत् । अत एव हि प्रयोजनवत्त्वादिति तत्र हेतुमाह । अन्यथा नैतं ब्रूयात् । एतदुक्तं भवति । यदि नेति सौत्री प्रतिज्ञा स्वपरप्रयोजनविषया स्यात् । तदा प्रयोजनवत्त्वादिति हेतुरनैकान्तिकः स्यात् । स्वयं व्यापारसाध्यप्रयोजन-

— ಪದಾರ್ಥದೀಪಿಕಾ —

ವಚನವು ಸೂತ್ರಕಾರರನ್ನು ಸಂಗ್ರಹಿಸುವಂತಹದು ಇಲ್ಲಿ 'ಪರಪ್ರಯೋಜನಾರ್ಥತಾಂ ಅಂಗೀಕುರುತೇ" (ಪರಪ್ರಯೋಜನಕ್ಕಾಗಿ ಈಶ್ವರ ಪ್ರವೃತ್ತಿ"ಯೆಂಬುದನ್ನು ಶ್ರುತಿಯು ಅಂಗೀಕರಿಸುತ್ತದೆ) ಎಂಬುದು ಶೇಷವು ಇದು ಯಾವ ಪ್ರಮಾಣದಿಂದ ತಿಳಿದುಬರುತ್ತದೆಂಬ ಪ್ರಶ್ನೆಯ ಉತ್ತರವನ್ನು 'ನ" ಇತ್ಯಾದಿ ವಚನದಿಂದ ಹೇಳುತ್ತಾರೆ ಯಾವ ಕಾರಣದಿಂದ, ಪರಪ್ರಯೋಜನವಿದೆಯೆಂಬುದನ್ನು ಅಂಗೀಕರಿಸಿ, ಸ್ವಪ್ರಯೋಜನೋದ್ದೇಶವು "ನ" ಇತ್ಯಾದಿ ವಾಕ್ಯದಿಂದ ನಿರಾಕರಿಸಲಾಗಿದೆಯೋ ಆ ಪ್ರಮಾಣದಿಂದಲೇ (ಕಾರಣದಿಂದಲೇ) "ಪ್ರಯೋಜನವತ್ತ್ವಾತ್" ಎಂಬುದಾಗಿ ಯುಕ್ತಿಯನ್ನು ಆದರಲ್ಲಿ ಹೇಳಿದ್ದಾರೆ ಇಲ್ಲಧಿದ್ದಲ್ಲಿ ಇದನ್ನು ಹೇಳುತ್ತಿದ್ದಿಲ್ಲ, ಇದು ಇಲ್ಲಿ ಹೇಳಲ್ಪಟ್ಟದ್ದು— '"ನ' ಎಂಬ, ಸೂತ್ರದ ಪ್ರತಿಜ್ಞೆಯು, ಸ್ವಸಂಬಂಧಿ, ಪರಸಂಬಂಧಿ ಪ್ರಯೋಜನಗಳೆರಡನ್ನು ವಿಷಯೀಕರಿಸುವುದಾದರೆ "ಪ್ರಯೋಜನವತ್ತ್ವಾತ್" ಎಂಬ ಹೇತುವು ಅನೈಕಾಂತಿಕ(ಸಾಧ್ಯದ ವ್ಯಭಿಚಾರಿ)ವಾಗುತ್ತದೆ, ಏಕೆಂದರೆ ತನ್ನ ವ್ಯಾಪಾರದಿಂದ

— ವಿಶೇಷಾರ್ಥಪ್ರದೀಪಿಕಾ —

"ಪ್ರಯೋಜನವತ್ತ್ವಾತ್" ಎಂಬುದಾಗಿ ಹೇತು(ಯುಕ್ತಿ)ವನ್ನು ಹೇಳಿದರೂ ಹಿಂದೆ ಹೇಳಿದ ಭಗವಂತನ ಸೃಷ್ಟ್ಯಾದಿ ಪ್ರವೃತ್ತಿಯು ಪರಪ್ರಯೋಜನೋದ್ದೇಶಪೂರ್ವಕವೆಂಬ ವಿಷಯದ ಸಿದ್ಧಿಯು ಹೇಗೆ? ಎಂಬ ಆಶಂಕೆಯನ್ನು 'ಏತದುಕ್ತಂ" ಇತ್ಯಾದಿವಾಕ್ಯಗಳಿಂದ ಪರಿಹರಿಸುತ್ತಾರೆ

"ಇತಿಹೇತುರನೈಕಾಂತಿಕಃ" – 'ಪ್ರಯೋಜನವತ್ತ್ವಾತ್" ಎಂಬ ಅನುವ್ಯಾಖ್ಯಾನವಚನಕ್ಕೆ "ಆಪ್ತಪ್ರಯೋಜನವತ್ತ್ವಾತ್"(ಪೂರ್ವದಲ್ಲಿಯೇ ಯಾವಾಗಲೂ ಪ್ರಯೋಜನಸಿದ್ಧಿಯುಳ್ಳವನಾದುದರಿಂದ) ಹೀಗೆ ಅರ್ಥವಿದೆ ಆದುದರಿಂದ, ಈಶ್ವರನು ಪ್ರಯೋಜನೋದ್ದೇಶದಿಂದ ವ್ಯಾಪಾರ(ಪ್ರವೃತ್ತಿ)ದಲ್ಲಿ ತೊಡಗುವುದಿಲ್ಲ ಏಕೆಂದರೆ ನಿತ್ಯಸಿದ್ಧಪ್ರಯೋಜನನಾಗಿದ್ದಾನೆ. ತನ್ನ ಒಂದುವ್ಯಾಪಾರದಿಂದ ಸಾಧ್ಯ

वतोऽपि परप्रयोजनोद्देशेन व्यापारदर्शनात् । स्वप्रयोजनमात्रविषयत्वे तु नायं दोषः । योऽवाप्तयत्प्रयोजनः स स्वार्थं न तदुद्दिशतीति व्याप्तेरनवद्यत्वात् । अतः प्रयोजनवत्त्वादिति हेतुं ब्रुवाणः सूत्रकृदात्मप्रयोजनोद्देशमेव नेति निवारितवान् । न परप्रयोजनोद्देशमपि । तथात्वे तद्व्याप्तमेव कमपि हेतुं ब्रूयात् । स्वप्रयोजनानेपथ्यं कुर्वाणो

— ಪದಾರ್ಥದೀಪಿಕಾ —

ಸಾಧ್ಯವಾದ ಪ್ರಯೋಜನವುಳ್ಳವನಿಗೂ ಪರಪ್ರಯೋಜನೋದ್ದೇಶದಿಂದ ವ್ಯಾಪಾರವು ಆಗಬಹುದು ಕೇವಲ ಸ್ವಸಂಬಂಧಿಕ ಪ್ರಯೋಜನವನ್ನಷ್ಟೇ ವಿಷಯೀಕರಿಸಿದಲ್ಲಿ ಈ ದೋಷವು ಬರುವುದಿಲ್ಲ ಏಕೆಂದರೆ ಯಾವನು ಯಾವ ಪ್ರಯೋಜನವನ್ನು ಪಡೆದಿರುವನೋ ಅವನು ತನ್ನ ಸ್ವಾರ್ಥಕ್ಕಾಗಿ ಆ ಪ್ರಯೋಜನವನ್ನು ಉದ್ದೇಶ ಮಾಡಲಾರನೆಂಬ ವ್ಯಾಪ್ತಿಯು ನಿರ್ದುಷ್ಟವಾಗಿದೆ ಆದುದರಿಂದ, " ಪ್ರಯೋಜನವತ್ವಾತ್ " ಎಂಬುದಾಗಿ ಹೇತುವನ್ನು ಹೇಳುವ ಸೂತ್ರಕಾರರು, ಈಶ್ವರನ ಸ್ವಸಂಬಂಧಿ ಪ್ರಯೋಜನದ ಉದ್ದೇಶವನ್ನಷ್ಟೇ " ನ ' ಎಂಬುದಾಗಿ ನಿರಾಕರಿಸಿದ್ದಾರೆ ಇತರ ಪರಪ್ರಯೋಜನೋದ್ದೇಶವನ್ನೂ ನಿಷೇಧಿಸಲಿಲ್ಲ ಹಾಗೆ ಅದನ್ನೂ ನಿಷೇಧಿಸಿದ್ದರೆ ಅದಕ್ಕೆ ವ್ಯಾಪ್ತವಾದ ಯಾವುದೋ ಇನ್ನೊಂದು ಹೇತುವನ್ನು ಹೇಳುತ್ತಿದ್ದರು ಸ್ವಪ್ರಯೋಜನನಿಷೇಧವನ್ನು ಮಾಡುವ ಸೂತ್ರಕಾ

— ವಿಶೇಷಾರ್ಥಪ್ರದೀಪಿಕಾ —

(ಸಾಧಿಸಬೇಕಾದ) ಪ್ರಯೋಜನಗಳನ್ನೂ ಮುಂಚೆಯೇ ಪಡೆದಿರುವವನು, ಆ ವ್ಯಾಪಾರಸಾಧ್ಯವಾಗುವ ಪ್ರಯೋಜನಗಳಿಗಾಗಿ ಆ ವ್ಯಾಪಾರದಲ್ಲಿ ತೊಡಗುವುದಿಲ್ಲ ಹೀಗೆ ಹೇಳುವುದರಿಂದ, "ಪ್ರಯೋಜನವತ್ವಾತ್" ಎಂಬ ಹೇತುವು ವ್ಯಭಿಚರಿತವಾಗುವದು ವ್ಯಭಿಚಾರಸ್ಥಳವನ್ನು ' ಸ್ವಯಂ ''— ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ. "ಸ್ವಯಂ"– ವ್ಯಾಪಾರದಿಂದ ಸಾಧಿಸಬೇಕಾದ ಪ್ರಯೋಜನವನ್ನು ಹೊಂದಿದರೂ ತನಗೆ, ಎಂದು ಅರ್ಥ

"ಇತಿ ಹೇತುಂ'' –ಪ್ರಾಪ್ತಪ್ರಯೋಜನವತ್ವಾತ್ (ಸಿದ್ಧವಾದಪ್ರಯೋಜನವುಳ್ಳವನಾದುದರಿಂದ) ಎಂಬ ಅರ್ಥವುಳ್ಳ ''ಪ್ರಯೋಜನವತ್ವಾತ್'' ಎಂಬಹೇತುವಾಕ್ಯವನ್ನು

''ತದ್ವ್ಯಾಪ್ತಂ ಕಮಪಿ'' –ಸ್ವಭಾವವತ್ವಮುಂತಾದುದನ್ನು ಸ್ವ –ಪರ –ಪ್ರಯೋಜನಗಳೆಲ್ಲದರ ನಿಷೇಧ(ಇಲ್ಲದಿರುವಿಕೆ)ದೊಡನೆ ನಿಯತಸಂಬಂಧವುಳ್ಳ ಆನಂದೋದ್ರೇಕಮುಂತಾದರೂಪ ಹೇತುವನ್ನೇ ಹೇಳಬೇಕು; ಹೊರತಾಗಿ ಕೇವಲ

विशेषनिषेधस्य शेषाभ्यनुज्ञाज्ञापकत्वात्परप्रयोजनमनुजानातीत्यपि ज्ञायत इति । उपलक्षणमेतत् । श्रुतिरप्याप्तकामस्येति हेतुगर्भविशेषणं प्रयुञ्जानाऽऽत्मप्रयोजनस्पृहामेवाक्षिपति परप्रयोजनस्पृहामभ्युपैतीति ज्ञायत इत्यपि द्रष्टव्यम् ॥

इह हि बुद्धिरेवेश्वरस्याव्याहता क्रियाशक्तिस्तयैव सर्वस्योपपत्तौ

— ಪದಾರ್ಥದೀಪಿಕಾ —

ರರು, ವಿಶೇಷ ನಿಷೇಧವು, ಶೇಷ(ಉಳಿದುದರ)ದ ಬಗ್ಗೆ ಅನುಮತಿಯನ್ನು ತಿಳಿಸುವುದರಿಂದ, ಪರರ ಪ್ರಯೋಜನದ ಉದ್ದೇಶವನ್ನು ಅನುಮತಿಸುತ್ತಾ ರೆಂಬುದು ತಿಳಿದು ಬರುತ್ತದ " (ಹೀಗೆ ಭಾವ) ಇದು ಸಂಗ್ರಾಹಕವು 'ಆಪ್ತ ಕಾಮಸ್ಯ' ಎಂಬುದಾಗಿ ಹೇತುಗರ್ಭ ವಿಶೇಷಣವನ್ನು ಪ್ರಯೋಗಿಸುವ ಶ್ರುತಿಯೂ ಸಹ ಸ್ವಸಂಬಂಧಿಕವಾದ ಪ್ರಯೋಜನದ ವಿಷಯಕವಾದ ಸ್ಪೃಹೆ (ಕಾಮನೆ)ಯನ್ನಷ್ಟೇ ನಿಷೇಧಿಸುತ್ತದೆ, ಪರಪ್ರಯೋಜನದ ಉದ್ದೇಶವನ್ನು ಅಂಗೀ ಕರಿಸುತ್ತದೆಯೆಂದು ತಿಳಿದು ಬರುತ್ತದೆಯೆಂಬುದನ್ನು ತಿಳಿಯಬೇಕು

ಇಲ್ಲಿ-- 'ಈಶ್ವರನ ಬುದ್ಧಿಯು ಅವ್ಯಾಹತವು ಕ್ರಿಯಾಶಕ್ತಿಯುಳ್ಳದ್ದೂ ಆಗಿದ್ದು, ಅದರಿಂದಲೇ ಸರ್ವವೂ ಸರಿಹೊಂದುತ್ತಿರುವಾಗ ಈಶ್ವರನಿಗೆ ಇಚ್ಛಾ

— ವಿಶೇಷಾರ್ಥಪ್ರದೀಪಿಕಾ —

ಸ್ವಪ್ರಯೋಜನವನ್ನಷ್ಟೇ ನಿಷೇಧಿಸುವ ಯುಕ್ತಿಯನ್ನು ಹೇಳಬಾರದು, ಹೀಗೆ ಅರ್ಥ ಇಷ್ಟರಿಂದ, ಪರಪ್ರಯೋಜನೋದ್ದೇಶವತ್ವವು ಹೇಗೆ ತಿಳಿದುಬರುವದೆಂಬ ಆಶಂಕೆಯನ್ನು "ಸ್ವಪ್ರಯೋಜನನಿಷೇಧಂ" ಇತ್ಯಾದಿವಚನದಿಂದ ಪರಿಹರಿಸುತ್ತಾರೆ ಮುಂದಿನ ವಾಕ್ಯದ ಸಂಗತಿಯ ಸಲುವಾಗಿ 'ಉಪಲಕ್ಷಣಂ" ಎಂಬ ವಾಕ್ಯವನ್ನು ಹೇಳಿದ್ದಾರೆ ಮುಂದಿನ ವಾಕ್ಯದ ಅವತಾರಿಕೆಯ ಸಲುವಾಗಿ ಶ್ರುತಿಯ ಮೇಲಿನ ಪರರು ಹೇಳಿದ ಅಪವ್ಯಾಖ್ಯಾನವನ್ನು ಯುಕ್ತಿಪೂರ್ವಕವಾಗಿ "ಇಹ ಹಿ" ಇತ್ಯಾದಿ ವಚನಗಳಿಂದ ಅನುವಾದಮಾಡುತ್ತಾರೆ 'ಇತಿ ಮನ್ವಾನಾಃ ಕೇಚಿತ್ ಇತಿ ವ್ಯಾಚ ಕ್ಷತೇ' ಹೀಗೆ ಅನ್ವಯವು "ಇಹ ಹಿ"- ಈಶ್ವರನ ಇಚ್ಛೆಯ ಬಗಗೆ ಇಚ್ಛಾ,ಕೃತಿ, ಇವೆರಡೂ ಈಶ್ವರನಲ್ಲಿಲ್ಲವೆಂಬ ಅಪಲಾಪದ ರೀತಿಯನ್ನು "ಬುದ್ಧಿರೇವ" ಈ ವಚನ ದಿಂದಹೇಳುತ್ತಾರೆ "ಕ್ರಿಯಾಶಕ್ತಿಃ" -ನಿರ್ಮಾಣಶಕ್ತಿಯು "ಕ್ರಿಯಾಶಕ್ತಿ"ಯೆಂ ಬಲ್ಲಿ ಬಹುವ್ರೀಹಿಸಮಾಸವೆಂದೂ ಹೇಳಬಹುದು

ಕೇವಲ ಇಚ್ಛೆಯನ್ನು ಅಲ್ಲಗಳೆಯುವವನ ಮತವನ್ನು 'ಯದ್ವಾ" ಇತ್ಯಾದಿ

किमिच्छाप्रयत्नकल्पनया । यद्वा प्रयत्नः कर्तृत्वम् । तस्यैवाख्यातार्थतया निर्णीतत्वात् । स च द्वेधा बुद्धिमपेक्षते । उत्पत्त्यर्थं विषयनियमार्थं च । तत्रेश्वरप्रयत्नो यद्यपि नित्यत्वान्नोत्पत्तावपेक्षते बुद्धिम् । तथाऽपि विषयनियमार्थं तामपेक्षत एव । न हि निर्विषय एवासौ । व्यर्थत्वप्रसङ्गात् । (न च स्वभावत एवार्थप्रवणः । बुद्धित्व-

— ಪದಾರ್ಥದೀಪಿಕಾ —

ಪ್ರಯತ್ನಗಳನ್ನು ಕಲ್ಪಿಸುವುದೇಕೆ? ಅಥವಾ– ಪ್ರಯತ್ನವು (ಕರ್ತೃತ್ವವು)– ಏಕೆಂದರೆ ಅದೇ ಆಖ್ಯಾತಪ್ರತ್ಯಯದ ಅರ್ಥವೆಂದು ನಿರ್ಣೀತವಾಗಿದೆ ಆ ಪ್ರಯತ್ನವು ಉತ್ಪತ್ತಿಯ ಸಲುವಾಗಿ, ಹಾಗು ವಿಷಯದ ನಿಯಮನದ ಸಲುವಾಗಿ, ಹೀಗೆ ಎರಡು ತರಹಗಳಿಂದ ಬುದ್ಧಿಯನ್ನು ಅಪೇಕ್ಷಿಸುತ್ತದೆ. ಇವೆರಡರಲ್ಲಿ ಈಶ್ವರನ ಪ್ರಯತ್ನವು ನಿತ್ಯವಾದುದರಿಂದ, ಉತ್ಪತ್ತಿಯಲ್ಲಿ ಅದು ಬುದ್ಧಿಯನ್ನು ಅಪೇಕ್ಷಿಸುವುದಿಲ್ಲ ಇದು ನಿಜ ಆದರೂ ವಿಷಯದ ನಿಯಮನದ ಸಲುವಾಗಿ ಆ ಬುದ್ಧಿಯನ್ನು ಅಪೇಕ್ಷಿಸಿಯೇ ಅಪೇಕ್ಷಿಸುತ್ತದೆ. ಏಕೆಂದರೆ ಆ ಪ್ರಯತ್ನವು ನಿರ್ವಿಷಯವಲ್ಲ. ಏಕೆಂದರೆ ಹಾಗಾದಲ್ಲಿ ಅದು ವ್ಯರ್ಥವಾಗುವ ಪ್ರಸಂಗವು ಬರುತ್ತದೆ (ಆ ಪ್ರಯತ್ನವಾದರೋ ಸ್ವಭಾವದಿಂದಲೇ ಅರ್ಥ (ವಿಷಯ) ವನ್ನು ವಿಷಯಿಕರಿಸಿಲ್ಲ ಏಕೆಂದರೆ ಹಾಗಾದಲ್ಲಿ ಅದು ಬುದ್ಧಿಯಾಗುವ ಪ್ರಸಂಗವು

— ವಿಶೇಷಾರ್ಥಪ್ರದೀಪಿಕಾ —

ವಚನದಿಂದ ಹೇಳುತ್ತಾರೆ. "ತಸ್ಯೈವ"– ಪ್ರಯತ್ನವೆಂಬ ಕರ್ತೃತ್ವಕ್ಕೇ! "ತಿಙ್" ಎನಿಸಿದ ಆಖ್ಯಾತಪ್ರತ್ಯಯಕ್ಕೆ ಎಲ್ಲ ಕಡೆಗಳಲ್ಲಿಯೂ ಪ್ರಯತ್ನರೂಪ ಕರ್ತೃತ್ವ ಅರ್ಥ. ಏಕೆಂದರ "ಭಾವನೈವ ಪ್ರಯತ್ನಾತ್ಮಾ" ಎಂಬ ವಚನದಿಂದ, ಪ್ರಯತ್ನರೂಪವಾದ ಭಾವನೆಯೇ ತಿಙರ್ಥ (ಆಖ್ಯಾತಾರ್ಥ)ವೆಂದು ನಿರ್ಣಯಿಸಲ್ಪಟ್ಟಿದೆ "ರಥೋ ಗಚ್ಛತಿ" ಎಂಬಲ್ಲಿ ಗೌಣ (ಅಮುಖ್ಯ) ಆಖ್ಯಾತವು; ಹೀಗೆ ತಿಳಿಯಬೇಕು "ವಿಷಯ ನಿಯಮಾರ್ಥಂ" – ಯಾವದು ಬುದ್ಧಿಯಲ್ಲಿ ವಿಷಯವಾಗಿದೆಯೋ ಆದರ ವಿಷಯದಲ್ಲಿಯೇ ಪ್ರಯತ್ನವು," ಹೀಗೆ ಪ್ರಯತ್ನಕ್ಕೆ ವಿಷಯದ ನೈಯತ್ಯಕ್ಕಾಗಿ, ಹೀಗೆ ಅರ್ಥ. ಘಟ ಮುಂತಾದುದರ ಹಾಗೆ ನಿರ್ವಿಷಯವೆಂದಾಗಲೀ ಸ್ವಭಾವದಿಂದಲೇ ವಿಷಯಪ್ರವಣತೆಯು (ಸವಿಷಯಕತ್ವವು) ಇರುವುದರಿಂದಲೇ ವಿಷಯನಿಯಮವಾಗುವುದೆಂಬ ಸಂಗತಿಯನ್ನು "ನಹಿ" ಇತ್ಯಾದಿ ವಚನಗಳಿಂದ ನಿರಾಕರಿಸುತ್ತಾರೆ "ವ್ಯರ್ಥತ್ವಪ್ರಸಂಗಾತ್"

प्रसङ्गात्) बुद्धिरेव हि स्वभावतोऽर्थप्रवणा । अतो ज्ञानप्रयत्नाभ्यामेव सर्वनिर्वाहान्नेश्वरस्येच्छाऽस्ति । न चेच्छया प्रयत्नस्य विषयनियमः । तस्या अपि स्वतो विषयप्रवणताभावात् । तदर्थं बुद्ध्यङ्गीकारे तयैव प्रयत्नस्य विषयनियमोपपत्तेः किमन्तर्गड्डुनेच्छयेति मन्वा(न्यमा)नाः केचित् का स्पृहेति श्रुतिर्नेश्वरस्य प्रयोजनेच्छामात्रनिषेधपरा । किन्त्विच्छालक्षणं गुणमेव निषेधतीति व्याचक्षते । तन्निराकरोति ॥ इच्छामात्रमिति ।

## — ಪದಾರ್ಥದೀಪಿಕಾ —

ಬರುತ್ತದೆ) ಏಕೆಂದರೆ ಬುದ್ಧಿಯೇ ಅರ್ಥವನ್ನು ವಿಷಯೀಕರಿಸುವ ಸ್ವಭಾವವುಳ್ಳದ್ದು ಆದುದರಿಂದ, ಜ್ಞಾನ (ಬುದ್ಧಿ) ಪ್ರಯತ್ನಗಳೆರಡರಿಂದಲೇ ಸರ್ವನಿರ್ವಾಹವಾಗುವುದರಿಂದ ಈಶ್ವರ ಇಚ್ಛೆಯು ಇಲ್ಲವೆ ಇಲ್ಲ ಮತ್ತು ಇಚ್ಛೆಯಿಂದ ಪ್ರಯತ್ನಕ್ಕೆ ವಿಷಯದ ನಿಯಮನವಾಗುವುದಿಲ್ಲ ಏಕೆಂದರೆ ಈ ಇಚ್ಛೆ ಸ್ವಭಾವತಃ ವಿಷಯವನ್ನು ವಿಷಯೀಕರಿಸುವುದಿಲ್ಲ ಅದರ ಸಲುವಾಗಿ ಬುದ್ಧಿಯನ್ನು ಅಂಗೀಕರಿಸಿದಲ್ಲಿ ಆ ಬುದ್ಧಿಯಿಂದಲೇ ಪ್ರಯತ್ನಕ್ಕೆ ವಿಷಯದ ನಿಯಮವು ಸಂಭವಿಸುವುದರಿಂದ ಮಧ್ಯವರ್ತಿಯಾದ ಇಚ್ಛೆಯಿಂದೇನು ಪ್ರಯೋಜನ ? ಹೀಗೆ ಬಗೆಯುವ ಕೆಲವರು, "ಕಾ ಸ್ಪೃಹಾ" ಎಂಬ ಶ್ರುತಿಯು, ಈಶ್ವರನಿಗೆ ಪ್ರಯೋಜನೇಚ್ಛೆಯನ್ನಷ್ಟೇ ನಿರಾಕರಿಸಲು ಹೊರಟಿಲ್ಲ ಆದರೆ ಇಚ್ಛಾರೂಪವಾದ ಗುಣ

## — ವಿಶೇಷಾರ್ಥಪ್ರದೀಪಿಕಾ —

ಪ್ರಯತ್ನವು ತನ್ನ ವಿಷಯದ ಉತ್ಪತ್ತಿ ಮುಂತಾದುದರ ಸಲುವಾಗಿ ಮಾಡಲ್ಪಡುವುದೆಂದು ಎಲ್ಲರೂ ಒಪ್ಪಿದ್ದಾರೆ ಆ ಪ್ರಯತ್ನವು ನಿರ್ವಿಷಯ (ಅದಕ್ಕೆ ವಿಷಯವಿಲ್ಲ)ವೆಂದೇ ಆದರೆ ಅದರಿಂದ ಪಡೆಯಬೇಕಾದ ಪ್ರಯೋಜನವೇ ಇಲ್ಲವಾಗುವುದರಿಂದ ವ್ಯರ್ಥವೇ ಆಗಬೇಕಾಗುತ್ತದೆ ಹಾಗಾದರೆ ಇಚ್ಛೆಯನ್ನೇ" (ಈಶ್ವರನಿಗೆ) ಅಂಗೀಕರಿಸಬೇಕು ಬುದ್ಧಿಯಾದರೂ ಏಕೆ ಬೇಕು? ಈ ಆಶಂಕೆಯನ್ನು "ನ ಚ" ಇತ್ಯಾದಿವಚನಗಳಿಂದ ನಿರಾಕರಿಸುತ್ತಾರೆ ಇಲ್ಲಿ "ನ ಜ್ಞಾನೇನ ಎಂಬುದಾಗಿ ಶೇಷವಿದೆ. "ತಸ್ಯಾ ಅಪಿ"= ಇಚ್ಛೆಗೂ ಇಲ್ಲದಿದ್ದಲ್ಲಿ ಅದಕ್ಕೂ ಸ್ವತಃವಿಷಯಪ್ರಾವಣ್ಯವು ಇದ್ದುದಾದರೆ ಅದೂ ಬುದ್ಧಿಯೇ ಆಗಬೇಕೆನಿಸುತ್ತದೆ. "ತದರ್ಥಂ"– ಇಚ್ಛೆಗೆ ವಿಷಯದನಿಯಮಕ್ಕಾಗಿ (ನಿಯತವಿಷಯತ್ವಕ್ಕಾಗಿ.)

इच्छामात्रं प्रभोः सृष्टिरिति सृष्टौ विनिश्चिता ॥

का स्पृहेति श्रुत्या नेश्वरस्येच्छामात्रं निषेध्यते। कुतः। इच्छा-वत्त्वस्य प्रमाणतः सिद्धत्वात्। तथा हि। विभूतिं प्रसवं त्वन्ये मन्यन्ते सृष्टिचिन्तकाः। स्वप्नमायासरूपेति सृष्टिरन्यैर्विकल्पिता। कालात्प्रसूतिं भूतानां मन्यन्ते कालचिन्तका इति परिणामवादं विवर्तवादं कालादिनिमित्तवादं चान्यमतत्वेनोक्त्वा इच्छामात्रमिति श्रुत्या

ಸೃಷ್ಟಿಯ ಬಗ್ಗೆ ವಿಶಿಷ್ಟನಿರ್ಣಯವುಳ್ಳವರು "ಈಶ್ವರನ ಇಚ್ಛಾಮಾತ್ರಾಧೀನವಾದುದು ಸೃಷ್ಟಿಯು" ಎಂಬುದಾಗಿಯೇ ತಿಳಿಯುತ್ತಾರೆ" ಹೀಗೆ ಪ್ರಶಂ

— ಪದಾರ್ಥದೀಪಿಕಾ —

ವನ್ನೇ ನಿಷೇಧಿಸುತ್ತದೆಯೆಂಬುದಾಗಿ ವ್ಯಾಖ್ಯಾನಿಸುತ್ತಾರ ಅದನ್ನು "ಇಚ್ಛಾಮಾತ್ರಂ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ

"ಕಾ ಸ್ಪೃಹಾ" ಎಂಬ ಶ್ರುತಿಯಿಂದ, ಈಶ್ವರನಿಗೆ ಯಾವದೇ ಇಚ್ಛೆಯೇ ಇಲ್ಲವೆಂದು ಹೇಳಲ್ಪಡುವುದಿಲ್ಲ ಏಕೆ? ಈಶ್ವರನಿಗೆ ಇಚ್ಛೆಯುಂಟೆಂದು ಪ್ರಮಾಣ ಸಿದ್ಧವಾಗಿದೆ ಹೇಗೆಂದರೆ– 'ವಿಭೂತಿಂ ಪ್ರಸವಂ ತ್ವನ್ಯೇ ಮನ್ಯಂತೇ ಸೃಷ್ಟಿ ಚಿಂತಕಾಃ ॥ ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ॥ ಕಾಲಾತ್ ಪ್ರಸೂತಿಂ ಭೂತಾನಾಂ ಮನ್ಯಂತೇ ಕಾಲ ಚಿಂತಕಾಃ ॥" ಈ ವಚನಗಳಿಂದ ಪರಿಣಾಮವಾದ, ವಿವರ್ತವಾದ ಕಾಲಾದಿ ನಿಮಿತ್ತವಾದ, ಈ ಮತಗಳನ್ನು ಅನ್ಯಮತ ರೂಪವಾಗಿ ಹೇಳಿ, "ಇಚ್ಛಾಮಾತ್ರಂ" ಎಂಬ ಶ್ರುತಿಯಿಂದ ಸ್ವಮತವು

— ವಿಶೇಷಾರ್ಥಪ್ರದೀಪಿಕಾ —

"ತನ್ನಿರಾಕರೋತಿ" — ಅದರ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆಂದು ಅರ್ಥ ಶೇಷವನ್ನು ಹಚ್ಚಿ ಕೊನೆಯ ಪಾದವನ್ನು "ಕಾಸ್ಪೃಹಾ" ಇತ್ಯಾದಿ ವಚನದಿಂದ ವಿವರಿಸುತ್ತಾರೆ "ನೇಚ್ಛಾಮಾತ್ರಂ ನಿಷಿಧ್ಯತೇ" ಎಂಬಲ್ಲಿ ಯುಕ್ತಿ ರೂಪಅರ್ಥಬರುವಹಾಗೆ ಮಿಕ್ಕ ಐದು ಪಾದಗಳನ್ನು "ಕುತಃ" ಇತ್ಯಾದಿವಚನಗಳಿಂದ ವಿವರಿಸುತ್ತಾರೆ "ಪ್ರಸವಂ"= ಜಗತ್ತಿನ ಜನನ (ಸೃಷ್ಟಿ)ವನ್ನು "ವಿಭೂತಿಂ" ಬ್ರಹ್ಮನ ವಿಯದಾದಿ (ಆಕಾಶಾದಿ) ರೂಪಗಳಿಂದ ವಿವಿಧವಾಗಿ ಆಗುವಿಕೆಯೆಂದು "ಮನ್ಯಂತೇ" ಬಗೆಯುತ್ತಾರೆ "ಸ್ವಪ್ನಮಾಯಾಸರೂಪಾ" ಸ್ವಪ್ನದಲ್ಲಿ ತೋರಿದ ಪದಾರ್ಥಗಳಲ್ಲಿಯ ಜಾಗ್ರತ್ವ (ಜಾಗ್ರತಕಾಲೀನತ್ವ)

इति प्रशंसया कामश्रुतिभ्यश्चैव युक्तितः ॥

स्वमतमुच्यते । ये सृष्टिविषये विशिष्टनिश्चयवन्तस्ते प्रभोरिच्छा-मात्राधीना सृष्टिर्न ब्रह्मपरिणामो न च तद्विवर्तो नापि कालादिनि-मित्तेति मन्यन्त इति । अनया प्रभोरिच्छामात्रायत्ततां सृष्टेर्मन्य-

ಸಿದುದರಿಂದಲೂ ಅರ್ಥಾಪತ್ತಿಗಿಂತ ಪ್ರಬಲವಾದ, ಕಾಮವನ್ನು ಪ್ರತಿಪಾದಿಸುವ ಶ್ರುತಿಗಳಿರುವುದರಿಂದಲೂ ಯುಕ್ತಿಗಳಿರುವುದರಿಂದಲೂ ಈಶ್ವರನಿಗೆ ಇಚ್ಛಾಮಾತ್ರವು ನಿಷೇಧಿಸಲ್ಪಡುವುದಿಲ್ಲ.

— ಪದಾರ್ಥದೀಪಿಕಾ —

ಹೇಳಲ್ಪಡುತ್ತದೆ ಅದು ಹೀಗೆ " ಯಾರು ಸೃಷ್ಟಿಯ ವಿಷಯದಲ್ಲಿ ವಿಶಿಷ್ಟ ನಿಶ್ಚಯವುಳ್ಳವರೋ ಅವರು " ಪ್ರಭುವಿನ ಇಚ್ಛಾಮಾತ್ರಾಧೀನವಾದುದು ಸೃಷ್ಟಿಯು ಹೊರತಾಗಿ ಅದು ಬ್ರಹ್ಮಪರಿಣಾಮವಲ್ಲ, ಹಾಗು ಬ್ರಹ್ಮವಿವರ್ತವೂ ಅಲ್ಲ ಅಲ್ಲದೆ ಕಾಲಮುಂತಾದುದೂ ಅದಕ್ಕೆ ನಿಮಿತ್ತವಲ್ಲ " ಎಂಬುದಾಗಿ ತಿಳಿಯುತ್ತಾರೆ " ಎಂದು ಪ್ರಭುವಿನ ಇಚ್ಛೆಮಾತ್ರದ ಅಧೀನವಾದುದೆಂದು ಸೃಷ್ಟಿಯನ್ನು ತಿಳಿಯುವದರ ಬಗ್ಗೆ ಮಾಡಿರುವ ವಿಶಿಷ್ಟ ನಿಶ್ಚಯವುಳ್ಳವರು "

— ವಿಶೇಷಾರ್ಥಪ್ರದೀಪಿಕಾ —

ಸ್ಥೂಲತ್ವ, ಬಾಹ್ಯ (ಹೊರಗಿರುವ) ಉಪಾದಾನಕಾರಣಗಳಿಂದ ಹುಟ್ಟುವುದು; ಈ ಮುಂತಾದುದು ಹೇಗೆ ಕಲ್ಪಿತವಾದುದೋ ಮತ್ತು "ಮಾಯಾ"=ಮಾಯಾ ವಿಯು ನಿರ್ಮಿಸಿದ ಗಂಧರ್ವನಗರ ಮುಂತಾದುದು ಹೇಗೆ ಮಿಥ್ಯಾಭೂತವಾ ದುದೋ ಹಾಗೆಯೇ ಈಶ್ವರನಿಂದ ಸೃಷ್ಟಿಸಲ್ಪಟ್ಟ ಈ ವಿಶ್ವವೂ ಮಿಥ್ಯಾಭೂತ (ಸುಳ್ಳು) ವಾದುದು. ಹೀಗೆ ಈ ವಾಕ್ಯಗಳ ಅರ್ಥ "ವಿವರ್ತವಾದಂ"= ಬ್ರಹ್ಮನಲ್ಲಿ ಜಗತ್ತಿನ ಆರೋಪವನ್ನು ಹೇಳುವ ವಾದವನ್ನು "ಕಾಲಾತ್"=ಇಲ್ಲಿ ಕರ್ಮರುದ್ರಾದಿಗಳನ್ನು ಸಂಗ್ರಹಿಸಬೇಕು ಇದನ್ನು ತಿಳಿಸಲು "ಕಾಲಾದಿನಿ ಮಿತ್ತತವಾದಂ"ಎಂಬುದಾಗಿ ಹೇಳಿದ್ದಾರೆ "ವಿನಿಶ್ಚಿತಾಃ" ಕರ್ತ್ರರ್ಥದಲ್ಲಿ ನಿಷ್ಠಾ(ತ) ಪ್ರತ್ಯಯಾಂತವಾದುದು ಅಥವಾ ಭಾವಾರ್ಥಕ ನಿಷ್ಠಾಪ್ರತ್ಯಯಾಂತವೂ ಆದುದು

"ಸೃಷ್ಟೌ" ಎಂಬ ಮೂಲಅನುವ್ಯಾಖ್ಯಾನದ ಪದದ ಸಪ್ತಮೀ ವಿಭಕ್ತಿಯು ವಿಷಯಸಪ್ತಮಿಯೆಂದು ಭಾವಿಸಿ ಅರ್ಥವನ್ನು "ಯೇ ಸೃಷ್ಟಿ ವಿಷಯೇ" ಎಂಬು ದಾಗಿ ಹೇಳಿದ್ದಾರೆ "ರಾಜಾ ರಾಷ್ಟ್ರಂ" ಎಂಬಲ್ಲಿ ಹೇಗೋ ಹಾಗೆ ಅಭೇದವು ಔಪಚಾರಿಕ(ಅಮುಖ್ಯ)ವೆಂದು ಒಪ್ಪಿ "ಇಚ್ಛಾಮಾತ್ರಾಧೀನಾ" ಎಂಬುದಾಗಿ

मानानां विनिश्चिता इति प्रशंसया तस्येच्छावत्त्वमवगम्यते । यदी–श्वरस्येच्छा न स्यात् । तदा तदायत्ततां सृष्टेर्मन्यमाना विपर्यस्ताः स्युः । न विशिष्टनिश्चयवन्त इत्येषा प्रशंसाऽनुपपन्ना स्यात् । न च प्रशंसात्वादेवार्थासिद्धिः । पूर्वोत्तरपक्षावधारणप्रसङ्गे प्रशंसाया अपि याथार्थ्यावश्यम्भावात् । अन्यथा परिणामादिवादा अपि प्रशंस्येरन् ।

— ಪದಾರ್ಥದೀಪಿಕಾ —

ಎಂಬ ಈ ಪ್ರಶಂಸೆಯಿಂದ, ಈಶ್ವರನಿಗೆ ಇಚ್ಛೆಯು ಇರುವುದೆಂದು ತಿಳಿದು ಬರುತ್ತದೆ ಈಶ್ವರನ ಇಚ್ಛೆಯು ಇಲ್ಲದಿದ್ದರೆ ಸೃಷ್ಟಿಯನ್ನು ಈಶ್ವರೇಚ್ಛಾಧೀನ ವೆಂದು ತಿಳಿಯುವವರು ವಿಪರೀತ ನಿಶ್ಚಯವುಳ್ಳವರಾಗುವರು ಹೊರತು, ವಿಶಿಷ್ಟ ನಿಶ್ಚಯವುಳ್ಳವರಾಗಲಾರರು ಆದುದರಿಂದ, ಅವರ ಈ ಪ್ರಶಂಸೆಯು ವ್ಯರ್ಥ ವಾಗು ಅಯುಕ್ತವಾಗಬೇಕಾಗುತ್ತದೆ ಮತ್ತು ಕೇವಲ ಪ್ರಶಂಸೆಯಾಗಿರುವ ಮಾತ್ರ ದಿಂದ ಅರ್ಥಸಿದ್ಧಿಯಿಲ್ಲವೆಂದು ಬಗೆಯಲಾರದು ಏಕಂದರ ಪೂರ್ವೋತ್ತರ ಪಕ್ಷಗಳ ನಿರ್ಣಯಮಾಡುವ ಪ್ರಸಂಗದಲ್ಲಿ ಪ್ರಶಂಸೆಗೂ ಸಹ ಯಥಾರ್ಥತೆಯು ಅವಶ್ಯವಾಗಿ ಇರಲೇಬೇಕಾಗುತ್ತದೆ ಇಲ್ಲದಿದ್ದಲ್ಲಿ ಪರಿಣಾಮಾದಿವಾದಗಳೂ ಪ್ರಶಂಸಿ

— ವಿಶೇಷಾರ್ಥಪ್ರದೀಪಿಕಾ —

ಹೇಳಿರುತ್ತಾರೆ. "ಇತಿ" ಪದಕ್ಕೆ "ಸ್ವಮತಮ್ಯುಚ್ಯತೇ" ಎಂಬಲ್ಲಿ ಅನ್ವಯವಿದೆ.

ಶಂಕೆಯನ್ನು "ಪ್ರಶಂಸಾತ್ವಾದೇವ" ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ ಪೂರ್ವ ಮೀಮಾಂಸೆಯಲ್ಲಿ, "ಅರ್ಥವಾದ(ಪ್ರಶಂಸಾಪರ)ವಾಕ್ಯಗಳಿಗೆ ಸ್ವಾರ್ಥದಲ್ಲಿ (ಪ್ರಶಂಸೆಯಿಂದ ಹೇಳಲ್ಪಟ್ಟ ವಿಷಯಗಳಬಗ್ಗೆ) ತಾತ್ಪರ್ಯವನ್ನು ಅಂಗೀಕರಿ ಸಿಲ್ಲ ಆದುದರಿಂದ "ನ ಅರ್ಥಸಿದ್ಧಿಃ" ಎಂದು ಶಂಕಿಸುತ್ತಾರೆ ಈ ಆಶಂಕೆಯ ಪರಿ ಹಾರವನ್ನು "ಪೂರ್ವೋತ್ತರ" ಇತ್ಯಾದಿ ವಾಕ್ಯದಿಂದ ಹೇಳುತ್ತಾರ ವಿಭೂ ತಿಪ್ರಸವಂ" ಮುಂತಾದ, ಪೂರ್ವದಲ್ಲಿ ಹೇಳಿದ ಪಕ್ಷಗಳು ಸರಿ (ನಿರ್ದುಷ್ಟ) ಯಾದವುಗಳೋ? ಕೊನೆಯಲ್ಲಿ ಹೇಳಿದ ಇಚ್ಛಾಮಾತ್ರಾಧೀನತ್ವಪಕ್ಷವು ಸರಿಯಾ ದ್ದುದೋ ? ಹೀಗೆ ವಿಚಾರವು ಬರಲು, ಪೂರ್ವಪಕ್ಷ ಉತ್ತರಪಕ್ಷವಾಗಿ ಹೊರಟ ನಾಲ್ಕೂ ಪಕ್ಷಗಳಲ್ಲಿ "ಇದು ಸಮೀಚೀನವಾದುದು" ಎಂಬ ನಿರ್ಣಯಮಾಡಬೇಕಾದ ಸಂದರ್ಭದಲ್ಲಿ ಪ್ರಸಕ್ತವಾದ ಪ್ರಶಂಸೆಗೂ ಅರ್ಥವತ್ವವು (ಸ್ವಾರ್ಥದಲ್ಲಿ ತಾತ್ಪ ರ್ಯವು) ಇರುತ್ತದೆ "ಅನ್ಯಥಾ" - ಪ್ರಶಂಸೆಯು ಸ್ವಾರ್ಥದಲ್ಲಿ ತಾತ್ಪರ್ಯ ವುಳ್ಳದ್ದಾಗದಿದ್ದರೆ ಅಥವಾ ಪ್ರಶಂಸೆಯಿಂದ ಕೊನೆಯ ಪಕ್ಷವು ಅಭಿಮತವೆಂ ದಾಗದಿದ್ದರೆ– ಹೀಗೆ ಅರ್ಥ ಯಾಥಾರ್ಥ್ಯವಿಲ್ಲದಿದ್ದರೂ ಪ್ರಶಂಸೆಯನ್ನು

न केवलं श्रुतार्थानुपपत्त्या । अपि तर्हि कामस्तदग्रे समवर्तताधि सोऽकामयतेत्यादिभ्यो भगवतः कामप्रतिपादकश्रुतिभ्यश्चेच्छाऽवगम्यते । एवशब्दः श्रुतीनामर्थापत्तितः प्राबल्यसूचकः । इच्छाकामशब्दयोर्ज्ञानप्रयत्नोपलक्षणत्वस्य सम्भवान्नार्थापत्तिश्रुतिभ्यामिच्छासिद्धिरिति चेन्न । मुख्ये बाधकाभावात् । मा वाऽसैत्सीदिच्छा अर्थापत्तिश्रुतिभ्यां युक्तितस्तावत्सेत्स्यति । तथा हि । ईश्वर इच्छावान् ।

— ಪದಾರ್ಥದೀಪಿಕಾ —

ಸಲ್ಪಡಲಿ! ಕೇವಲ ಶ್ರುತಾರ್ಥದ ಅನುಪಪತ್ತಿಯಿಂದಲ್ಲ ಆದರೆ "ಕಾಮಸ್ತದಗ್ರೇ ಸಮವರ್ತತಾಧಿ, ಸೋಽಕಾಮಯತ" ಈ ಮುಂತಾಗಿರುವ ಪರಮಾತ್ಮನಿಗೆ ಕಾಮವನ್ನು ಪ್ರತಿಪಾದಿಸುವ ಶ್ರುತಿಗಳಿಂದ, ಅವನಿಗೆ ಇಚ್ಛೆಯು ಇರುವುದೆಂದು ತಿಳಿದುಬರುತ್ತದ "ಏವ" ಶಬ್ದವು, ಶ್ರುತಿಗಳಿಗೆ ಅರ್ಥಾಪತ್ತಿಗಿಂತ ಪ್ರಾಬಲ್ಯವನ್ನು ಸೂಚಿಸುತ್ತದೆ ಇಚ್ಛಾಕಾಮ ಶಬ್ದಗಳಿಗೆ ಜ್ಞಾನ ಪ್ರಯತ್ನಗಳಲ್ಲಿ ಲಕ್ಷಣಾವೃತ್ತಿಯಿರುವುದರಿಂದ ಅರ್ಥಾಪತ್ತಿ ಶ್ರುತಿಗಳಿಂದ ಇಚ್ಛೆಯ ಸಿದ್ಧಿಯಾಗುವುದಿಲ್ಲವೆಂದು ಬಗಯುವುದು ಸರಿಯಲ್ಲ ಏಕೆಂದರೆ ಮುಖ್ಯಾರ್ಥವನ್ನು ಸ್ವೀಕರಿಸಿದಲ್ಲಿ ಬಾಧಕವಿಲ್ಲ ಇಚ್ಛೆಯು ಅರ್ಥಾಪತ್ತಿ ಶ್ರುತಿಗಳಿಂದ ಸಿದ್ಧಿಸದೇ ಇರಲಿ! ಆದರೆ ಯುಕ್ತಿಯಿಂದ ಸಿದ್ಧಿಸುತ್ತದೆ ಹೇಗೆಂದರೆ- "ಈಶ್ವರನು ಇಚ್ಛೆಯುಳ್ಳವನು. ಏಕೆಂದರೆ ಆತ್ಮನಾಗಿರುತ್ತಾನೆ ಇದರಲ್ಲಿ ಯಜ್ಞದತ್ತನು ದೃಷ್ಟಾಂತನು.

— ವಿಶೇಷಾರ್ಥಪ್ರದೀಪಿಕಾ —

ಮಾಡುವದಾದರೆ, ಅಯಥಾರ್ಥ (ಅಪ್ರಮಾಣ)ಗಳಾದ ಪರಿಣಾಮ ಮುಂತಾದ ವಾದಗಳನ್ನು ಏಕೆ ಪ್ರಶಂಸಿಸಬಾರದು? ಅವುಗಳನ್ನು ಪ್ರಶಂಸಿಸದೆ, "ವಿನಿಶ್ಚಿತಾಃ" ಎಂಬುದಾಗಿ ಈಶ್ವರೇಚ್ಛಾಮಾತ್ರಾಧೀನತ್ವವನ್ನು ಪ್ರಶಂಸಿಸುವುದರಿಂದ, ಈ ಪ್ರಶಂಸೆಗೆ ಸ್ವಾರ್ಥದಲ್ಲಿ ತಾತ್ಪರ್ಯವಿದೆಯೆಂಬುದು ತಿಳಿದುಬರುತ್ತದೆ ಹೀಗೆ ಅರ್ಥ

"ಶ್ರುತಾರ್ಥಾನುಪಪತ್ತ್ಯಾ" ಈ ವಾಕ್ಯಗಳಿಂದ, "ಕಾಮಶ್ರುತಿಭ್ಯಶ್ಚ" ಈ ಮೂಲವಚನವನ್ನು ವ್ಯಾಖ್ಯಾನಿಸುತ್ತಾರೆ ಶ್ರುತ್ಯುಕ್ತಪ್ರಶಂಸೆಯು "ಅನ್ಯಥಾ" ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲದಿದ್ದರೆ "ಅನುಪಪತ್ತ್ಯಾ" ಸರಿಹೊಂದುವುದಿಲ್ಲವೆಂಬ ಯುಕ್ತಿಯಿಂದ ಹೀಗೆ ಅರ್ಥ

"ಅರ್ಥಾಪತ್ತಿತಃ" — ಹಿಂದೆ ಹೇಳಿದ ಪ್ರಶಂಸಾರೂಪ ಅರ್ಥಾಪತ್ತಿಗಿಂತ "ಮುಖ್ಯೇ"= ಮುಖ್ಯಾರ್ಥವಾದ "ಇಚ್ಛಾ" ಎಂಬ ಅರ್ಥದ ಬಗ್ಗೆ

आत्मत्वात् । यज्ञदत्तवत् । न च मुक्तादौ व्यभिचारः । तत्रापि तस्याः साधयिष्यमाणत्वात् । ज्ञानवत्त्वात् । प्रयत्नवत्त्वात् । कर्तृत्वाद्वा । ईश्वरज्ञानं वा इच्छासमानाश्रयं ज्ञानत्वादस्मदादिज्ञानवत् । एवं तत्प्रयत्नमपि पक्षीकृत्य प्रयोक्तव्यम् । यद्वा क्षित्यादिकमिच्छावज्जन्यं कार्यत्वाद्घटवत् । नन्वेवं दुःखादिकमपि साधयितुं शक्यमिति चेत् तत्किमतिप्रसङ्गभीरुणा क्षित्यादेर्बुद्धिमत्कारणकत्वानुमानमपि त्यक्ष्यते ।

— ಪದಾರ್ಥದೀಪಿಕಾ —

ಇನ್ನು ಮುಕ್ತಾದಿಗಳಲ್ಲಿ ವ್ಯಭಿಚಾರವೆಂದು ಶಂಕಿಸಬಾರದು ಏಕೆಂದರೆ—ಅಲ್ಲಿಯೂ ಆ ಇಚ್ಛೆಯು ಇದಯೆಂಬುದನ್ನು ಸಾಧನಮಾಡಲಾಗುವದು ಜ್ಞಾನವುಳ್ಳವ ನಾದುದರಿಂದ. ಪ್ರಯತ್ನವುಳ್ಳವನಾದುದರಿಂದ ಅಥವಾ ಕರ್ತೃತ್ವವುಳ್ಳವನಾದು ರಿಂದ, ಇಚ್ಛೆಯುಳ್ಳವನು ಅಥವಾ ಈಶ್ವರನ ಜ್ಞಾನವು ಇಚ್ಛಯ ಸಮಾನಾಶ್ರ ವುಳ್ಳದ್ದು ಏಕೆಂದರೆ ಅದು ಜ್ಞಾನವಾಗಿದೆ ಇದರಲ್ಲಿ ಅಸ್ಮದಾದಿಗಳ ಜ್ಞಾನವು ಉದಾಹರಣವು ಹೀಗೆ ಈಶ್ವರನ ಪ್ರಯತ್ನವನ್ನು ಪಕ್ಷಮಾಡಿ ಪ್ರಯೋಗಿಸತ ಕ್ಕದ್ದು ಅಥವಾ- ಕ್ಷಿತಿ ಮುಂತಾದುದು, ಇಚ್ಛೆಯುಳ್ಳವನಿಂದ ಹುಟ್ಟುವಂತ ಹದು ಏಕೆಂದರೆ ಕಾರ್ಯವಾಗಿದೆ ಇದರಲ್ಲಿ ಘಟ ಮುಂತಾದುದು ದೃಷ್ಟಾಂತ ಹೀಗೆ ಅನುಮಾನ ಇನ್ನು- ಹೀಗೆ ದುಃಖಾದಿಗಳನ್ನೂ ಸಾಧನಮಾಡುವುದು ಶಕ್ಯವೆಂದು ಶಂಕಿಸಿದರೆ— ಅತಿಪ್ರಸಂಗ ಭಯವುಳ್ಳ ನೀನು ಕ್ಷಿತಿ ಮುಂತಾದುದು ಬುದ್ಧಿಯುಳ್ಳ ಕಾರಣ(ಚೇತನ)ದಿಂದ ಹುಟ್ಟಿದುದೆಂಬುದನ್ನೂ ಪರಿತ್ಯಜಿಸುವಿಯೋ।

— ವಿಶೇಷಾರ್ಥಪ್ರದೀಪಿಕಾ —

"ಸಾಧಯಿಷ್ಯಮಾಣತ್ವಾತ್" "ಕಾಮಸ್ಯ ಯತ್ರಾಪ್ತಾಃಕಾಮಾಃ ತತ್ರ ಮಾಮಮೃತಂ ಕೃಧಿ। ಇತಿ ಯಲ್ಲಕ್ಷಣಂ ಮುಕ್ತೇ ಶ್ರುತಿರಾಹ ಬಲೀಯಸೀ" ಈ ಮುಂತಾದ ವಚನಗಳಿಂದ ಮೂರನೆಯ ಅಧ್ಯಾಯದ ಕೊನೆಯ ಪಾದ ದಲ್ಲಿಯೂ, "ಅವ್ಯಕ್ತಿರೇವ" ಕಾಮಾನಾಂ ನ ನಾಶೋ ಮೋಹಸುಪ್ತಯೋಃ" ಎಂಬುದಾಗಿ ಅದೇ ಪಾದದಲ್ಲಿಯೇ ಸುಷುಪ್ತಿ ಮೂರ್ಛೆಗಳಲ್ಲಿಯೂ ಕಾಮವನ್ನು (ಪರಮೇಶ್ವರನಿಗೆ) ಸಮರ್ಥನಮಾಡಲಾಗುವುದು. ಹೀಗೆ ಭಾವ

"ಏವಂ ಪ್ರಯತ್ನಮಪಿ" – ಈಶ್ವರನ ಪ್ರಯತ್ನವು ಇಚ್ಛೆಯ ಸಮಾನ ಆಶ್ರಯವುಳ್ಳದ್ದು ಏಕೆಂದರೆ ಪ್ರಯತ್ನವಾಗಿದ ಇದರಲ್ಲಿ ಅಸ್ಮದಾದಿಗಳ ಪ್ರಯತ್ನವು ದೃಷ್ಟಾಂತವು ಹೀಗೆ ಅನುಮಾನಪ್ರಯೋಗ. "ಸಾಧಯಿತುಂ

दुःखादिसाधने बाधोऽस्ति न-बुद्धिसाधन इति चेत् । समं प्रकृतेऽपि । नन्वीश्वरेच्छाभावे बाधकाभावादप्रयोजकत्वमनुमानानामिति । मैवम् । महातात्पर्ययुक्तेश्च । यदीश्वरेच्छा न स्यात् । तदा तस्मिन्सर्ववेदानां महातात्पर्यं न स्यादिति बाधकसद्भावात् । इच्छा निष्प्रयोजनेति

— ಪದಾರ್ಥದೀಪಿಕಾ —

ಹೇಗೆ? ದುಃಖ ಮುಂತಾದುದದನ್ನು ಸಾಧನಮಾಡುವುದರಲ್ಲಿ ಬಾಧವು ಬರುತ್ತದೆ, ಆದರೆ ಬುದ್ಧಿ ಸಾಧನದಲ್ಲಿ ಬಾಧವಿಲ್ಲ, ಹೀಗೆ ಹೇಳುವುದಾದರೆ ಇದು ಪ್ರಕೃತದಲ್ಲಿಯೂ ಸಮಾನವಾಗಿದೆ ಇನ್ನು ಈಶ್ವರನ ಇಚ್ಛೆಯು ಇಲ್ಲವೆಂಬ ಪಕ್ಷದಲ್ಲಿ ಬಾಧಕವಿಲ್ಲವಾದುದರಿಂದ ಅನುಮಾನ(ಯುಕ್ತಿ)ಗಳು ಸಾಧ್ಯಸಾಧನದಲ್ಲಿ ಪ್ರಯೋಜಕಗಳಾಗಲಾರವು ಹೀಗೆ ಬಗೆಯಬಾರದು ಏಕೆಂದರೆ- ಮಹಾತಾತ್ಪರ್ಯ ಯುಕ್ತಿಯಿರುತ್ತದ ಈಶ್ವರನಿಗೆ ಇಚ್ಛೆಯು ಇಲ್ಲದಿದ್ದಲ್ಲಿ ಈಶ್ವರನಲ್ಲಿ ಸರ್ವ ವೇದಗಳ ಮಹಾ ತಾತ್ಪರ್ಯವು ಇಲ್ಲದಿರಲೆಂಬ ಬಾಧಕವಿರುತ್ತದೆ. ಇಚ್ಛೆಯು ಪ್ರಯೋಜ

— ವಿಶೇಷಾರ್ಥಪ್ರದೀಪಿಕಾ —

ಶಕ್ಯಂ'' — ಕ್ಷಿತಿಮುಂತಾದುದು ದುಃಖವುಳ್ಳವನಿಂದ ಹುಟ್ಟಿದುದು ಏಕೆಂದರೆ ಕಾರ್ಯವಾಗಿದೆ ಇದರಲ್ಲಿ ಘಟಮುಂತಾದುದು ದೃಷ್ಟಾಂತವು, ಈ ಅನುಮಾನದಿಂದ ಸಾಧನಮಾಡುವುದು ಶಕ್ಯವೆಂದು ಅರ್ಥ "ತ್ಯಕ್ಷ್ಯತೇ"— ಕ್ಷಿತಿಮುಂತಾದುದು ಬುದ್ಧಿಯುಳ್ಳವನಿಂದ ಹುಟ್ಟಿದೆ. ಏಕೆಂದರೆ ಕಾರ್ಯವಾಗಿದೆ'' ಈ ಮುಂತಾದ ಅನುಮಾನವನ್ನು "ಕ್ಷಿತಿಮುಂತಾದುದು ದುಃಖವುಳ್ಳವನಿಂದ ಹುಟ್ಟಿದುದು, ಏಕೆಂದರೆ ಕಾರ್ಯವಾಗಿದೆ" ಎಂಬುದಾಗಿ ಸಾಧಿಸಲು ಶಕ್ಯವೆಂಬ ಅತಿಪ್ರಸಂಗದ ಅಂಜಿಕೆಯಿಂದ ಪರಿತ್ಯಜಿಸುವುದೋ? ''ಸಮಂ"=''ದುಃಖಾದಿ ಸಾಧನದಲ್ಲಿ ಬಾಧವು, ಈಶ್ವರನಿಗೆ ಇಚ್ಛೆಯನ್ನು ಸಾಧನಮಾಡಿದಲ್ಲಿ ಬಾಧವಿಲ್ಲ,'' ಇದು ಹೀಗೆ ಸಮಾನವು

'' ಯದೀಶ್ವರೇಚ್ಛಾ ನ ಸ್ಯಾತ್ ತದಾ ತಸ್ಮಿನ್ ವೇದಾನಾಂ ಮಹಾತಾತ್ಪರ್ಯಂ ನ ಸ್ಯಾತ್ '' ಈ ತರ್ಕದಲ್ಲಿ ಆಪಾದ್ಯಾಪಾದಕಗಳಿಗೆ ಬೇಕಾಗಿರುವ ವ್ಯಾಪ್ತಿಮುಂತಾದುದನ್ನು ಮುಂದೆ ವಿವರಿಸುವೆವು ಬುದ್ಧಿಯಿಂದಲೇ ಸರ್ವಕಾರ್ಯಗಳ ಸಿದ್ಧಿಯಾಗುತ್ತಿರಲು, ಈಶ್ವರನಿಗೆ ಇಚ್ಛೆಯಿದೆ" ಎಂಬುದರ ಅಂಗೀಕಾರವು ವ್ಯರ್ಥವೆಂಬ ಆಶಂಕೆಯನ್ನು ''ಇಚ್ಛಾ" ಇತ್ಯಾದಿವಚನದಿಂದ ತೋರಿಸುತ್ತಾರೆ. ನಿಷ್ಪ್ರಯೋಜನವಾದುದರಿಂದ ಇಚ್ಛೆಯು ಅಂಗೀಕರಿಸಲ್ಪಡತಕ್ಕದ್ದಲ್ಲ ಪ್ರಮೇಯದ ಅಂಗೀಕಾರವು ಪ್ರಯೋಜನದ ಅನುಗುಣ

महातात्पर्ययुक्तेश्च नेच्छामात्रं निषिध्यते ॥

चेत । स्यादेवं यदि प्रयोजनमनुरुध्य कल्प्यते । अन्यतः सिद्धेऽर्थे किं प्रयोजनगवेषणया ।

किञ्चैवं सति बुद्धिरपि नाङ्गीकरणीया । स्वरूपसामर्थ्येनैवेश्वरस्य कर्तृत्वोपपत्तेः । लोकवैरूप्यमिति चेन । तत्किमुदासीनस्य बोद्धुः कर्तृत्वमुपलब्धं लोके । येनानिच्छतोऽपि तदीश्वरस्याङ्गीक्रियते । प्रयत्नवत एव वा कर्तृत्वं भविष्यति । तस्य विषयनियमार्थं बुद्धि-

ಮಹಾತಾತ್ಪರ್ಯಯುಕ್ತಿಯಿರುವುದರಿಂದಲೂ ಈಶ್ವರನಿಗೆ ಇಚ್ಛೆಯೇ (ಯಾವದೇ ಇಚ್ಛೆಯು) ಇಲ್ಲವೆಂದು ಹೇಳಲಿಕ್ಕಾಗದು

— ಪದಾರ್ಥದೀಪಿಕಾ —

ನವಿಲ್ಲದ್ದು, ಹೀಗೆ ಶಂಕಿಸಿದರೆ ಪ್ರಶ್ನೆ— ಪ್ರಯೋಜನವನ್ನನುಸರಿಸಿ ಕಲ್ಪಿಸುವುದಾದರೆ ಹೀಗಾಗಬಹುದು ಆದರೆ ಪ್ರಮಾಣದಿಂದ ಅರ್ಥವು ಸಿದ್ಧವಾಗುತ್ತಿರುವಾಗ ಪ್ರಯೋಜನವನ್ನು ಹುಡುಕುವುದೇಕೆ ? ಇದರಿಂದರೇನು ? ಎಂದು

ಮತ್ತು ಹೀಗಾದಲ್ಲಿ ಬುದ್ಧಿಯನ್ನೂ ಅಂಗೀಕರಿಸತಕ್ಕದ್ದಲ್ಲ ಏಕೆಂದರೆ ಸ್ವರೂಪಸಾಮರ್ಥ್ಯದಿಂದಲೇ ಕರ್ತೃತ್ವವು ಯುಕ್ತವಾಗುತ್ತದೆ ಲೋಕಕ್ಕೆ ಅನನುಗುಣವೆಂದು ಶಂಕಿಸಿದರೆ-ಪ್ರಶ್ನೆ-ಉದಾಸೀನನಾದ (ಏನೂ ಅಪೇಕ್ಷಿಸದ) ಜ್ಞಾನಿಗೆ ಕರ್ತೃತ್ವವಿರುವುದು ಲೋಕದಲ್ಲಿ ಕಂಡಿದೆಯೋ ಹೇಗೆ ? ಎಂದು ಹಾಗೆ ಕಂಡಿದ್ದರೆ ಅದರಿಂದ ಇಚ್ಛೆಯಿಲ್ಲದಿದ್ದರೂ ಅದನ್ನು ಅಂಗೀಕರಿಸಬಹುದಿತ್ತು ಅಥವಾ ಪ್ರಯತ್ನವುಳ್ಳವನಿಗೇ ಕರ್ತೃತ್ವವು ಬರುವುದು ಅದಕ್ಕೆ ವಿಷಯದ ನಿಯಮಕ್ಕಾಗಿ ಬುದ್ಧಿಯನ್ನು ಅಂಗೀಕರಿಸಬೇಕೆಂದು ಶಂಕಿಸಬಾರದು ಏಕೆಂದರೆ-ಇದು

— ವಿಶೇಷಾರ್ಥಪ್ರದೀಪಿಕಾ —

ವಾಗಿ ಅಲ್ಲ, ಆದರೆ ಪ್ರಮಾಣದ ಬಲದಿಂದ ಈಶ್ವರನಿಗೆ ಇಚ್ಛೆಯಿದೆಯೆಂಬಲ್ಲಿ ಆ ಪ್ರಮಾಣವನ್ನು ನಾವು ಹಿಂದೆ ತೋರಿಸಿದ್ದೇವೆ ಹೀಗೆ ಇಲ್ಲಿ ಸಮಾಧಾನದ ಅಭಿಪ್ರಾಯವು

'ಉದಾಸೀನಸ್ಯ" -ಇಚ್ಛೆಯು ಇಲ್ಲದವನಿಗೆ

ನಿಷ್ಫಲವೆಂಬ ಕಾರಣದಿಂದ ಇಚ್ಛೆಯನ್ನು ನಿರಾಕರಿಸಿದಲ್ಲಿ ಬುದ್ಧಿಪ್ರಯತ್ನಗಳೆರಡೂ ಈಶ್ವರನಿಗೆ ಇಲ್ಲದಿರಲಿ ಹೀಗೆ ಆಪಾದನಮಾಡಲಾಗಿತ್ತು. ಈಗ,

श्र्य्येति चेन्न । बुद्धिवत्स्वतो विषयप्रवणतोपपत्तेः । तथात्वे बुद्धितो भेदो न स्यादिति चेन्न । बुद्धित्वादिनैव तदुपपत्तेः । अन्यथा परोपाधिकविषयप्रवणत्वयोरिच्छाप्रयत्नयोरपि भेदो न स्यात । (इति चेत्) विषयनियमार्थमिति च कोऽर्थः । किं विषयविशेषसम्बद्धतयोत्पादनार्थम् । उतोत्पन्नस्य स्थितस्यैव वा तत्सम्बन्धार्थम् । अथ तज्ज्ञा-

— ಪದಾರ್ಥದೀಪಿಕಾ —

ಬುದ್ಧಿಯು ಹಾಗೆ ಸ್ವತಃ ವಿಷಯವನ್ನು ವಿಷಯೀಕರಿಸಬಹುದು ಹಾಗಾದರೆ ಬುದ್ಧಿಯಿಂದ ಭೇದವಿಲ್ಲದ್ದಾಗಲೆಂದು ಶಂಕಿಸಬಾರದು ಏಕೆಂದರ ಬುದ್ಧಿತ್ವ ಮುಂತಾದುದರಿಂದಲೇ ಭೇದವು ಸಂಭವಿಸುತ್ತದೆ ಇಲ್ಲದಿದ್ದಲ್ಲಿ ಎರಡನೆಯ ಉಪಾಧಿಯ ಮೂಲಕವಾಗಿ ವಿಷಯವನ್ನು ವಿಷಯೀಕರಿಸುವ ಇಚ್ಛಾ ಪ್ರಯತ್ನಗಳಲ್ಲಿಯೂ ಭೇದವಿಲ್ಲದಿರಲಿ ! ಮತ್ತು "ವಿಷಯದ ನಿಯಮಾರ್ಥವಾಗಿ" ಎಂದರೇನು ಅರ್ಥ ? ವಿಷಯವಿಶೇಷದ ಸಂಬಂಧವುಳ್ಳದ್ದನ್ನಾಗಿ ಈಶ್ವರನ ಪ್ರಯತ್ನವನ್ನು ಹುಟ್ಟಿಸುವುದಕ್ಕಾಗಿಯೆಂದು ಅರ್ಥವೋ ? ಅಥವಾ ಉತ್ಪನ್ನವಾದ ಇಲ್ಲವೆ ಸ್ಥಿತವೇ ಆಗಿರುವ ಈಶ್ವರ ಪ್ರಯತ್ನಕ್ಕೆ ವಿಷಯ ವಿಶೇಷದ ಸಂಬಂಧವಾಗುವುದಕ್ಕಾಗಿ" ಎಂದು ಅರ್ಥವೋ ? ಅಥವಾ ಪ್ರಯತ್ನದ ಬಗ್ಗೆ ವಿಷಯ ವಿಶೇಷದ ಸಂಬಂಧದ ಜ್ಞಾನದ ಸಲುವಾಗಿ ಎಂಬ ಅರ್ಥವೋ ?

— ವಿಶೇಷಾರ್ಥಪ್ರದೀಪಿಕಾ —

ಪ್ರಯತ್ನವನ್ನು ಒಪ್ಪಿ, ಬುದ್ಧಿಯನ್ನು ' ಪ್ರಯತ್ನವತೆ " ಈ ವಾಕ್ಯದಿಂದ ನಿರಾಕರಿಸುತ್ತಾರೆ

"ಪರೋಪಾಧಿಕವಿಷಯಪ್ರವಣತ್ವಯೋಃ"– 'ಪರೋಪಾಧಿಕಂ ವಿಷಯ ಪ್ರವಣತ್ವಂ ಯಯೋಃ" ಎಂಬುದಾಗಿ ಬಹುವ್ರೀಹಿ ಸಮಾಸವು " ಪರ'– ಜ್ಞಾನವು ಅಂದರೆ ಬುದ್ಧಿಯು ಅಧೀನವಾದ ವಿಷಯ ವಿಷಯೀಕರಣವುಳ್ಳವುಗಳು, ಹೀಗೆ ಅರ್ಥ ಬುಧ್ಯಧೀನವಾದ ವಿಷಯದ ವಿಷಯೀಕರಣ ಮಾಡುವುದೆಂಬುದು ಸಮಾನವಿದ್ದರೂ ಇಚ್ಛಾತ್ವಾದಿ ಮೂಲಕವಾಗಿ ಭೇದವಿದೆ ಅದರಂತೆ " ಬುದ್ಧಿತ್ವ " ಮುಂತಾದ ಜಾತಿಮೂಲಕವಾಗಿಯೇ ಭೇದವು ಸಂಭವಿಸುತ್ತದೆ ಹೀಗೆ ಭಾವ

"ತಜ್ಞಾನಾರ್ಥಂ" –ವಿಷಯ ಸಂಬಂಧವುಳ್ಳದ್ದಾಗಿ ಪ್ರಯತ್ನದ ಜ್ಞಾನವಾಗುವುದಕ್ಕೋಸುಗ, "ಅನಾದಿತ್ವಾತ್" – ಈಶ್ವರ ಪ್ರಯತ್ನವು ಅನಾದಿಯಾದುದ

नार्थम् । नाद्यः । अनादित्वात् । सादित्वेऽपि कारणसापेक्षतया बुद्धेरपि परतो विषयप्रवणतापत्तेः । न द्वितीयः । पौर्वापर्याभावात् । न हि प्रयत्न उत्पद्य स्थित्वा वा पश्चाद्विषयेण सम्बध्यते । न तृतीयः । स्वरूपग्राहकप्रमाणेनैव तद्ग्रहणात् । बुद्धेरपि परापेक्षाप्रसङ्गाच्चेति ।

— ಪದಾರ್ಥದೀಪಿಕಾ —

ಮೊದಲನೆಯ ಪಕ್ಷವು ಸರಿಯಲ್ಲ. ಏಕೆಂದರೆ– ಅನಾದಿಯಾಗಿರುತ್ತದೆ ಸಾದಿಯಾಗಿದ್ದರೂ ಕಾರಣಸಾಪೇಕ್ಷವಾದುದರಿಂದ ಬುದ್ಧಿಗೂ ಇನ್ನೊಂದರಿಂದ ವಿಷಯವನ್ನು ಗ್ರಹಿಸುವುದು ಬರಬೇಕಾಗುವದು. ಎರಡನೆಯ ಪಕ್ಷವೂ ಸರಿಯಲ್ಲ ಏಕೆಂದರೆ–– ಪೌರ್ವಾಪರ್ಯವಿರುವುದಿಲ್ಲ. ಏಕೆಂದರೆ ಪ್ರಯತ್ನವು ಮೊದಲು ಹುಟ್ಟಿ ಇಲ್ಲವೆ ಸ್ಥಿತವಾಗಿದ್ದು ಅನಂತರ ವಿಷಯದೊಡನೆ ಸಂಬಂಧ ಹೊಂದುವುದಿಲ್ಲ ಮೂರನೆಯ ಪಕ್ಷವು ಸರಿಯಲ್ಲ ಏಕಂದರೆ ಸ್ವರೂಪವನ್ನು ಗ್ರಹಿಸುವ ಪ್ರಮಾಣಗಳಿಂದಲೇ ಅದರ ಗ್ರಹಣವಾಗುತ್ತದೆ ಮತ್ತು ಬುದ್ಧಿಗೂ ಪರಾಪೇಕ್ಷೆಯ ಪ್ರಸಂಗವು ಬರುತ್ತದೆ.

— ವಿಶೇಷಾರ್ಥಪ್ರದೀಪಿಕಾ —

ರಿಂದ, ಅಲ್ಲಿ ವಿಷಯ ವಿಶೇಷಸಂಬದ್ಧವಾಗಿ ಹುಟ್ಟುವಿಕೆಯೇ ಇಲ್ಲವಾದುದರಿಂದ, ಅದರ ಸಲುವಾಗಿ ಬುದ್ಧಿಯು ಬೇಕಿಲ್ಲ "ಸಾದಿತ್ವೇಪಿ" –ಈಶ್ವರನ ಪ್ರಯತ್ನವು "ಸಾದಿ"ಯೆಂದು ಒಪ್ಪಿ, ಸಾದಿಯಾದುದಕ್ಕೆ ಕಾರಣಾಪೇಕ್ಷೆಯಿರುವುದರಿಂದ, ವಿಷಯವಿಶೇಷ ಸಂಬದ್ಧವಾಗಿ ಹುಟ್ಟುವುದಕ್ಕೆ ಬುದ್ಧಿಯು ಬೇಕಾಗುವುದರಿಂದ ಬುದ್ಧಿಯನ್ನು ಅಂಗೀಕರಿಸುವದು, ಹೀಗೆ ಹೇಳಿದರ– ಈಶ್ವರನ ಗುಣವಾಗಿರುವುದೆಂಬುದು ಸಮಾನವಾದುದರಿಂದ, ಬುದ್ಧಿಯು ಸಾದಿಯಾಗಲಿ! ಸಾದಿಯಾದ ಆ ಬುದ್ಧಿಗೆ ಕಾರಣಾಪೇಕ್ಷೆಯು ಇರುವುದರಿಂದ ವಿಷಯವಿಶೇಷ ಸಂಬದ್ಧವಾಗಿ ಹುಟ್ಟಲು, ಆವಶ್ಯಕವಾದ ಸನ್ನಿಕರ್ಷ ಮುಂತಾದ ಯಾವದೋ ಒಂದು ಕಾರಣವನ್ನು ಅಂಗೀಕರಿಸಬೇಕಾಗುವದು ಆದುದರಿಂದ ಪ್ರಯತ್ನದ ಹಾಗೆ ಬುದ್ಧಿಗೂ ಇನ್ನೊಂದು ಉಪಾಧಿಯ ಮೂಲಕ ವಿಷಯಪ್ರವಣತೆಯು ಬರಲಿ! ಹೀಗೆ ಅರ್ಥ

"ನದ್ವಿತೀಯಃ" –ಈಶ್ವರನ ಪ್ರಯತ್ನ ಹಾಗು ವಿಷಯ ಸಂಬಂಧ ಇವುಗಳಲ್ಲಿ ಪೌರ್ವಾಪರ್ಯವಿಲ್ಲವೆಂದು ಇಲ್ಲಿ ಭಾವ ಅದನ್ನು "ನಹಿ" ಇತ್ಯಾದಿವಾಕ್ಯಗಳಿಂದ ಉಪಪಾದಿಸುತ್ತಾರೆ.

"ಸ್ವರೂಪಗ್ರಾಹಕ ಪ್ರಮಾಣೇನೈವ ತದ್ಗ್ರಹಣಾತ್"=ಪ್ರಯತ್ನದ ಸ್ವರೂಪ

महातात्पर्ययुक्तेश्चेति यदुक्तं तदसत् । यदीश्वरो नेच्छावान्स्यात् तदा श्रुतिमहातात्पर्यविषयो न स्यादित्यत्र व्याप्त्यभावात् । इच्छा-रहितस्यापि धर्मादेस्तत्तच्छास्त्रमहातात्पर्यविषयत्वदर्शनात् । आपाद्य-स्यानिष्टत्वाभावाच्चेत्यत उक्तं विवृणोति ॥ मोक्षार्था इति । यस्मात्का-रणात्सर्वा अपि श्रुतयो मोक्षार्था मोक्षप्रयोजनास्तस्मात्तदभावे पर-

— ಪದಾರ್ಥದೀಪಿಕಾ —

"ಮಹಾತಾತ್ಪರ್ಯ ಯುಕ್ತಿ ಇರುವುದರಿಂದ" ಎಂದು ಹೇಳಿದುದು ಅಯುಕ್ತವು ಏಕೆಂದರೆ- ಈಶ್ವರನು ಇಚ್ಛೆಯುಳ್ಳವನಾಗಿರದಿದ್ದರೆ ಶ್ರುತಿಯ ಮಹಾತಾತ್ಪರ್ಯಕ್ಕೆ ವಿಷಯನಾಗಲಾರನೆಂಬಲ್ಲಿ ವ್ಯಾಪ್ತಿಯು ಇಲ್ಲ ಏಕಂದರೆ ಇಚ್ಛೆಯಿಂದ ರಹಿತವಾದ ಧರ್ಮಾದಿಗಳಿಗೂ ಸಹ ಆಯಾಯ ಶಾಸ್ತ್ರದ ಮಹಾತಾತ್ಪರ್ಯ ವಿಷಯತ್ವವು ಕಂಡಿರುತ್ತದೆ ಮತ್ತು ಆಪಾದ್ಯವು ಅನಿಷ್ಟವಾಗಿರುವುದಿಲ್ಲ, ಈ ಆಶಂಕೆಯನ್ನು ಕಳೆಯಲು ಹಿಂದೆ ಹೇಳಿದುದನ್ನು 'ಮೋಕ್ಷಾರ್ಥಾಃ" ಇತ್ಯಾದಿ ವಚನದಿಂದ ವಿವರಿಸುತ್ತಾರೆ ಯಾವ ಕಾರಣದಿಂದ ಎಲ್ಲ ಶ್ರುತಿಗಳು

— ವಿಶೇಷಾರ್ಥಪ್ರದೀಪಿಕಾ —

ವನ್ನು ಗ್ರಹಿಸುವ ಪ್ರಮಾಣದಿಂದಲೇ ವಿಷಯ ಸಂಬಂಧವುಳ್ಳದ್ದಾಗಿಯೂ ಪ್ರಯತ್ನದ ಜ್ಞಾನವು ಸಂಭವಿಸುವದರಿಂದ, ಇದಕ್ಕಾಗಿ ಬುದ್ಧಿಯು ಬೇಕೆನಿಸುವದಿಲ್ಲ ಹೀಗೆ ಭಾವ. ವಿಷಯಸಂಬದ್ಧವಾಗಿ ಪ್ರಯತ್ನದ ಜ್ಞಾನವಾಗಲು ಬುದ್ಧಿಯನ್ನು ಅಂಗೀಕರಿಸಿದರೆ ವಿಷಯ ಸಂಬದ್ಧವಾಗಿ ಬುದ್ಧಿಯ ಜ್ಞಾನವಾಗಲು ಇನ್ನೊಂದರ ಅಪೇಕ್ಷೆಯು ಆಗಲಿ! ಇನ್ನು ಬುದ್ಧಿಯ ಸ್ವರೂಪಗ್ರಾಹಕ ಪ್ರಮಾಣದಿಂದ (ಸಾಕ್ಷಿ) ವಿಷಯವಿಶೇಷಸಂಬದ್ಧವಾಗಿ ಬುದ್ಧಿಯ ಜ್ಞಾನವಾಗುವುದೆಂದು ಹೇಳಿದರೆ ಈ ಮಾತು ಪ್ರಯತ್ನದಲ್ಲಿಯೂ ಸಮಾನವು; ಸಾಕ್ಷಿಯಿಂದಲೇ ವಿಷಯಸಂಬದ್ಧವಾಗಿ ಪ್ರಯತ್ನದ ಜ್ಞಾನವಾಗುತ್ತದ ಆದುದರಿಂದ ಬುದ್ಧಿಯು ಬೇಕೆನಿಸುವುದಿಲ್ಲ ಈ ವಿಷಯವನ್ನು "ಬುದ್ಧೇರಪಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

"ತಚ್ಛಾಸ್ತ್ರ ಮಹಾತಾತ್ಪರ್ಯವಿಷಯತ್ವದರ್ಶನಾತ್"- ಸಾಂಖ್ಯಶಾಸ್ತ್ರ ತಾತ್ಪರ್ಯ ವಿಷಯತ್ವವು ಯೋಗಕ್ಕೂ ಧರ್ಮಶಾಸ್ತ್ರದ ತಾತ್ಪರ್ಯವಿಷಯತ್ವವು ಧರ್ಮಕ್ಕೂ ವ್ಯಾಕರಣಶಾಸ್ತ್ರದ ವಿಷಯತ್ವವು ಶಬ್ದಕ್ಕೂ ಕಂಡಿರುತ್ತದೆ. ಹೀಗೆ ಅರ್ಥ.

मोक्षार्थ· श्रुतयो यस्मात्स च तस्य प्रसादत ॥
उन्निनीषतिवाक्याच्च लोकदृष्ट्यानुसारतः ॥

मेश्वरस्येच्छाभावे तत एव मोक्षार्थताभावे श्रुतिस्तत्र महातात्पर्य-रहिता स्यात् । तथा च कथं प्रमाणत्वं गमिष्यतीति योजना । मोक्षार्थत्वे किमीश्वरस्येच्छयेत्यत उक्तं स चेति । स च मोक्षस्तस्ये-श्वरस्य प्रसादतो यस्मात्तस्मात्तदभाव इति सम्बन्धः । तथाऽपीश्वरस्य

ಯಾವ ಕಾರಣದಿಂದ, ಶ್ರುತಿಗಳೆಲ್ಲ ಮೋಕ್ಷಾರ್ಥವಾಗಿ ಹೊರಟಿವೆಯೋ, ಹಾಗು ಮೋಕ್ಷವಾದರೂ ಪರಮೇಶ್ವರನ ಪ್ರಸಾದದಿಂದಲೇ ಸಾಧ್ಯವಾಗುವದೋ ಮತ್ತು ಆ ಪ್ರಸಾದವಾದರೋ ಅವನ ಇಚ್ಛೆಯೇ ನಿಮಿತ್ತವಾಗಿಯುಳ್ಳದ್ದೋ ಈ ಕಾರಣದಿಂದ, ಲೋಕದಲ್ಲಿ ಕಂಡು ಬಂದ ವ್ಯಾಪ್ತಿ ಮುಂತಾದುದನ್ನುಳ್ಳ ಯುಕ್ತಿ

## — ಪದಾರ್ಥದೀಪಿಕಾ —

"ಮೋಕ್ಷಾರ್ಥಾಃ"= ಮೋಕ್ಷವೆಂಬ ಪ್ರಯೋಜನವುಳ್ಳವುಗಳೋ ಆ ಕಾರಣದಿಂದ "ತದಭಾವೇ"- ಪರಮೇಶ್ವರನಿಗೆ ಇಚ್ಛೆಯು ಇಲ್ಲವಾದರೆ, ಅದರಿಂದಲೇ ಮೋಕ್ಷಾರ್ಥತೆಯು ಇಲ್ಲವಾಗಿರುವುದರಿಂದ, ಶ್ರುತಿಯು ಪರಮೇಶ್ವರನ ವಿಷಯದಲ್ಲಿ ಮಹಾತಾತ್ಪರ್ಯವಿಲ್ಲದ್ದಾಗಲಿ! ಆದುದರಿಂದ ಅದು ಹೇಗೆ ಪ್ರಾಮಾಣ್ಯವನ್ನು ಹೊಂದೀತು ? (ಕಥಂ ಪ್ರಮಾಣತಾಂ ಗಚ್ಛೇತ್) ಹೀಗೆ ಅನ್ವಯವನ್ನು ಮಾಡಬೇಕು ಮೋಕ್ಷಪ್ರಯೋಜನವುಳ್ಳದ್ದಾಗುವುದರಲ್ಲಿ ಈಶ್ವರನ ಇಚ್ಛೆಯು ಏಕೆ ? ( ಅದರಿಂದೇನು ) ಎಂಬ ಪ್ರಶ್ನೆಯ ಉತ್ತರವನ್ನು ಹೇಳಲು "ಸ ಚ" ಎಂಬುದಾಗಿ ಹೇಳಿದ್ದಾರೆ "ಸ ಚ"= ಆ ಮೋಕ್ಷವಾದರೋ, "ತಸ್ಯ"= ಆ ಪರಮಾತ್ಮನ "ಪ್ರಸಾದತಃ"= ಪ್ರಸಾದದಿಂದ ಆಗುತ್ತದೆ ಈ ಕಾರಣದಿಂದ "ತದಭಾವೇ"=(ಆ ಪರಮೇಶ್ವರನ ಇಚ್ಛೆಯು ಇಲ್ಲದಿದ್ದಲ್ಲಿ) ಎಂಬುದಾಗಿ ಯೋಜನೆಯನ್ನು ತಿಳಿಯಬೇಕು ಆದರೂ- ಈಶ್ವರನ ಪ್ರಸಾದವು ಬೇಕು ಆದರೆ

## — ವಿಶೇಷಾರ್ಥಪ್ರದೀಪಿಕಾ —

"ತದಭಾವೇ" ಎಂಬಲ್ಲಿ "ತತ್" ಪದವು ವ್ಯಸ್ತವೂ ಸಮಸ್ತವೂ ಆಗಿದೆಯೆಂದು ಒಪ್ಪಿ ಇಲ್ಲವೆ ಯತ್, ತತ್ ಶಬ್ದಗಳಿಗೆ ನಿತ್ಯಸಂಬಂಧವಿರುವುದರಿಂದ, "ತಸ್ಮಾತ್" ಎಂಬುದಾಗಿ ಹೇಳಿದ್ದಾರೆ "ತದಭಾವೇ" ಎಂಬಲ್ಲಿ ಎರಡು ಅರ್ಥಗಳನ್ನು "ಪರಮೇಶ್ವರೇಚ್ಛಾಭಾವೇ" ಇತ್ಯಾದಿವಾಕ್ಯಗಳಿಂದ ಹೇಳಿದ್ದಾರೆ.

इच्छानिमित्तको यस्मात्तदभावे कुतः श्रुतिः ॥
महातात्पर्यरहिता प्रमाणत्वं गमिष्यति ॥

प्रसादेन भाव्यं किमिच्छयेत्यतः प्रसादत इत्येतद्व्याख्यातमिच्छा-निमित्तक इति । ईश्वरज्ञानादेव मोक्षसिद्धेः किं तत्प्रसादेनेत्यत उक्तं लोकेति । विमतो बन्धमोक्षः प्रभुप्रसादसाध्यो मोक्षत्वात् । शृङ्खला-मोक्षवदित्यादिलोकदृष्टव्याप्त्युपेतानुमानानुसारत इत्यर्थः । न केवल-मनुमानात्किन्त्वागमादपीत्युक्तमुन्निनीषतीति । एष ह्येव साधुकर्म कार-यति । तं यमेभ्यो लोकेभ्य उन्निनीषत इति वाक्याच्च । अत्र कर्मे

ಯಿಂದಲೂ, "ಉನ್ನಿನೀಷತ" ಇತ್ಯಾದಿ ಆಗಮಗಳಿಂದಲೂ ಸಿದ್ಧಿಸುವ ಆ ಇಚ್ಛೆಯು ಇಲ್ಲದಿದ್ದರೆ, ಮಹಾತಾತ್ಪರ್ಯವಿಲ್ಲದ ಶ್ರುತಿಯು ಪ್ರಾಮಾಣ್ಯವನ್ನು ಹೇಗೆ ಪಡೆಯುತ್ತದೆ ?

— ಪದಾರ್ಥದೀಪಿಕಾ —

ಇಚ್ಛೆಯು ಏಕೆ ? ಎಂಬ ಪ್ರಶ್ನೆಯನ್ನು ಉತ್ತರಿಸಲು "ಪ್ರಸಾದತಃ" ಎಂಬುದನ್ನು 'ಇಚ್ಛಾನಿಮಿತ್ತತಃ" ಎಂಬ ವಚನದಿಂದ ವ್ಯಾಖ್ಯಾನಿಸಿದ್ದಾರೆ ಈಶ್ವರನ ಜ್ಞಾನದಿಂದಲೇ ಮೋಕ್ಷಸಿದ್ಧಿಯಾಗುವುದರಿಂದ ಪ್ರಸಾದದಿಂದೇನು ಪ್ರಯೋಜನವೆಂಬ ಆಶಂಕೆಯನ್ನು ಕಳೆಯಲು 'ಲೋಕ" ಇತ್ಯಾದಿ ವಚನವನ್ನು ಹೇಳಿದ್ದಾರ "ಲೋಕದೃಷ್ಟಾನುಸಾರತಃ"– "ವಿಮತವಾದ ಮೋಕ್ಷವು ಪ್ರಸಾದದಿಂದ ಸಾಧ್ಯವಾಗುವಂತಹದು ಏಕೆಂದರೆ ಮೋಕ್ಷವಾಗಿದೆ ಇದರಲ್ಲಿ ಶೃಂಖಲಾ–( ಸಿಗಡ–ಬೇಡಿ ) ಮೋಕ್ಷವು ದೃಷ್ಟಾಂತವು " ಈ ಮಂತಾಗಿರುವ ಲೋಕದೃಷ್ಟವಾದ ವ್ಯಾಪ್ತ್ಯಾದಿಗಳುಳ್ಳ ಅನುಮಾನದ ಅನುಸಾರವಾಗಿ," ಎಂದು ಅರ್ಥ " ಕೇವಲ ಅನುಮಾನದಿಂದಲ್ಲ ಆಗಮದಿಂದಲೂ, " ಎಂಬುದನ್ನು "ಉನ್ನಿನೀಷತೇ" ಇತ್ಯಾದಿ ವಚನದಿಂದ ಹೇಳಿದ್ದಾರೆ "ಏಷ ಹ್ಯೇವ ಸಾಧು ಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯೋ ಉನ್ನಿನೀಷತೇ" ಇತ್ಯಾದಿ ವಾಕ್ಯಗಳ

— ವಿಶೇಷಾರ್ಥಪ್ರದೀಪಿಕಾ —

'ಕರ್ಮೇತ್ಯುಪಲಕ್ಷಣಂ'—''ಪ್ರಬೋಧಯತಿ' ಎಂಬುದಾಗಿ ಈಶ್ವರಜ್ಞಾನಕ್ಕೂ ಸಂಗ್ರಾಹಕವೆಂದು ತಿಳಿಯಬೇಕು ಏಕೆಂದರೆ ಮುಕ್ತಿಗೆ ಕಾರಣವಾದ ಪ್ರಸಾದವನ್ನು ಕುರಿತು ಕಾರಣತ್ವವು ಕರ್ಮಕ್ಕೆ ಇರುವುದಿಲ್ಲ ಹೀಗೆ ಭಾವ.

त्युपलक्षणम् । उन्निनीषते ऊर्ध्वं नेतुमिच्छति । यद्वा प्रसादशब्देने-च्छोच्यत इत्यत्र वाक्यमेतज्ज्ञापकम् । लोकदृष्ट्यनुसारत इत्येतदप्य-स्यैवार्थस्य ज्ञापकमुक्तम् । श्रुतय इत्युपक्रम्य श्रुतिरित्येकवचनं कैमुत्यार्थम् । एकमपि वाक्यं न तत्र महातात्पर्यवत्स्यात् । किमुत सर्वाः श्रुतय इति ।

एतदुक्तं भवति । शास्त्रं हि साध्यसाधनभाववद्विषयप्रयोजन-वत्तया व्याप्तम् । तत्र श्रुतीनां मोक्ष एव प्रयोजनम् । तेषां दुःखप्रहाणाय श्रुतिरेषा प्रवर्तत इति वचनात् । मोक्षादन्यत्रात्यन्तिक-दुःखप्रहाणायोगात् । स्वर्गादिप्रयोजनं भवदप्यवान्तरमेव न प्रधानम् ।

— ಪದಾರ್ಥದೀಪಿಕಾ —

ರುವುದರಿಂದಲೂ ಇಲ್ಲಿ "ಕರ್ಮ" ಎಂಬುದು ಸಂಗ್ರಾಹಕವಾಗಿದೆ ಉನ್ನಿನೀ ಷತೇ"= ಮೇಲಕ್ಕೆ ತರಲು ಇಚ್ಛಿಸುತ್ತಾನೆ ಅಥವಾ– "ಪ್ರಸಾದ" ಶಬ್ದದಿಂದ ಇಚ್ಛೆಯೆಂಬ ಅರ್ಥವು ಹೇಳಲ್ಪಡುತ್ತದೆಂಬಲ್ಲಿ ಈ ವಾಕ್ಯವು ಜ್ಞಾಪಕವಾಗಿದೆ ಲೋಕದೃಷ್ಟ್ಯನುಸಾರತಃ" ಎಂಬೀ ವಚನವೂ ಇದೇ ಅರ್ಥಕ್ಕೆ ಜ್ಞಾಪಕವು ಹೇಳಲ್ಪಟ್ಟಿದ "ಶ್ರುತಯಃ" ಎಂದು ಪ್ರಾರಂಭಿಸಿ, ಅನಂತರ "ಶ್ರುತಿಃ" ಎಂದು ಏಕವಚನವನ್ನು ಪ್ರಯೋಗಿಸಿದುದು "ಒಂದೂ ವಾಕ್ಯವು ಪರಮೇಶ್ವರನಲ್ಲಿ ಮಹಾತಾತ್ಪರ್ಯವುಳ್ಳದ್ದಲ್ಲವೆಂದಾಗ ಸರ್ವಶ್ರುತಿಗಳು ಮಹಾತಾತ್ಪರ್ಯವುಳ್ಳವು ಗಳಲ್ಲವೆಂಬುದನ್ನೇನು ಹೇಳಬೇಕು" ಎಂಬ ಕೈಮುತ್ಯಾರ್ಥವನ್ನು ತೋರಿಸಲು

ಇಲ್ಲಿ ಹೇಳಿದುದು ಇದು–"ಶಾಸ್ತ್ರವು ಸಾಧ್ಯಸಾಧನ ಭಾವವುಳ್ಳ ವಿಷಯ ಪ್ರಯೋಜನವತ್ತ್ವದಿಂದ ವ್ಯಾಪ್ತವಾದುದು ಹೀಗಿರುವಾಗ, ಶ್ರುತಿಗಳಿಗೆ ಮೋಕ್ಷವೇ ಪ್ರಯೋಜನವು ಏಕೆಂದರೆ "ತೇಷಾಂ ದುಃಖ ಪ್ರಹಾಣಾಯ ಶ್ರುತಿ ರೇಷಾ ಪ್ರವರ್ತತೇ" ಎಂಬುದಾಗಿ ವಚನವಿರುತ್ತದೆ. ಮೋಕ್ಷವನ್ನು ಬಿಟ್ಟು ಬೇರೆ ಕಡೆಗಳಲ್ಲಿ ಆತ್ಯಂತಿಕ ದುಃಖ ನಿವೃತ್ತಿಯು ಸಂಭವಿಸುವುದಿಲ್ಲ ಸ್ವರ್ಗಾ ದಿಗಳು ಪ್ರಯೋಜನವಾಗುವುದಾದರೂ ಅವಾಂತರ ಪ್ರಯೋಜನಗಳೇ ಹೊರತು

— ವಿಶೇಷಾರ್ಥಪ್ರದೀಪಿಕಾ —

ಲಕ್ಷಣಾ ಪಕ್ಷದಲ್ಲಿ ದೋಷವೆಂದು ಬಗೆದು "ಯದ್ವಾ" ಎಂಬ ವಚನದಿಂದ ಪಕ್ಷಾಂತರವನ್ನು ಹೇಳುತ್ತಾರೆ.

विषयस्तु परमेश्वर एव । सर्वे वेदा यत्पदमामनन्तीत्यादिवचनात् । धर्मादिकं त्ववान्तरप्रतिपाद्यम् । अभिप्रेतप्रयोजनसाधनं च विषयतामश्नुते । न च धर्मादिकं मोक्षसाधनम् । पुण्यार्जितो लोकः क्षीयत इति श्रुतेः । अतो भगवत्येव मोक्षसाधनत्वात्सर्वश्रुतीनां महातात्पर्यम् । न चाव्यापृतात्साधनात्फलसिद्धिः । व्यापारश्च प्रसाद एव । न तु श्रुतिजनितं तज्ज्ञानं साक्षात्कारो वा । यस्य प्रसादादित्यादिवाक्यादुक्तानुमानाच्च । ज्ञानं तु प्रसादसाधनमिति न सम्बन्धानुप-

— ಪದಾರ್ಥದೀಪಿಕಾ —

ಪ್ರಧಾನ ಪ್ರಯೋಜನವಲ್ಲ ಶ್ರುತಿಗಳಿಗೆ ವಿಷಯವಾದರೋ ಪರಮೇಶ್ವರನೇ! "ಏಕೆಂದರೆ "ಸರ್ವೇ ವೇದಾಃ ಯತ್ಪದಮಾಮನಂತಿ" ಈ ಮುಂತಾದ ವಚನಗಳಿರುವುದರಿಂದ ಧರ್ಮ ಮುಂತಾದುದಂತೂ ಅವಾಂತರ ಪ್ರತಿಪಾದ್ಯ- ವಿಷಯವು ಮತ್ತು ಅಭಿಪ್ರೇತವಾದ ಪ್ರಯೋಜನದ ಸಾಧನವಾದುದೇ ವಿಷಯವಾಗುತ್ತದೆ ಧರ್ಮ ಮುಂತಾದುವಾದರೋ ಮೋಕ್ಷಸಾಧನವಲ್ಲ ಏಕೆಂದರೆ- 'ಪುಣ್ಯಾರ್ಜಿತೋ ಲೋಕಃ ಕ್ಷೀಯತೇ" ಎಂಬುದಾಗಿ ಶ್ರುತಿಯು ಇರುತ್ತದೆ ಆದುದರಿಂದ, ಭಗವಂತನಲ್ಲಿಯೇ- ಅವನು ಮೋಕ್ಷಸಾಧನನಾದುದರಿಂದ ಸರ್ವಶ್ರುತಿಗಳಿಗೆ ಮಹಾತಾತ್ಪರ್ಯವಿರುತ್ತದೆ ಇನ್ನು ವ್ಯಾಪಾರರಹಿತವಾದ ಸಾಧನದಿಂದ ಫಲವು ಸಿದ್ಧಿಸುವುದಿಲ್ಲ ಅವನ ವ್ಯಾಪಾರವಾದರೋ ಪ್ರಸಾದವೇ! ಹೊರತು, ಶ್ರುತಿಯಿಂದುಂಟಾದ ಭಗವಜ್ಞಾನವಾಗಲೀ ಸಾಕ್ಷಾತ್ಕಾರವಾಗಲೀ ವ್ಯಾಪಾರವಲ್ಲ ಏಕೆಂದರೆ "ಯಸ್ಯ ಪ್ರಸಾದಾತ್" ಇತ್ಯಾದಿ ವಾಕ್ಯಗಳೂ ಹಿಂದೆ ಹೇಳಿದ ಅನುಮಾನವೂ ಪ್ರಮಾಣಗಳಾಗಿವೆ ಜ್ಞಾನವಾದರೋ ಪ್ರಸಾದದ

— ವಿಶೇಷಾರ್ಥಪ್ರದೀಪಿಕಾ —

"ಸಾಧ್ಯಸಾಧನಭಾವ" ಇಲ್ಲಿ ಯಥಾ ಕ್ರಮವಾಗಿ ಅನ್ವಯವಿಲ್ಲ ಯಥಾಯೋಗ್ಯವಾಗಿ (ತಕ್ಕಂತೆ) ಅನ್ವಯವಿದೆ

"ಉಕ್ತಾನುಮಾನಾಚ್ಚ" — "ವಿಮತಃ ಬಂಧಮೋಕ್ಷಃ, ಪ್ರಭುಪ್ರಸಾದ ಸಾಧ್ಯಃ ಮೋಕ್ಷತ್ವಾತ್, ಶೃಂಖಲಾಮೋಕ್ಷವತ್'' ಹೀಗೆ ಹೇಳಿದ ಅನುಮಾನದಿಂದ

ಪ್ರಸಾದವು ಶಾಸ್ತ್ರಪ್ರಯೋಜನ (ಮುಕ್ತಿ)ದ ಸಾಧನವಾದುದರಿಂದ, ಶಾಸ್ತ್ರಸಾಧ್ಯವಾದ ಮುಕ್ತಿಸಾಧನ ಜ್ಞಾನವಿಷಯತ್ವವು ಬರಲಿಲ್ಲವೆಂಬ ಆಶಂಕೆಯನ್ನು "ಜ್ಞಾನಂ ತು" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ.

पत्तिः । प्रसादो नामेच्छाविशेषः । तथा सत्युन्निनीषते, तदिच्छया यतो ह्यस्य बन्धमोक्षौ प्रतिष्ठिताविल्यादिश्रुतिभिर्यस्य प्रसादादिति श्रुतेरैकार्थ्यलाभात् । प्रसन्नोऽस्मीति प्रतीतौ परोपचिकीर्षाया एव

— ಪದಾರ್ಥದೀಪಿಕಾ —

ಸಾಧನವಾದುದರಿಂದ ಸಂಬಂಧವು ಕೂಡುವುದಿಲ್ಲವೆಂಬ ದೋಷವಿಲ್ಲ ಪ್ರಸಾದವೆಂದರೆ ಅದೊಂದು ಪರಮಾತ್ಮನ ಇಚ್ಛಾವಿಶೇಷವು ಏಕೆಂದರೆ ಹಾಗಾದಲ್ಲಿ "ಉನ್ನಿನೀಷತೇ, ತದಿಚ್ಛಯಾ ಯತೋ ಹ್ಯಸ್ಯ ಬಂಧಮೋಕ್ಷೌ ಪ್ರತಿಷ್ಠಿತೌ" ಇತ್ಯಾದಿ ಶ್ರುತಿಗಳಿಗೂ "ಯಸ್ಯ ಪ್ರಸಾದಾತ್" ಎಂಬ ಶ್ರುತಿಗೂ ಏಕಾರ್ಥತೆಯು

— ವಿಶೇಷಾರ್ಥಪ್ರದೀಪಿಕಾ —

ಮುಖ್ಯಪ್ರಸನ್ನತಾದಿರೂಪ ಪ್ರಸಾದವು ಜ್ಞಾನಸಾಧ್ಯವಲ್ಲವಾದುದರಿಂದ "ಪ್ರಸಾದೋನಾಮ" ಇತ್ಯಾದಿಯಾಗಿ ಹೇಳಿದ್ದಾರ

"ಉನ್ನಿನೀಷತೇ" — "ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ" ಎಂದು ಹಿಂದೆ ಹೇಳಿದ ಶ್ರುತಿಯ ಪ್ರತೀಕವನ್ನು ಇದರಿಂದ ಗ್ರಹಿಸಿದ್ದಾರೆ

"ಏಷ ಹ್ಯೇವ ಸಾಧು ಕರ್ಮಕಾರಯತಿ ತಂ ಯಮೇಭ್ಯೋ ಲೋಕೇಭ್ಯಃ ಉನ್ನಿನೀಷತೇ। ಏಷ ಉ ಏವಾಸಾಧು ಕರ್ಮ ಕಾರಯತಿ ತಂ ಯಮಧೋನ್ನಿನೀಷತೇ" ಇದು ಸಂಪೂರ್ಣಶ್ರುತಿ ಈ ಭಗವಾನ್ ವಿಷ್ಣುವೇ, ಯಾವ ಜೀವನನ್ನು ಭೂರಾದಿಲೋಕಗಳಿಂದ ಮೇಲಕ್ಕೆ ಕರೆದುಕೊಂಡುಹೋಗಲು ಇಚ್ಛಿಸುತ್ತಾನೋ ಅವನಿಗ(ಅವನಕಡೆಯಿಂದ) ಒಳ್ಳೆಯ ಜ್ಞಾನ ಮುಂತಾದುದನ್ನು ಮಾಡಿಸುತ್ತಾನೆ ಈ ವಿಷ್ಣುವೇ ಯಾವನನ್ನು ಕೆಳಗೆ ಒಯ್ಯಲು ಇಚ್ಛಿಸುತಾನೋ ಅವನಿಗೆ ಮಿಥ್ಯಾಜ್ಞಾನಮುಂತಾದುದನ್ನು ಸಂಪಾದನಮಾಡಿಸುತ್ತಾನ ಹೀಗೆಅರ್ಥ

"ಪರಾಭಿಧ್ಯಾನಾತ್ತು ತಿರೋಹಿತಂ ತತೋಹ್ಯಸ್ಯ ಬಂಧವಿಪರ್ಯಯೌ" ಎಂಬ ಸೂತ್ರದ ಭಾಷ್ಯದಲ್ಲಿ ಹೇಳಿದ ಸ್ಮೃತಿಯನ್ನು "ತದಿಚ್ಛಯಾ" ಇತ್ಯಾದಿ ವಾಕ್ಯದಿಂದ ಹೇಳುತ್ತಾರ.

ಸ್ವಪ್ನಾದಿಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ॥ ತದಿಚ್ಛಯಾ ಯತೋ ಹ್ಯಸ್ಯ ಬಂಧಮೋಕ್ಷೌ ಪ್ರತಿಷ್ಠಿತೌ। ಇದು ಸಂಪೂರ್ಣವಾಕ್ಯ. ಸ್ವಾಪ್ನಾರ್ಥ ಜಾಗ್ರತ್ ಪದಾರ್ಥಗಳ ಜ್ಞಾನಗಳನ್ನುಂಟುಮಾಡುವವನೂ ಸ್ವಪ್ನಾದಿ ಬುದ್ಧಿಗಳನ್ನು ತಿರಸ್ಕರಿಸು (ಬಾರದಂತೆಮಾಡು)ವವನೂ ಆ ಹರಿಯೇ! ಏಕೆಂದರೆ, ಈ ಜೀವನಿಗೆ ಅವನ ಇಚ್ಛೆಯಿಂದಲೇ ಬಂಧಮೋಕ್ಷಗಳು ಆಗುವವೆಂಬುದು ನಿಶ್ಚಿತವಾಗಿದೆ ಹೀಗೆ ಅರ್ಥ

स्फुरणात् । तथा च यदीश्वरो नेच्छावांस्तदा न प्रसीदेद्घटवत् । सामान्याभावे विशेषाभावनियमात् । प्रसादरहितश्च न मोक्षसाधनं स्यात् । यद्यत्र विवक्षितावान्तरव्यापाररहितं न तत्तत्र साधनमिति व्याप्तेः । मोक्षं प्रत्यसाधनं च न मोक्षशास्त्रतात्पर्यविषयः स्यात् । तथा च मोक्षप्रयोजनता श्रुतीनां हीयेत । न च विषयान्तरं प्रयोजनान्तरं चास्तीति विषयप्रयोजनशून्यत्वादप्रामाण्यमेवापद्येत । न च तदपौरुषेयतयाऽनाशङ्कितदोषस्य वाक्यस्योपपद्यते । अतो अवश्यमुक्तेन क्रमेणेच्छावत्त्वं भगवतोऽङ्गीकरणीयमिति ।

## — ಪದಾರ್ಥದೀಪಿಕಾ —

ಬರುತ್ತದೆ "ಪ್ರಸನ್ನೋಽಸ್ಮಿ' ಎಂಬ ಪ್ರತೀತಿಯಲ್ಲಿ ಪರೋಪಕಾರವೇ ಎದ್ದು ಕಾಣುತ್ತದೆ ಆದುದರಿಂದ ಈಶ್ವರನು ಇಚ್ಛೆಯುಳ್ಳವನಾಗದಿದ್ದರೆ ಘಟಾದಿಗಳ ಹಾಗೆ ಪ್ರಸನ್ನನಾಗಲಾರನು ಏಕೆಂದರೆ ಸಾಮಾನ್ಯವಿಲ್ಲದಿದ್ದರೆ ವಿಶೇಷವಿಲ್ಲವೆಂಬ ನಿಯಮವಿದೆ ಪ್ರಸಾದರಹಿತನಾದರೋ ಮೋಕ್ಷಸಾಧನನಾಗಲಾರನು ಏಕೆಂದರೆ ಯಾವುದು ಯಾವುದರ ಬಗ್ಗೆ ವಿವಕ್ಷಿತ ಅವಾಂತರ ವ್ಯಾಪಾರವಿಲ್ಲದ್ದೋ ಅದು ಅದರ ಬಗ್ಗೆ ಸಾಧನವಾಗದೆಂದು ವ್ಯಾಪ್ತಿಯಿದೆ ಮತ್ತು ಮೋಕ್ಷಸಾಧನವಾಗ ದಿದ್ದುದು ಮೋಕ್ಷಶಾಸ್ತ್ರದ ತಾತ್ಪರ್ಯಕ್ಕೆ ವಿಷಯವಾಗಲಾರದು ಆದುದರಿಂದ ಶ್ರುತಿಗಳಿಗೆ ಮೋಕ್ಷವೆಂಬ ಪ್ರಯೋಜನವು ಇಲ್ಲವಾಗುತ್ತದೆ ಬೇರೆ ವಿಷಯ ವಾಗಲೀ ಪ್ರಯೋಜನವಾಗಲೀ ಇಲ್ಲವಾದುದರಿಂದ ವಿಷಯ ಪ್ರಯೋಜನವಿಲ್ಲ ದಿರುವುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವೇ ಬರಬೇಕಾಗುತ್ತದೆ ಆದರೆ, ಅಪೌರುಷೇಯವಾದುದರಿಂದ ದೋಷಶಂಕಾರಹಿತವಾದ ವೇದಕ್ಕೆ ಅಪ್ರಾಮಾಣ್ಯವು ಯುಕ್ತವಲ್ಲ ಆದುದರಿಂದ ಹಿಂದೆ ಹೇಳಿದ ಕ್ರಮದಿಂದ ಭಗವಂತನಿಗೆ ಇಚ್ಛೆಯಿರುವುದೆಂಬುದನ್ನು ಅವಶ್ಯವಾಗಿ ಅಂಗೀಕರಿಸತಕ್ಕದ್ದು" ಹೀಗೆ— (ಹೇಳಿದುದಾಯಿತು)

## — ವಿಶೇಷಾರ್ಥಪ್ರದೀಪಿಕಾ —

ಆಪಾದ್ಯ ಆಪಾದಕಗಳಲ್ಲಿ ವ್ಯಾಪ್ತಿಯನ್ನು "ಸಾಮಾನ್ಯಾಭಾವೇ" ಇತ್ಯಾದಿ ವಚನದಿಂದ ಉಪಪಾದಿಸುತ್ತಾರೆ "ಅಂಗೀಕರಣೀಯಮಿತಿ" ಇಲ್ಲಿರುವ 'ಇತಿ' ಶಬ್ದಕ್ಕೆ "ಏತದುಕ್ತಂ'' ಎಂಬ ಹಿಂದಿನ ವಾಕ್ಯದೊಡನೆ ಅನ್ವಯವು

याथार्थ्यमेव मानत्वमपि वाक्यं प्रयोजकम् ॥
मानत्वमेति

ननु विषयाभावे स्यादप्रामाण्यं । फलाभावे तु कथमप्रामाण्यापादनम् । न हि फलवत्त्वं प्रामाण्यम्। किन्तु याथार्थ्यमेवेत्युक्तम् । नापि प्रामाण्यस्य व्यापकम् । तृणादिदर्शनस्य प्रयोजनाभावेऽपि प्रामाण्याभ्युपगमादित्यत आह ॥ याथार्थ्यमेवेति ।' यद्यपि याथार्थ्यमेव मानत्वं न फलवत्त्वम् । नापि तेन व्याप्तम् । तथाऽपि वाक्ये प्रयोजकमेव मानत्वमेतीति युक्तमापादनम् । एतदुक्तं भवति । प्रामाण्यमात्रस्य प्रयोजनवत्त्वेन व्याप्त्यभावेऽपि तद्विशेषस्य वाक्यप्रामाण्यस्यास्त्येव । पदानामिष्टसाधन एव गृहीतसङ्गतिकत्वात् । पदसङ्गतिग्रहणसव्यपेक्षस्यैव वाक्यस्य बोधकत्वात् । फलस्य विषय-

ಯಥಾವತ್ತಾಗಿ ಜ್ಞೇಯವನ್ನು ವಿಷಯೀಕರಿಸುವುದು ಪ್ರಾಮಾಣ್ಯವು. ಆದರೂ ಫಲವನ್ನುಂಟುಮಾಡುವದೇ ಆದ ವಾಕ್ಯವು ಪ್ರಾಮಾಣ್ಯವನ್ನು ಹೊಂದುತ್ತದೆ.

— ಪದಾರ್ಥದೀಪಿಕಾ —

ಇನ್ನು "ವಿಷಯವಿಲ್ಲದಿದ್ದಲ್ಲಿ ಅಪ್ರಾಮಾಣ್ಯವು ಬರಲಿ! ಆದರೆ ಪ್ರಯೋಜನವಿಲ್ಲದ್ದರಿಂದ ಅಪ್ರಾಮಾಣ್ಯವನ್ನು ಆಪಾದಿಸುವುದು ಹೇಗೆ? ಏಕೆಂದರೆ ಫಲವುಳ್ಳದ್ದಿರುವುದೇ ಪ್ರಾಮಾಣ್ಯವಲ್ಲ ಆದರೆ ಯಾಥಾರ್ಥ್ಯವೇ ಪ್ರಾಮಾಣ್ಯವೆಂದು ಹಿಂದೆ ಹೇಳಿದೆ ಅದು ಪ್ರಾಮಾಣ್ಯದ ವ್ಯಾಪಕವೂ ಅಲ್ಲ ಏಕಂದರೆ ತೃಣ ಮುಂತಾದುದರ ಜ್ಞಾನಕ್ಕೆ ಪ್ರಯೋಜನವಿಲ್ಲದಿದ್ದರೂ ಪ್ರಾಮಾಣ್ಯವನ್ನು ಅಂಗೀಕರಿಸಲಾಗಿದೆ." ಈ ಆಶಂಕೆಯನ್ನು "ಯಾಥಾರ್ಥ್ಯಮೇವ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಯಾಥಾರ್ಥ್ಯವೇ ಪ್ರಾಮಾಣ್ಯವು. ಫಲವುಳ್ಳದ್ದಾಗಿರುವುದು ಪ್ರಾಮಾಣ್ಯವಲ್ಲ, ಮತ್ತು ಅದು ಪ್ರಾಮಾಣ್ಯದ ವ್ಯಾಪಕವೂ ಅಲ್ಲ ಇದು ನಿಜ. ಆದರೂ "ಪ್ರಯೋಜನವುಳ್ಳ ವಾಕ್ಯವೇ ಪ್ರಮಾಣವಾಗುವುದು" ಎಂಬ ಆಪಾದನವು ಯುಕ್ತವೇ! ಇಲ್ಲಿ ಹೇಳಿದುದು ಇದು ಸಾಮಾನ್ಯಪ್ರಾಮಾಣ್ಯಕ್ಕೆ ಪ್ರಯೋಜನವುಳ್ಳದ್ದಾಗಿರುವುದರೊಡನೆ ವ್ಯಾಪ್ತಿಯು ಇಲ್ಲದಿದ್ದರೂ, ಅದರ ವಿಶೇಷವಾದ ವಾಕ್ಯಪ್ರಾಮಾಣ್ಯಕ್ಕೆ ಆ ವ್ಯಾಪ್ತಿಯು ಇದ್ದೇ ಇದೆ ಏಕೆಂದರೆ ಪದಗಳಿಗೆ ಇಷ್ಟಸಾಧನದಲ್ಲಿಯೇ ಸಂಗತಿ ಜ್ಞಾನವಾಗಿರುತ್ತದೆ ಪದಗಳ ಸಂಗತಿ

विशेषे वाक्यप्रामाण्यनिर्णयहेतुत्वाच्च । अतो व्यापकाभावे व्याप्य-वाक्यप्रामाण्याभावापादनमुपपन्नमेवेति ।

ननु च महातात्पर्यगोचरस्य विषयस्य परमप्रयोजनस्य चाभावेऽप्यवान्तरविषयेण धर्मादिनाऽप्रधानप्रयोजनेन च स्वर्गादिना

— ಪದಾರ್ಥದೀಪಿಕಾ —

ಜ್ಞಾನ ( ವಾಚ್ಯವಾಚಕಭಾವ ಸಂಬಂಧಜ್ಞಾನ ) ಸಾಪೇಕ್ಷವೇ ಆದ ವಾಕ್ಯವೇ ಬೋಧಕವಾಗಿದೆ ಮತ್ತು ವಿಷಯದ ಬಗ್ಗೆ ವಾಕ್ಯದ ಪ್ರಾಮಾಣ್ಯವನ್ನು ನಿರ್ಣಯಿಸಲು ಫಲವು ಕಾರಣವಾಗಿದೆ ಆದುದರಿಂದ, ವ್ಯಾಪಕವಾದ ಫಲದ ಇಲ್ಲದಿರುವಿಕೆಯಿಂದ ವ್ಯಾಪ್ಯವಾದ ವಾಕ್ಯಪ್ರಾಮಾಣ್ಯದ ಅಭಾವವನ್ನು ಆಪಾದಿಸುವುದು ಯುಕ್ತವೇ ಆಗುತ್ತದೆ " ಹೀಗೆ

ಇನ್ನು– ಮಹಾತಾತ್ಪರ್ಯಕ್ಕೆ ವಿಷಯವಾದ ವಿಷಯವು, ಹಾಗು ಪರಮ ಪ್ರಯೋಜನವು ಇವೆರಡೂ ಇಲ್ಲದಿದ್ದರೂ ಧರ್ಮ ಮುಂತಾದ ಅವಾಂತರ ವಿಷಯದಿಂದಲೂ ಸ್ವರ್ಗ ಮುಂತಾದ ಅಮುಖ್ಯ ಪ್ರಯೋಜನದಿಂದಲೂ ಶ್ರುತಿಯು

— ವಿಶೇಷಾರ್ಥಪದೀಪಿಕಾ —

"ಫಲಸ್ಯ" ಪ್ರಯೋಜನವುಳ್ಳ ಅರ್ಥಪ್ರತಿಪಾದಕತ್ವವೆಂಬ ಫಲಕ್ಕೆ "ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ॥ ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ" ಎಂಬ ವಚನವಿದ್ದುದರಿಂದ, ಅಭೇದ ಪರವಾಗಿ ತೋರುವ ವಾಕ್ಯಗಳಿಗೆ ಅಭೇದ ವಿಷಯದಲ್ಲಿ ತಾತ್ಪರ್ಯವೋ ಪರಮಾತ್ಮನ ಗುಣೋತ್ಕರ್ಷದಲ್ಲಿ ತಾತ್ಪರ್ಯವೋ, ಎಂಬ ವಿಚಾರವು ಪ್ರಸಕ್ತವಾಗಲು 'ಘಾತಯಂತಿ ಹಿ ರಾಜಾನೋ ರಾಜಾಹಮಿತಿ ವದಂತಂ॥ ದದತಿ ಚ ಸರ್ವಮಭಿಪ್ರೇತಂ ಗುಣೋತ್ಕರ್ಷಂ ವದತಃ'' (ನಾನೇ ರಾಜನೆಂದು ಹೇಳಿಕೊಳ್ಳುವವನನ್ನು ರಾಜರು ಕೊಲ್ಲಿಸುತ್ತಾರೆ. ತಮ್ಮ ಗುಣಾತಿಶಯವನ್ನು ಹೊಗಳುವವರಿಗೆ ಬೇಕಾದುದನ್ನೆಲ್ಲ ರಾಜರು ಕೊಡುತ್ತಾರೆ.) ಎಂಬ ಸಫಲವಾದ ಭಗವಂತನ ಗುಣೋತ್ಕರ್ಷ ಪ್ರತಿಪಾದನದಲ್ಲಿ ತಾತ್ಪರ್ಯವಿದೆಯೆಂಬುದರ ನಿರ್ಣಾಯಕತ್ವವು ಫಲವಾಕ್ಯದಳಿಗೆ ಇದೆಯೆಂಬುದು ತದ್ಗುಣಸಾರತ್ವಾಧಿಕರಣದಲ್ಲಿ ಹೇಳಲ್ಪಟ್ಟಿದೆ "ಅಸಂಭವಸ್ತು ಸತೋಽನುಪಪತ್ತೇಃ" ಎಂಬಲ್ಲಿ "ಅಸತಃ ಸದಜಾಯತ" ಈ ಮುಂತಾದ ವಾಕ್ಯಗಳಿಗೆ, ನಿಷ್ಫಲಭಗವದುತ್ಪತ್ತಿಯೆಂಬ ಅರ್ಥವನ್ನು ಬಿಟ್ಟು ಸಫಲವಾಯ್ವುತ್ಪತ್ತಿರೂಪ ಅರ್ಥದಲ್ಲಿ, ತಾತ್ಪರ್ಯವಿದೆಯೆಂಬ ನಿರ್ಣಯವು ಮಾಡಲ್ಪಟ್ಟಿದೆ ಹೀಗೆ ತಿಳಿಯಬೇಕು.

तत्रापि यत्सम्पूर्णप्रयोजनम् ॥ २-१-९ ॥

विषयप्रयोजनवती श्रुतिः प्रमाणं भविष्यतीत्यत आह ॥ तत्रापीति । वाक्येऽपि निर्धारणे सप्तमी । प्रयोजनवत्त्वेऽपीति वा । यद्वाक्यं सम्पूर्णप्रयोजनं महाप्रयोजनम् । उपलक्षणं चैतत् । प्रधानविषयं चेत्यपि द्रष्टव्यम् । यदिति श्रवणात्तदिति लभ्यते । सम्पूर्णप्रयोजनमिति चावर्तनीयम् मानत्वमेतीत्यनुवर्तनीयम् । तथा चायमर्थः ।

ಆ ವಾಕ್ಯಗಳ ಮಧ್ಯದಲ್ಲಿ ಯಾವ ವಾಕ್ಯವು ಮಹಾಪ್ರಯೋಜನ-ಪ್ರಧಾನ ವಿಷಯಗಳುಳ್ಳದ್ದೋ ಅದು (ಸಂಪೂರ್ಣ ಪ್ರಯೋಜನವುಳ್ಳದ್ದಾಗಿ) ಪ್ರಾಮಾಣ್ಯವನ್ನು ಹೊಂದುತ್ತದೆ ॥೨-೧-೯॥

— ಪದಾರ್ಥದೀಪಿಕಾ —

ವಿಷಯಪ್ರಯೋಜನಗಳುಳ್ಳದ್ದಾಗುವುದರಿಂದ ಪ್ರಮಾಣವಾಗುವುದೆಂಬ ಆಶಂಕೆಯನ್ನು "ತತ್ರಾಪಿ" ಈ ವಚನದಿಂದ ಕಳೆಯುತ್ತಾರೆ "ತತ್ರಾಪಿ" ವಾಕ್ಯದಲ್ಲಿಯೂ ಇಲ್ಲಿ ನಿರ್ಧಾರಣಾರ್ಥದಲ್ಲಿ ಸಪ್ತಮೀ ವಿಭಕ್ತಿಯಿದೆ ಅಥವಾ "ವಾಕ್ಯಗಳಿಗೆ ಪ್ರಯೋಜನವತ್ವವಿದ್ದರೂ," ಎಂದು ಅರ್ಥ "ಯತ್"- ವಾಕ್ಯವು "ಸಂಪೂರ್ಣ ಪ್ರಯೋಜನಂ"= ಮಹಾ ಪ್ರಯೋಜನವುಳ್ಳದ್ದು ಇದು ಸಂಗ್ರಾಹಕವು ಪ್ರಧಾನವಿಷಯವನ್ನು ವಿಷಯೀಕರಿಸಿರುವುದೆಂದೂ ತಿಳಿಯಬೇಕು, "ಯತ್" ಪದವು ಇದ್ದುದರಿಂದ, "ತತ್" ಪದವೂ ಅಧ್ಯಾಹಾರದಿಂದ ಲಭಿಸುತ್ತದೆ ಮತ್ತು "ಸಂಪೂರ್ಣ ಪ್ರಯೋಜನಂ" ಎಂಬುದನ್ನು ಆವರ್ತನ ಮಾಡಬೇಕು "ಮಾನತ್ವಮೇತಿ" ಎಂಬುದನ್ನು ಅನುವರ್ತಿಸಬೇಕು ಇಲ್ಲಿಯ ಅರ್ಥವಿದು—

— ವಿಶೇಷಾರ್ಥಪ್ರದೀಪಿಕಾ —

ಹಿಂದೆ "ವಾಕ್ಯಂ" ಎಂದು ಪ್ರಕೃತವಾದುದರಿಂದ ಇಲ್ಲಿಯೂ "ವಾಕ್ಯೇಽಪಿ" ಎಂಬುದಾಗಿ ಏಕವಚನಾಂತವಾಗಿ ಪ್ರಯೋಗಿಸಿದ್ದಾರೆ "ವಾಕ್ಯಗಳಲ್ಲಿ" ಹೀಗೆ ಅರ್ಥ

"ಯತಶ್ಚ ನಿರ್ಧಾರಣಂ" – ಎಂಬ ಸೂತ್ರದಲ್ಲಿ ನಿರ್ಧಾರಣ ಮಾಡಲ್ಪಡಬೇಕಾದ ವಸ್ತುವಿನಿಂದ ಅವಧಿಯೆನಿಸಿದ ವಸ್ತುವಿನಲ್ಲಿ ಸಪ್ತಮಿ ಇಲ್ಲವೆ ಷಷ್ಠೀ ವಿಭಕ್ತಿಯು ಬರುತ್ತದೆ ಉದಾ— "ಗವಾಂ ಗೋಷು ವಾ ಕೃಷ್ಣಾ ಗೌಃ ಬಹುಕ್ಷೀರಾ" (ಗೋವುಗಳಲ್ಲಿ ಕೃಷ್ಣಗೋವು ಬಹಳ ಹಾಲುಳ್ಳದ್ದು) ಎಂಬುದು ನಿರ್ಧಾರಣ ವಿಧಿಯಲ್ಲಿ ಬಹುವಚನವು ಕಂಡಿರುವುದರಿಂದ, "ಪ್ರಯೋಜನವತ್ವೇಽಪಿ" ಎಂಬ ಅರ್ಥಾಂತರವನ್ನು ಹೇಳಿದ್ದಾರೆ

नावान्तरविषयप्रयोजनाभ्यां वाक्यस्य प्रामाण्यं सम्भवति । किन्नाम यद्वाक्यं यन्महत्प्रयोजनमुद्दिश्य यं प्रधानं विषयं प्रतिपादयितुं प्रवृत्तम् । तत्ताभ्यामेव प्रयोजनविषयाभ्यामुपेतं प्रामाण्यमश्नुते । तदभावेऽवान्तरप्रयोजनादेरप्यसिद्धेः । सिद्धौ वा तस्यैव प्राधान्यप्राप्तेः । वेदवाक्यं च मोक्षोद्देशेन परमेश्वरे महातात्पर्योपेतमित्युक्तम् । तत्तयोरेव विषयप्रयोजनयोरुपपत्तौ प्रमाणं स्यान्नान्यथेति ॥ २-१-९ ॥

— ಪದಾರ್ಥದೀಪಿಕಾ —

"ಅವಾಂತರ ವಿಷಯ ಪ್ರಯೋಜನಗಳಿಂದ ವಾಕ್ಯ ಪ್ರಾಮಾಣ್ಯವು ಸಂಭವಿಸು ವುದಿಲ್ಲ ಆದರೆ ಯಾವ ವಾಕ್ಯವು ಯಾವ ಮಹಾಪ್ರಯೋಜನವನ್ನುದ್ದೇಶಿಸಿ ಯಾವ ಪ್ರಧಾನವಿಷಯವನ್ನು ಪ್ರತಿಪಾದಿಸಲು ಹೊರಟಿದೆಯೋ ಆ ವಾಕ್ಯವು ಅವೇ ವಿಷಯ ಪ್ರಯೋಜನಗಳಿಂದಲೇ ಯುಕ್ತವಾದುದಾಗಿ ಪ್ರಾಮಾಣ್ಯವನ್ನು ಹೊಂದುತ್ತದ ಅವುಗಳಿಲ್ಲದಿದ್ದರೆ ಅವಾಂತರ ಪ್ರಯೋಜನಾದಿಗಳೂ ಸಿದ್ಧಿಸು ವುದಿಲ್ಲ ಸಿದ್ಧಿಸಿದರೂ ಅವುಗಳಿಗೇ ಪ್ರಾಧಾನ್ಯವು ಬರುತ್ತದೆ ವೇದವಾಕ್ಯ ವಾದರೋ ಮೋಕ್ಷವನ್ನುದ್ದೇಶಿಸಿ ಪರಮೇಶ್ವರನಲ್ಲಿ ಮಹಾತಾತ್ಪರ್ಯವುಳ್ಳ ದ್ದೆಂದು ಹೇಳಲ್ಪಟ್ಟಿದೆ ಆದುದರಿಂದ, ಅವೇ ವಿಷಯಪ್ರಯೋಜನಗಳಾದರೇ ಪ್ರಮಾಣವಾಗುವದು, ಇಲ್ಲವಾದರೆ ಇಲ್ಲ ಹೀಗೆ ಅರ್ಥ ||೨-೧-೯||

— ವಿಶೇಷಾರ್ಥಪ್ರದೀಪಿಕಾ —

''ಮಾನತ್ವಮೇತಿ'' ಎಂಬುದಾಗಿ ಅನುವೃತ್ತಿಸಲ್ಪಟ್ಟುದುದರ ಅರ್ಥವು "ಪ್ರಮಾಣ್ಯಮಶ್ನುತೇ'' ಎಂಬುದು

''ತಯೋಃ''= ಪರಮಾತ್ಮ, ಹಾಗು ಮೋಕ್ಷ, ಇವುಗಳಿಗೇ, ವಿಷಯ ಪ್ರಯೋಜನತ್ವವು ಸಂಭವಿಸುತ್ತಿರುವಾಗಲೇ ಶಾಸ್ತ್ರಕ್ಕೆ ಪ್ರಾಮಾಣ್ಯವು, ಇಲ್ಲದಿ ದ್ದರೆ ಪ್ರಾಮಾಣ್ಯವು ಬರಲಾರದು, ಹೀಗೆ ಭಾವ "ಇತಿ" ಶಬ್ದಕ್ಕೆ "ಅಯ ಮರ್ಥಃ" ಎಂಬಲ್ಲಿ ಅನ್ವಯುವಿದೆ ೨-೧-೯

"ಸ್ವಯಂ ಕೃತಾಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ" ಎಂಬ ಪ್ರತಿಜ್ಞೆಯನ್ನು ಅನುಸರಿಸಿ, ಉಪಲಭ್ಯತೇಚ" ಎಂಬ ಕೊನೆಯ ಸೂತ್ರಾಂಶದ ತಾತ್ಪರ್ಯದ ಸ್ಪಷ್ಟೀಕರಣದಲ್ಲಿ ಅನುಪಪತ್ತಿಯು ಯಾವುದು, ಎಂಬ ಆಶಂ ಕೆಯು ಬರುವುದರಿಂದ, ಅದನ್ನು ಪರಿಹರಿಸಲು ಆ ಅನುಪಪತ್ತಿಯನ್ನು ಹೇಳಲು ಅಧಿಕರಣದ ತಾತ್ಪರ್ಯವನ್ನು ಹೇಳುತ್ತ, ಮೊದಲು ಸೂತ್ರದ ತಾತ್ಪರ್ಯ

॥ ॐ वैषम्यनैर्घृण्ये न सापेक्षत्वात्तथा हि दर्शयति ॐ ॥

प्राणिनां विविधान्देहेन्द्रियविषयांस्तत्फलं च सुखदुःखलक्षणमुत्पादयन्नीश्वरः किं तदीयं धर्माधर्मरूपं कर्मापेक्षते न वा । आद्ये तस्य स्वातन्त्र्यप्रच्युतिः । द्वितीये निर्निमित्तं कांश्चित्सुखयन्विषमः स्यात् । कांश्चित् दुःखयन्निर्घृणः स्यात् । इत्युभयथा न तस्य सर्वकर्तृत्वमित्येव पूर्वपक्षोऽत्राधिकरणे निराक्रियते । तत्र तावदाद्येन सूत्रेण कर्मादिसापेक्षस्य कर्तृत्वमभ्युपेत्य वैषम्यनैर्घृण्ये परिहृते । अपेक्षणीयं कर्मा-

— ಪದಾರ್ಥದೀಪಿಕಾ —

ಓಂ॥ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಧಾ ಹಿ ದರ್ಶಯತಿ ಓಂ॥ ಪ್ರಾಣಿಗಳ ವಿವಿಧವಾದ ದೇಹ ಇಂದ್ರಿಯ ವಿಷಯಗಳನ್ನೂ ಅವುಗಳ ಸುಖದುಃಖ ರೂಪವಾದ ಫಲವನ್ನೂ ಹುಟ್ಟಿಸುವ ಈಶ್ವರನು ಧರ್ಮಾಧರ್ಮರೂಪವಾದ ಅವರ ಕರ್ಮವನ್ನು ಅಪೇಕ್ಷಿಸುತ್ತಾನೋ ಇಲ್ಲವೋ ? ಮೊದಲನೆಯ ಪಕ್ಷದಲ್ಲಿ ಈಶ್ವರನ ಸ್ವಾತಂತ್ರ್ಯಕ್ಕೆ ಚ್ಯುತಿಯುಂಟಾಗುತ್ತದೆ ಎರಡನೆಯ ಪಕ್ಷದಲ್ಲಿ ನಿಮಿತ್ತವಿಲ್ಲದೆ ಕೆಲವರನ್ನು ಸುಖಪಡಿಸುವುದರಿಂದ ಈಶ್ವರನು ವಿಷಮನಾಗಬೇಕಾದೀತು ಕೆಲವರನ್ನು ದುಃಖಿಸುವುದರಿಂದ ನಿರ್ಘೃಣನಾಗಬೇಕಾಗುತ್ತದೆ ಹೀಗೆ ಎರಡೂ ರೀತಿಯಿಂದಲೂ ಈಶ್ವರನಿಗೆ ಸರ್ವಕರ್ತೃತ್ವವು ಬರಲಾರದು. ಇದೇ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗುತ್ತದೆ ಅದರಲ್ಲಿ ಮೊದಲನೆಯ

— ವಿಶೇಷಾರ್ಥಪ್ರದೀಪಿಕಾ —

ವನ್ನು "ಪ್ರಾಣಿನಾಂ" ಇತ್ಯಾದಿ ವಚನಗಳಿಂದ ಹೇಳುತ್ತಾರೆ "ಉಭಯಥಾಽಪಿ"– ಮೊದಲನೆಯ ಪಕ್ಷದಲ್ಲಿ ಸ್ವಾತಂತ್ರ್ಯವು ಸಂಭವಿಸುವುದಿಲ್ಲವಾದುದರಿಂದ, ಎರಡನೆಯ ಪಕ್ಷದಲ್ಲಿ ವೈಷಮ್ಯ ದೋಷಗಳು ಹೀಗೆ ಕರ್ಮಾಪೇಕ್ಷೆ ಕರ್ಮನಿರಪೇಕ್ಷತೆ, ಎರಡೂ ಪಕ್ಷಗಳಲ್ಲಿ, ಹೀಗೆ ಅರ್ಥ "ನ ಸರ್ವಕರ್ತೃತ್ವಂ"– ನಮ್ಮ ಹಾಗೆ ದೋಷಿಯಾದುದರಿಂದ, ಸರ್ವಕರ್ತೃತ್ವವು ಅವನಿಗೆ (ಪರಬ್ರಹ್ಮನಿಗೆ) ಇಲ್ಲ ಹೀಗೆ ಅರ್ಥ "ಇತ್ಯೇವ ಪೂರ್ವಪಕ್ಷಃ" – ಹಿಂದೆ ಹೇಳಿದ ಪೂರ್ವಪಕ್ಷವನ್ನು ನಿರಾಕರಿಸುವದೆಂದು ಹೇಳಿದುದರಿಂದ, ಹಿಂದೆ ಹೇಳಿದ ಪ್ರಯೋಜನವೆಂಬ ಫಲದ ವಿಷಯದಲ್ಲಿ ಯುಕ್ತಿಯ ವಿರೋಧವನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗುತ್ತದೆಯಾದುದರಿಂದ, ಪೂರ್ವಾಧಿಕರಣದಿಂದ ಸಂಗತಿಯು ಹಾಗು ಪಾದಸಂಗತಿಯು, ಹೇಳಲ್ಪಟ್ಟವುಗಳಿರುತ್ತವೆ

दीश्वरायत्तं न वा । नेति पक्षे सर्वकारणत्वहानिः । आद्ये निर्निमित्तं विषमाणां कर्मणां कारयितुर्वैषम्यनैर्घृण्ये स्यातामित्याक्षिप्य कर्मादीनामनादिताभ्युपगमेन समाधानमुक्तं न कर्माविभागादिति चेन्नानादित्वादिति सूत्रेण । एवं तर्हि कर्मादिसापेक्षस्य स्वातन्त्र्यं न स्यादित्याशङ्क्योक्तमुपपद्यते चेति । कर्माद्यपेक्षस्यापि तस्य स्वातन्त्र्यमुपपद्यते । कर्मादिसत्तादेरपि तदधीनत्वस्यारम्भणाधिकरणे समर्थितत्वात् । न हि स्वाधीनसत्तादिकमपेक्षमाणस्य स्वातन्त्र्यप्रच्युतिः

— ಪದಾರ್ಥದೀಪಿಕಾ —

ಸೂತ್ರದಿಂದ ಕರ್ಮಾದಿಸಾಪೇಕ್ಷವಾದ ಈಶ್ವರನಿಗೆ ಕರ್ತೃತ್ವವನ್ನು ಒಪ್ಪಿ ವೈಷಮ್ಯ ನೈರ್ಘೃಣ್ಯಗಳು ಪರಿಹರಿಸಲ್ಪಟ್ಟಿವೆ ಬೇಕಾಗಿರುವ ಕರ್ಮಾದಿಗಳು ಈಶ್ವರನ ಅಧೀನಗಳೋ ಅಲ್ಲವೋ ? ಪ್ರಶ್ನೆ ಅಲ್ಲವೆಂಬ ಪಕ್ಷದಲ್ಲಿ ಸರ್ವಕಾರಣತ್ವಕ್ಕೆ ಹಾನಿಯಾಗುತ್ತದೆ ಮೊದಲನೆಯ ಪಕ್ಷದಲ್ಲಿ ವಿಷಮವಾದ ಕರ್ಮಗಳನ್ನು ನಿರ್ನಿಮಿತ್ತವಾಗಿ ಮಾಡಿಸುವವನಿಗೆ ವೈಷಮ್ಯ ನೈರ್ಘೃಣ್ಯಗಳು ಬರುತ್ತವೆ ಯೆಂದು ಆಕ್ಷೇಪಿಸಿ, ಕರ್ಮಾದಿಗಳಿಗೆ ಅನಾದಿತ್ವವನ್ನು ಒಪ್ಪುವುದರಿಂದ ಸಮಾಧಾನವನ್ನು " ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್ " ಎಂಬ ಸೂತ್ರ ದಿಂದ ಹೇಳಲ್ಪಟ್ಟಿತು ಹಾಗಾದರೆ, ಕರ್ಮಾದಿಗಳನ್ನು ಅಪೇಕ್ಷಿಸುವವನಿಗೆ ಸ್ವಾತಂತ್ರ್ಯವು ಬರಲಾರದು, ಹೀಗೆ ಆಶಂಕಿಸಿ ಉತ್ತರವಾಗಿ "ಉಪಪದ್ಯತೇಚ" ಎಂಬ ಸೂತ್ರವು ಹೇಳಲ್ಪಟ್ಟಿತು "ಕರ್ಮಾದಿಗಳನ್ನು ಅಪೇಕ್ಷಿಸಿದರೂ ಈಶ್ವರ ನಿಗೆ ಸ್ವಾತಂತ್ರ್ಯವು ಸಂಭವಿಸುತ್ತದೆ ಏಕೆಂದರೆ ಕರ್ಮಾದಿಗಳ ಅಸ್ತಿತ್ವ ಮುಂತಾದುದೂ ಸಹ ಈಶ್ವರನ ಅಧೀನವೆಂದು ಆರಂಭಣಾಧಿಕರಣದಲ್ಲಿ ಸಮರ್ಥಿ ಸಿದ್ದಾಗಿದೆ. "ಸ್ವಾಧೀನ ಸತ್ತಾದಿಗಳುಳ್ಳದ್ದನ್ನು ಅಪೇಕ್ಷಿಸುವವನಿಗೆ ಸ್ವಾತಂತ್ರ್ಯದ

— ವಿಶೇಷಾರ್ಥಪ್ರದೀಪಿಕಾ —

"ಆರಂಭಣಾಧಿಕರಣೇ"– ದ್ರವ್ಯಂ ಕರ್ಮಚ ಕಾಲಶ್ಚ ಸ್ವಭಾವ ಶ್ಚೇತನಾ ಧೃತಿಃ ಎಂಬ ಶ್ರುತ್ಯಾದಿಗಳಿಂದ ಹೇಳಲ್ಪಾಗಿದೆಯೆಂದು ತಿಳಿಯಬೇಕು ಇದರಿಂದ ಪೂರ್ವಾಧಿಕರಣದ ಸಂಗತಿಯು ಸೂಚಿಸಲ್ಪಟ್ಟದ್ದಾಯಿತು ಪಾದದಲ್ಲಿ ಅಂತ ರ್ಭಾವವೂ ಹೇಳಲ್ಪಟ್ಟಾಗುತ್ತದೆ "ಕರ್ಮಾದಿ" ಇಲ್ಲಿ "ಆದಿ" ಪದದಿಂದ, ಅವನ ಪ್ರಯತ್ನ ಕರ್ಮಸಂಸ್ಕಾರ ಮುಂತಾದವುಗಳನ್ನು ಸಂಗ್ರಹಿಸಲಾಗಿದೆ

युक्तेति । एवं तर्हि तदपेक्षा नामानपेक्षैव । तथा च पुनर्वैषम्याद्यापत्तिरित्याशङ्क्योक्तमुपलभ्यते चेति । उपलभ्यते हीश्वरस्येदृशं वैषम्यं निर्घृणत्वं च प्रमाणैः । अतो नेदमनिष्टमिति । तदिदमयुक्तम् । वैषम्यनैर्घृण्ये हि वस्तुनो दूषणे न वा । आद्ये कथमन्तेऽप्यङ्गीक्रियेते । द्वितीये प्रथममेवाङ्गीकार्ये । किं सापेक्षतापक्षं कक्षीकृत्य तत्र दूषणपरिहारक्लेशेन । तथा च बकबन्धकरीतिरित्यतोऽभिप्रायमाह ॥ वैषम्यमिति ॥

— ಪದಾರ್ಥದೀಪಿಕಾ —

ಪ್ರಚ್ಯುತಿಯಿಲ್ಲ" ಎಂಬುದಾಗಿ ಹಾಗಾದಲ್ಲಿ ಕರ್ಮಾದಿಗಳ ಅಪೇಕ್ಷೆಯಿಂಬುದೇನಿಲ್ಲ ಕರ್ಮನಿರಪೇಕ್ಷತೆಯೇ ಸರಿ ಆದುದರಿಂದ, ಮತ್ತೆ ವೈಷಮ್ಯಾದಿಗಳು ಬರಬೇಕಾಗುತ್ತವ ಹೀಗೆ ಆಶಂಕಿಸಿ, ಉತ್ತರವಾಗಿ "ಉಪಲಭ್ಯತೇಚ" ಎಂಬ ಸೂತ್ರವನ್ನು ಹೇಳಿದ್ದಾರೆ ಪ್ರಮಾಣಗಳಿಂದ ಇಂಥ ವೈಷಮ್ಯನೈರ್ಘೃಣ್ಯಗಳು ತಿಳಿದು ಬರುತ್ತವೆ. ಆದುದರಿಂದ ಇದು ಅನಿಷ್ಟವಲ್ಲವೆಂದು ಇದರ ಅರ್ಥ ಆದರೆ ಇದು ಅಯುಕ್ತವು ಏಕೆಂದರ— ವೈಷಮ್ಯನೈರ್ಘೃಣ್ಯಗಳು ನಿಜವಾಗಿ ದೂಷಣಗಳು ಅಹುದೋ ಅಲ್ಲವೋ ಪ್ರಶ್ನೆ ಮೊದಲನೆಯ ಪಕ್ಷದಲ್ಲಿ ಅಂತ್ಯದಲ್ಲಿಯಾದರೂ (ಕೊನೆಯಲ್ಲಿಯಾದರೋ) ಅದನ್ನು ಒಪ್ಪುವುದು ಹೇಗೆ? ಎರಡನೆಯ ಪಕ್ಷದಲ್ಲಿ- ಅವುಗಳನ್ನು ಮೊದಲೇ ಒಪ್ಪಬೇಕಾಗುತ್ತದೆ ಕರ್ಮಾದಿಗಳ ಸಾಪೇಕ್ಷತ್ವ ಪಕ್ಷವನ್ನು ಇಟ್ಟುಕೊಂಡು (ಪುಷ್ಟೀಕರಿಸಿ) ಅದರಲ್ಲಿ ದೂಷಣಗಳನ್ನು ಪರಿಹರಿಸುವ ಕ್ಲೇಶದಿಂದೇನು ಪ್ರಯೋಜನ? ಆದುದರಿಂದ ಇದು ಬಕಬಂಧರೀತಿಯು ಹೀಗೆ ಆಶಂಕೆಯು ಬರುವುದರಿಂದ, ಅದನ್ನು ಪರಿಹರಿಸಲು ಸೂತ್ರಾಭಿಪ್ರಾಯವನ್ನು "ವೈಷಮ್ಯಂ" ಇತ್ಯಾದಿ ಪದ್ಯದಿಂದ ಹೇಳುತ್ತಾರೆ

— ವಿಶೇಷಾರ್ಥಪ್ರದೀಪಿಕಾ —

"ಪ್ರಮಾಣೈಃ" - "ಏಷಹ್ಯೇವ ಸಾಧು ಕರ್ಮ ಕಾರಯತಿ, ಸ ಕಾರಯೇತ್ ಪುಣ್ಯಮಥಾಽಪಿ ಪಾಪಮ್ ನ ತಾವತಾ ದೋಷವಾನೀಶಿತಾಽಪಿ॥ ಈಶೋಯತೋ ಗುಣದೋಷಾದಿ ಸತ್ತ್ವೇ ಸ್ವಯಂ ಪರೋಽನಾದಿರಾದಿಃ ಪ್ರಜಾನಾಮ್" ಈ ಪ್ರಮಾಣಗಳಿಂದ, ಆ ವಿಷ್ಣುವು, ತನ್ನ ಆಧೀನನಾದ ಅವರವರ ಕರ್ಮಾನುಸಾರವಾಗಿ ಪುಣ್ಯಕರ್ಮವನ್ನೂ ಪಾಪಕರ್ಮವನ್ನೂ ಜೀವರಿಂದ ಮಾಡಿಸುತ್ತಾನೆ ಇದರಿಂದ ವೈಷಮ್ಯಾದಿ ದೋಷವುಳ್ಳವನಾಗುವುದಿಲ್ಲ. ಏಕೆಂದರೆ—

## ॥ ॐ वैषम्यनैर्घृण्ये न सापेक्षत्वात्तथा हि दर्शयति ॐ ॥

वैषम्यं चैव नैर्घृण्य वेदाप्रामाण्यकारणम् ॥
नाङ्गीकार्यमतोऽन्यत्तु न वैषम्यादिनामकम् ॥ २-१-१० ॥

द्विविधं खल्विदं वैषम्यं निर्घृणत्वं च । एकं कर्माद्यनपेक्षताप्रयुक्तम् । अपरं तु सापेक्षत्वेऽपि कर्मादिसत्तादेरपीश्वराधीनत्वप्रयुक्तम् । तत्राद्यं वेदाप्रामाण्यकारणत्वेन दूषणत्वान्नेश्वरस्याङ्गीकर्तुमुचितम् । वेदो हि धर्मं सुखसाधनमधर्मं च दुःखसाधनमाह ॥ तत्र यदीश्वरो धर्माधर्मावनपेक्ष्य विषमो निर्घृणश्च स्यात् । तदा वेदोदितं धर्माधर्मयोः सुखदुःखसाधनत्वमसत्स्यात् । तथा च तस्य कथं

ವೇದದ ಅಪ್ರಾಮಾಣ್ಯ ಕಾರಣವಾದ ವೈಷಮ್ಯವೂ ನಿರ್ಘೃಣತ್ವವೂ ಈಶ್ವರ ನಿಗ ಅಂಗೀಕರಿಸಲ್ಪಡತಕ್ಕದ್ದಲ್ಲ ಇಂಥ ವೈಷಮ್ಯಾದಿಗಳಿಂದ ಬೇರೆಯಾದುದು, ವೈಷಮ್ಯಾದಿನಾಮವುಳ್ಳದ್ದಲ್ಲ ದೂಷಣವಾಗುವುದಿಲ್ಲ ೨-೧-೧೦

— ಪದಾರ್ಥದೀಪಿಕಾ —

ವೈಷಮ್ಯನೈರ್ಘೃಣ್ಯಗಳೆರಡು ವಿಧವುಳ್ಳವುಗಳು ಒಂದು ಕರ್ಮಾದಿಗಳನ್ನಪೇಕ್ಷಿಸದ ಮೂಲಕವಾದುದು ಇನ್ನೊಂದು ಕರ್ಮಾದಿಗಳನ್ನಪೇಕ್ಷಿಸಿದರೂ ಆ ಕರ್ಮಾದಿಗಳ ಅಸ್ತಿತ್ವ ಮುಂತಾದುದು ಈಶ್ವರನ ಅಧೀನವಾದ ಕಾರಣದಿಂದ ಇವೆರಡು ವೈಷಮ್ಯಗಳಲ್ಲಿ ಮೊದಲನೆಯದು ವೇದದ ಅಪ್ರಾಮಾಣ್ಯಕ್ಕೆ ಕಾರಣವಾದುದರಿಂದ ದೂಷಿಸಲ್ಪಡತಕ್ಕದ್ದು ಆದುದರಿಂದ ಅದು ಈಶ್ವನಿಗೆ ಇದೆಯೆಂದು ಅಂಗೀಕರಿಸುವುದುಚಿತವಲ್ಲ ಏಕೆಂದರೆ—ವೇದವು, ಧರ್ಮವು ಸುಖಸಾಧನವೆಂದೂ ಅಧರ್ಮವು ದುಃಖಸಾಧನವೆಂದೂ ಹೇಳುತ್ತದೆ ಹೀಗಿರುವಾಗ, ಈಶ್ವರನು ಧರ್ಮಾಧರ್ಮಗಳನ್ನು ಅಪೇಕ್ಷಿಸದೆ ವಿಷಮನೂ ನಿರ್ಘೃಣನೂ ಆಗುವುದಾದರೆ ವೇದದಿಂದ ಹೇಳಲ್ಪಟ್ಟ ಧರ್ಮ ಅಧರ್ಮಗಳ

— ವಿಶೇಷಾರ್ಥಪ್ರದೀಪಿಕಾ —

ಆವನು (ಪರಮಾತ್ಮನು) ಸ್ವತಂತ್ರನೂ, ಈಶನೂ, ಅನಾದಿಯೂ, ಸರ್ವಕರ್ತೃವೂ ಆಗಿದ್ದಾನೆ ಹೀಗೆ ಅರ್ಥ

''ವೇದದ ಅಪ್ರಾಮಾಣ್ಯ ಕಾರಣವಾದುದರಿಂದ" ಎಂಬ ಮಾತನ್ನು "ವೇದೋ ಹಿ" ಇತ್ಯಾದಿ ವಾಕ್ಯಗಳಿಂದ ವಿಶದಪಡಿಸುತ್ತಾರೆ

प्रामाण्यं स्यात् । अतः सूत्रकारेण कर्मादिसापेक्षतापक्षमुररीकृत्य तत्परिहृतम् । अतोऽन्यत्तु द्वितीयं वैषम्यं नैर्घृण्यं च न वैषम्यादि-नामकं दूषणरूपं न भवतीति यावत् । तथा हि । वैषम्यादिकं तावन्न स्वरूपेण दोषः किन्तु दोषहेतुतया । न चेदं वेदाप्रामाण्यकारणम् । कर्मादिसापेक्षत्वाङ्गीकारात् । नापि जीवानामिवेश्वरस्य प्रत्यवायहेतुः । तदभावात् । अतोऽदूषणत्वादङ्गीकृतं सूत्रकृतेति न कश्चिद्दोषः । तथा च भाष्यम् । न च पुनर्वैषम्याद्यापातेन दोष इति ॥ २-१-१० ॥

— ಪದಾರ್ಥದೀಪಿಕಾ —

ಸುಖದುಃಖ ಸಾಧನತ್ವವು ಅಸತ್ಯವಾಗಬೇಕಾದೀತು ಹಾಗಾದಲ್ಲಿ ಅದಕ್ಕೆ ಪ್ರಾಮಾಣ್ಯವು ಹೇಗೆ ಸಲ್ಲೀತು? ಆದುದರಿಂದ, ಸೂತ್ರಕಾರರು ಕರ್ಮಾದಿ ಸಾಪೇಕ್ಷತಾ ಪಕ್ಷವನ್ನು ಸ್ವೀಕರಿಸಿ, ವೈಷಮ್ಯ ನೈರ್ಘೃಣ್ಯಗಳನ್ನು ಪರಿಹರಿಸ ಲಾಗಿದ "ಅತೋಽನ್ಯತ್ತು" ಇದರಿಂದ ಭಿನ್ನವಾದ ಎರಡನೆಯ ತರಹದ ವೈಷಮ್ಯ ನೈರ್ಘೃಣ್ಯವು " ವೈಷಮ್ಯಾದಿನಾಮವುಳ್ಳದ್ದಲ್ಲ " – ದೂಷಣರೂಪವಲ್ಲವೆಂದು ತಾತ್ಪರ್ಯ ಹೇಗೆಂದರೆ—ವೈಷಮ್ಯಾದಿಗಳಂತೂ ಸ್ವರೂಪತಃ ದೋಷಗಳಲ್ಲ ಆದರೆ ದೋಷದ ಕಾರಣಗಳಾದುದುದರಿಂದ ದೋಷಗಳು ಈ ತರಹದ ವೈಷಮ್ಯ ನೈರ್ಘೃಣ್ಯವು ವೇದದ ಅಪ್ರಾಮಾಣ್ಯಕಾರಣವಲ್ಲ ಏಕೆಂದರೆ ಕರ್ಮಾದಿ ಸಾಪೇ ಕ್ಷತೆಯನ್ನಂಗೀಕರಿಸಲಾಗಿದೆ ಜೀವರಿಗೆ ಹೇಗೋ ಹಾಗೆ ಈಶ್ವರನಿಗೆ ಪ್ರತ್ಯವಾಯ ಕಾರಣವೂ ಅಲ್ಲ ಏಕೆಂದರೆ ಅದು ಇರುವುದಿಲ್ಲ ಆದುದರಿಂದ ದೂಷಣವಲ್ಲ ವಾದುದರಿಂದ ಸೂತ್ರಕಾರರು ಅದನ್ನು ಒಪ್ಪಿರುವುದರಿಂದ ಯಾವದೇ ದೋಷ ವಿಲ್ಲ ಇದರಂತೆಯೇ "ನ ಚ ಪುನರ್ವೈಷಮ್ಯಾದ್ಯಾಪಾತೇನ ದೋಷಃ" ಎಂಬು ದಾಗಿ ಭಾಷ್ಯವು ಇರುತ್ತದೆ ||೨ ೧ ೧೦ ||

— ವಿಶೇಷಾರ್ಥಪ್ರದೀಪಿಕಾ —

"ಅನ್ಯತ್ತು" — ಎಂಬುದು ಅನುವಾದವು ಅದರ ಅರ್ಥ "ದ್ವಿತೀಯಂ" ಎಂಬುದು

"ತದಭಾವಾತ್" — ವಿಧಿನಿಷೇಧಗಳಿಗೆ ನಿಲುಕದವನು ಈಶ್ವರನು, ಈ ಕಾರಣದಿಂದ, ಹೀಗೆ ಅರ್ಥ

"ಏವಂತರ್ಹಿ" ಇತ್ಯಾದಿ ವಾಕ್ಯಗಳಿಂದ ಹೇಳಿದುದನ್ನು ಭಾಷ್ಯಾರೂಢ ವೆಂದು "ತಥಾಚ" ಈ ವಾಕ್ಯದಿಂದ ತೋರಿಸುತ್ತಾರೆ ಅಥವಾ ಈ ಅನುಮಾನವು

॥ ॐ सर्वधर्मोपपत्तेश्च ॐ ॥ सर्वे चेतना अपूर्णगुणा दोषिणश्च दृष्टास्तद्दृष्टान्तेन चेतनत्वादीश्वरस्यापि समासव्यासाभ्यामपरिपूर्णगुणत्वं दोषित्वं च स्यादिति पूर्वपक्षोऽत्राधिकरणे निरस्यते । तदिदमस्पष्टं भाष्ये । चशब्दसमुच्चितायाः श्रुतेरेवोदाहृतत्वात् ; युक्तेरप्युत्पादनात ।

— ಪದಾರ್ಥದೀಪಿಕಾ —

ಓಂ ॥ ಸರ್ವಧರ್ಮೋಪಪತ್ತೇಶ್ಚ ॥ ಓಂ ॥ ಸಕಲ ಚೇತನಗಳು ಅಪೂರ್ಣ ಗುಣ ಹಾಗೂ ದೋಷವುಳ್ಳವುಗಳಾಗಿರುವುದು ಕಂಡಿದೆ ಅವುಗಳ ದೃಷ್ಟಾಂತದಿಂದ, ಚೇತನತ್ವವಿರುವುದರಿಂದ, ಈಶ್ವರನೂ, ಸಂಕ್ಷೇಪ ವಿಸ್ತರಗಳಿಂದ, ಅಪೂರ್ಣ ಗುಣಗಳುಳ್ಳವನೂ ದೋಷಿಯೂ ಆಗಲಿ ! ಎಂಬ ಪೂರ್ವಪಕ್ಷವು ಈ ಅಧಿಕರಣದಲ್ಲಿ ನಿರಾಕರಿಸಲ್ಪಡುತ್ತದೆ ಇದು ಭಾಷ್ಯದಲ್ಲಿ ಸ್ಪಷ್ಟವಿಲ್ಲ ಏಕೆಂದರ– ' ಚ " ಶಬ್ದದಿಂದ ಸಮುಚ್ಚಯಗೊಳಿಸಲ್ಪಟ್ಟ ಶ್ರುತಿಯನ್ನೇ ಉದಾಹರಿಸಿದ್ದಾರೆ ಆದರ

— ವಿಶೇಷಾರ್ಥಪ್ರದೀಪಿಕಾ —

ಭಾಷ್ಯದ ವಿವರಣವೆಂಬುದಾಗಿ, ಇಲ್ಲವೆ "ವೈಷಮ್ಯ ಮುಂತಾದುದು ಸ್ವಯಂ ದೋಷವಲ್ಲ ಆದರೆ ದೋಷ (ಪಾಪದ) ಕಾರಣವಾದುದರಿಂದ ದೋಷವು" ಹೀಗೆ ಹೇಳಿದ ಅರ್ಥದ ಬಗ್ಗ ಸಂವಾದಕ್ಕಾಗಿ ಈ ವಾಕ್ಯವನ್ನು ಹೇಳುತ್ತಾರೆಂದು ಹೇಳಬಹುದು

ಪುನರ್ವೈಷಮ್ಯ ಮುಂತಾದುದು ಇರುವುದೆಂಬ ಕಾರಣದಿಂದ, ಈಶ್ವರನಿಗ ದೋಷವು (ದೋಷಿತ್ವವು) ಬರುವುದಿಲ್ಲ "ದೋಷಃ" — ವೇದದ ಅಪ್ರಾಮಾಣ್ಯವೆಂಬ ದೋಷವು ಇಲ್ಲವೆ ಜೀವರಿಗೆ ಇರುವ ಪ್ರತ್ಯವಾಯ (ಪಾಪ) ರೂಪವಾದ ದೋಷವು ಹೀಗೆ ಅರ್ಥ ೨-೧-೧೦

ಹಿಂದಿನ ಅಧಿಕರಣದಿಂದ ಸಂಗತಿ, ಪಾದಾದ್ಯಂತರ್ಭಾವಸಂಗತಿಗಳನ್ನು ತಿಳಿಸುವದಕ್ಕೋಸ್ಕರ "ಸರ್ವ" ಇತ್ಯಾದಿವಚನದಿಂದ, ಈ ಅಧಿಕರಣದ ಅರ್ಥವನ್ನು ಹೇಳುತ್ತಾರ "ಸಮಾಸವ್ಯಾಸಾಭ್ಯಾಂ" –'ಈಶ್ವರನು ಸರ್ವಗುಣಪೂರ್ಣನಲ್ಲ ಏಕೆಂದರ ಚೇತನನಾಗಿದ್ದಾನೆ, ಅವನು ದೋಷದೂರನಲ್ಲ ಏಕೆಂದರೆ ಚೇತನನಾಗಿದ್ದಾನೆ," ಹೀಗೆ ಸಂಕ್ಷೇಪವು 'ಈಶ್ವರನು ಸಂಪೂರ್ಣವಾದ ಸಕಲವಸ್ತುಗಳ ಜ್ಞಾನವುಳ್ಳವನಲ್ಲ, ಪೂರ್ಣಆನಂದವುಳ್ಳವನಲ್ಲ, ಪೂರ್ಣಶಕ್ತಿಯುಳ್ಳವನಲ್ಲ, ನಿಃಶೇಷಶ್ರಮಹೀನನಲ್ಲ, ನಿಃಶೇಷದುಃಖರಹಿತನಲ್ಲ ಏಕೆಂದರ ಚೇತನನಾಗಿದ್ದಾನೆ" ಹೀಗೆ ವಿಸ್ತಾರ ಸಂಕ್ಷೇಪ ವಿಸ್ತರಗಳಿಂದ

' ಯುಕ್ತೇಃ"='ಉಪಪತ್ತಿ" ಈ ಶಬ್ದದಿಂದ ಹೇಳಿದ ಯುಕ್ತಿಯನ್ನು

## ॥ ॐ सर्वधर्मोपपत्तेश्च ॐ ॥

यदधीना गुणाश्चैव दोषा अपि हि सर्वशः ॥
गुणास्तस्य कथं न स्युः स्युर्दोषाश्च कथ पुनः ॥

अतः स्पष्टं व्याचष्टे ॥ यदधीना इति । चापिशब्दावन्योन्यसमुच्चये । एवशब्दस्य यदधीना एवेत्यन्वयः । हिशब्दः सर्वस्य भगवदधीनतायां श्रुत्यादिप्रसिद्धिं द्योतयति । कथमित्याक्षेपे । द्वेधा हि वस्तु न प्राप्यते । तत्र स्वातन्त्र्याभावाद्वा प्रेप्साभावाद्वा । द्वेधा च न हीयते । स्वातन्त्र्याभावाद्वा । जिहासाभावाद्वा । अस्ति तावदीश्वरस्य सर्वत्र

ಸಮಸ್ತಗಳಾದ ಗುಣಗಳೂ ದೋಷಗಳೂ ಯಾವ ಶ್ರೀಹರಿಯ ಅಧೀನಗಳೇ ಆಗಿವೆಯೋ ಹೀಗೆ ಶ್ರುತಿಪ್ರಸಿದ್ಧಿಯೋ ಅಂಥ ಶ್ರೀಹರಿಗ ಜ್ಞಾನಾನಂದಾದಿಗುಣಗಳು ಹೇಗೆ ಇರುವುದಿಲ್ಲ? (ಇದ್ದೇ ಇರುತ್ತವೆ.) ದೋಷಗಳು ಹೇಗೆ ಇರುತ್ತವೆ? (ಇರುವುದೇ ಇಲ್ಲ)

### — ಪದಾರ್ಥದೀಪಿಕಾ —

ಯುಕ್ತಿಯನ್ನು ವಿವರಿಸಲಿಲ್ಲ ಆದುದರಿಂದ ಸ್ಪಷ್ಟವಾಗಿ 'ಯದಧೀನಾ' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರ "ಚ, ಅಪಿ," ಈ ಶಬ್ದಗಳು ಪರಸ್ಪರ ಸಮುಚ್ಚಯಾರ್ಥದಲ್ಲಿವೆ 'ಏವ" ಶಬ್ದಕ್ಕ "ಯದಧೀನಾ ಏವ" ಎಂಬುದಾಗಿ ಅನ್ವಯವಿದೆ "ಹಿ" ಶಬ್ದವು, ಎಲ್ಲವು ಭಗವದಧೀನವೆಂಬಲ್ಲಿ ಶ್ರುತ್ಯಾದಿ ಪ್ರಸಿದ್ಧಿಯನ್ನು ತೋರಿಸುತ್ತದ "ಕಥಂ" ಎಂಬುದು ಆಕ್ಷೇಪಾರ್ಥದಲ್ಲಿದೆ ಎರಡು ಕಾರಣಗಳಿಂದ ವಸ್ತು, ದೊರೆಯುವುದಿಲ್ಲ ಅದರಲ್ಲಿ ಸ್ವಾತಂತ್ರ್ಯವಿಲ್ಲದಿರುವುದರಿಂದ ಹಾಗು ತೆಗೆದುಕೊಳ್ಳಬೇಕೆಂಬ ಇಚ್ಛೆಯಿಲ್ಲದಿರುವುದರಿಂದ, ಇದರಂತ ಎರಡು ಕಾರಣ (ರೀತಿ)ಗಳಿಂದ ವಸ್ತುವನ್ನು ಬಿಡಲಿಕ್ಕಾಗುವುದಿಲ್ಲ ಸ್ವಾತಂತ್ರ್ಯವಿಲ್ಲದಿರುವುದರಿಂದ, ಹಾಗು ಬಿಡಲು ಇಚ್ಛೆಯು ಇಲ್ಲದಿರುವುದರಿಂದ, ಈಶ್ವರನಿಗಂತೂ

### — ವಿಶೇಷಾರ್ಥಪ್ರದೀಪಿಕಾ —

ಮುಂದೆ ಹೇಳಲಿರುವ ಪ್ರಯೋಗಗಳಲ್ಲಿಯ ಹೇತುಗ ಸಾಧ್ಯದೊಡನೆ ಇರಬೇಕಾದ ವ್ಯಾಪ್ತಿಯನ್ನು 'ದ್ವೇಧಾ ಹಿ" ಇತ್ಯಾದಿವಾಕ್ಯಗಳಿಂದ ವಿಶದಪಡಿಸುತ್ತಾರ "ತತ್ರ"=ವಸ್ತುವಿನ ಪ್ರಾಪ್ತಿಯಲ್ಲಿ

"ನ ಹೀಯತೇ'–ತ್ಯಜಿಸಲ್ಪಡುವದಿಲ್ಲ

स्वातन्त्र्यम् । अस्ति च मया सर्वदानन्दादिगुणवता दुःखादिदोष-वर्जितेन भाव्यमितीच्छा प्रेक्षावत्त्वात् । अतः कथं तस्यानन्दादिगुण-पूर्णत्वं दुःखादिसर्वदोषदूरत्वं न भवति । अत्रेते प्रयोगाः । ईश्वरः सकलगुणपूर्णः सर्वदोषदूरश्च । स्वतन्त्रत्वात् । व्यतिरेकेण यज्ञदत्तवत् । ईश्वरो विप्रतिपन्नगुणवान् । तत्र प्रेप्सावत्त्वे सति स्वतन्त्रत्वात् । यो यत्र प्रेप्सावत्त्वे सति स्वतन्त्रः स तद्वान् यथा सम्प्रतिपन्नः । ईश्वरो न

— ಪದಾರ್ಥದೀಪಿಕಾ —

ಸರ್ವತ್ರ ಸ್ವಾತಂತ್ರ್ಯವು ಇರುತ್ತದೆ ಮತ್ತು ಅವನಿಗೆ "ಸರ್ವದಾ ಆನಂದಾದಿ ಗುಣವುಳ್ಳವನೂ ದುಃಖಾದಿದೋಷವಿಲ್ಲದವನೂ ಇರಬೇಕೆಂಬ" ಇಚ್ಛೆಯು ಇದ್ದೇ ಇದೆ ಏಕೆಂದರೆ ಅವನು ಮಹಾ ಜ್ಞಾನಿಯಾಗಿರುತ್ತಾನೆ ಆದುದರಿಂದ, ಆನಂದಾದಿ ಸಕಲಗುಣಪೂರ್ಣತೆಯೂ ದುಃಖಾದಿದೋಷದೂರತೆಯೂ ಅವನಿಗೆ ಹೇಗೆ ಬರಲಾರದು? ಇಲ್ಲಿ ಈ ಪ್ರಯೋಗಗಳು (೧) ಈಶ್ವರನು ಸಕಲಗುಣಪೂರ್ಣನೂ ಸರ್ವದೋಷದೂರನೂ ಆಗಿದ್ದಾನೆ ಏಕೆಂದರ- ಸ್ವತಂತ್ರನಾಗಿರುತ್ತಾನೆ ಇದರಲ್ಲಿ ಯಜ್ಞದತ್ತನು ವ್ಯತಿರೇಕದೃಷ್ಟಾಂತನು (೨) ಈಶ್ವರನು ವಿಪ್ರತಿಪನ್ನ ಗುಣವುಳ್ಳವನು ಏಕೆಂದರ- ಅವುಗಳನ್ನು ಕುರಿತು ತೆಗೆದುಕೊಳ್ಳುವ ಇಚ್ಛೆಯುಳ್ಳವನಾಗಿದ್ದು ಸ್ವತಂತ್ರನಾಗಿದ್ದಾನೆ ಯಾವ ವಿಷಯ ದಲ್ಲಿ ಯಾವನು ಪಡೆಯುವ ಇಚ್ಛೆಯುಳ್ಳವನಾಗಿದ್ದು ಸ್ವತಂತ್ರನಿರುತ್ತಾನೋ ಅವನು ಅದನ್ನುಳ್ಳವನು ಇದರಲ್ಲಿ ಸಂಪ್ರತಿಪನ್ನನು ದೃಷ್ಟಾಂತನು. (೩)

— ವಿಶೇಷಾರ್ಥಪ್ರದೀಪಿಕಾ —

"ಅಸ್ತಿಚ ಸರ್ವತ್ರ ಸ್ವಾತಂತ್ರ್ಯಂ"-ಆರಂಭಣಾಧಿಕರಣದಲ್ಲಿ "ಆತ್ಮನಿಚೈವಂ ವಿಚಿತ್ರಾಶ್ಚಹಿ'' ಇತ್ಯಾದಿ ಸೂತ್ರಗಳಲ್ಲಿ ''ಸರ್ವತ್ರ ಈಶ್ವರನ ಸ್ವತಂತ್ರ್ಯವಿದ" ಎಂಬ ವಿಷಯವನ್ನು ಸಮರ್ಥಿಸಿದ್ದಾಗಿದ, ಹೀಗ ಭಾವ

ಸಂಕ್ಷೇಪದಿಂದ ಪೂರ್ವಪಕ್ಷದಲ್ಲಿ ಹೇಳಿದ ಅನುಮಾನಕ್ಕ ಪ್ರತಿ ಅನುಮಾನ ವನ್ನು "ಈಶ್ವರಃ ಸಕಲಗುಣಪೂರ್ಣಃ" ಇತ್ಯಾದಿವಚನದಿಂದಲೂ, ವಿಸ್ತಾರದಿಂದ ಹೇಳಿದ ಅನುಮಾನಕ್ಕೆ ಪ್ರತಿಅನುಮಾನವನ್ನು ''ಈಶ್ವರಃ ವಿಪ್ರತಿಪನ್ನ ಗುಣ ವಾನ್" ಇತ್ಯಾದಿವಚನದಿಂದಲೂ ಹೇಳುತ್ತಾರ 'ಸಂಪೂರ್ಣಜ್ಞಾನವಾನ್, ಸಂಪೂರ್ಣಸುಖವಾನ್," ಇತ್ಯಾದಿ ಪ್ರಯೋಗಗಳನ್ನು "ಆದಿ" ಪದದಿಂದ ಗ್ರಹಿಸಬೇಕು. ಇದರಂತೆ ಮುಂದಿನ ಪ್ರಯೋಗದಲ್ಲಿಯೂ "ದುಃಖರೂಪದೋ

सर्वधर्मोपपत्तेस्तद्वाक्यैरपि हि तादृशैः ॥
निर्दोषाशेषगुणको निर्णीतो भगवान्हरिः ॥ ११ ॥
इति श्रीमदानन्दतीर्थभगवत्पादाचार्यविरचिते श्रीमद्ब्रह्मसूत्रानु-
व्याख्याने द्वितीयाध्यायस्य प्रथमः पादः ॥ २-१ ॥ छ ॥

विमतदोषवान् । तज्जिहासुत्वे सति स्वतन्त्रत्वात् । यो यत्र जिहासा-वत्त्वे सति स्वतन्त्रः स तदभाववान् । यथा सम्मत इति । तदेव-मुक्तप्रकारेण सर्वेषां धर्माणां गुणानां दोषाभावानां च सम्बन्धि-न्यास्तत्प्रतिपादिकाया उपपत्तेस्तादृशैः सर्वगुणपूर्त्यादेरुपपादकैः । हिशब्दस्तेषां गुणाः श्रुता इत्यादीनां प्रसिद्धतां सूचयति । तदनेन

ಸರ್ವಧರ್ಮಗಳನ್ನು ಪ್ರತಿಪಾದಿಸುವ ಯುಕ್ತಿಗಳಿಂದಲೂ, ಸಮಸ್ತಗುಣ ಪೂರ್ಣತ್ವಾದಿಗಳನ್ನು ಪ್ರತಿಪಾದಿಸುವ ವಾಕ್ಯಗಳಿಂದಲೂ, ಭಗವಾನ್ ನಾರಾಯಣನು, ಯಾವದೇ ದೋಷವಿಲ್ಲದ ಸಮಸ್ತಗುಣಪೂರ್ಣನೆಂಬುದಾಗಿ ನಿರ್ಣಯಿಸಲ್ಪಟ್ಟಿರುತ್ತಾನೆ. ಇದು ಶ್ರುತಿಪ್ರಸಿದ್ಧವು. ೨—೧—೧೧

— ಪದಾರ್ಥದೀಪಿಕಾ —

ಈಶ್ವರನು ವಿವಾದಾಸ್ಪದ ದೋಷವುಳ್ಳವನಲ್ಲ ಏಕೆಂದರೆ ಅದನ್ನು ಬಿಡುವ ಇಚ್ಛೆಯುಳ್ಳವನಾಗಿದ್ದು, ಸ್ವತಂತ್ರನಾಗಿರುತ್ತಾನೆ ಯಾವನು ಯಾವುದರ ಬಗ್ಗೆ ಬಿಡುವ ಇಚ್ಛೆಯುಳ್ಳವನಾಗಿದ್ದು ಸ್ವತಂತ್ರನೋ ಅವನು ಅದರಿಂದ ರಹಿತನಿರುತ್ತಾನೆ. ಸಮ್ಮತ ಪುರುಷನಿಲ್ಲಿ ಉದಾಹರಣವು ಹೀಗೆ ಹಿಂದೆ ಹೇಳಿದ ರೀತಿಯಿಂದ, ಸರ್ವಧರ್ಮಗಳ ಅಂದರೆ ಎಲ್ಲ ಗುಣಗಳ ಹಾಗು ದೋಷದ ಅಭಾವಗಳ, " ಸಂಬಂಧಿಯಾದ " ಅಂದರೆ ಪ್ರತಿಪಾದಕವಾದ ಉಪಪತ್ತಿಯು (ಯುಕ್ತಿಯು) ಇರುವುದರಿಂದ, "ತಾದೃಶೈಃ"= ಸಕಲಗುಣ ಪೂರ್ಣತ್ವಾದಿಗಳ ಉಪಪಾದಕಗಳಾದ " ಹಿ " ಶಬ್ದವು, " ಗುಣಾಃಶ್ರುತಾಃ " ಇತ್ಯಾದಿಗಳ ಪ್ರಸಿದ್ಧಿಯನ್ನು ಸೂಚಿಸುತ್ತದೆ ಇದರಿಂದ ಸ್ವಪಕ್ಷದ ವಿಷಯದಲ್ಲಿ ಪ್ರಮಾಣವನ್ನು

— ವಿಶೇಷಾರ್ಥಪ್ರದೀಪಿಕಾ —

ಷವಾನ್ ನ, ಭ್ರಮರೂಪದೋಷವಾನ್ ನ" ಇತ್ಯಾದಿ ತಿಳಿಯಬೇಕು

ಮೂಲವಾಕ್ಯದಲ್ಲಿ ಶೇಷದಯೋಜನೆಯನ್ನು "ತದೇವಂ" ಇತ್ಯಾದಿವಚನದಿಂದ ತೋರಿಸುತ್ತಾರೆ ಸರ್ವಧರ್ಮಾಣಾಂಉಪಪತ್ತೇಃ" ಎಂಬುದಾಗಿ ಷಷ್ಠೀ ಸಮಾಸದಲ್ಲಿ, ಷಷ್ಠೀವಿಭಕ್ತಿಯ ಅರ್ಥವನ್ನು "ಸಂಬಂಧಿನ್ಯಾಃ" ಎಂಬ ವಚನ

स्वपक्षे प्रमाणमभिदधतैव परकीययुक्तीनां कालात्ययापदिष्टत्वं स्वातन्त्र्याभावोपाधिदुष्टत्वं चोक्तं भवतीति ॥ २-१-११ ॥

इति श्रीमत्पूर्णप्रमतिभगवत्पादसुकृते- ।
रनुव्याख्यानस्य प्रगुणजयतीर्थाख्ययतिना ॥
कृतायां टीकायां विषमपदवाक्यार्थविवृतौ ।
द्वितीयाध्यायस्य प्रथमचरणः पर्यवसितः ॥

इति श्रीमन्न्यायसुधायां द्वितीयाध्यायस्य प्रथमचरणः समाप्तः ॥ २-१ ॥ छ ॥

— ಪದಾರ್ಥದೀಪಿಕಾ —

ಹೇಳುವ ಸೂತ್ರಕಾರರಿಂದಲೇ ಪರಕೀಯ ಯುಕ್ತಿಗಳಿಗೆ ಬಾಧವನ್ನು ಸ್ವಾತಂತ್ರ್ಯ ಭಾವ ಉಪಾದಿಯಿಂದ ದುಷ್ಟತ್ವವೆಂಬುದನ್ನೂ ಹೇಳಿದ್ದಾಗುತ್ತದ ಹೀಗ ಭಾವ

ಇಲ್ಲಿಗೆ ಶ್ರೀಮತ್ಪೂರ್ಣ ಪ್ರಮತಿ ಭಗವತ್ಪಾದರ ಸುಕೃತಿಯಾದ ಅನು ವ್ಯಾಖ್ಯಾನಕ್ಕೆ ಅವರ ಪ್ರಗುಣರಾದ ಜಯತೀರ್ಥರೆಂಬ ಹೆಸರಿನ ಯತಿಗಳು ಮಾಡಿದ ವಿಷಮ ಪದವಾಕ್ಯಾರ್ಥ ವಿವೃತ್ತಿಯೆಂಬ ಟೀಕೆಯಲ್ಲಿ ಎರಡನೆಯ ಅಧ್ಯಾಯದ ಪ್ರಥಮ ಚರಣವು ಮುಗಿದುದು ॥೨-೧-೧೧॥

— ವಿಶೇಷಾರ್ಥಪ್ರದೀಪಿಕಾ —

ದಿಂದ ಹೇಳಿರುತ್ತಾರೆ 'ತೇಷಾಂ" ಎಂಬುದರ ವಿವರಣವೇ 'ಗುಣಾಃಶ್ರುತಾಃ" ಇತ್ಯಾದೀನಾಂ" ಎಂಬುದು ಆ ಭಾಷ್ಯದಲ್ಲಿ ಹೇಳಿದ ಗುಣಗಳಿಗೆ, ಹೀಗೆಭಾವ

"ಪರಕೀಯಯುಕ್ತಿನಾಂ" — ಪೂರ್ವಪಕ್ಷದಲ್ಲಿ ಹೇಳಿದ ಯುಕ್ತಿಗಳಿಗ

"ಕಾಲಾತ್ಯಯಾಪದಿಷ್ಟತ್ವಂ'' – ಪ್ರಮಾಣಬಾಧವು ಅಪೂರ್ಣಗುಣವತ್ವ ಮುಂತಾದ ಸಾಧ್ಯವುಳ್ಳ ಜೀವನಲ್ಲಿ ಸ್ವಾತಂತ್ರ್ಯಭಾವವು ಇದ್ದುದರಿಂದ ಸಾಧ್ಯ ವ್ಯಾಪಕತ್ವವೂ ಚೇತನತ್ವ ಹೇತುವುಳ್ಳ ಈಶ್ವರ(ಪಕ್ಷ)ನಲ್ಲಿ ಸ್ವಾತಂತ್ರ್ಯಭಾವವು ಇಲ್ಲದಿರುವುದರಿಂದ, ಸಾಧನದ ಅವ್ಯಾಪಕತ್ವವೂ ಬರುವುದರಿಂದ, ಪೂರ್ವಪಕ್ಷ ದಲ್ಲಿ ತೋರಿಸಿದ ಅನುಮಾನಗಳಿಗೆ ಈ ಉಪಾಧಿಯು ಬರುವುದೆಂದು ತಿಳಿಯ ಬೇಕು ೨-೧-೧೧

೨ನೇ ಅಧ್ಯಾಯ ೧ನೇ ಪಾದವು ಮುಗಿದುದು

जगज्जन्मादिकारणे सकलगुणपरिपूर्णे समस्तावद्यगन्धविधुरे परे ब्रह्मणि विष्णौ समस्तश्रुतिसमन्वयो यः प्रथमाध्यायेऽभिहितस्तस्य साङ्ख्यादिसमयविरोधेनान्यथात्वशङ्कायां तन्निराकरणार्थमयं द्वितीयः

— ಪದಾರ್ಥದೀಪಿಕಾ —

ಜಗಜ್ಜನ್ಮಾದಿಕಾರಣನಾದ ನಕಲ ಗುಣ ಪರಿಪೂರ್ಣನೂ ನಿಖಿಲ ದೋಷ ಗಳ ಲೇಶದಿಂದ ರಹಿತನೂ ಪರಬ್ರಹ್ಮನೂ ಆದ ವಿಷ್ಣುವಿನಲ್ಲಿ ಪ್ರಥಮಾ ಧ್ಯಾಯದಲ್ಲಿ ಹೇಳಲ್ಪಟ್ಟ ಸಮಸ್ತ ಶ್ರುತಿಸಮನ್ವಯವು ಯಾವದೋ ಆ ಸಮನ್ವಯವು ಸಾಂಖ್ಯ ಮುಂತಾದ ಸಮಯ ವಿರೋಧವು ಬರುವುದರಿಂದ, ಬೇರೆಯವರನ್ನು ವಿಷಯೀಕರಿಸಿರಬಹುದು, ವಿಷ್ಣುವಿನನ್ನು ವಿಷಯೀಕರಿ ಸಿಲ್ಲ ಎಂಬ ಆಶಂಕಯು ಬರಲು ಅದರ ನಿರಾಕರಣಕ್ಕಾಗಿ ಈ ಎರಡನಯ

— ವಿಶೇಷಾರ್ಥಪ್ರದೀಪಿಕಾ —

ಮೂಲವನ್ನು ಅವತಾರಿಸಲು (ಕೆಳಗಿಳಿಸಲು–ಗ್ರಹಣಮಾಡಲು) ಶಂಕೆ ಯನ್ನು ಎಬ್ಬಿಸುವುದಕ್ಕೋಸ್ಕರ, ಇಲ್ಲವೆ ಈ ಅಧ್ಯಾಯದಲ್ಲಿ ಅಂತರ್ಭಾವವನ್ನು ತೋರಿಸುವುದಕ್ಕೋಸ್ಕರ ಅಥವಾ ಪರಮತಗಳು ದೋಷದುಷ್ಟಗಳೆಂದು ಹೇಳು ವುದು ಈ ವಾದದಲ್ಲಿ ವ್ಯರ್ಥವಾದುದೆಂಬ ಆಶಂಕೆಯನ್ನು ಕಳೆಯಲು "ಜಗಜ್ಜ ನ್ಮಾದಿ" ಇತ್ಯಾದಿವಾಕ್ಯದಿಂದ ಈ ವಾದದ ಪ್ರತಿಪಾದ್ಯವಾದ ವಿಷಯವನ್ನು ಹೇಳುತ್ತಾರೆ "ಜಗಜ್ಜನ್ಮಾದಿಕಾರಣೇ" ಎಂಬುದು "ಜನ್ಮಾದ್ಯಸ್ಯಯತಃ" ಎಂಬ ಲಕ್ಷಣಸೂತ್ರದಲ್ಲಿ ಹೇಳಲ್ಪಟ್ಟ ವಿಶೇಷಣವು ಇದರಿಂದ ಉಪಪಾದಿಸಲ್ಪಟ್ಟ, ಯೌಗಿಕವಾದ 'ಬ್ರಹ್ಮ" ಪದದಿಂದ ಹೇಳಲ್ಪಟ್ಟ ವಿಶೇಷಣವು "ಸಕಲಗುಣ ಪರಿಪೂರ್ಣೇ" ಎಂಬುದು ಇದನ್ನು ''ವೈಶೇಷಿಕಾದಿಗಳ ಮತದ ವಿರೋಧಕ್ಕಾಗಿ ಹೇಳಿದ್ದಾರೆಂದೂ ಹೇಳಬಹುದು ಅಥವಾ ಸಮಸ್ತಶ್ರುತಿಗಳ ಸಮನ್ವಯದ ಸಂಘಟನಗಾಗಿಯಾದರೂ ಹೇಳಿದ್ದಾರೆ ಸ್ವಾತಂತ್ರ್ಯ, ಸರ್ವಜ್ಞತೆ, ಪೂರ್ಣಾ ನಂದ ಮುಂತಾದ ಸಕಲ ಗುಣಪರಿಪೂರ್ಣತೆಯನ್ನು ಹೇಳಿದುದರಿಂದ ಲಭಿಸಿದ, ಪಾರತಂತ್ರ್ಯ ಅಜ್ಞಾನ ಮುಂತಾದ ದೋಷರಾಹಿತ್ಯ (ದೋಷವಿಲ್ಲದಿರುವಿಕೆ) ಯೆಂಬ ವಿಶೇಷಣವನ್ನು ''ಸಮಸ್ತಾವದ್ಯಗಂಧವಿಧುರೇ'' ಎಂಬ ವಚನದಿಂದ ಹೇಳಿದ್ದಾರೆ. ಇವೆರಡೂ ವಿಶೇಷಣಗಳ ಉಪಪಾದಕವಾಗಿ ''ಜಗಜ್ಜನ್ಮಾದಿಕಾ ರಣೇ'' ಎಂಬ ವಿಶೇಷಣವನ್ನು ಮುಂಚೆ ಹೇಳಿದ್ದು ಶೈವ ಮುಂತಾದ ಮತಗಳ ವಿರೋಧಕ್ಕಾಗಿ ''ಬ್ರಹ್ಮಣಿ'' ಎಂಬುದಕ್ಕೆ ''ವಿಷ್ಣೌ'' ಎಂಬುದಾಗಿ ವ್ಯಾಖ್ಯಾನಿಸಿರುತ್ತಾರೆ ಈ ಮೂರು ವಿಶೇಷಣಗಳು ವಿಷ್ಣುವಿನಲ್ಲಿ ಅಸಂಭಾವಿತ

पाद आरभ्यते । नन्वनारम्भणीय एवायं पादः । तथा हि । साङ्ख्यादिमतानि किं स्मृतित्वेनोक्तार्थमन्यथयन्तीति शङ्क्यते । किं वा युक्त्युपेततया । अथवा श्रुत्युपेततया । यद्वा प्रत्यक्षोपेततया । नाद्यः । प्रतिस्मृतिपराहतत्वेनाप्तिनिश्चायकाभावेन च तेषामपस्मृति-

— ಪದಾರ್ಥದೀಪಿಕಾ —

ಪಾದವು ಪ್ರಾರಂಭಿಸಲ್ಪಡುತ್ತದೆ. ಇನ್ನು ಈ ಪಾದವು ಅನಾರಂಭಣಿಯವೇ! ಏಕಂದರೆ- ಸಾಂಖ್ಯ ಮುಂತಾದ ಮತಗಳು ಸ್ಮೃತಿರೂಪದಿಂದ ಹಿಂದೆ ಹೇಳಿದ " ವಿಷ್ಣುವಿನಲ್ಲಿ ಸಮಸ್ತ ಶ್ರುತಿ ಸಮನ್ವಯ " ವೆಂಬ ಅರ್ಥವನ್ನು ಬದಲಿಸುವ ದೆಂದು ಶಂಕಿಸುವುದೋ ? ಅಥವಾ ಯುಕ್ತಿಗಳಿಂದ ಕೂಡಿದುದರಿಂದ ಬದಲಿ ಸುವದೆಂದೋ? ಅಥವಾ ಶ್ರುತಿಯಿಂದ ಕೂಡಿದುದರಿಂದ ಬದಲಿಸುವುದೆಂದೋ? ಇಲ್ಲವೆ ಪ್ರತ್ಯಕ್ಷದಿಂದ ಕೂಡಿರುವುದರಿಂದ ಬದಲಿಸುವದಂದೋ? ಹೀಗ ಪ್ರಶ್ನೆ ಇವುಗಳಲ್ಲಿ ಮೊದಲನಯ ಪಕ್ಷವು ಸರಿಯಾದುದಲ್ಲ ಏಕಂದರೆ— ವಿರುದ್ಧವಾದ ಇನ್ನೊಂದು ಸ್ಮೃತಿಯಿಂದ ಪರಾಹತವಾದುದರಿಂದ ಆಪ್ತಿಯ ನಿಶ್ಚಾಯಕವಿಲ್ಲ ದಿರುವುದರಿಂದ ಆ ಸಾಂಖ್ಯಾದಿ ಸ್ಮೃತಿಗಳು ಅಪಸ್ಮೃತಿಗಳೆಂಬುದನ್ನು ಪ್ರಥಮ

— ವಿಶೇಷಾರ್ಥಪ್ರದೀಪಿಕಾ —

ಗಳೆಂಬ ಆಶಂಕೆಯನ್ನು ಕಳೆಯಲು ಸೂತ್ರದಲ್ಲಿ ಹೇಳಿದ ''ಬ್ರಹ್ಮ'' ಎಂಬ ಪದವನ್ನು ಪ್ರಯೋಗಿಸಿದ್ದು 'ಸಮನ್ವಯಃ'' ಶಕ್ತಿತಾತ್ಪರ್ಯ[illegible] ನಿಶ್ಚಯವು.

''ತನ್ನಿರಾಕರಣಾರ್ಥಂ" - ಬೇರೆಯವರಲ್ಲಿ ಸಮನ್ವಯವೆಂಬ (ಅನ್ಯಥಾ ತ್ವದ) ಶಂಕೆಯ ನಿರಾಕರಣಕ್ಕಾಗಿ, ಅಥವಾ ಇವಕ್ಕೆ ಮೂಲಭೂತವಾದ ಸಮ ನ್ವಯ ವಿರೋಧದ ನಿರಾಕರಣಕ್ಕಾಗಿ ಹೀಗೆ ಅರ್ಥ

ಮೂಲದಲ್ಲಿ ತೋರಿಸಿದ ಅಭ್ಯಧಿಕಾಶಂಕೆಯ ಉಪಪತ್ತಿಗಾಗಿ(ಅದರ ಯುಕ್ತಿ ಯುಕ್ತತೆ –ಸಂಭಾವಿತತೆಗಾಗಿ) ಹಿಂದಿನ ಪಾದದಿಂದ ಗತಾರ್ಥವೆಂಬ ಆಶಂಕೆ ಯನ್ನು ತೋರಿಸಿ, ಈ ಪಾದದ ಆರಂಭದ ಬಗ್ಗೆ ಆಕ್ಷೇಪವನ್ನು "ನನು" ಇತ್ಯಾದಿ ವಚನದಿಂದ ತೋರಿಸುತ್ತಾರೆ

" ಸ್ಮೃತಿಯುಕ್ತಿ ಶ್ರುತಿಗುಣ " ಎಂಬ ಮೂಲವಾಕ್ಯದಲ್ಲಿ ಹೇಳಿದ ಕ್ರಮ ವನ್ನು ಅನುಸರಿಸಿ 'ಕಿಂ ಸ್ಮೃತಿತ್ವೇನ'' ಇತ್ಯಾದಿ ವಚನದಿಂದ ವಿಕಲ್ಪಗಳನ್ನು ಮಾಡುತ್ತಾರೆ

"ಅವಶಿಷ್ಟವಾದುದದನ್ನು ಕೊನೆಯಲ್ಲಿ" ಎಂಬ ನ್ಯಾಯದಿಂದ "ಯದ್ವಾ ಪ್ರತ್ಯಕ್ಷೋಪೇತಯಾ'' ಎಂಬುದಾಗಿ ಹೇಳಿದ್ದಾರೆ

त्वस्य प्रथमपादे समर्थितत्वात् । अत एव न चतुर्थः । न द्वितीयः । उक्तार्थविरुद्धानां सकलयुक्तीनामाभासत्वस्य तत्रैव व्युत्पादितत्वात । प्रबलयुक्तिविरोधोऽत्र निरस्यत इति चेन्न । प्राबल्यं हि युक्तीनां श्रुत्यादिप्रमाणमूलत्वेन तत्संवादित्वेन वा बहुत्वेन वा स्यात् । सर्वथाऽपि नाधिकाशङ्कावकाशः । श्रुत्यादिसंवादिनीनां तन्मूलानां

— ಪದಾರ್ಥದೀಪಿಕಾ —

ಪಾದದಲ್ಲಿ ಸಮರ್ಥಿಸಲಾಗಿದೆ ಆದುದರಿಂದಲೇ ನಾಲ್ಕನೆಯ ಪಕ್ಷವೂ ಸರಿಯಾದುದಲ್ಲ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ– ಹಿಂದೆ ಹೇಳಿದ ಸಮನ್ವಯವೆಂಬ ಅರ್ಥಕ್ಕೆ ವಿರುದ್ಧವಾದ ಅರ್ಥಗಳನ್ನು ಹೇಳುವ ಯುಕ್ತಿಗಳು ಆಭಾಸ (ದುಷ್ಟ) ಗಳೆಂಬುದನ್ನು ಆ ಪ್ರಥಮ ಪಾದದಲ್ಲಿಯೇ ಹೇಳಲಾಗಿದೆ ಪ್ರಬಲ ಯುಕ್ತಿವಿರೋಧವು ಇಲ್ಲಿ ನಿರಾಕರಿಸಲ್ಪಡುವುದೆಂದು ಶಂಕಿಸುವುದು ಸರಿಯಲ್ಲ ಏಕೆಂದರೆ– ಯುಕ್ತಿಗಳ ಪ್ರಾಬಲ್ಯವು, ಶ್ರುತಿ ಮುಂತಾದ ಪ್ರಮಾಣ ಮೂಲಕವಾದುದರಿಂದಲೋ, ಆ ಪ್ರಮಾಣ ಸಂವಾದಿಯಾದುದರಿಂದಲೋ ಇಲ್ಲವೆ ಬಹುತ್ವವಿದ್ದುದರಿಂದಲೋ ಬರುತ್ತದೆ ಇಲ್ಲಿ ಯಾವದೇ ರೀತಿಯಿಂದಲೂ (ಸರ್ವವಿಧಗಳಿಂದಲೂ) ಅಧಿಕಾಶಂಕೆಗೆ ಅವಕಾಶವಿಲ್ಲ ಏಕೆಂದರೆ— ಶ್ರುತಿ ಸಂವಾದಿಗಳಾದ, ಇಲ್ಲವೆ ಶ್ರುತಿಮೂಲಕಗಳಾದ ಹಾಗು ಬಹಳಗಳಾದ ಯುಕ್ತಿ

— ವಿಶೇಷಾರ್ಥಪ್ರದೀಪಿಕಾ —

'ಪ್ರತಿಸ್ಮೃತಿಪರಾಹತತ್ವೇನ" ಎಂಬುದು, "ಸ್ಮೃತ್ಯನವಕಾಶ" ಇತ್ಯಾದಿಯಾದ ಸೂತ್ರದಲ್ಲಿಯ 'ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್" ಎಂಬ ಸಿದ್ಧಾಂತಾಂಶದ ಅರ್ಥ =''ಅತಏವ''=ವಿಷ್ಣುಪ್ರತ್ಯಕ್ಷ ಮೂಲಕವಾದ ಸ್ಮೃತಿಗಳಿಂದ ಪರಾಹತ(ನಿರಾಕರಿಸಲ್ಪಟ್ಟಿದ್ದು) ವಾದುದರಿಂದಲೇ!

"ಉಕ್ತಾರ್ಥವಿರುದ್ಧಾನಾಂ" –ಪ್ರಥಮಾಧ್ಯಾಯೋಕ್ತ ಅರ್ಥಗಳಿಗೆ ವಿರುದ್ಧವಾದವುಗಳ "ತತ್ರೈವ"=ದ್ವಿತೀಯಾಧ್ಯಾಯ ಒಂದನೆಯ ಪಾದದಲ್ಲಿ, ನವಿಲಕ್ಷಣತ್ವಾತ್, ಅಭಿಮಾನಿ,'' ಈ ಎರಡು ಅಧಿಕರಣಗಳಲ್ಲಿಯೇ ''ಶ್ರುತಿಗುಣ" ಎಂಬುದನ್ನು, ನಿರಾಕರಿಸಲ್ಪಡುವ ವಿಷಯದೊಡನೆ ವಿವರಿಸುತ್ತಾರೆ "ಪ್ರಬಲಯಾ" ಈ ಪದದಿಂದ. "ಶ್ರುತಿಗುಣ" ಎಂಬಲ್ಲಿಯ 'ಗುಣ' ಪದಕ್ಕೆ "ಮೂಲ"(ಆಧಾರ) ಹಾಗು ''ಸಂವಾದಿ," ಎಂಬ ಅರ್ಥಗಳೆಂಬ ಅಭಿಪ್ರಾಯವು, ಈ ಭಾವದಿಂದ "ತನ್ಮೂಲತ್ವೇನ –ತತ್ಸಂವಾದಿತ್ವೇನ" ಎಂಬುದಾಗಿ ಹೇಳಿದ್ದಾರೆ ''ಶ್ರುತಿ" ಪದವು ''ಉಪಲಕ್ಷಣ – ಇತರ ಸಂಗ್ರಾಹಕವೆಂಬ ಅಭಿಪ್ರಾಯದಿಂದ " ಶ್ರುತ್ಯಾದಿ " ಎಂಬಲ್ಲಿ

बह्वीनां च युक्तीनां तत्रैव निराकृतत्वात् । काश्चिदेव तत्र निरस्ता न समस्ता इति चेन्न । सूत्राणामुपलक्षणार्थत्वात् । अन्यथा युक्त्याभासानामनन्तत्वेनापर्यवसानं स्यात् । पादभेदश्चैवं सति न स्यात् । न तृतीयः । समस्तश्रुतीनां ब्रह्मणि समन्वयस्योक्तत्वात् ।

अत्र कश्चिदाह । स्वपक्षसाधनपरपक्षप्रतिक्षेपाभ्यामेव निर्णयो भवति । तत्र प्रथमाध्याये स्वपक्षे प्रमाणमुक्तम् । तस्य युक्तिविरोधो द्वितीयस्याद्यपादे ( न ) निरस्तः । एवं स्वपक्षस्थापने जाते परपक्ष-

— ಪದಾರ್ಥದೀಪಿಕಾ —

ಗಳನ್ನು ಆ ಪ್ರಥಮ ಪಾದದಲ್ಲಿಯೇ ನಿರಾಕರಿಸಲಾಗಿದೆ ಅಲ್ಲಿ ಕೆಲವೇ ಯುಕ್ತಿಗಳು ನಿರಾಕರಿಸಲ್ಪಟ್ಟಿವೆ, ಸಮಸ್ತಯುಕ್ತಿಗಳು ನಿರಸ್ತವಾಗಿಲ್ಲವೆಂದು ಶಂಕಿಸುವುದು ಸಮಂಜಸವಲ್ಲ ಏಕೆಂದರ ಸೂತ್ರಗಳು ಉಪಲಕ್ಷಣ (ಇತರ ಸಂಗ್ರಾಹಕ) ಗಳಾಗಿವೆ ಇಲ್ಲದಿದ್ದರೆ– ಯುಕ್ತ್ಯಾಭಾಸಗಳು ಅನಂತಗಳಿದ್ದುದರಿಂದ, ಆ ಪಾದವು ಮುಗಿಯದಿರುವ ಪ್ರಸಂಗವು ಬರುತ್ತದೆ ಹೀಗಾದಲ್ಲಿ ಪಾದ ಭೇದವೂ ಆಗದಿರಲಿ ! ಮೂರನೆಯ ಪಕ್ಷವೂ ಯುಕ್ತವಲ್ಲ ಏಕೆಂದರೆ– ಸಮಸ್ತ ಶ್ರುತಿಗಳಿಗೆ ಬ್ರಹ್ಮನಲ್ಲಿ ಸಮನ್ವಯವು ಹೇಳಲ್ಪಟ್ಟಿದೆ

ಇಲ್ಲಿ ಒಬ್ಬನು ಹೇಳುತ್ತಾನೆ– "ಸ್ವಪಕ್ಷ ಸಾಧನ ಪರಪಕ್ಷನಿರಾಕರಣಗಳಿಂದಲೇ ನಿರ್ಣಯವಾಗುತ್ತದೆ ಇವೆರಡರಲ್ಲಿ ಪ್ರಥಮಾಧ್ಯಾಯದಲ್ಲಿ ಸ್ವಪಕ್ಷದ ವಿಷಯದಲ್ಲಿ ಪ್ರಮಾಣವು ಹೇಳಲ್ಪಟ್ಟಿತು ಅದರ ಮೇಲಿನ ಯುಕ್ತಿ ವಿರೋಧವು

— ವಿಶೇಷಾರ್ಥಪ್ರದೀಪಿಕಾ —

"ಆದಿ" ಪದವನ್ನು ಹೇಳಿದ್ದು. "ಬಹುಯುಕ್ತಯಃ" ಎಂಬ ಪದದಿಂದ ನಿವಾರಿಸಲ್ಪಡುವುದನ್ನು "ಬಹುತ್ವೇನ" ಎಂಬ ಪದದಿಂದ ಹೇಳಿದ್ದಾರೆ "ತತ್ರೈವ"- ದ್ವಿತೀಯಾಧ್ಯಾಯದ ಪ್ರಥಮ ಪಾದದಲ್ಲಿಯೇ ! ಇತರ ವ್ಯಪದೇಶಾಧಿಕರಣದಲ್ಲಿ, ಶ್ರುತಿ ಅನುಭವಸಂವಾದವುಳ್ಳ ಯುಕ್ತಿಯನ್ನೂ ಅಸದಧಿಕರಣದಲ್ಲಿ ಶ್ರುತಿ ಸಂವಾದಿಯುಕ್ತಿಯನ್ನೂ, ಭೋಕ್ತ್ರಾಪತ್ತ್ಯಧಿಕರಣದಲ್ಲಿ ಶ್ರುತಿ ಮೂಲಕ ಯುಕ್ತಿಗಳನ್ನೂ ತದನನ್ಯತ್ವಾಧಿಕರಣದಲ್ಲಿ ಬಹುಯುಕ್ತಿಗಳನ್ನೂ ನಿರಾಕರಿಸಿದ್ದಾಗಿದೆ ಹೀಗೆ ಭಾವ

ಪರರು ಹೇಳಿದ ಗತಾರ್ಥತೆಯ ಪರಿಹಾರವನ್ನು ಅನುವಾದದೊಡನೆ "ಕಶ್ಚಿದಾಹ" ಇತ್ಯಾದಿ ವಚನಗಳಿಂದ ನಿರಾಕರಿಸುತ್ತಾರೆ

प्रतिक्षेपार्थमयं पाद आरभ्यत इति । तदयुक्तम् । परपक्षप्रतिक्षेपो हि तदीयसाधननिरासादन्यो नास्ति । साधनानि च स्मृत्यादीन्येव । निरस्तानि समस्तानि तानि प्रथमपाद इति किमस्य कृत्यम् । किञ्चैवं सति विरोधपरिहारोऽध्यायार्थो न स्यादिति । अपर आह । उक्तार्थे स्मृतिविरोधो नास्तीति स्थापितेऽप्यस्ति ब्रह्मणि समन्वयाभावशङ्का । कथम् । यद्यप्यनुमानं ब्रह्मणो जगत्कारणत्वमपबाधितुं नालम् । तथाऽपि कारणान्तरं जगतोऽवगमयितुमलम् । ततश्च वस्तुविकल्पानुपपत्तेरन्यतरपरिग्रहे हेत्वभावात् , ब्रह्मैव जगत्कारणमिति न निश्चेतुं

— ಪದಾರ್ಥದೀಪಿಕಾ —

ಎರಡನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ನಿರಾಕರಿಸಲ್ಪಟ್ಟಿತು ಹೀಗೆ (ಎರಡು ಪಾದಗಳಿಂದ) ಸ್ವಪಕ್ಷದ ಸ್ಥಾಪನೆಯಾಗಲು ಪರಪಕ್ಷದ ನಿರಾಕರಣಾರ್ಥವಾಗಿ ಈ ಪಾದವು ಪ್ರಾರಂಭಿಸಲ್ಪಡುತ್ತದೆ" ಹೀಗೆ ಇದು ಸರಿಯಾದುದಲ್ಲ ಏಕೆಂದರೆ ಪರಕೀಯರು ಹೇಳಿದ ಸಾಧನಗಳ ನಿರಾಕರಣದಿಂದ ಬೇರೆಯಾದ ಪರಪಕ್ಷದ ನಿರಾಕರಣವಿರುವುದಿಲ್ಲ ಸ್ಮೃತಿ ಮುಂತಾದವುಗಳೇ ಪರಪಕ್ಷದ ಸಾಧನಗಳು ಆ ಸ್ಮೃತಿಗಳನ್ನೆಲ್ಲ ಪ್ರಥಮ ಪಾದದಲ್ಲಿಯೇ ನಿರಾಸ ಮಾಡಲಾಗಿದೆ ಆದುದರಿಂದ, ಈ ಎರಡನೆಯ ಪಾದದ ಕೆಲಸವೇನು ? ಮತ್ತು ಹೀಗಾದಲ್ಲಿ ವಿರೋಧಪರಿಹಾರವು ಎರಡನೆಯ ಅಧ್ಯಾಯದ ಅರ್ಥವಾಗದಿರಲಿ ! ಹೀಗೆ ಇನ್ನೊಬ್ಬನು– "ಹಿಂದ ಹೇಳಿದ ಅರ್ಥದಲ್ಲಿ ಸ್ಮೃತಿ ಯುಕ್ತಿ ವಿರೋಧವಿಲ್ಲವೆಂದು ಸ್ಥಾಪಿತವಾದ ಮೇಲೆಯೂ ಬ್ರಹ್ಮನಲ್ಲಿ ಸಮನ್ವಯವಿಲ್ಲವೆಂಬ ಆಶಂಕೆಯು ಬಂದೇ ಬರುತ್ತದೆ ಹೇಗ ? ಎಂದರೆ— ಅನುಮಾನ (ಯುಕ್ತಿ)ವು ಬ್ರಹ್ಮನ ಜಗತ್ಕಾರಣತ್ವವನ್ನು ನಿರಾಕರಿಸುವುದರಲ್ಲಿ ಸಮರ್ಥವಲ್ಲವೆಂಬುದೇನೋ ನಿಜ ಆದರೂ ಬೇರ ಕಾರಣವೂ ಜಗತ್ತಿಗೆ ಇರುವುದೆಂಬುದನ್ನು ತಿಳಿಸಲು ಸಮರ್ಥವಾಗಿದೆ ಆದುದರಿಂದ, ವಸ್ತುವಿನಲ್ಲಿ ದ್ವೈರೂಪ್ಯವಿಲ್ಲವಾದುದರಿಂದ, ಎರಡರಲ್ಲೊಂದನ್ನು ಪರಿಗ್ರಹಣಮಾಡಲು ಕಾರಣ (ವಿಶೇಷ ಪ್ರಮಾಣ) ವಿಲ್ಲವಾದುದರಿಂದ ಬ್ರಹ್ಮನೇ ಜಗತ್ಕಾರಣವೆಂದು ನಿರ್ಣಯಿಸಲು

— ವಿಶೇಷಾರ್ಥಪ್ರದೀಪಿಕಾ —

"ಸ್ಮೃತ್ಯಾದೀನ್ಯೇವ' –ಸ್ಮೃತಿ, ಆದರಿಂದ ಸಹಿತವಾದ ಯುಕ್ತಿ ಶ್ರುತಿ ಪ್ರತ್ಯಕ್ಷಗಳೇ !

शक्यते । प्रत्युत सर्वज्ञप्रणेतृकत्वेनानुमानस्योपबृंहितत्वात् , प्रधानाद्येव जगत्कारणं न ब्रह्मेति बुद्धिः स्यात् । अतो न केवल ब्रह्मणो जगत्कारणत्वमपबाधितुमनुमानं नोत्सहते । किन्तु कारणान्तरमप्यवगमयितुं नालमिति दर्शनार्थं द्वितीयः पाद आरभ्यत इति । एतदप्ययुक्तम् । तथा हि । किमनेनोक्तं स्यात् । यदि प्राक् स्वाभिमतार्थे युक्तिविरोधपरिहारेण स्वपक्षस्थापना विहिता । इदानीं परपक्षप्रतिक्षेपो विधीयत इति । तदोक्तमेवोत्तरम् । अथ युक्तिविरोधपरिहार एव पादद्वयार्थः । किन्तु स्वपक्षविरोधियुक्तिनिराकरण प्रथमे । द्वितीये तु परपक्षसाधकयुक्तिनिराकरणमिति । तन्न । न्यायसाम्येन

— ಪದಾರ್ಥದೀಪಿಕಾ —

ಶಕ್ಯವಾಗುವುದಿಲ್ಲ ಬದಲಾಗಿ ಸರ್ವಜ್ಞರು ಮಾಡಿದವರಾದುದರಿಂದ ಅನುಮಾನವೇ ಉಪೋದ್ಬಲಿತವಾಗುತ್ತದೆ ಆದುದರಿಂದ, ಪ್ರಧಾನಾದಿಗಳೇ ಜಗತ್ಕಾರಣಗಳು, ಬ್ರಹ್ಮನು ಜಗತ್ಕಾರಣನಲ್ಲ" ಎಂಬ ಬುದ್ಧಿಯು ಬರುತ್ತದೆ ಆದುದರಿಂದ, ಕೇವಲ ಬ್ರಹ್ಮನ ಜಗತ್ಕಾರಣತ್ವವನ್ನು ಅಲ್ಲಗಳೆಯಲಷ್ಟೇ ಅನುಮಾನವು ಸಮರ್ಥವಾಗುವುದಿಲ್ಲ ಆದರೆ ಬೇರೆ ಜಗತ್ಕಾರಣವನ್ನು ತಿಳಿಸಲೂ ಅಸಮರ್ಥವಾಗಿದೆಯೆಂಬುದನ್ನು ತೋರಿಸಲು ಎರಡನೆಯ ಪಾದ ಪ್ರಾರಂಭಿಲ್ಪಡುತ್ತದೆ," ಹೀಗೆ ಹೇಳುತ್ತಾನೆ ಅವನ ಈ ಹೇಳಿಕೆಯೂ ಆಯುಕ್ತವಾದುದು ಹೇಗೆಂದರೆ- ಇದರಿಂದ ಹೇಳಲ್ಪಟ್ಟದ್ದೇನು ? ಹಿಂದೆ ತಮ್ಮ ಅಭಿಮತ ಅರ್ಥದ ಬಗ್ಗೆ ಯುಕ್ತಿಯ ವಿರೋಧವನ್ನು ಪರಿಹರಿಸಿ, ಸ್ವಪಕ್ಷದ ಸ್ಥಾಪನೆಯು ಮಾಡಲ್ಪಟ್ಟಿದೆ, ಈಗ ಪರಪಕ್ಷದ ನಿರಾಕರಣವು ಮಾಡಲ್ಪಡುತ್ತದೆ" ಎಂಬ ಅಭಿಪ್ರಾಯವಿದ್ದರೆ— ಹಿಂದೆ ಇದರ ಉತ್ತರವನ್ನು ಹೇಳಿದ್ದೇ ಆಗಿದೆ ಇನ್ನು — ಯುಕ್ತಿ ವಿರೋಧಪರಿಹಾರವೇ ಎರಡೂ ಪಾದಗಳ ಅರ್ಥ ಆದರೆ ಸ್ವಪಕ್ಷದ ಮೇಲಣ ಯುಕ್ತಿಗಳ ನಿರಾಕರಣವು ಪ್ರಥಮ ಪಾದದಲ್ಲಿ, ಎರಡನೆಯ ಪಾದದಲ್ಲಿಯಾದರೋ ಪರಪಕ್ಷ ಸಾಧಕ ಯುಕ್ತಿಗಳ ನಿರಾಕರಣವು ಮಾಡ

— ವಿಶೇಷಾರ್ಥಪ್ರದೀಪಿಕಾ —

"ಉಕ್ತಮೇವೋತ್ತರಂ" —"ಪರಪಕ್ಷಪ್ರತಿಕ್ಷೇಪೋಹಿ" ಇತ್ಯಾದಿ ಅನುವ್ಯಾಖ್ಯಾನದಿಂದ, ಹೇಳಲಾಗಿದೆಯೆಂದು ಭಾವ

स्मृतियुक्तिश्रुतिगुणयुक्तयो बहुयुक्तय ॥
एवं चतुर्विधा नैव विरुद्धयन्तेऽन्वयं प्रति ॥

तासामपि शक्यनिराकरणत्वात्। सार्वज्ञ्यं (सर्वज्ञत्वं) च प्रणेतॄणां प्रागेव निरस्तम्। अतो नायं पाद आरम्भणीय इत्यत आह ॥ स्मृतीति ।

श्रुतयो गुणा उपसर्जना (नि) यासा तास्तथोक्ताः । चतुर्विधा विरोधिप्रतीतयः। अन्वयं प्रति न विरुध्यन्ते इति श्रुतिसमन्वय-

ಸ್ಮೃತಿ ಯುಕ್ತಿ, ಶ್ರುತ್ಯುಪಸರ್ಜನವುಳ್ಳ ಯುಕ್ತಿಗಳು ಬಹುಯುಕ್ತಿಗಳು. ಹೀಗೆ ನಾಲ್ಕು ತರಹವುಳ್ಳ ವಿರೋಧಿ ಪ್ರತೀತಿಗಳು, ಶ್ರುತಿಸಮನ್ವಯವನ್ನು ವ್ಯತ್ಯಾಸ ಮಾಡಲು ಸಮರ್ಥವಾಗುವುದಿಲ್ಲ. ಹೀಗೆ ಪ್ರಥಮ ಪಾದದಿಂದ ನಿರ್ಣ

— ಪದಾರ್ಥದೀಪಿಕಾ —

ಲ್ಪಡುತ್ತದೆಂಬ ಅಭಿಪ್ರಾಯವೂ ಯುಕ್ತವಲ್ಲ ಏಕೆಂದರೆ ನ್ಯಾಯ (ಯುಕ್ತಿ)ವು ಸಮಾನವಾದುದರಿಂದ ಆ ಯುಕ್ತಿಗಳನ್ನೂ ನಿರಾಕರಿಸಲು ಶಕ್ಯವಾಗುತ್ತದೆ ಮತ್ತು ಆಯಾಯ ಆಗಮಗಳ ಪ್ರಣೇತರು ಸರ್ವಜ್ಞರೆಂಬ ವಿಷಯವನ್ನು ಹಿಂದಿನ ಪಾದದಲ್ಲಿಯೇ ನಿರಾಕರಿಸಿದ್ದಾಗಿದೆ ಆದುದರಿಂದ ಈ ಪಾದವು ಆರಂಭಣೀಯವಲ್ಲ ಹೀಗೆ ಪೂರ್ವಪಕ್ಷವು ಬರುವುದರಿಂದ ಅದನ್ನು "ಸ್ಮೃತಿ" ಇತ್ಯಾದಿ ಪದ್ಯದಿಂದ ಪರಿಹರಿಸುತ್ತಾರೆ

'ಸ್ಮೃತಿಯುಕ್ತಿ ಶ್ರುತಿಗುಣ ಯುಕ್ತಯಃ = ಇಲ್ಲಿ " ಶ್ರುತಯಃ ಗುಣಾಃ ಉಪಸರ್ಜನಾಃ ಯಾಸಾಂ ತಾಃ" (ಶ್ರುತಿಗಳು ಗುಣಗಳೆಂದರೆ ಉಪಸರ್ಜನಗಳು ಯಾವವುಗಳಿಗೋ ಅವುಗಳು) ಹೀಗ ವಿಗ್ರಹವಿದೆ ವಿರೋಧಿ ಪ್ರತೀತಿ (ವಿಪ್ರತಿಪತ್ತಿ)ಗಳು ನಾಲ್ಕು ತರಹದವುಗಳು ಅನ್ವಯಂ ಪ್ರತಿ ನ ವಿರುಧ್ಯಂತೇ"

— ವಿಶೇಷಾರ್ಥಪ್ರದೀಪಿಕಾ —

" ಪ್ರತ್ಯುತ ಸರ್ವಜ್ಞಪ್ರಣೇತೃಕತ್ವೇನ' ಎಂಬುದಾಗಿ ಹೇಳಿದ ಅಭಿಪ್ರಾಯವನ್ನು "ಸಾರ್ವಜ್ಞ್ಯಂ ಚ" ಇತ್ಯಾದಿವಚನದಿಂದನಿರಾಕರಿಸುತ್ತಾರೆ "ಪ್ರಾಗೇವ" –"ಇತರೇಷಾಂ ಚಾನುಪಲಬ್ಧೇಃ" ಎಂಬ ಸೂತ್ರದ ಮೇಲೆಹೊರಟ "ನ ಚಾಪ್ತಿನಿಶ್ಚಯಸ್ತತ್ರ ಶಕ್ಯತೇ ವ್ಯಭಿಚಾರತಃ" ಇತ್ಯಾದಿ ಅನುವ್ಯಾಖ್ಯಾನವಚನಗಳಿಂದ ಪ್ರಥಮಪಾದದಲ್ಲಿಯೇ।

ಮೂಲವಾಗುವುದರಿಂದಲೂ ಸಂವಾದಿಯಾಗುವುದರಿಂದಲೂ ಉಪಸರ್ಜನವಾಗುವುದೆಂದು "ಉಪಸರ್ಜನಾಪಿ' ಎಂಬಲ್ಲಿ ತಿಳಿಯಬೇಕು "ಏವಂ ಚತುರ್ವಿಧಾಃ"

इति प्रथमपादेन निर्णीतेऽप्यभियोगत ॥
दर्शनानां प्रवृत्तत्वान्मन्द आशङ्कते पुन ॥

सिद्धमर्थं नान्यथायतुं शक्नुवन्तीत्यर्थः । अभियोग आग्रहः । दृश्यते प्रमेयमेभिरिति दर्शनानि साङ्ख्यादिशास्त्राणि । एतदुक्तं भवति । यद्यपि परमतसाधकानामस्मन्मतबाधकानां च स्मृत्यादीनामाभासत्वव्युत्पादनेन स्वपरपक्षसाधनोपालम्भौ कृतावेवेति परमार्थः । तथाऽप्युक्तेऽर्थे पुनः पुरुषस्याशङ्का भवत्येव । किमेतदेवमन्यथा वेति । कस्मात् । अभियोगतो दर्शनानां प्रवृत्तत्वात्तदुपलम्भादिति ।

ಯಿಂಸಲ್ಪಟ್ಟಿದ್ದರೂ ಸಾಂಖ್ಯಾದಿ ದರ್ಶನಗಳು ಆಗ್ರಹದಿಂದ ಹೊರಟಿರುವುದರಿಂದ ಅಜ್ಞನು ಮತ್ತೂ ಆಶಂಕಿಸುತ್ತಾನೆ

— ಪದಾರ್ಥದೀಪಿಕಾ —

ಎಂಬುವಕ್ಕೆ ಶ್ರುತಿಸಮನ್ವಯದಿಂದ ಸಿದ್ಧವಾದ ಅರ್ಥವನ್ನು ಬದಲು ಮಾಡಲು (ವ್ಯತ್ಯಸ್ತಗೊಳಿಸಲು) ಸಮರ್ಥಗಳಲ್ಲ"ವೆಂದು ಅರ್ಥ "ಅಭಿಯೋಗ"– ಆಗ್ರಹ "ದರ್ಶನಾನಿ"– ಯಾವವುಗಳಿಂದ ಪ್ರಮೇಯದ ದರ್ಶನವಾಗುವದೋ ಅವು ದರ್ಶನಗಳು, ಹೀಗೆ ಅರ್ಥ ಇಲ್ಲಿ ಹೇಳಿದುದು ಇದು— " ಪರಮತದ ಸಾಧಕಗಳೂ ನಮ್ಮ ಮತಕ್ಕೆ ಬಾಧಕಗಳೂ ಆದ ಸ್ಮೃತಿ ಮುಂತಾದವುಗಳು ಆಭಾಸ (ದುಷ್ಟ)ಗಳೆಂದು ತೋರಿಸುವುದರಿಂದ ಸ್ವಪಕ್ಷದ ಸಾಧನ ಪರಪಕ್ಷದ ನಿರಾಕರಣಗಳೆರಡನ್ನೂ ಮಾಡಿದುದೇ ಆಗುತ್ತದೆಂಬುದು, ನಿಜಸಂಗತಿ, ಆದರೂ ಉಕ್ತವಾದ ಅರ್ಥದ ಬಗ್ಗೆ ಪುರುಷನಿಗೆ ಆಶಂಕೆಯು ಬಂದೇ ಬರುತ್ತದೆ ಇದು ಹೀಗೆಯೋ ಇಲ್ಲವೆ ವಿಪರೀತವಾಗಿದೆಯೋ ? ಎಂದು ಏಕೆ ? ಆಗ್ರಹದಿಂದ ದರ್ಶನಗಳು ಪ್ರವೃತ್ತವಾಗಿದ್ದು ಉಪಲಬ್ಧವಾಗುತ್ತವೆ, ಈಕಾರಣದಿಂದ. "

— ವಿಶೇಷಾರ್ಥಪ್ರದೀಪಿಕಾ —

ಎಂಬಲ್ಲಿ, ಬೇಕಾಗಿರುವ ವಿಶೇಷ್ಯವನ್ನು "ವಿರೋಧಿಪ್ರತೀತಯಃ" ಎಂಬುದರಿಂದ ಪೂರೈಸಿದ್ದಾರೆ

ಹಿಂದೆಹೇಳಿದ ಶಂಕಾನಿರಾಸವು ಹೇಗೆ ಆಗುವುದೆಂಬುದನ್ನು "ಏತದುಕ್ತಂ" ಇತ್ಯಾದಿ ವಾಕ್ಯದಿಂದ ವಿಶದಪಡಿಸುತ್ತಾರೆ "ಪರಮಾರ್ಥಃ" ಇಲ್ಲಿಯವರೆಗಿನ ವಚನವು, "ನಿರ್ಣೀತೇಽಪಿ" ಇಲ್ಲಿಯವರೆಗಿನ ಮೂಲದ ತಾತ್ಪರ್ಯದ ಅನುವಾ

अनादिकालतो वृत्ता समया हि प्रवाहत. ॥
न चोच्छेदोऽस्ति कस्यापि समयस्येत्यतो विभुः ॥

ननु च श्रुतयस्तावदपौरुषेयतयाऽनाशङ्कितदोषाः प्रबलयुक्तिभिश्चानुसंहितार्था निरस्तसमस्तप्रतिपक्षाश्च । तत्कथं समन्वयसिद्धेऽर्थेऽभियोगप्रवृत्तदर्शनोपलम्भमात्रेणान्यथात्वशङ्का स्यात् । अतिप्रसङ्गात् । नन्वत एवोक्तं मन्द इति । मैवम् । प्राप्तिमनालोच्य शङ्कमानस्याचिकित्सितशङ्कस्य शास्त्रेऽनाधिकारादित्यतोऽभियोगतो दर्शनाना प्रवृत्तत्वादित्युक्तशङ्काकारणं विवृणोति ॥ अनादीति ।

ಅನಾದಿಕಾಲದಿಂದ, ಪ್ರವಾಹರೂಪದಿಂದ ಸಾಂಖ್ಯಾದಿಸಮಯಗಳು (ಶಾಸ್ತ್ರಗಳು) ಇದ್ದೇ ಇರುವವುಗಳು ಮತ್ತು ಯಾವದೇ ಸಮಯಕ್ಕೂ ಸಹ ನಾಶವಿರುವುದಿಲ್ಲ (ಈ ಕಾರಣದಿಂದ ಮಂದನು ಆಶಂಕಿಸುತ್ತಾನೆ.)

## — ಪದಾರ್ಥದೀಪಿಕಾ —

ಇನ್ನು ಶ್ರುತಿಗಳಂತೂ ಅಪೌರುಷೇಯಗಳಾದುದರಿಂದ ದೋಷ ಶಂಕೆಗೆ ಒಳಪಡದವುಗಳು, ಪ್ರಬಲಯುಕ್ತಿಗಳಿಂದ ನಿರ್ಣಯಿಸಲ್ಪಟ್ಟ ಅರ್ಥವುಳ್ಳವುಗಳು ಮತ್ತು ಸಮಸ್ತ ಪ್ರತಿಪಕ್ಷದ ನಿರಾಸವುಳ್ಳವುಗಳು ಆದುದರಿಂದ, ಸಮನ್ವಯದಿಂದ ಸಿದ್ಧವಾದ ಅರ್ಥದ ಬಗ್ಗೆ, ಆಗ್ರಹದಿಂದ ಹೊರಟ ದರ್ಶನಗಳ ಉಪಲಂಭ ಮಾತ್ರದಿಂದಲೇ ಅದು ವಿಪರೀತವಾಗಿರುವುದೆಂಬ ಆಶಂಕೆಯು ಹೇಗೆ ಬರುತ್ತದೆ? ಏಕೆಂದರೆ ಅತಿಪ್ರಸಂಗವು ಬರುತ್ತದೆ ಹೀಗೆ ಆಕ್ಷೇಪವು ಇದರ ಮೇಲೆ "ಆದುದರಿಂದಲೇ' ಮಂದಃ" ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾಗಿದೆ"ಯೆಂದು ಶಂಕಿಸುವುದು ಸಮಂಜಸವಲ್ಲ ಏಕೆಂದರೆ ಪ್ರಾಪ್ತಿ (ಸಂಶಯ ಬೀಜವನ್ನು) ಯನ್ನು ಆಲೋಚಿಸದೆ ಶಂಕಿಸುವವನಿಗೂ ಪರಿಹಾರವಿಲ್ಲದ ಶಂಕೆಯುಳ್ಳವನಿಗೂ ಶಾಸ್ತ್ರದಲ್ಲಿ ಅಧಿಕಾರವಿರುವುದಿಲ್ಲ ಆದುದರಿಂದ, "ಆಗ್ರಹದಿಂದ ದರ್ಶನಗಳು ಪ್ರವೃತ್ತವಾದುದರಿಂದ" ಎಂಬುದಾಗಿ ಹೇಳಿದ ಶಂಕಾಕಾರಣವನ್ನು 'ಅನಾದಿ" ಇತ್ಯಾದಿ ವಚನದಿಂದ ವಿವರಿಸುತ್ತಾರೆ ಸಮಯಗಳನ್ನು ಮಾಡಿದ

## — ವಿಶೇಷಾರ್ಥಪ್ರದೀಪಿಕಾ —

ದವು "ಅಭಿಯೋಗತಃ' ಎಂಬುದರ ತಾತ್ಪರ್ಯಾರ್ಥವು "ಉಕ್ತೇಽರ್ಥೇ ಪುನರಾಶಂಕಾಭವತ್ಯೇವ" ಎಂಬುದು

"ಅತಿಪ್ರಸಂಗಾತ್" — ಪ್ರಮಾಣದಿಂದ ನಿರ್ಣೀತವಾದ ಯಾವದೇ ವಿಷ

कपिलकणादादीनां प्रणेतॄणां स्मरणात्कथमनादित्वमित्यत उक्तं प्रवाहत इति। कपिलादयो हि पूर्वैः प्रणीतान्येव शास्त्राणि कालबलादुत्सन्नानि तपःप्रभावादिनाऽवगम्य प्रबन्धान्तररचनया प्रवर्तयन्ति। एवं पूर्वेऽपि पूर्वतरैरित्येवं प्रवाहतोऽनादित्वाददोषः। तथैव च स्मरणानीति। इति हेतोराशङ्क्त इति पूर्वेण सम्बन्धः।

इदमुक्तं भवति। करणदोषबाधकप्रत्ययवशादेव ह्यप्रामाण्यं कल्पनीयम्। अन्यथाऽतिप्रसङ्गात्। तत्र यथा श्रुतीनामनादित्वात्करण-

— ಪದಾರ್ಥದೀಪಿಕಾ —

ವರಾದ ಕಪಿಲಕಣಾದ ಮುಂತಾದವರನ್ನು ಸ್ಮೃತಿಯಲ್ಲಿ ಹೇಳಿದುದರಿಂದ ಸಮಯಗಳು ಅನಾದಿಗಳೆಂಬುದುಹೇಗೆ? ಈ ಪ್ರಶ್ನೆಯನ್ನು ಉತ್ತರಿಸಲು "ಪ್ರವಾಹತಃ' ಎಂಬುದಾಗಿ ಹೇಳಿದ್ದಾರೆ ಕಪಿಲ ಮುಂತಾದವರು, ಪೂರ್ವದವರಿಂದ ವಿರಚಿತಗಳೇ ಆದ ಶಾಸ್ತ್ರಗಳನ್ನು, ಕಾಲ ಬಲದಿಂದ ಉತ್ಸನ್ನ (ತಿರೋಹಿತ) ಗಳಾದುದರಿಂದ ತಪಃಪ್ರಭಾವ ಮುಂತಾದವುಗಳಿಂದ ತಿಳಿದುಕೊಂಡು, ಪ್ರಬಂಧಾಂತರಗಳ ರಚನೆಯಿಂದ ಪ್ರವರ್ತಿಸುತ್ತಾರೆ ಇದರಂತೆ ಪೂರ್ವದವರೂ ತಮ್ಮ ಪೂರ್ವದವರಿಂದ ಬಂದವುಗಳನ್ನೇ ಪ್ರವರ್ತಿಸುತ್ತಾರೆ ಹೀಗೆ ಸಮಯಗಳು ಪ್ರವಾಹರೂಪದಿಂದ ಅನಾದಿಗಳಾಗಿವೆ ಆದುದರಿಂದ ದೋಷವಿಲ್ಲ ಇದರಂತೆಯೇ ಸ್ಮೃತಿಗಳು ಸಹ; ಹೀಗೆ ಅರ್ಥ ಈ ಕಾರಣದಿಂದ (ಇತಿ ಹೇತೋಃ ಆಶಂಕತೇ) ಆಶಂಕಿಸುತ್ತಾನೆ, ಎಂಬುದಾಗಿ ಹಿಂದಿನಿಂದ ಅನ್ವಯವಿರುತ್ತದೆ

ಇಲ್ಲಿ ಹೇಳಲ್ಪಟ್ಟದ್ದು ಇದು— "ಕರಣಗಳ ದೋಷ. ಬಾಧಕಜ್ಞಾನ, ಇವುಗಳ ವಶವಾಗಿಯೇ ಅಪ್ರಾಮಾಣ್ಯವನ್ನು ಕಲ್ಪಿಸತಕ್ಕದ್ದು ಏಕೆಂದರೆ ಹಾಗಿಲ್ಲದಿದ್ದರೆ ಅತಿಪ್ರಸಂಗವು ಬರುತ್ತದೆ ಹೀಗಿರುವಾಗ, ಶ್ರುತಿಗಳಿಗೆ, ಹೇಗೆ ಅನಾ

— ವಿಶೇಷಾರ್ಥಪ್ರದೀಪಿಕಾ —

ಯದ ಬಗ್ಗೆಯೂ ಹೀಗೆ ಅನ್ಯಥಾತ್ವಸಂಶಯವು ಬರುವುದರಿಂದ, ಹೀಗೆ ಅರ್ಥ ಆದುದರಿಂದ ನಿಃಶಂಕವಾದ ಪ್ರವೃತ್ತಿಯು ಎಲ್ಲಿಯೂ ಆಗದಿರಲಿ! ಹೀಗೆ ಅರ್ಥ.

"ಸ್ಮರಣಾನಿ' — ಕಪಿಲ ಕಣಾದಾದಿಗಳು ಮಾಡಿದ ಸ್ಮೃತಿಗಳು, "ತಥೈವ'— ಇದರಂತೆಯೇ ಇರುತ್ತವೆ

ಇದರಿಂದ ಹೇಳಿದ ಆಶಂಕೆಯ ಬೀಜವಾವುದೆಂಬುದನ್ನು " ಇದಮುಕ್ತಂ ಭವತಿ'' ಇತ್ಯಾದಿ ವಾಕ್ಯಗಳಿಂದ ವಿಶದ ಪಡಿಸುತ್ತಾರೆ

दोषाभावस्तथा समयानामपि । स्वरूपानादित्वं प्रवाहानादित्वमिति तु वैषम्यमात्रम् । पुरुषदोषसञ्चाराभावस्योभयत्रापि साम्यात् । यथा चानुच्छेदेनानुवृत्तेः श्रुतीना बाधकाभावः । एवं समयानामपि । यदि करणदोषबाधकप्रत्ययोपेताः स्युः तदोन्मत्तवाक्यवदिदम्प्रथमाः समुच्छेदवन्तश्च स्युः । न चैवम् । अतः कथमप्रामाण्यमश्नुवते । यथा च श्रुतयो बलवद्युक्त्यनुसंहितार्था एवं समया अपि । न च तासामाभासात्वमुक्तमिति वाच्यम् । सर्वेषां तदनुवर्तिनामस्माभिरनवगतत्वेन

— ಪದಾರ್ಥದೀಪಿಕಾ —

ದಿಯಾದುದರಿಂದ ಕರಣ ದೋಷವಿಲ್ಲವೋ ಹಾಗೆಯೇ ಸಮಯಗಳಿಗೂ ಸಹ ಕರಣದೋಷವಿಲ್ಲ ಆದರೆ ಸ್ವರೂಪತಃ ಅನಾದಿಯಾಗಿರುವುದು, ಪ್ರವಾಹತಃ ಅನಾದಿಯಾಗಿರುವುದು, ಈ ವೈಷಮ್ಯವಷ್ಟೇ ಶ್ರುತಿ ಹಾಗು ಸಮಯಗಳಲ್ಲಿ ಇರುತ್ತದ ಏಕೆಂದರೆ ಪುರುಷದೋಷಗಳಿಲ್ಲದಿರುವುದು ಎರಡರಲ್ಲೂ ಸಮಾನವಿದೆ ಅವಿಚ್ಛಿನ್ನವಾದ ಅನುವೃತ್ತಿ(ಸಂಪ್ರದಾಯ ಪ್ರಾಪ್ತತೆ)ಯು ಶ್ರುತಿಗಳಿಗ ಇರುವುದ ರಿಂದ ಹೇಗೆ ಬಾಧಕವಿಲ್ಲವೋ ಾಗೆ ಸ್ಮೃತಿಗಳಿಗೂ ಬಾಧಕವಿಲ್ಲ ಕರಣದೋಷ ಬಾಧಕಪ್ರತ್ಯಯವುಳ್ಳವುಗಳಾದ ಪಕ್ಷದಲ್ಲಿ ಉನ್ಮತ್ತ ವಾಕ್ಯಗಳ ಹಾಗ ಇದಂ ಪ್ರಥಮತೆ(ಉತ್ಪತ್ತಿ)ಯುಳ್ಳವುಗಳೂ ವಿಚ್ಛೇದವುಳ್ಳವುಗಳೂ ಆಗಬೇಕಾಗುವವು ಆದರೆ ಹಾಗೆ ಉತ್ಪತ್ತಿ ವಿಚ್ಛೇದವುಳ್ಳವುಗಳಲ್ಲ ಆದುದರಿಂದ ಅವುಗಳು ಅಪ್ರಾಮಾಣ್ಯವನ್ನು ಹೇಗೆ ಹೊಂದುತ್ತವೆ? ಬಲವುಳ್ಳ ಯುಕ್ತಿಗಳ ಅನುಸಂಧಾನದಿಂದ ಶ್ರುತಿಗಳಿಗೆ ಅರ್ಥವು ಹೇಗೋ ಹಾಗ ಸಮಯಗಳಿಗೂ ಅರ್ಥವು ಮತ್ತು ಆ ಬಲವದ್ಯುಕ್ತಿಗಳಿಗೆ ಆಭಾಸತೆಯು (ದುಷ್ಟತೆಯು) ಹಿಂದಿನ ಪಾದದಲ್ಲಿ ಹೇಳಲ್ಪ

— ವಿಶೇಷಾರ್ಥಪ್ರದೀಪಿಕಾ —

"ಅನ್ಯಥಾ ಅತಿಪ್ರಸಂಗಾತ್" -- ಪ್ರಮಾಣವೇ ಇಲ್ಲವಾಗುವ ಪ್ರಸಂಗವು ಬರುವುದರಿಂದ ಪ್ರಾಮಾಣ್ಯದ ಅಪವಾದಕವಿಲ್ಲದೆಯೇ ಅಪ್ರಾಮಾಣ್ಯವು ಬರುವುದಾದರೆ ಯಾವದೇ ಪ್ರಮಾಣಕ್ಕೂ ಅಪ್ರಾಮಾಣ್ಯವು ಬರುವುದರಿಂದ ಎಲ್ಲಿಯೂ ಪ್ರಮಾಣವೇ ಇಲ್ಲವಾಗಲೆಂಬ ಪ್ರಸಂಗವೇ ಬರುತ್ತದೆ, ಹೀಗೆ ಭಾವ

ಮುಂದೆ "ತರ್ಕೈಃ ದೃಢತರೈಃ" ಎಂಬುದಾಗಿ ಹೇಳಲಿರುವುದರಿಂದ ಅದ ರಿಂದ ನಿವಾರಿತವಾಗುವ ಸಂಗತಿಯನ್ನು "ಯಥಾ ಚ ಶ್ರುತಯಃ" ಎಂಬ ವಚ ನದಿಂದ ತಾವೇ ಹೇಳುತ್ತಾರೆ

तत्परिहारसम्भावनात् । एवमेवाप्रतिपक्षत्वं श्रुतीनामिव समयानां सम्भावितम् । कथमन्यथा सूत्रकृदेकधुरीणाः शौद्धोदनिप्रभृतयोऽभियोगतस्तान् प्रवर्तयेयुः। कथं च प्रेक्षावन्तोऽनेकेऽभियोगेनैवोपाददीरन्। तदेवं श्रुतिसमानयोगक्षेमतां समयानां मन्यमानस्य स्यादेवोक्तार्थसन्देह इति ।

नन्वेवं सति परस्परविरुद्धानामनेकेषां प್रामाण्यं तावन्न सम्भ-

— ಪದಾರ್ಥದೀಪಿಕಾ —

ಟ್ಟಿದೆಯೆಂದು ಹೇಳಬಾರದು ಏಕೆಂದರೆ ಆಯಾಯ ಸಮಯಗಳನ್ನನುಸರಿಸುವವರನ್ನು ನಾವು ತಿಳಿದಿರುವುದಿಲ್ಲವಾದುದರಿಂದ, ಪರರು ಹೇಳಿದ ಯುಕ್ತಿಯು ಆಭಾಸವೆಂಬ ಹಿಂದ ಹೇಳಿದ ದೋಷದ ಪರಿಹಾರದ ಬಗ್ಗೆ ಸಂಭಾವನೆಯು ಇರುತ್ತದೆ ಹೇಗೆ ಶ್ರುತಿಗಳಿಗೆ ಪ್ರತಿಪಕ್ಷವಿಲ್ಲವೋ ಹಾಗೆ ಸಮಯಗಳಿಗೂ ಪ್ರತಿಪಕ್ಷವಿರುವುದಿಲ್ಲೆಂಬುದೂ ಸಂಭಾವಿತವಾದುದು ಹಾಗಿಲ್ಲದಿದ್ದಲ್ಲಿ ಸೂತ್ರಕೃದೇಕ ಧುರೀಣರಾದ ಬುದ್ಧ ಮುಂತಾದವರು ಅಭಿಯೋಗದಿಂದ ಆಯಾಯ ಸಮಯಗಳನ್ನು ಹೇಗ ಪ್ರವರ್ತಿಸಿಯಾರು ? ಹಾಗು ಅನೇಕ ವಿದ್ವಜ್ಜನರು ಅಭಿಯೋಗದಿಂದಲೇ ಆ ಮತಗಳನ್ನು ಹೇಗೆ ಅಂಗೀಕರಿಸಿಯಾರು ? ಆದುದರಿಂದ ಸಮಯಗಳಿಗೆ ಶ್ರುತಿಗಳೊಡನ ಸಮಾನಯೋಗ ಕ್ಷೇಮಗಳುಂಟೆಂದು ಭಾವಿಸುವವನಿಗೆ, ಹಿಂದ ಹೇಳಿದ ಅರ್ಥದ ಬಗ್ಗ ಸಂದೇಹವು ಬಂದೇ ಬರುತ್ತದೆ " ಹೀಗೆ ಹೇಳಿದ್ದಾಗುತ್ತದೆ

ಇನ್ನು- ಒಂದನ್ನೊಂದು ವಿರೋಧಿಸುವ ಅನೇಕ ಸಮಯಗಳಿಗಂತೂ

— ವಿಶೇಷಾರ್ಥಪ್ರದೀಪಿಕಾ —

ಸಮಯಗಳಿಗ ಶ್ರುತಿಗಳ ಹಾಗೆ ಪ್ರತಿಪಕ್ಷವಿಲ್ಲವೆಂಬುದನ್ನು ಹೇಗೆ ತಿಳಿಯುವುದೆಂಬ ಆಶಂಕೆಯನ್ನು 'ಕಥಮನ್ಯಥಾ" ಇತ್ಯಾದಿವಾಕ್ಯದಿಂದ ನಿವಾರಿಸುತ್ತಾರೆ

"ಸೂತ್ರಕೃದೇಕಧುರೀಣಾಃ" – (೧) ಸೂತ್ರಕಾರರ ಮುಖ್ಯಭಾರ ಕಾರ್ಯವನ್ನು ನಿರ್ವಹಿಸುವವರು, (೨) ಸೂತ್ರಕಾರರಲ್ಲಿ ಶ್ರೇಷ್ಠರು, ಏಕ (ಮುಖ್ಯ) ಧುರೀಣರಾದ ಸೂತ್ರಕಾರರು ಹೀಗೆ ಅರ್ಥ 'ಶೌದ್ಧೋದನಿಪ್ರಭೃತಯಃ"= ಜಿನ ಮುಂತಾದವರು,

ಸಂದೇಹ ಇತಿ" ಇಲ್ಲಿಯ 'ಇತಿ" ಶಬ್ದಕ್ಕೆ 'ಇದಮುಕ್ತಂ" ಎಂಬ ಹಿಂದಿನ ಪದದೊಡನೆ ಅನ್ವಯವು

वति । वस्तुविकल्पापत्तेः । तथा चावश्याश्रयणीये कस्याचिदेव प्रामाण्येऽनादिकालतो वृत्तत्वादेरन्येष्वन्यथासिद्धौ सर्वथा कल्पनीयायां-इतरेषां चानुपलब्धेरित्युक्तदिशा साङ्ख्यादिसमयानामप्रामाण्यं कल्पयितुं शक्यत एव । तत्कथं श्रुतिसमन्वयसिद्धेऽर्थे पुनः शङ्केति । उच्यते । यो हीतरेषां चानुपलब्धेरिति सङ्क्षेपेणोदितन्यायं परपरिकल्पितेषु प्रमेयविशेषेषूत्प्रेक्षितुं क्षमते तं प्रत्येवमेतत् । यस्त्वेवं न क्षमः स यावदयं सङ्क्षेपो न प्रपञ्च्यते तावदन्यपरित्यागनैकग्रहणस्यानीशानः शङ्कैव । न चैवं शास्त्रे नाधिक्रियेत । सङ्ग्रहप्रपञ्चोच्छेद-प्रसङ्गात् । तदिदमुक्तं मन्द आशङ्कत इति ।

— ಪದಾರ್ಥದೀಪಿಕಾ —

ಪ್ರಾಮಾಣ್ಯವು ಸರಿಹೊಂದುವುದಿಲ್ಲ ಏಕೆಂದರೆ ಒಂದು ವಸ್ತುವಿನಲ್ಲಿ ವಿರುದ್ಧ ಸ್ವಭಾವಗಳು ಬರಬೇಕಾಗುತ್ತವೆ ಆದುದರಿಂದ, ಯಾವದೋ ಒಂದು ಸಮಯಕ್ಕೇ ಪ್ರಾಮಾಣ್ಯವನ್ನು ಅಂಗೀಕರಿಸುವುದು ಅತ್ಯವಶ್ಯವಿರುವಾಗ, ಅನಾದಿ ಕಾಲದಿಂದ ಅನುವೃತ್ತವಾಗಿರುವುದು ಮುಂತಾದುದನ್ನು ಇತರ ಸಮಯಗಳಲ್ಲಿ ಅನ್ಯಥಾಸಿದ್ಧವೆಂದು ಸರ್ವಥಾ ಕಲ್ಪಿಸಬೇಕಾದುದರಿಂದ, "ಇತರೇಷಾಂ ಚಾನುಪಲಬ್ಧೇಃ" ಎಂಬ ಸೂತ್ರದಲ್ಲಿ ಹೇಳಿದ ರೀತಿಯಿಂದ, ಸಾಂಖ್ಯ ಮುಂತಾದ ಸಮಯಗಳಿಗೆ ಅಪ್ರಾಮಾಣ್ಯವನ್ನು ಕಲ್ಪಿಸುವುದು ಶಕ್ಯವೇ ಇರುತ್ತದೆ ಆದುದರಿಂದ, ಶ್ರುತಿಗಳ ಸಮನ್ವಯದಿಂದ ಸಿದ್ಧವಾದ ಅರ್ಥದಲ್ಲಿ ಮತ್ತೆ ಆಶಂಕೆಯು ಹೇಗೆ? ಎಂಬ ಪ್ರಶ್ನೆಯ ಉತ್ತರವು— "ಇತರೇಷಾಂ ಚಾನುಪಲಬ್ಧೇಃ" ಎಂಬ ಸೂತ್ರದಲ್ಲಿ ಸಂಕ್ಷೇಪದಿಂದ ಹೇಳಿದ ಯುಕ್ತಿಯನ್ನು ಪರರು ಪರಿಕಲ್ಪಿಸಿದ ಅನೇಕ ಪ್ರಮೇಯಗಳ ಮೇಲೆ ಅನ್ವಯಿಸಲು ಸ್ವಬುದ್ಧಿಯಿಂದ ಯಾವನು ಸಮರ್ಥನೋ ಅವನಿಗೆ ಹೀಗೆ ಆಶಂಕೆಯು ಬಾರದಿರಬಹುದು ಆದರೆ ಯಾವನು ಅಸಮರ್ಥನೋ ಅವನು, ಈ ಸಂಕ್ಷೇಪವನ್ನು ಎಲ್ಲಿಯವರೆಗೆ ವಿವರಿಸುವುದಿಲ್ಲವೋ ಅಲ್ಲಿಯವರೆಗೂ (ವಿವರಿಸುವವರೆಗೂ) ಇನ್ನೊಂದನ್ನು ಪರಿತ್ಯಜಿಸಿ ಇದನ್ನೇ ಸ್ವೀಕ

— ವಿಶೇಷಾರ್ಥಪ್ರದೀಪಿಕಾ —

"ನ್ಯಾಯಂ" — ಅವನು ಹೇಳಿದ "ಫಲದ ವಿಸಂವಾದಿಯಾದುದು," ಇದು ನ್ಯಾಯವು ಅಥವಾ ಅಪ್ರಾಮಾಣಿಕತ್ವ ಮುಂತಾದ ನ್ಯಾಯ

भ्रान्तिमूलत्वमेतेषां पृथग्दर्शयति स्फुटम् ॥

किमतो यद्येवमित्यत आह ॥ अत इति । भ्रान्तिपदं विप्रलम्भस्याप्युपलक्षणम् । पृथग्विस्तरेण स्फुटं सुबोधम् । तत्तत्समयोक्तार्थानामप्रामाणिकत्वं प्रमाणविरुद्धत्वं च प्राक् सङ्क्षेपेणास्फुटं चोक्तमत्र विस्तरेण स्फुटं दर्शयंस्तेषां भ्रान्त्यादिमूलत्वं ज्ञापयतीत्यर्थः । एतेन पूर्वपादेनास्य प्रपञ्च्यप्रपञ्चकभावलक्षणा सङ्गतिः प्रपञ्चने प्रयोजनं चोक्तं भवति । तदिदमुक्तमितरेषामित्यादि भाष्ये ।

ಈ ಕಾರಣದಿಂದ ವೇದವ್ಯಾಸದೇವರು ಆಗಮಾದಿಗಳಿಗ, ಈ ಸಾಂಖ್ಯ ಮುಂತಾದ ಸಮಯಗಳು ಭ್ರಾಂತಿಮೂಲಕವಾದವುಗಳೆಂಬುದನ್ನೇ ವಿಸ್ತಾರವಾಗಿ

## — ಪದಾರ್ಥದೀಪಿಕಾ —

ರಿಸಲು ಅಸಮರ್ಥನಾಗಿ ಹೀಗೆ ಶಂಕಿಯೇ ಶಂಕಿಸುತ್ತಾನೆ ಹೀಗಾದಲ್ಲಿ ಅವನು ಶಾಸ್ತ್ರದಲ್ಲಿ ಅಧಿಕಾರ ಪಡೆಯಲಾರನೆಂದು ಶಂಕಿಸಬಾರದು ಏಕೆಂದರೆ ಸಂಕ್ಷೇಪ ವಿಸ್ತರಗಳಿಲ್ಲವಾಗುವ ಪ್ರಸಂಗವು ಬರುತ್ತದ " ಹೀಗ ಇದನ್ನು " ಮಂದಃ ಆಶಂಕತೇ " ಎಂಬ ವಚನದಿಂದ ಹೇಳಿದ್ದಾರ

ಹೀಗಾದರೇನು ? ಎಂಬ ಪ್ರಶ್ನೆಯನ್ನು ' ಅತಃ " ಇತ್ಯಾದಿ ವಚನದಿಂದ ಉತ್ತರಿಸುತ್ತಾರೆ "ಭ್ರಾಂತಿ' ಪದವು 'ವಿಪ್ರಲಂಭ-ವಂಚನ' ವೆಂಬ ಅರ್ಥವನ್ನೂ ಸಂಗ್ರಹಿಸುತ್ತದೆ "ಪೃಥಕ್"– ವಿಸ್ತರದಿಂದ " ಸ್ಫುಟಂ ' ಸುಬೋಧವಾಗಿ ಆಯಾಯ ಸಮಯದಲ್ಲಿ ಹೇಳಿದ ಅರ್ಥಗಳು ಅಪ್ರಾಮಾಣಿಕಗಳೂ ಪ್ರಮಾಣ ವಿರುದ್ಧಗಳೂ ಆಗಿವೆಯೆಂಬುದನ್ನು ಹಿಂದೆ ಸಂಕ್ಷೇಪದಿಂದ ಹಾಗು ಅಸ್ಪಷ್ಟವಾಗಿ ಪ್ರತಿಪಾದಿಸಲಾಗಿತ್ತು ಇಲ್ಲಿ ಅದನ್ನು ವಿಸ್ತಾರದಿಂದ ಸ್ಪಷ್ಟವಾಗಿ ತೋರಿಸುವ ಸೂತ್ರಕಾರರು, ಆ ಸಮಯಗಳು ಭ್ರಾಂತಿಮೂಲಕಗಳೆಂಬುದನ್ನು ತಿಳಿಪಡಿಸುತ್ತಾರೆ, ಹೀಗೆ ಅರ್ಥ ಇದರಿಂದ ಹಿಂದಿನ ಪಾದದೊಡನೆ ಈ ಪಾದಕ್ಕೆ ಪ್ರಪಂಚ್ಯ ಪ್ರಪಂಚಕಭಾವ ಸಂಗತಿಯೂ ವಿವರಣದಲ್ಲಿ ಪ್ರಯೋಜನವೂ ಹೇಳಲ್ಪಟ್ಟದ್ದಾ

## — ವಿಶೇಷಾರ್ಥದೀಪಿಕಾ —

ಬೌದ್ಧಾದಿಮತಗಳ ಸಾಧಾರಣವಾಗಿ " ಭ್ರಾಂತಿಪದಂ " ಎಂಬುದಾಗಿ ಹೇಳಿದ್ದಾರೆ ಇದರಿಂದ ಹಿಂದೆ ಹೇಳಿದ ಅನಾರಂಭಣೀಯತ್ವಶಂಕೆಯ ಪರಿಹಾರವು ಹೇಗೆ? ಎಂಬುದನ್ನು "ತತ್ತತ್ಸಮಯೋಕ್ತಾನಾಂ" ಇತ್ಯಾದಿ ವಾಕ್ಯದಿಂದ

तर्कैर्दृढतमैरेव वाक्यैश्चागमवादिनाम् ॥

नन्वेतदशक्यं तैः स्वप्रमेयाणां दृढतर्कागमसाधितत्वात्परकीय-तर्कादेर्निरस्तत्वादित्यत आह ॥ तर्कैरिति । तर्कशब्दः सोपस्करानु-मानार्थः । दृढतमैः परकीयतर्कबाधकैस्तदबाध्यैश्च । वाक्यैश्च दृढत-

ಸ್ಪಷ್ಟವಾಗಿ ದೃಢತಮಗಳೇ ಆದ ತರ್ಕ ಹಾಗು ವಾಕ್ಯಗಳಿಂದ ತೋರಿಸುತ್ತಾರೆ.

## — ಪದಾರ್ಥ ದೀಪಿಕಾ —

ಗುತ್ತದೆ ಇದನ್ನು "ಇತರೇಷಾಂ" ಇತ್ಯಾದಿಯಾದ ಭಾಷ್ಯದಲ್ಲಿ ಹೇಳಲಾಗಿದೆ.

ಇನ್ನು- ಇದು ಅಶಕ್ಯವು ಏಕೆಂದರ ಆಯಾಯ ಮತಪ್ರವರ್ತಕರು ತಮ್ಮ ತಮ್ಮ ಪ್ರಮೇಯಗಳನ್ನು ದೃಢವಾದ ತರ್ಕ ಆಗಮಗಳಿಂದ ಸಾಧನವಾಡಿದ್ದಾರೆ ಹಾಗು ಪರರ ತರ್ಕ ಮುಂತಾದ ಪ್ರಮಾಣಗಳನ್ನು ನಿರಾಕರಿಸಿರುತ್ತಾರೆ" ಈ ಆಶಂಕೆಯನ್ನು "ತರ್ಕೈಃ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ 'ತರ್ಕ" ಶಬ್ದಕ್ಕೆ "ವ್ಯಾಪ್ತಿ, ಸಮುಚಿತ ದೇಶವರ್ತಿತ್ವ, ಅನುಕೂಲ ತರ್ಕ ಮುಂತಾದ ಪರಿಕರಗಳಿಂದ ಕೂಡಿದ ಅನುಮಾನವೆಂಬ ಅರ್ಥವಿದೆ "ದೃಢತಮೈಃ"- ಪರಕೀಯರ ತರ್ಕಗಳ ಬಾಧಕಗಳೂ ಅವರ ತರ್ಕಗಳಿಂದ ಅಬಾಧ್ಯಗಳೂ ಆದ

## — ವಿಶೇಷಾರ್ಥಪ್ರದೀಪಿಕಾ —

ವಿಶದಪಡಿಸುತ್ತಾರೆ "ಪ್ರಾಕ್" ಹಿಂದಿನ ಪಾದದಲ್ಲಿ "ಏತೇನ" — "ಅತೋ ವಿಭುಃ, ಭ್ರಾಂತಿಮೂಲತ್ವಮೇತೇಷಾಂ" ಇತ್ಯಾದಿ ಅನುವ್ಯಾಖ್ಯಾನವಾಕ್ಯಗಳಿಂದ ಈ ಪಾದವು ಪ್ರಥಮಪಾದಾರ್ಥದ ವಿವರಣವೆಂದು ಹೇಳುವುದರಿಂದ "ಪೂರ್ವ ಪಾದೇನ" — ಸಮನ್ವಯದ ವಿರೋಧಿಗಳಾದ ಸಕಲ ಸ್ಮೃತಿ ಯುಕ್ತಿಗಳನ್ನು ಹಿಂದಿನ (ಪ್ರಥಮ)ಪಾದದಲ್ಲಿ ಸಂಕ್ಷೇಪದಿಂದ ನಿರಾಕರಿಸಿದ್ದರೂ, ಅವುಗಳನ್ನು ಇಲ್ಲಿ ವಿಸ್ತರದಿಂದ ನಿರಾಕರಿಸುವುದರಿಂದ, ಹಿಂದಿನ ಪಾದದೊಡನೆ ಈ ಪಾದಕ್ಕೆ ಪ್ರಸಂಖ್ಯಪ್ರಪಂಚಕಭಾವ ಸಂಗತಿಯನ್ನು ಹೇಳಿದ್ದಾಯಿತು ಹೀಗೆ ತಿಳಿಯಬೇಕು. "ಪ್ರಯೋಜನಂ ಚ" - ಅಲ್ಪಬುದ್ಧಿಯುಳ್ಳವರಿಗೂ, ಉಳಿದವುಗಳನ್ನು ಬಿಟ್ಟು ಹಿಂದಿನ ಅಧ್ಯಾಯದ ಅರ್ಥವೇ ಬುದ್ಧಿಯಲ್ಲಿ ಸುದೃಢವಾಗಿ ನಿಲ್ಲುವುದೆಂಬ ಪ್ರಯೋಜನವು, ಮಂದಶಂಕಾನಿವೃತ್ತಿಯೆಂಬ ಪ್ರಯೋಜನವು

ಇಲ್ಲಿ ಹೇಳಿದ ಸಂಕ್ಷೇಪವಿಸ್ತಾರಭಾವದ ಉಪಪಾದನಪ್ರಕಾರವನ್ನು ಭಾಷ್ಯದಲ್ಲಿಯೂ ಅನುಸಂಧಾನ ಮಾಡಿಕೊಳ್ಳಬೇಕೆಂಬುದಾಗಿ "ತದಿದಂ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

मैरिति सम्बध्यते । पूर्वेणान्वयः । वेदादिवाक्यानां प्रामाण्यमन-भ्युपगच्छन्तं प्रति कथं तदुपन्यास इत्यत उक्तमागमवादिनामिति । आगमस्य वेदादेः प्रामाण्यमभ्युपगच्छतां पुंसां समयानामिति सम्बन्धः । यद्वा स्वागमप्रामाण्यवादिनामित्यर्थः । ततश्च स्वागम-

— ಪದಾರ್ಥ ದೀಪಿಕಾ —

ತರ್ಕಗಳಿಂದ 'ವಾಕ್ಯೈಃ"= ಎಂಬುದಕ್ಕೆ "ದೃಢತರ್ಕೈಃ"= ಎಂಬುದು ಅನ್ವಯ ಹೊಂದುತ್ತದೆ ಪೂರ್ವಾನ್ವಯವಿದೆ ವೇದ ವಾಕ್ಯಗಳ ಪ್ರಾಮಾಣ್ಯವನ್ನು ಒಪ್ಪದವನನ್ನು ಕುರಿತು, ಆ ವಾಕ್ಯಗಳನ್ನು ಹೇಳುವುದು ಹೇಗೆ? ಎಂಬ ಪ್ರಶ್ನೆಯ ಪರಿಹಾರಕವಾಗಿ '' ಆಗಮವಾದಿನಾಂ '' ಎಂಬುದನ್ನು ಹೇಳಿದ್ದಾರೆ "ವೇದ ಮುಂತಾದ ಆಗಮಗಳ ಪ್ರಾಮಾಣ್ಯವನ್ನು ಒಪ್ಪುತ್ತಿರುವ ಪುರುಷರ ಸಮಯಗಳ" ಹೀಗೆ ಅನ್ವಯ, ಅಥವಾ ತಮ್ಮ ತಮ್ಮ ಆಗಮಗಳ ಪ್ರಾಮಾಣ್ಯವನ್ನು ಒಪ್ಪುವವರಿಗೆ, ಹೀಗೆ ಅರ್ಥ. ಆದುದರಿಂದ, "ತಮ್ಮ ತಮ್ಮ ಆಗಮಗಳ

— ವಿಶೇಷಾರ್ಥಪ್ರದೀಪಿಕಾ —

'ಪರಕೀಯತರ್ಕಾದೇಃ" –ಆಯಾಯ ಮತದಲ್ಲಿ ವಿರೋಧಿಗಳಾದ ಬೇರೆ ಬೇರೆ ವಾದಿಗಳು ಹೇಳಿದ ತರ್ಕಮುಂತಾದವುಗಳಿಗೆ (ನಿರಾಸವಾಗಿದೆಯೆಂದು ಹೇಳಿದುದರಿಂದ) ಸಿದ್ಧಾಂತೀಯ ತರ್ಕಗಳಿಗೂ ನಿರಾಸವಾಗುವುದೆಂದು ತಿಳಿಯಬೇಕು

ಇನ್ನು–"ಆಗಮವಾದಿನಾಂ" ಎಂಬುದಕ್ಕೆ 'ವೇದಾದಿಗಳ ಪ್ರಾಮಾಣ್ಯವನ್ನು ಹೇಳುವವರ ಸಂಬಂಧಿಗಳಾದ ಸಮಯಗಳಿಗೆ ಸದೃಢತರ್ಕಆಗಮಗಳಿಂದ ಭ್ರಾಂತಿ ಮೂಲತ್ವವನ್ನು ತೋರಿಸುತ್ತಾರೆ" ಎಂಬುದಾಗಿ ವ್ಯಾಖ್ಯಾನಮಾಡಿದ ಪಕ್ಷದಲ್ಲಿ– "ವಿಪ್ರತಿಷೇಧಾಚ್ಚಾಸಮಂಜಸಂ" ಎಂಬ ಸಾಂಖ್ಯಾಧಿಕರಣದ ಕೊನೆಯ ಸೂತ್ರದಿಂದಲೂ, 'ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ" ಎಂಬ ವೈಶೇಷಿಕಾಧಿಕರಣದ ಅಂತಿಮ ಸೂತ್ರದಿಂದಲೂ, "ವಿಪ್ರತಿಷೇಧಾಚ್ಚ" ಎಂಬ ಶಕ್ತ್ಯಧಿಕರಣದ ಕೊನೆಯ ಸೂತ್ರದಿಂದಲೂ ವಿರೋಧವಿಲ್ಲ ಆದರೂ 'ಸರ್ವಥಾನುಪಪತ್ತೇಶ್ಚ" ಎಂಬ ಬೌದ್ಧಾಧಿಕರಣದ ಅಂತಿಮ ಸೂತ್ರದಿಂದ ವಿರೋಧವು ಬರುತ್ತದ ಏಕೆಂದರೆ ಅಲ್ಲಿ 'ಸರ್ವಶ್ರುತಿ ಸ್ಮೃತಿ ವಿರುದ್ಧತ್ವಾಚ್ಚ ನೈತೇ ಪಕ್ಷಾ ಗ್ರಾಹ್ಯಾಃ" ಎಂಬುದಾಗಿ ಬೌದ್ಧರನ್ನು ಕುರಿತು, ಅವರ ಮತವಿರೋಧಿಶ್ರುತಿ ಮುಂತಾದುದನ್ನು (ಶ್ರುತ್ಯಾದಿವಿರೋಧವನ್ನು)ಹೇಳಿದ್ದಾರೆ ಆದುದರಿಂದ ಬರುವ ವಿರೋಧವನ್ನು ತಪ್ಪಿಸಲು (ಅಸ್ವಾರಸ್ಯದಿಂದ) ಬೇರೆ ವ್ಯಾಖ್ಯಾನವನ್ನು "ಯದ್ವಾ" ಇತ್ಯಾದಿ ವಾಕ್ಯಗಳಿಂದ ಮಾಡುತ್ತಾರೆ.

प्रामाण्याभ्युपगमन्यायेन वेदादेरपि प्रामाण्यं तैरङ्गीकारयित्वेति (येति) भावः। अथवाऽऽगमस्य वेदादेः प्रामाण्यवादिना शिष्याणा व्यपक्षयेति शेषः। तथा च बौद्धाधिकरणान्तेन न विरोधः। यद्यप्येतदनुपदमेव प्रदर्शयिष्यते। तथाऽपि श्रोतृमन.समाधानार्थ-मुक्तमिति।

ननु चानाद्यनन्तकालेऽनुच्छेदेन प्रवर्तमानानां समयानां न भ्रान्त्यादिमूलत्वमुचितम्। न हि तथाविधस्योन्मत्तवाक्यादेरना-

— ಪದಾರ್ಥದೀಪಿಕಾ —

ಪ್ರಾಮಾಣ್ಯವನ್ನು ಒಪ್ಪಿರುವ ನ್ಯಾಯದಿಂದ ವೇದಾದಿಗಳ ಪ್ರಾಮಾಣ್ಯವನ್ನೂ ಅವರಿಂದ ಅಂಗೀಕರಿಸುವಂತೆ ಮಾಡಿ" ಹೀಗೆ ಅರ್ಥ, ಅಥವಾ ವೇದಾದಿ ಆಗಮಗಳ ಪ್ರಾಮಾಣ್ಯವನ್ನು ಹೇಳುತ್ತಿರುವ ಶಿಷ್ಯರ, ಅಪೇಕ್ಷೆಯಿಂದ (ಅಭಿಪ್ರಾಯದಿಂದ) "ಅಪೇಕ್ಷಯಾ" ಹೀಗೆ ಶೇಷಪೂರಣ ಮಾಡಬೇಕು ಆದುದರಿಂದ, ಬೌದ್ಧಾಧಿ ಕರಣಾಂತ್ಯ ಸೂತ್ರದಿಂದ ವಿರೋಧವಿಲ್ಲ ಈ ಸಂಗತಿಯನ್ನು ಮುಂದಿನ ಗ್ರಂಥದಲ್ಲಿಯೇ ತೋರಿಸುವರು ಆದರೂ ಶ್ರೋತೃಗಳ ಮನಃ ಸಮಾಧಾನಾರ್ಥವಾಗಿ ಇಲ್ಲಿ ಹೇಳಿದ್ದಾರೆ ಹೀಗೆ ಅರ್ಥ

ಇನ್ನು– ಅನಾದ್ಯನಂತಕಾಲದಲ್ಲಿ ವಿಚ್ಛೇದವಿಲ್ಲದೆಯೇ ಹೊರಟಿರುವ ಸಮಯಗಳು ಭ್ರಾಂತ್ಯಾದಿಮೂಲಕಗಳೆಂಬುದು ಉಚಿತವಲ್ಲ ಏಕೆಂದರೆ— ಅಂಥ ಉನ್ಮತ್ತವಾಕ್ಯ ಮುಂತಾದವುಗಳಿಗೆ ಅನಾದ್ಯನಂತಕಾಲಗಳಲ್ಲಿ ಅವಿಚ್ಛಿನ್ನ ಅನು

— ವಿಶೇಷಾರ್ಥಪ್ರದೀಪಿಕಾ —

ಸರ್ವಸಾಧಾರಣವಾದ ಸಮಾಧಾನಾಂತರವನ್ನು "ಅಥವಾ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಕೊನೆಯ ಎರಡು ವ್ಯಾಖ್ಯಾನಗಳ ಫಲವನ್ನು "ತಥಾಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಏತತ್"- "ತರ್ಕೈಃ" ಇತ್ಯಾದಿ ವಾಕ್ಯೋಕ್ತ ವಿಷಯವನ್ನು "ಅನುಪದಮೇವ"- "ತಥಾಽಪಿ ಶುದ್ಧಬುದ್ಧೀನಾಂ" ಎಂಬ ವಾಕ್ಯದಿಂದ "ಚೇತನೇಚ್ಛಾನುಸಾರೇಣ" ಇತ್ಯಾದಿ ಮುಂದೆ ಹೇಳುವ ಪದ್ಯಗಳಿಂದ, ಎಂದೂ ಅರ್ಥ

ಮುಂದೆ ಹೇಳಲಿರುವ ಪ್ರಯೋಗಗಳಲ್ಲಿ ಅನುಕೂಲವಾದ ವ್ಯಾಪ್ತಿ ಮುಂತಾದುದನ್ನು "ನನು ಚಾನಾದ್ಯನಂತಕಾಲೇ" ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ. ಸಾಧ್ಯ ಹೇತುಗಳಿಗೆ ವ್ಯತಿರೇಕವ್ಯಾಪ್ತಿಯನ್ನು "ತಥಾವಿಧಸ್ಯ"

ह्यनन्तकालेऽनुवृत्तिरस्ति । तद्यं प्रयोगः । साङ्ख्यादिसमयाः प्रमाण-भूता न भ्रान्तिमूला वा । सर्वदाऽनुवर्तमानत्वान्महाजनपरिगृहीतत्वाद्वा वेदवदिति । तथा च वक्ष्यमाणतर्कादिर्बाधितविषयत्वमिति । मैवम् । किमत्र सर्वेषां समयानां प्रामाण्यादिकं साध्यमुतैकस्य । नाद्यः । परस्परविरुद्धाना प्रामाण्यादिसाधने वस्तुविकल्पापत्त्या बाधितविषय-त्वात् । परस्परप्रतिक्षेपरूपत्वेन सत्प्रतिपक्षत्वाच्च । न द्वितीयः ।

## — ಪದಾರ್ಥದೀಪಿಕಾ —

ವೃತ್ತಿಯು ಇರುವುದಿಲ್ಲ ಆದುದರಿಂದ ಇಲ್ಲಿಯ ಪ್ರಯೋಗವು ಇದು—"ಸಾಂಖ್ಯ ಮುಂತಾದ ಸಮಯಗಳು ಪ್ರಮಾಣಗಳೇ ! ಭ್ರಾಂತಿ ಮೂಲಕಗಳಲ್ಲ ಏಕೆಂ ದರೆ ಯಾವಾಗಲೂ ಇರತಕ್ಕವುಗಳು ಅಥವಾ ಮಹಾಜನ ಪರಿಗೃಹೀತಗಳಾ ಗಿವೆ ವೇದವು ಇದರಲ್ಲಿ ದೃಷ್ಟಾಂತವು," ಹೀಗೆ ಆದುದರಿಂದ, ಮುಂದೆ ಹೇಳ ಲಿರುವ ತರ್ಕಗಳು ಬಾಧಿತ ವಿಷಯಗಳಾಗಿವೆ" ಹೀಗೆ ಆಶಂಕಿಸುವುದು ಸರಿ ಯಲ್ಲ ಏಕಂದರೆ– ಇಲ್ಲಿ– ಎಲ್ಲ ಸಮಯಗಳಿಗೆ ಪ್ರಾಮಾಣ್ಯ ಮುಂತಾದುದನ್ನು ಸಾಧನಮಾಡುವುದೋ? ಇಲ್ಲವೆ ಒಂದೇ ಸಮಯಕ್ಕೆ ಪ್ರಾಮಾಣ್ಯವನ್ನು ಸಾಧನ ಮಾಡುವುದೋ ? ಒಂದನೆಯ ಕಲ್ಪವು ಯುಕ್ತವಲ್ಲ ಏಕೆಂದರೆ– ಪರಸ್ಪರ ವಿರುದ್ಧವಾದವುಗಳಿಗೆಲ್ಲ ಪ್ರಾಮಾಣ್ಯ ಮುಂತಾದುದನ್ನು ಸಾಧನಮಾಡಿದಲ್ಲಿ ವಸ್ತುವಿನಲ್ಲಿ ವಿರುದ್ಧಸ್ವರೂಪವು ಬರಬೇಕಾಗುವುದರಿಂದ, ಅನುಮಾನದ ವಿಷ ಯವು ಬಾಧಿತವಾಗುತ್ತದೆ ಮತ್ತು ಪರಸ್ಪರ ಪ್ರತಿಕ್ಷೇಪರೂಪವಾಗುವುದರಿಂದ ಸತ್ಪ್ರತಿಪಕ್ಷವೂ ಬರುತ್ತದೆ. ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ– ಪಕ್ಷೀ

## — ವಿಶೇಷಾರ್ಥಪ್ರದೀಪಿಕಾ —

ಇತ್ಯಾದಿ ವಾಕ್ಯದಿಂದ ವಿಶದಪಡಿಸುತ್ತಾರೆ "ಭ್ರಾಂತ್ಯಾದಿ ಮೂಲಕವಾದುದಕ್ಕೆ ಹೀಗೆ ಅರ್ಥ "ತತ್" = ವ್ಯಾಖ್ಯಾದಿಗಳಿದ್ದುದರಿಂದ

"ವಕ್ಷ್ಯಮಾಣತರ್ಕಾದೇಃ" — "ರಚನಾನುಪಪತ್ತೇಃ, ಪ್ರವೃತ್ತೇಶ್ಚ" ಇತ್ಯಾದಿ ಸೂತ್ರಗಳಲ್ಲಿ ಹೇಳಿದ ತರ್ಕ ಮುಂತಾದವುಗಳಿಗೆ

"ಪ್ರಾಮಾಣ್ಯಾದಿಕಂ" ಇಲ್ಲಿ "ಆದಿ" ಪದದಿಂದ "ಅಭ್ರಾಂತಿಮೂಲತ್ವ" (ಭ್ರಾಂತಿಮೂಲಕವಾಗದಿರುವುದು) ಸಂಗ್ರಹೀತವಾಗಿದೆ

ಬಾಧಿತವಿಷಯತ್ವಾತ್" – ಪ್ರಮಾಣವಾದ ಸಮಯದಿಂದ, ಇನ್ನೊಂದು ( ವಿರುದ್ಧಮತ ) ಸಮಯದ ವಿಷಯದ ನಿರಾಕರಣವಾಗುವುದರಿಂದ, ಅದರ

पक्षीकृतादन्यस्य प्रामाण्याद्यभ्युपगमे प्रागुक्तदोषानुषङ्गात् । अनभ्युपगमे तत्रैव व्यभिचारात् । वेदप्रामाण्याद्यभ्युपगमे प्रतिज्ञा (ता) र्थानुपपत्तिः । अनभ्युपगमे च दृष्टान्तदोषः ।

भवेदेवं भ्रान्त्यादिमूलत्वे समाने सत्युन्मत्तवाक्येऽविद्यमाना

— ಪದಾರ್ಥದೀಪಿಕಾ —

ಕರಿಸಲ್ಪಟ್ಟ ಸಮಯಕ್ಕಿಂತ ಬೇರೆಯಾದ ಸಮಯಕ್ಕೆ ಪ್ರಾಮಾಣ್ಯಾದಿಗಳನ್ನು ಒಪ್ಪಿದ ಪಕ್ಷದಲ್ಲಿ ಹಿಂದೆ ಹೇಳಿದ ದೋಷಗಳು ಅನ್ವಯಿಸುತ್ತವೆ ಒಪ್ಪದ ಪಕ್ಷದಲ್ಲಿ– ಅಲ್ಲಿಯೇ ಹೇತುವು ಸಾಧ್ಯವನ್ನು ಬಿಟ್ಟಿರುತ್ತದೆ. ವೇದ ಪ್ರಾಮಾಣ್ಯಾದಿಗಳನ್ನಂಗೀಕರಿಸಿದರೆ ಪ್ರತಿಜ್ಞಾತಾರ್ಥವು ಯುಕ್ತವಾಗುವುದಿಲ್ಲ ಅಂಗೀಕರಿಸದಿದ್ದ ಪಕ್ಷದಲ್ಲಿ ದೃಷ್ಟಾಂತದೋಷಗಳು ಬರುತ್ತವೆ

— ವಿಶೇಷಾರ್ಥಪ್ರದೀಪಿಕಾ —

ಪ್ರಾಮಾಣ್ಯವು ಅದರಿಂದ (ಪ್ರಮಾಣಭೂತ ಸಮಯದಿಂದ) ಬಾಧಿತವಾಗುವುದು ಹೀಗೆ ಭಾವ

"ಪ್ರತಿಕ್ಷೇಪರೂಪತ್ವೇನ" - ಇಲ್ಲಿ "ಹೇತುನಾ" (ಹೇತುವಿನಿಂದ) ಎಂಬುದನ್ನು ಸೇರಿಸತಕ್ಕದ್ದು "ಸರ್ವಸಮಯಗಳು ಪ್ರಮಾಣಗಳಲ್ಲ ಅಥವಾ ಭ್ರಾಂತಿಮೂಲಕಗಳೂ ಅಲ್ಲ ಏಕೆಂದರೆ ಪರಸ್ಪರ ನಿಷೇಧರೂಪಗಳಾಗಿವೆ. ಇದರಲ್ಲಿ ಪರಸ್ಪರ ನಿಷೇಧರೂಪಗಳಾದ "ಘಟೋಽಸ್ತಿ, ಘಟೋ ನಾಸ್ತಿ" ಇತ್ಯಾದಿ ವಾಕ್ಯಗಳು ದೃಷ್ಟಾಂತ ಸತ್ಪ್ರತಿಪಕ್ಷಾನುಮಾನವು ಬರುವುದರಿಂದ, ಎಂಬುದಾಗಿ ಇಲ್ಲಿಯ ಭಾವ

"ಪ್ರಾಗುಕ್ತ ದೋಷಾನುಷಂಗಾತ್" — ಹಿಂದೆ ಹೇಳಿದ ಬಾಧಿತ ವಿಷಯತ್ವವೆಂಬ ದೋಷವು ಬರುವುದರಿಂದ "ವ್ಯಭಿಚಾರಾತ್" ಇಲ್ಲಿ "ಸರ್ವದಾನುವರ್ತಮಾನತ್ವಾತ್' ಎಂಬ ಹೇತುವಿಗೆ ಸಾಧ್ಯವ್ಯಭಿಚಾರವೆಂದು ತಿಳಿಯಬೇಕು. ಪ್ರಾಮಾಣ್ಯವನ್ನು ಅಂಗೀಕರಿಸದ ಸಮಯದಲ್ಲಿ ಸರ್ವದಾನುವರ್ತಮಾನತ್ವ ಹೇತುವು ಪ್ರಾಮಾಣ್ಯವನ್ನು ಬಿಟ್ಟಿರುತ್ತದೆಯೆಂದು ಭಾವ ಇನ್ನೂ ಒಂದು ದೋಷವನ್ನು 'ವೇದ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ ಪರನು ಪಕ್ಷೀಕರಿಸಿದ ಸಮಯಕ್ಕೆ, ಅದರ ವಿರುದ್ಧಾರ್ಥಕವಾದ ಪ್ರಮಾಣವಾದ ವೇದದಿಂದ ಬಾಧೆಯು ಬರುತ್ತದೆ. ಆದುದರಿಂದ, ಪ್ರಾಮಾಣ್ಯವೆಂಬ ಸಾಧ್ಯದ ಸಿದ್ಧಿಯು ಆಗುವುದಿಲ್ಲ, ಹೀಗೆ ಭಾವವು

"ದೃಷ್ಟಾಂತದೋಷಃ" –ವೇದದ ಪ್ರಾಮಾಣ್ಯವುಂಟಾದುದನ್ನು ಅಂಗೀಕರಿ

दौर्लभ्याच्छुद्धबुद्धीनां बाहुल्यादतत्त्ववेदिनाम् ॥

अनाद्यनन्तकालानुवृत्तिरेतेषामेव तर्हि किन्निमित्तेति सुहृद्भावेन पृच्छन्तं प्रत्याह ॥ दौर्लभ्यादिति । समयप्रवर्तकानां पुंसां दुराग्रहगृहीतत्वाद्वर्तन्ते समयाः सदा । नैवमुन्मत्तवाक्ये विद्यते । नन्वाग्रहेऽपि किं कारणमित्यत उक्तं विद्वेषादिति । तर्हि द्वेषोत्पत्त्यनन्तरं प्रवर्तितां कथं सदेत्यत उक्तमनिशमिति । ननु पुरुषार्थकामाः कथं विद्वेषनिमित्तादा-

ವಿಶುದ್ಧ ಮತಿಯುಳ್ಳ ಸಜ್ಜನರು ದುರ್ಲಭ ( ವಿರಳ ) ರಾದುದರಿಂದಲೂ, ಭ್ರಮೆದ ಅಧಿಷ್ಠಾನ ಸ್ವರೂಪವನ್ನಷ್ಟೇ ತಿಳಿದಿರುವವರು ಬಹಳ ಜನರಿರುವುದ

— ಪದಾರ್ಥದೀಪಿಕಾ —

ಇನ್ನು– ಹೀಗೆ ಭ್ರಾಂತ್ಯಾದಿಮೂಲಕತ್ವವು ಸಮಾನವಿದ್ದರೂ ಉನ್ಮತ್ತ ವಾಕ್ಯದಲ್ಲಿ ಇಲ್ಲದಿರುವ ಅನಾದ್ಯನಂತಕಾಲದಲ್ಲಿ ವಿಚ್ಛೇದವಿಲ್ಲದೆಯೇ ಹೊರಟಿರುವುದೆಂಬ ಅನುವೃತ್ತಿಯು, ಈ ಸಮಯಗಳಿಗೇ ಇರುವುದಾದರೆ— ತರ್ಕವು ದುಷ್ಟವಾಗುವದು ಆಗಲಿ, ಆದರೆ ಆದರಲ್ಲಿ ನಿಮಿತ್ತವು ಯಾವದು ? ಹೀಗೆ ಸುಹೃದ್ಭಾವದಿಂದ ಪ್ರಶ್ನಿಸುವವನನ್ನು ಕುರಿತು, " ದೌರ್ಲಭ್ಯಾತ್ " ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಸಮಯ ಪ್ರವರ್ತಕರು ದುರಾಗ್ರಹ ಗೃಹೀತರಾಗಿರುತ್ತಾರೆ, ಆದುದರಿಂದ, ಸಮಯಗಳು ಯಾವಾಗಲೂ ಇರುತ್ತವೆ ಆದರೆ ಉನ್ಮತ್ತರ ವಾಕ್ಯಗಳಲ್ಲಿ ಹೀಗೆ ದುರಾಗ್ರಹವಿಲ್ಲದಿರುವುದರಿಂದ, ಅನುವೃತ್ತಿಯು ಇರುವುದಿಲ್ಲ ಆಗ್ರಹದಲ್ಲಿಯೂ ಕಾರಣವಾವುದೆಂದು ಕೇಳಿದರೆ— "ವಿದ್ವೇಷಾತ್" ಎಂಬುದಾಗಿ ಹೇಳಿದ್ದಾರೆ ಹಾಗಾದಲ್ಲಿ ದ್ವೇಷದ ಉತ್ಪತ್ತಿಯಾದ

— ವಿಶೇಷಾರ್ಥಪ್ರದೀಪಿಕಾ —

ಸದಿದ್ದಲ್ಲಿ, ದೃಷ್ಟಾಂತವೆನಿಸಿದ ವೇದದಲ್ಲಿ ಪ್ರಾಮಾಣ್ಯವೆಂಬ ಸಾಧ್ಯವು ಇಲ್ಲದಿರುವುದರಿಂದ, ದೃಷ್ಟಾಂತದಲ್ಲಿ ಸಾಧ್ಯವಿಲ್ಲದಿರುವುದೆಂಬ ದೋಷವು ಬರುತ್ತದೆ. ಹೀಗೆಭಾವ

ಅನುವ್ಯಾಖ್ಯಾನದ ಕೊನೆಯ ವಾಕ್ಯದ ಯೋಜನವನ್ನು "ಸಮಯ ಪ್ರವರ್ತಕಾನಾಂ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ ಆಕಾಂಕ್ಷೆಗಳ ಕ್ರಮವನ್ನನುಸರಿಸಿ ಯೋಜನೆಯನ್ನು "ನನ್ವಾಗ್ರಹೇಽಪಿ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ.

तामसत्वाच्च लोकस्य मिथ्याज्ञानप्रसक्तितः ॥
विद्वेषात्परमे तत्त्वे तत्त्ववेदिषु चानिशम् ॥

ग्रहादन्यायं प्रवर्तयन्तीत्यत उक्तमनादीति । वासनावशात्तेभ्यस्तदेव रोचत इति भावः । नन्वनादिवासनाऽपि बलवत्प्रयत्नेन कुतो न निवर्तेत इत्यत उक्तमसुराणामिति । विपरीतप्रयत्नादिप्रेरकाणां बुद्ध्याद्यभिमानिनामिति शेषः । ननु साधूनां विदुषां निवारणात्कुतो न निवर्तन्त इत्यत उक्तं दौर्लभ्यादिति । अल्पवेदिनां भ्रमाधिष्ठानस्वरूपमात्रविदां

ರಿಂದಲೂ ರಾಜರು ಮುಂತಾದ ಲೋಕವು ತಮೋಗುಣವುಳ್ಳದ್ದಾದುದರಿಂದಲೂ ಆದುದರಿಂದಲೇ ಕುಪಂಡಿತರ ನಿಮಿತ್ತದಿಂದ ಮಿಥ್ಯಾಜ್ಞಾನದ ಪ್ರಸಕ್ತಿಯಾಗುವುದರಿಂದಲೂ ಸರ್ವೋತ್ತಮನಾದ ನಾರಾಯಣನ ಮೇಲೆಯೂ ತತ್ತ್ವಜ್ಞಾನಿಗಳ ಮೇಲೆಯೂ ಯಾವಾಗಲೂ ದ್ವೇಷವಿರುವುದರಿಂದಲೂ ಅನಾದಿಯಾಗಿರುವ ವಾಸನಾ

— ಪದಾರ್ಥದೀಪಿಕಾ —

ಮೇಲೆ ಸಮಯಗಳು ಹೊರಡಲಿ! ಆದುದರಿಂದ ಅವು ಸದಾ ಹೇಗೆ ಹೊರಟಿರುವವು ? ಎಂಬ ಪ್ರಶ್ನೆಗೆ ಉತ್ತರವಾಗಿ "ಅನಿಶಂ" ಎಂಬುದಾಗಿ ಹೇಳಿದ್ದಾರೆ ಇನ್ನು– ಪುರುಷಾರ್ಥಾಪೇಕ್ಷಿಗಳು ದ್ವೇಷಮೂಲಕವಾದ ಅಗ್ರಹದಿಂದ ಅನ್ಯಾಯವನ್ನು ಹೇಗೆ ಪ್ರವರ್ತಿಸುವರು ? ಎಂಬ ಪ್ರಶ್ನೆಯ ಉತ್ತರವನ್ನು "ಅನಾದಿ ವಾಸನಾಯೋಗಾತ್" ಎಂಬ ವಚನದಿಂದ ಹೇಳಿದ್ದಾರೆ ವಾಸನಾ ಮೂಲಕವಾಗಿ ಅವರಿಗೆ ಅದೇ ವಿಷಯವೇ ಮೆಚ್ಚಿಗೆಯಾಗುತ್ತದೆಂದು ಭಾವವು ಇನ್ನು ಅನಾದಿಯಾದ ವಾಸನೆಯನ್ನು ಬಲವತ್ಪ್ರಯತ್ನದಿಂದ ಅಳಿಯಬಾರದೇಕೆ? ಎಂಬ ಪ್ರಶ್ನೆಯನ್ನು "ಅಸುರಾಣಾಂ" ಇತ್ಯಾದಿ ವಚನದಿಂದ ಉತ್ತರಿಸಿದ್ದಾರೆ ವಿಪರೀತವಾದ ಪ್ರಯತ್ನಾದಿಗಳ ಪ್ರೇರಕರಾದ, ಬುದ್ಧಿ ಮುಂತಾದವುಗಳ ಅಭಿಮಾನಿಗಳಾದ ಅಸುರರು ಬಹಳ ಇರುವುದರಿಂದ, ಹೀಗೆ ಅರ್ಥ "ಬುದ್ಧ್ಯಾದ್ಯಭಿಮಾನಿನಾಂ" ಎಂಬುದು ಶೇಷವು ಸಾಧುಗಳಾದ ವಿದ್ವಜ್ಜನರು ಅವುಗಳನ್ನು ನಿವಾರಿಸುವುದರಿಂದ ಅಳಿಯುವುದಿಲ್ಲದೆಂಬುದೇಕೆ ? ಈ ಪ್ರಶ್ನೆಯನ್ನು "ದೌರ್ಲಭ್ಯಾತ್" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ಅಲ್ಪವೇದಿನಾಂ"–

— ವಿಶೇಷಾರ್ಥಪ್ರದೀಪಿಕಾ —

''ಸಾಧೂನಾಂ ವಿದುಷಾಂ" ಇಲ್ಲಿ ಕರ್ತ್ರರ್ಥಕ ಷಷ್ಠೀವಿಭಕ್ತಿಯು ''ಸಾಧುವಿದ್ವಾಂಸರು ಮಾಡುವ ನಿವಾರಣೆಯಿಂದ" ''ಅಧಿಷ್ಠಾನಸ್ವರೂಪಮಾತ್ರ

अनादिवासनायोगादसुराणां बहुत्वतः ॥
दुराग्रहगृहीतत्वाद्वर्तन्ते समया सदा ॥

समयप्रवर्तकानाम् । तर्हि राजादिर्लोको निवारयिष्यतीत्यत उक्तं तामसत्वादिति । तत एव कुपण्डितनिमित्तमिथ्याज्ञानप्रसक्तितश्च । न चैतानि कारणानि स्वरूपतोऽप्यनादौ वेदे सम्भवन्तीति । यद्यप्येतत्पादान्ते वक्तव्यम् । तथाऽप्यत्र प्रसङ्गादागतं बुद्धिसमाधाना योक्तमिति ।

ಸಂಬಂಧವಿರುವುದರಿಂದಲೂ ವಿಪರೀತವಾದ ಪ್ರಯತ್ನಾದಿಗಳ ಪ್ರೇರಕರಾದ ಬುದ್ಧ್ಯಾದಿಗಳಿಗೆ ಅಭಿಮಾನಿಗಳಾದ ಅಸುರರು ಬಹಳ ಇರುವುದರಿಂದಲೂ ಮತಪ್ರವರ್ತಕರು ದುರಾಗ್ರಹವುಳ್ಳವರಿರುವುದರಿಂದಲೂ ಯಾವಾಗಲೂ ಸಮಯಗಳು ಇದ್ದೇ ಇರುತ್ತವೆ.

## — ಪದಾರ್ಥದೀಪಿಕಾ —

ಭ್ರಮದ ಅಧಿಷ್ಠಾನವನ್ನಷ್ಟೇ ತಿಳಿದ ಸಮಯ ಪ್ರವರ್ತಕರುಗಳಿಗೆ ಹಾಗಾದರೆ– ರಾಜರು ಮುಂತಾದ ಲೋಕವೇ ಅವರ ಸಮಯವನ್ನು ತಡೆಯುವದೆಂದರೆ– "ತಾಮಸತ್ವಾಚ್ಚ" ಎಂಬುದಾಗಿ ಹೇಳಿದ್ದಾರೆ ಆದುದರಿಂದಲೇ–ಕುಪಂಡಿತರ ನಿಮಿತ್ತದಿಂದ ಬಂದ ಮಿಥ್ಯಾಜ್ಞಾನದ ಪ್ರಸಂಗದಿಂದ, ಎಂದಿದ್ದಾರೆ ಈ ಕಾರಣಗಳು, ಸ್ವರೂಪದಿಂದಲೂ ಅನಾದಿಯಾದ ವೇದದಲ್ಲಿ ಸಂಭವಿಸುವುದಿಲ್ಲ. ಹೀಗೆ ಅರ್ಥ ಈ ಸಂಗತಿಯನ್ನು ಈ ಪಾದದ ಕೊನೆಗೆ ಹೇಳತಕ್ಕದ್ದು ಆದರೂ ಇಲ್ಲಿ ಪ್ರಸಂಗದಿಂದ ಬಂದುದರಿಂದ, ಬುದ್ಧಿಯ ಸಮಾಧಾನಾರ್ಥವಾಗಿ ಹೇಳಿದ್ದಾರೆ ಹೀಗೆ ತಿಳಿಯಬೇಕು

## — ವಿಶೇಷಾರ್ಥಪ್ರದೀಪಿಕಾ —

ವಿದಾಂ" — "ಮಾತ್ರ"ಪದದಿಂದ, ಅಧಿಷ್ಠಾನದಲ್ಲಿರುವ ಅಸಾಧಾರಣ ಧರ್ಮ ವಿಷಯಕ ಜ್ಞಾನವಿಲ್ಲವೆಂಬುದು ಹೇಳಲ್ಪಡುತ್ತದೆ

"ವೇದಾದಿವತ್" ಎಂಬಲ್ಲಿ ಹೇಳಿದ ವೇದಸಾಮ್ಯವನ್ನು "ನ ಚೈತಾನಿ" ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಾರೆ

ಸಮಯ (ಮತ) ಗಳಿಗೆ ಭ್ರಾಂತಿ ಮೂಲತ್ವವನ್ನು ಉಪಪಾದನಮಾಡಿದ ಅನಂತರದಲ್ಲಿಯೇ, "ಹಾಗಾದರೆ ಉನ್ಮತ್ತವಾಕ್ಯದಲ್ಲಿ ಇಲ್ಲದಿರುವ, "ಸದಾ ಇರುವುದು ಮುಂತಾದುದು" ಸಮಯಗಳಿಗೆ ಹೇಗೆ ಎಂಬ ಆಶಂಕೆಯು ಬರುವುದರಿಂದ, ಈ ಪಾದದ ಕೊನೆಯಲ್ಲಿ ಹೇಳತಕ್ಕದ್ದು ಈ ಆಶಂಕೆಯನ್ನು "ಯದ್ಯ

तथाऽपि शुद्धबुद्धीनामीशानुग्रहयोगिनाम् ॥
सुयुक्तयस्तमो हन्युरागमानुगता. सदा ॥

यद्येवं तर्ह्येतेषां सुदृढनिरूढानां समयानां सर्वथोत्सादनस्याशक्यत्वाद्व्यर्थेयं निराकृतिरित्यत आह ॥ तथाऽपीति ॥ यद्यपि कुसमया न सर्वथा समुच्छेद्यास्तथाऽपि । तमोऽज्ञानम् । सुयुक्तित्वस्य विवरणं सदाऽऽगमानुगता इति । प्रमाणगृहीतव्याप्त्यादियुक्तास्तत्संवादयुक्ताश्च । इतीत्येवमर्थम् । एतदुक्तं भवति । न साङ्ख्यादि-

ಆದರೂ ನಿರ್ಮಲ ಅಂತಃಕರಣವುಳ್ಳ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದ ಸುಜನರಿಗೆ ಆಗಮ ಮುಂತಾದ ಪ್ರಮಾಣಗಳಿಂದ ಗೃಹಿಸಲ್ಪಟ್ಟ ವ್ಯಾಪ್ತಿ ಮುಂತಾದುದುಳ್ಳ ಸುಯುಕ್ತಿಗಳು, ಅಜ್ಞಾನವನ್ನು ನಾಶಮಾಡಿಯಾವು-ನಾಶಮಾಡಲಿ ಈ

— ಪದಾರ್ಥದೀಪಿಕಾ —

ಹಾಗಾದಲ್ಲಿ ಸುದೃಢ ನಿರೂಢಗಳಾದ ಈ ಮತಗಳನ್ನು ನಿಃಶೇಷವಾಗಿ ನಿರಾಕರಿಸುವುದು ಶಕ್ಯವಿಲ್ಲವಾದುದರಿಂದ, ಈ ನಿರಾಕರಣವು ವ್ಯರ್ಥವೆಂದರ ಉತ್ತರವನ್ನು "ತಥಾಽಪಿ" ಈ ವಾಕ್ಯದಿಂದ ಹೇಳುತ್ತಾರೆ. "ತಥಾಽಪಿ"— ದುಷ್ಟ ಸಮಯಗಳನ್ನು ನಿಃಶೇಷವಾಗಿ ನಿರಾಕರಿಸುವುದು ಸಾಧ್ಯವಿಲ್ಲ ಇದು ನಿಜ, ಆದರೂ ತಮಃ ಅಜ್ಞಾನವನ್ನು "ಸುಯುಕ್ತಯಃ" ಎಂಬುದರ ವಿವರಣವು, "ಸದಾಗಮಾನುಗತಾಃ" ಎಂಬುದು ಪ್ರಮಾಣದಿಂದ ತಿಳಿಸಲ್ಪಟ್ಟ ವ್ಯಾಪ್ತಿ ಮುಂತಾದುದುಳ್ಳ ಹಾಗು ಅವುಗಳ ಸಂವಾದಯುಕ್ತಗಳಾದ, ಹೀಗೆ ಅರ್ಥ "ಇತಿ" ಶಬ್ದಕ್ಕ "ಏವಂ" (ಹೀಗೆ ಈ ಪ್ರಕಾರವಾಗಿ) ಎಂದು ಅರ್ಥ ಇಲ್ಲಿ

— ವಿಶೇಷಾರ್ಥಪ್ರದೀಪಿಕಾ —

ಸ್ಯೈತತ್'' ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ 'ಏತತ್'' –ಸಮಯಗಳಿಗೆ ಉನ್ಮತ್ತವಾಕ್ಯದಿಂದ ವ್ಯತ್ಯಾಸದ ಕಾರಣವು ಎಲ್ಲ ಸಮಯಗಳಿಗೆ ಭ್ರಾಂತಿಮೂಲತ್ವವನ್ನು ತಿಳಿಸಿದಮೇಲೆಯೇ. ''ಹೀಗೆ ಭ್ರಾಂತಿಮೂಲತ್ವವು ಸಮಾನವಿದ್ದರೂ ಉನ್ಮತ್ತವಾಕ್ಯದಲ್ಲಿ ಇಲ್ಲದಿರುವ ''ಅನಾದ್ಯನಂತಕಾಲದಲ್ಲಿಯೂ ಬಂದಿರುವುದೆಂಬ ಅನುವೃತ್ತಿಯು ಸಮಯಗಳಿಗೆ ಯಾವನಿಮಿತ್ತದಿಂದ ಬಂದುದು''? ಎಂಬ ಆಶಂಕೆಗೆ ಅವಕಾಶವು ದೊರೆಯುತ್ತದೆ ಈಗಲೇ ಅವಕಾಶವು ದೊರೆಯುವುದಿಲ್ಲ ಹೀಗೆ ಇಲ್ಲಿಯ ಭಾವವು ''ಪ್ರಸಂಗಾತ್'' –''ಭ್ರಾಂತಿಮೂಲತ್ವಮೇತೇಷಾಂ'' ಎಂಬ ವಚನದಪ್ರಸಂಗವಿರುವುದರಿಂದ

इति विद्यापति सम्यक् समयानां निराकृतिम् ॥
चकार निजभक्तानां बुद्धिशाणत्वसिद्धये ॥

समयसमुच्छेदार्थोऽयं प्रयत्नो येनोक्तदोषः स्यात्। किन्नाम केषाञ्चित्पुंसां तैस्तैः समयैराहितानज्ञानसंशयविपर्ययानागमसहिताभिर्युक्तिभिस्तत्त्वज्ञानमुत्पाद्यापनेतुमिति । नन्वेतदप्ययुक्तम् अतिनिरूढनिबिडवासनानुबद्धमनाद्यज्ञानमिदानीमेवोत्पन्नेन तत्त्वज्ञानेनापनीयत इति । किन्तु तत्त्वज्ञानं परिभूय स्ववासनावशात्पुनरुद्भवति । प्रवर्तयति च स्वोचितं

ಪ್ರಕಾರ (ಈ ಕಾರಣದಿಂದ) ವೇದವ್ಯಾಸರು, ತಮ್ಮ ಭಕ್ತರುಗಳಾದ ಬ್ರಹ್ಮಾದಿಗಳ ಬುದ್ಧಿಗೆ ಯುಕ್ತಿಯು ಶಾಣವಾಗುವುದಕ್ಕೋಸ್ಕರ (ಜ್ಞಾನಾಸಿಗೆ ಯುಕ್ತಿಯೆಂಬ ಸಾಣೆಯಿಂದ ತೀಕ್ಷ್ಣತೆಯು ಸಿದ್ಧಿಗೋಸುಗ) ಚನ್ನಾಗಿ ಸಮಯಗಳ ನಿರಾಕರಣೆವನ್ನು ಮಾಡಿದರು.

— ಪದಾರ್ಥದೀಪಿಕಾ —

ಹೇಳಿದುದು ಇದು— ಸಾಂಖ್ಯ ಮುಂತಾದ ಸಮಯಗಳ ನಿರಾಕರಣಕ್ಕಾಗಿ ಈ ಪ್ರಯತ್ನವಲ್ಲ ಹಾಗೆ ಈ ಪ್ರಯತ್ನವಾಗಿದ್ದರೆ ಹಿಂದೆ ಹೇಳಿದ ದೋಷವು ಬರುತ್ತಿತ್ತು ಆದರೆ ಕೆಲವು ಜನರುಗಳಿಗೆ ಆಯಾಯ ಸಮಯಗಳಿಂದುಂಟಾದ ಅಜ್ಞಾನ-ಸಂಶಯ-ವಿಪರೀತ ನಿಶ್ಚಯಗಳನ್ನು ಆಗಮಸಹಿತಗಳಾದ ಯುಕ್ತಿಗಳಿಂದ ತತ್ವಜ್ಞಾನವನ್ನು ಹುಟ್ಟಿಸಿ, ಪರಿಹರಿಸುವುದಕ್ಕಾಗಿ, " ಎಂಬುದು ಇನ್ನು ಅತಿ ನಿರೂಢವಾದ ನಿಬಿಡವಾದ ವಾಸನೆಯಿಂದ ಗಟ್ಟಿಯಾಗಿರುವ ಅನಾದಿಯಾದ ಅಜ್ಞಾನವು ಈಗಲೇ ಉತ್ಪನ್ನವಾದ ತತ್ತ್ವಜ್ಞಾನದಿಂದ ನಿವಾರಿಸಲ್ಪಡುವುದೆಂಬ ಈ ವಿಷಯವು ಯುಕ್ತಿಯುಕ್ತವಲ್ಲ ಇಷ್ಟೆ ಅಲ್ಲ ಅದೇ ಅಜ್ಞಾನವೇ ತತ್ತ್ವಜ್ಞಾನವನ್ನು ಪರಾಭವಗೊಳಿಸಿ ತನ್ನ ವಾಸನಾಮೂಲಕವಾಗಿ ಮತ್ತೆ ಉದ್ಭವಿಸುತ್ತದೆ ಮತ್ತು ತನ್ನ ಉಚಿತ ಕಾರ್ಯವನ್ನು ಪ್ರವರ್ತಿಸುತ್ತದೆ ಈ ಆಶಂಕೆ

— ವಿಶೇಷಾರ್ಥಪ್ರದೀಪಿಕಾ —

ಅಜ್ಞಾನದ ನಿವಾರಣವು, ಸಮಯಗಳ ನಿರಾಕರಣದ ಫಲವೆಂಬುದು, ಮೂಲದಲ್ಲಿ ಆರೂಢವಾಗುವುದಕ್ಕೋಸುಗ, ಹಾಗೆ "ಇತಿ" ಶಬ್ದವನ್ನು "ಇತೀತ್ಯೇವಮರ್ಥಂ" ಇತ್ಯಾದಿವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ

कार्यमित्यत उक्त शुद्धबुद्धीनामिति । यथार्थज्ञानस्वभावानां मोक्ष-योग्यानाम् ।

अयं भावः । वक्ष्यते हि केचन चेतना मोक्षयोग्याः केचन नेति । तत्र नायोग्यानामज्ञानमपनेतुमयमारम्भः । किन्तु योग्यानामेव । ते च विशुद्धविज्ञानस्वभावाः । तथा च प्रमाणैरिदानीमेवोत्पन्नमपीदं

— ಪದಾರ್ಥದೀಪಿಕಾ —

ಯನ್ನು ಕಳೆಯಲು "ಶುದ್ಧಬುದ್ಧೀನಾಂ" ಎಂಬುದಾಗಿ ಹೇಳಿದ್ದಾರೆ ಯಥಾರ್ಥ ಜ್ಞಾನರೂಪ ಸ್ವಭಾವವುಳ್ಳ, ಮುಕ್ತಿ ಯೋಗ್ಯರ

ಇಲ್ಲಿಯ ಭಾವ— "ಕೆಲವರು ಮುಕ್ತಿಗೆಯೋಗ್ಯರು, ಕೆಲವರು ಮುಕ್ತಿಗೆ ಯೋಗ್ಯರಲ್ಲ, ಈ ವಿಷಯವನ್ನು ಮುಂದೆ ಹೇಳಲಾಗುವದು ಹೀಗಿರುವಾಗ, ಅಯೋಗ್ಯರ ಅಜ್ಞಾನಾದಿಗಳನ್ನು ಕಳೆಯಲು ಈ ಉದ್ಯೋಗವಲ್ಲ ಯೋಗ್ಯರ ಅಜ್ಞಾನಾದಿಗಳನ್ನೇ ಕಳೆಯಲು ಈ ಪ್ರಯತ್ನವು ಆ ಯೋಗ್ಯರಾದರೋ ವಿಶುದ್ಧ ವಿಜ್ಞಾನ ಸ್ವಭಾವದವರು ಆದುದರಿಂದ ಪ್ರಮಾಣಗಳಿಂದ ಈಗಲೇ ( ಅದೇ

— ವಿಶೇಷಾರ್ಥಪ್ರದೀಪಿಕಾ —

"ವಕ್ಷ್ಯತೇ" –"ಅನಿಷ್ಟಾದಿಕಾರಿಣಾಮಪಿ ಶ್ರುತಂ" ಎಂಬ ಅಧಿಕರಣದಲ್ಲಿ, ' ಸಂಯಮನೇತ್ವನುಭೂಯೇತರೇಷಾಮಾರೋಹಾವರೋಹೌ " ಇತ್ಯಾದಿಸೂತ್ರ ದಲ್ಲಿ ವೈರಾಗ್ಯಪಾದದಲ್ಲಿ, ಮುಕ್ತಿಗೆ ಯೋಗ್ಯರಲ್ಲದ ಚೇತನರುಗಳನ್ನೂ ಹೇಳಲಾಗಿದೆ ಜ್ಞಾನಪಾದದಲ್ಲಿಯೂ "ಅನಾವರ್ತತ್ರಿಕೀ" ಎಂಬ ಅಧಿಕರಣದಲ್ಲಿ "ಮುಕ್ತಿಯ ಕಾರಣವಾದ ಜ್ಞಾನದಲ್ಲಿ ಕೆಲವರಿಗೇ ಅಧಿಕಾರವು, ಎಲ್ಲಚೇತನರಿಗಧಿಕಾರವಿಲ್ಲ " ಎಂಬುದಾಗ ಹೇಳುವುದರಿಂದ ಕೆಲವರೇ ಮುಕ್ತಿಯೋಗ್ಯರು, ಇನ್ನುಳಿದವರು ಮುಕ್ತಿಗ ಅಯೋಗ್ಯರು" ಎಂಬ ಅರ್ಥವು ಲಭಿಸುತ್ತದೆ ಹಾಗು ಅಲ್ಲಿಯೇ, " ಸರ್ವಥಾಽಪಿ ತು ತ ಏವೋಭಯಲಿಂಗಾತ್ ನಚಾಧಿಕಾರಿಕಮಪಿ ಪತನಾನು ಮಾನಾತ್ತದಯೋಗಾತ್" ಎಂಬ ಅಧಿಕರಣಗಳಲ್ಲಿ ಮುಕ್ತಿಯೋಗ್ಯ ಹಾಗು ಮುಕ್ತ್ಯಯೋಗ್ಯ ಚೇತನರುಗಳನ್ನು ಸ್ಪಷ್ಟವಾಗಿ ಹೇಳಿದ್ದಾಗಿದೆ ಈ ಎರಡೂ ಅಧಿಕರಣಗಳ ಅರ್ಥವನ್ನು ವ್ಯಾಖ್ಯಾನಿಸಹೊರಟ, "ಅನಾದಿಯೋಗ್ಯತಾಂ ಚ್ಯವ ಕಲಿವಾಣೀಶ್ವರಾವಧಿಂ" ಇಲ್ಲಿಂದಾರಂಭಿಸಿ, 'ಅದೃಷ್ಟಾಚ್ಚೇದ್ವಿಶೇಷೋಽಯಂ ಅನಾದಿತ್ವಂ ಕುತೋ ನ ತತ್" ಇಲ್ಲಿಯವರೆಗಿನ ಗ್ರಂಥದಿಂದ ಯೋಗ್ಯತೆ ಯಲ್ಲಿ ಭೇದ(ತಾರತಮ್ಯ)ವನ್ನೂ ವಿವರಿಸಲಾಗಿದೆ

मनोवृत्तिरूपं तत्त्वज्ञानमन्तरङ्गभूतेन विशुद्धस्वरूपज्ञानेनोपोद्बलितं सद्ब हिरङ्गमनाद्यपि सवासनमज्ञानं समूलघातं हन्ति । स्वभावस्य सर्वतोऽपि बलवत्त्वात् ॥ न चैवं प्रमाणवैय्यर्थ्यम् । स्वभावस्य बाह्य-प्रयत्नसचिवस्यैव कार्यकारित्वात् । यथोक्तम् । विना यत्नं न हठो नापि कर्मेति । किञ्च सर्वतोऽपि बलीयानीश्वरानुग्रह इति तावत्सुप्र-सिद्धम् । अस्ति चासौ मोक्षयोग्येषु जीवेष्वनादिन इति वक्ष्यते ।

— ಪದಾರ್ಥದೀಪಿಕಾ —

ತಾನೇ) ಉತ್ಪನ್ನವಾದರೂ ಈ ಮನಃಪರಿಣಾಮರೂಪ ತತ್ತ್ವಜ್ಞಾನವು, ಅಂತ ರಂಗವಾದ ವಿಶುದ್ಧ ವಿಜ್ಞಾನದ ಬಲದಿಂದ ಬಲಗೊಂಡದ್ದಾಗಿ, ಅನಾದಿಯಾ ದರೂ ಬಹಿರಂಗವಾದ ವಾಸನಾಸಹಿತವಾದ ಅಜ್ಞಾನವನ್ನು ಸಮೂಲಘಾತ ವಾಗಿ ನಾಶಮಾಡುತ್ತದೆ ಏಕೆಂದರೆ ಸ್ವಭಾವವು ಎಲ್ಲಕ್ಕಿಂತಲೂ ಬಲವುಳ್ಳದ್ದಾ ಗಿದೆ ಹೀಗಾದಲ್ಲಿ ಪ್ರಮಾಣಗಳಿಗೆ ವೈಯ್ಯರ್ಥ್ಯವಿಲ್ಲ ಏಕೆಂದರೆ ಸ್ವಭಾವವು ಬಾಹ್ಯಪ್ರಯತ್ನಗಳ ಸಹಾಯ ಯುಕ್ತವಾದರೇ ಕಾರ್ಯಕಾರಿಯಾಗುತ್ತದ "ಬಾಹ್ಯ ಪ್ರಯತ್ನವಿಲ್ಲದೆ ಸ್ವಭಾವ(ಯೋಗ್ಯತೆ, ಹಟ)ವಾಗಲೀ ಕರ್ಮವಾಗಲೀ ತನ್ನ ಕಾರ್ಯವನ್ನು ಮಾಡಲಾರದು," ಹೀಗೆ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹೇಳಿರುತ್ತಾರೆ ಮತ್ತು ಎಲ್ಲಕ್ಕಿಂತಲೂ ಬಲಿಷ್ಠವಾದುದು ಈಶ್ವರನ ಅನುಗ್ರಹವೆಂಬುದಂತೂ ಸುಪ್ರಸಿದ್ಧವೇ! ಈಶ್ವರಾನುಗ್ರಹವು ಮುಕ್ತಿ ಯೋಗ್ಯ ಜೀವರಲ್ಲಿ ಅನಾದಿ ಕಾಲದಿಂದಲೂ ಇದ್ದೇ ಇರುತ್ತದೆಯೆಂಬುದನ್ನು

— ವಿಶೇಷಾರ್ಥಪ್ರದೀಪಿಕಾ —

"ಸಮೂಲಘಾತಂ ಹಂತಿ"– ಮೂಲಸಹಿತವಾಗಿ ನಾಶಮಾಡುತ್ತದೆ. ಹೀಗೆ ಅರ್ಥ

"ಯಥೋಕ್ತಂ"–ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ ಹೇಳಲಾಗಿದೆ

"ಇತಿವಕ್ಷ್ಯತೇ" –"ಸರ್ವಥಾಽಪಿ ತು ತ ಏವೋಭಯಲಿಂಗಾತ್" ಎಂಬ, ಜ್ಞಾನಪಾದದ ಅಧಿಕರಣದಲ್ಲಿ "ವಿಶೇಷಾನುಗ್ರಹಂಚ" ಎಂಬ ಗುಣಸೂತ್ರದಲ್ಲಿ ಹೇಳಲಾಗುವುದೆಂದು ಭಾವ

"ಶೃಣ್ವೇವೀರಮುಗ್ರ ಮುಗ್ರಂ ದಮಾಯನ್ ಅನ್ಯಮನ್ಯಂ" ಇತ್ಯಾದಿ ಅನು ವ್ಯಾಖ್ಯಾನವಚನಗಳಿಂದ ಹೇಳುವರು

तथा च तत्सांचिवमिदं वृत्तिज्ञानमज्ञानमति निरूढनिबिडवासनानुबद्ध-मनाद्यपि समूलकाषंकषत्येवातो न व्यर्थेयं समयानां निराक्रियेति भावेनोक्तमीशानुग्रहयोगिनामिति । न चैवं तत एवाविद्यानिवृत्तिर्भविष्यति किं तत्त्वज्ञानेनेति वाच्यम् । ईश्वरानुग्रहस्य पुरुषप्रयत्नानुसारेणैव फलजननस्वाभाव्यात् । तथा चोक्तम् । फलप्रदो वासुदेवो अखिलस्येति । अखिलस्य योग्यताकर्मप्रयत्नसाकल्यस्य न पुनरेकैकस्येत्यर्थः ।

यद्येवं साधूनां कुसमयाहितमज्ञानमपनेतुं भगवान्समयानां

— ಪದಾರ್ಥದೀಪಿಕಾ —

ಮುಂದೆ ಹೇಳಲಾಗುವದು ಆದುದರಿಂದ ಈಶ್ವರಾನುಗ್ರಹದಿಂದ ಬಲಗೊಂಡಿರುವ, ಈ ಮನಃಪರಿಣಾಮರೂಪವಾದ ತತ್ವಜ್ಞಾನವು, ಅತಿ ನಿರೂಢನಿಬಿಡ ವಾಸನಾನುಬದ್ಧವಾಗಿದ್ದರೂ ಅನಾದಿಯಾಗಿದ್ದರೂ ಆ ಅಜ್ಞಾನವನ್ನು ಸಮೂಲವಾಗಿ ಉನ್ಮೂಲನ ಮಾಡಿಯೇ ಮಾಡುತ್ತದೆ ಆದುದರಿಂದ, ಈ ಸಮಯ ನಿರಾಕರಣವು ವ್ಯರ್ಥವಾದುದಲ್ಲ " ಈ ಅಭಿಪ್ರಾಯದಿಂದ " ಈಶ್ವರಾನುಗ್ರಹ ಯೋಗಿನಾಂ" ಎಂಬುದಾಗಿ ಹೇಳಿದ್ದಾರೆ ಹಾಗಾದರೆ ಆ ಈಶ್ವರಾನುಗ್ರಹದಿಂದಲೇ ಅವಿದ್ಯೆಯು ನಿವೃತ್ತಿಯಾಗುವದು ತತ್ತ್ವಜ್ಞಾನವೇಕೆ ? ಎಂಬುದಾಗಿ ಹೇಳಬಾರದು ಏಕೆಂದರೆ ಈ ಪುರುಷನ ಪ್ರಯತ್ನಗಳನ್ನನುಸರಿಸಿಯೇ ಫಲವನ್ನುಂಟುಮಾಡುವುದು ಈಶ್ವರಾನುಗ್ರಹದ ಸ್ವಭಾವವಾಗಿದ " ಫಲಪ್ರದೋ ವಾಸುದೇವೋऽಖಿಲಸ್ಯ '' ಎಂಬುದಾಗಿ ಇದನ್ನೇ ಹೇಳಿದ್ದಾರೆ "ಅಖಿಲಸ್ಯ"– ಯೋಗ್ಯತೆ, ಕರ್ಮ, ಪ್ರಯತ್ನ ಇವುಗಳೆಲ್ಲದಕ್ಕೂ, ಎಂದು ಅರ್ಥ ಒಂದೊಂದಕ್ಕಷ್ಟೇ ಅಲ್ಲ ಹೀಗೆ ಭಾವ

ಇನ್ನು– ಹೀಗೆ ಸಾಧು ಜನರಿಗೆ ಕುಸಮಯಗಳಿಂದುಂಟಾದ ಅಜ್ಞಾನವನ್ನು

— ವಿಶೇಷಾರ್ಥಪ್ರದೀಪಿಕಾ —

''ತಥಾಚೋಕ್ತಂ'' –ಮಹಾಭಾರತತಾತ್ಪರ್ಯ ನಿರ್ಣಯದಲ್ಲಿ ಹೇಳಿದೆಯೆಂದು ತಿಳಿಯಬೇಕು

''ಅಖಿಲಸ್ಯ'' ಎಂಬುದಕ್ಕೆ ''ಸರ್ವಜನಸ್ಯ"( ಸರ್ವಜನರಿಗೆ)ಎಂಬ ಅರ್ಥದ ಭ್ರಮವು ಬರಬಾರದೆಂಬ ಉದ್ದೇಶದಿಂದ, ''ಅಖಿಲಸ್ಯ'' ಎಂಬುದನ್ನು ''ಯೋಗ್ಯತಾ'' ಇತ್ಯಾದಿವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ

निराकृतिं चकार तदेयं ब्रह्मादिभिरनादरणीया स्यात् । तेषु कुसमयैर-ज्ञानस्यानाहितत्वेन प्रयोजनाभावात् । तथा चैवंविधानि सूत्राणि कृत्वेत्यागमविरोध इत्यत आह ॥ निजेति ॥ कुसमयैरनाहिताज्ञानानां ब्रह्मादीनां बुद्धिं प्रति युक्तीनां शाणत्वसिद्ध्य युक्तिशाणेन ज्ञानासेरति-नैशित्यसिद्ध्यर्थमिति यावत् । पूर्वेणैव सम्बन्धः । कुसमयाहिताज्ञान-निरसनप्रयोजनाभावेऽपि ज्ञानवैशिद्यप्रयोजनस्य विद्यमानत्वात्तैरिद-मादरणीयमिति भावः ।

### — ಪದಾರ್ಥದೀಪಿಕಾ —

ಕಳೆಯಲು ಭಗವಾನ್ ನಾರಾಯಣನು ಸಮಯಗಳ ನಿರಾಕರಣವನ್ನು ಮಾಡಿದು ದಾದರೆ– ಆಗ ಬ್ರಹ್ಮಾದಿಗಳು ಈ ನಿರಾಕರಣವನ್ನು ಆದರಿಸದಿರಲಿ! ಏಕೆಂ ದರೆ– ಕುಸಮಯಗಳಿಂದ ಅವರಲ್ಲಿ ಅಜ್ಞಾನವು ಬಂದಿರುವುದಿಲ್ಲವಾದುದರಿಂದ ಅವುಗಳ ನಿರಾಕರಣದಿಂದ ಬ್ರಹ್ಮಾದಿಗಳಿಗೆ ಪ್ರಯೋಜನವಿರುವುದಿಲ್ಲ ಆದುದ ರಿಂದ "ಏವಂವಿಧಾನಿ ಸೂತ್ರಾಣಿ ಕೃತ್ವಾ" ಇತ್ಯಾದಿಯಾದ ಭಾಷ್ಯೋಕ್ತ ಆಗಮ ವಿರೋಧವು ಬರುತ್ತದ – ಆಶಂಕಯನ್ನು "ನಿಜ ಭಕ್ತಾನಾಂ" ಇತ್ಯಾದಿ ವಚನದಿಂದ ಪರಿಹರಿಸುತ್ತಾರ ಕುಸಮಯಗಳಿಂದ ಅಜ್ಞಾನವು ಬ್ರಹ್ಮಾದಿಗಳಿಗೆ ಬರದಿದ್ದರೂ ಬ್ರಹ್ಮಾದಿಗಳ ಬುದ್ಧಿಯನ್ನು ಕುರಿತು ಯುಕ್ತಿಗಳ ಶಾಣತ್ವದ ಸಿದ್ಧಿಗಾಗಿ– ಅಂದರ ಯುಕ್ತಿಯೆಂಬ ಸಾಣೆಯಿಂದ ಜ್ಞಾನವೆಂಬ ಅಸಿಗೆ ನಿಶಿತತೆಯ ಸಿದ್ಧಿಗಾಗಿ, ಮಾಡಿದನು ಹಿಂದಿನಿಂದಲೇ ಅನ್ವಯವಿದೆ ಕುಸಮ ಯಗಳಿಂದುಂಟಾದ ಅಜ್ಞಾನಾದಿಗಳ ನಿರಸನವೆಂಬ ಪ್ರಯೋಜನವು ಬ್ರಹ್ಮಾದಿ ಗಳಿಲ್ಲದಿದ್ದರೂ ಜ್ಞಾನದ ವೈಶದ್ಯವೆಂಬ ಪ್ರಯೋಜನವು ಇರುವುದರಿಂದ ಅವರೂ ಇದನ್ನು (ಸಮಯನಿರಾಕರಣವನ್ನು) ಆದರಿಸತಕ್ಕದ್ದೆಂದು ಭಾವ

### — ವಿಶೇಷಾರ್ಥಪ್ರದೀಪಿಕಾ —

"ಇತ್ಯಾಗಮವಿರೋಧ" –ಇಲ್ಲಿ– ಭಾಷ್ಯೋಕ್ತ ವಾಕ್ಯಶೇಷದಲ್ಲಿ ಬ್ರಹ್ಮ ರುದ್ರಾದಿದೇವೇಷು ಮನುಷ್ಯ ಪಿತೃಪಕ್ಷಿಷು॥ ಜ್ಞಾನಂ ಸಂಸ್ಥಾಪ್ಯ ಭಗವಾನ್ ಕ್ರೀಡತೇ ಪುರುಷೋತ್ತಮಃ" ಎಂಬುದಾಗಿ ದೇವ–ಋಷಿ–ಪಿತೃ–ಪ (ಚಕ್ರವರ್ತಿ) ಕ್ಷಿ–ಮನುಷ್ಯೋತ್ತಮರಲ್ಲಿ ಹಾಗು ಜರಿತಯ ರ್ಇದಿ ಪಕ್ಷಿಗಳಲ್ಲಿ ಜ್ಞಾನವನ್ನು ಸ್ಥಾಪಿಸಿದನು, ಹೀಗೆ ಹೇಳಿದುದರಿಂದ, ಆ ಭಾಷ್ಯೋಕ್ತ ಆಗಮವಿರೋಧ ವೆಂದು ತಿಳಿಯಬೇಕು

चेतनाचेतनं तत्त्वद्वयमेव निरीश्वरा ॥

॥ ॐ रचनानुपपत्तेश्च नानुमानम् ॐ ॥ तदेवं समर्थितः पादारम्भः । तत्राद्याधिकरणे निरीश्वरसाङ्ख्यमतं निराक्रियते । न च तत्स्वरूपाज्ञाने दूषणं सुबोधं भवतीत्यतस्तन्मतस्थितिं तावद्दर्शयति ॥ चेतनेति । चेतनमचेतनं चेति द्वन्द्वैकवद्भावः । आहुः - साङ्ख्या इति शेषः । ननु च विधान्तरासम्भवात्प्रामाणिकैस्तत्त्वद्वयमेव वक्तव्यम् ।

ಈಶ್ವರನನ್ನು ಅಂಗೀಕರಿಸದ ಸಾಂಖ್ಯರು "ಜೀವ–ಜಡ"ವೆಂಬ ಎರಡೇ ತತ್ತ್ವಗಳನ್ನು ಹೇಳುತ್ತಾರೆ,

— ಪದಾರ್ಥದೀಪಿಕಾ —

ಹೀಗೆ ವಾದಾರಂಭವನ್ನು ಸಮರ್ಥಿಸಿದ್ದಾಯಿತು ಈ ವಾದದ ಮೊದಲನೆಯ ಅಧಿಕರಣದಲ್ಲಿ ನಿರೀಶ್ವರ ಸಾಂಖ್ಯಮತವು ನಿರಾಕರಿಸಲ್ಪಡುತ್ತದೆ ಆ ಮತದ ಸ್ವರೂಪವನ್ನು ತಿಳಿಯದಿದ್ದಲ್ಲಿ ಅದರ ದೂಷಣವು ಸುಬೋಧವಾಗುವುದಿಲ್ಲ ಈ ಕಾರಣದಿಂದ ಮೊದಲು ಆ ಮತದ ಸ್ಥಿತಿಯನ್ನು (ಸ್ವರೂಪವನ್ನು) "ಚೇತನಾಚೇತನಂ" ಇತ್ಯಾದಿ ವಚನಗಳಿಂದ ತೋರಿಸುತ್ತಾರೆ "ಚೇತನಾಚೇತನಂ" ಎಂಬಲ್ಲಿ ದ್ವಂದ್ವೈಕವದ್ಭಾವವು (ಚೇತನಂ ಚ ಚೇತನಂ ಚ) ಇರುತ್ತದೆ "ಆಹುಃ" ಎಂಬಲ್ಲಿ "ಸಾಂಖ್ಯಾಃ" ಎಂಬುದು ಶೇಷವು ಬೇರೆ ಪ್ರಕಾರವು ಸಂಭವಿಸುವುದಿಲ್ಲವಾದುದರಿಂದ, ಪ್ರಾಮಾಣಿಕರೂ ಎರಡೇ ತತ್ತ್ವಗಳನ್ನೇ

— ವಿಶೇಷಾರ್ಥಪ್ರದೀಪಿಕಾ —

॥ಓಂ॥ ರಚನಾನುಪಪತ್ತೇಶ್ಚನಾನುಮಾನಂ॥ಓಂ॥

''ದ್ವಂದ್ವೈಕವದ್ಭಾವಃ'' —''ಸರ್ವೋ ದ್ವಂದ್ವೋ ವಿಭಾಷಯಾ ಏಕವದ್ ಭವತಿ" —ಎಂಬ ಸೂತ್ರದ ಪ್ರಕಾರ ಏಕವದ್ಭಾವವು ಬಂದುದರಿಂದ "ಚೇತನಾಚೇತನಂ" ಎಂಬುದಾಗಿ ಹೇಳಲ್ಪಟ್ಟಿದೆ ಆದುದರಿಂದ, ಏಕವಚನವು ಯುಕ್ತವೇ!

"ವಿಧಾಂತರಾಸಂಭವಾತ್"— ಅನೇಕ(ಎರಡಕ್ಕಿಂತಹೆಚ್ಚು)ವಿಧಗಳಿರುವುದಾಗಲಿ, ಒಂದೇ ವಿಧವಿರುವುದಾಗಲೀ, ಪ್ರತ್ಯಕ್ಷಾದಿಗಳಿಂದ ಬಾಧಿತವಾದುದರಿಂದ ಸಂಭವಿಸುವುದಿಲ್ಲವಾದುದರಿಂದ "ತತ್ತ್ವದ್ವಯಮೇವವಕ್ತವ್ಯಂ"— ಹಾಗಿಲ್ಲದಿದ್ದಲ್ಲಿ ಸಿದ್ಧಾಂತದಲ್ಲಿಯೂ "ದ್ವಿವಿಧಂ ತತ್ತ್ವಮಿಷ್ಯತೇ" ಎಂಬುದಾಗಿ ಹೇಳುವುದು ಸರಿಯಾಗಲಿಕ್ಕಿಲ್ಲ ಹೀಗೆ ಭಾವ

तत्किं तेषां वैषम्यमुच्यत इत्यत उक्तं निरीश्वरा इति। ईश्वरमनभ्युपगम्य जीवजडात्मकं तत्त्वद्वयमेवाहुरित्यर्थः।

ननु साङ्ख्या मन्यन्ते। सङ्क्षेपतस्तत्त्वस्य चतस्रो विधाः। कश्चिदर्थः प्रकृतिरेव। कश्चिदर्थो विकृतिरेव। कश्चित्प्रकृतिविकृतिः। कश्चिदनुभयः। तत्र सत्त्वरजस्तमसां साम्यावस्था प्रधानं प्रकृतिरेव।

— ಪದಾರ್ಥದೀಪಿಕಾ —

ಹೇಳತಕ್ಕದ್ದು ಆದುದರಿಂದ, ಅವರಿಗೆ ವೈಷಮ್ಯವೆಂಬುದನ್ನು ಏಕೆ ಹೇಳತಕ್ಕದ್ದು? ಈ ಆಕ್ಷೇಪದ ಪರಿಹಾರಕ್ಕಾಗಿ "ನಿರೀಶ್ವರಾಃ" ಎಂಬುದಾಗಿ ಹೇಳಿದ್ದಾರೆ ಈಶ್ವರನನ್ನು ಅಂಗೀಕರಿಸದೆ ಜೀವ ಜಡಾತ್ಮಕವೆಂದು ತತ್ತ್ವಗಳೆರಡನ್ನೇ ಹೇಳುತ್ತಾರೆ, ಹೀಗೆ ಅರ್ಥ

ಇನ್ನು— ಸಾಂಖ್ಯರು ಹೀಗೆ ಬಗೆಯುತ್ತಾರೆ- "ತತ್ತ್ವದಲ್ಲಿ ಸಂಕ್ಷೇಪದಿಂದ ನಾಲ್ಕು ತರಹಗಳು (೧) ಕೆಲವೊಂದು ಪದಾರ್ಥವು ಕೇವಲ ಪ್ರಕೃತಿರೂಪವಾದುದು (೨) ಕೇವಲ ವಿಕೃತಿರೂಪವೇ ಆದುದು- ಇನ್ನೊಂದು ಪದಾರ್ಥವು (೩) ಪ್ರಕೃತಿ ವಿಕೃತಿರೂಪವಾದುದು ಇನ್ನೂ ಕೆಲವೊಂದು ವಸ್ತುವು (೪) ಪ್ರಕೃತಿಯೂ ವಿಕೃತಿಯೂ ಎರಡರಲ್ಲಿ ಯಾವುದೂ ಆಗದಿರುವ ಕೆಲವೊಂದು ವಸ್ತುವು ಹೀಗೆ ನಾಲ್ಕು ತರಹಗಳು ಇವುಗಳಲ್ಲಿ ಸತ್ತ್ವ, ರಜ, ತಮ, ಈ ಮೂರು ಗುಣಗಳ ಸಾಮ್ಯಾವಸ್ಥೆಯಾದ ಪ್ರಧಾನವು ಕೇವಲ ಪ್ರಕೃತಿರೂಪವವೇ

— ವಿಶೇಷಾರ್ಥಪ್ರದೀಪಿಕಾ —

ಮುಂದಿನ ವಾಕ್ಯದ ಅವತಾರಿಕೆಯು ಸಲುವಾಗಿ "ನನುಸಾಂಖ್ಯಾಃ" ಇತ್ಯಾದಿಯಾಗಿ ಹೇಳುತ್ತಾರೆ "ಚತಸ್ರಃ" —ಮುಂದಿನ ಸಮ್ಮತಿಶ್ಲೋಕದಲ್ಲಿ ಚಾತುರ್ವಿಧ್ಯವು ಹೇಳಲ್ಪಟ್ಟಿರುವುದೆಂದು ತಿಳಿದುಬರುತ್ತದೆ "ಪ್ರಕೃತಿರೇವ" --'ಪ್ರಕರೋತಿ" ಎಂಬ ವ್ಯುತ್ಪತ್ತಿಯಿಂದ, ಪ್ರಕೃತಿಶಬ್ದಕ್ಕೆ ಉಪಾದಾನವೆಂದು ಅರ್ಥ ಬೇರೆ ತತ್ತ್ವವನ್ನು ಕುರಿತು ಯಾವದು ಪರಿಣಾಮಿಯಾದ ಕಾರಣವೋ ಅದು ಪ್ರಕೃತಿಯು "ವಿಕೃತಿರೇವ" –ವಿಕ್ರಿಯತೇ" ಎಂಬ ವ್ಯುತ್ಪತ್ತಿಯಿಂದ "ವಿಕೃತಿ" ಎಂದರೆ ಕಾರ್ಯವು –ಅಂದರೆ ಯಾವದೇ ತತ್ತ್ವವನ್ನು ಕುರಿತು ಉಪಾದಾನಕಾರಣವಾಗದಿರುವಂತಹದು ಹೀಗೆ ಭಾವ-

ಪ್ರಕೃತಿ ಮುಂತಾದ ಪದಾರ್ಥಗಳನ್ನು "ತತ್ರ ಸತ್ತ್ವ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ 'ಸಾಮ್ಯಾವಸ್ಥಾ" – ಪರಸ್ಪರ ಮಿಶ್ರಣವಿಲ್ಲದಯೆ, ಸ್ವರೂಪದಿಂದ ಗುಣತ್ರಯಗಳ ಇರುವಿಕೆಯು ಅಂದರೆ ಗುಣಪ್ರಧಾನಭಾವವಿಲ್ಲದೆಯೆ,

सा हि विश्वस्य कार्यस्य मूलम्। न त्वस्या मूलान्तरमस्ति। महदहङ्कारतन्मात्राः सप्त प्रकृतिविकृतयः। प्रकृतयो विकृतयश्चेति। तथा हि। महत्तत्त्वमहङ्कारस्य प्रकृतिर्विकृतिश्च मूलप्रकृतेः। एवमहङ्कारतत्त्वं तन्मात्राणामिन्द्रियाणां च प्रकृतिर्विकृतिश्च महतः। एवं पञ्च तन्मात್ರಾणि तत्त्वानि भूतानामाकाशादीनां प्रकृतयो विकृतयश्चा-

— ಪದಾರ್ಥದೀಪಿಕಾ —

ಆದುದು ಏಕೆಂದರೆ– ಅದು ಕಾರ್ಯವಾದ ವಿಶ್ವಕ್ಕೆಲ್ಲ ಮೂಲಭೂತವಾದುದು ಇದಕ್ಕೆ ಮೂಲವಾದುದು ಮತ್ತೊಂದಾವುದೂ ಇಲ್ಲ ಮಹತ್ತು, ಅಹಂಕಾರ, ಐದು ತನ್ಮಾತ್ರಗಳು, ಇವು ಏಳು ಪ್ರಕೃತಿ ವಿಕೃತಿಗಳು– ಅಂದರ ಪ್ರಕೃತಿರೂಪ ಗಳೂ ವಿಕೃತಿರೂಪಗಳೂ (ಉಭಯರೂಪಗಳು) ಆಗಿವೆಯೆಂದರ್ಥ ಹೇಗೆಂದರ– ಮೂಲ ಪ್ರಕೃತಿಯ ವಿಕೃತಿ ( ವಿಕಾರಹೊಂದಿದುದು ) ಯಾದ ಮಹತ್ತತ್ತ್ವವು ಅಹಂಕಾರ ತತ್ತ್ವಕ್ಕೆ ಪ್ರಕೃತಿಯಾದುದು ಹೀಗೆಯೇ ಮಹತ್ತತ್ತ್ವದ ವಿಕೃತಿ ಯಾದ ಅಹಂಕಾರ ತತ್ತ್ವವು ಶಬ್ದಾದಿ ಪಂಚತನ್ಮಾತ್ರಾಗಳಿಗೂ ಇಂದ್ರಿಯ ಗಳಿಗೂ ಪ್ರಕೃತಿಯಾಗಿದೆ ಇದರಂತೆ, ಅಹಂಕಾರದ ವಿಕೃತಿಗಳೆನಿಸಿದ ಪಂಚ

— ವಿಶೇಷಾರ್ಥಪ್ರದೀಪಿಕಾ —

ಮೂರು ಗುಣಗಳಿಗೂ ಪ್ರಧಾನತ್ವರೂಪಸ್ಥಿತಿಯು, ಹೀಗೆ ಅರ್ಥ ಸೃಷ್ಟಿ ಕಾಲದಲ್ಲಿ ಸತ್ತ್ವ, ರಜ, ತಮ, ಈ ಮೂರು ಗುಣಗಳಲ್ಲಿ ಬಲಿಷ್ಠವಾಗಿ ಯಾವದು ಹುಟ್ಟುವುದೋ ಅದು ಅಂಗಿಯು. ಆದರಿಂದ ಪರಾಭವಹೊಂದಿ ದುದು, ಬಲಿಷ್ಠವಾದುದಕ್ಕೆ ಅನುಗುಣವಾಗಿ ಇರುವಂತಹದು ಯಾವದೋ ಅದು ಅಂಗವು ಹೀಗೆ ಗುಣಪ್ರಧಾನಭಾವವಿರುತ್ತಿರಲು, ಮಹದಾದಿ ಕಾರ್ಯದಲ್ಲಿ ಪ್ರವೃತ್ತಿಯು (ಸತ್ವಾದಿಗಳಿಗೆ) ಆಗುತ್ತವೆ ಇದೇ "ಗುಣವೈಷಮ್ಯವು ಪ್ರಲ ಯದಲ್ಲಿಯಾದರೋ ಹಿಂದೆ ಹೇಳಿದ ರೀತಿಯಿಂದ ಸತ್ವಾದಿಗಳಲ್ಲಿ ಗುಣಪ್ರಧಾನ ಭಾವವಿರುವುದಿಲ್ಲ ಆದರೆ ಪ್ರಧಾನತ್ವವೇ ಎಲ್ಲಗುಣಗಳಿಗೆ ಬರುತ್ತದೆ ಅಂ ದರೆ ಸತ್ವಾದಿಗಳೆಲ್ಲವೂ ಪ್ರಧಾನವೇ ಆಗುವವು, ಯಾವದೂ ಅಂಗವಾಗುವುದಿಲ್ಲ, ಹೀಗೆ ಇರುವ ಸ್ಥಿತಿಯು, ಗುಣಗಳ ಸಾಮ್ಯಾವಸ್ಥೆಯೆನಿಸುತ್ತದೆ. ಆದುದ ರಿಂದಲೇ ಪ್ರಧಾನವೆಂಬ ಸಂಜ್ಞೆಯು ಹೀಗೆ ಅವರ ಪ್ರಕ್ರಿಯೆಯು.

"ಮೂಲಪ್ರಕೃತಿಃ" ಇತ್ಯಾದಿ ಸಾಂಖ್ಯಕಾರಿಕೆಯಲ್ಲಿರುವ "ಮೂಲ" ಪದದ ಅರ್ಥವನ್ನು "ಸಾ ಹಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

हङ्कारस्येति । पञ्च भूतान्येकादशेन्द्रियाणीति षोडशको गणो विकृतिरेव । यद्यपि पृथिव्यादीनामपि गोघटवृक्षादयो विकाराः । एवं तद्विकारभेदाः पयोबीजादयः । तेषां दध्यङ्कुरादयः । तथाऽपि गवादयो बीजादयो वा न पृथिव्यादिभ्यस्तत्त्वान्तरम् । स्थूलतेन्द्रिय-ग्राह्यतासाम्यात् । तत्त्वोपादानत्वं च प्रकृतित्वमिह विवक्षितमिति

## — ಪದಾರ್ಥದೀಪಿಕಾ —

ತನ್ಮಾತ್ರಾಗಳೆಂಬ ತತ್ತ್ವಗಳು ಆಕಾಶಾದಿ ಪಂಚಮಹಾಭೂತಗಳಿಗೆ ಪ್ರಕೃತಿ ಯೆನಿಸಿರುತ್ತವೆ ಪಂಚಮಹಾಭೂತಗಳೂ ಹನ್ನೊಂದು ಇಂದ್ರಿಯಗಳೂ ಸೇರಿ ಆದ ಈ ಹದಿನಾರರ ಗುಂಪು ಮಾತ್ರ ಕೇವಲ ವಿಕೃತಿಯೇ! (ವಿನಾ ಬೇರೆ ಯಾಗಲಾರವು!, ಇನ್ನು ಪೃಥಿವೀ ಮುಂತಾದವುಗಳಿಗೂ ಗೋ, ಘಟ, ವೃಕ್ಷ ಮುಂತಾದರೂಪ ವಿಕಾರಗಳಿರುತ್ತವೆ ಅದರಂತೆ ಅವುಗಳಿಗೂ ಹಾಲು ಬೀಜ ಮುಂತಾದ ವಿಕಾರಗಳಿರುತ್ತವೆ ಈ ಹಾಲು ಬೀಜ ಮೊದಲಾದವುಗಳಿಗೆ ಮೊಸರು ಅಂಕುರ ಮುಂತಾದ ವಿಕಾರಗಳೂ ಆಗುವವು ಆದರೂ ಗೋವು ಮುಂತಾದವುಗಳಾಗಲೀ ಬೀಜ ಮುಂತಾದವುಗಳಾಗಲೀ ಪೃಥಿವೀ ಮುಂತಾದು ದರಿಂದ ಬೇರೆಯಾದ ತತ್ತ್ವವಲ್ಲ ಏಕೆಂದರೆ ಸ್ಥೂಲತೆ, ಇಂದ್ರಿಯಗ್ರಾಹ್ಯತ್ವ ಇವುಗಳು ಸಮಾನವಾಗಿವೆ ಮತ್ತು ತತ್ತ್ವದ ಉಪಾದಾನ ಕಾರಣವಾಗಿರು ವುದೇ ಪ್ರಕೃತಿಯೆಂಬ ಅರ್ಥದ ಬಗ್ಗೆ ಅಭಿಪ್ರಾಯಪಿದೆ ಆದರ ಪುರುಷನು

## — ವಿಶೇಷಾರ್ಥಪ ದೀಪಿಕಾ —

"ಷೋಡಶಕಶ್ಚ ವಿಕಾರಃ"ಎಂಬುದರ ಅರ್ಥವನ್ನು"ಪಂಚಭೂತಾನಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ವಾಕ್, ಪಾಣಿ, ಪಾದ, ಪಾಯು, ಉಪಸ್ಥ, (ಕರ್ಮೇಂದ್ರಿಯ) ಶ್ರೋತ್ರ, ತ್ವಕ್, ರಸನ, ಚಕ್ಷು, ಘ್ರಾಣ, (ಜ್ಞಾನೇಂದ್ರಿಯ) ಮನಸ್ಸು, ಹೀಗೆ ಹನ್ನೊಂದು ಇಂದ್ರಿಯಗಳು

"ಸ್ಥೂಲತೇಂದ್ರಿಯಗ್ರಾಹ್ಯತಾಸಾಮ್ಯಾತ್"-ಪೃಥಿವ್ಯಾದಿಗಳಿಗೆ ಹೇಗೆ ಸ್ಥೂಲ ತೆಯೂ ಇಂದ್ರಿಯದಿಂದ ಗ್ರಾಹ್ಯತೆಯೂ ಇದೆಯೋ ಅದರ ಹಾಗೆ ಗೋಘಟಮುಂತಾ ದವುಗಳಿಗೆ ಸ್ಥೂಲತೆಯೂ ಇಂದ್ರಿಯಗ್ರಾಹ್ಯತೆಯೂ ಇದೆ ಸ್ಥೂಲತೆಯಲ್ಲಿಯೂ ಇಂದ್ರಿಯಗ್ರಾಹ್ಯತೆಯಲ್ಲಿಯೂ ಇರುವ ತಾರತಮ್ಯವೇ ಬೇರೆ ಬೇರೆ ತತ್ವವೆಂಬುದರ (ತತ್ವಾಂತರತ್ವದ) ವ್ಯವಸ್ಥಾಪಕ(ಕಾರಣ)ವಾದುದರಿಂದ, ಆ ತಾರತಮ್ಯವು ಪ್ರಧಾ ನಮಹದಾದಿಗಳಿಂದ ಮಹದಹಂಕಾರಾದಿಗಳಿಗಿರುವುದರಿಂದ ಅವು ಬೇರೆ ಬೇರೆ

आहुस्तत्पञ्चपञ्चत्वविभागस्थमचेतनम् ॥

पुरुषस्त्वनुभयो न प्रकृतिर्नापि विकृतिः। तदेवं विस्तरतः पञ्चविंशति तत्त्वानि। यथोक्तम्। मूलप्रकृतिरविकृतिर्महदाद्याः प्रकृतिविकृतयः सप्त। षोडशकस्तु विकारो न प्रकृतिर्न विकृतिः पुरुष इति। तत्कथमुच्यते तत्त्वद्वयमेवाहुरित्यत आह॥ तदिति॥ पञ्च च ते

ಇಪ್ಪತ್ತೈದು ವಿಭಾಗಗಳಿಂದ ಯುಕ್ತವಾದ ಆ ಜಡ (ಅಚೇತನ)ವು ಹಾಗು ಚೇತನವು, ಇವೆರಡು ತತ್ತ್ವಗಳನ್ನೇ ಸಂಕ್ಷೇಪದಿಂದ ಹೇಳುತ್ತಾರೆ.

— ಪದಾರ್ಥದೀಪಿಕಾ —

ಕೇವಲ ಪ್ರಕೃತಿಯಾಗಲೀ ಕೇವಲ ವಿಕೃತಿಯಾಗಲೀ ಪ್ರಕೃತಿವಿಕೃತಿಯಾಗಲೀ ಯಾವದೂ ಆಗಿರುವುದಿಲ್ಲ ಹೀಗೆ ವಿಸ್ತಾರದಿಂದ ಇಪ್ಪತ್ತೈದು ತತ್ತ್ವಗಳು. "ಮೂಲಪ್ರಕೃತಿರವಿಕೃತಿರ್ಮಹದಾದ್ಯಾಃ ಪ್ರಕೃತಿವಿಕೃತಯಃ ಸಪ್ತ ॥ ಷೋಡಶಕಸ್ತು ವಿಕಾರೋ ನ ಪ್ರಕೃತಿರ್ನ ವಿಕೃತಿಃ ಪುರುಷಃ ॥" ಎಂಬ ಸಾಂಖ್ಯಕಾರಿಕೆಯಲ್ಲಿ ಇದರಂತೆ ಹೇಳಲ್ಪಟ್ಟಿದೆ ಆದುದರಿಂದ, ಎರಡೇ ತತ್ತ್ವಗಳನ್ನು ಹೇಳುವರೆಂದು ಹೇಳಿದುದು ಹೇಗೆ? ಈ ಆಶಂಕೆಯನ್ನು "ತತ್" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ಪಂಚ ಚ ತೇ ಪಂಚತಶ್ಚ" ಎಂಬುದಾಗಿ "ಪಂಚ

— ವಿಶೇಷಾರ್ಥಪ್ರದೀಪಿಕಾ —

ತತ್ತ್ವಗಳಾದರೂ ಪೃಥಿವ್ಯಾದಿಗಳಿಗಿಂತ ಗೋಘಟಾದಿಗಳಲ್ಲಿ ಈ ತರಹದ ತಾರತಮ್ಯವು ಇಲ್ಲವಾದುದರಿಂದ, ಗೋಘಟವುಂತಾದುದು ಬೇರೆ ತತ್ತ್ವವಾಗುವುದಿಲ್ಲ ಹೀಗೆ ಭಾವ

"ಅನುಭಯ"ವೆಂಬ ಕೊನೆಯ ಪದಾರ್ಥವನ್ನು "ಪುರುಷಸ್ತು" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

"ಪಂಚ ಚ ತೇ ಪಂಚತಶ್ಚ" ಇಲ್ಲಿ "ಪಂಚಪರಿಮಾಣಮೇಷಾಂ ವರ್ಗಾಣಾಂ ಎಂಬ ಅರ್ಥದಲ್ಲಿ—ವರ್ಗವೆಂಬ ಅರ್ಥದಲ್ಲಿ "ತ" ಪ್ರತ್ಯಯದ ವಿಧಾನವಿರುವುದರಿಂದ, "ಪಂಚತಃ" ಎಂದರೆ "ಪಂಚವರ್ಗಗಳು" ಎಂದು ಅರ್ಥ ಆದುದರಿಂದ, "ವಿಶೇಷಣಂ ವಿಶೇಷ್ಯೇಣ ಬಹುಲಂ" ಎಂಬ ವ್ಯಾಕರಣ ನಿಯಮದಂತೆ ಸಮಾಸವಾಗಿದೆ ಇದರಿಂದ ಐದುವರ್ಗಗಳಲ್ಲಿ ಪ್ರತ್ಯೇಕವಾಗಿ ಪಂಚತ್ವಸಂಖ್ಯೆಯನ್ನು ತೋರಿಸುವುದರಿಂದ, "ಇಪ್ಪತ್ತೈದು' ಎಂಬ ಸಂಖ್ಯೆಯು ಈ ಪಂಚಪಂಚತ್ವ" ಶಬ್ದದಿಂದ ಹೊರಡುತ್ತದೆಂದು ತಿಳಿಯಬೇಕು ವಿಭಾಗ (ವಿಧೇಯ)ದ

चेतनं तदसङ्ख्यात भिन्नमन्यद्भिदोज्झितम् ॥

पञ्चतश्च पञ्चपञ्चतस्तेषां भावः पञ्चपञ्चत्वम् । स चासौ विभागश्च तेनोपलक्षितं तिष्ठतीति पञ्चपञ्चत्वविभागस्थम् । तच्चेतनमचेतनं च । तत्त्वद्वयमेव सङ्क्षेपतश्चतुर्विधम् । विस्तरतः पञ्चविंशतिप्रभेदमाहुरित्यतो न विरोधः ।

ननु चेतनमचेतनं चासङ्ख्यातं प्रत्यक्षादिप्रमाणैरुपलभमानाः कथमेवमाहुरित्यत आह ॥ तदिति । तदित्युभयपरामर्शः । उपाधि-

ಅವೆರಡೂ ಅಸಂಖ್ಯಗಳೆಂದು ಹೇಳುತ್ತಾರೆ. ಚೇತನವನ್ನು ಪರಸ್ಪರವಾಗಿ ಭಿನ್ನವೆಂದೂ ಚೇತನದಿಂದ ಭಿನ್ನವಾದ ಅಚೇತನವನ್ನು ಪರಸ್ಪರ ಅಭಿನ್ನವೆಂದೂ ಹೇಳುತ್ತಾರೆ.

## — ಪದಾರ್ಥದೀಪಿಕಾ —

ಪಂಚತಃ" ಎಂಬಲ್ಲಿ ವಿಗ್ರಹ ತೇಷಾಂ ಭಾವಃ "ಪಂಚಪಂಚತ್ವಂ" ಪಂಚ ಪಂಚತ್ವಶ್ಚಾಸೌ ವಿಭಾಗಶ್ಚ "ಪಂಚಪಂಚತ್ವ ವಿಭಾಗಃ" ಪಂಚಪಂಚತ್ವವಿಭಾಗೇನ ಉಪಲಕ್ಷಿತಂ ತಿಷ್ಠತಿ (ಪಂಚಪಂಚತ್ವರೂಪ ವಿಭಾಗದಿಂದ ಉಪಲಕ್ಷಿತ(ಸಂಗ್ರಹೀತ) ವಾಗಿ ಇರುವದು) ಇತಿ ( ಈ ಕಾರಣದಿಂದ ) ಪಂಚಪಂಚತ್ವ ವಿಭಾಗಸ್ಥಂ " ಹೀಗೆ ವಿಗ್ರಹವಿದೆ "ತತ್"= ಚೇತನವು ಹಾಗು ಅಚೇತನವು ಈ ಎರಡೇ ತತ್ತ್ವಗಳನ್ನೇ, ಸಂಕ್ಷೇಪದಿಂದ ನಾಲ್ಕು ತರಹವುಳ್ಳವುಗಳೆಂದೂ ವಿಸ್ತರದಿಂದ ಇಪ್ಪತ್ತೈದು ತತ್ತ್ವಗಳೆಂದೂ ಹೇಳುತ್ತಾರೆ ಆದುದರಿಂದ ವಿರೋಧವಿಲ್ಲ

ಇನ್ನು– ಚೇತನಗಳನ್ನೂ ಅಚೇತನಗಳನ್ನೂ ಅಸಂಖ್ಯೆಗಳೆಂದು ಪ್ರತ್ಯಕ್ಷಾದಿ ಪ್ರಮಾಣಗಳಿಂದ ತಿಳಿಯುವವರು ಹೀಗೆ ಹೇಗೆ ಹೇಳುತ್ತಾರೆಂಬ ಪ್ರಶ್ನೆಯನ್ನು "ತತ್" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ತತ್" ಎಂಬುದು ಎರಡನ್ನು

## — ವಿಶೇಷಾರ್ಥಪ್ರದೀಪಿಕಾ —

ವಿಶೇಷಣವಾದುದರಿಂದ "ಸಃ" ಎಂಬ ಪುಲ್ಲಿಂಗ ನಿರ್ದೇಶವು ಯುಕ್ತವೆಂದೂ ತಿಳಿಯಬೇಕು "ಉಪಲಕ್ಷಿತಂ" - ಉಪಲಕ್ಷಣವಾಗಿ ವ್ಯಾವರ್ತಿಸಲ್ಪಟ್ಟಿರುವದು ಅಥವಾ ಜ್ಞಾಪಿಸಲ್ಪಟ್ಟಿರುವದು, ಹೀಗೆ ಅರ್ಥ

'ತತ್" ಎಂಬ ಮೂಲಸ್ಥಪದವು, "ಚೇತನಂಅಚೇತನಂ" ಇವೆರಡಕ್ಕೆ ವಿಶೇಷಣವೆಂಬ ಭಾವದಿಂದ, "ತತ್" ಎಂಬುದಾಗಿ ಅನುವಾದಮಾಡಿ, "ಚೇತನಮಚೇತನಂ ಚ" ಎಂಬುದಾಗಿ ವ್ಯಾಖ್ಯಾನಿಸಿರುತ್ತಾರೆ

क्रोडीकारेण पञ्चविंशतिप्रभेदं वदन्नाऽप्यवान्तरभेदेन तत्त्वद्वयमसंख्यातमाहुरित्यर्थः । चेतनानामचेतनानां च प्रत्येकमसङ्ख्यातत्वसाम्येऽपि नोभयोर्भिन्नत्वेन साम्यम् । किं तर्हीत्यत आह ॥ भिन्नमिति । चेतनमिति शेषः । चेतनं परस्परतो भिन्नमाहुः । यथोक्तम् । जननमरणकरणानां प्रतिनियमादयुगपत्प्रवृत्तेश्च । पुरुषबहुत्वं सिद्धं त्रैगुण्यविपर्ययाच्चैवेति । अन्यच्चेतनादचेतनं भिदोज्झितमाहुः ।

— ಪದಾರ್ಥದೀಪಿಕಾ —

ಪರಾಮರ್ಶಿಸುತ್ತದೆ ಉಪಾಧಿ ಪ್ರಭೇದಗಳಿಂದ ಇಪ್ಪತ್ತೈದು ತರಹಗಳನ್ನು ಹೇಳುವವರೂ ಅವಾಂತರ ಭೇದಗಳಿದ್ದುದರಿಂದ ಆ ಎರಡೇ ತತ್ತ್ವಗಳೇ ಅಸಂಖ್ಯಾತಗಳೆಂದು ಹೇಳುತ್ತಾರ ಹೀಗ ಇಲ್ಲಿಯ ಅರ್ಥ ಚೇತನಗಳಿಗೂ ಪ್ರತ್ಯೇಕವಾಗಿ ಸಂಖ್ಯೆಯಿಲ್ಲದಿರುವುದು ಸಮಾನವಾಗಿದ್ದರೂ ಇವರಡು ಪದಾರ್ಥಗಳಿಗೆ ಅವಾಂತರ ಪ್ರಭೇಧಗಳಿರುವುದರಿಂದ ಸಾಮ್ಯವಿಲ್ಲ ಹಾಗಾದರ ಏನು ? ( ಹೇಗೆ ಸಾಮ್ಯ ) ಎಂಬ ಪ್ರಶ್ನೆಯ ಉತ್ತರವನ್ನು " ಭಿನ್ನಂ " ಇತ್ಯಾದಿ ವಚನದಿಂದ ಹೇಳುತ್ತಾರೆ "ಚೇತನಂ" ಎಂಬುದರ ಶೇಷವಿದೆ ಚೇತನಗಳನ್ನು ಒಂದಕ್ಕೊಂದು ಭಿನ್ನವಾದವುಗಳೆಂದು ಹೇಳುತ್ತಾರೆ ಇದರಲ್ಲಿ ಜನನ ಮರಣ ಕರಣಾನಾಂ ಪ್ರತಿನಿಯಮಾದಯುಗಪತ್‌ಪ್ರವೃತ್ತೇಶ್ಚ॥ ಪುರುಷ ಬಹುತ್ವಂ ಸಿದ್ಧಂ ತ್ರೈಗುಣ್ಯವಿಪರ್ಯಯಾತ್ ಚ್ಚೈವ॥ "ಎಂಬ ಸಾಂಖ್ಯಕಾರಿಕೆಯು ಪ್ರಮಾಣವು "ಅನ್ಯತ್"=ಚೇತನದಿಂದ ಬೇರೆಯಾದುದು, ಅಚೇತನವು, ಭಿದೋಜ್ಝಿತಂ" - ಭೇದವಿಲ್ಲದುದನ್ನಾಗಿ, ಹೇಳುತ್ತಾರ

— ವಿಶೇಷಾರ್ಥ ಪ್ರದೀಪಿಕಾ —

"ಭಿನ್ನತ್ವೇನ' – ಅವಾಂತರ ಪ್ರಭೇದಗಳಿಂದ ಭಿನ್ನಭಿನ್ನವಾಗಿರುವುದರಿಂದ, ' ಯಥೋಕ್ತಂ " 'ಜನನಮರಣಕರಣಾನಾಂ"– ದೇಹೇಂದ್ರಿಯ ಸಂಯೋಗರೂಪಜನನ, ದೇಹೇಂದ್ರಿಯ ವಿಯೋಗರೂಪ ಮರಣ, ಚಕ್ಷುರಾದಿ ಇಂದ್ರಿಯಗಳು ಇವುಗಳಿಗೆ, "ಪ್ರತಿನಿಯಮಾತ್"– ಪ್ರತ್ಯೇಕವಾಗಿ ವ್ಯವಸ್ಥೆಯಿರುವುದರಿಂದ, "ಅಯುಗಪತ್ಪ್ರವೃತ್ತೇಶ್ಚ"= ಹಾಗು (ಸರ್ವಪುರುಷರಿಗೆ) ಏಕಕಾಲದಲ್ಲಿ ಪ್ರವೃತ್ತಿಯು ಸಂಭವಿಸದಿರುವುದರಿಂದ 'ತ್ರೈಗುಣ್ಯವಿಪರ್ಯಯಾಚ್ಚೈವ"– ಕೆಲವರು ಸತ್ವಪ್ರಧಾನಕರು, ಕೆಲವರು ರಜಪ್ರಧಾನಕರು ಇತ್ಯಾದಿಯಾಗಿ ಸತ್ವಮುಂತಾದ ಗುಣತ್ರಯದಲ್ಲಿ ವ್ಯತ್ಯಾಸವಿರುವುದರಿಂದ, "ಪುರುಷಬಹುತ್ವಂ"= ಪುರುಷರಲ್ಲಿ

अचेतनस्य कर्तृत्व स्वातन्त्र्येण निगद्यते ॥

नन्वीश्वरानभ्युपगमे कस्यापि प्रवृत्त्यनुपपत्तेः । सर्गाद्यसम्भवादीश्वराख्यं तृतीयं तत्त्वमङ्गीकरणीयम् । तत्कथं नाङ्गीकुर्वन्तीत्यत आह ॥ अचेतनस्येति । निगद्यते साङ्ख्यैरिति शेषः । तथा हि । चेतनः सङ्घातपरार्थत्वादिहेतुसिद्धः । अचेतनं च व्यक्तं प्रत्यक्षादिसिद्धमव्यक्तं

ಅಚೇತನಕ್ಕೆ ( ಪ್ರಕೃತಿಗೆ ) ಸ್ವತಂತ್ರವಾಗಿ ಕರ್ತೃತ್ವವು ಸಾಂಖ್ಯರಿಂದ ಹೇಳಲ್ಪಡುತ್ತದೆ.

— ಪದಾರ್ಥದೀಪಿಕಾ —

ಇನ್ನು–ಈಶ್ವರನನ್ನು ಒಪ್ಪದಿದ್ದಲ್ಲಿ – ಯಾವನಿಗೂ ಪ್ರವೃತ್ತಿಯು ಆಗದಿರಲಿ! ಸೃಷ್ಟಿಮುಂತಾದುದು ಸಂಭವಿಸುವುದಿಲ್ಲವೆಂಬ ಕಾರಣದಿಂದ ಈಶ್ವರನೆಂಬ ಮೂರನೆಯ ತತ್ತ್ವವನ್ನು ಅಂಗೀಕರಿಸತಕ್ಕದ್ದು ಆದುದರಿಂದ ಅಂಗೀಕರಿಸುವುದಿಲ್ಲವೆಂಬುದು ಹೇಗೆ ? ಈ ಆಶಂಕೆಯನ್ನು "ಅಚೇತನಸ್ಯ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ನಿಗದ್ಯತೇ" (ಹೇಳಲ್ಪಡುತ್ತದೆ) ಇದಕ್ಕೆ "ಸಾಂಖ್ಯೈಃ" (ಸಾಂಖ್ಯರಿಂದ) ಎಂಬುದು ಶೇಷವು ಅದು ಹೇಗೆಂದರೆ ಸಂಘಾತವು( ದೇಹ) ಪರಾರ್ಥವಾಗಿರುವುದು, ಈ ಮುಂತಾದ ಯುಕ್ತಿಯಿಂದ ಚೇತನನು ಇರುವನೆಂದು ಸಿದ್ಧಿಸುತ್ತಾನ ವ್ಯಕ್ತವಾದ ಅಚೇತನವು ಪ್ರತ್ಯಕ್ಷ ಮುಂತಾದ

— ವಿಶೇಷಾರ್ಥಪ್ರದೀಪಿಕಾ —

ಬಹುತ್ವವು (ಭೇದವು ಅನೇಕ ಬೇರೆಬೇರೆ ಪುರುಷರೆಂಬುದು) ಸಿದ್ಧಿಸಿಯೇ ಸಿದ್ಧಿಸುತ್ತದೆ " ಹೀಗೆ ಸಾಂಖ್ಯಕಾರಿಕೆಯ ಅರ್ಥ ಒಬ್ಬನೇ ಪುರುಷನಿದ್ದ ಪಕ್ಷದಲ್ಲಿ ಒಬ್ಬನು ಹುಟ್ಟಿದರೆ, ಮೃತನಾದರೆ, ಅಥವಾ ಕುರುಡನಾದರೆ, ಎಲ್ಲರೂ ಹಾಗೆಯೇ ಆಗುವರು ಹಾಗು ಒಬ್ಬನು ಚೇಷ್ಟಾ ( ವ್ಯಾಪಾರ ) ಮಾಡಿದಲ್ಲಿ ಸರ್ವರ ದೇಹಗಳಲ್ಲಿಯೂ ವ್ಯಾಪಾರಗಳಾಗಲೀ, ಒಬ್ಬನೇ ಪುರುಷನಿದ್ದಲ್ಲಿ ಎಲ್ಲರೂ ಸಾತ್ವಿಕರೇ-ರಾಜಸರೇ- ಅಥವಾ ತಾಮಸಸ್ವಭಾವದವರೇ ಆಗಲಿ! ಹೀಗೆ ಪ್ರಸಂಗವು ಬರುತ್ತದೆ ಆದರೆ ಪುರುಷರಲ್ಲಿ ಅನೇಕತೆಯಿದ್ದಲ್ಲಿ ಈ ಪ್ರಸಂಗಗಳು ಬರುವುದಿಲ್ಲ ಆದುದರಿಂದ ಪುರುಷರನೇಕರಿರುವರೆಂದು ಭಾವ

"ರಚನಾನುಪಪತ್ತೇಶ್ಚ" "ನಾನುಮಾನಂ" ಎಂಬ ಸೂತ್ರದಿಂದ ನಿರಾಕರಿಸಲ್ಪಡಬೇಕಾದ ಪೂರ್ವಪಕ್ಷವನ್ನು ಹೇಳುತ್ತಾರೆಂಬುದಾಗಿ ಅರ್ಥವನ್ನು "ಇತ್ಯತ ಆಹ" ಎಂಬಲ್ಲಿ ತಿಳಿಯಬೇಕು

च कारणकार्यविभागादिहेतुसिद्धम् । न चैवमनन्यथासिद्धमीश्वरे प्रमाणमस्ति । अचेतनस्यैव प्रधानस्य कर्तृत्वेन सर्गाद्युपपत्तेरदृष्टेश्वर-कल्पनानुपपत्तेरिति मन्यन्त इति ।

— ಪದಾರ್ಥ ದೀಪಿಕಾ —

ಪ್ರಮಾಣದಿಂದ ಸಿದ್ಧಿಸಿದೆ ಅವ್ಯಕ್ತವಾದ ಅಚೇತನವು, ಕಾರ್ಯ ಕಾರಣ ವಿಭಾಗ ಮುಂತಾದ ಯುಕ್ತಿಯಿಂದ ಸಿದ್ಧವಾಗುತ್ತದೆ ಆದರ ಇದರಂತೆ ಅನ್ಯಥಾ ಸಿದ್ಧಿಯಿಲ್ಲದ ಈಶ್ವರನ ಬಗ್ಗೆ ಪ್ರಮಾಣವಿಲ್ಲ ಏಕೆಂದರೆ- ಅಚೇತನವೇ ಆದ ಪ್ರಧಾನಕ್ಕೇ ಸರ್ಗ ಮುಂತಾದ ಕಾರ್ಯಕರ್ತೃತ್ವವು ಯುಕ್ತವಾಗುತ್ತದೆ ಆದುದರಿಂದ, ಅದೃಷ್ಟವಾದುದರ ಕಲ್ಪನೆಯು ಆಗುವುದಿಲ್ಲವೆಂದು ಬಗೆಯುತ್ತಾರೆ

— ವಿಶೇಷಾರ್ಥಪ್ರದೀಪಿಕಾ —

'ಸಂಘಾತಪರಾರ್ಥತ್ವಾದಿ ಹೇತುಸಿದ್ಧಃ" —ಶಯನ ಆಸನ ಮುಂತಾದುದು ದೇಹದ ಸಲುವಾಗಿ ಬೇಕಾಗುತ್ತದೆ ಇದರಂತೆ, ಮಹದಹಂಕಾರ ಮುಂತಾದವುಗಳ ಸಂಘಾತ(ಸಮೂಹ)ರೂಪವಾದ ದೇಹಮುಂತಾದುದೂ ಎರಡನೆಯದರ (ಪರರ)ಸಲುವಾಗಿಯೇ! ದೇಹಕ್ಕೆ(ಸಂಘಾತಕ್ಕೆ) ಪರಾರ್ಥತೆಯು ಇರುತ್ತದೆ ಈ ಯುಕ್ತಿಯಿಂದ ದೇಹೇಂದ್ರಿಯಾದಿ ಸಂಘಾತದಿಂದ ಬೇರೆಯಾದವನೊಬ್ಬನು ಸಿದ್ಧಿಸುತ್ತಾನೆ ಅವನೇ ಚೇತನನು ಮತ್ತು ಸುಖದುಃಖಮುಂತಾದುದರ ಅಧಿಷ್ಠಾತೃವೊಂದಿರಲೇಬೇಕು ಅವನೇ ಚೇತನನು ಹಾಗು ಸುಖದುಃಖಾದಿಗಳಿಗೆ ಅನುಕೂಲವೇದನೀಯತ್ವ, ದೃಶ್ಯತ್ವ ಮುಂತಾದುದನ್ನು "ಆದಿ"ಪದದಿಂದ ಗ್ರಹಿಸಲಾಗಿದೆ ಸುಖದುಃಖಾದಿಗಳು ಅನುಕೂಲ ಪ್ರತಿಕೂಲಗಳಾಗಿ ತೋರುವ ವಸ್ತುಗಳು ಅವು ಯಾರಿಗ ಅನುಕೂಲ ಇಲ್ಲವೆ ಪ್ರತಿಕೂಲವಾಗಿ ವೇದನೀಯ(ತಿಳಿಯಲ್ಪಡಬೇಕಾದವು)ಗಳೋ ಅವನೇ ಆತ್ಮ (ಚೇತನನು) ಆದರಂತೆ ದೃಶ್ಯತ್ವವು ದ್ರಷ್ಟೃವು ಇಲ್ಲದೆ ಸಂಭವಿಸುವುದಿಲ್ಲ ಆದುದರಿಂದ ದೇಹೇಂದ್ರಿಯಾದಿಗಳಿಂದ ಬೇರೆಯಾದವನೊಬ್ಬನಾತ್ಮನಿರುತ್ತಾನೆಂದು ಸಿದ್ಧಿಸುತ್ತದೆ ಹೀಗೆ ಇಲ್ಲಿಯ ಭಾವ

"ವ್ಯಕ್ತಂ" —ಚಕ್ಷುರಾದಿ ಇಂದ್ರಿಯಗೋಚರವಾಗಲು ಯೋಗ್ಯವಾದುದು

"ಅವ್ಯಕ್ತಂ" —ಇಂದ್ರಿಯಗೋಚರವಾಗಲು ಅನರ್ಹವಾದುದು "ಕಾರ್ಯಕಾರಣವಿಭಾಗಾದಿಸಿದ್ಧಂ" — ಕಾರ್ಯಕಾರಣವಿಭಾಗಮುಂತಾದ ಯುಕ್ತಿಗಳನು ಮುಂದೆ ಸ್ವತಃ ತೋರಿಸುತ್ತಾರೆ

"ಕರ್ತೃತ್ವೇನ"— ಸ್ವತ ಪರಿಣಾಮಮುಂತಾದರೂಪವಾದ ಪ್ರವೃತ್ತಿಯುಳ್ಳದ್ದಾಗಿರುವುದರಿಂದ

परस्परविभेदश्च कार्याणामालयं भवेत् ॥

नन्वचेतनं चेतनानधिष्ठितं क्वापि न प्रवृत्तिमदुपलब्धम् । ततः प्रधानस्याधिष्ठात्रेश्वरेण भाव्यमित्यत उक्तं स्वातन्त्र्येणेति । चेतनाधिष्ठानेन विनेत्यर्थः । यथोक्तम् । वत्सविवृद्धिनिमित्तं क्षीरस्य यथाप्रवृत्तिरज्ञस्य । पुरुषस्य विमोक्षनिमित्तं तथा प्रवृत्तिः प्रधानस्येति । अन्यद्भिदोज्झितमित्युक्तम् । तदसत् । अचेतनानामपि चेतनवत्परस्परतो भेदस्य प्रत्यक्षादिसिद्धत्वादित्यत आह ॥ परस्परेति ॥

ಮತ್ತು ಪ್ರಲಯದ ವರೆಗೆ ಕಾರ್ಯ (ಜನ್ಯ) ಪದಾರ್ಥಗಳಿಗೆ ಪರಸ್ಪರವಾಗಿ ಭೇದವೂ ಆಗುತ್ತದೆ (ಇದೆ) ಯೆಂದೂ ಅವರಿಂದ ಹೇಳಲ್ಪಡುತ್ತದೆ.

## — ಪದಾರ್ಥದೀಪಿಕಾ —

ಇನ್ನು ಅಚೇತನವು ಚೇತನದಿಂದ ಅಧಿಷ್ಠಿತವಾಗದೆ ಎಲ್ಲಿಯೂ ಪ್ರವೃತ್ತಿಯುಳ್ಳದ್ದಾಗಿರುವುದು ಕಂಡಿಲ್ಲ ಆದುದರಿಂದ ಪ್ರಧಾನಕ್ಕೆ ಒಂದು ಅಧಿಷ್ಠಾತೃವೆನಿಸಿದ ಈಶ್ವರನಿರಬೇಕು ಈ ಆಶಂಕೆಯನ್ನು ಪರಿಹರಿಸಲು 'ಸ್ವಾತಂತ್ರ್ಯೇಣ" ಎಂಬುದಾಗಿ ಹೇಳಿದ್ದಾರೆ "ಸ್ವಾತಂತ್ರ್ಯೇಣ"-ಚೇತನಾಧಿಷ್ಠಾನ ವಿಲ್ಲದೆ, ಎಂದು ಅರ್ಥ ಇದನ್ನೇ "ವತ್ಸವಿವೃದ್ಧಿನಿಮಿತ್ತಂ ಕ್ಷೀರಸ್ಯ ಯಥಾ ಪ್ರವತ್ತಿರಜ್ಞಸ್ಯ॥ ಪುರುಷಸ್ಯ ವಿಮೋಕ್ಷನಿಮಿತ್ತಂ ತಥಾ ಪ್ರವೃತ್ತಿಃ ಪ್ರಧಾನಸ್ಯ ॥" ಎಂಬ ಸಾಂಖ್ಯ ಕಾರಿಕೆಯಲ್ಲಿ ಹೇಳಲಾಗಿದೆ "ಅನ್ಯದ್ ಭಿದೋಜ್ಝಿತಂ"ಎಂಬುದಾಗಿ ಹೇಳಲಾಯಿತು ಆದರೆ ಇದು ಸರಿಯಲ್ಲ ಏಕೆಂದರ ಅಚೇತನಗಳಿಗೂ ಚೇತನಗಳ ಹಾಗೆ ಪರಸ್ಪರ ಭೇದವು ಪ್ರತ್ಯಕ್ಷದಿಸಿದ್ಧವಾಗಿದೆ ಈ ಆಶಂಕೆಯನ್ನು "ಪರಸ್ಪರ' ಇತ್ಯಾದಿ ವಚನ

## — ವಿಶೇಷಾರ್ಥಪ್ರದೀಪಿಕಾ —

"ವತ್ಸವಿವೃದ್ಧಿನಿಮಿತ್ತಂ" – 'ಅಜ್ಞಸ್ಯ"= ಅಚೇತನವಾದ "ಕ್ಷೀರಸ್ಯ"= ಹಾಲಿಗೆ, "ವತ್ಸವಿವೃಧ್ಯರ್ಥಂ"=ವತ್ಸ(ಶಿಶು – ಕರು)ಗಳ ಬೆಳವಣಿಗೆಗಾಗಿ "ಪ್ರವೃತ್ತಿಃ"=ಪ್ರವೃತ್ತಿಯು"ಯಥಾ'=ಹೇಗೆ ಆಗುತ್ತದೆಯೋ "ತಥಾ"=ಹಾಗೆ,"ಪುರುಷಸ್ಯ ವೋಕ್ಷನಿಮಿತ್ತಂ' – ಪುರುಷನ ವಿಮೋಚನೆಯೆಂಬ ಪ್ರಯೋಜನಕ್ಕಾಗಿ, "ಪ್ರಧಾನಸ್ಯ"=ಅಚೇತನವಾದ ಪ್ರಧಾನಕ್ಕೆ "ಪ್ರವೃತ್ತಿಃ"=ಪ್ರವೃತ್ತಿಯು ಆಗುತ್ತದೆ ಹೀಗೆ ಈ ಕಾರಿಕೆಯ ಅರ್ಥ

ಸಮ್ಮತಿಯಾಗಿ ಹೇಳಲ್ಪಡುವ ಶ್ಲೋಕದಲ್ಲಿ "ಸತ್ಕಾರ್ಯಂ" ಎಂಬ ಸಾಧ್ಯ

आलयं प्रलयपर्यन्तं कार्याणां परस्परविभेदश्च भवेदिति निगद्यते तैः। एतदुक्तं भवति। कार्यं तावत्कारणव्यापारात्प्रागपि सत्। असदकरणात्। असच्चेत्कारणव्यापारात्पूर्वं कार्यं नास्य सत्त्वं शक्यम् कर्तुं। न हि नीलं शिल्पिसहस्रेणापि पीतं शक्यं कर्तुम्। किञ्च कार्येण सम्बद्धं कारणं कार्यस्य जनकमसम्बद्धं वा। आद्ये त्वसता सम्बन्धा-

— ಪದಾರ್ಥದೀಪಿಕಾ —

ದಿಂದ ಪರಿಹರಿಸುತ್ತಾರೆ "ಆಲಯಂ"= ಪ್ರಲಯ ಪರ್ಯಂತರ, ಕಾರ್ಯಗಳಿಗೆ ಭೇದವು ಆಗು (ಇರು) ತ್ತದೆಯೆಂದು ಸಾಂಖ್ಯರಿಂದ ಹೇಳಲ್ಪಡುತ್ತದೆ, ಇಲ್ಲಿ ಹೇಳಿದುದು ಇದು — "ಕಾರ್ಯವು ಕಾರಣವ್ಯಾಪಾರಕ್ಕಿಂತ ಮುಂಚೆಯೂ ಇರುವಂತಹದೇ! ಏಕೆಂದರೆ– "ಅಸದಕರಣಾತ್"– ಕಾರ್ಯವು ಕಾರಣ ವ್ಯಾಪಾರಕ್ಕಿಂತ ಮುಂಚೆ ಅಸತ್ಯ (ಇಲ್ಲದಿರುವಂತಹದು। ಆದರೆ, ಅದಕ್ಕೆ ಕಾರಣ ವ್ಯಾಪಾರದಿಂದ ಸತ್ಯತೆಯನ್ನು ಬರುವಂತೆ ಮಾಡಲು ಶಕ್ಯವಿಲ್ಲ ಏಕೆಂದರೆ ನೀಲ ಪದಾರ್ಥವನ್ನು ಪೀತವನ್ನಾಗಿ ಮಾಡುವುದು ಸಾವಿರ ಶಿಲ್ಪಿಗಳಿಗೂ ಸಾಧ್ಯವಿಲ್ಲ ಮತ್ತು ಕಾರಣವು ಕಾರ್ಯದಿಂದ ಸಂಬಂಧ ಹೊಂದಿ ಅದನ್ನು ಹುಟ್ಟಿಸುವಂತಹದೋ ? ಸಂಬಂಧ ಹೊಂದದೆಯೆ ಅದನ್ನು ಹುಟ್ಟಿಸುವಂತದೋ? ಮೊದಲನೆಯ ಕಲ್ಪದಲ್ಲಿ ಅಸತ್ಯ (ಇಲ್ಲದಿರುವದು) ದೊಡನೆ ಸಂಬಂಧವು ಯುಕ್ತ

— ವಿಶೇಷಾರ್ಥಪ್ರದೀಪಿಕಾ —

ಭಾಗವನ್ನು 'ಕಾರ್ಯಂ"ಇತ್ಯಾದಿವಚನದಿಂದ ವಿಶದಿಸುತ್ತಾರೆ ಸತ್ಕಾರ್ಯವಾದದ ಬಗ್ಗೆ("ಸತ್ಯವಾದುದು ಕಾರ್ಯ–ಹುಟ್ಟುವಂತಹದು ಎಂಬ ವಿಷಯದಲ್ಲಿ) ಹೇಳಿದ ಐದು ಹೇತು(ಯುಕ್ತಿ)ಗಳನ್ನು ಕ್ರಮದಿಂದ ವಿವರಿಸುತ್ತ, ಮೊದಲನೆಯ ಯುಕ್ತಿಯನ್ನು ಮೊದಲು "ಅಸದಕರಣಾತ್" ಎಂಬವಚನದಿಂದ ವಿಶದಪಡಿಸುತ್ತಾರೆ ಎರಡನೆಯ ಮೂರನೆಯ ಹೇತುಗಳು ಕ್ರಮದಿಂದ ಮುಂದೆ ತೋರಿಸುವ ಎರಡು ಕಲ್ಪಗಳನ್ನು ನಿರಾಕರಿಸುತ್ತವೆಯೆಂಬ ಅಭಿಪ್ರಾಯದಿಂದ ಅವುಗಳನ್ನು 'ಕಿಂಚ"ಇತ್ಯಾದಿ ವಾಕ್ಯದಿಂದ ವಿಶದಪಡಿಸುತ್ತಾರೆ (೧)ಅಸದಕರಣಾತ್, (೨) ಉಪಾದಾನಗ್ರಹಣಾತ್ (೩)ಸರ್ವಸಂಭವಾಭಾವಾತ್,(೪)ಶಕ್ತಸ್ಯ ಶಕ್ಯಕರಣಾತ್, (೫)ಕಾರಣ–ಭಾವಾಚ್ಚ॥ ಹೀಗೆ ಐದು ಯುಕ್ತಿಗಳು ಇದರಲ್ಲಿ "ಉಪಾದಾನಗ್ರಹಣಾತ್"= "ಉಪಾದಾನಸ್ಯ"=ಕಾರಣದ "ಗ್ರಹಣಾತ್"=ಇದು ನನ್ನಕಾರ್ಯವು, ಎಂಬುದಾಗಿ ಗ್ರಹಣವಿರುವುದರಿಂದ, ಅಂದರೆ ಕಾರ್ಯದೊಡನೆ ಸಂಬಂಧವಿರುವುದರಿಂದ, ಹೀಗೆ ಅರ್ಥವನ್ನು ಅಂಗೀಕರಿಸಿ "ಆದ್ಯೇ" ಇತ್ಯಾದಿಯಾಗಿ ಹೇಳಿರುತ್ತಾರೆ. "ಸರ್ವ

नुपपत्तेः सत्त्वमङ्गीकार्यम् । न द्वितीयः । असम्बद्धत्वाविशेषेण सर्वस्मात्सर्वसम्भवापत्तेः । असम्बद्धत्वेऽपि कारणं तदेव करोति यत्र शक्तमतो नातिप्रसङ्ग इति चेन् । सा शक्तिः शक्यविषया वा स्यात्सर्वत्र वा । सर्वत्र चेत्सैवाव्यवस्था । आद्ये त्वसति शक्ये कथं तद्विषया स्यादिति सदेव कार्यम् । न च कारणादन्यत्कार्यं सदुपलभ्यत इति

— ಪದಾರ್ಥದೀಪಿಕಾ —

ವಾಗಲಾರದು ಆದುದರಿಂದ ಕಾರ್ಯಕ್ಕೆ ಸತ್ಯತೆಯನ್ನು ಅಂಗೀಕರಿಸಬೇಕು ಎರಡನೆಯ ಪಕ್ಷವು ಯುಕ್ತವಲ್ಲ ಏಕೆಂದರೆ ಸಂಬಂಧವನ್ನು ಹೊಂದಲಿಲ್ಲ ವೆಂಬುದು ಸಮಾನವಾದುದರಿಂದ, ಎಲ್ಲದರಿಂದ ಎಲ್ಲವೂ ಸಂಭವಿಸುವ ಪ್ರಸಂಗವು ಬರುತ್ತದೆ "ಸಂಬಂಧವನ್ನು ಹೊಂದದಿದ್ದರೂ ಕಾರಣವು ಎಲ್ಲಿ ಶಕ್ತವೋ ಅದನ್ನೇ ಮಾಡುತ್ತದೆ ಆದುದರಿಂದ ಅತಿಪ್ರಸಂಗವಿಲ್ಲ", ಹೀಗೆ ಹೇಳಿದರೆ "ಆ ಶಕ್ತಿಯು ಶಕ್ಯವಾದುದನ್ನಷ್ಟೇ ವಿಷಯೀಕರಿಸುವುದೋ ? ಸರ್ವವನ್ನು ವಿಷಯೀಕರಿಸುವದೋ ! ಹೀಗೆ ಪ್ರಶ್ನೆ ಸರ್ವವನ್ನೂ ವಿಷಯೀಕರಿಸು ದುದಾದರೆ ಹಿಂದೆ ಹೇಳಿದ ಅವ್ಯವಸ್ಥೆಯೇ ಪ್ರಾಪ್ತವಾಗುತ್ತದೆ ಮೊದಲ ನೆಯ ಕಲ್ಪದಲ್ಲಿ ಶಕ್ಯವಾದುದು ಅಸತ್ಯ (ಇಲ್ಲವಾದುದು) ವಾದರೆ ಅದನ್ನು ಶಕ್ತಿಯು ಹೇಗೆ ವಿಷಯೀಕರಿಸೀತು ? ಆದುದರಿಂದ ಕಾರ್ಯವು ಸತ್ಯವೇ ! (ಪೂರ್ವದಲ್ಲಿಯೂ ಇರುವಂತಹದೇ!) ಕಾರಣಕ್ಕಿಂತ ಬೇರೆಯಾಗಿರುವ ಕಾರ್ಯವು

— ವಿಶೇಷಾರ್ಥಪ್ರದೀಪಿಕಾ —

ಸಂಭವಾಪತ್ತೇಃ"= ಇದರಿಂದ "ಸರ್ವಸಂಭವಾಭಾವಾಚ್ಚ" ಎಂಬುದರ ತಾತ್ಪ ಯವನ್ನು "ಸರ್ವಸ್ಮಾತ್ ಸರ್ವಸ್ಯಸಂಭವಃ ತಸ್ಯ ಅಭಾವಾತ್" (ಎಲ್ಲ ಪದಾರ್ಥಗಳು ಎಲ್ಲ ಪದಾರ್ಥಗಳಿಂದಲೂ ಹುಟ್ಟುವುದಿಲ್ಲವಾದುದರಿಂದ) ಎಂಬುದಾಗಿ ಹೇಳಿದ್ದಾಯಿತು "ಶಕ್ತಸ್ಯ ಶಕ್ಯಕರಣಾತ್" —ಎಂಬುದಾಗಿ ಹೇಳಿದುದರ ಘಟ ನೆಗಾಗಿ "ಅಸಂಬದ್ಧತ್ವೇಽಪಿ" ಇತ್ಯಾದಿಯಾಗಿ ಹೇಳಿದ್ದಾರೆ "ಶಕ್ತಿಯುಳ್ಳ ಆ ಕಾರಣವು, ತನ್ನ ಶಕ್ಯವಾದುದರ ಉತ್ಪಾದಕವಾಗುವುದರಿಂದ" ಎಂಬುದಾಗಿ ಈ ಹೇತುವಿನ ತಾತ್ಪರ್ಯವು

'ಕಾರಣಭಾವಾತ್ "= ಕಾರಣಸ್ವರೂಪವಾದುದರಿಂದ, (ಕಾರಣಾತ್ಮಕತ್ವವಿ ದ್ದುದರಿಂದ) ಹೀಗೆ ಅರ್ಥ ಈ ಯುಕ್ತಿಯ ಅನ್ಯಥಾಸಿದ್ಧಿಯನ್ನು ಪರಿಹರಿ ಸಲು ಪ್ರತ್ಯಕ್ಷವನ್ನು "ನ ಚ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ ಕಾರ್ಯಕ್ಕೆ

कार्यकारणयोरभेदोऽङ्गीकरणीयः । किञ्च न पटस्तन्तुभ्यो भिद्यते तन्तुधर्मत्वात् । यद्यतो भिद्यते तत्तस्य धर्मो न भवति । यथा गौरश्वस्य । उपादानोपादेयभावाच्च । ययोरर्थान्तरत्वं न तयोरुपादानोपादेयभावो यथा घटपटयोः । संयोगाप्राप्त्यभावाच्च । अर्थान्तरत्वे हि संयोगो दृष्टो यथा कुण्डबदरयोः । अप्राप्तिर्वा । यथा हिमवद्विन्ध्ययोः । न चेह संयोगाप्राप्ती । तस्मान्नार्थान्तरत्वम् । गुरुत्वान्तरकार्यस्यावनति-

— ಪದಾರ್ಥದೀಪಿಕಾ —

ಇರುವುದಾಗಿ ಕಂಡಿಲ್ಲ ಆದುದರಿಂದ ಕಾರ್ಯ ಕಾರಣಗಳಲ್ಲಿ ಅಭೇದವನ್ನು ಅಂಗೀಕರಿಸತಕ್ಕದ್ದು ಅಲ್ಲದೆ— ಪಟವು ತಂತುಗಳಿಂದ ಭಿನ್ನವಾಗುವುದಿಲ್ಲ ಏಕೆಂದರೆ ತಂತು ಧರ್ಮವಾಗಿದ ಯಾವದು ಯಾವುದರಿಂದ ಭಿನ್ನವಾಗುವದೋ ಅದು ಅದರ ಧರ್ಮವಲ್ಲ ಉದಾ- ಗೋವು ಅಶ್ವದ ಧರ್ಮವಾಗದಿರುವುದು ಮತ್ತು ಉಪಾದಾನ ಉಪಾದೇಯ ಭಾವವೂ ಇರುತ್ತದೆ ಯಾವ ಎರಡು ವಸ್ತುಗಳಿಗೆ ಪರಸ್ಪರ ಭೇದವಿದೆಯೋ ಅವುಗಳಲ್ಲಿ ಉಪಾದಾನ ಉಪಾದೇಯ ಭಾವವು ಇರುವುದಿಲ್ಲ ಇದರಲ್ಲಿ–ಘಟಪಟಗಳಲ್ಲಿ ಉಪಾದಾನೋಪಾದೇಯ ಭಾವ ವಿಲ್ಲದಿರುವುದು ಉದಾಹರಣವು ಸಂಯೋಗವೂ ಅಪ್ರಾಪ್ತಿಯೂ ಇಲ್ಲವಾದುದರಿಂದಲೂ ಪಟತಂತುಗಳಲ್ಲಿ ಭೇದವಿಲ್ಲ ಏಕೆಂದರೆ ಭೇದವಿದ್ದರೆಯೇ ಸಂಯೋಗವು ಕಂಡಿದೆ ಉದಾ– ಕುಂಡಬದರಗಳ ಸಂಯೋಗವು ಭೇದವಿದ್ದರೆಯೇ ಹಿಮಾಲಯ ಹಾಗು ವಿಂಧ್ಯ, ಇವುಗಳಲ್ಲಿರುವಂತೆ ಪರಸ್ಪರ ಅಪ್ರಾಪ್ತಿಯು ಇರುತ್ತದ ಆದರೆ ಇಲ್ಲಿ ( ಪಟ–ತಂತು-ಕಾರ್ಯಕಾರಣಗಳಲ್ಲಿ ) ಸಂಯೋಗ ಅಪ್ರಾಪ್ತಿಗಳೆರಡೂ ಇರುವುದಿಲ್ಲ ಆದುದರಿಂದ, ಕಾರ್ಯಕಾರಣಗಳಲ್ಲಿ ಭೇದವಿರುವುದಿಲ್ಲ ಬೇರೆ ಗುರುತ್ವ(ಭಾರ)ದ ಕಾರ್ಯವಾದ ಅವನಮನವಿಶೇಷವು ಕಂಡಿಲ್ಲವಾದುದರಿಂದ,

— ವಿಶೇಷಾರ್ಥಪ್ರದೀಪಿಕಾ —

ಕಾರಣಾತ್ಮಕತ್ವವನ್ನು ಅನುಮಾನದಿಂದಲೂ "ಕಿಂಚ" ಇತ್ಯಾದಿವಾಕ್ಯದಿಂದ ಸಮರ್ಥನಮಾಡುತ್ತಾರೆ

ಕಾರ್ಯಕಾರಣಗಳಲ್ಲಿಯ ಅಭೇದದ ಬಗ್ಗೆ ಇನ್ನೂ ಒಂದು ಯುಕ್ತಿಯನ್ನು "ಗುರುತ್ವಾಂತರಕಾರ್ಯಸ್ಯ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ತಂತು ಪಟಗಳಲ್ಲಿ ಭೇದವಿದ್ದರೆ, ತಂತುಗಳಲ್ಲಿ ಇರುವ ಗುರುತ್ವಕ್ಕಿಂತ ಬೇರೆಯಾದ ಗುರುತ್ವವು ಪಟದಲ್ಲಿ ಇರಬೇಕಾಗುತ್ತದೆ ಇರಲಿ! (ಇಷ್ಟಾಪತ್ತಿ) ಎಂದು

भेदस्याग्रहणाच्च । एवञ्च कार्याणां परस्परं भेदेऽपि स्वस्वकारणैर-भेदात्क्रमेण महाप्रलये मूलकारणभावं गतानामभेद एवेत्यनेनाभिप्राये-णान्यद्भिद्वोज्झितमित्युक्तमिति । तच्चोक्तम् । असदकरणादुपादान-ग्रहणात्सर्वसम्भवाभावात् शक्तस्य शक्यकरणात्कारणभावाच्च सत्कार्य-मिति ।

तेष्वपि मतभेदमाह ॥ भोक्तृतामिति ॥ सर्वेऽपि साङ्ख्याः

— ಪದಾರ್ಥದೀಪಿಕಾ —

ಕಾರ್ಯಕಾರಣಗಳಿಗೆ ಭೇದವಿಲ್ಲ ಅಂತೂ ಕಾರ್ಯಗಳಿಗೆ ಪರಸ್ಪರ ಭೇದವಿದ್ದರೂ ತಮ್ಮ ತಮ್ಮ ಕಾರಣಗಳಿಂದ ಅಭೇದವಿರುವುದರಿಂದ, ಕ್ರಮದಿಂದ ಮಹಾಪ್ರಳಯದಲ್ಲಿ ಮೂಲಕಾರಣಸ್ವರೂಪವನ್ನು ಹೊಂದುವ ಕಾರ್ಯಗಳಿಗ ಅಭೇದವೇ! ಈ ಅಭಿಪ್ರಾಯದಿಂದ '' ಅನ್ಯದ್ ಭಿದೋಜ್ಝಿತಂ '' ಎಂಬುದಾಗಿ ಹೇಳಿದುದು (ಯುಕ್ತವೇ !) ಇದನ್ನೇ '' ಅಸದಕರಣಾದುಪಾದಾನಗ್ರಹಣಾತ್ ಸರ್ವಸಂಭವಾಭಾವಾತ್ ॥ ಶಕ್ತಸ್ಯಶಕ್ಯಕರಣಾತ್ ಕಾರಣಭಾವಾಚ್ಚ ಸತ್ ಕಾರ್ಯಮ್ '' ಎಂಬುದಾಗಿ ಸಾಂಖ್ಯಕಾರಿಕೆಯಲ್ಲಿ ಹೇಳಲಾಗಿದ

ಸಾಂಖ್ಯರಲ್ಲಿಯೂ ಇರುವ ಮತ ಭೇದವನ್ನು "ಭೋಕ್ತೃತಾಂ" ಇತ್ಯಾದಿ ವಚನದಿಂದ ಹೇಳುತ್ತಾರೆ ಸಾಂಖ್ಯರಲ್ಲರೂ ಪುರುಷನ ಕರ್ತೃತ್ವವನ್ನು ಒಪ್ಪುವು

— ವಿಶೇಷಾರ್ಥಪ್ರದೀಪಿಕಾ —

ಹೇಳಬರುವುದಿಲ್ಲ ಏಕೆಂದರೆ ಪೂರ್ವದಲ್ಲಿ (ಪಟದ ಉತ್ಪತ್ತಿಯ ಮುಂಚೆ) ಪಟದ ಉಪಾದಾನಕಾರಣವಾದ ತಂತುಗಳನ್ನು ಪರಡೆಯಲ್ಲಿಟ್ಟು ತೂಗಿದಾಗ ಇರುವ ತೂಕವೇ, ಅನಂತರ ಅವುಗಳಿಂದ ಹುಟ್ಟಿದ ಪಟವನ್ನು ತೂಗಿದಾಗ್ಗಯೂ ಇರುತ್ತದೆ ಆದರೆ ಬೇರೆ ಭಾರ (ಗುರುತ್ವ) ವಿದ್ದರೆ ಹೀಗ ಒಂದೇತೂಕವುಬರಲಾರದು, ಮತ್ತು ಬೇರ ಗುರುತ್ವಕ್ಕೆತಕ್ಕಂತೆ ಪಟದಲ್ಲಿಹೆಚ್ಚುತೂಕವಿರಬೇಕಾಗುತ್ತದೆ ಏಕೆಂದರೆ ಎರಡುಗುರುತ್ವವಿರುವವು ಆದರೆ ಹಾಗೆ ಕಂಡುಬಂದಿಲ್ಲವಾದುದರಿಂದ, ಬೇರೆ ಗುರುತ್ವದ ಕಾರ್ಯವೆನಿಸಿದ ಪರಡೆಯ ಅವನಮನವಿಶೇಷವು (ತೂಕದಲ್ಲಿ ಹೆಚ್ಚಳವು) ಕಂಡುಬರುದಿಲ್ಲವಾದುದರಿಂದ, ಒಂದೇ ಗುರುತ್ವವಿರುವುದರಿಂದ, ಕಾರ್ಯ ಕಾರಣಗಳಲ್ಲಿ ಅಭೇದವೇ! ಹೀಗೆ ಇಲ್ಲಿಯಭಾವ ''ಏವಂಚ''– ಕಾರ್ಯಕ್ಕೆ ಕಾರಣದಅಭೇದವು ಪ್ರಾಮಾಣಿಕವಾಗಿರಲು, ಅಥವಾ ಕಾರ್ಯಕ್ಕೆ ಕಾರಣವ್ಯಾಪಾರಕ್ಕಿಂತಮುಂಚೆಯೂ ಅಸ್ತಿತ್ವವಿರುವುದೆಂದು ಸಿದ್ಧವಾಗಲು, ಹೀಗೆಅರ್ಥ

भोक्तृतां चेतनस्याहुः केचित्तामपि नापरे ॥

पुरुषस्य कर्तृत्वं नानुमन्यन्ते। क्रियावेशो हि कर्तृत्वम्। न चात्मनः परिस्पन्दलक्षणा क्रियोपपद्यते। सर्वगतत्वात्। नापि प्रयत्नलक्षणा। तस्या अन्तःकरणवृत्तित्वात्। न च विक्रियालक्षणा। निर्विकारत्वात्। यथोक्तम्। तस्माच्च विपर्यासात्सिद्धं साक्षित्वमस्य पुरुषस्य। कैवल्यं माध्यस्थ्यं द्रष्टृत्वमकर्तृभावश्चेति। तत्र केचिच्चेतनस्य भोक्तृतामाहुर्यथा भोक्तृभावा-

ಕೆಲವರು ಸಾಂಖ್ಯರು ಚೇತನನಿಗೆ ಭೋಕ್ತೃತ್ವವನ್ನು ಹೇಳುತ್ತಾರೆ ಇನ್ನಿತರರು ಅದನ್ನೂ ಹೇಳುವುದಿಲ್ಲ

— ಪದಾರ್ಥದೀಪಿಕಾ —

ದಿಲ್ಲ ಏಕೆಂದರೆ ಕ್ರಿಯೆಯ ಆವೇಶವು ಕರ್ತೃತ್ವವೆನಿಸುತ್ತದೆ ಆತ್ಮನಿಗಾದರೂ ಪರಿಸ್ಪಂದ ರೂಪವಾದ ಕ್ರಿಯೆಯು ಸಂಭವಿಸುವುದಿಲ್ಲ ಏಕಂದರ ಆತ್ಮನು ಸರ್ವಗತನಾಗಿದ್ದಾನೆ ಪ್ರಯತ್ನರೂಪವಾದ ಕ್ರಿಯೆಯೂ ಇರುವುದಿಲ್ಲ ಏಕೆಂದರೆ ಅದು ಅಂತಃಕರಣದಲ್ಲಿ ಇರುವಂತಹದು ಮತ್ತು ವಿಕಾರರೂಪ ಕ್ರಿಯೆಯೂ 'ಇಲ್ಲ ಏಕೆಂದರೆ ಆತ್ಮನು ನಿರ್ವಿಕಾರನು ಇದನ್ನೇ "ತಸ್ಮಾಚ್ಚ ವಿಪರ್ಯಾಸಾತ್ ಸಿದ್ಧಂ ಸಾಕ್ಷಿತ್ವಮಸ್ಯ ಪುರುಷಸ್ಯ॥ ಕೈವಲ್ಯಂ ಮಾಧ್ಯಸ್ಥ್ಯಂ ದ್ರಷ್ಟೃತ್ವಮಕರ್ತೃಭಾವಶ್ಚ" ಎಂಬುದಾಗಿ ಸಾಂಖ್ಯಕಾರಿಕೆಯಲ್ಲಿ ಹೇಳಿದ್ದಾರ ಇವರಲ್ಲಿ

— ವಿಶೇಷಾರ್ಥಪ್ರದೀಪಿಕಾ —

"ಕ್ರಿಯೆ"ಯೆಂಬುದಕ್ಕೆ, "ಪರಿಸ್ಪಂದ, ಪ್ರಯತ್ನ, ಪರಿಣಾಮ" ಈ ಮೂರು ಅರ್ಥಗಳು ಇವುಗಳನ್ನು ಕ್ರಮವಾಗಿ " ನಚಾತ್ಮನಃ " ಇತ್ಯಾದಿವಚನಗಳಿಂದ ನಿರಾಕರಿಸುತ್ತಾರೆ

'ತಸ್ಮಾತ್" –"ತಸ್ಮಾತ್"=ಗುಣತ್ರಯದಿಂದ (ಗುಣಮಯತ್ವದಿಂದ) "ವಿಪರ್ಯಾಸಾತ್"= ವ್ಯತ್ಯಾಸವಿರುವುದರಿಂದ, (ತ್ರಿಗುಣಾತ್ಮಕತ್ವವಿಲ್ಲದಿರುವುದು, ವಿವೇಕಿಯಾಗಿರುವುದು, ವಿಷಯನಾಗದಿರುವುದು, ಅಸಾಧಾರಣನಾಗಿರುವುದು ಚೇತನತ್ವ ಪ್ರಸವಧರ್ಮವಿಲ್ಲದವನಾಗಿರುವುದು, ಈರೀತಿಯಿಂದ ವ್ಯತ್ಯಾಸ–ವಿರುದ್ಧಧರ್ಮವಿರುವುದರಿಂದ) "ಅಸ್ಯ ಪುರುಷಸ್ಯ"=ಈಪುರುಷನಿಗೆ, "ಸಾಕ್ಷಿತ್ವಂ", -ಸಾಕ್ಷಿತ್ವವು, ದ್ರಷ್ಟೃತ್ವವು, ಕೈವಲ್ಯಂ"=ಆತ್ಯಂತಿಕವಾದ ದುಃಖತ್ರಯದಅಭಾವವು 'ಮಾಧ್ಯಸ್ಥ್ಯಂ"=ಔದಾಸೀನ್ಯವು, "ಅಕರ್ತೃಭಾವಶ್ಚ"=ಕರ್ತೃತ್ವವಿಲ್ಲದಿರುವುದೂ'

दिति । अपरे तामपि नाहुः । यथा तस्मान्न बध्यते न मुच्यते नापि संसरति कश्चित् । बध्यते संसरति मुच्यते च नानाश्रया प्रकृतिरिति । ननु कर्तृत्वाभावे भोक्तृत्वमपि कथम् । तस्यापि क्रियावेशात्मकत्वा-

— ಪದಾರ್ಥದೀಪಿಕಾ —

ಕೆಲವರು ಚೇತನನಿಗೆ ಭೋಕ್ತೃತ್ವವನ್ನು ಹೇಳುತ್ತಾರೆ ಇದನ್ನೇ "ಭೋಕ್ತೃಭಾವಾತ್" ಎಂಬುದಾಗಿ ಕಾರಿಕೆಯಲ್ಲಿ ಹೇಳಿದ್ದಾರೆ ಇನ್ನು ಕೆಲವರು ಅದನ್ನೂ ಹೇಳುವುದಿಲ್ಲ ಇದರಲ್ಲಿ "ತಸ್ಮಾನ್ನ ಬಧ್ಯತೇ ನ ಮುಚ್ಯತೇ ನಾಪಿ ಸಂಸರತಿ ಕಶ್ಚಿತ್ ॥ ಬಧ್ಯತೇ ಸಂಸರತಿ ಮುಚ್ಯತೇ ಚ ನಾನಾಶ್ರಯಾ ಚ ಪ್ರಕೃತಿಃ" ಈ ಪ್ರಮಾಣವನ್ನು ಹೇಳುತ್ತಾರೆ ಇನ್ನು ಕರ್ತೃತ್ವವಿಲ್ಲದಿದ್ದಲ್ಲಿ ಭೋಕ್ತೃತ್ವವಾದರೂ ಹೇಗೆ? ಏಕೆಂದರೆ ಆ ಭೋಕ್ತೃತ್ವವೂ ಕ್ರಿಯಾವೇಶರೂಪವಾಗಿದೆ ಈ

— ವಿಶೇಷಾರ್ಥಪ್ರದೀಪಿಕ —

ಸಿದ್ಧಿಸುತ್ತದೆ ಹೀಗೆ ಅರ್ಥ ಚೇತನತ್ವದಿಂದ ಸಾಕ್ಷಿತ್ವದ್ರಷ್ಟೃತ್ವಗಳು, ತ್ರಿಗುಣಹೀನತೆಯಿಂದ ಕೈವಲ್ಯವು(ಔದಾಸೀನ್ಯ ಮಧ್ಯಸ್ಥಭಾವ ಸಿದ್ಧಿಸುತ್ತದೆ ಇವರಿಂದಲೇ ವಿವೇಕತ್ವದಿಂದ) ಕರ್ತೃತ್ವದ ಅಭಾವವು ಸಿದ್ಧಿಸುತ್ತದೆ ಹೀಗೆ ತಿಳಿಯಬೇಕು

"ತಸ್ಮಾತ್" ="ತನ್ಮಾತ್" =ತ್ರೈಗುಣ್ಯಾದಿಗಳಿಲ್ಲದಿರುವುದರಿಂದ, ಪುರುಷನು, "ನಬಧ್ಯತೇ" =ಬಂಧಿಸಲ್ಪಡುವುದಿಲ್ಲ "ನ ಮುಚ್ಯತೇ" =ಬಿಡಿಸಲ್ಪಡುವುದಿಲ್ಲ(ಮುಕ್ತನಾಗುವುದಿಲ್ಲ) "ಕಶ್ಚಿತ್"=ಯಾವನೂ "ನಾಪಿ ಸಂಸರತಿ"=ಸುಖದುಃಖಭಾಗಿ(ಸಂಸಾರಿ)ಯೂ ಆಗುವುದಿಲ್ಲ ಆದರೆ "ನಾನಾಶ್ರಯಾ"=ಅನೇಕ ಪುರುಷರ ಸಂಬಂಧಹೊಂದಿದ "ಪ್ರಕೃತಿ "=ಪ್ರಕೃತಿಯು, "ಬಧ್ಯತೇ"=ಬಂಧಿಸಲ್ಪಡುತ್ತದೆ, "ಸಂಸರತಿ"=ಸಂಸಾರಹೊಂದುತ್ತದೆ "ಮುಚ್ಯತೇ-ಚ"=ಮುಕ್ತಿಯನ್ನೂ ಹೊಂದುತ್ತದೆ ಹೀಗೆ ಅರ್ಥ ಪ್ರಕೃತಿಯಲ್ಲಿಯೇ ಬಂಧಮೋಕ್ಷಸಂಸಾರಗಳಿರುತ್ತವೆ ಅವು ಪುರುಷರಲ್ಲಿ ಉಪಚಾರದಿಂದ ಇರುವವೆಂದು ಹೇಳಲ್ಪಡುತ್ತವೆ ಭೃತ್ಯರಲ್ಲಿರುವ ಜಯಾಪಜಯಗಳು ಒಡೆಯನಾದ ರಾಜನಲ್ಲಿ ಉಪಚಾರದಿಂದ ಹೇಳಲ್ಪಡುತ್ತವೆ ಆ ರಾಜರಲ್ಲಿ ಭೃತ್ಯರು ಆಶ್ರಯಪಡೆದಿರುವುದರಿಂದ, ಭೃತ್ಯರಿಗೂ ಅವುಬರುವುದರಿಂದ, ಅದರ ಶೋಕಲಾಭಮುಂತಾದಫಲಗಳು ರಾಜರಿಗೆ ಸಂಬಂಧಿಸಿರುತ್ತವೆ ಇದರಹಾಗೆ ಪ್ರಕೃತಿಯಲ್ಲಿರತಕ್ಕ ಭೋಗ(ಸಂಸಾರ) ಅಪವರ್ಗ(ಮುಕ್ತಿ)ಗಳೆರಡೂ ಪ್ರಕೃತಿಪುರುಷವಿವೇಕ ಜ್ಞಾನವಿಲ್ಲದ್ದರಿಂದ, ಆಶ್ರಯನಾದ ಪುರುಷನಿಗ ಸಂಬಂಧಿಸುತ್ತವೆ ಹೀಗೆಭಾವ

"ಕ್ರಿಯಾವೇಶಾತ್ಮಕತ್ವಾತ್"=ಕ್ರಿಯಾವೇಶರೂಪವಾದ ಆ ಭೋಕ್ತೃತ್ವವು-

स्वरूपचैतन्यबलात्स्वप्रकाशाच्च भोगिताम् ॥

दित्यत आह ॥ स्वरूपेति ॥ सुखदुःखाद्यनुभवितृत्वं हि भोक्तृत्वम् । तच्चात्मनः क्रियावेशमन्तरेण स्वरूपचैतन्येनैवोपपद्यत इत्याहुः । कुतो भोक्तृत्वमाहुरित्यत उक्तं स्वप्रकाशादिति । सुखाद्यनुभवितृत्वस्य स्वप्रतीतिसिद्धत्वादित्यर्थः । यथाऽऽह । भोक्तृत्वयोग्यता च पुरुषस्य चैतन्यमिति । न चैवं कर्तृत्वमप्यङ्गीकर्तुमुचितम् । उपपत्तिबाधितत्वेन

ಸುಖದುಃಖಾದಿಗಳನ್ನು ಅನುಭವಿಸುವುದೆಂಬ ಭೋಕ್ತೃತ್ವವು ಸ್ವರೂಪಚೈತನ್ಯದ ಬಲದಿಂದಲೇ ಯುಕ್ತವಾಗುತ್ತದೆ. ಮತ್ತು ಸುಖಾದ್ಯನುಭವಿತೃತ್ವವು ಪ್ರತೀತಿಯಿಂದ ಸಿದ್ಧವಾದುದರಿಂದ ಭೋಗವನ್ನು ಹೇಳುತ್ತಾರೆ

— ಪದಾರ್ಥದೀಪಿಕಾ —

ಪ್ರಶ್ನೆಯ ಉತ್ತರವನ್ನು " ಸ್ವರೂಪ " ಇತ್ಯಾದಿ ವಚನದಿಂದ ಹೇಳುತ್ತಾರೆ ಸುಖದುಃಖಾದಿಗಳನ್ನು ಅನುಭವಿಸುವುದು ಭೋಕ್ತೃತ್ವವೆನಿಸುತ್ತದೆ ಅದು ಕ್ರಿಯಾವೇಶವಿಲ್ಲದೆಯೆ ಸ್ವರೂಪ ಚೈತನ್ಯದಿಂದಲೇ ಸಲ್ಲುತ್ತದೆಯೆಂದು ಹೇಳುತ್ತಾರೆ ಭೋಕ್ತೃತ್ವವನ್ನು ಏಕೆ ಹೇಳುವರು ? ಎಂಬ ಪ್ರಶ್ನೆಯ ಉತ್ತರವನ್ನು " ಸ್ವಪ್ರಕಾಶಾತ್ " ಎಂಬ ವಚನದಿಂದ ಹೇಳುತ್ತಾರೆ ಸುಖದುಃಖಾದಿಗಳ ಅನುಭವವು ತಮ್ಮ ಪ್ರತೀತಿಯಿಂದ ಸಿದ್ಧವಾಗಿದೆ, ಹೀಗೆ ಅರ್ಥ ಇದನ್ನೇ " ಭೋಕ್ತೃತ್ವ ಯೋಗ್ಯತಾ ಚ ಪುರುಷಸ್ಯ ಚೈತನ್ಯಂ " ಎಂಬುದಾಗಿ

— ವಿಶೇಷಾರ್ಥಪ್ರದೀಪಿಕಾ —

ಪರಿಸ್ಪಂದನಾದಿರೂಪವಾದುದು ಅದು ಸರ್ವಗತನಾಗಿರುವುದು, ಈ ಮುಂತಾದ ಕಾರಣಗಳಿಂದ ಆತ್ಮನಲ್ಲಿ ಸಂಭವಿಸಲಾರದು, ಹೀಗೆ ಇಲ್ಲಿಯಭಾವ

"ಸ್ವಪ್ರಕಾಶಾಚ್ಚ"=ಪ್ರಕಾಶ್ಯತೇ ಇತಿಪ್ರಕಾಶಃ ಸ್ವಸ್ಯ ಪ್ರಕಾಶಃ ಸ್ವಪ್ರಕಾಶ, ತಸ್ಮಾತ್, ಹೀಗೆ ವಿಗ್ರಹ, ಇದು ಭಾನಸಾಧನವೆಂದು ಒಪ್ಪಿ "ಸ್ವಪ್ರತೀತಿಸಿದ್ಧತ್ವಾತ್" ಎಂಬುದಾಗಿ ಹೇಳಿದ್ದಾರೆ "ಸ್ವರೂಪಚೈತನ್ಯಬಲಾತ್" ಎಂಬಲ್ಲಿ ಪರರ ಸಮ್ಮತಿಯನ್ನು "ಯಥಾಹ" ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ 'ಭೋಕ್ತೃತ್ವಯೋಗ್ಯತ್ವಂ'=ಸುಖದುಃಖ ಮುಂತಾದುವರ ಭೋಕ್ತೃತ್ವದ(ಭೋಗಮಾಡುವುದರ) ಯೋಗ್ಯತೆಯು, "ಪುರುಷಸ್ಯ ಚೈತನ್ಯಂ" –ಪುರುಷನ ಚೈತನ್ಯವನಿಸುತ್ತದೆ, ಹೀಗ ಅರ್ಥ

प्रकृतेश्च स्वरू.स्य विवेकग्रहमेव तु ॥
आभोगावादिनो भोगमाहुर्भेदग्रहात्तयो ॥

कर्तृत्वप्रतीतेरध्यासरूपत्वात् । नन्वेवं तर्हि प्रतीतिसिद्धं भोक्तृत्वमपरे कथं नाभ्युपयन्तीत्यत आह ॥ प्रकृतेश्चेति ॥ भोगं भोगव्यवहार-कारणम् ।

अयं तेषामाशयः । भोक्तृत्वं हि न पुरुषस्य स्वभावः । अप-वर्गाभावप्रसङ्गात् । आगन्तुकं तु नोपपद्यते । अपरिणामित्वात् । अतः कर्तृत्वमिव भोक्तृत्वमप्यात्मनो न शक्यमङ्गीकर्तुम् । न च प्रतीतिविरोधः । प्रतीतेरभावात् । व्यवहार एव हि केवलं भोक्ताऽऽ-त्मेति । स च कर्तृत्वव्यवहारवत्प्रकृतिपुरुषविवेकाग्रहमात्रनिबन्धन

ಪ್ರಕೃತಿಯ ಸ್ವರೂಪಕ್ಕೂ ಆತ್ಮ್ಸ್ವರೂಪಕ್ಕೂ ಭೇದದ ಅಜ್ಞಾನವನ್ನೇ ಭೋಗದ ವ್ಯವಹಾರದ ಕಾರಣವೆಂದು ಭೋಕ್ತೃತ್ವವನ್ನಂಗೀಕರಿಸದವರು ಹೇಳುತ್ತಾರೆ

— ಪದಾರ್ಥದೀಪಿಕಾ —

ಹೇಳಿದ್ದಾರೆ ಆದರೆ ಹೀಗೆ ಕರ್ತೃತ್ವವನ್ನೂ ಅಂಗೀಕರಿಸುವದು ಉಚಿತವಲ್ಲ. ಏಕೆಂದರೆ ಯುಕ್ತಿಯಿಂದ ಬಾಧಿತವಾದುದರಿಂದ ಕರ್ತೃತ್ವಪ್ರತೀತಿಯು (ನಾನು ಕರ್ತೃವೆಂಬ ಜ್ಞಾನವು) ಭ್ರಮವಾಘುದು ಹಾಗಾದರೆ ಪ್ರತೀತಿಯಿಂದ ಸಿದ್ಧಿಸಿದ ಭೋಕ್ತೃತ್ವವನ್ನು ಇನ್ನಿತರರು ಹೇಗೆ ಒಪ್ಪುವುದಿಲ್ಲ ? ಈ ಪ್ರಶ್ನೆಯು ಉತ್ತರವನ್ನು "ಪ್ರಕೃತೇಶ್ಚ" ಇತ್ಯಾದಿ ವಚನದಿಂದ ಹೇಳುತ್ತಾರೆ "ಭೋಗಂ"= ಭೋಗದ ವ್ಯವಹಾರದ ಕಾರಣವನ್ನು

ಇಲ್ಲಿ, ಅವರ ಅಭಿಪ್ರಾಯವು ಇದು– "ಭೋಕ್ತೃತ್ವವು ಪುರುಷನ ಸ್ವಭಾವವಲ್ಲ ಏಕೆಂದರೆ– ಹಾಗಾದರೆ ಅಪವರ್ಗವಿಲ್ಲವಾಗಬೇಕಾಗುತ್ತದೆ ಆಗಂತುಕ ಭೋಕ್ತೃತ್ವವಂತೂ ಯುಕ್ತವೆನಿಸುವುದಿಲ್ಲ ಏಕೆಂದರೆ ಪರಿಣಾಮವುಳ್ಳವನಲ್ಲ ಆದುದರಿಂದ ಕರ್ತೃತ್ವವನ್ನು ಹೇಗೋ ಹಾಗೆ ಭೋಕ್ತೃತ್ವವನ್ನೂ ಅಂಗೀಕರಿಸುವುದು ಶಕ್ಯವಲ್ಲ ಪ್ರತೀತಿಯ ವಿರೋಧವು ಬರುವುದೆಂದು ಬಗೆಯಬಾರದು ಏಕೆಂದರೆ– ಪ್ರತೀತಿಯೇ ಇರುವದಿಲ್ಲ. ಏಕೆಂದರೆ 'ಆತ್ಮನು ಭೋಕ್ತೃವು, ಕರ್ತೃವು" ಎಂಬುದಾಗಿ ಕೇವಲ ವ್ಯವಹಾರವೇ ಹೊರತು ಯಥಾರ್ಥಾನುಭವವಲ್ಲ ಈ ವ್ಯವಹಾರವಾದರೋ ಕರ್ತೃತ್ವದ ವ್ಯವಹಾರದ ಹಾಗೆ ಪ್ರಕೃತಿ– ಪುರುಷರ

इति । स्यादेतत् । येषां पुरुषो भोक्ता तेषां मोक्षाभावः स्यात् । प्रकृतिसंयोगनिमित्तो हि पुरुषस्य भोगस्तैरङ्गीक्रियते । पुरुषस्य दर्शनार्थं कैवल्यार्थं तथा प्रधानस्य । पङ्ग्वन्धवदुभयोरपि संयोगस्तत्कृतः सर्ग इति वचनात् । न च प्रकृतिपुरुषसंयोगः कदाऽप्यपैति येन पुरुषस्य मोक्षः स्यादित्यत आह ॥ भेदग्रहादिति । तयोः प्रकृतिपुरुषयोर्भोगिनां पुरुषस्य भोगमभ्युपगच्छतां मते ।

## — ಪದಾರ್ಥದೀಪಿಕಾ —

ವಿವೇಕದ (ಭೇದ) ಜ್ಞಾನವಾಗದ ಮೂಲಕವೇ ಆದುದು," ಹೀಗೆ

ಇದು ಇರಲಿ ! ಯಾರ ಮತದಲ್ಲಿ ಪುರುಷನು ಭೋಕ್ತೃವೆನಿಸುವನೋ ಅವರ ಮತದಲ್ಲಿ ಮೋಕ್ಷವಿಲ್ಲವೆಂಬುದು ಆಗಬಹುದು. ಏಕಂದರೆ ಪ್ರಕೃತಿ ಸಂಯೋಗ ಮೂಲಕವಾಗಿ ಭೋಗವನ್ನು ಪುರುಷರಿಗೆ ಅವರು ಅಂಗೀಕರಿಸುತ್ತಾರೆ ಏಕೆಂದರೆ–"ಪುರುಷಸ್ಯ ದರ್ಶನಾರ್ಥಂ ಕೈವಲ್ಯಾರ್ಥಂ ತಥಾ ಪ್ರಧಾನಸ್ಯ ॥ ಪಂಗ್ವಂಧವದುಭಯೋರಪಿ ಸಂಯೋಗಸ್ತತ್ಕೃತಃ ಸರ್ಗಃ" ಎಂಬುದಾಗಿ ಅವರ ಸಾಂಖ್ಯಕಾರಿಕೆಯ ವಚನವಿರುತ್ತದೆ ಪ್ರಕೃತಿ ಪುರುಷ ಸಂಯೋಗವಂತೂ ವಿಭುವಾದುದರಿಂದ ಎಂದಿಗೂ ಅಳಿಯುವಂತಹದಲ್ಲ ಹಾಗೆ ಅದು ಅಳಿಯುವುದಾಗಿದ್ದರೆ ಪುರುಷನಿಗೆ ಮೋಕ್ಷವಾಗಬಹುದಾಗಿತ್ತು ! ಈ ಆಶಂಕೆಯನ್ನು "ಭೇದಾಗ್ರಹಾತ್" ಈ ವಚನದಿಂದ ಪರಿಹರಿಸುತ್ತಾರೆ "ತಯೋಃ"–ಪ್ರಕೃತಿ ಪುರುಷರುಗಳ ! "ಭೋಗಿನಾಂ"– ಪುರುಷನಿಗೆ ಭೋಗ (ಭೋಕ್ತೃತ್ವ) ವಿದೆಯೆಂದು ಅಂಗೀಕರಿಸುವವರ ಮತದಲ್ಲಿ

## — ವಿಶೇಷಾರ್ಥಪ್ರದೀಪಿಕಾ —

"ಪುರುಷಸ್ಯ ದರ್ಶನಾರ್ಥಂ"– "ಪ್ರಧಾನಸ್ಯ"–ಪ್ರಧಾನಕ್ಕೆ "ದರ್ಶನಾರ್ಥಂ"–ತನ್ನ ವಿಷಯಕವಾದ(ಪುರುಷರಿಂದಾಗಬೇಕಾದ) ಜ್ಞಾನದ ಸಲುವಾಗಿ "ಪುರುಷಸ್ಯ"=ಪುರುಷನ ಅಪೇಕ್ಷೆಯು "ತಥಾ"=ಹಾಗು "ಪುರುಷಸ್ಯ"=ಪುರುಷನಿಗೆ, "ಕೈವಲ್ಯಾರ್ಥಂ"=ಅಪವರ್ಗದ ಸಲುವಾಗಿ, "ಪ್ರಧಾನಸ್ಯ"=ಪ್ರಧಾನದ ಅಪೇಕ್ಷೆಯು, ಹೀಗೆ, "ಉಭಯೋರಪಿ"=ಪರಸ್ಪರ ಸಾಪೇಕ್ಷವಾದ ಈ ಪ್ರಕೃತಿಪುರುಷರುಗಳಿಗೂ, "ಪಂಗ್ವಂಧವತ್"= ಹೆಳವ ಕುರುಡರಿಗೆ ಆಗುವಹಾಗ "ಸಂಬಂಧ" ಸಂಯೋಗವು ಆಗುತ್ತದೆ "ಸರ್ಗ"=ಸೃಷ್ಟಿಯು "ತತ್ಕೃತ"=ಪ್ರಕೃತಿಪುರುಷರ ಆ ಸಂಯೋಗದಿಂದ ಉಂಟಾದುದು, ಹೀಗೆ ಅರ್ಥ ಇಲ್ಲಿ ಕುರು

अयमभिसन्धिस्तेषाम् । प्रकृतिसयोगो हि पुरुषस्य । न केवलं भोगार्थः । किन्नामापवर्गार्थश्च । तत्र विवेकाग्रहसचिवो भोगाय भवति । विवेकग्रहे चापवर्गाय । करोतु नाम पौनःपुन्येन शब्दाद्युपभोगं प्रकृतिः । अनया विवेकख्यातिरकृतेति । कृतविवेकख्यातिस्तु न शब्दाद्युपभोजयति । अविवेकख्यातिनिबन्धनो हि तदुपभोगो निबन्धनाभावे न भवितुमर्हतीति । तच्चोक्तम् । दृष्टा मयेत्युपेक्षक

— ಪದಾರ್ಥದೀಪಿಕಾ —

ಅವರಿಗೆ ಇಷ್ಟು ಅಭಿಪ್ರಾಯವು— "ಪುರುಷನಿಗೆ ಪ್ರಕೃತಿಯೊಡನೆ ಸಂಯೋಗವು ಕೇವಲ ಭೋಗಕ್ಕಲ್ಲ ಅಪವರ್ಗಕ್ಕೋಸುಗವೂ ಆಗಿದೆ ಪ್ರಕೃತಿ ಪುರುಷರ ವಿವೇಕದ ತಿಳಿವಾಗದಿರುವಿಕೆ(ಅಜ್ಞಾನ)ಯು ಸಹಾಯ ಪಡೆದು ಆ ಪ್ರಕೃತಿಸಂಯೋಗವು ಪುರುಷನ ಭೋಗದ ಕಾರಣವಾಗುತ್ತದೆ ವಿವೇಕದ ಜ್ಞಾನವಾಗಲು ಮುಕ್ತಿಗೆ (ಅಪವರ್ಗಕ್ಕೆ) ಕಾರಣವಾಗುತ್ತದೆ ಪ್ರಕೃತಿಯು ಶಬ್ದಾದಿಗಳ ಉಪಭೋಗವನ್ನು ಪದೇ ಪದೇ ಮಾಡಲಿ! ಏಕೆಂದರೆ ಪ್ರಕೃತಿಯಿಂದ ವಿವೇಕಖ್ಯಾತಿಯು ಮಾಡಲ್ಪಟ್ಟಿರುವುದಿಲ್ಲ ವಿವೇಕಖ್ಯಾತಿಯು ಮಾಡಲ್ಪಟ್ಟಿದ್ದರೆ ಅದು ಶಬ್ದಾದಿಗಳ ಉಪಭೋಗವನ್ನು ಮಾಡಿಸುವುದಿಲ್ಲ ಅವಿವೇಕಖ್ಯಾತಿಯು ಮೂಲಕವಾದ ಆ ಶಬ್ದಾದಿಗಳ ಉಪಭೋಗವು ಆ ಅವಿವೇಕಖ್ಯಾತಿಯೆಂಬ ಮೂಲಕಾರಣವಿಲ್ಲದ ಪಕ್ಷದಲ್ಲಿ ಸಂಭವಿಸಲಾರದು ಇದನ್ನೇ "ದೃಷ್ಟಾ ಮಯೇತ್ಯುಪೇಕ್ಷಕ ಏಕೋ ದೃಷ್ಟಾಹಮಿತ್ಯುಪರಮತ್ಯನ್ಯಾ॥ ಸತಿ

— ವಿಶೇಷಾರ್ಥಪ್ರದೀಪಿಕಾ —

ಡನಂತೆ ಪ್ರಧಾನವು ಹೆಳವನಂತೆ ಪುರುಷನು(ಕ್ರಿಯಾರಹಿತನಾದದ್ದರಿಂದ) ಹೆಳವನ ಸಂಬಂಧದಿಂದ ಕುರುಡನು ಹೇಗೆ ಮಾರ್ಗವನ್ನು ಕ್ರಮಿಸುತ್ತಾನೆಯೋ ಹಾಗೆ ಪುರುಷನ ಸಂಬಂಧದಿಂದ ಪ್ರಕೃತಿ(ಪ್ರಧಾನ)ಯು ಪ್ರವೃತ್ತಿಸುತ್ತದೆ ಕುರುಡನಸಂಬಂಧದಿಂದ ಹೆಳವನು ಅಭೀಷ್ಟದೇಶವನ್ನು ಹೇಗೆ ತಲಪುತ್ತಾನೆಯೋ ಹಾಗ ಪುರುಷನು ಪ್ರಧಾನದ ಸಂಬಂಧದಿಂದ ಅಭೀಷ್ಟವಾದ ವಿವೇಕಜ್ಞಾನದ್ವಾರಾ ಮುಕ್ತಿಯನ್ನು ಹೊಂದುತ್ತಾನೆ ಹೀಗೆ ತಾತ್ಪರ್ಯ.

"ದೃಷ್ಟಾ ಮಯೇತ್ಯುಪೇಕ್ಷಕ" ="ಏಕ" =ಪುರುಷನು "ಮಯಾ"= ನನ್ನಿಂದ, "ದೃಷ್ಟಾ" ಪ್ರಕೃತಿಯು ಭಿನ್ನವಾದುದಾಗಿ ತಿಳಿಯಲ್ಪಟ್ಟಿತು. "ಅನ್ಯಾ" ಪ್ರಕೃತಿಯು, "ಅಹಂ" =ನಾನು, "ಅನೇನ" =ಇವನಿಂದ (ಪುರುಷನಿಂದ)

एको दृष्टाहमित्युपरमत्यन्या । सति संयोगेऽपि तयोः प्रयोजनं नास्ति सर्गेऽस्या इति । तथा रङ्गस्य दर्शयित्वा निवर्तते नर्तकी यथा नृत्तात् । पुरुषस्य तथाऽऽत्मानं प्रकाश्य विनिवर्तते प्रकृतिरिति । न च निवृत्ताऽपि पुनः प्रवर्त्स्यतीति शङ्कनीयम् । प्रयोजनाभावात् । उक्तं च । प्रकृतेः सुकुमारतरं न किञ्चिदस्तीति मे मतिर्भवति । या

## — ಪದಾರ್ಥದೀಪಿಕಾ —

ಸಂಯೋಗೇಽಪಿ ತಯೋಃ ಪ್ರಯೋಜನಂ ನಾಸ್ತಿ ಸರ್ಗೇಽಸ್ಯಾಃ '' ಎಂಬ ಕಾರಿಕೆಯಲ್ಲಿ ಹೇಳಿದ್ದಾರೆ ಅಲ್ಲದೆ– "ರಂಗಸ್ಯ ದರ್ಶಯಿತ್ವಾ ನಿವರ್ತತೇ ನರ್ತಕೀ ಯಥಾ ನೃತ್ತಾತ್॥ಪುರುಷಸ್ಯ ತಥಾಽಽತ್ಮಾನಂ ಪ್ರಕಾಶ್ಯ ವಿನಿವರ್ತತೇ ಪ್ರಕೃತಿಃ" ಎಂಬಲ್ಲಿಯೂ ಹೇಳಿದ್ದಾರ ಮತ್ತು ನಿವೃತ್ತವಾದರೂ ಮತ್ತೆ ಪ್ರವೃತ್ತಿಯಾಗುವುದೆಂದು ಶಂಕಿಸತಕ್ಕದ್ದಲ್ಲ ಏಕೆಂದರೆ- ಪ್ರಯೋಜನವಿರುವುದಿಲ್ಲ ಈ ವಿಷಯವನ್ನೂ "ಪ್ರಕೃತೇಃ ಸುಕುಮಾರತರಂ ನ ಕಿಂಚಿದಸ್ತೀತಿ ಮೇ ಮತಿರ್ಭವತಿ॥ ಯಾ ದೃಷ್ಟಾಸ್ಮೀತಿ ಪುನರ್ನದರ್ಶನಮುಪೈತಿ ಪುರುಷಸ್ಯ' ಎಂಬ ಕಾರಿಕೆಯಲ್ಲಿ

## — ವಿಶೇಷಾರ್ಥಪ್ರದೀಪಿಕಾ —

"ದೃಷ್ಟಾ'' =ತಿಳಿಯಲ್ಪಟ್ಟಿದ್ದೇನೆ "ಇತಿಮತ್ವಾ" =ಹೀಗೆ ತಿಳಿದು, ''ಉಪರಮತಿ''= ಶಬ್ದಾದಿ ವಿಷಯಗಳನ್ನು ಭೋಗಮಾಡಿಸುವುದಿಲ್ಲ "ತಯೋಃ ಸಂಯೋಗೇ ಸತ್ಯಪಿ" =ಅವರೀರ್ವರ ಸಂಬಂಧವಿದ್ದರೂ ಸಹ, "ಸರ್ಗಸ್ಯ" =ಸೃಷ್ಟಿಯ (ಅದರಿಂದಾಗಬೇಕಾದ) "ಪ್ರಯೋಜನಂ'' =ಪ್ರಯೋಜನವು "ನ'' =ಇಲ್ಲ ಭೋಗ ಇಲ್ಲವೆ ವಿವೇಕದ ಸಲುವಾಗಿ ಬೇಕಾಗುವ ಸೃಷ್ಟಿಯು, ವಿವೇಕಖ್ಯಾತಿಯುಂಟಾದಮೇಲೆ ಇವೆರಡೂ ಪ್ರಯೋಜನಗಳು ಬೇಕಾಗುವುದಿಲ್ಲವಾದುದರಿಂದ ಸೃಷ್ಟಿಯಾಗುವುದಿಲ್ಲವೆಂದು ಭಾವ

''ರಂಗಸ್ಯ" = ರಂಗಸ್ಥಾನದಲ್ಲಿರುವ ಪ್ರೇಕ್ಷಕ ಜನಕ್ಕೆ, "ದರ್ಶಯಿತ್ವಾ"= ನೃತ್ಯವನ್ನು ತೋರಿಸಿ, ನರ್ತಕೀ ಯಥಾನೃತ್ತಾತ್ ನಿವರ್ತತೇ'' = ನರ್ತಕಿಯು ನೃತ್ಯದಿಂದ ನಿವೃತ್ತಳಾಗುವಳೋ 'ತಥಾ" ಹಾಗೆ, "ಪ್ರಕೃತಿಃ"= ಪ್ರಧಾನವು, 'ಪುರುಷ್ಯಸ್ಯ" = ಪುರುಷನಿಗೆ, "ಆತ್ಮಾನಂ'' ತನ್ನ ಶಬ್ದಾದ್ಯಾತ್ಮಕ ಸ್ವರೂಪವನ್ನು ಪುರುಷನಿಂದ ಭಿನ್ನವಾಗಿ ತೋರಿಸಿ, ''ವಿನಿವರ್ತತೇ" ಚನ್ನಾಗಿ ನಿವೃತ್ತವಾಗುತ್ತದೆ ಹೀಗೆ ಅರ್ಥ

''ಯಾ'' = ಯಾವದು (ಪ್ರಕೃತಿಯು) "ದೃಷ್ಟಾಸ್ಮಿ''= ಪುರುಷನಿಂದ

भोगिनां मुक्तिरुद्दिष्टा स एवाभोगवादिनाम् ॥

दृष्टाऽस्मीति पुनर्न दर्शनमुपैति पुरुषस्येति । न च भेदग्रहसद्भावात्कैवल्याभावः । तस्यापि स्वेनैव निवृत्तेः । ननु च येषां मते पुरुषस्य भोग एव नास्ति तेषां कथं मोक्षः । बन्धाभावात् । तथा च योगानुशासनवैयर्थ्यामन्यत आह ॥ स एवेति ।[a] स भेदग्रह एव मुक्तिरुद्दिष्टा । भेदाग्रहनिबन्धनो भ्रम एव हि बन्धः । स च भेदग्रहे सति निवर्तते । सैव मुक्तिः । न त्वपराऽस्तीत्यतः स एवेत्युक्तम् । न पुन-

ಪ್ರಕೃತಿ ಪುರುಷರಲ್ಲಿ ಪುರುಷನಿಗೆ ಭೋಗವನ್ನು ಅಂಗೀಕರಿಸುವವರ ಮತದಲ್ಲಿ ಮುಕ್ತಿಯು ಹೇಳಲ್ಪಟ್ಟಿರುತ್ತದೆ

ಒಪ್ಪದವರ ಮತದಲ್ಲಿ ಪ್ರಕೃತಿಪುರುಷ ಭೇದದ ಅಜ್ಞಾನವೇ ಮುಕ್ತಿಯೆಂದು ಹೇಳಲ್ಪಟ್ಟಿದೆ

— ಪದಾರ್ಥದೀಪಿಕಾ —

ಹೇಳಲಾಗಿದೆ ಭೇದಜ್ಞಾನವಿರುವುದರಿಂದ ಕೈವಲ್ಯವಿಲ್ಲವೆಂದೂ ಹೇಳಬಾರದು ಏಕೆಂದರೆ– ಆ ಭೇದಜ್ಞಾನಕ್ಕೂ ಸಹ ತನ್ನಿಂದಲೇ ನಿವೃತ್ತಿಯಾಗುತ್ತದೆ ಪುರುಷನಿಗೆ ಭೋಗವೇ ಇಲ್ಲವೆನ್ನುವವರ ಮತದಲ್ಲಿ ಮೋಕ್ಷವು ಹೇಗೆ? ಏಕೆಂದರೆ ಬಂಧವು ಇರುವುದಿಲ್ಲ ಆದುದರಿಂದ ಬಂಧನಿವೃತ್ತಿಯ ಉಪಾಯಗಳನ್ನು ಹೇಳುವುದು ವ್ಯರ್ಥವೆಂಬ ಪ್ರಶ್ನೆಯ ಉತ್ತರವನ್ನು "ಸ ಏವ" ಇತ್ಯಾದಿ ವಚನದಿಂದ ಹೇಳುತ್ತಾರೆ "ಸ ಏವ"– ಆ ಭೇದದ ಜ್ಞಾನವೇ, ಉದ್ದಿಷ್ಟವಾದ ಮುಕ್ತಿಯು ಪ್ರಕೃತಿಪುರುಷರ ಭೇದದ ಅಜ್ಞಾನಮೂಲಕವಾದ ಭ್ರಮವೇ ಬಂಧವು ಈ ಬಂಧವು ಭೇದದ ಜ್ಞಾನವಾದ ಮೇಲೆ ನಿವೃತ್ತವಾಗುತ್ತದೆ ಇದೇ ಮುಕ್ತಿಯು!

— ವಿಶೇಷಾರ್ಥಪ್ರದೀಪಿಕಾ —

ಭಿನ್ನವಾಗಿ ನೋಡಲ್ಪಟ್ಟದ್ದೇನ, "ಇತಿ" ಈ ಕಾರಣದಿಂದ, "ಪುರುಷಸ್ಯ" ಪುರುಷನ "ಪುನರ್ದರ್ಶನಂ" ಇನ್ನೊಂದು ದರ್ಶನ(ನೋಟ) ವನ್ನು "ನ ಉಪೈತಿ' ಹೊಂದುವದಿಲ್ಲ ಪಡೆಯುವುದಿಲ್ಲ ಈ ಕಾರಣದಿಂದ, "ಪ್ರಕೃತೇಃ" = ಪ್ರಕೃತಿಗಿಂತ, "ಸುಕುಮಾರ ತರಂ" ಹೆಚ್ಚು ಪೇಶಲ (ಮೃದು–ಸೂಕ್ಷ್ಮ)ವಾದುದು "ಕಿಂಚಿತ್ ಯಾವದೂ "ನ ಅಸ್ತಿ" ಇರುವುದಿಲ್ಲ. "ಇತಿ ಮೇ ಮತಿರ್ಭವತಿ" ಹೀಗೆ ನನಗೆ ತಿಳಿವಳಿಕೆಯು (ಬುದ್ಧಿಯು) ಆಗುತ್ತದೆ. ಹೀಗೆ ಅರ್ಥ

भेदग्रह एव मोक्षः । तस्यापि निवर्तनीयत्वात् । नापि विवेकख्याति-मित्युक्तत्वादिति ॥ छ ॥

एवमुपन्यस्तं मतमधुना निरसनीयम् । तत्र सूत्रकृता क्रम-मविवक्षित्वा रचनानुपपत्तेश्च नानुमानमिति प्रथमं परपक्षोपालम्भं विधायानन्तरं प्रवृत्तेश्चेति स्वपक्षसाधनं विहितम् । भाष्यकारस्तु साधकप्रमाणस्य तत्त्वप्रतिपत्त्यङ्गत्वेन तदुपन्यासस्य प्राथम्यं परपक्ष-निरासस्य तत्स्थैर्यहेतोर्बहिरङ्गत्वेन तदुपन्यासस्यानन्तर्यमिति ! क्रम-मपि ग्राहयिष्यन्व्यत्ययन व्याचक्षाणः प्रवृत्तेश्चेति सूत्रस्य पातनिकार्थ-

— ಪದಾರ್ಥ ದೀಪಿಕಾ —

ಬೇರಯಾದ ಮುಕ್ತಿಯಿಲ್ಲ ಈ ಕಾರಣದಿಂದ 'ನ ಏವ" ಎಂಬುದಾಗಿ ಹೇಳಿದ್ದಾರೆ ಭೇದದ ಜ್ಞಾನವೇ ಮುಕ್ತಿಯಲ್ಲ ಏಕಂದರ– ಈ ಭೇದದ ಜ್ಞಾನವೂ ನಾಶಹೊಂದುತ್ತದೆ ಏಕಂದರೆ ನಾಪಿ ವಿವೇಕಖ್ಯಾತಿಂ" ಎಂಬುದಾಗಿ ಹೇಳಿರುವ ವಚನವಿದೆ ' ಹೀಗೆ

ಹೀಗೆ, ಈ ವರೆಗೂ ಉಪನ್ಯಾಸಮಾಡಲ್ಪಟ್ಟ ಮತವನ್ನೀಗ ನಿರಾಕರಿಸತಕ್ಕದ್ದು ಹೀಗಿರುವಾಗ- ಸೂತ್ರಕಾರರು, ಕ್ರಮವನ್ನು ಅಭಿಪ್ರಾಯದಲ್ಲಿ ತಾರದೆ, "ರಚನಾನುಪತ್ತೇಶ್ಚನಾನುಮಾನಂ" ಎಂಬುದಾಗಿ ಮೊದಲು ಪರಪಕ್ಷವನ್ನು ನಿರಾಕರಿಸಿ, ಅನಂತರದಲ್ಲಿ "ಪ್ರವೃತ್ತೇಶ್ಚ" ಎಂಬ ಸೂತ್ರದಿಂದ ಸ್ವಪಕ್ಷದ ಸಾಧನವನ್ನು ಮಾಡಿರುತ್ತಾರೆ ಭಾಷ್ಯಕಾರರಾದರೋ–ಸಾಧಕ ಪ್ರಮಾಣವು ತತ್ತ್ವದ ತಿಳಿವಿನ ಅಂಗವಾದುದರಿಂದ, ಆ ಪ್ರಮಾಣೋಪನ್ಯಾಸಕ್ಕೆ ಆದ್ಯತೆಯೂ ಸ್ವಪಕ್ಷ ಸ್ಥಿರೀಕರಣದ ಕಾರಣವಾದ ಪರಪಕ್ಷದ ನಿರಾಕರಣಕ್ಕೆ ಅನಂತರತ್ವವೂ ಬರುತ್ತದೆ" ಹೀಗೆ ಸ್ವಸಾಧನ ಪರಪಕ್ಷ ನಿರಾಕರಣಗಳ ಕ್ರಮವನ್ನೂ ತಿಳಿಸುತ್ತ ವ್ಯತ್ಯಾಸಮಾಡಿ ವ್ಯಾಖ್ಯಾನಿಸಹೊರಟಿದ್ದು ' ಪಯೋಂಬುವಚ್ಚೇತ್ತತ್ರಾಪಿ"

— ವಿಶೇಷಾರ್ಥಪ್ರದೀಪಿಕಾ —

"ಇತ್ಯುಕ್ತತ್ವಾತ್" "ನಾಪಿ ವಿವೇಕಖ್ಯಾತಿಂ ಪ್ರಾಕೃತೀಂ ತತೋ ವಿವಿಕ್ತ ಆತ್ಮಾ ಸ್ವಾರ್ಥಮಭಿಮಂತುಮರ್ಹತಿ" (ಪ್ರಾಕೃತವಾದ ವಿವೇಕಖ್ಯಾತಿಯನ್ನೂ ಸಹ ಅದರಿಂದ ಬೇರೆಯಾಗಿರುವ ಆತ್ಮನು, ಪುರುಷಾರ್ಥ (ಮುಕ್ತಿ) ವೆಂದು ಅಭಿಮಾನ ಮಾಡಲಾರನು) ಎಂಬುದಾಗಿ ಸಾಂಖ್ಯರು ಹೇಳಿರುತ್ತಾರೆಂದು ಅರ್ಥ. ಇಲ್ಲಿಗೆ ಪೂರ್ವಪಕ್ಷದ ಉಪನ್ಯಾಸವು ಮುಗಿದುದು.

ईशस्यासङ्ग्रहादेव न युक्तौ तावुभावपि ॥
चेतनेच्छानुसारेण यदा दृष्टः पटोद्भव ॥
एतादृशत्वमन्यस्य वस्तुत्वात्केन वार्यते ॥

माह ॥ ईशस्येति ।असङ्ग्रहादनभ्युपगमात् । एवेत्यस्य दोषस्योल्बणत्वं सूचयति । तावुभावपि पुरुषस्य भोक्तृत्वाभोक्तृत्वपक्षौ । नन्वप्रामाणिकस्येश्वरस्यानभ्युपगमे कथमयुक्तत्वमित्यतः प्रवृत्तेश्चेति सूत्रार्थतयेश्वरे प्रमाणमाह ॥ चेतनेति । यदा यस्मात् । तस्मादिति

ಈಶ್ವರನನ್ನು ಅಂಗೀಕಾರ ಮಾಡದಿರುವುದರಿಂದಲೇ ಪುರುಷನಿಗೆ ಭೋಕ್ತೃತ್ವವನ್ನು ಒಪ್ಪುವ ಹಾಗು ಒಪ್ಪದಿರುವ ಈ ಎರಡೂ ಪಕ್ಷಗಳೂ ಯುಕ್ತಗಳಾಗಲಾರವು.
ಚೇತನನ ಇಚ್ಛಾನುಸಾರವಾಗಿ ಪಟದ ಉತ್ಪತ್ತಿಯು ಯಾವ ಕಾರಣದಿಂದ ಕಂಡು ಬಂದಿದೆಯೋ ಆ ಕಾರಣದಿಂದ ಇತರ ಮಹದಾದಿಗಳಿಗೂ ವಸ್ತುತ್ವ (ಕಾರ್ಯತ್ವ) ವಿರುವುದರಿಂದ ಇಂಥ ಪಟಾದಿಗಳಂತೆ ಚೇತನೇಚ್ಛಾನುಸಾರವಾಗಿ ಉತ್ಪತ್ತಿಯು, ಯಾವ ಕಾರಣದಿಂದ ನಿವಾರಿಸಲ್ಪಡುತ್ತದೆ ?

## — ಪದಾರ್ಥದೀಪಿಕಾ —

ಈ ಸೂತ್ರದ ಪ್ರಸಕ್ತ್ಯರ್ಥವಾಗಿ ಈಶಸ್ಯ ಹಿ ಇತ್ಯಾದಿ ವಚನವನ್ನು ಹೇಳುತ್ತಾರೆ " ಅಸಂಗ್ರಹಾತ್ " ಒಪ್ಪದಿದ್ದುದರಿಂದ, " ಏವ " ಶಬ್ದದಿಂದ ದೋಷದ ತೀಕ್ಷ್ಣತೆಯನ್ನು ಸೂಚಿಸುತ್ತಾರೆ "ತಾವುಭಾವಪಿ"— ಪುರುಷನ ಭೋಕ್ತೃತ್ವ ಅಭೋಕ್ತೃತ್ವ ಪಕ್ಷಗಳೆರಡು ಇನ್ನು ಅಪ್ರಾಮಾಣಿಕವಾದ ಈಶ್ವರನನ್ನು ಅಂಗೀಕರಿಸದಿದ್ದರೆ ಅಯುಕ್ತತೆಯು ಹೇಗ ? ಈ ಆಶಂಕೆಯನ್ನು ಪರಿಹರಿಸಲು "ಪ್ರವೃತ್ತೇಶ್ಚ" ಈ ಸೂತ್ರದ ಅರ್ಥರೂಪವಾಗಿ ಈಶ್ವರನ ಬಗ್ಗೆ ಪ್ರಮಾಣವನ್ನು " ಚೇತನ " ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ಯದಾ"= ಯಾವ

## — ವಿಶೇಷಾರ್ಥಪ್ರದೀಪಿಕಾ —

"ಪಾತನಿಕಾರ್ಥಂ" ಅವತಾರಿಕೆಯ ಹೊರಡುವಿಕೆಯ ಸಲುವಾಗಿ ಆ ಸೂತ್ರದಿಂದ ನಿವಾರಿಸಲ್ಪಡುವ ಆಶಂಕೆಯ ಉತ್ಥಾಪನೆಯ ಸಲುವಾಗಿ ಮೊದಲು ಒಂದು ದೂಷಣವನ್ನು ಹೇಳುತ್ತಾರೆ ಹೀಗೆ ಅರ್ಥ

"ಸೂತ್ರಾರ್ಥತಯಾ" – "ಪಟಾದಿಗಳಲ್ಲಿಯೂ ಚೇತನಪ್ರವೃತ್ತಿಯು ಕಂಡುಬರುವುದರಿಂದ, ಮಹದಾದಿಗಳಲ್ಲಿಯೂ ಚೇತನಪ್ರವೃತ್ತಿಯನ್ನು ಯುಕ್ತಿಯಿಂದ ತಿಳಿಯಲು ಶಕ್ಯವಿರುವುದರಿಂದ", ಹೀಗ ಸೂತ್ರಾರ್ಥರೂಪವಾಗಿ

लभ्यते । एतादृशत्वं पटवच्चेतनेच्छानुसारेणोद्भूतत्वम् । अन्यस्य महदादेर्वस्तुत्वात्कार्यत्वादनुमीयमानमिति शेषः । केनेत्याक्षेपे । अयमत्र प्रयोगः । महदादिकं चेतनेच्छाधीनोत्पत्तिकं कार्यत्वात्पटवदिति । यद्वा महदाद्युद्भवश्चेतनेच्छाधीन उद्भवत्वात्पटोद्भववदिति प्रयोक्तव्यम् । प्रयोगद्वयसूचनाय पटोद्भवं दृष्टान्तमुक्त्वा वस्तुत्वादिति हेतुमाह । एवमुक्तावुपलक्षणत्वं ह्युभयत्र ज्ञायेत । उपलक्षण चैतत् । महदाद्युपा

— ಪದಾರ್ಥದೀಪಿಕಾ —

ಕಾರಣದಿಂದ "ತಸ್ಮಾತ್" ಎಂಬುದು ಅಧ್ಯಾಹಾರದಿಂದ ಲಭಿಸುತ್ತದೆ "ಏತಾದೃಶತ್ವಂ" ಪಟದ ಹಾಗೆ ಚೇತನನ ಇಚ್ಛೆಯ ಅನುಸಾರವಾಗಿ ಹುಟ್ಟಿರೋಣವು ! "ಅನ್ಯಸ್ಯ" ಮಹದಾದಿಗಳಿಗ 'ವಸ್ತುತ್ವಾತ್"- ಕಾರ್ಯತ್ವ ಯುಕ್ತಿಯಿಂದ, ಅನುಮಾನ ಮಾಡಲ್ಪಟ್ಟಿದ್ದು ಹೀಗೆ ಶೇಷ ಪೂರೈಸಬೇಕು "ಕೇನ" ಎಂಬುದು ಆಕ್ಷೇಪಾರ್ಥದಲ್ಲಿ! ಇಲ್ಲಿ ಈ ಪ್ರಯೋಗವು—"ಮಹದಾದಿಗಳು ಚೇತನದ ಇಚ್ಛೆಯ ಅಧೀನವಾದ ಉತ್ಪತ್ತಿಯುಳ್ಳವುಗಳು. ಏಕೆಂದರೆ ಕಾರ್ಯವಾಗಿವ ಇದರಲ್ಲಿ ಘಟವು ದೃಷ್ಟಾಂತವು ಇಲ್ಲದೆ-ಮಹದಾದಿಗಳ ಉತ್ಪತ್ತಿಯು ಚೇತನನ ಇಚ್ಛಾಧೀನವಾದುದು ಏಕೆಂದರ ಉತ್ಪತ್ತಿಯಾಗಿರುವುದು ಇದರಲ್ಲಿ ಪಟದ ಉತ್ಪತ್ತಿಯು ದೃಷ್ಟಾಂತವು, ಹೀಗೆ ಪ್ರಯೋಗಿಸತಕ್ಕದ್ದು ಈ ಎರಡು ಪ್ರಯೋಗಗಳನ್ನು ಸೂಚಿಸಲು ಪಟದ ಉತ್ಪತ್ತಿಯನ್ನು ದೃಷ್ಟಾಂತವಾಗಿ ಹೇಳಿ, 'ವಸ್ತುತ್ವಾತ್"ಎಂಬುದಾಗಿ ಹೇತುವನ್ನು ಹೇಳಿದ್ದಾರ ಹೀಗ ಹೇಳಿದಲ್ಲಿ, ದೃಷ್ಟಾಂತ ಹೇತುವಚನಗಳೆರಡಕ್ಕೂ ಉಪಲಕ್ಷಣತ್ವವು ತಿಳಿಯುವದು ಇದು ಸಂಗ್ರಾಹಕವು ಮಹದಾ

— ವಿಶೇಷಾರ್ಥಪ್ರದೀಪಿಕಾ —

"ವಸ್ತುತ್ವಾತ್" ಎಂಬುದರ ಅರ್ಥವು "ಕಾರ್ಯತ್ವಾತ್" ಎಂಬುದು ಏಕೆಂದರೆ ವಸ್ತುತ್ವವು (ವಸ್ತುವಾಗಿರುವುದು) ನಿತ್ಯಪದಾರ್ಥಗಳಲ್ಲಿಯೂ ಇದ್ದು, ಪರಿಣಾಮವೆಂಬ ಉತ್ಪತ್ತಿಯುಳ್ಳದ್ದಾಗಿರುವುದೆಂಬ ಸಾಧ್ಯವು ಅಲ್ಲಿ ಇಲ್ಲದಿರುವುದರಿಂದ ವ್ಯಭಿಚಾರವೆಂಬ ದೋಷವು ಬರುತ್ತದೆ "ವಸ್ತುತ್ವ" ವೆಂಬುದಕ್ಕೆ "ಕಾರ್ಯತ್ವ" ವೆಂಬ ಅರ್ಥಹೇಳಿದರೆ ಈ ಕಾರ್ಯತ್ವವು ನಿತ್ಯಪದಾರ್ಥದಲ್ಲಿಲ್ಲವಾದುದರಿಂದ ವ್ಯಭಿಚಾರವಿಲ್ಲ

"ಉಭಯತ್ರ"— ಅನುರೂಪವಾಗದಿರುವ ಹೇತು, ದೃಷ್ಟಾಂತಗಳನ್ನು ಹೇಳಿದಲ್ಲಿ. ಅದರಿಂದ ಅನುರೂಪವಾದ ಪಕ್ಷ ಹಾಗೂ ದೃಷ್ಟಾಂತಗಳೆರಡಕ್ಕೂ

दानं चेतनाधिष्ठितमुपादानत्वात्तन्तुवदित्याद्यपि द्रष्टव्यम् । न चान्यश्चेतनस्तथा भवितुमर्हतीति सर्वातिशायी पुरुष ईश्वर एव सिध्यतीति ।

— ಪದಾರ್ಥದೀಪಿಕಾ —

ದ್ಯುಪಾದಾನವು ಚೇತನಾಧಿಷ್ಠಿತವಾದುದು ಏಕೆಂದರೆ ಉಪಾದಾನವಾಗಿದೆ. ಇದರಲ್ಲಿ ತಂತುವು ದೃಷ್ಟಾಂತವು ಈ ಮುಂತಾದುದನ್ನೂ ತಿಳಿಯತಕ್ಕದ್ದು ಇನ್ನುಳಿದ ಚೇತನನು ಹಾಗೆ ಆಗಿರುವುದಿಲ್ಲ, ಆದುದರಿಂದ ಸರ್ವರನ್ನು ಮೀರಿಸಿರುವ ಪುರುಷನಾದ ಈಶ್ವರನೇ ಆ ಚೇತನನೆಂದು ಸಿದ್ಧಿಸುತ್ತಾನೆ ಹೀಗೆ.

— ವಿಶೇಷಾರ್ಥಪ್ರದೀಪಿಕಾ —

ಉಪಲಕ್ಷಣಾವೃತ್ತಿಯಿಂದ ಸಂಗ್ರಹವಾಗುವುದರಿಂದ, ಎರಡು ಪ್ರಯೋಗಗಳನ್ನು ತಿಳಿಯುತ್ತಾರೆ "ಉದ್ಭವ" (ಪಟೋದ್ಭವ) ವನ್ನು ದೃಷ್ಟಾಂತವಾಗಿ ಹೇಳಿ, "ಉದ್ಭವ" ವನ್ನೇ ಹೇತುವನ್ನಾಗಿ ಮಾಡಲು ಶಕ್ಯವಿದ್ದರೂ ಹಾಗೆ ಮಾಡದೇ, "ವಸ್ತುತ್ವಾತ್" ಎಂಬುದಾಗಿ ಹೇತುವನ್ನಾಗಿ ಮಾಡಿದ್ದಾರೆ ಇದರಿಂದ, "ಉದ್ಭವ" ಪದದಿಂದ ಹೇತುವನ್ನೂ (ಉದ್ಭವತ್ವನ್ನೂ) ಅಂತಹದೇ ಆದ ಮಹದಾದ್ಯುದ್ಭವವನ್ನು ಪಕ್ಷವನ್ನೂ ಉಪಲಕ್ಷಣಾವೃತ್ತಿಯಿಂದ ಸಂಗ್ರಹಮಾಡಿ, "ಮಹದಾದ್ಯುದ್ಭವಃ" ಇತ್ಯಾದಿಯಾದ ಎರಡನೆಯ ಪ್ರಯೋಗವು, "ವಸ್ತುತ್ವಾತ್" ಎಂಬುದರಿಂದ, ಪಟರೂಪವಾದ ವಸ್ತುವನ್ನು ದೃಷ್ಟಾಂತವನ್ನಾಗಿ ಸಂಗ್ರಹಿಸಿ, ಅಂತಹ (ಮಹದಾದಿಗಳನ್ನು) ಪಕ್ಷವನ್ನಾಗಿ ಸಂಗ್ರಹಿಸಿ (ಲಕ್ಷಣಾವೃತ್ತಿಯಿಂದ) "ಮಹದಾದಿ ಕಾರ್ಯಂ" ಇತ್ಯಾದಿಯಾದ ಪ್ರಥಮಪ್ರಯೋಗವು, ಹೀಗೆ ತಿಳಿದು ಬರುತ್ತದೆಯೆಂದು ತಿಳಿಯಬೇಕು

ಸ್ವತಂತ್ರವಾದ ಪ್ರಕೃತಿಯು ಕರ್ತೃತ್ವವನ್ನು ಸಾಕ್ಷಾತ್ತಾಗಿ ವಿರೋಧಿಸುವ ಅನುಮಾನವನ್ನು ತಾವೇ ಸ್ವತಃ "ಉಪಲಕ್ಷಣಂಚೈತತ್" ಇತ್ಯಾದಿವಚನಗಳಿಂದ ಹೇಳುತ್ತಾರೆ "ಇತ್ಯಾದ್ಯಪಿ" = ಇಲ್ಲಿ "ಆದಿ" ಪದದಿಂದ "ಮಹದಾದಿಗಳಿಗೆ ಸ್ವತಂತ್ರಕಾರಣವು, ಚೇತನರೂಪವಾದುದು ಏಕೆಂದರೆ ಸ್ವತಂತ್ರವಾಗಿರುತ್ತದೆ ಇದರಲ್ಲಿ ಪಟದ ಸ್ವತಂತ್ರಕಾರಣವು ದೃಷ್ಟಾಂತವು' ಹೀಗಿರುವ ಅನುಮಾನಗಳನ್ನು ಸಂಗ್ರಹಿಸಿದ್ದಾಗಿದೆ

"ಈಶ್ವರ ಏವ ಸಿಧ್ಯತಿ"= ಇನ್ನು ಹೀಗೆ ಹೇಳಿದರೆ "ಶಾಸ್ತ್ರಯೋನಿತ್ವಾತ್' ಎಂಬ ಸೂತ್ರದಿಂದ ವಿರೋಧವು ಬರುತ್ತದೆ ಏಕೆಂದರೆ ಜಗತ್ಕಾರಣವಸ್ತುವು ಅನುಮಾನದಿಂದ ತಿಳಿಯಲ್ಪಡಲಾರದೆಂದೂ ಕೇವಲ ಶಾಸ್ತ್ರಗಮ್ಯವೆಂದೂ ಹೇಳಿದ್ದಾರೆ ಮತ್ತು ಅದೃಷ್ಟದ ಮುಖಾಂತರದಿಂದ ಜೀವರುಗಳನ್ನು ಸಂಗ್ರಹಿಸಿ,

स्यादेतत् । महदादिकं न तावत्प्रत्यक्षसिद्धम् । अव्यक्तत्वात् । अतः साङ्ख्याचार्यवचनात्तत्प्रयुक्तानुमानाद्वा तदवगमोऽभ्युपगन्तव्यः । तैश्चानेवंविधमेव तदुक्तमनुमितं चेति बाधः । अन्यथाऽऽश्रयासिद्धिरिति । मैवम् । वेदतस्तदवगमात् । उक्तं हीदमजामेकामित्यादिश्रुतिः

— ಪದಾರ್ಥದೀಪಿಕಾ —

ಇದು ಇರಲಿ ! ಮಹದಾದಿಗಳಂತೂ ಪ್ರತ್ಯಕ್ಷದಿಂದ ಸಿದ್ಧಿಸಿಲ್ಲ ಏಕೆಂದರೆ ಅವು ಅವ್ಯಕ್ತವಾಗಿವೆ ಆದುದರಿಂದ ಸಾಂಖ್ಯಾಚಾರ್ಯರ ವಚನದಿಂದ ಅಥವಾ ಅವರು ಪ್ರಯೋಗಿಸಿದ ಅನುಮಾನದಿಂದ ಆ ಮಹದಾದಿಗಳ ಜ್ಞಾನವು ಆಗುತ್ತದೆ ಯೆಂದು ಒಪ್ಪಬೇಕು ಆ ಸಾಂಖ್ಯಾಚಾರ್ಯರಾದರೋ ಇದರ ವಿಪರೀತ ವಾಗಿಯೇ ಅದನ್ನು ಹೇಳಿರುವರು ಹಾಗು ಯುಕ್ತಿಯಿಂದ ತಿಳಿಸಿರುವರು ಆದು ದರಿಂದ ಬಾಧವು ಬರುತ್ತದೆ ಇಲ್ಲದಿದ್ದಲ್ಲಿ ಪಕ್ಷದ (ಆಶ್ರಯದ) ಅಸಿದ್ಧಿಯು ! ಹೀಗೆ ಆಶಂಕೆಯು ಯುಕ್ತವಲ್ಲ ಏಕೆಂದರೆ- ವೇದದಿಂದ ಆ ಮಹದಾದಿಪಕ್ಷದ ಜ್ಞಾನವಾಗುತ್ತದೆ ಏಕೆಂದರೆ " ಅಜಾಮೇಕಾಂ " ಇತ್ಯಾದಿಯಾದ ಶ್ರುತಿಯು

ವಿಶೇಷಾರ್ಥಪ್ರದೀಪಿಕಾ —

ಹೇಳಿದ ಈ ಯುಕ್ತಿಗಳು ಸರಿಯೆನಿಸುವವೆಂದು ಹೇಳುವುದು ಸಮಂಜಸವಲ್ಲ ಏಕೆಂದರೆ ಅಲ್ಲಿ (ಶಾಸ್ತ್ರಯೋನಿತ್ವಾಧಿಕರಣದಲ್ಲಿ) ಕೇವಲ (ಆಗಮೋಪಜೀವಿಯಾಗದ ಸ್ವತಂತ್ರ) ಅನುಮಾನದಿಂದ ಜಗತ್ಕಾರಣವು ತಿಳಿಯಲ್ಪಡುವುದಿಲ್ಲವೆಂಬುದನ್ನಷ್ಟೇ ಹೇಳಲಾಗಿದೆ ಆದರೆ ಶ್ರುತಿಗಳಿಂದ ಕೂಡಿದ (ಶೃತಿಸಹಾಯ ಪಡೆದ) ಅನುಮಾನಗಳಿಂದ ಜಗತ್ಕಾರಣವು ಸಿದ್ಧಿಸುವುದಿಲ್ಲವೆಂದು ಹೇಳಲಿಲ್ಲ ಶ್ರುತಿಗಳಾದರೋ ಮುಂದೆ ವಿಶದವಾಗಿ ನಿರೂಪಿಸಲ್ಪಟ್ಟಿವೆ ಶ್ರುತಿಯಲ್ಲಿ ಅತ್ಯಾದರವನ್ನು ತೋರಿಸಿದ ಹೇತುವಾದಿಯನ್ನು ಕುರಿತು ಅನುಮಾನವನ್ನೇ ಆದಿಯಲ್ಲಿ ಹೇಳಲಾಗಿದೆಯೆಂಬ ತಾತ್ಪರ್ಯವಿರುತ್ತದೆ

"ತತ್ಪ್ರಯುಕ್ತಾನುಮಾನಾದ್ವಾ" - "ಕಾರ್ಯಕಾರಣವಿಭಾಗಾದಿಸಿದ್ಧಂ" ಎಂಬುದಾಗಿ ಹೇಳಿದ ಕಾರ್ಯಕಾರಣ ವಿಭಾಗ ಮುಂತಾದ ರೂಪಯುಕ್ತಿಗಳಿಂದ 'ತತ್" = ಮಹತ್ತತ್ವ ಮುಂತಾದುದು

ಜಗದುಪಾದಾನಪರವಾದ ಶ್ರುತಿಗಳನ್ನು ಪರರು ಅವಿದ್ಯಾದಿಪರವಾಗಿ ವ್ಯಾಖ್ಯಾನಿಸಿರುತ್ತಾರೆ ಸಿದ್ಧಾಂತದಲ್ಲಿಯಾದರೋ ಬ್ರಹ್ಮಪರವಾಗಿ ವ್ಯಾಖ್ಯಾನಿಸಲಾಗಿದೆ ಏಕೆಂದರೆ ಹಿಂದಿನ ಅಧ್ಯಾಯದಲ್ಲಿ ಆನುಮಾನಿಕ ಪಾದದಲ್ಲಿ "ಅಜಾಮೇಕಾಂ" ಈ ಮುಂತಾದ ಸ್ತ್ರೀಲಿಂಗಶಬ್ದಗಳನ್ನು ಬ್ರಹ್ಮನಿಷ್ಠವಾಗಿ

प्रधानमपि प्रतिपादयतीति । ननु पुरुषश्चेतनो नान्तःकरणम् । इच्छा चान्तःकरणधर्मो न चेतनस्याविकारस्य । अतोऽप्रसिद्धविशेषणता बाधो वा । पटादेरप्येवम्भावाभावात् दृष्टान्तस्य साध्यवैकल्यं चेति चेन्न । आत्मन एवेच्छावत्त्वस्य वक्ष्यमाणत्वात् । तथाऽप्युद्भवो नामोत्पत्तिरभिव्यक्तिर्वा । नाद्यः । प्रथमप्रयोगेऽप्रसिद्धविशेषणत्वात् ।

— ಪದಾರ್ಥದೀಪಿಕಾ —

ಪ್ರಧಾನವನ್ನೂ ಪ್ರತಿಪಾದಿಸುತ್ತದಯೆಂದು ಹೇಳಿಯೇ ಆಗಿದೆ ಪುರುಷನು ಚೇತನನು, ಹೊರತು ಅಂತಃಕರಣರೂಪನಲ್ಲ ಇಚ್ಛೆಯಾದರೋ ಅಂತಃಕರಣದ ಧರ್ಮವೇ ವಿನಾನಿರ್ವಿಕಾರನಾದ ಚೇತನನ ಧರ್ಮವಲ್ಲ ಆದುದರಿಂದ ಸಾಧ್ಯದ ಅಪ್ರಸಿದ್ಧಿ ಇಲ್ಲವೆ ಬಾಧವು ಬರುತ್ತದೆ ಮತ್ತು ಪಟ ಮುಂತಾದವುಗಳಿಗೂ ಇಂಥ ಪರಿಸ್ಥಿತಿಯು (ಚೇತನನ ಇಚ್ಛೆಯ ಅಧೀನವಾದ ಉತ್ಪತ್ತಿಯುಳ್ಳದ್ದಾಗಿರುವುದು) ಇಲ್ಲವಾದುದರಿಂದ ದೃಷ್ಟಾಂತಕ್ಕೆ ಸಾಧ್ಯವೈಕಲ್ಯವೆಂಬ ದೋಷವೂ ಬರುತ್ತದ ಹೀಗೆ ಶಂಕಿಸುವುದು ಸರಿಯಲ್ಲ ಏಕೆಂದರೆ ಆತ್ಮನಿಗೇ ಇಚ್ಛೆಯಿರುವುದೆಂಬ ಸಂಗತಿಯನ್ನು ಮುಂದೆ ಹೇಳಲಾಗುವದು

ಆದರೂ ಉದ್ಭವವೆಂದರೇನು ? ಉತ್ಪತ್ತಿಯೋ ? ಅಭಿವ್ಯಕ್ತಿಯೋ ? ಮೊದಲನೆಯ ಪಕ್ಷವು ಯುಕ್ತವಲ್ಲ ಏಕೆಂದರೆ ಮೊದಲನೆಯ ಪ್ರಯೋಗದಲ್ಲಿ

— ವಿಶೇಷಾರ್ಥಪ್ರದೀಪಿಕಾ —

ಪ್ರಕೃತ್ಯಧಿಕರಣದಲ್ಲಿ ವ್ಯಾಖ್ಯಾನಿಸಲಾಗಿದೆ ಆದುದರಿಂದ, ವೇದದಿಂದ ಅದರ (ಪ್ರಕೃತಿಯ) ಸಿದ್ಧಿಯು ಹೇಗೆ? ಈ ಆಶಂಕೆಯನ್ನು "ಉಕ್ತಂ ಹಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರ "ಅಜಾಮೇಕಾಂ ಇತಿ ಪ್ರಾಹ ಶ್ರುತಿರೇತಾಂ ಯದಾ ತದಾ॥ ಕೋ ದೋಷಃ" ಇತ್ಯಾದಿ ಪದ್ಯಗಳಿಂದ ಅನುವ್ಯಾಖ್ಯಾನದಲ್ಲಿ ಹೇಳಲಾಗಿದೆಯೆಂದು ತಿಳಿಯಬೇಕು 'ವೇದತಃ' ಎಂಬುದು "ಪಂಚಭಿಃ ಪಂಚಭಿರ್ಬ್ರಹ್ಮ ಈ ಮುಂತಾದ ವಚನಗಳಿಂದಲೂ ಮಹದಾದಿಗಳ ಸಿದ್ಧಿಯಾಗುತ್ತದೆಯೆಂದು ತಿಳಿಯಬೇಕು. ಅಥವಾ "ಮಹತಃ' ಪರಮವ್ಯಕ್ತಂ' ಇತ್ಯಾದಿ ಶ್ರುತಿಯಿಂದ ಮಹದಾದಿ ಸಿದ್ಧಿಯೆಂದು ತಿಳಿಯಬೇಕು

"ವಕ್ಷ್ಯಮಾಣತ್ವಾತ್" ="ಇಚ್ಛಾಮ್ಯಹಮಿತಿ ಹ್ಯೇವ" ಇತ್ಯಾದಿ ಗ್ರಂಥದಿಂದ ಇದೇ ಅಧಿಕರಣದಲ್ಲಿ ಹೇಳುವರು, ಹೀಗೆ ತಿಳಿಯಬೇಕು "ಅಪ್ರಸಿದ್ಧವಿಶೇಷಣತ್ವಾತ್" - ಸತ್ಕಾರ್ಯವಾದಿಯು, ಅಸತ್ಯಕ್ಕೆ (ಇಲ್ಲದುದಕ್ಕೆ) ಸತ್ತಾಸಂಬಂಧ

दृष्टान्तस्य साध्यविकलत्वाच्च । द्वितीये चाश्रयासिद्धेः । मया सत्कार्य-वादस्याभ्युपगतत्वात् । द्वितीयेऽप्येत एव दोषाः । त्वया व्यक्त्य-नभ्युपगमादिति चेन्न । असत्कार्यवादस्य साधितत्वात् । सत्कार्यवादे

— ಪದಾರ್ಥದೀಪಿಕಾ —

ಸಾಧ್ಯವು ಅಪ್ರಸಿದ್ಧವಾಗುತ್ತದೆ ಮತ್ತು ದೃಷ್ಟಾಂತವು ಸಾಧ್ಯವಿಹೀನವೂ ಆಗುತ್ತದೆ ಎರಡನೆಯ ಪಕ್ಷದಲ್ಲಿಯಾದರೋ ಆಶ್ರಯದ (ಪಕ್ಷದ) ಅಪ್ರಸಿದ್ಧಿಯಾಗುತ್ತದೆ ಏಕೆಂದರೆ ನಾನು ಅಸತ್ಕಾರ್ಯವಾದವನ್ನು ಅಂಗೀಕರಿಸಿದ್ದೇನೆ ಎರಡನೆಯ ಕಲ್ಪದಲ್ಲಿಯೂ ಇವೇ ದೋಷಗಳೇ! ನೀನು ಅಭಿವ್ಯಕ್ತಿಯನ್ನು ಅಂಗೀಕರಿಸಿಲ್ಲವೆಂದು ಶಂಕಿಸಬಾರದು ಏಕೆಂದರ– ಅಸತ್ಕಾರ್ಯವಾದವನ್ನು ಸಾಧಿಸಿದ್ದಾಗಿದೆ ಮತ್ತು ಸತ್ಕಾರ್ಯವಾದದ ಒಗ್ಗೆ ಪ್ರಮಾಣವೂ ಇರುವುದಿಲ್ಲ "ಅಸದ

— ವಿಶೇಷಾರ್ಥಪ್ರದೀಪಿಕಾ —

ವೆಂಬ ಉತ್ಪತ್ತಿಯನ್ನು ಅಂಗೀಕರಿಸಿಲ್ಲ ಆದುದರಿಂದ ಸಾಧ್ಯದ ಅಪ್ರಸಿದ್ಧಿಯು, "ದ್ವಿತೀಯೇ ಚ" ಇಲ್ಲಿ "ಪ್ರಯೋಗೇ" ಎಂಬುದನ್ನು ಹಚ್ಚಿಕೊಳ್ಳಬೇಕು ಮಹದಾದಿಗಳ ಉದ್ಭವವನ್ನು ಪಕ್ಷವಾಗಿಟ್ಟುಕೊಂಡು ಹೊರಟ ಅನುಮಾನ ಪ್ರಯೋಗದಲ್ಲಿ ಮಹದಾದಿಗಳ ಉದ್ಭವವು, ಚೇತನನ ಇಚ್ಛಾಧೀನವಾದುದು. ಏಕಂದರೆ – ಉದ್ಭವವಾಗಿದ ಇದರಲ್ಲಿ ಪಟದ ಉದ್ಭವವು ದೃಷ್ಟಾಂತವು "ಆಶ್ರಯಾಸಿದ್ಧೇಃ" = ಪಕ್ಷದ ಅಸಿದ್ಧಿಯು, ಹಾಗು ದೃಷ್ಟಾಂತದ ಅಸಿದ್ಧಿಯು ಹೀಗ ಅರ್ಥ ಸಾಧ್ಯದ ಅಪ್ರಸಿದ್ಧಿ, ದೃಷ್ಟಾಂತದಲ್ಲಿ ಸಾಧ್ಯದ ಇಲ್ಲದಿರುವಿಕೆ, ಪಕ್ಷದ ಅಪ್ರಸಿದ್ಧಿ, ಇವುಗಳ ಕಾರಣವನ್ನು ಒಂದೇ ಸಲ "ಮಯಾ" ಇತ್ಯಾದಿ ವಚನದಿಂದ ಹೇಳುತ್ತಾರ ಆದುದರಿಂದ ಅಸತ್ತಿಗೆ ಸತ್ತಾಸಂಬಂಧವೆಂಬ ಅಥವಾ ಪರಿಣಾರೂಪವಾದ ಇಲ್ಲವೆ ಮೊದಲು ಇಲ್ಲದ ಅವಸ್ಥಾಂತರವು ಬರುವುದೆಂಬ ಉತ್ಪತ್ತಿಯು ಎಲ್ಲಿಯೂ ಇಲ್ಲವೇ ಇಲ್ಲ ಆದುದರಿಂದ ಈ ದೋಷಗಳು ಬರುತ್ತವೆಯೆಂದು ಭಾವವು

"ದ್ವಿತೀಯೇಽಪಿ" –ಅಭಿವ್ಯಕ್ತಿಯೆಂಬ ಎರಡನೆಯ ಪಕ್ಷದಲ್ಲಿಯೂ "ವ್ಯಕ್ತ್ಯನಭ್ಯುಪಗಮಾತ್" –ಪೂರ್ವದಲ್ಲಿ ಇರುವುದೇ ಆದ ಕಾರ್ಯದ (ಘಟಾದಿಗಳ) ಕುಲಾಲಮುಂತಾದವರ ವ್ಯಾಪಾರದಿಂದ ಅಭಿವ್ಯಕ್ತಿಯೆಂಬ ಉತ್ಪತ್ತಿಯನ್ನು ಅಂಗೀಕರಿಸಿಲ್ಲ ಹೀಗೆ ಭಾವ "ಸಾಧಿತತ್ವಾತ್" – 'ಅಸದ್ ಯತ್ ಕಾರ್ಯರೂಪೇಣ ಕಾರಣಾತ್ಮತಯಾಽಸ್ತಿ ಹಿ" ಇತ್ಯಾದಿ ವಾಕ್ಯಗಳಿಂದ, ತದನನ್ಯತ್ವಾಧಿಕರಣದಲ್ಲಿ ಸಾಧನಮಾಡಿದ್ದಾಗಿದೆಯೆಂದು ತಿಳಿಯಬೇಕು

ಸತ್ಕಾರ್ಯವಾದದ ಬಗ್ಗ, 'ಅಸದಕರಣಾತ್" ಇತ್ಯಾದಿ ವಚನದಿಂದ ಹೇಳಿದ

प्रमाणाभावाच्च । असदकरणादित्यादिभिश्च किं कार्यस्य प्राक्करणव्यापारात्सत्त्वमात्रं साध्यमुतात्यन्तसत्त्वम् । आद्ये सिद्धसाधनम् । सदसत्त्वाभ्युपगमात् । द्वितीये त्वसदकरणादितिवत्सदकरणादित्यपि समानम् । न हि सन्नात्मा केनचित्क्रियते ॥

नन्वसतः कथं कर्मत्वम् । सतः कथं कार्यत्वमित्यपि समा-

— ಪದಾರ್ಥದೀಪಿಕಾ —

ಕರಣಾತ್" ಇತ್ಯಾದಿ ವಚನಗಳಿಂದ ಕಾರ್ಯಕ್ಕೆ ಕರಣವ್ಯಾಪಾರಕ್ಕಿಂತ ಮುಂಚೆ ಕೇವಲ ಸತ್ವ (ಅಸ್ತಿತ್ವ) ವೇ ಇದೆಯೆಂದು ಸಾಧಿಸುವದೋ ? ಅಥವಾ ಅತ್ಯಂತ ಸತ್ಯತೆಯನ್ನು ಸಾಧಿಸುವುದೋ ? ಮೊದಲನೆಯ ಕಲ್ಪದಲ್ಲಿ ಸಿದ್ಧಸಾಧನವು. ಏಕೆಂದರೆ ಕಾರ್ಯಕ್ಕೆ ಸದಸತ್ಯತೆಯನ್ನು ಅಂಗೀಕರಿಸಲಾಗಿದೆ ಎರಡನೆಯ ಪಕ್ಷದಲ್ಲಿಯಾದರೋ " ಅಸದಕರಣಾತ್ ' ಎಂಬಂತೆ ' ಸದಕರಣಾತ್ " ಎಂಬುದಾಗಿಯೂ ಸಮಾನವಾಗುತ್ತದೆ ಏಕೆಂದರ ಸತ್ಯನಾದ ಆತ್ಮನನ್ನು ಯಾರೂ ಉಂಟುಮಾಡುವದಿಲ್ಲ

ಇನ್ನು- ಅಸತ್ಯಕ್ಕೆ (ಇಲ್ಲದಿರುವುದಕ್ಕೆ) " ಘಟಂ ಕರೋತಿ " ಎಂಬಲ್ಲಿ ಕರ್ಮತ್ವವು ಹೇಗೆ ? ಎಂದರ- ಸತ್ಯಕ್ಕಾದರೋ ಕಾರ್ಯತ್ವವು ಹೇಗೆ ? ಎಂಬ

— ವಿಶೇಷಾರ್ಥಪ್ರದೀಪಿಕಾ —

ಯುಕ್ತಿಗಳೇ ಪ್ರಮಾಣವೆಂದು ಹೇಳಿದರೆ ಈ ಆಶಂಕೆಯನ್ನು "ಅಸದಕರಣಾತ್" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ

' ಸದಸತ್ವಾಭ್ಯುಪಗಮಾತ್" –"ಅಸದ್ಯತ್ ಕಾರ್ಯರೂಪೇಣ" ಇತ್ಯಾದಿ ಗ್ರಂಥದಿಂದ, ಸದಸತ್ಕಾರ್ಯವಾದವನ್ನು ಸಮರ್ಥಿಸಿದ್ದಾಗಿದೆಯೆಂದು ತಿಳಿಯಬೇಕು

'ಸದಕರಣಾದಿತ ಪಿ ಸಮಾನಮ್" –ಇದರಿಂದ, "ಕಾರ್ಯವು, ಪೂರ್ವದಲ್ಲಿ ಸತ್ಯ (ಇದ್ದದ್ದು) ಏಕೆಂದರೆ ಅಸತ್ತಿಗೆ ಕ್ರಿಯೆ(ಕರಣ,ಯಿಲ್ಲ" ಈ ಅನುಮಾನಕ್ಕೆ "ಕಾರ್ಯವು ಪೂರ್ವದಲ್ಲಿ ಅಸತ್ಯವು ಏಕೆಂದರೆ –ಸತ್ಯಕ್ಕೆ ಕ್ರಿಯೆಯಿಲ್ಲ" ಎಂಬ ಪ್ರತಿಪಕ್ಷಾನುಮಾನವು ಹೇಳಲ್ಪಟ್ಟದ್ದಾಗುತ್ತದೆ ಇದರ ಬಗ್ಗೆ ವ್ಯಾಪ್ತಿಯನ್ನು "ನಹಿ" ಇತ್ಯಾದಿ ವಾಕ್ಯದಿಂಧ ಹೇಳುತ್ತಾರೆ

"ಕರ್ಮತ್ವಂ,,= ಕರ್ತೃವಿನ ಯತ್ನಕ್ಕೆ ವಿಷಯವಾಗಿರುವುದು ಇದರಿಂದ 'ಕಾರ್ಯತ್ವ"ದ ಅರ್ಥವೂ ಹೇಳಿದ್ದಾಗಿದೆ "ಘಟವು ಹುಟ್ಟುತ್ತದೆ" ಎಂಬ ಪ್ರಯೋಗವು, ಸತ್ಕಾರ್ಯವಾದದ ವಿಷಯದಲ್ಲಿ ಪ್ರಮಾಣವಾಗುತ್ತದೆ ಏಕೆಂದರೆ

नम् । अनेन घटो जायत इत्यपि प्रत्युक्तम् । तर्हि घटं करोतीत्यादेः कोऽर्थः । मृत्तिकां घटी करोतीति । मृत्तिका घटी भवतीति । असदुत्पत्तौ खरविषाणमपि कुतो नोत्पद्यत इति चेन्न । तदात्मकस्योपादानस्याभावादिति ब्रूमः । अन्यथा सत उत्पत्तावात्माऽपि कुतो नोत्पद्यत इति समानम् । यदपि कार्येण कारणं सम्बद्धं तदुपजनयत्युतासम्ब-

— ಪದಾರ್ಥದೀಪಿಕಾ —

ಪ್ರಶ್ನೆಯು ಸಮಾನವಾಗುತ್ತದೆ ಇದರಿಂದ " ಘಟೋ ಜಾಯತೇ " ಎಂಬ ಪ್ರತೀತಿಯನ್ನೂ ನಿರಾಕರಿಸಿದ್ದಾಯಿತು ಹಾಗಾದಲ್ಲಿ "ಘಟಂ ಕರೋತಿ' ಎಂಬಲ್ಲಿ ಅರ್ಥವೇನು ? ಮೃತ್ತಿಕೆಯನ್ನು ಘಟವನ್ನಾಗಿ ಮಾಡುತ್ತಾನೆ ಮೃತ್ತಿಕೆಯು ಘಟವಾಗುತ್ತದೆ, ಎಂದು ಇವುಗಳಿಗೆಲ್ಲ ಅರ್ಥ ಅಸತ್ತಿಗೆ ಉತ್ಪತ್ತಿಯಾದರೆ- ಖರವಿಷಾಣವೂ (ಕತ್ತೆಯ ಕೋಡು) ಏಕೆ ಉತ್ಪನ್ನವಾಗಬಾರದು ? ಹೀಗೆ ಪ್ರಶ್ನಿಸಿದರೆ- ಖರವಿಷಾಣರೂಪಪರಿಣಾಮ ಹೊಂದುವ ಉಪಾದಾನವಿರುವುದಿಲ್ಲ ವೆಂಬ ಉತ್ತರವನ್ನು ಹೇಳುತ್ತೇವೆ ಇಲ್ಲದಿದ್ದಲ್ಲಿ ಸತ್ಯಕ್ಕೆ ಉತ್ಪತ್ತಿಯಾದಲ್ಲಿ ಆತ್ಮನೂ ಏಕೆ ಉತ್ಪನ್ನನಾಗಲಾರನೆಂಬ ಪ್ರಶ್ನೆಯು ಸಮಾನವಾಗುತ್ತದೆ ಇನ್ನು ಕಾರಣವು ಕಾರ್ಯದೊಡನೆ ಸಂಬದ್ಧವಾಗಿ ಕಾರ್ಯವನ್ನು ಹುಟ್ಟಿಸುವದೋ ? ಅಸಂಬದ್ಧವಾಗಿ ಕಾರ್ಯವನ್ನು ಹುಟ್ಟಿಸುವದೋ? ಎಂಬುದಾಗಿ ಪ್ರಶ್ನಿಸಲಾಗಿತ್ತು

— ವಿಶೇಷಾರ್ಥಪ್ರದೀಪಿಕಾ —

ಕ್ರಿಯೆಯು ಸ್ವಾತಂತ್ರ್ಯವೆಂಬ ಕರ್ತೃತ್ವವು ಅಸತ್ಯಕ್ಕೆ ಸಮಂಜಸವಲ್ಲ, ಹೀಗೆ ಸಾಂಖ್ಯಗ್ರಂಥದಲ್ಲಿ ಹೇಳಿದೆ ಅತಿದೇಶದಿಂದ, ಅವರ ಈ ಅಭಿಪ್ರಾಯವನ್ನು "ಅನೇನ" ಈ ವಾಕ್ಯದಿಂದ ನಿರಾಕರಿಸುತ್ತಾರೆ ಸತ್ಯಕ್ಕೆ ಕಾರ್ಯತ್ವವು ಹೇಗೆ? ಎಂಬುದಾಗಿ ಹೇಳಿದುದರಿಂದ "ಇತ್ಯಾದೇ' —"ಘಟಃ ಭವತಿ, ಜಾಯತೇ" (ಘಟವು ಹುಟ್ಟುತ್ತದೆ ಆಗುತ್ತದೆ ) ಈ ಮುಂತಾದ ಪ್ರಯೋಗಗಳನ್ನು ಪರಿಗ್ರಹಿಸಲಾಗಿದೆ "ಘಟತ್ವರೂಪದಿಂದ ಇಲ್ಲದಿದ್ದುದನ್ನು ಘಟತ್ವವುಳ್ಳದನ್ನಾಗಿ ಮಾಡುತ್ತಾನೆ " ಹೀಗೆ " ಘಟಂ ಕರೋತಿ " ಎಂಬಲ್ಲಿ ಅರ್ಥ " ಘಟವಾಗದಿದ್ದುದು, ಘಟವಾಗಿ ಸಂಪನ್ನವಾಗುತ್ತದೆ" ಎಂಬುದಾಗಿ "ಘಟೀಭವತಿ" ಎಂಬಲ್ಲಿ ಅರ್ಥ

ಯಾವದೋ ಒಂದು ಉಪಾದಾನವು ಯಾವಾಗಲೂ ಇರುವುದರಿಂದ "ತದಾತ್ಮಕಸ್ಯ" ಎಂಬುದಾಗಿ ಹೇಳಿದ್ದಾರೆ

"ಜನಯತೀತ್ಯೇವ ನೇಷ್ಯತೇ" —ಮೃತ್ತಿಕೆಗೆ, ಘಟಾತ್ಮಕವಾಗಿ ಪರಿಣಾಮ ಹೊಂದುವ ಶಕ್ತಿಯು ಇರುವುದರಿಂದ, ಶಕ್ತಿರೂಪ ಕಾರಣತ್ವವೂ ಅದನ್ನು ತಿಳಿಸಿ

द्धमेवेति पृष्टम् । तत्र कारणशब्देनोपादानं वा विवक्षितं निमित्तं वा । आद्ये जनयतीत्येव नेष्यते । किन्तु निमित्तकारणानि तत्कार्यतां नयन्ति । द्वितीये तु कार्याकारेणासम्बद्धं कारणाकारेण सम्बद्धमित्युत्तरम् । अत एव नातिप्रसङ्गः । शक्तिश्च कारणानां सदसद्विषया । अन्यथा निर्विषयत्वापातात् । न हि सत्कर्तुं शक्यं भवति ।

— ಪದಾರ್ಥ ದೀಪಿಕಾ —

ಇಲ್ಲಿ ಕಾರಣ ಶಬ್ದಕ್ಕೆ ಉಪಾದಾನಕಾರಣವೆಂಬ ಅರ್ಥವು ಅಭಿಪ್ರೇತವೋ? ನಿಮಿತ್ತಕಾರಣವೆಂಬ ಅರ್ಥವು ಅಭಿಪ್ರೇತವೋ? ಹೀಗೆ ಪ್ರಶ್ನೆ ಮೊದಲನೆಯ ಕಲ್ಪದಲ್ಲಿ ಹುಟ್ಟಿಸುತ್ತದೆಯೆಂಬುದನ್ನೇ ಒಪ್ಪುವುದಿಲ್ಲ ಆದರೆ ನಿಮಿತ್ತಕಾರಣಗಳು, ಆ ಉಪಾದಾನವನ್ನು ಕಾರ್ಯವನ್ನಾಗಿ ಮಾಡುತ್ತವೆ ಎರಡನೆಯ ಪಕ್ಷದಲ್ಲಿಯಾದರೋ ಕಾರ್ಯಾಕಾರದಿಂದ ಸಂಬಂಧಹೊಂದದೆಯೇ ( ಅಸಂಬಧ್ಧವಾಗಿಯೂ ) ಕಾರಣಾಕಾರದಿಂದ ಸಂಬಂಧಹೊಂದಿದುದಾಗಿ ಕಾರ್ಯವನ್ನು ಹುಟ್ಟಿಸುತ್ತದೆಯೆಂದು ಉತ್ತರವನ್ನು ಹೇಳುತ್ತೇವೆ ಆದುದರಿಂದಲೇ ಅತಿಪ್ರಸಂಗವಿಲ್ಲ ಕಾರಣಗಳ ಶಕ್ತಿಯಾದರೋ ಸದಸತ್ಯವಾದುದನ್ನು ವಿಷಯೀಕರಿಸುತ್ತದೆ ಇಲ್ಲದಿದ್ದಲ್ಲಿ ಆ ಶಕ್ತಿಗೆ ವಿಷಯುವೇ ಇಲ್ಲವಾಗುವದು ಏಕೆಂದರೆ ಸತ್ಯವನ್ನು ಉಂಟುಮಾಡಲು ಶಕ್ಯವಿಲ್ಲ

— ವಿಶೇಷಾರ್ಥ ಪ್ರದೀಪಿಕಾ —

ಕೊಡುವ ಅನನ್ಯಥಾಸಿದ್ಧ ನಿಯತಪೂರ್ವವೃತ್ತಿತ್ವವೂ ಇರುತ್ತದೆ, ಆದರೂ ಅವಸ್ಥಾಂತರತೆಯು (ಸ್ಥಿತ್ಯಂತರತ್ವ)ಬರುವಿಕೆಯೆಂಬ ಜನನವನ್ನು ಕುರಿತು ಕರ್ತೃತ್ವವು ಮೃತ್ತಿಕೆಗೆ ಇರುವುದಿಲ್ಲ ಏಕೆಂದರೆ ಮಣ್ಣಿಗೆ ಘಟಾತ್ಮಕ ಅವಸ್ಥಾಂತರವನ್ನು ಹೊಂದುವದರಿಂದ " ಕರ್ಮತ್ವವು ಬರುವದು. ಅದು ಕರ್ತೃವಾಗಲಾರದು ಹೀಗೆ ಭಾವ " ದ್ವಿತೀಯೇ " =ನಿಮಿತ್ತಕಾರಣವೆಂಬ ಎರಡನೆಯ ಪಕ್ಷದಲ್ಲಿ 'ಅತಏವ" =ಕಾರಣಸ್ವರೂಪದಿಂದ ಸಂಬದ್ಧವಾಗಿಯೇ ಕಾರ್ಯವನ್ನು ಹುಟ್ಟಿಸುವುದದೆಂದು ಹೇಳಿದುದರಿಂದಲೇ ! ಸಂಬಂಧವಿಲ್ಲದೆ ಹುಟ್ಟಿಸುತ್ತದೆಯೆಂಬ ಪಕ್ಷದಲ್ಲಿ ಹೇಳಿದ ದೋಷಗಳು ಅನ್ವಯಿಸುವುದಿಲ್ಲವೆಂದು ಭಾವವು

''ಶಕ್ತಸ್ಯ ಶಕ್ಯಕರಣಾತ್' ಎಂಬುದಾಗಿ ಹಿಂದೆ ಹೇಳಿದ ಯುಕ್ತಿಯನ್ನು "ಶಕ್ತಿಶ್ಚ" ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಾರೆ ಕಾರಣಾತ್ಮಕವಾಗಿ ಇರುವ ( ಸತ್ಯವಾದ) ಕಾರ್ಯಾತ್ಮಕವಾಗಿ ಅಸತ್ಯವಾದುದನ್ನು ( ಇಲ್ಲದಿರುವಂತಹವನ್ನು ) ವಿಷಯೀಕರಿಸುತ್ತದೆ. ಹೀಗೆ ಅರ್ಥ ಇದು ಏಕೆಂದರೆ "ಅಸತ್ತು

यच्च तन्तुपटयोरभेदानुमानं तत्राभेदमात्रसाधने सिद्धसाध (नम् । भे) नत्वम् । भेदाभेदाङ्गीकारात् अत्यन्ताभेदसाधने तन्तुधर्मत्वं तावदसिद्धम् । न हि स्वयमेव स्वस्य धर्मो भवति । न ह्युपचारोऽनुमानप्रवृत्तेरङ्गम् । अतिप्रसङ्गात् । कथं च तन्तुधर्मत्वं पटस्य ।

— ಪದಾರ್ಥದೀಪಿಕಾ —

ಇನ್ನು ತಂತು ಪಟಗಳ ಅಭೇದಾನುಮಾನವು ಯಾವುದೋ ಅದರಲ್ಲಿ ಕೇವಲ ಅಭೇದವನ್ನಷ್ಟೇ ಸಾಧನಮಾಡಿದರೆ ಸಿದ್ಧಸಾಧನವು. ಏಕೆಂದರೆ ಕಾರ್ಯ ಕಾರಣಗಳಿಗೆ ಭೇದಾಭೇದವನ್ನು ನಾವು ಒಪ್ಪಿದ್ದೇವೆ. ಅತ್ಯಂತ ಅಭೇದವು ಸಾಧ್ಯವೆಂದು ಹೇಳಿದರೆ ತಂತುಧರ್ಮವಾಗಿರುವುದೆಂಬ ಹೇತುವು ಅಸಿದ್ಧವೇ ಆಗುವದು ! ಏಕೆಂದರ ತಾನೇ ತನಗೆ ಧರ್ಮವಾಗುವುದಿಲ್ಲ ಹಾಗು ಉಪಚಾರವು ಅನುಮಾನ ಪ್ರವೃತ್ತಿಯ ಕಾರಣವಾಗುವುದಿಲ್ಲ ಏಕೆಂದರೆ ಅತಿಪ್ರಸಂಗವು ಬರುತ್ತದೆ ಮತ್ತು ಪಟವು ತಂತುವಿನ ಧರ್ಮವಾದರೂ ಹೇಗೆ

— ವಿಶೇಷಾರ್ಥಪ್ರದೀಪಿಕಾ —

ಶಕ್ತಿಗೆ ವಿಷಯವಾಗುವುದಿಲ್ಲವೆಂದು ಪರನು ಒಪ್ಪಿರುತ್ತಾನೆ ಆದುದರಿಂದ, ಸತ್ವವು ಶಕ್ತಿಯ ವಿಷಯವಲ್ಲವೆಂಬುದನ್ನಷ್ಟೇ ಇಲ್ಲಿ ''ಸತ್ ಕರ್ತುಂ ನ ಶಕ್ಯಂ ಭವತಿ' ಎಂಬ ವಚನದಿಂದ ವಿಶದಪಡಿಸಿರುತ್ತಾರೆ

''ಯಚ್ಚ ತಂತುಪಟಯೋರಭೇದಾನುಮಾನಂ'' – ಪಟವು ತಂತುಗಳಿಂದ ಭಿನ್ನವಲ್ಲ ಏಕೆಂದರೆ ತಂತುವಿನ ಧರ್ಮವಾಗಿದೆ'' ಎಂಬ ಹಿಂದೆ ಹೇಳಿದ ಅನುಮಾನವು ''ಅತ್ಯಂತಾಭೇದಸಾಧನೇ ಹೇತೋರಸಿದ್ಧಿಃ" ಕಾರ್ಯಕಾರಣಗಳಲ್ಲಿ ಅತ್ಯಂತ ಅಭೇದವನ್ನು ಸಾಧನಮಾಡುವ ಪಕ್ಷದಲ್ಲಿ ಅತ್ಯಂತಅಭೇದವಿದ್ದವುಗಳಲ್ಲಿ ಧರ್ಮಧರ್ಮಿಭಾವವು, ವಿರುದ್ಧವಾದುದರಿಂದ, ಅಂಗೀಕರಿಸಲ್ಪಡುವುದಿಲ್ಲ ಆದುದರಿಂದ ಹೇತುವು ಅನ್ಯತರ ಅಸಿದ್ಧವಾದುದು, ಹೀಗೆ ಭಾವ ಅದನ್ನೇ ''ನಹಿ ಸ್ವಯಮೇವ'' ಈ ವಾಕ್ಯದಿಂದ ವಿಶದಿಸುತ್ತಾರೆ ಇನ್ನು ಪಟವು ಮುಖ್ಯವಾಗಿ ತಂತುವಿನ ಧರ್ಮವಾಗದಿದ್ದರೂ ಗೌಣವಾಗಿ ತಂತುವಿನ ಧರ್ಮವೆನಿಸಬಹುದು- ಆದುದರಿಂದ ಔಪಚಾರಿಕವಾದ ತಂತುಧರ್ಮತ್ವವೆಂಬ ಹೇತುವು ಆಸಿದ್ಧವಲ್ಲವೆಂಬ ಆಕ್ಷೇಪವನ್ನು ''ನ ಹ್ಯುಪಚಾರೋ'' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ''ಅತಿಪ್ರಸಂಗಾತ್'' – ''ಚೈತ್ರನು ಕೇಸರ (ಆಯಾಲು) ಗಳುಳ್ಳವನು, ಏಕೆಂದರೆ ಸಿಂಹನಾಗಿರುತ್ತಾನೆ,'' ಎಂಬ ಅನುಮಾನರೂಪ ಅತಿಪ್ರಸಂಗವು ಹೀಗೆ ಅರ್ಥ ಇನ್ನು ಈ ಅನುಮಾನ

तन्तुविशेषणत्वमिति चेन्न । पुरुषादिविशेषणे दण्डादौ व्यभिचारात् । तदाश्रितत्वमिति चेन्न । अभेदेनासिद्धिप्रसङ्गात् । कुण्डबदरादौ व्यभिचाराच्च । तदात्मकत्वमिति चेन्न । साध्याविशिष्टत्वापत्तेः । अभेदेन भेदाभावः साध्यत इति चेन्न । भेदाभावातिरिक्तस्याभेदस्यानभ्युप-

— ಪದಾರ್ಥದೀಪಿಕಾ —

ಆಗುತ್ತದೆ? ತಂತುವಿನ ವಿಶೇಷಣವೆಂದು ಹೇಳುವುದು ಅಯುಕ್ತವು ಏಕೆಂದರೆ ಪುರುಷಾದಿಗಳ ವಿಶೇಷಣವಾದ ದಂಡ ಮುಂತಾದವುಗಳಲ್ಲಿ ವ್ಯಭಿಚಾರವು ಬರುತ್ತದೆ ತಂತುಗಳಲ್ಲಿ ಆಶ್ರಯಿಸಿರುವುದೆಂಬ ಅರ್ಥವೂ ಸರಿಯಲ್ಲ ಏಕೆಂದರೆ ಅಭೇದವಿದ್ದುದರಿಂದ, ಈ ಹೇತುವು ಅಸಿದ್ಧವಾಗುತ್ತದೆ ಮತ್ತು ಕುಂಡಬದರ ಮುಂತಾದವುಗಳಲ್ಲಿ ಹೇತುವು ಸಾಧ್ಯವನ್ನು ಬಿಟ್ಟದ್ದೂ ಆಗುತ್ತವ ತಂತು ರೂಪ(ತಂತ್ವಾತ್ಮಕ)ವಾಗಿರುವುದೆಂಬ ಅಭಿಪ್ರಾಯವೂ ಸರಿಯಲ್ಲ ಏಕೆಂದರೆ— ಹೇತುಸಾಧ್ಯಗಳಲ್ಲಿ ಐಕ್ಯವು ಬರುತ್ತದೆ ಅಭೇದದಿಂದ ಭೇದವಿಲ್ಲವೆಂಬುದನ್ನು ಸಾಧಿಸುವುದೆಂಬ ಹೇಳಿಕೆಯೂ ಯುಕ್ತವಲ್ಲ ಏಕೆಂದರೆ ಭೇದವಿಲ್ಲದಿರುವುದರಿಂದ

— ವಿಶೇಷಾರ್ಥಪ್ರದೀಪಿಕಾ —

ದಲ್ಲಿ "ಸಿಂಹನಾಗಿರುವುದು" (ಸಿಂಹತ್ವ ಹೇತುವು) ಚೈತ್ರನಲ್ಲಿ ಇಲ್ಲ (ಅಸಿದ್ಧ) ವೆಂದು ಶಂಕಿಸಬಾರದು ಏಕಂದರೆ ಔಪಚಾರಿಕವಾದ (ಗೌಣವಾದ–ಸಿಂಹ ಸದೃಶ ಪರಾಕ್ರಮಾದಿ ಗುಣಮೂಲಕವಾದ ಸಿಂಹತ್ವವು ಅವನಲ್ಲಿ ಇರುತ್ತದೆ ಹೀಗೆ ಇಲ್ಲಿ ಭಾವ

"ತಂತುಧರ್ಮತ್ವ" (ತಂತುಧರ್ಮವಾಗಿರುವುದು) ಎಂಬ ಹೇತುವನ್ನು ನಿರೂಪಿಸಬರುವುದಿಲ್ಲವೆಂಬ ಕಾರಣದಿಂದಲೂ ಆ ಅನುಮಾನವನ್ನು "ಕಥಂ ಚ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ

"ಕುಂಡಬದರಾದೌ" —ಕುಂಡದಲ್ಲಿ ಬದರಗಳು ಆಶ್ರಯ ಹೊಂದಿದ್ದರೂ ಆವೆರಡಕ್ಕೂ ಅಭೇದವಿಲ್ಲ ಆದುದರಿಂದ, ಅತ್ಯಂತ ಅಭೇದವಂಶೂ ದೂರದಿಂದಲೇ ನಿರಸ್ತವಾಯಿತು

"ಅಭೇದೇನ" —"ತಂತುಧರ್ಮತ್ವಾತ್" ಎಂಬುದಕ್ಕೆ "ತಂತುರೂಪ (ತಂತ್ವಾತ್ಮಕ)ವಾಗಿರುವುದರಿಂದ" ಎಂಬುದಾಗಿ ಅರ್ಥವನ್ನು ಹೇಳಿದುದರಿಂದ, ತಂತುಗಳಿಂದ ಪಟಕ್ಕೆ ಅಭೇದವಿರುತ್ತದೆ "ಪಟವು ತಂತುವಿನಿಂದ ಭಿನ್ನವಲ್ಲ, ಏಕೆಂದರೆ ಅಭೇದವಿದೆ" ಹೀಗೆ ಭೇದದ ಅಭಾವವು ಸಾಧ್ಯವೂ ಅಭೇದವು ಹೇತುವೂ ಆಗುವುದರಿಂದ ಹೇತು ಸಾಧ್ಯಗಳಲ್ಲಿ ಐಕ್ಯವಿಲ್ಲವೆಂದು ಇಲ್ಲಿಯ ಭಾವ

गमात् ( परेणेति शेषः ) । अभ्युपगमेऽपि बाधात् । एवमुपादानो-पादेयभावोऽप्यसिद्ध एव । न हि स्वयमेवोपादानमुपादेयं चेति युक्तम् । करणत्वकर्मत्वयोर्भेदनियतत्वात् । संयोगाप्राप्त्यभावश्चा-त्यन्तभेदाभावादुपपत्स्यते । गुरुत्वान्तरकार्यादर्शनं चाभेदाङ्गीकारेण

— ಪದಾರ್ಥದೀಪಿಕಾ —

(ಭೇದಾಭಾವದಿಂದ) ಬೇರೆಯಾದ ಅಭೇದವನ್ನು ಒಪ್ಪಿಲ್ಲ ಒಪ್ಪಿದರೂ ಬಾಧವು ಬರುತ್ತದೆ ಇದರಂತೆ ಉಪಾದಾನಉಪಾದೇಯಭಾವವೂ ಅಸಿದ್ಧವೇ! ಏಕೆಂದರೆ ತನಗೆ ತಾನೇ ಉಪಾದಾನವೂ ಉಪಾದೇಯವೂ ಆಗಿದೆಯೆಂಬುದು ಯುಕ್ತವಲ್ಲ ಏಕೆಂದರೆ ಕರಣತ್ವ ಕರ್ಮತ್ವಗಳು ಭೇದದಿಂದ ನಿಯತಸಂಬಂಧ ಹೊಂದಿದ ವುಗಳು! ಸಂಯೋಗ, ಅಪ್ರಾಪ್ತಿ ಇವುಗಳಿಲ್ಲದಿರುವಿಕೆಯು ಅತ್ಯಂತ ಭೇದವಿ ಲ್ಲದಿರುವುದರಿಂದ ಯುಕ್ತವಾಗುತ್ತದೆ (ಸಂಭವಿಸುತ್ತದೆ) ಬೇರೆ ಗುರುತ್ವದ ಕಾರ್ಯವಾದ ಅವನಮನವಿಶೇಷವು ಕಾಣಿಸದಿರುವುದಾದರೂ ಅಭೇದವನ್ನು

— ವಿಶೇಷಾರ್ಥಪ್ರದೀಪಿಕಾ —

"ಬಾಧಾತ್" – ತಂತುಪಟಗಳಲ್ಲಿ ಭೇದವನ್ನು "ಹ್ಯುಪಾದಾನೇನ ತು ದ್ವಯಂ' ಎಂಬ ವಚನಗಳಿಂದ ಹಿಂದೆ ಸಮರ್ಥಿಸಿದೆ ಹಾಗು ಮುಂದೆಯೂ ಸಮರ್ಥಿಸಲಾಗುವದು ಆದುದರಿಂದ ಆ ಪ್ರಮಾಣಗಳಿಂದಲೂ ಪ್ರತ್ಯಕ್ಷಾದಿಗ ಳಿಂದಲೂ ಭೇದವು ಕಂಡು ಬರುವುದರಿಂದ ಭೇದಾಭಾವವನ್ನು ಸಾಧನ ಮಾಡಿದರೆ "ಬಾಧ" ವು, ಹೀಗೆ ತಿಳಿಯಬೇಕು

ಉಪಾದಾನೋಪಾದೇಯಭಾವವಿದ್ದುದರಿಂದ ಅಭೇದವೆಂದು ಹೇಳಿದುದನ್ನು "ಏವಂ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ 'ಭೇದನಿಯತತ್ವಾನ" — 'ಉಪಾದೀಯತೇ ಅನೇನ ಇತಿ ಉಪಾದಾನಂ" (ಇದರಿಂದ ಸ್ವೀಕರಿಸಲ್ಪಡುವದ ರಿಂದ ಅದು ಉಪಾದಾನವು) ಎಂಬುದಾಗಿ "ಕರಣಾರ್ಥದಲ್ಲಿ ವ್ಯುತ್ಪತ್ತಿಯುಳ್ಳ "ಉಪಾದಾನ" ಶಬ್ದದಿಂದ, ಉಪಾದಾನಕ್ಕೆ ಕರಣತ್ವವೂ "ಉಪಾದಾತುಂ ಯೋಗ್ಯಂ" (ಸ್ವೀಕರಿಸಲು ಯೋಗ್ಯ) ಎಂಬ ಕರ್ಮಾರ್ಥದಲ್ಲಿ ವ್ಯುತ್ಪತ್ತಿಯುಳ್ಳ ಉಪಾದೇಯ ಶಬ್ದದಿಂದ ಕರ್ಮತ್ವವೂ ಲಭಿಸುವದರಿಂದ "ಕರ್ಮತ್ವಕರಣತ್ವಯೋಃ" ಎಂಬುದಾಗಿ ಹೇಳಿದ್ದಾರೆ ಆದುದರಿಂದ, ಅಲ್ಲಿ ಭೇದವು ನಿಯಮದಿಂದ ಇದೆ ಯೆಂದು ಭಾವ ಇದರಿಂದ, "ಬಾಧಾತ್" ಎಂಬುದಾಗಿ ಹಿಂದೆ ಹೇಳಿದುದನ್ನು ಸ್ಪಷ್ಟೀಕರಿಸಿದ್ದಾಯಿತು ಭೇದಾಭಾವವನ್ನು ಸಾಧನಮಾಡಲು ಹೇಳಿದ "ಸಂಯೋ

भविष्यति । एतेन कार्यत्वमभूत्वाभावित्वं चेदसिद्धमस्माकम् । अभिव्यक्तिधर्मकत्वं चेद्युष्माकमिति च निरस्तम् । तदिदमुक्तं केन वार्यत इति ॥ छ ॥

तदेवं पटाद्युत्पत्तौ चेतनस्य कुविन्दादेः प्रवृत्तेरुपलम्भात् तद्दृष्टान्तेन महदाद्युत्पत्तेरपि चेतनेच्छाधीनत्वमित्येवं स्वपक्षं प्रसाध्य परपक्षनिरासार्थं रचनानुपपत्तेश्च नानुमानमिति सूत्रं व्याख्यातुं

— ಪದಾರ್ಥದೀಪಿಕಾ —

ಅಂಗೀಕರಿಸುವುದರಿಂದ ಸರಿ ಹೊಂದುತ್ತದೆ ಇದರಿಂದ, ಅಭೂತ್ವಾಭಾವಿತ್ವ (ಇಲ್ಲದಿದ್ದು ಇರುವಿಕೆಯನ್ನು ಹೊಂದುವುದು) ಕಾರ್ಯತ್ವವೆಂದರ ನಮ್ಮ ಮತದಲ್ಲಿ ಅದು ಅಸಿದ್ಧವಾಗುತ್ತದ, ಅಭಿವ್ಯಕ್ತಿ ಧರ್ಮವುಳ್ಳದ್ದಾಗಿರುವುದೆಂಬುದಾದರೆ ನಿಮ್ಮ ಮತದಲ್ಲಿ ಅಸಿದ್ಧವಾಗುತ್ತದ, ಹೀಗ ಹೇಳಿದುದು ಸರಸ್ತವಾಯಿತು ಈ ಎಲ್ಲ ವಿಷಯಗಳನ್ನು "ಕೇನವಾರ್ಯತೇ' ಎಂಬ ವಚನದಿಂದ ನಿರೂಪಿಸಿದ್ದಾರ

ಈ ರೀತಿಯಾಗಿ ಪಟಾದಿಗಳ ಉತ್ಪತ್ತಿಯಲ್ಲ ಚೇತನರಾದ ಕುವಿಂದ ಮುಂತಾದವರ ಪ್ರವೃತ್ತಿಯು ಕಂಡುಬಂದುದರಿಂದ ಅದರ ದೃಷ್ಟಾಂತದಿಂದ ಮಹದಾದಿಗಳ ಉತ್ಪತ್ತಿಯೂ ಚೇತನನ ಇಚ್ಛಾಧೀನವಾಗಿರುವುದು ಹೀಗೆ ಸ್ವಪಕ್ಷವನ್ನು ಸಾಧನಮಾಡಿ ಪರಪಕ್ಷದ ನಿರಾಕರಣಕ್ಕಾಗಿ "ರಚನಾನುಪಪತ್ತೇಶ್ಚ

— ವಿಶೇಷಾರ್ಥಪ್ರದೀಪಿಕಾ —

ಗಾಪ್ರಾಪ್ತ್ಯಭಾವಾಚ್ಚ" ಎಂಬ ಮತ್ತೊಂದು ಯುಕ್ತಿಯನ್ನು "ಸಂಯೋಗಾಪ್ರಾಪ್ತ್ಯಭಾವಶ್ಚ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರ

ಹಿಂದೆ ಹೇಳಿದ ಇನ್ನೊಂದು ಯುಕ್ತಿಯನ್ನು 'ಗುರುತ್ವಾಂತರ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ.

'ಏತೇನ" — ಸತ್ಕಾರ್ಯತ್ವಮುಂತಾದ ಯುಕ್ತಿಗಳ ನಿರಾಕರಣದಿಂದ ಅಥವಾ ಹಿಂದೆ "ಉದ್ಭವವೆಂದರೆ ಉತ್ಪತ್ತಿಯೋ? ಅಭಿವ್ಯಕ್ತಿಯೋ? ಹೀಗೆ ವಿಕಲ್ಪಿಸಿ ದೂಷಿಸಿದುದರಿಂದ, ಹೀಗೆ ಅರ್ಥ ಅಸತ್ಕಾರ್ಯವಾದವನ್ನು ಸಮರ್ಥಿಸಿದುದರಿಂದ ಹಾಗು ಸತ್ಕಾರ್ಯವಾದವನ್ನು ದೂಷಿಸಿದುದರಿಂದ ಅಭೂತ್ವಾಭಾವಿತ್ವವೆಂಬ ಕಾರ್ಯತ್ವವು ಸಿದ್ಧಿಸಿದುದರಿಂದ, ಕಾರ್ಯತ್ವದ ಅಸಿದ್ಧಿಗೆ ಪ್ರಸಕ್ತಿಯು ಇಲ್ಲ ಹೀಗೆ ಭಾವ ಇವಲ್ಲ ಅರ್ಥವು ಮೂಲಾರೂಢವೆಂಬುದನ್ನು "ತದಿದಮುಕ್ತಂ'' ಇತ್ಯಾದಿ ವಚನದಿಂದ ತೋರಿಸುತ್ತಾರ

न च क्वाचित्प्रमोक्तर्थे श्रुतिरेव प्रमा हि नः ॥

पीठमारचयति ॥ न चेति । न केवलमस्मन्मते प्रमाणसद्भावः । किन्तु साङ्ख्योक्तार्थे प्रधानस्य स्वातन्त्र्येण जगत्कारणत्वे किमपि प्रमाणं नास्ति । तथा हि । किमत्र प्रत्यक्षं प्रमाणं स्यादुत आगमोऽथवा अनुमानं वा । नाद्यः । तद्धि अस्मदादीनां वा योगिनां वा । न प्रथमः । अस्यार्थस्यातीन्द्रियत्वात् । न द्वितीयः । असिद्धेः । न ह्येवं योगिनः पश्यन्तीत्यस्माकं प्रमाणमस्ति । नाप्यागमः । स ह्यपौरुषेयः पौरुषेयो

ಸಾಂಖ್ಯನು ಹೇಳಿದ್ದ ಪ್ರಧಾನದ ಸ್ವತಂತ್ರ ಜಗತ್ಕಾರಣತ್ವದ ಬಗ್ಗೆ ಯಾವದೇ ಪ್ರಮಾಣವು ಇರುವುದಿಲ್ಲ ಶ್ರುತಿಯು ನಮ್ಮ ಮತದ ವಿಷಯದಲ್ಲಿಯೇ ಪ್ರಮಾಣವಾಗುತ್ತದೆ.

— ಪದಾರ್ಥದೀಪಿಕಾ —

ನಾನುಮಾನಂ” ಎಂಬ ಸೂತ್ರವನ್ನು ವ್ಯಾಖ್ಯಾನಿಸಲು ಪೀಠಿಕೆಯನ್ನು “ನ ಚ ಕಾಚಿತ್” ಇತ್ಯಾದಿ ವಚನದಿಂದ ರಚಿಸುತ್ತಾರೆ ನಮ್ಮ ಮತದಲ್ಲಿ ಪ್ರಮಾಣವಿರುವುದಿಷ್ಟೇ ಅಲ್ಲ ಆದರೆ ಸಾಂಖ್ಯರು ಹೇಳಿದ, ಪ್ರಧಾನಕ್ಕೆ ಸ್ವತಂತ್ರವಾಗಿ ಜಗತ್ಕಾರಣತ್ವವೆಂಬ ಅರ್ಥದ ಬಗ್ಗ ಯಾವದೇ ಪ್ರಮಾಣವಿಲ್ಲ ಹೇಗೆಂದರೆ- ಇದರ ಬಗ್ಗೆ ಪ್ರಮಾಣವು ಯಾವದು ? ಪ್ರತ್ಯಕ್ಷವೋ ? ಆಗಮವೋ ? ಅನುಮಾನವೋ ? ಮೊದಲನೆಯ ಕಲ್ಪವು ಯುಕ್ತವಲ್ಲ ಏಕೆಂದರೆ– ಅದು ಅಸ್ಮದಾದಿ ಪ್ರತ್ಯಕ್ಷವೋ? ಯೋಗಿಗಳ ಪ್ರತ್ಯಕ್ಷವೋ? ಪ್ರಥಮವು ಯುಕ್ತವಲ್ಲ. ಏಕೆಂದರೆ ಈ ಪ್ರಧಾನದ ಸ್ವತಂತ್ರವಾದ ಜಗತ್ಕಾರಣತ್ವವೆಂಬ ಅರ್ಥವು ನಮ್ಮ ಇಂದ್ರಿಯಗಳಿಗೆ ನಿಲುಕುವುದಿಲ್ಲ ಎರಡನೆಯ ಪಕ್ಷವೂ ಸರಿಯಲ್ಲ ಏಕೆಂದರೆ ಅಸಿದ್ಧಿಯು ಬರುತ್ತದೆ ಏಕಂದರೆ ಯೋಗಿಗಳು ಹೀಗೆ ನೋಡುತ್ತಾರೆಂಬಲ್ಲಿ ನಮಗೆ ಯಾವ ಪ್ರಮಾಣವೂ ಸಿಕ್ಕಿಲ್ಲ ಇಲ್ಲ. ಆಗಮವೂ ಇಲ್ಲ ಏಕೆಂದರೆ ಅದು ಅಪೌರುಷೇಯವೋ? ಪೌರುಷೇ

— ವಿಶೇಷಾರ್ಥಪ್ರದೀಪಿಕಾ —

“ವ್ಯಾಖ್ಯಾತುಂ” – “ಇದಂ ನಾಚೇತನವಶಂ” ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನಮಾಡಲು, “ಪೀಠಮಾರಚಯತಿ”- ಎರಡು ಶ್ಲೋಕಗಳಿಂದ ಉಪೋದ್ಘಾತವನ್ನು ಮಾಡುತ್ತಾರೆ ಹೀಗೆ ಅರ್ಥ. “ನ ಚ ಕಾಚಿತ್” ಎಂಬ ಮೂಲ ಪದ್ಯದಲ್ಲಿಯ “ಚ” ಶಬ್ದದ ಅರ್ಥವು “ನ ಕೇವಲಂ” ಈ ಮುಂತಾ

वा स्यात् । नाद्य इत्याह ॥ श्रुतिरेवेति । श्रुतिर्नोऽस्माकमेव मते प्रमा हि । सर्वाऽपि हि श्रुतिरीश्वरमेव स्वातन्त्र्येण सकलजगत्कारणं सर्वज्ञं सर्वशक्तिं प्रतिपादयति । प्रधानं च तदायत्तसत्ताप्रतीतिप्रवृत्तिमत्तदधिष्ठितं जगदुपादानमात्रमिति । तथा हि । यः सर्वज्ञ सर्ववित् । यो योनिमधितिष्ठत्येक इत्यादि । तथा च श्रुतिः परस्य प्रतिपक्षभूतैव । पौरुषेयाऽपि किं स्मृतीतिहासपुराणलक्षणः । उत साङ्ख्या

— ಪದಾರ್ಥದೀಪಿಕಾ —

ಯವೋ ? ಮೊದಲನೆಯ ಕಲ್ಪವು ಯುಕ್ತವಲ್ಲೆಂಬ ಸಂಗತಿಯನ್ನು 'ಶ್ರುತಿರೇವ" ಇತ್ಯಾದಿ ವಚನದಿಂದ ಹೇಳುತ್ತಾರೆ "ಶ್ರುತಿಃ"= ಶ್ರುತಿಯು 'ಅಸ್ಮಾಕಮೇವ ಮತೇ"= ನಮ್ಮ ಮತದಲ್ಲಿಯೇ 'ಪ್ರಮಾ ಹಿ"= ಪ್ರಮಾಣವಾಗಿರುತ್ತದೆ ಈ ಕಾರಣದಿಂದ, ಹೀಗೆ ಅರ್ಥ ಶ್ರುತಿಯೆಲ್ಲವೂ ಈಶ್ವರನನ್ನೇ, ಸ್ವತಂತ್ರವಾಗಿ ಸಕಲ ಜಗತ್ತಿನ ಕಾರಣನೂ ಸರ್ವಜ್ಞನೂ ಸರ್ವಶಕ್ತಿಯುಳ್ಳವನೂ ಎಂದು ಪ್ರತಿಪಾದಿಸುತ್ತದೆ ಮತ್ತು ಪ್ರಧಾನವನ್ನು ಈಶ್ವರನ ಅಧೀನವಾದ ಸತ್ತಾ ಪ್ರತೀತಿ ಪ್ರವೃತ್ತ್ಯಾದಿಗಳುಳ್ಳದ್ದನ್ನಾಗಿಯೂ ಈಶ್ವರಾಧಿಷ್ಠಿತವಾಗಿ ಕೇವಲ ಜಗದುಪಾದಾನವನ್ನಾಗಿಯೂ ಪ್ರತಿಪಾದಿಸುತ್ತದೆ 'ಯಃ ಸರ್ವಜ್ಞಃ ಸರ್ವವಿತ್, ಯೋ ಯೋನಿಮಧಿತಿಷ್ಠತಿ" ಇತ್ಯಾದಿಯಾದ ಆಗಮಗಳು ಹಾಗೆ ಹೇಳತಕ್ಕವುಗಳು ಆದುದರಿಂದ, ಶ್ರುತಿಯು ಪರನಿಗೆ ಪ್ರತಿಪಕ್ಷವೇ ಆಗುತ್ತದೆ ಪೌರುಷೇಯ ಆಗಮವಾದರೂ ಯಾವದು ? ಸ್ಮೃತಿ ಇತಿಹಾಸ ಪುರಾಣ ರೂಪವಾದುದೋ ? ಇಲ್ಲವೆ ಸಾಂಖ್ಯಾಚಾರ್ಯರಿಂದ ರಚಿತವಾದ ಆಗಮವೋ ? ಮೊದಲನೆಯ ಪಕ್ಷವು

— ವಿಶೇಷಾರ್ಥಪ್ರದೀಪಿಕಾ —

ದುದು (ನಮ್ಮ ಮತದಲ್ಲಿ ಪ್ರಮಾಣವಿದೆಯೆಂದಿಷ್ಟೇ ಇಲ್ಲ ಈ ಮುಂತಾದುದು)

ಮೂಲದಲ್ಲಿ ಮಾಡಿದ ನಿರಾಸಕ್ರಮವನ್ನನುಸರಿಸಿ, ಆಗಮ ಅನುಮಾನಗಳನ್ನು ಹಿಂದು ಮುಂದೆ ಮಾಡಿ " ಉತ ಆಗಮಃ ಅಥವಾ ಅನುಮಾನಂ'' ಎಂಬುದಾಗಿ, ನಿರ್ದೇಶಿಸಿರುತ್ತಾರೆ

ಮೂಲದಲ್ಲಿ ''ಶ್ರುತಿರೇವ'' ಎಂಬಲ್ಲಿಯ ''ಏವ'' ಕಾರವು, ಭಿನ್ನಕ್ರಮದಲ್ಲಿದೆಯೆಂದು ಅಂಗೀಕರಿಸಿ ''ಅಸ್ಮಾಕಮೇವ" ಎಂಬುದಾಗಿ ( 'ನಃ ಏವ ಮತೇ' ಎಂಬುದಾಗಿ ಯೋಜಿಸಿ) ವ್ಯಾಖ್ಯಾನಿಸಿದ್ದಾರೆ ಇದರ ಫಲಿತಾರ್ಥವನ್ನು 'ತಥಾ ಚ'' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

आप्तत्वमुक्तमार्गेण वक्तुर्नैवोपपद्यते ॥

चार्यप्रणीतः । नाद्यः । तस्याप्यस्मन्मतानुसारित्वात् । प्रकृतिं पुरुषं चैव प्रविश्य पुरुषोत्तमः । क्षोभयामास भगवान्सृष्ट्यर्थं जगतो विभुरित्यादिवचनात् । न द्वितीयः । तत्प्रामाण्यस्यासम्मतेः । आप्तोक्तत्वेन तत्प्रामाण्यसिद्धिरिति चेत्तत्राह ॥ आप्तत्वमिति । उक्तमार्गेण श्रुतिरेव प्रमा हि न इत्युक्तरीत्या श्रुतिविरुद्धभाषित्वादित्यर्थः । वक्तुः साङ्ख्यप्रणेतुः । यद्वेतरेषा चानुपलब्धेरित्युक्तमार्गेण । साङ्ख्य-

ಹಿಂದೆ ಹೇಳಿದ ರೀತಿಯಿಂದ ಶ್ರುತಿವಿರುದ್ಧವಾದುದನ್ನು ಹೇಳುವುದರಿಂದ, ಸಾಂಖ್ಯ ಶಾಸ್ತ್ರವನ್ನು ವಿರಚಿಸಿದವನಿಗೆ ಯುಕ್ತವಾಗುವುದೇ ಇಲ್ಲ,

— ಪದಾರ್ಥದೀಪಿಕಾ —

ಯುಕ್ತವಲ್ಲ ಏಕೆಂದರೆ- ಸ್ಮೃತೀತಿಹಾಸ ಪುರಾಣ ರೂಪವಾದ ಆಗಮವು ನಮ್ಮ ಮತವನ್ನು ಅನುಸರಿಸಿರುತ್ತದೆ ಏಕೆಂದರೆ "ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ" ಕ್ಷೋಭಯಾಮಾಸ ಭಗವಾನ್ ಸೃಷ್ಟ್ಯರ್ಥಂ "ಜಗತೋ ವಿಭುಃ" ಇತ್ಯಾದಿ ವಚನಗಳಿರುತ್ತವೆ ಎರಡನೆಯ ಪಕ್ಷವು ಸರಿಯಲ್ಲ ಏಕೆಂದರೆ- ಅದರ ಪ್ರಾಮಾಣ್ಯದಲ್ಲಿ ನಮಗೆ ಸಮ್ಮತಿಯಿಲ್ಲ ಆಪ್ತೋಕ್ತವಾದುದರಿಂದ ಅದರ ಪ್ರಾಮಾಣ್ಯದ ಸಿದ್ಧಿಯೆಂದರೆ- ಅದರ ಮೇಲೆ "ಆಪ್ತತ್ವಂ" ಇತ್ಯಾದಿ ವಚನದಿಂದ ಹೇಳುತ್ತಾರೆ "ಉಕ್ತಮಾರ್ಗೇಣ"- 'ಶ್ರುತಿರೇವ ಪ್ರಮಾ ಹಿ ನಃ" ಎಂಬಲ್ಲಿ ಹೇಳಿದ ರೀತಿಯಿಂದ ಶ್ರುತಿವಿರುದ್ಧವಾಗಿ ನುಡಿಯುವುದರಿಂದ, ಹೀಗೆ ಅರ್ಥ 'ವಕ್ತುಃ"- ಸಾಂಖ್ಯ ಶಾಸ್ತ್ರವನ್ನು ವಿರಚಿಸಿದವನಿಗೆ ಇಲ್ಲವೆ "ಉಕ್ತಮಾರ್ಗೇಣ'-'ಇತರೇಷಾಂ ಚಾನುಪಲಬ್ಧೇಃ" ಎಂಬಲ್ಲಿ ಹೇಳಿದ ರೀತಿಯಿಂದ

— ವಿಶೇಷಾರ್ಥಪ್ರದೀಪಿಕಾ —

ಮೂಲದಲ್ಲಿರುವ "ಶ್ರುತಿಃ" ಎಂಬ ಶಬ್ದವು ಇತರ ಸಂಗ್ರಾಹಕವೆಂದು ಬಗೆದು, "ಶ್ರುತಿರೇವ ಪ್ರಮಾ ಹಿ ನಃ" ಎಂಬ ವಾಕ್ಯದ ಫಲಿತಾರ್ಥವನ್ನು "ತಸ್ಯಾಪ್ಯಸ್ಮನ್ಮತಾನುಸಾರಿತ್ವಾತ್" ಎಂಬುದಾಗಿ ಹೇಳಿದ್ದಾರೆ

'ಇತ್ಯುಕ್ತಮಾರ್ಗೇಣ '-ಪೂರ್ವಪಾದದ ಸ್ಮೃತ್ಯಧಿಕರಣದ "ಇತರೇಷಾಂ' ಇತ್ಯಾದಿಯಾದ ಗುಣಸೂತ್ರದಿಂದ - "ನ ಚಾಪ್ತಿನಿಶ್ಚಯಸ್ತತ್ರ ಶಕ್ಯತೇ ವ್ಯಭಿಚಾರತಃ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ ಪ್ರಕಾರದಿಂದ, ಹೀಗೆ ಅರ್ಥ

शास्त्रेऽपि ह्याख्यायिकासु योग्यानुपलब्धिबाधिना बहवोऽर्थाः प्रतिपाद्यन्ते । अथवाऽविप्रलम्भस्तज्ज्ञानमित्याद्युक्तमार्गेणाप्तत्वनिश्चायकप्रमाणाभावादित्यर्थः । कपिलो वासुदेवाख्यस्तन्त्रं साङ्ख्यं जगाद ह । ब्रह्मादिभ्यश्च देवेभ्यो भृग्वादिभ्यस्तथैव च । तथैवासुरये सर्ववेदार्थपरिबृंहितम् । सर्ववेदविरुद्धं च कपिलोऽन्यो जगाद ह । साङ्ख्यमासुरयेऽन्यस्मै कुतर्कपरिबृंहितमिति पुराणोक्तमार्गेणेति वा । ऋषिं

— ಪದಾರ್ಥದೀಪಿಕಾ —

ಸಾಂಖ್ಯ ಶಾಸ್ತ್ರದಲ್ಲಿಯೂ ಆಖ್ಯಾಯಿಕೆಗಳಲ್ಲಿ ಯೋಗ್ಯಾನುಪಲಬ್ಧಿಯಿಂದ ಬಾಧಿತವಾದ ಅನೇಕ ಪ್ರಮೇಯುಗಳು ಪ್ರತಿಪಾದಿಸಲ್ಪಡುತ್ತವೆ ಅಥವಾ "ಅವಿಪ್ರಲಂಭಸ್ತಜ್ಞಾನಂ" ಇತ್ಯಾದಿಗಳಲ್ಲಿ ಹೇಳಿದ ರೀತಿಯಿಂದ ಆಪ್ತತ್ವ ನಿರ್ಣಾಯಕ ಪ್ರಮಾಣಗಳಿಲ್ಲದಿರುವುದರಿಂದ, ಹೀಗೆ ಅರ್ಥ ಅಥವಾ "ಕಪಿಲೋ ವಾಸುದೇವಾಖ್ಯಃ ತಂತ್ರಂ ಸಾಂಖ್ಯಂ ಜಗಾದ ಹ॥ ಬ್ರಹ್ಮಾದಿಭ್ಯಶ್ಚ ದೇವೇಭ್ಯಃ ಭೃಗ್ವಾದಿಭ್ಯಸ್ತಥೈವಚ ॥ ತಥೈವಾಸುರಯೇ ಸರ್ವವೇದಾರ್ಥಪರಿಬೃಂಹಿತಂ ॥ ಸರ್ವವೇದ ವಿರುದ್ಧಂ ಚ ಕಪಿಲೋಽನ್ಯೋ ಜಗಾದ ಹ॥ ಸಾಂಖ್ಯಮಾಸುರಯೇಽನ್ಯಸ್ಮೈ ಕುತರ್ಕಪರಿಬೃಂಹಿತಮ್' ಎಂಬ ಪುರಾಣೋಕ್ತ ರೀತಿಯಿಂದ, ಎಂದು ಅರ್ಥ.

— ವಿಶೇಷಾರ್ಥಪದೀಪಿಕಾ —

"ಇತ್ಯಾದ್ಯುಕ್ತಮಾರ್ಗೇಣ" = ಜಿಜ್ಞಾಸಾಧಿಕರಣದಲ್ಲಿ ವೇದದ ಅಪೌರುಷೇಯತ್ವವನ್ನು ಹೇಳುವ ಸಂದರ್ಭದಲ್ಲಿ, "ಅವಿಪ್ರಲಂಭಸ್ತಜ್ಞಾನಂ ತತ್ತ್ವತತ್ತ್ವಾದಯೋಽಪಿ ಚ॥ ಕಲ್ಪ್ಯಾ ಗೌರವದೋಷೇಣ ಪುಂವಾಕ್ಯಂ ಜ್ಞಾಪಕಂ ನ ತತ್" ಎಂಬುದಾಗಿ ಹೇಳಿದ ಪ್ರಕಾರದಿಂದ, ಹೀಗೆ ಅರ್ಥ

"ಆಸುರಯೇ" = "ಆಸುರಿ" ಎಂಬ ಹೆಸರಿನ ಮುನಿಗೆ, ಹೀಗೆ ಅರ್ಥ "ಸಾಂಖ್ಯಮಾಸುರಯೇ" ಎಂಬಲ್ಲಿ "ಆಸುರಿ" ಶಬ್ದಕ್ಕೆ ಆಸುರಿಯೆಂಬ ಅಯೋಗ್ಯನಾದ ಶಿಷ್ಯನೊಬ್ಬನೆಂದು ಅರ್ಥ

ವಾಸುದೇವನ ಅವತಾರರಾದ ಕಪಿಲದೇವರು, ಬ್ರಹ್ಮಾದಿದೇವತೆಗಳಿಗೂ ಭೃಗ್ವಾದಿಋಷಿಗಳಿಗೂ ಆಸುರಿಯೆಂಬ ಮುನಿಗೂ ಸರ್ವವೇದಾರ್ಥಗಳಿಂದ ಕೂಡಿದ ಸಾಂಖ್ಯತಂತ್ರವನ್ನು ಉಪದೇಶಿಸಿದರು ಆದರೆ ಪರಮಾತ್ಮನ ಅವತಾರದಿಂದ ಬೇರೆಯಾದ ಇನ್ನೊಬ್ಬ ಕಪಿಲನೆಂಬ ಮತಾಚಾರ್ಯನು ಕುತರ್ಕಗಳಿಂದ ಕೂಡಿದ ಸಾಂಖ್ಯಮತವನ್ನು ಆಸುರಿಯೆಂಬ ಮುಕ್ತ್ಯಯೋಗ್ಯನಾದ ಶಿಷ್ಯನಿಗೆ

अप्रामाण्यस्वतस्त्वस्य स्वीकारादपि मायिवत् ॥

प्रसूतं कपिलमित्यादिश्रुत्युदाहरणमप्यनेनैव निरस्तम् । एतेनैवाग-माद्योगिप्रत्यक्षावगम इत्यपाकृतम् ।

न केवलमुक्तमार्गेणाप्तत्वानुपपत्तिः । किन्नामानुपपन्नभाषित्वाद-पीत्याह ॥ अप्रामाण्येति । अपिशब्देन प्रामाण्यस्वतस्त्वमपि समुच्चि-

ಅಪ್ರಾಮಾಣ್ಯವನ್ನು ಸ್ವತಃ ಎಂದು ಅಂಗೀಕರಿಸಿರುವುದರಿಂದಲೂ ಅವನಿಗೆ ಆಪ್ತತ್ವವು ಯುಕ್ತವಲ್ಲ ಮಾಯಿಯು ಹಾಗೆ ತಾನು ಹೇಳಿದುದೆಲ್ಲದಕ್ಕೆ ತಾನೇ ನಿಷೇ

— ಪದಾರ್ಥದೀಪಿಕಾ —

ಇದರಿಂದಲೇ 'ಋಷಿಂ ಪ್ರಸೂತಂ ಕಪಿಲಂ' ಇತ್ಯಾದಿ ಶ್ರುತಿಯ ಉದಾಹರಣವೂ ನಿರಾಕೃತವಾಯಿತು ಇದರಿಂದಲೇ ಆಗಮದಿಂದ ಯೋಗಿಪ್ರತ್ಯಕ್ಷವಿದೆಯೆಂಬ ಜ್ಞಾನವಾಗುವುದೆಂಬ ಹೇಳಿಕೆಯೂ ನಿರಾಕರಿಸಲ್ಪಟ್ಟಿತು !

ಕೇವಲ ಹಿಂದೆ ಹೇಳಿದ ರೀತಿಯಿಂದ ಆಪ್ತತ್ತ್ವವು ಸಂಭವಿಸುವುದಿಲ್ಲ ವೆಂದಿಷ್ಟೇ ಅಲ್ಲ. ಸಾಂಖ್ಯನು ಅಯುಕ್ತ (ಪ್ರಮಾಣ ವಿರುದ್ಧ) ವಾದ ಭಾಷಣವನ್ನು ಮಾಡುವವನಾದುದರಿಂದಲೂ ಆಪ್ತತ್ವವು ಅವನಿಗ ಸಲ್ಲುವದಿಲ್ಲವೆಂದು 'ಅಪ್ರಾ ಮಾಣ್ಯ" ಇತ್ಯಾದಿ ವಚನದಿಂದ ಹೇಳುತ್ತಾರ "ಅಪಿ' ಶಬ್ದದಿಂದ ಪ್ರಾಮಾಣ್ಯದ

— ವಿಶೇಷಾರ್ಥಪ್ರದೀಪಿಕಾ —

ಹೇಳಿದನು, ಹೀಗೆ ಪುರಾಣ ವಾಕ್ಯಗಳ ಅರ್ಥ "ಇತಿ ಪುರಾಣೋಕ್ತಮಾ ರ್ಗೇಣ" = ಭಾಗವತ ಪ್ರಥಮಸ್ಕಂಧ ತೃತೀಯಾಧ್ಯಾಯದ ತಾತ್ಪರ್ಯದಲ್ಲಿ ಹೇಳಿದ ಪದ್ಮ ಪುರಾಣವೆಂದಿಲ್ಲಿ ತಿಳಿಯಬೇಕು

"ಋಷಿಂ ಪ್ರಸೂತಂ" – "ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್॥ ಸುಖಾದನಂತಾತ್ ವಾಲನಾ ಲ್ಲಾಪನಾಚ್ಚ ಯಂ ವೈ ದೇವಂ ಕಪಿಲಮುದಾಹರಂತಿ" ಎಂಬುದು ಸಾಂಖ್ಯರು ಉದಾಹರಿಸಿದ ಬಾಭ್ರವ್ಯಶ್ರುತಿ ಇದನ್ನು ಆಚಾರ್ಯರು ಉದಾಹರಿಸಿದ ಪದ್ಮ ಪುರಾಣವಚನದಿಂದ, ಭಗವಂತನ ಕಪಿಲಾವತಾರಪರವೆಂದು ಉಪಪಾದನ ಮಾಡುವುದರಿಂದ ಮತಾಚಾರ್ಯನಾದ ಕಪಿಲಪರವಾಗಿ ಅರ್ಥವು ಸಿದ್ಧಿಸುವ ದಿಲ್ಲ, ನಿರಸ್ತವಾಯಿತು, ಹೀಗೆ ಭಾವ

ಏತೇನೈವ" - ವಕ್ತೃವಿನ ಆಪ್ತತ್ವದ ಬಗ್ಗೆ ನಿಶ್ಚಯವು ಸಂಭವಿಸುವುದಿಲ್ಲ

स्वोक्ताखिलनिषेधी स्यान्न च किञ्चित्प्रसिध्यति ॥

नोति । ज्ञानानां प्रामाण्यमप्रामाण्यं च ज्ञानकारणमात्राधीनोत्पत्तिक-मिति स्वीकरोति साङ्ख्यः । तच्चानुपपन्नमित्यतोऽप्यसौ नाप्तः । कथं प्रामाण्याप्रामाण्ययोः स्वतस्त्वमनुपपन्नमित्यत आह ॥ मायि-वदिति । प्रामाण्याप्रामाण्ययोर्ज्ञानकारणमात्रजन्यत्वे साङ्ख्यस्य वचनेनोत्पन्नं ज्ञानं प्रमाणमप्रमाण चेत्युभयात्मकं वा स्यात् । परस्पर-विरोधेनोभयविकलं वा ज्ञानमात्रमुत्प (द्येत) द्यते । निःस्वभावस्य ज्ञानस्यानुपपत्त्या नोत्प (द्यते) द्येत वा । आद्ये सदसद्विलक्षणं

---

ಧಿಸುವವನು ಆಗುವನು. ಪರಸ್ಪರ ವಿರೋಧವಿದ್ದರೆ ಯಾವದೂ ಸಿದ್ಧಿಸುವುದಿಲ್ಲ.

---

## — ಪದಾರ್ಥದೀಪಿಕಾ —

ಸ್ವತಸ್ತ್ವ (ಸ್ವಾಭಾವಿಕತ್ವ) ವನ್ನು ಸಮುಚ್ಚಯಗೊಳಿಸುತ್ತಾರೆ ಜ್ಞಾನಗಳ ಪ್ರಾಮಾಣ್ಯ ಅಪ್ರಾಮಾಣ್ಯ ಇವೆರಡು ಕೇವಲ ಜ್ಞಾನಕರಣಗಳ ಅಧೀನವಾದ ಉತ್ಪತ್ತಿಯುಳ್ಳದ್ದೆಂದು ಸಾಂಖ್ಯನು ಒಪ್ಪುತ್ತಾನೆ ಇದು ಅಯುಕ್ತವಾದುದು ಆದುದರಿಂದ, ಈ ಸಾಂಖ್ಯನು ಆಪ್ತನಲ್ಲ ಪ್ರಾಮಾಣ್ಯ ಅಪ್ರಾಮಾಣ್ಯಗಳೆರ ಡರ ಸ್ವತಸ್ತ್ವವು ಅಯುಕ್ತವೆಂಬುದು ಹೇಗೆ ? ಈ ಆಶಂಕೆಯನ್ನು "ಮಾಯಿ ವತ್" ಎಂಬ ವಚನದಿಂದ ಪರಿಹರಿಸುತ್ತಾರೆ ಪ್ರಾಮಾಣ್ಯ ಅಪ್ರಾಮಾಣ್ಯ ಗಳೆರಡೂ ಜ್ಞಾನಕಾರಣಗಳಿಂದ ಮಾತ್ರವೇ ಹುಟ್ಟುತ್ತವೆಯಾದರೆ ಸಾಂಖ್ಯನಿಗ (ಸಾಂಖ್ಯನ) ವಚನದಿಂದ ಬಂದ ಜ್ಞಾನವು ಪ್ರಮಾಣವೂ ಅಪ್ರಮಾಣವೂ ಆಗಿ ಉಭಯರೂಪವೂ ಆಗಬೇಕಾದೀತು ಅಥವಾ ಪರಸ್ಪರ ವಿರೋಧವುಂಟಾಗು ವುದರಿಂದ ಪ್ರಾಮಾಣ್ಯಾಪ್ರಾಮಾಣ್ಯವೆರಡರಿಂದಲೂ ರಹಿತವಾದ ಕೇವಲ ಜ್ಞಾನವಷ್ಟೇ ಹುಟ್ಟಬೇಕಾದೀತು! ಅಥವಾ ನಿಸ್ವಭಾವವಾದ ಜ್ಞಾನವೇ ಹುಟ್ಟು

---

## — ವಿಶೇಷಾರ್ಥಪ್ರದೀಪಿಕಾ —

ವೆಂದು ಹೇಳುವುದರಿಂದಲೇ! ಹಿಂದಿರುವ, ಷಷ್ಠ್ಯಂತವಾದ "ಅಪ್ರಾಮಾಣ್ಯಸ್ವ ತಸ್ತ್ವಸ್ಯ" ಈ ಶಬ್ದದ ಮುಂದೆ "ಅಪಿ" ಶಬ್ದದ ಅನ್ವಯವನ್ನು ಒಪ್ಪಿ, "ಅಪಿ ಶಬ್ದೇನ" ಇಲ್ಲಿ ಇತ್ಯಾದಿಯಾಗಿ ಹೇಳಿದ್ದಾರೆ "ಸ್ವತಸ್ತ್ವ" ಶಬ್ದದ ಅರ್ಥವೇ "ಜ್ಞಾನಕಾರಣಮಾತ್ರಾಧೀನೋತ್ಪತ್ತಿಕಂ" ಎಂಬುದು

विश्वं मन्यमानो मायावादी यथा स्वोक्तनिषेधी सद्विलक्षणमित्युक्त्या प्राप्तस्यासत्त्वस्य स्वयमेवासद्विलक्षणमिति निषेधात् । असद्विलक्षण-मित्युक्त्या च प्राप्तस्य सत्त्वस्य स्वयमेव सद्विलक्षणमिति निषेधात् । तथा साङ्ख्योऽपि स्वोक्ताखिलनिषेधी स्यात् । तद्वाक्यजनितज्ञानस्य याथार्थ्ये हि प्रकृतिर्जगत्कारणमित्यादिकोऽर्थो यो लब्धः स एवार्थ-स्तस्यायाथार्थ्ये निषिद्धः स्यात् । अयाथार्थ्यस्य विषयविपर्यासानति-रेकात् । उभयस्वतस्त्वे वस्तुनो विरुद्धाकारद्वयालिङ्गितत्वं प्रसज्येतेति भावः । मायाशब्दस्य व्रीह्यादित्वान्मायीति साधु ।

— ಪದಾರ್ಥದೀಪಿಕಾ —

ವುದಿಲ್ಲವಾದುದರಿಂದ ಅವನಿಗೆ ಜ್ಞಾನವೇ ಉಂಟಾಗದಿರಲಿ ! ಹೀಗ ಪ್ರಶ್ನೆ ಮೊದಲನೆಯ ಪಕ್ಷದಲ್ಲಿ ಸದಸದ್ವಿಲಕ್ಷಣವು ವಿಶ್ವವೆಂದು ಬಗೆಯುವ ಮಾಯಾವಾದಿಯು, ಸದ್ವಿಲಕ್ಷಣವೆಂಬ ತನ್ನ ವಚನದಿಂದ ಪ್ರಾಪ್ತವಾದ ಅಸತ್ವವನ್ನು ತಾನೇ ಅಸದ್ವಿಲಕ್ಷಣವೆಂಬ ವಚನದಿಂದ ನಿಷೇಧಿಸುವುದರಿಂದ ಹಾಗು ಅಸದ್ವಿಲಕ್ಷಣವೆಂಬ ವಚನದಿಂದ ಪ್ರಾಪ್ತವಾದ ಸತ್ಯತೆಯನ್ನು ಸದ್ವಿಲಕ್ಷಣವೆಂಬ ಹೇಳಿಕೆಯಿಂದ ನಿಷೇಧಿಸುವುದರಿಂದ ತಾನು ಹೇಳಿದುದನ್ನು ತಾನೇ ಹೇಗೆ ನಿಷೇಧಿಸುತ್ತಾನೋ ಸಾಂಖ್ಯನೂ ಹಾಗೆ ತಾನು ಹೇಳಿದುದನ್ನು ತಾನೇ ನಿಷೇಧಿಸುವವನು. ಏಕೆಂದರೆ– ಅವನ ವಾಕ್ಯದಿಂದ ಜನಿಸಿದ ಜ್ಞಾನಕ್ಕೆ ಯಥಾರ್ಥ್ಯವಿದ್ದುದಾದರೆ "ಪ್ರಕೃತಿಯು ಜಗತ್ಕಾರಣವು" ಈ ಮುಂತಾದ ರೂಪ ಯಾವ ಅರ್ಥವು ಲಭಿಸುವದೋ ಅದೇ ಅರ್ಥವು ಆ ಜ್ಞಾನಕ್ಕೆ ಅಯಾಥಾರ್ಥ್ಯ (ಅಪ್ರಾಮಾಣ್ಯ) ವಿದ್ದರೆ ನಿಷಿದ್ಧವಾಗುತ್ತದೆ ಅಯಾಥಾರ್ಥ್ಯವೂ ವಿಷಯದಲ್ಲಿ ವ್ಯತ್ಯಾಸವಿದೆಯೆಂಬುದೂ ಬೇರೆಯಲ್ಲ ಮತ್ತು ಪ್ರಾಮಾಣ್ಯಾಪ್ರಾಮಾಣ್ಯಗಳೆರಡೂ ಜ್ಞಾನಕ್ಕೆ ಸ್ವತಃ ಎಂದು ಹೇಳಿದರೆ ವಸ್ತುವಿಗೆ ವಿರುದ್ಧ ಆಕಾರಗಳೆರಡೂ ಇರಬೇಕಾಗುವ ಪ್ರಸಂಗವು ಬರುತ್ತದೆಂದು ಭಾವ ಮಾಯಾ ಶಬ್ದವು ವ್ರೀಹ್ಯಾದಿಗಣದಲ್ಲಿ ಬಂದುದರಿಂದ "ಮಾಯೀ' ಎಂಬ ಪ್ರಯೋಗವು ಸರಿಯಾದುದು

— ವಿಶೇಷಾರ್ಥಪ್ರದೀಪಿಕಾ —

ಜ್ಞಾನಗಳು ಎರಡೂ ರೂಪವುಳ್ಳವುಗಳು ಆದುದರಿಂದ, ಪ್ರಾಮಾಣ್ಯ ಅಪ್ರಾಮಾಣ್ಯ, ಇವುಗಳಲ್ಲಿ ಸೇರಿರುವ ಅರ್ಥಗಳಲ್ಲಿ ಪರಸ್ಪರವಿರೋಧವು (ಪರಸ್ಪರಅಭಾವರೂಪತ್ವವು) ಇಲ್ಲವಾದುದರಿಂದ, ಸಾಂಖ್ಯನು ತಾನು ಹೇಳಿ

नन्वेवमपि याथार्थ्येन प्रकृतिर्जगत्कारणमित्यादिकोऽर्थस्तावत्सिध्यतीत्यत आह ॥ न चेति । न हि परस्परविरोधे किमपि सिध्यतीति भावः । तर्हि प्रामाण्यस्य का गतिरिति चेत् । अप्रामाण्येऽपि दीयतां दृष्टिः । द्वितीये दोषमाह ॥ न चेति । ज्ञानं हि

— ಪದಾರ್ಥ ದೀಪಿಕಾ —

ಹೀಗಾದರೂ ಯಥಾರ್ಥವಾಗಿ ಪ್ರಕೃತಿಯು ಜಗತ್ಕಾರಣವೆಂಬ ಅರ್ಥವು ಸಿದ್ಧಿಸುತ್ತದೆಂಬ ಹೇಳಿಕೆಯ ಮೇಲೆ ದೂಷಣವನ್ನು "ನ ಚ" ಇತ್ಯಾದಿ ವಾಕ್ಯದಿಂದ ಹೇಳುತ್ತಾರ ಪರಸ್ಪರ ವಿರೋಧವಿದ್ದರೆ ಯಾವದೇ ವಿಷಯವು ಸಿದ್ಧಿಸಲಾರದೆಂದು ಭಾವ ಹಾಗಾದಲ್ಲಿ ಪ್ರಾಮಾಣ್ಯದ ಗತಿ ಯಾವದು ? ಎಂದು ಕೇಳಿದರೆ- ಅಪ್ರಾಮಾಣ್ಯದ ಮೇಲೂ ದೃಷ್ಟಿಯನ್ನಿಡಬೇಕೆಂದು ಹೇಳುತ್ತೇವೆ. ಎರಡನೆಯ ಪಕ್ಷದ ಮೇಲೆ ದೋಷವನ್ನು 'ನ ಚ" ಈ ವಾಕ್ಯದಿಂದ ಹೇಳು

— ವಿಶೇಷಾರ್ಥಪ್ರದೀಪಿಕಾ —

ದುದೆಲ್ಲವನ್ನು ನಿವೇಧಿಸುವವನು" ಎಂಬ ಹೇಳಿಕೆಯು ಹೇಗೆಸರಿ? ಈ ಆಶಂಕೆಯನ್ನು ಪರಿಹರಿಸಲು, ಮೂಲದ ಅಭಿಪ್ರಾಯವನ್ನು "ಉಭಯಸ್ವತನ್ತ್ರೇ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ

ಇನ್ನು "ಮಾಯಾ" ಈ ಶಬ್ದದ ಮುಂದೆ, "ವಿನಿ" ಪ್ರತ್ಯಯವು ಬರುವುದೆಂದು ಹೇಳಿದುದರಿಂದ, ಆ ಪ್ರತ್ಯಯವು ಬರಲು "ಮಾಯಾವೀ'' ಎಂಬ ರೂಪವಾಗುವದು ಆದರೆ "ಮಾಯೀ" ಎಂಬ ರೂಪವು ಹೇಗೆ ಆಗಿದೆ? ಈ ಆಶಂಕೆಯನ್ನು "ಮಾಯಾಶಬ್ದಸ್ಯ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ "ಮಾಯಾ" ಶಬ್ದವು "ವ್ರೀಹಿ" ಮುಂತಾದ ಶಬ್ದಗಳಿಂದ ಕೂಡಿದ ಗುಂಪಿ (ಗಣ)ನಲ್ಲಿ ಸೇರಿದೆ ಆದುದರಿಂದ, "ವ್ರೀಹ್ಯಾದಿಭ್ಯಶ್ಚ" ಎಂಬ ಸೂತ್ರದ ಅನುಸಾರವಾಗಿ, "ವ್ರೀಹ್ಯಾದಿಶಬ್ದಗಳುಳ್ಳ ಗುಂಪಿನಲ್ಲಿ ಸೇರಿದ ಶಬ್ದಗಳ ಮುಂದೆ ಮತ್ವರ್ಥದಲ್ಲಿ "ಇನಿ" ಪ್ರತ್ಯಯವು ಬರುವುದರಿಂದ, ಇಲ್ಲಿ "ಮಾಯಾ" ಶಬ್ದದ ಮುಂದೆ "ಇನಿ" ಪ್ರತ್ಯಯವು ಬಂದು, "ಮಾಯೀ" ಎಂಬ ರೂಪವಾಗಿದೆ ಆದುದರಿಂದ ದೋಷವಿಲ್ಲ ಹೀಗೆ ಭಾವ

"ತರ್ಹಿ"- ಜಗತ್ಕಾರಣತ್ವಾದಿಗಳಿಲ್ಲದೆ ಯಾಥಾರ್ಥ್ಯವು ನಿರ್ವಾಹಹೊಂದುವುದಿಲ್ಲ ಆದುದರಿಂದ, ಪ್ರಕೃತಿಗೆ ಜಗತ್ತಿನ ಕಾರಣತ್ವವು ಇರದಿದ್ದಲ್ಲಿ ಅವನ ವಾಕ್ಯದಿಂದ ಉತ್ಪನ್ನವಾದ ಜ್ಞಾನಕ್ಕೆ ಪ್ರಾಮಾಣ್ಯವೇ ಬರಲಾರದು. ಹೀಗೆ

यथावस्थितमयथावस्थितं वाऽर्थं विषयीकुर्यात् । तृतीयप्रकारानिरूपणात् । तथा च प्रामाण्याप्रामाण्यविकलं ज्ञानमयःशलाकावद्विषयमेव स्यात् । एवञ्च न साङ्ख्यवचनात्किञ्चित्प्रसिद्ध्यतीति । तृतीये तु जगदान्ध्यमेव स्यादित्याह ॥ न चेति ।

स्यादेतत् । यदा ज्ञानकरणं गुणोपेतं तदा तदीयायामप्रामाण्य-

— ಪದಾರ್ಥದೀಪಿಕಾ —

ತ್ತಾರ ಜ್ಞಾನವು ಯಥಾವಸ್ಥಿತವಾಗಿಯೋ ಅಯಥಾವಸ್ಥಿತವಾಗಿಯೋ ಪದಾರ್ಥವನ್ನು ವಿಷಯೀಕರಿಸುತ್ತದ ಏಕೆಂದರ ಮೂರನೆಯ ಪ್ರಕಾರವಿರುವುದಿಲ್ಲ ಆದುದರಿಂದ, ಪ್ರಾಮಾಣ್ಯ ಅಪ್ರಾಮಾಣ್ಯಗಳಲ್ಲಿ ಯಾವುದರಿಂದಲೂ ರಹಿತವಾದ ಜ್ಞಾನವು ಅಯಃಶಲಾಕೆಯಂತೆ ನಿರ್ವಿಷಯವೇ ಆಗಬೇಕಾಗುವದು ಇದರಿಂದ ಸಾಂಖ್ಯನ ವಚನದಿಂದ ಯಾವದೇ ವಿಷಯವೂ ಸಿದ್ಧಿಸುವುದಿಲ್ಲವೆಂಬುದು ಸಿದ್ಧಿಸುತ್ತದೆ ಮೂರನೆಯ ಕಲ್ಪದಲ್ಲಿಯಾದರೋ ಜಗತ್ತಿಗೆ ಅಂಧತನವೇ ಪ್ರಾಪ್ತವಾಗುವದು ಈ ವಿಷಯವನ್ನು "ನ ಚ" ಇತ್ಯಾದಿ ವಚನದಿಂದ ಹೇಳುತ್ತಾರೆ

"ಇದು ಇರಲಿ! ಜ್ಞಾನದ ಕರಣವು ಗುಣದಿಂದ ಕೂಡಿರುವಾಗ ಅದರಲ್ಲಿಯ

— ವಿಶೇಷಾರ್ಥಪ್ರದೀಪಿಕಾ —

ಇಲ್ಲಿ ಭಾವ "ಅಪ್ರಾಮಾಣ್ಯೇಽಪಿ" — ಪ್ರಕೃತಿಯು ಜಗತ್ಕಾರಣವೆಂದಾದಲ್ಲಿ "ಪ್ರಕೃತಿಃ ಜಗತ್ಕಾರಣಂ" ಈ ಮುಂತಾದ ವಾಕ್ಯಗಳಿಗೆ ಅಪ್ರಾಮಾಣ್ಯವು ಹೇಗೆ ಬರುತ್ತದೆ? ಬರಲಾರದು, ಆದುದರಿಂದ ಅದಕ್ಕೆ ಗತಿ ಯಾವುದೆಂಬಲ್ಲಿಯೂ ದೃಷ್ಟಿಯನ್ನಿಡಬೇಕು "ಜಗತ್ತಿನಕಾರಣತ್ವವಿಲ್ಲ" ವೆಂಬ ಸಂಗತಿಯನ್ನು ಒಪ್ಪದಿದ್ದರೆ "ಪ್ರಕೃತಿಃ ಜಗತ್ಕಾರಣಂ" ಈ ಮುಂತಾದ ಅವನ ವಾಕ್ಯಗಳಿಗೆ ಯಾಥಾರ್ಥ್ಯವಿಲ್ಲವೆಂಬುದರ ನಿರ್ವಾಹವಿಲ್ಲ ಆದುದರಿಂದ ಆ ವಾಕ್ಯಗಳಿಗೆ ಅಪ್ರಾಮಾಣ್ಯವು ಬರಲಾರದೆಂಬುದು ಸಮವಾಗುತ್ತದೆ ಅವನ ವಾಕ್ಯದಿಂದುಂಟಾದ ಜ್ಞಾನದ ಅಪ್ರಾಮಾಣ್ಯದ ಸಾರ್ಥಕತೆಗಾಗಿ ಪ್ರಕೃತಿಗೆ ಜಗತ್ಕಾರಣತ್ವವಿಲ್ಲವೆಂಬುದು ಸಿದ್ಧಿಸುತ್ತದೆ ಹೀಗೆ ಇಲ್ಲಿ ಭಾವ

"ಪ್ರಾಮಾಣ್ಯ, ಅಪ್ರಾಮಾಣ್ಯ, ಇವೆರಡರಿಂದಲೂ ರಹಿತವಾದ; ಕೇವಲ ಜ್ಞಾನವು," (ಅವನ ವಾಕ್ಯದಿಂದ ಹುಟ್ಟುತ್ತದೆ) ಎಂಬ ಪಕ್ಷದ ನಿರಾಸಕವಾಗಿ ಅದೇ ಭಾಷ್ಯದ ಯೋಜನವನ್ನು "ದ್ವಿತೀಯೇ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ

"ತೃತೀಯೇ ತ.' –'ಜ್ಞಾನವೇ ಹುಟ್ಟುವುದಿಲ್ಲ' ಎಂಬ ಪಕ್ಷದಲ್ಲಿ

जननशक्तौ गुणेन प्रतिबद्धायां प्रमाणज्ञानमेवोत्पद्यते । यदा तु दोषोपेतं तदा दोषेण प्रामाण्यजननशक्तौ प्रतिबद्धायामप्रमाणज्ञानमेवोत्पद्यते। न हि किमपि करणं युगपदुभयोपेतमुभयविकलं वा सम्भवति। येनोक्तदोषः स्यादिति । उच्यते । किमर्थमित्थं कल्प्यते । ज्ञानस्योभयाकारत्वप्रसक्तेरिति चेत् । तत्प्रसक्तिरपि कुतो नाभ्युपगन्तव्या । विरोधभयादिति चेत् । करणेऽप्युभयशक्तिविरोधात्कुतो न बिभेषि । यदपि विरुद्धकार्यद्वयजनकं करणं तत्सहकारिसाहित्याहितशक्तिकमेव ।

— ಪದಾರ್ಥದೀಪಿಕಾ —

ಅಪ್ರಾಮಾಣ್ಯ ಜನನಶಕ್ತಿಯು ಗುಣದಿಂದ ಪ್ರತಿಬದ್ಧವಾಗಲು ಪ್ರಮಾಣ ರೂಪ ಜ್ಞಾನವೇ ಹುಟ್ಟುತ್ತದೆ ದೋಷದಿಂದ ಕೂಡಿದುದಾಗ ದೋಷದಿಂದ ಪ್ರಾಮಾಣ್ಯ ಜನನಶಕ್ತಿಯು ಪ್ರತಿಬದ್ಧವಾದಾಗ ಅಪ್ರಮಾಣರೂಪಜ್ಞಾನವೇ ಉತ್ಪನ್ನವಾಗುತ್ತದೆ ಏಕೆಂದರೆ ಯಾವದೇ ಕರಣವು ಏಕಕಾಲದಲ್ಲಿ ಎರಡರಿಂದಲೂ ಕೂಡಿದುದಾಗಿಯಾಗಲೀ ರಹಿತವಾದುದಾಗಲೀ ಇರುವುದು ಸಂಭವಿಸುವುದಿಲ್ಲ ಹಾಗೆ ಆಗಿದ್ದರೆ ಹಿಂದೆ ಹೇಳಿದ ದೋಷವು ಬರಬಹುದಿತ್ತು!' ಹೀಗ ಬರುವ ಪ್ರಶ್ನೆಯ ಉತ್ತರವನ್ನು ಹೀಗೆ ಹೇಳುತ್ತೀವೆ- ಹೀಗೆ ಕಲ್ಪಿಸುವುದೇಕ? ಜ್ಞಾನಕ್ಕೆ ಉಭಯ ಆಕಾರಗಳ ಪ್ರಸಕ್ತಿಯಾಗುವದರಿಂದ ಅದನ್ನು ತಪ್ಪಿಸುವುದಕ್ಕಾಗಿ, ಎಂದು ಹೇಳಿದರೆ- ಆ ಉಭಯಾಕಾರಗಳ ಪ್ರಸಕ್ತಿಯನ್ನು ಅಂಗೀಕರಿಸಬಾರದೇಕೆಂದು ಪ್ರಶ್ನೆ ವಿರೋಧದ ಹೆದರಿಕೆಯಿಂದ ಅಂಗೀಕರಿಸುವುದಿಲ್ಲವೆಂದರೆ– ಹಾಗಾದರೆ ಕರಣಗಳಲ್ಲಿಯೂ ಎರಡೂ ಶಕ್ತಿಗಳಿಗೆ ವಿರೋಧವು ಬರುವುದರಿಂದ ಏಕೆ ಹೆದರುವುದಿಲ್ಲ? ವೆಂದು ಪ್ರಶ್ನಿಸುತ್ತೀವೆ ಇನ್ನು– ವಿರುದ್ಧವಾದ ಕಾರ್ಯಗಳೆರಡರ ಜನಕವಾದ

— ವಿಶೇಷಾರ್ಥಪ್ರದೀಪಿಕಾ —

ಇನ್ನು ವೇತ್ರ (ಬಿದುರು) ಬೀಜಕ್ಕೆ ಬಿದುರು ಅಂಕುರಜನನ ಶಕ್ತಿಯೂ ಕದಲೀಕಾಂಡದ (ಬಾಳೆಯಕಾಂಡ) ಜನನ ಶಕ್ತಿಯೂ ಇರುವುದು ಕಂಡಿದೆ ಮತ್ತು ಅಭಿಜ್ಞಾಜನನಶಕ್ತಿಯೂ ಪ್ರತ್ಯಭಿಜ್ಞಾಜನನಶಕ್ತಿಯೂ, ಇವರಡೂ ಚಕ್ಷುರಿಂದ್ರಿಯಕ್ಕೆ ಇರುವುದು ಕಂಡಿದೆ ಹಾಗೆ— ಒಂದೇ ಚಕ್ಷುರಿಂದ್ರಿಯವು ಪ್ರಮೆ ಭ್ರಮೆ, ಇವೆರಡನ್ನೂ ಹುಟ್ಟಿಸುವದೂ ಕಂಡಿದೆ ಆದುದರಿಂದ, "ಕರಣದಲ್ಲಿಯೂ ಉಭಯಶಕ್ತಿಗಳಿಗೆ ವಿರೋಧವು" ಎಂಬುದಾಗಿ ಹೇಳಿದುದು ಹೇಗೆ ಸಮಂಜಸವೆಂಬ ಪ್ರಶ್ನೆಯನ್ನು "ಯದಪಿ" ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಾರೆ ವಿರು

प्रकृते च तथाऽभ्युपगमे द्वयोरपि परतस्त्वापत्तिः । किञ्च वचने कौ गुणदोषौ । आप्तानाप्तप्रणीतत्वे इति चेत् । तदुभयाभावाद्वेदवाक्ये-नोभयात्मकमनुभयात्मकं वा ज्ञानमुत्पद्येत । नोत्पद्येत वा । अनाप्त

— ಪದಾರ್ಥದೀಪಿಕಾ —

ಕರಣವು ಆಯಾಯ ಸಹಕಾರಿಯ ಸಾಹಿತ್ಯದಿಂದ ಉಂಟಾದ ಶಕ್ತಿಯುಳ್ಳದ್ದಾಗಿಯೇ ಆಗಿರುತ್ತದೆ ಮತ್ತು ಪ್ರಕೃತದಲ್ಲಿ ಹಾಗ ಅಂಗೀಕರಿಸಿದರೆ– ಎರಡಕ್ಕೂ ಪರತಸ್ತ್ವವು ಬರಬೇಕಾಗುವದು ಮತ್ತು ವಚನಗಳಲ್ಲಿರುವ ಗುಣದೋಷಗಳಾವವು ? ಆಪ್ತ ರಚಿತವಾಗಿರುವುದು, ಅನಾಪ್ತರಿಂದ ರಚಿತವಾಗಿರುವುದು, ಇವುಗಳೇ, ಎಂದು ಹೇಳಿದರೆ– ವೇದವಾಕ್ಯದಲ್ಲಿ ಎರಡರಲ್ಲಾವದೂ ಇರುವುದಿಲ್ಲವಾದುದರಿಂದ, ವೇದದಿಂದ ಉಭಯರೂಪವಾದ ಇಲ್ಲವೆ ಉಭಯದಲ್ಲಿ ಯಾವದೇ ವಿಧವಾಗದ ಜ್ಞಾನವು ಹುಟ್ಟಲಿ ! ಇಲ್ಲವ ಯಾವದೇ ಜ್ಞಾನವು ಹುಟ್ಟದಿರಲಿ! ಅನಾಪ್ತರಿಂದ ರಚಿತವಾಗದಿರುವುದು ಗುಣವೆಂದು ಹೇಳಿದರ ಆಪ್ತರಿಂದ ರಚಿತ

— ವಿಶೇಷಾರ್ಥಪ್ರದೀಪಿಕಾ —

ದ್ಧಗಳಾದ ಕಾರ್ಯಗಳನ್ನು ಹುಟ್ಟಿಸುವ ಕರಣವು ಯಾವದೋ ಅದುವೂ ಸಹ ತನ್ನ ಸಹಜ (ಸ್ವಾಭಾವಿಕ –ಒಡನೆಹುಟ್ಟಿದ)ವಾದ ಶಕ್ತಿಯಿಂದ ಒಂದು ಕಾರ್ಯವನ್ನು ಹುಟ್ಟಿಸುತಿದ್ದು, ಸಹಕಾರಿಯ ಸಹಾಯ –ಬಲದಿಂದ, ಆಹಿತ (ತಂದಿಡಲ್ಪಟ್ಟ –ಹುಟ್ಟಿಸಲ್ಪಟ್ಟ)ವಾದ ಶಕ್ತಿಯುಳ್ಳದ್ದಾಗಿ, ಆ ಶಕ್ತಿಯಿಂದ ಮೊದಲಿನ ಕಾರ್ಯಕ್ಕೆ ವಿರುದ್ಧವಾದ ಬೇರೊಂದು ಕಾರ್ಯವನ್ನು ಹುಟ್ಟಿಸುತ್ತದೆ ಆದರೆ ವಿರುದ್ಧಗಳಾದ ಕಾರ್ಯಗಳನ್ನುಂಟುಮಾಡುವ ಎರಡೂ ಶಕ್ತಿಗಳು ಸಹಜವಾಗಲಾರವು ಆದರಂತೆ ಪ್ರಕೃತದಲ್ಲಿಯೂ ಆಗಲೆಂಬ ಆಶಂಕೆಯನ್ನು "ಪ್ರಕೃತೇ ಚ"– ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ "ತಥಾಽಭ್ಯುಪಗಮೇ" –''ಗುಣದಿಂದ ಆಹಿತವಾದ ಶಕ್ತಿಯುಳ್ಳದ್ದಾಗಿರುವ ಚಕ್ಷುರಿಂದ್ರಿಯ ಮುಂತಾದುದು ಪ್ರಮೆಯನ್ನು (ಯಥಾರ್ಥಜ್ಞಾನವನ್ನು) ಹುಟ್ಟಿಸುತ್ತದ ದೋಷದಿಂದ ಆಹಿತವಾದ ಶಕ್ತಿಯುಳ್ಳದ್ದಾಗಿ ಚಕ್ಷುರಿಂದ್ರಿಯಾದಿಗಳು ಭ್ರಮವನ್ನು ಹುಟ್ಟಿಸುತ್ತವೆ," ಹೀಗೆ ಒಪ್ಪಿದರೆ ಹೀಗೆಅರ್ಥ ಒಂದು ಶಕ್ತಿಯು ಸಹಜ, ಇನ್ನೊಂದು ಶಕ್ತಿಯು ಆಹಿತವು ಹೀಗೆ ಹೇಳಿದರೆ ಪ್ರಾಮಾಣ್ಯ ಅಪ್ರಾಮಾಣ್ಯ, ಇವೆರಡಕ್ಕೂ ಸ್ವತಸ್ತ್ವವನ್ನು ಹೇಳುವುದು ವಿರುದ್ಧವಾಗುತ್ತದೆ ಹೀಗೆ ಭಾವ.

''ಉಭಯಾತ್ಮಕಂ"–ಪ್ರಮಾಣ ಅಪ್ರಮಾಣ ಉಭಯಾತ್ಮಕವಾದ ''ಅನುಭಯಾತ್ಮಕಂ"=ಪರಸ್ಪರವಿರೋಧವು ಬರುವುದರಿಂದ, ಪ್ರಮಾಣವೂ ಆಗದ,

प्रणीतत्वं गुण इति चेन्। तर्ह्याप्ताप्रणीतत्वं दोषोऽपि किन्न स्यादिति स एव प्रसङ्गः। एतेन साङ्ख्याचार्यवचनं स्वत एव प्रमाणं किमाप्तिनिश्चयेनेत्यपि परास्तम्। अप्रामाण्यस्यापि स्वतस्त्वेनोक्तसकलदोषापत्तेः।

— ಪದಾರ್ಥದೀಪಿಕಾ —

ವಾಗದಿರುವುದು ದೋಷವೂ ಏಕೆ ಆಗಬಾರದು ? ಆದುದರಿಂದ ಹಿಂದೆ ಹೇಳಿದ ಪ್ರಸಂಗವೇ ಬರುತ್ತದೆ ಇದರಿಂದ, ಸಾಂಖ್ಯಾಚಾರ್ಯರ ವಚನವು ಸ್ವತಃ ಪ್ರಮಾಣವಾದುದರಿಂದ ಆಪ್ತಿಯ ನಿಶ್ಚಯವೇಕೆ ? ಎಂದು ವಾದಿಸುವುದೂ ನಿರಾಕರಿಸಲ್ಪಟ್ಟಿತು ಏಕೆಂದರೆ ಅಪ್ರಾಮಾಣ್ಯಕ್ಕೂ ಸ್ವತಸ್ತ್ವವಿದ್ದುದರಿಂದ, ಹಿಂದೆ ಹೇಳಿದ ಸಕಲದೋಷಗಳು ಬರಬೇಕಾಗುತ್ತವೆ ಇನ್ನು ಮಹಾಜನರಿಂದ ಸ್ವೀಕರಿ

— ವಿಶೇಷಾರ್ಥಪ್ರದೀಪಿಕಾ —

ಅಪ್ರಮಾಣವೂ ಆಗದ ಜ್ಞಾನವು ಹುಟ್ಟಲಿ, ಹೀಗ ಅರ್ಥ

''ನೋತ್ಪದ್ಯೇತ'' -ಯಾವದೇ ಸ್ವಭಾವವಿಲ್ಲದ ಜ್ಞಾನವು ಹುಟ್ಟಲಾರದಾದುದರಿಂದ, ಜ್ಞಾನವೇ ಹುಟ್ಟದಿರಲಿ, ಹೀಗೆಭಾವ

''ಅನಾಪ್ತಾಪ್ರಣೀತತ್ವಂ ಗುಣಃ' -ಹೀಗೆ ಹೇಳುವುದರಿಂದ, ವೇದವಾಕ್ಯದಿಂದ ಪ್ರಮಾಣಾತ್ಮಕಜ್ಞಾನವು ಉತ್ಪನ್ನವಾಗುವುದು ಯುಕ್ತವೆಂಬ ಭಾವವು ವ್ಯಕ್ತವಾಗುವದು "ತರ್ಹಿ"—ವೇದವು ಅಪೌರುಷೇಯವಾದುದರಿಂದ ಅನಾಪ್ತರಿಂದ ರಚಿತವಾಗದಿರುವುದೆಂಬುದನ್ನು ಅಂಗೀಕರಿಸಿ ಅದರಿಂದ ಹುಟ್ಟಿದ ಜ್ಞಾನವು ಪ್ರಮಾಣವೆಂದು ಹೇಳುವುದಾದರ (ಆಪ್ತೋಕ್ತತ್ವಗುಣವಿಲ್ಲದಿದ್ದರೂ ವೇದವಾಕ್ಯದಿಂದ ಹುಟ್ಟಿದ ಜ್ಞಾನದಲ್ಲಿ ಪ್ರಾಮಾಣ್ಯವನ್ನು ಹೇಳುವುದಾದರ) ಆಪ್ತರಿಂದ ರಚಿತವಾಗದಿರುವುದು ದೋಷವೆಂದು ಅಂಗೀಕರಿಸಿ, ಈ ದೋಷಮೂಲಕ ವೇದದಿಂದ ಹುಟ್ಟಿದ ಜ್ಞಾನವು ಅಪ್ರಮಾಣವೇಕೆ ಆಗಬಾರದೆಂಬ ಪ್ರಸಂಗವು ಬರುತ್ತದೆ ಏಕೆಂದರೆ ವಿನಿಗಮನದಲ್ಲಿ ಕಾರಣವಿರುವುದಿಲ್ಲ

"ಸ ಏವ ಪ್ರಸಂಗಃ" — ಅನಾಪ್ತರಿಂದ ರಚಿತವಾಗದಿರುವುದೆಂಬ ಗುಣವು ವೇದದಲ್ಲಿ ಇರುವ ಹಾಗ ಆಪ್ತರಿಂದ ರಚಿತವಾಗದಿರುವುದೆಂಬ ದೋಷವೂ ಇರುವುದರಿಂದ, ವೇದದಿಂದ ಉಭಯಾತ್ಮಕ (ಪ್ರಮಾಣ ಅಪ್ರಮಾಣ) ಜ್ಞಾನವು ಹುಟ್ಟುವದೋ? ಉಭಯಾತ್ಮಕವೂ ಆಗದ ಜ್ಞಾನವು ಹುಟ್ಟುವದೋ? ಇಲ್ಲವ ಯಾವದೇ ಜ್ಞಾನವು ಹುಟ್ಟುವುದೇ ಇಲ್ಲವೋ ಎಂಬುದಾಗಿ ಹೇಳಿದ ಮೂರು ಕಲ್ಪಗಳ ಮೇಲೆ ಹೇಳಿದ ದೋಷಗಳು ಬರುತ್ತವೆ ಹೀಗೆ ಭಾವ

"ಉಕ್ತಸಕಲದೋಷಾಪತ್ತೇಃ" = ಹಿಂದೆ ಹೇಳಿದ ಮೂರು ಕಲ್ಪಗಳ

अथ महाजनपरिग्रहात्तत्प्रामाण्यनिश्चय इति चेन्न । पूज्यार्थत्वेऽसिद्धेः । बह्वर्थत्वे सव्यभिचारत्वात्सन्दिग्धासिद्धेश्चेति ।

मा भूत्प्रकृतिकारणत्वे प्रपञ्चस्य प्रत्यक्षं प्रमाणम् । मा च

— ಪದಾರ್ಥದೀಪಿಕಾ —

ಸಲ್ಪಟ್ಟಿರುವುದರಿಂದ ಸಾಂಖ್ಯಾಚಾರ್ಯರ ವಚನದ ಪ್ರಾಮಾಣ್ಯ ನಿಶ್ಚಯವೆಂದು ತಿಳಿಯಬಾರದು ಏಕೆಂದರೆ ಪೂಜ್ಯರೆಂಬ ಅರ್ಥವಿದ್ದರ (ಮಹಾಜನ ಶಬ್ದಕ್ಕೆ) ಅಸಿದ್ಧಿಯು ಬರುತ್ತದೆ "ಬಹಳ" ಎಂಬ ಅರ್ಥವಿದ್ದರೆ ಹೇತುವು ಸಾಧ್ಯವ್ಯಭಿಚಾರಿಯಾಗುವದು ಹಾಗು ಸಂದಿಗ್ಧಾಸಿದ್ಧವೂ ಆಗುತ್ತದೆ " ಹೀಗೆ ಉತ್ತರ

ಇನ್ನು ಪ್ರಕೃತಿಯು ಜಗತ್ಕಾರಣವೆಂಬಲ್ಲಿ ಪ್ರತ್ಯಕ್ಷವೂ ಪ್ರಮಾಣವಾಗದಿರಲಿ, ಆಗಮವಾದರೂ ಪ್ರಮಾಣವಾಗದಿರಲಿ, ಆದರೆ ಅನುಮಾನವು ಪ್ರಮಾ

— ವಿಶೇಷಾರ್ಥಪ್ರದೀಪಿಕಾ —

ಮೇಲೆ ಹೇಳಿದ ದೋಷಗಳು ಬರುತ್ತವೆ ಹೀಗೆ ಭಾವ.

ಸಾಂಖ್ಯಾಚಾರ್ಯರು ರಚಿಸಿದ ಆಗಮದ ಪ್ರಾಮಾಣ್ಯವು ಮಹಾಜನರಿಂದ ಗೃಹೀತವೆಂದು ಬಗೆದಲ್ಲಿ "ಮಹಾಜನ"ವೆಂಬಲ್ಲಿಯ "ಮಹತ್" ಶಬ್ದವು ಪೂಜ್ಯತಾ ವಾಚಕವೋ? ಬಹುತ್ವಸಂಖ್ಯಾವಾಚಕವೋ? ಹೀಗೆ ವಿಕಲ್ಪಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮೊದಲನೆಯ ಕಲ್ಪವನ್ನು "ಪೂಜ್ಯಾರ್ಥತ್ವೇ ಇತ್ಯಾದಿವಾಕ್ಯದಿಂದ ದೂಷಿಸುತ್ತಾರೆ "ಅಸಿದ್ಧೇಃ"=ಸಾಂಖ್ಯಾಗಮವನ್ನು ಪರಿಗೃಹಿಸುವವರಲ್ಲಿ ಪೂಜ್ಯತೆಯು ಪರನಿಗೆ ಸಮ್ಮತವಲ್ಲವಾದುದರಿಂದ ಅಸಿದ್ಧಿಯು ಎರಡನೆಯ ಕಲ್ಪವನ್ನು "ಬಹ್ವರ್ಥತ್ವೇ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರ "ಸವ್ಯಭಿಚಾರತ್ವಾತ್" - ಬೌದ್ಧಾದಿಗ್ರಂಥಗಳಲ್ಲಿ ಪ್ರಾಮಾಣ್ಯವಿಲ್ಲ ಆದರಅಲ್ಲಿಯೂ ಕೆಲದೇಶದ ಬಹುಜನರಿಂದ ಪರಿಗೃಹೀತತ್ವವೆಂಬ ಹೇತುವು ಇರುವುದರಿಂದ ವ್ಯಭಿಚರಿತವೆಂದು ತಿಳಿಯಬೇಕು ಆ ಜನರಿಗಿಂತ ಅತಿಶಯ ಬಹುಜನಗಳಿಂದ ಪರಿಗೃಹೀತವಾಗಿರುವುದು ಪ್ರಾಮಾಣ್ಯಸಾಧಕ ಯುಕ್ತಿಯೆಂದು ಶಂಕಿಸಿದರೆ ಉತ್ತರವನ್ನು "ಸಂದಿಗ್ಧಾಸಿದ್ಧೇಶ್ಚ" ಈ ವಾಕ್ಯದಿಂದ ಹೇಳುತ್ತಾರೆ ಜನರು ಇಂತಿಷ್ಟು, ಎಂಬುದಾಗಿ ಇಯತ್ತೆಯನ್ನು ಪರಿಗಣಿಸುವದು ಅಶಕ್ಯವಾದುದರಿಂದ "ಸಾಂಖ್ಯಾಗಮವನ್ನು ಪರಿಗ್ರಹಿಸುವವರ ಸಂಖ್ಯೆಯು ಬೌದ್ಧಾಗಮಪರಿಗ್ರಹಿಸುವವರಿಗಿಂತ ಅತ್ಯಧಿಕವಾದುದು" (ಬಹುತಮವಾದುದು) ಎಂಬುದನ್ನು ನಿರ್ಣಯಿಸುವುದು ಅಶಕ್ಯವಾಗುತ್ತದೆ ಆದುದರಿಂದ ಸಂದಿಗ್ಧಾಸಿದ್ಧಿಯು, ಹೀಗೆ ತಿಳಿಯಬೇಕು

भूदागमः । अनुमानं तु भविष्यति । यथोक्तम् । भेदानां परिमाणात्समन्वयाच्छक्तितः प्रवृत्तेश्च । कारणकार्यविभागादविभागाद्वैश्वरूप्यस्येति । अयमर्थः । कारणकार्यविभागादविभागाद्वैश्वरूप्यस्य मूलकारणमस्त्यव्यक्तम् । यथा कूर्मशरीरे सन्त्येवाङ्गानि ततो विभज्यन्ते तस्मिन्नेवाव्यक्तीभवन्ति । एवं कारणान्मृत्पिण्डाद्धेमपिण्डाद्वा कार्याणि

— ಪದಾರ್ಥದೀಪಿಕಾ —

ಣವಾಗುತ್ತದೆ ಇದನ್ನೇ "ಭೇದಾನಾಂ ಪರಿಮಾಣಾತ್ ಸಮನ್ವಯಾತ್ ಶಕ್ತಿತಃ ಪ್ರವೃತ್ತೇಶ್ಚ ॥ ಕಾರಣಕಾರ್ಯ ವಿಭಾಗಾತ್ ಅವಿಭಾಗಾದ್ ವೈಶ್ವರೂಪ್ಯಸ್ಯ" ಎಂಬಲ್ಲಿ ಹೇಳಿದ್ದಾರೆ. ಇದರ ಅರ್ಥವಿದು- ಕಾರಣಕಾರ್ಯ ವಿಭಾಗವಿರುವುದರಿಂದ, ಅವಿಭಾಗವಿರುವುದರಿಂದ ವಿಶ್ವರೂಪದ ಮೂಲ ಕಾರಣವು ಅವ್ಯಕ್ತವೆಂಬುದೊಂದಿದೆ ಹೇಗೆ ಕೂರ್ಮ (ಆಮೆಯ) ದ ಶರೀರದಲ್ಲಿ ಇರತಕ್ಕವುಗಳೇ ಆದ ಅಂಗಗಳು ಅದರಿಂದ ವಿಭಾಗ ಹೊಂದುತ್ತಿವೆಯೋ ಹಾಗು ಅದರಲ್ಲಿಯೇ ಪ್ರವೇಶಿಸಿ ಅವ್ಯಕ್ತವಾಗುವವೋ ಹಾಗೆಯೇ ಕಾರಣವಾದ ಮೃತ್ಪಿಂಡ ಇಲ್ಲವೆ ಬಂಗಾರದ ಗಟ್ಟಿಯಿಂದ ಕಾರ್ಯಗಳಾದ ಘಟ ಮುಕುಟ ಮುಂತಾದವುಗಳು

— ವಿಶೇಷಾರ್ಥಪ್ರದೀಪಿಕಾ —

"ಇದಂ" ಈ ಮುಂತಾದ ಮೂಲವನ್ನು ಅವತಾರಿಸಲು "ಮಾ ಭೂತ್" ಇತ್ಯಾದಿ ವಚನಗಳು ಹೊರಟಿವೆ ಆ ಅನುಮಾನವು ಯಾವುದೆಂಬುದನ್ನು "ಯಥೋಕ್ತಂ" ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ ಈ ಕಾರಿಕೆಯ ಉತ್ತರಾರ್ಥವನ್ನು ವಿವರಿಸುತ್ತ, ಸಾಧ್ಯವನ್ನು ಹೇಳಿ ಆಕಾಂಕ್ಷೆಯನ್ನು "ಕಾರಣ" ಇತ್ಯಾದಿ ವಾಕ್ಯದಿಂದ ಪೂರೈಸುತ್ತಾರೆ ಇದರಿಂದ, 'ಕಾರಣಮಸ್ತ್ಯವ್ಯಕ್ತಂ ಪ್ರವರ್ತತೇ । ತ್ರಿಗುಣಾತಃ ಸಮುದಾಯಾಚ್ಚ" ಎಂಬ ಮುಂದಿನ ಕಾರಿಕೆಯಲ್ಲಿರುವ "ಕಾರಣಂ ಅಸ್ತಿ ಅವ್ಯಕ್ತಂ" ಎಂಬ ಪದಗಳಿಗೆ ಮುಂದಿನ ವಾಕ್ಯದಲ್ಲಿ ಮಾತ್ರವೇ ಅನ್ವಯವೆಂದಲ್ಲ ಪೂರ್ವದ ಕಾರಿಕೆಯಲ್ಲಿಯೂ ಅನ್ವಯವಿದೆಯೆಂದು ತಿಳಿಯಬೇಕು ಇದರಿಂದ, ಪೂರ್ವ (ಭೇದಾನಾಂ ಎಂಬ) ಕಾರಿಕೆಯಲ್ಲಿ ಸಾಧ್ಯವನ್ನು ಹೇಳಿಲ್ಲವೆಂಬ ನ್ಯೂನತೆಗೆ ಅವಕಾಶವಿಲ್ಲವೆಂದು ಹೇಳಿದ್ದಾಗುತ್ತದೆ "ಕಾರಣ ಕಾರ್ಯವಿಭಾಗಾತ್" ಎಂಬ ಹೇತುವನ್ನು "ಯಥಾ" ಇತ್ಯಾದಿ ವಾಕ್ಯದಿಂದ ವಿಶದಪಡಿಸುತ್ತಾರೆ "ಸಂತ್ಯೇವ" - ಇರುವವುಗಳೇ ಆದ ಮುಂದೆಯೂ ಇದರಂತೆ ಅರ್ಥತಿಳಿಯಬೇಕು "ವಿಭಜ್ಯಂತೇ" - ವಿಭಕ್ತವಾಗಿತೋರುತ್ತವೆ -

घटमुकुटादीनि विभज्यन्ते । सन्त्येव च पृथिव्यादीनि कारणात्तन्मात्रात् । सन्त्येव च तन्मात्राण्यहङ्कारात् । सन्नेव चाहङ्कारो महतः । सदेव च महत्परमाव्यक्तादिति । सोऽयं कारणात्परमाव्यक्तात्पारम्पर्येण विश्वस्य कार्यस्य विभागः । प्रतिसर्गे मृत्पिण्डं हेमपिण्डं वा घटमुकुटादयो विशन्तोऽव्यक्तीभवन्तीति तत्कारणरूपमेवानभिव्यक्तघटमुकुटादिकार्यमपेक्ष्याव्यक्तं भवति । एवं पृथिव्यादयस्तन्मात्राणि विशन्तः स्वापेक्षया तन्मात्रमव्यक्तयन्ति । एवं तन्मात्राण्यहङ्कारं

— ಪದಾರ್ಥದೀಪಿಕಾ —

ವಿಭಾಗಹೊಂದಿ ಹೊರಬಗುತ್ತವೆ ಮತ್ತು ತನ್ಮಾತ್ರಗಳೆಂಬ ಕಾರಣಗಳಿಂದ ಸತ್ಯ (ಇರುವವುಗಳೇ) ವಾದ ಪೃಥಿವ್ಯಾದಿ ಕಾರ್ಯಗಳು, ಹಾಗು ಇದರಂತೆ ಅಹಂಕಾರವೆಂಬ ಕಾರಣದಿಂದ ಸತ್ಯಗಳೇ ಆದ ತನ್ಮಾತ್ರಗಳೆಂಬ ಕಾರ್ಯಗಳು, ಮಹತ್ತತ್ತ್ವದಿಂದ ಸತ್ಯವೇ ಆದ ಅಹಂಕಾರವು, ಸತ್ಯವೇ ಆದ ಮಹತ್ತತ್ತ್ವವಾದರೋ ಅವ್ಯಕ್ತ ತತ್ತ್ವದಿಂದ ಹೀಗೆ ವಿಭಕ್ತವಾಗಿವೆ ಈ ರೀತಿಯಾಗಿರುವ, ಪರಮ ಅವ್ಯಕ್ತವೆಂಬ ಕಾರಣದಿಂದ ಪರಂಪರೆಯಿಂದ ವಿಶ್ವದ ಕಾರ್ಯದ ವಿಭಾಗವು ಆಗುತ್ತದೆ ಪ್ರಳಯದಲ್ಲಿ ಮೃತ್ಪಿಂಡವನ್ನಾಗಲೀ ಬಂಗಾರದ ಗಟ್ಟಿಯನ್ನಾಗಲೀ ಪ್ರವೇಶಿಸುವ ಘಟಮುಕುಟ ಮುಂತಾದವುಗಳು ಅವ್ಯಕ್ತವಾಗುವವು ಹೀಗೆ ಆ ಕಾರಣರೂಪವೇ ಅಭಿವ್ಯಕ್ತವಾಗದ ಘಟಮುಕುಟ ಮುಂತಾದ ಕಾರ್ಯಗಳ ದೃಷ್ಟಿಯಿಂದ ಅವ್ಯಕ್ತವೆನಿಸುತ್ತದೆ ಇದರಂತೆ ತನ್ಮಾತ್ರಾಗಳಲ್ಲಿ ಸೇರುತ್ತಿರುವ ಪೃಥಿವ್ಯಾದಿಗಳು ತಮ್ಮ ಅಪೇಕ್ಷೆಯಿಂದ ತನ್ಮಾತ್ರಾಗಳನ್ನು ಅವ್ಯಕ್ತವಾಗಿರಿಸಿಕೊಳ್ಳುತ್ತವೆ ಇದರ ಹಾಗೆ ಅಹಂಕಾರವನ್ನು ಪ್ರವೇಶಿಸುವ ತನ್ಮಾ

— ವಿಶೇಷಾರ್ಥಪದೀಪಿಕಾ —

"ಇದು ಕೂರ್ಮ ಶರೀರವು. ಇವು ಅದರ ಅಂಗಗಳು" ಎಂಬುದಾಗಿ ಬೇರ್ಪಟ್ಟು ತೋರುತ್ತವ ಹೀಗೆ ಅರ್ಥ 'ತಸ್ಮಿನ್ನೇವ -ಇದರ ಮುಂದೆ, "ನಿವಿಶಮಾನಾನಿ" ಎಂಬುದನ್ನು ಹಚ್ಚಿಕೊಳ್ಳಬೇಕು ಸೇರುತ್ತಿರುವವುಗಳಾಗಿ ಅವ್ಯಕ್ತವಾಗುತ್ತವೆ," ಹೀಗೆ ಅರ್ಥ ಈ ದೃಷ್ಟಾಂತವು "ಅವಿಭಾಗ"ಹೇತುವಿನಉಪಪಾದನ ಸ್ಥಲದಲ್ಲಿ ಉಪಯೋಗ ಹೊಂದುವದು. ಆದರೂ ಪ್ರಸಂಗದಿಂದ ಇಲ್ಲಿಯೂ ಹೇಳಿದ್ದಾರೆ "ಯಥಾ ಕೂರ್ಮಶರೀರೇ ತದಂಗಾನ್ಯವ್ಯಕ್ತೀಭವಂತಿ ಏವಂ" ಇಷ್ಟು ವಾಕ್ಯವನ್ನು ಎಲ್ಲ ಕಡೆಗಳಲ್ಲಿ ಹಚ್ಚಿಕೊಳ್ಳಬೇಕು. "ತನ್ಮಾತ್ರಾಣಿ"– ಇದು

विशन्त्यहङ्कारमव्यक्तयन्ति । एवमहङ्कारो महान्तमाविशन्महान्तमव्यक्तयति । महान्प्रकृतिं स्वकारणं विशति । प्रकृतेस्तु न क्वचिन्निवेशः इति सा सर्वकार्याणामव्यक्तमेव । सोऽयमविभागः प्रकृतौ वैश्वरूप्यस्य नानारूपस्य कार्यस्य । तस्मात्कारणे कार्यस्य सत एव विभागाभ्यामव्यक्तं कारणमस्तीति । इतश्च शक्तितः प्रवृत्तेः । कारणशक्तितो हि कार्यं प्रवर्तते । अशक्तात्कारणात्कार्यस्यानुत्पत्तेः । शक्तिश्च कारणगता

— ಪದಾರ್ಥದೀಪಿಕಾ —

ತ್ರಾಗಳು ಅಹಂಕಾರವನ್ನು ಅವ್ಯಕ್ತೀಕರಿಸುತ್ತವೆ ಇದೇ ಪ್ರಕಾರ ಅಹಂಕಾರವು ಮಹತ್ತತ್ತ್ವದಲ್ಲಿ ಸೇರುತ್ತಿದ್ದು ಅದನ್ನು ತನ್ನ ಅವ್ಯಕ್ತವನ್ನಾಗಿಟ್ಟುಕೊಳ್ಳುತ್ತದೆ ಮಹತ್ತತ್ತ್ವವಾದರೋ ತನ್ನ ಕಾರಣವಾದ ಪ್ರಕೃತಿಯನ್ನು ಸೇರುತ್ತದೆ ಪ್ರಕೃತಿಗಾದರೋ ಎಲ್ಲಿಯೂ ನಿವೇಶವಿಲ್ಲ ಈ ಕಾರಣದಿಂದ, ಸರ್ವಕಾರ್ಯಗಳಿಗೆ ಅದು ಅವ್ಯಕ್ತವೇ ಎನಿಸುತ್ತದೆ ಇಂಥ ಅವಿಭಾಗವು (ಲಯವು) 'ವೈಶ್ವರೂಪ್ಯಸ್ಯ"– ನಾನಾ ರೂಪವಾದ ಕಾರ್ಯಕ್ಕೆ ಪ್ರಕೃತಿಯಲ್ಲಿಯೇ! ಆದುದರಿಂದ, ಕಾರಣದಲ್ಲಿ ಇರುವ ಕಾರ್ಯದ ವಿಭಾಗ ಹಾಗು ಅವಿಭಾಗಗಳಿಂದಲೇ ಅವ್ಯಕ್ತವು ಕಾರಣವಾಗಿದೆಯೆಂದು ಸಿದ್ಧಿಸುತ್ತದೆ "ಶಕ್ತಿತಃ ಪ್ರವೃತ್ತೇಃ' ಈ ಕಾರಣಗಳಿಂದಲೂ— ಹೇಗೆಂದರೆ ಕಾರಣಶಕ್ತಿಯಿಂದ ಕಾರ್ಯವು ಪ್ರವೃತ್ತವಾಗುತ್ತದೆ ಏಕೆಂದರೆ ಅಶಕ್ತ ಕಾರಣದಿಂದ ಕಾರ್ಯವು ಹುಟ್ಟುವುದಿಲ್ಲ ಆ ಶಕ್ತಿ

— ವಿಶೇಷಾರ್ಥಪ್ರದೀಪಿಕಾ —

ದ್ವಿತೀಯಾಂತವಿದ್ದು, ಇದರಮುಂದೆ "ವಿಶಂತೋಽವ್ಯಕ್ತೀಭವಂತಿ" ಎಂಬುದನ್ನು ಹಚ್ಚಿಕೊಳ್ಳಬೇಕು ಹಾಗು ಮುಂದೆಯೂ 'ಅವ್ಯಕ್ತೀಭವಂತಿ' ಎಂಬುದು ಬಂದಾಗ ಹಚ್ಚಿಕೊಳ್ಳಬೇಕು "ಸ್ವಾಪೇಕ್ಷಯಾ" – ತನ್ಮಾತ್ರಾಗಳು (ಶಬ್ದಮುಂತಾದುದು) ವ್ಯಕ್ತವಾಗಿದ್ದರೂ ಪೃಥಿವ್ಯಾದಿಗಳು ಅವ್ಯಕ್ತವಾಗಿರುವುದೆಂಬ ಕಾರಣದಿಂದ ಅವುಗಳಿಗೆ "ಅವ್ಯಕ್ತ"ವೆಂಬ ವ್ಯವಹಾರವಿರುತ್ತದೆ ಹೀಗೆ ಅರ್ಥವನ್ನು ತಿಳಿಯಬೇಕು "ವೈಶ್ವರೂಪಸ್ಯ" ಎಂಬುದು ಅನುವಾದ 'ನಾನಾರೂಪಸ್ಯ" ಎಂಬುದು ಅದರ ವ್ಯಾಖ್ಯಾನವು

'ಇತಶ್ಚ" ಎಂಬ ವಚನದಿಂದ ಇನ್ನೊಂದು ಯುಕ್ತಿಯನ್ನು 'ಶಕ್ತಿತಃ" ಪ್ರವೃತ್ತೇಃ" ಈ ವಾಕ್ಯದಿಂದ ಹೇಳುತ್ತಾರೆ ಇದರ ವಿವರಣವನ್ನು "ಕಾರಣಶಕ್ತಿತಃ" ಇತ್ಯಾದಿ ವಾಕ್ಯದಿಂದ ಮಾಡುತ್ತಾರೆ

न कार्यस्याव्यक्तत्वादन्या । अस्तु तर्हि महत एव परमाव्यक्तत्वमित्यत उक्तं भेदाना परिमाणादिति । महदादीनामव्यापकत्वादव्यक्तकारणकत्वं घटादिवदित्यर्थः । इतश्च समन्वयात् । सुखदुःखमोहसमन्वितानि हि कार्याणि । यानि च यद्रूपमनुगतानि तानि तत्स्वभावाव्यक्तकानि ।

— ಪದಾರ್ಥದೀಪಿಕಾ —

ಯಾದರೊ ಕಾರಣದಲ್ಲಿರುವದು ಹಾಗು ಕಾರ್ಯದ ಅವ್ಯಕ್ತತೆಯಿಂದ (ಅವ್ಯಕ್ತವಾದ ಕಾರ್ಯಗರ್ಭಿತವಾಗಿರುವುದು) ಬೇರೆಯಾದುದಲ್ಲ ಹಾಗಾದರೆ— ಮಹತ್ತತ್ತ್ವವೇ ಪರಮ ಅವ್ಯಕ್ತವಾಗಲೆಂದು ಶಂಕಿಸಿದರೆ ಉತ್ತರವನ್ನು "ಭೇದಾನಾಂ ಪರಿಮಾಣಾತ್" ಎಂಬುದರಿಂದ ಹೇಳಿದ್ದಾರೆ ಮಹದಾದಿಗಳು ವ್ಯಾಪಕಗಳಲ್ಲವಾದುದರಿಂದ ಘಟಾದಿಗಳ ಹಾಗೆ ಅವ್ಯಕ್ತ (ಪ್ರಕೃತಿಯೇ) ವೇ ಕಾರಣವಾಗಿಯುಳ್ಳವುಗಳು ಹೀಗೆ ಅರ್ಥ ಸಮನ್ವಯವೆಂಬ ಈ ಕಾರಣದಿಂದಲೂ ! ಕಾರ್ಯಗಳು ಸುಖದುಃಖ ಮೋಹಗಳನ್ನು ಹುಟ್ಟಿಸುವವುಗಳು ಮತ್ತು ಯ ಎವವು ಯಾವ ರೂಪಗಳಿಂದ ಅನುಗತಗಳೋ ಅವುಗಳು ಆ ಸ್ವಭಾವವುಳ್ಳ ಕಾರಣ (ಅವ್ಯಕ್ತ)ವಾಗಿವುಳ್ಳವುಗಳು ಉದಾ — ಮಣ್ಣು ಬಂಗಾರದ

— ವಿಶೇಷಾರ್ಥಪ್ರದೀಪಿಕಾ —

"ಪರಿಮಾಣಾತ್" ಎಂಬುದಕ್ಕೆ "ಪರಿಮಿತತ್ವವಿದ್ದುದರಿಂದ" ಎಂಬ ಅರ್ಥವನ್ನು ಒಪ್ಪಿ "ಅವ್ಯಾಪಕತ್ವಾತ್" ಎಂಬುದಾಗಿ ಹೇಳಿದ್ದಾರೆ ವಿವಾದಾಸ್ಪದ ಕಾರ್ಯಗಳು ಅವ್ಯಕ್ತ (ಪ್ರಧಾನ) ಕಾರಣವುಳ್ಳವುಗಳು ಏಕಂದರೆ ಪರಿಮಿತಗಳಾಗಿವೆ ಘಟಾದಿಗಳು ದೃಷ್ಟಾಂತಗಳು, ಹೀಗೆ ಇಲ್ಲಿ ಅನುಮಾನಪ್ರಯೋಗವನ್ನು ತಿಳಿಯಬೇಕು "ಸಮನ್ವಯಾತ್" ಎಂಬುದರ ಅವತಾರಿಕೆಯನ್ನು ಹೇಳಿ, ಅದನ್ನು "ಇತಶ್ಚ" ಇತ್ಯಾದಿ ವಾಕ್ಯದಿಂದ ವಿವರಿಸುತ್ತಾರೆ "ಸುಖದುಃಖಮೋಹ ಸಮನ್ವಿತಾನಿ —ಸುಖದುಃಖಮೋಹಜನಕಗಳು, ಅಥವಾ ಸುಖದು ಖಮೋಹಸ್ವಭಾವದವುಗಳು, ಹೀಗೆ ಅರ್ಥ "ಯದ್ರೂಪಂ"=ಅನುಗತಾನಿ" —ಯಾವುದರ ಜನನಮಾಡುವ ಸ್ವಭಾವವನ್ನು ಹೊಂದಿರುವವೋ ಅದರ ಜನನಮಾಡುವ ಸ್ವಭಾವವುಳ್ಳ ಅವ್ಯಕ್ತ (ಕಾರಣ)ವುಳ್ಳವುಗಳು ವನಿತಾಮುಂತಾದ ಯಾವದೊಂದು ವಸ್ತುವು, ತನ್ನನ್ನು ಅನುಭವಿಸುವ ಕೆಲವರಿಗೆ ಸುಖಕಾರಣವಾಗುತ್ತದೆ ಆಗ ಅವರನ್ನು ಕುರಿತು (ಅವರಲ್ಲಿ) ಸತ್ವಗುಣದ ಉದ್ರೇಕಮಾಡುತ್ತದೆ ಸವತಿ ಮುಂತಾದ ಇನ್ನಿತರ ಕೆಲವರಿಗೆ ದುಃಖಕಾರಣವಾಗಿ ಅವರಲ್ಲಿ ರಜೋಗುಣದ ಉದ್ರೇಕವಾಗುತ್ತದೆ ಬೇರೆ ಕಾಮುಕ ಮುಂತಾದವರಿಗೆ ಮೋಹಕಾರಣವಾಗಿ

यथा मृद्धेमरूपमनुगता घटमुकुटादयो मृद्धेमपिण्डाव्यक्तकाः । तस्मादस्ति सुखदुःखमोहात्मकानां सत्त्वरजस्तमसां साम्यावस्थाऽव्यक्तं भेदानामिति । यद्यप्येनान्यनुमानान्यव्यक्तस्वरूपं साधयन्ति । तथाऽपि महदादिकारणतयैव तदेतैः सिध्यतीति ।

## — ಪದಾರ್ಥ ದೀಪಿಕಾ —

ರೂಪವನ್ನು ಅನುಗತಿಸುವ ಘಟಮುಕುಟ ಮುಂತಾದವುಗಳು ಮೃತ್ಪಿಂಡ ಹೇಮ ಪಿಂಡಗಳೇ ಅವ್ಯಕ್ತ (ಕಾರಣ) ವಾಗಿಯುಳ್ಳವುಗಳು ಆದುದರಿಂದ ಸುಖದುಃಖ ಮೋಹಾತ್ಮಕಗಳಾದ ಸತ್ತ್ವರಜಸ್ತಮಸ್ಸುಗಳಿಗೆ ಸಾಮ್ಯಾವಸ್ಥೆಯೆಂಬುದು ಭೇದ ಗಳ (ಕಾರ್ಯಗಳಿಗೆ) ಅವ್ಯಕ್ತ (ಕಾರಣ) ವಾದುದೊಂದಿದೆಂದು ಸಿದ್ಧಿಸುತ್ತದ. ಇನ್ನು ಈ ಅನುಮಾನಗಳು ಅವ್ಯಕ್ತಸ್ವರೂಪವನ್ನು ಸಾಧಿಸುತ್ತವೆ ಇದು ನಿಜ ಆದರೂ ಇವುಗಳಿಂದ ಮಹದಾದಿಗಳ ಕಾರಣವಾಗಿಯೇ ಆ ಪ್ರಕೃತಿಯು (ಅವ್ಯಕ್ತವು) ಸಿದ್ಧಿಸುತ್ತದೆ ಹೀಗೆ ಸಾಂಖ್ಯರು ಪೂರ್ವಪಕ್ಷಿಸುತ್ತಾರೆ

## — ವಿಶೇಷಾರ್ಥಪ್ರದೀಪಿಕಾ —

ಅವರಲ್ಲಿ ತಮೋಗುಣೋದ್ರೇಕಮಾಡುತ್ತದೆ ಹೀಗೆ ಸುಖದುಃಖಮೋಹಗಳ ಕಾರಣಗಳಾದ ಸತ್ವರಜತಮಗಳೆಂಬ ಅನುರೂಪ ಕಾರಣ (ಅವ್ಯಕ್ತ)ಗಳುಳ್ಳವು ಗಳು ಎಲ್ಲ ಕಾರ್ಯಗಳು ಈ ಅಭಿಪ್ರಾಯದಿಂದ, "ತಸ್ಮಾದಸ್ತಿ" ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ. "ಸಾಮ್ಯಾವಸ್ಥಾ" –ಪರಸ್ಪರ ಮಿಶ್ರಣವಿಲ್ಲದೆಯೆ ಇರುವ ಶುದ್ಧಸ್ಥಿತಿಯಲ್ಲಿರುವ ಸತ್ವಾದಿಗಳು ಅವ್ಯಕ್ತ ಎಂದರೆ ಮೂಲಕಾರಣವೆನಿಸುತ್ತವೆ ಹೀಗೆ ಭಾವ

"ಕಾರಣತಯೈವ" –ಕಾರ್ಯಗಳ ಅವ್ಯಕ್ತವಾಗಿರುವಿಕೆಯು ಕಾರಣವೆಂದು ಅಂಗೀಕರಿಸುವುದರಿಂದ, ಮಹದಾದಿ ಕಾರಣರೂಪದಿಂದ –ಅವ್ಯಕ್ತವು ಸಿದ್ಧಿಸುತ್ತದೆ ಕಾರ್ಯಕಾರಣಗಳಲ್ಲಿರುವ ವಿಭಾಗ ಅವಿಭಾಗಯುಕ್ತಿಗಳಿಂದ ಅವ್ಯಕ್ತದ ಸ್ವರೂಪವಷ್ಟೇ ಸಿದ್ಧಿಸುತ್ತದೆ ಕೂರ್ಮಶರೀರದಂತೆ ಅನಭಿವ್ಯಕ್ತವಾದ ಕಾರ್ಯಾವಸ್ಥೆಯುಳ್ಳ ಒಂದು ವಸ್ತುವಷ್ಟೇ ಸಿದ್ಧಿಸುತ್ತದೆ ಅದು ಮಹದಾದಿಗಳ ಕಾರಣವೆಂಬುದು. ಎಲ್ಲ ಕಾರ್ಯಗಳ ಅವ್ಯಕ್ತ ಅವಸ್ಥೆಯೇ ಕಾರಣವೆಂದು ಅಂಗೀಕರಿಸಿದುದರಿಂದ ಸಿದ್ಧಿಸುತ್ತದೆ ಹೀಗೆ ಭಾವ-

ಇನ್ನು ಅವ್ಯಕ್ತಮುಂತಾದ ಶಬ್ದಗಳಿಗೆ ಬ್ರಹ್ಮನಲ್ಲಿ ಸಮನ್ವಯವಿರುವುದರಿಂದ, ಹೀಗೆ ಹೇಳುವುದು ಸರಿಯಲ್ಲವೆಂಬ ಆಕ್ಷೇಪವನ್ನು "ಶರೀರರೂಪಕ"

## ॥ ॐ रचनानुपपत्तेश्च नानुमानम् ॐ ॥

अत्र वक्तव्यम् । किमेतैरनुमानैर्जगदुपादानतामात्रेणाव्यक्तं सिध्यति । उत स्वातन्त्र्येणा ( पीति ) पि । आद्ये सिद्धसाधनम् । अस्माभिरपि विश्वोपादानस्य प्रधानस्याभ्युपगतत्वात् । शरीररूपकेति ह्युक्तम् ।

द्वितीयं निराकर्तुं सूत्रम् ॥ रचनानुपपत्तेश्च नानुमानमिति ॥ तद्व्याचष्टे ॥ इदमिति । महदादिकार्यमित्यर्थः । अचेतनवशं स्वतन्त्रा-

— ಪದಾರ್ಥದೀಪಿಕಾ —

ಈ ಪೂರ್ವಪಕ್ಷದ ಮೇಲೆ ಹೀಗೆ ಹೇಳತಕ್ಕದ್ದು ಈ ಅನುಮಾನಗಳಿಂದ ಜಗತ್ತಿನ ಉಪಾದಾನವೆಂಬ ಕಾರಣವಾಗಿ ಮಾತ್ರ ಅವ್ಯಕ್ತವು (ಪ್ರಕೃತಿಯು) ಸಿದ್ಧಿಸುವದೋ ? ಇಲ್ಲವೆ ಸ್ವತಂತ್ರವಾಗಿಯೂ ಅವ್ಯಕ್ತವು ಸಿದ್ಧಿಸುವದೋ ? ಹೀಗೆ ಪ್ರಶ್ನೆ ಮೊದಲನೆಯ ಪಕ್ಷದಲ್ಲಿ ಸಿದ್ಧಸಾಧನವು ಏಕಂದರೆ ನಾವೂ ಸಹ ವಿಶ್ವದ ಉಪಾದಾನವಾದ ಪ್ರಧಾನವನ್ನು ಅಂಗೀಕರಿಸಿದ್ದೇವೆ ಏಕೆಂದರೆ "ಶರೀರರೂಪಕ" ಎಂಬುದಾಗಿ ಸೂತ್ರದಲ್ಲಿ ಹೇಳಿದ್ದಾರ ಎರಡನೆಯ ಪಕ್ಷವನ್ನು ನಿರಾಕರಿಸಲು "ರಚನಾನುಪಪತ್ತೇಶ್ಚನಾನುಮಾನಂ" ಎಂಬ ಸೂತ್ರವು ಹೊರಟಿದೆ ಅದನ್ನು "ಇದಂ" ಇತ್ಯಾದಿ ವಚನದಿಂದ ವಿವರಿಸುತ್ತಾರೆ ಮಹದಾದಿಕಾರ್ಯ ವೆಂದು ಅರ್ಥ "ಅಚೇತನವಶಂ"– ಸ್ವತಂತ್ರವಾದ ಅಚೇತನದ ಅಧೀನವಾದ

— ವಿಶೇಷಾರ್ಥಪ್ರದೀಪಿಕಾ —

ಇತ್ಯಾದಿ ವಾಕ್ಯದಿಂದ ಕಳೆಯುತ್ತಾರೆ ಶರೀರಸ್ಯ ರೂಪಮಿವ ಭಗವತ್ತಂತ್ರಂ ರೂಪಂ ಯಸ್ಯ" ಎಂಬ ವ್ಯುತ್ಪತ್ತಿಯಿಂದ, "ಶರೀರರೂಪಕೇ"=ಶರೀರದಂತೆ ಇರುವ ಪ್ರಧಾನದಲ್ಲಿ "ವಿನ್ಯಸ್ತಸ್ಯ"=ವಾಸಮಾಡಿದ ಹರಿಗೆ "ಗೃಹೀತೇಃ= "ಅವ್ಯಕ್ತ" ಶಬ್ದದಿಂದ ಗ್ರಹಣವಿರುವುದರಿಂದ, ಎಂಬುದಾಗಿ, ಆನುಮಾನಿಕಾಧಿ ಕರಣದಲ್ಲಿ "ಅವ್ಯಕ್ತ" ಶಬ್ದದಿಂದ, ಪ್ರಧಾನವೂ ಆ ಶಬ್ದದ ಮುಖ್ಯಾರ್ಥವಾದ ಹರಿಯಸಂಬಂಧ (ಸನ್ನಿಧಿ)ವಿರುವುದರಿಂದ, ಗೃಹಿಸಲ್ಪಡುತ್ತದೆಯೆಂದು ಹೇಳಲಾ ಗಿದೆ ಹೀಗೆ ಭಾವ

"ಏವ"ಕಾರದ ತಾತ್ಪರ್ಯವನ್ನು ಹೇಳುತ್ತ ಉತ್ತರಾರ್ಧವನ್ನು "ಆಸ್ತಾಂ" ಇತ್ಯಾದಿ ವಾಕ್ಯದಿಂದ ವಿವರಿಸುತ್ತಾರೆ "ಇತಿ ವಾ ಆವರ್ತನೀಯಂ" --ಇಲ್ಲಿ

इदं नाचेतनवशं वस्तुत्वात्प्रतिपन्नवत् ॥
इत्येव प्रतिषिद्धस्य केन मूलानुमा भवेत् ॥

चेतनाधीनोत्पत्तिकम् । प्रतिपन्नवत् । प्रधानवत् । आस्तां तावद्दूषणान्तरमिति प्रत्यनुमानेनैव प्रतिषिद्धस्य प्रधानस्वातन्त्र्यस्य मूलानुमा-साधकानुमा केन सामर्थ्येन भवेत् प्रमाणमिति शेषः । मूलानुमेति वाऽऽवर्तनीयम् । किमाक्षेपे । अकार्यत्वमत्रोपाधिरिति चेन्न । पटादौ

ಮಹದಾದಿ ಕಾರ್ಯವು ಸ್ವತಂತ್ರವಾದ ಅಚೇತನದ ಅಧೀನವಾದ ಉತ್ಪತ್ತಿಯುಳ್ಳದ್ದಲ್ಲ ಏಕೆಂದರೆ ಪದಾರ್ಥವಾಗಿದೆ ಇದರಲ್ಲಿ ಪ್ರಧಾನವು ದೃಷ್ಟಾಂತವು. ಹೀಗೆ ಪ್ರತ್ಯನುಮಾನದಿಂದ ಬಾಧಿಸಲ್ಪಟ್ಟ ಪ್ರಧಾನದ ಸ್ವಾತಂತ್ರ್ಯಕ್ಕೆ ಸಾಧಕವಾದ ಅನುಮಾನವು ಯಾವ ಸಾಮರ್ಥ್ಯದಿಂದ ಪ್ರಮಾಣವಾದೀತು ?

## — ಪದಾರ್ಥದೀಪಿಕಾ —

ಉತ್ಪತ್ತಿಯುಳ್ಳದ್ದು "ಪ್ರತಿಪನ್ನವತ್"– ಪ್ರಧಾನದ ಹಾಗೆ ಬೇರೆ ದೂಷಣವು ಒಂದು ಕಡೆ ಇರಲಿ "ಇತ್ಯೇವ"– ಹೀಗಿರುವ ಪ್ರತ್ಯನುಮಾನದಿಂದಲೇ, ನಿರಾಕರಿಸಲ್ಪಟ್ಟ ಪ್ರಧಾನದ ಸ್ವಾತಂತ್ರ್ಯಕ್ಕೆ 'ಮೂಲಾನುಮಾ"= ಸಾಧಕವಾದ ಅನುಮಾನವು, 'ಕೇನ"= ಯಾವ ಸಾಮರ್ಥ್ಯದಿಂದ "ಭವೇತ್"= ಪ್ರಮಾಣವಾದೀತು? ಇಲ್ಲಿ "ಪ್ರಮಾಣಂ" ಎಂಬುದು ಶೇಷವು ಅಥವಾ "ಮೂಲಾನುಮಾ" ಎಂಬುದನ್ನು ಆವರ್ತನ ಮಾಡಬೇಕು "ಕಿಂ" ಶಬ್ದವು ಆಕ್ಷೇಪಾರ್ಥದಲ್ಲಿದೆ ಇಲ್ಲಿ ಅಕಾರ್ಯತ್ವವು (ಕಾರ್ಯವಾಗದಿರುವುದು) ಉಪಾಧಿಯೆಂದು ಹೇಳಬಾರದು.

## — ವಿಶೇಷಾರ್ಥಪ್ರದೀಪಿಕಾ —

"ಮೂಲಾನುಮಾ"=ಸಾಧಕವಾದ ಅನುಮಾನವು "ಕೇನ"=ಯಾವ ಸಾಮರ್ಥ್ಯದಿಂದ, "ಮೂಲಾನುಮಾ"=ವ್ಯಾಪ್ತಿ ಪಕ್ಷಧರ್ಮತಾಮೂಲಕವಾದ ನಿರ್ದೋಷೋಪಪತ್ತಿರೂಪ ಅನುಮಾನವು ಅಥವಾ ಮೂಲಭೂತ ಅನುಮಾನವು ಅಂದರೆ– ಅವ್ಯಕ್ತಅನುಮಾಪಿಕೆಯು, "ಭವೇತ್" –ಆದೀತು? ಹೀಗೆ ಅರ್ಥ

''ಅತ್ರ" –''ಮಹದಾದಿಕಂ ಸ್ವತಂತ್ರಾಚೇತನಾಧೀನೋತ್ಪತ್ತಿಕಂ ವಸ್ತುತ್ವಾತ್ ಪ್ರಧಾನಾದಿವತ್" ಎಂಬ ಅನುಮಾನದಲ್ಲಿ

''ಅಕಾರ್ಯತ್ವಂ ಉಪಾಧಿಃ" –''ಸ್ವತಂತ್ರವಾದ ಅಚೇತನದ ಅಧೀನವಾದ ಉತ್ಪತ್ತಿಯುಳ್ಳದ್ದಾಗದಿರುವುದು" ಎಂಬ ಸಾಧ್ಯವು ಪ್ರಧಾನದಲ್ಲಿದ್ದು, ಅಲ್ಲಿ ಅಕಾರ್ಯತ್ವವು (ಕಾರ್ಯತ್ವದ ಅಭಾವವು –ಕಾರ್ಯವಾಗದಿರುವುದು) ಎಂಬ ಉಪಾ

साध्याव्याप्तेः । पटादेः कुविन्दाद्यधिष्ठिततन्त्वादिकार्यत्वस्यान्वयव्यतिरेकाभ्यामुपलम्भात् ।

एवं प्रधानस्य रचनायाः स्वतन्त्रप्रवृत्तेरनुमानविरोधेनानुपपत्तेर्नानुमानं तत्र प्रमाणमिति सूत्राक्षरयोजनां मनसि निधाय सूत्रतात्पर्यमुक्तम् । इदानीं तामेव विवृण्वन्प्रतिपक्षान्तरमाह ॥ स्वतन्त्रेति । चशब्दोऽनुमानान्तरसमुच्चये । कुत एवेत्यन्वयः । अयमत्र प्रयोगः ।

— ಪದಾರ್ಥದೀಪಿಕಾ —

ಏಕೆಂದರೆ ಪಟ ಮುಂತಾದುದರಲ್ಲಿ ಅಕಾರ್ಯತ್ವವು ಸಾಧ್ಯವ್ಯಾಪಕವಾಗುವುದಿಲ್ಲ ಏಕೆಂದರೆ ಪಟ ಮುಂತಾದವುಗಳು ಕುವಿಂದ (ನೇಕಾರ) ಮುಂತಾದ ಚೇತನರಿಂದ ಅಧಿಷ್ಠಿಸಲ್ಪಟ್ಟ ತಂತುಮುಂತಾದವುಗಳಿಂದ ಹುಟ್ಟಿರುವುದು ಅನ್ವಯವ್ಯತಿರೇಕದಿಂದ ತಿಳಿದು ಬರುತ್ತದೆ

ಹೀಗೆ ಪ್ರಧಾನಕ್ಕೆ "ರಚನಾಯಾಃ"= ಸ್ವತಂತ್ರ ಪ್ರವೃತ್ತಿಯ ಒಗ್ಗ, ಅನುಮಾನ (ಯುಕ್ತಿ) ವಿರೋಧವಿರುವುದರಿಂದ ಅದು ಅಯುಕ್ತವಾಗುವದು ಆದುದರಿಂದ ಅನುಮಾನವು ಪ್ರಮಾಣವಾಗುವುದಿಲ್ಲವೆಂಬ ಸೂತ್ರಾಕ್ಷರಯೋಜನೆಯನ್ನು ಮನಸ್ಸಿನಲ್ಲಿಟ್ಟು ಸೂತ್ರದ ತಾತ್ಪರ್ಯವನ್ನು ಹೇಳಿದ್ದಾಯಿತು ಈಗ ಅದನ್ನೇ ವಿವರಿಸುತ್ತ ಬೇರೆ ಪ್ರತಿಪಕ್ಷಾನುಮಾನವನ್ನು "ಸ್ವತಂತ್ರ" ಇತ್ಯಾದಿ ವಚನದಿಂದ ಹೇಳುತ್ತಾರೆ "ಚ" ಶಬ್ದವು ಅನುಮಾನಾಂತರ ಸಮುಚ್ಚಯಾರ್ಥ

— ವಿಶೇಷಾರ್ಥಪ್ರದೀಪಿಕಾ —

ಧಿಯು ಇರುತ್ತದೆ ಸಾಧ್ಯದ ವ್ಯಾಪಕವಾಗಿದೆ ವಸ್ತುತ್ವವೆಂಬ ಸಾಧನವು ಮಹದಾದಿಗಳಲ್ಲಿ ಇದ್ದು ಅಲ್ಲಿ ಅಕಾರ್ಯತ್ವವು ಇಲ್ಲ ಈ ಕಾರಣದಿಂದ ಸಾಧನದ ಅವ್ಯಾಪಕವೂ ಆಗಿದೆ. ಆದುದರಿಂದ ಉಪಾಧಿಯು ಹೀಗೆ ಭಾವ

"ಪಟಾದೌ"=ಅಚೇತನದ ಅಧೀನವಾದ ಉತ್ಪತ್ತಿಯುಳ್ಳದ್ದಾಗದಿರುವುದೆಂಬ ಸಾಧ್ಯವು ಪಟದಲ್ಲಿ ಇದ್ದರೂ ಅಲ್ಲಿ ಅಕಾರ್ಯತ್ವವಿಲ್ಲ ಈ ಕಾರಣದಿಂದ ಉಪಾಧಿಯಲ್ಲವೆಂದು ಭಾವ ಪಟಾದಿಗಳಲ್ಲಿ ಈ ಸಾಧ್ಯವಿದೆಯೆಂಬುದನ್ನು "ಪಟಾದೇಃ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ "ಅನ್ವಯವ್ಯತಿರೇಕಾಭ್ಯಾಂ" – ಅನ್ವಯ ವ್ಯತಿರೇಕ ಯುಕ್ತಿಗಳಿಂದ ದೃಢವಾದ ಪ್ರತ್ಯಕ್ಷದಿಂದ

"ತಾಮೇವ" —ಸೂತ್ರಾಕ್ಷರಗಳ ಯೋಜನೆಯನ್ನು, ಅಥವಾ ರಚನಾನುಪಪತ್ತಿಯನ್ನು

स्वतन्त्रवृत्ती रचना सा चैवाचेतने कुत ॥
अचेतनत्वं स्वातन्त्र्यमिति चात्मप्रमाहतम् ॥

प्रधानं स्वतन्त्रप्रवृत्तिरहितम् । अचेतनत्वात् । तन्त्वादिवदिति । नन्वचेतनत्वेऽपि प्रधानस्य स्वातन्त्र्येण प्रवृत्तिरस्तु को विरोधः । तथा च विपक्षे बाधकाभावादप्रयोजकोऽयं हेतुरित्यत आह ॥ अचेतनत्वमिति । तावदेव ह्यनेनाशङ्कनीयम् । यस्मिन्नाशङ्क्यमाने स्ववचनस्वक्रियास्वन्यायप्रमाणान्तरविरोधो न प्रादुष्यात् । न हि कश्चिदेवं शङ्कते । मूकोऽपि वक्ता किन्न स्यात् । शब्दोऽप्रतिपादकः किन्न भवेत् । अनुमानत्वादनुमानमात्रमप्रमाणं कुतो न स्यात् । अग्निरनुष्णः कुतो न भवेदिति । न ह्येषा शङ्कापिशाची कदाचिच्छान्तिमुपगच्छति ।

ಸ್ವತಂತ್ರವಾದ ಪ್ರವೃತ್ತಿಯು ರಚನೆಯೆಂನಿಸುತ್ತದೆ. ಅಂಥ ಪ್ರವೃತ್ತಿಯೂ ದರೋ ಅಚೇತನದಲ್ಲಿ ಹೇಗೆ ಆದೀತು? ಅಚೇತನವಾಗಿರುವುದು (ಅಚೇತನತ್ವ) ಹಾಗು ಸ್ವಾತಂತ್ರ್ಯವು (ಸ್ವತಂತ್ರವಾಗಿರುವುದು) ಇವೆರಡೂ ಸ್ವವಚನ ವಿರುದ್ಧವೂ ಪ್ರಮಾಣ ವಿರುದ್ಧವೂ ಆಗುತ್ತದೆ.

— ಪದಾರ್ಥದೀಪಿಕಾ —

ದಲ್ಲಿದೆ "ಕುತ ಏವ" ಎಂಬುದಾಗಿ ಏವಕಾರದ ಅನ್ವಯವು ಇಲ್ಲಿಯ ಪ್ರಯೋಗವು ಇದು– "ಪ್ರಧಾನವು ಸ್ವತಂತ್ರ ಪ್ರವೃತ್ತಿಯಿಲ್ಲದ್ದು ಏಕೆಂದರೆ- ಅಚೇತನವಾಗಿದೆ ತಂತುಮುಂತಾದುದು ಇಲ್ಲಿ ದೃಷ್ಟಾಂತವು" ಹೀಗೆ ಇನ್ನು ಅಚೇತನವಾದರೂ ಪ್ರಧಾನಕ್ಕೆ ಸ್ವತಂತ್ರವಾದ ಪ್ರವೃತ್ತಿಯು ಇರಲಿ, ದೋಷವೇನು ? ಆದುದರಿಂದ ವಿಪಕ್ಷದಲ್ಲಿ ಬಾಧಕವಿಲ್ಲವಾದುದರಿಂದ ಹೇತುವು ಅಪ್ರಯೋಜಕವೆಂಬ ಆಶಂಕೆಯನ್ನು 'ಅಚೇತನತ್ವಂ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಯಾವದನ್ನು ಆಶಂಕಿಸಿದರೆ– "ಸ್ವವಚನವಿರೋಧ, ಸ್ವಕ್ರಿಯಾವಿರೋಧ, ಸ್ವನ್ಯಾಯವಿರೋಧ, ಪ್ರಮಾಣಾಂತರ ವಿರೋಧಗಳು ಬರುವುದಿಲ್ಲವೋ ಅಷ್ಟೇ– ಅದನ್ನೇ ಅವನು ಇಲ್ಲಿ ಆಶಂಕಿಸಬೇಕು ಏಕೆಂದರೆ "ಮೂಕನು ಏಕೆ ವಕ್ತೃವಾಗಿರಬಾರದು" ಶಬ್ದವು ಪ್ರತಿಪಾದಕವಾಗದಿರುವಂತಹದು ಏಕೆ ಆಗಬಾರದು ಅನುಮಾನವಾದುದರಿಂದ ಅನುಮಾನವೆಲ್ಲವೂ ಅಪ್ರಮಾಣವೇಕೆ ಆಗಬಾರದು ? ಅಗ್ನಿಯು ಅನುಷ್ಣ (ಶೀತ–ಬಿಸಿಯಿಲ್ಲದ್ದು) ವೇಕೆ ಆಗಬಾರದು? ಹೀಗೆ ಯಾವನೂ ಶಂಕಿಸುವುದಿಲ್ಲ ಈ ಶಂಕಾಪಿಶಾಚವು ಎಂದಿಗೂ ಶಾಂತಿ

तस्मादेवमाशङ्कमानो न लौकिको नापि परीक्षक इत्युन्मत्तवदुपेक्षणीयः। प्रकृते चाचेतनत्वं स्वातन्त्र्यं चात्मप्रमाहतम्। स्वव्याहतं प्रमाणविरुद्धं च। तस्मादचेतनत्वेऽपि स्वतन्त्रप्रवृत्तिरस्तु प्रधानस्येति शङ्कैव नोत्पत्तुमर्हतीति किमत्र बाधकोपन्यासेनेति।

नन्वचेतनस्य स्वातन्त्र्यशङ्काया कथं स्वव्याहतिः। न हि स्वातन्त्र्यं नाम चैतन्यम्। नाप्यचेतनत्वं नामास्वातन्त्र्यम्। कथं च प्रमाणविरोध इत्यतः स्वव्याघातं तावदुपपादयितुं स्वातन्त्र्यं

— ಪದಾರ್ಥದೀಪಿಕಾ —

ಹೊಂದುವುದಿಲ್ಲ ಆದುದರಿಂದ ಹೀಗೆ ಆಶಂಕಿಸುವವನು, ಲೌಕಿಕನೂ ಅಲ್ಲ ಪರೀಕ್ಷಕನೂ ಅಲ್ಲ, ಆದುದರಿಂದ ಉನ್ಮತ್ತನ ಹಾಗೆ ಉಪೇಕ್ಷಿಸಲ್ಪಡಲರ್ಹನು ಪ್ರಕೃತದಲ್ಲಿಯಾದರೋ ಅಚೇತನತ್ವವೂ ಸ್ವತಂತ್ರತ್ವವೂ ಇದಯೆಂಬುದು "ಆತ್ಮಪ್ರಮಾಹತ" ವಾದುದು ಅಂದರೆ ಸ್ವವ್ಯಾಹತ (ಸ್ವವಿರುದ್ಧ) ವೂ ಪ್ರಮಾಣವಿರುದ್ಧವೂ ಆಗಿದೆ ಆದುದರಿಂದ, "ಅಚೇತನವಾದರೂ ಪ್ರಧಾನಕ್ಕೆ ಸ್ವತಂತ್ರ ಪ್ರವೃತ್ತಿಯು ಇರಲಿ"ಯೆಂಬ ಆಶಂಕೆಯೇ ಹುಟ್ಟಲರ್ಹವೇ ಆಗುವುದಿಲ್ಲ ಆದುದರಿಂದ ಇದರ ಬಗ್ಗೆ ಬಾಧಕವನ್ನು ಹೇಳುವುದರಿಂದೇನು ? ಹೀಗೆ ಅರ್ಥ

ಇನ್ನು ಅಚೇತನಕ್ಕೆ ಸ್ವಾತಂತ್ರ್ಯವಿರಲೆಂಬುದಾಗಿ ಆಶಂಕಿಸಿದರ ಸ್ವವ್ಯಾಹತಿಯು ಹೇಗೆ ? ಏಕೆಂದರೆ ಸ್ವಾತಂತ್ರ್ಯವೆಂಬುದು ಚೈತನ್ಯ(ಚೇತನತ್ವ)ಎನಿಸುವುದಿಲ್ಲ ಆದರಂತೆ ಅಚೇತನತ್ವವೆಂದರೆ ಅಸ್ವತಂತ್ರತ್ವವೆಂದಲ್ಲ ಆದುದರಿಂದ ಸ್ವಪ್ರಮಾಣವಿರೋಧವಾದರೂ ಹೇಗೆ ? ಹೀಗೆ ಆಶಂಕೆಯು ಬರುವುದರಿಂದ,

— ವಿಶೇಷಾರ್ಥಪ್ರದೀಪಿಕಾ —

ಶಬ್ದವು ಪ್ರತಿಪಾದಕವಲ್ಲವೆಂದು ಹೇಳುವವನು, ಪರರಿಗೆ ತಿಳಿಸಲು ವಾಕ್ಯವನ್ನೇ ಪ್ರಯೋಗಿಸುತ್ತಾನೆ ಆದುದರಿಂದ, ಸ್ವಕ್ರಿಯಾವಿರೋಧವೆಂದು ತಿಳಿಯಬೇಕು "ಆತ್ಮಪ್ರಮಾಹತಂ'' —ಇಲ್ಲಿ ''ಆತ್ಮಹತ, ಪ್ರಮಾಹತ' ವೆಂಬ ಅರ್ಥಗಳನ್ನು ಹೃದಯದಲ್ಲಿಟ್ಟು ''ಸ್ವವ್ಯಾಹತಂ'' ಇತ್ಯಾದಿ ವಚನದಿಂದ ಹೇಳಿದ್ದಾರೆ

"ಸ್ವವ್ಯಾಘಾತಂ ತಾವತ್" — ''ಇಚ್ಛಾಮಿ'' ಇತ್ಯಾದಿ ವಾಕ್ಯಗಳಿಂದ ಪ್ರಮಾಣವಿರೋಧವನ್ನು ತೋರಿಸಿದುದರಿಂದ, ''ತಾವತ್'' ಈ ಶಬ್ದವನ್ನು ಪ್ರಯೋಗಿಸಿರುತ್ತಾರೆ ''ಉಪಪಾದಯಿತುಂ" —''ಕುತ'' ಇತ್ಯಾದಿ ಶ್ಲೋಕದಿಂದ, ಉಪಪಾದಿಸುವರೆಂದು ತಿಳಿಯಬೇಕು

स्वेच्छानुसारितामेव स्वातन्त्र्यं हि विदो विदुः ॥

व्याख्याति ॥ स्वेच्छेति । प्रवृत्ताविति शेषः । विदो विदुरित्यनेन सकलविद्वत्सम्मतमेतदित्याह । अत एव हि स्वातन्त्र्याभावाद् वृक्षस्तिष्ठतीत्यादिकर्तृत्वव्यवहारो गौण इति सर्वे प्रतिपन्नाः । तथाऽपि कथं स्वव्याहतिः । न ह्यचेतनत्वं नामेच्छाविरहः । किन्नाम चैतन्यविरह

ಪ್ರವೃತ್ತಿಯಲ್ಲಿ ಸ್ವೇಚ್ಛಾನುಸಾರಿಯಾಗಿರುವುದು ಸ್ವಾತಂತ್ರ್ಯವೆಂದು ಸಕಲ ವಿದ್ವಜ್ಜನರು ತಿಳಿಯುತ್ತಾರೆ.

— ಪದಾರ್ಥದೀಪಿಕಾ —

ಅದನ್ನು ಪರಿಹರಿಸಲು, ವ್ಯಾಘಾತವನ್ನು ಉಪಪಾದಿಸುವುದಕ್ಕೋಸುಗ ಮುಂಚೆ "ಸ್ವಾತಂತ್ರ್ಯಂ' ಎಂಬುದನ್ನು "ಸ್ವೇಚ್ಛಾನುಸಾರಿತಾಂ" ಇತ್ಯಾದಿ ವಚನದಿಂದ ವಿವರಿಸುತ್ತಾರ ಇಲ್ಲಿ "ಪ್ರವೃತ್ತೌ" ಎಂಬುದು ಶೇಷವು "ವಿದೋ ವಿದುಃ" ಎಂಬುದರಿಂದ ಇದು 'ಸಕಲ ವಿದ್ವತ್ಸಮ್ಮತ"ವೆಂದು ಹೇಳುತ್ತಾರೆ ಆದುದ ರಿಂದಲೇ ಸ್ವಾತಂತ್ರ್ಯವಿಲ್ಲದಿರುವುದರಿಂದ, "ವೃಕ್ಷಸ್ತಿಷ್ಠತಿ" (ವೃಕ್ಷವು ನಿಲ್ಲುತ್ತದೆ) ಎಂಬ ವೃಕ್ಷದ ಕರ್ತೃತ್ವದ ಬಗೆಗಿನ ವ್ಯವಹಾರಗಳು ಗೌಣ(ಅಮುಖ್ಯ ಔಪಚಾರಿಕ)ವೆಂದು ಸರ್ವರೂ ಬಗೆದಿರುತ್ತಾರೆ ಆದರೂ ಸ್ವವ್ಯಾಹತವು ಹೇಗೆ? ಏಕೆಂದರೆ ಅಚೇತನತ್ವವೆಂದರ ಇಚ್ಛೆಯಿಲ್ಲದಿರುವುದಂದಲ್ಲ, ಆದರೆ ಚೇತನತ್ವವಿ

— ವಿಶೇಷಾರ್ಥಪ್ರದೀಪಿಕಾ —

"ಪ್ರವೃತ್ತಾವಿತಿ ಶೇಷಃ" —'ಇಚ್ಛಾಪೂರ್ವಕವಾದ ಕರ್ತೃತ್ವವೆಂಬ ಬೇರೆ ಹೆಸರಿನ ಸ್ವಾತಂತ್ರ್ಯ ರೂಪವಾಗಿರುವುದರಿಂದ ಪ್ರವೃತ್ತಿಯಲ್ಲಿ ಸ್ವೇಚ್ಛಾನುಸಾರಿತ್ವವು, ಸ್ವಾತಂತ್ರ್ಯವೆಂದೆನ್ನುತ್ತಾರೆಂದು ಇಲ್ಲಿಯ ಭಾವ.

ಇನ್ನು "ಸ್ವತಂತ್ರಃ ಕರ್ತಾ" ಎಂಬುದಾಗಿ ಪಾಣಿನಿಯು ಹೇಳಿದಂತೆ, ಸ್ವಾತಂತ್ರ್ಯವೆಂಬ ಕರ್ತೃತ್ವವು ವೃಕ್ಷಮುಂತಾದ ಅಚೇತನಗಳಲ್ಲಿ ಇಲ್ಲವಾದುದರಿಂದ ಅಲ್ಲಿ "ತಿಙ್" ಪ್ರಯೋಗವು ಬಾರದಿರಲೆಂಬ ಆಶಂಕೆಯನ್ನು "ಅತಏವ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ತರ್ಕತಾಂಡವದಲ್ಲಿ ಆಖ್ಯಾತವಾದದಲ್ಲಿ "ಮಣ್ಯುಕ್ತ ಆಖ್ಯಾತಕೃತ್ಯರ್ಥಭಂಗ'' ವೆಂಬ ಪ್ರಕರಣದಲ್ಲಿ ''ರಥೋ ಗಚ್ಛತಿ'' ಇತ್ಯಾದಿ ಪ್ರಯೋಗವೂ ಮುಖ್ಯವೇ, ಎಂದು ಹೇಳಿದುದು, ವ್ಯಾಪಾರವುಳ್ಳದ್ದಾಗಿರುವುದೇ ಕರ್ತೃತ್ವವೆಂಬ ಪಕ್ಷವನ್ನು ಅಂಗೀಕರಿಸಿ, ಆದುದರಿಂದ ವಿರೋಧವಿಲ್ಲ ಹೀಗೆ ಭಾವ

कुत इच्छा चेतनस्य सेच्छं चेत्किमचेतनम् ॥

इत्यत आह ॥ कुत इति ।' अचेतनस्येच्छा कुतः कारणाज्जायते । न कुतश्चित् । ज्ञानमेव हीच्छाया जनकमित्यर्थः । तथाऽपि किमित्यत आह ॥ सेच्छं चेदिति । सेच्छं चेदङ्गीकृतं तदा तदचेतनं किं चेतनमेवेत्यर्थः । एतदुक्तं भवति । अचेतनमपि प्रधानं स्वातन्त्र्येण प्रवृत्तिमदस्त्विति वदताऽचेतनमिच्छावदस्त्वित्युक्तं स्यात् । स्वेच्छानुसारित्वस्य स्वातन्त्र्यशब्दार्थतया सर्वसम्मतत्वात् । अचेतनस्येच्छावत्त्वमङ्गीकुर्वाणेन चेतनत्वमप्यङ्गीकर्तव्यं स्यात् । अन्वयव्यतिरेकाभ्यामिच्छायाः स्वसमानाश्रयचैतन्यकार्यत्वावधारणात् । कार्याङ्गीकारे

ಅಚೇತನಕ್ಕೆ ಇಚ್ಛೆಯು ಯಾವ ಕಾರಣದಿಂದ ಬರುತ್ತದೆ? ಇಚ್ಛೆಯು ಇರುವುದಾದರೆ ಅದು ಅಚೇತನವಾಗುವುದೇನು?

— ಪದಾರ್ಥದೀಪಿಕಾ —

ಲ್ಲದಿರುವಿಕೆಯು ಹೀಗೆ ಬರುವ ಆಶಂಕೆಯದ್ನು "ಕುತಃ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಅಚೇತನಕ್ಕೆ ಇಚ್ಛೆಯು 'ಕುತಃ" ಯಾವ ಕಾರಣದಿಂದ ಹುಟ್ಟುತ್ತದೆ? ಯಾವದೇ ಕಾರಣದಿಂದಲೂ ಹುಟ್ಟಲಾರದು ಏಕೆಂದರೆ ಜ್ಞಾನವೇ ಇಚ್ಛೆಯ ಜನಕವು ಹೀಗೆ ಅರ್ಥ ಆದರೂ ಇದರಿಂದೇನು? ಈ ಆಶಂಕೆಯನ್ನು "ಸೇಚ್ಛಂ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ "ಸೇಚ್ಛಂ" (ಇಚ್ಛೆಯುಳ್ಳದ್ದು) ಎಂಬುದಾಗಿ ಅಚೇತನವನ್ನಂಗೀಕರಿಸಿದರೆ ಅದು ಅಚೇತನವೇಕೆ? ಚೇತನವೇ! ಹೀಗೆ ಅರ್ಥ ಇಲ್ಲಿ ಇದನ್ನು ಹೇಳಿದ್ದಾಗುತ್ತದೆ— "ಅಚೇತನವಾದರೂ ಪ್ರಧಾನವು ಸ್ವತಂತ್ರವಾಗಿ ಪ್ರವೃತ್ತಿಯುಳ್ಳದ್ದಾಗಿರಲಿ" ಎಂಬುದಾಗಿ ಹೇಳುವವನಿಂದ 'ಅಚೇತನವು ಇಚ್ಛೆಯುಳ್ಳದ್ದಾಗಲಿ" ಎಂದು ಹೇಳಿದ್ದಾಗುತ್ತದೆ ಏಕೆಂದರೆ— ಸ್ವೇಚ್ಛಾನುಸಾರಿಯಾಗಿರುವುದು "ಸ್ವಾತಂತ್ರ್ಯ" ಶಬ್ದದ ಅರ್ಥವೆಂಬುದು ಸರ್ವಸಮ್ಮತವಾಗಿದೆ ಅಚೇತನಕ್ಕೆ ಇಚ್ಛೆಯಿರುವುದೆಂದು ಒಪ್ಪುವವನಿಗೆ ಅದಕ್ಕೆ ಚೇತನತ್ವವನ್ನೂ ಅಂಗೀಕರಿಸಬೇಕಾಗುತ್ತದೆ ಏಕೆಂದರೆ ಇಚ್ಛೆಯು, ತನ್ನ ಸಮಾನವಾದ ಆಶ್ರಯವುಳ್ಳ ಸಮಾನ ವಿಷಯವುಳ್ಳ ಚೈತನ್ಯದ ಕಾರ್ಯವಾಗಿರುವುದೆಂಬ ಸಂಗತಿಯು ಅನ್ವಯವ್ಯತಿರೇಕಗಳಿಂದ ನಿರ್ಣಯಿಸಲ್ಪಟ್ಟಿದ ಕಾರ್ಯವನ್ನು ಅಂಗೀಕರಿಸಿ ಕಾರಣ

कारणानङ्गीकारस्यानुचितत्वात् । अचेतनं चेतनमिति च स्फुटा व्याहतिरिति । एतेनैतदपि निरस्तम् । अचेतनत्वं स्वातन्त्र्यं च यदि परस्परव्याहतं तर्ह्यचेतनत्वेन स्वतन्त्रप्रवृत्तिराहित्यसाधने साध्याविशिष्टतादोषः स्यादिति । न ह्यस्माभिरचेतनत्वस्वातन्त्र्ययोर्वन्ध्याऽपत्यवतीतिवत्साक्षाद्विरोधोऽभिहितः । किन्तु स्वातन्त्र्यबलेन चैतन्यं परेणाङ्गी ( कार्याने ) कारयित्वा । अनेनैव स्वातन्त्र्याङ्गीकारेऽचेतनत्वानुपपत्तिरिति बाधकं चोक्तं भवति ।

— ಪದಾರ್ಥದೀಪಿಕಾ —

ವನ್ನಂಗೀಕರಿಸದಿರುವುದು ಉಚಿತವಲ್ಲ "ಅಚೇತನವು ಚೇತನವು" ಎಂಬಲ್ಲಿ ವ್ಯಾಹತಿಯು (ಸ್ವವಚನವಿರೋಧವು) ಸ್ಪಷ್ಟವೇ ಹೀಗೆ ಇದರಿಂದ, "ಅಚೇತನತ್ವ ಸ್ವಾತಂತ್ರ್ಯ ಇವೆರಡೂ ಪರಸ್ಪರ ವ್ಯಾಹತಗಳಾದರೆ ಅಚೇತನತ್ವಯುಕ್ತಿಯಿಂದ ಸ್ವತಂತ್ರಪ್ರವೃತ್ತಿಯಿಲ್ಲವೆಂಬುದನ್ನು ಸಾಧನ ಮಾಡುವುದಾದರೆ– ಹೇತು ಸಾಧ್ಯಗಳಲ್ಲಿ ಐಕ್ಯವು ಬರುತ್ತದೆ" ಎಂಬ ಹೇಳಿಕೆಯನ್ನೂ ನಿರಾಕರಿಸಿದ್ದಾಗುತ್ತದ ಏಕೆಂದರೆ ಅಚೇತನತ್ವ, ಸ್ವತಂತ್ರತ್ವ, ಇವೆರಡಕ್ಕೆ "ಬಂಜೆಯು ಮಕ್ಕಳುಳ್ಳವಳು" ಎಂಬಲ್ಲಿಯ ಹಾಗ ಸಾಕ್ಷಾತ್ತಾಗಿ ವಿರೋಧವನ್ನು ಹೇಳಿಲ್ಲ, ಆದರೆ ಸ್ವಾತಂತ್ರ್ಯದ ಬಲದಿಂದ ಚೈತನ್ಯವನ್ನು ಪರನಿಗೆ ಒಪ್ಪಿಸಿಕೊಟ್ಟು ವಿರೋಧವನ್ನು ಹೇಳಿದ್ದು. ಅದರಿಂದಲೇ ಸ್ವಾತಂತ್ರ್ಯವನ್ನು ಅಂಗೀಕರಿಸಿದಲ್ಲಿ ಅಚೇತನತ್ವವು ಸರಿಹೊಂದಲಾರದೆಂದು ಬಾಧಕವನ್ನೂ ಹೇಳಿದ್ದಾಗುತ್ತದ

— ವಿಶೇಷಾರ್ಥಪ್ರದೀಪಿಕಾ —

"ಸ್ವಸಮಾನಾಶ್ರಯ" ಇಲ್ಲಿ "ಸ್ವಸಮಾನವಿಷಯ"ವೆಂಬುದನ್ನೂ ಹೆಚ್ಚಿಗೆ ಸೇರಿಸಬೇಕು (ಚೈತನ್ಯವೆಂದರ —ಜ್ಞಾನವು)

"ಏತೇನ'–' ಸ್ವೇಚ್ಛಾನುಸಾರಿತಾಮೇವ" ಈ ಮುಂತಾಗ ವ್ಯಾಹತಿಯನ್ನು ಉಪಪಾದಿಸ ಹೊಂಟ ಭಾಷ್ಯವಚನವಿಂದ

"ಸಾಧ್ಯಾವಿಶಿಷ್ಟತಾ" --ಅಚೇತನತ್ವ, ಅಸ್ವಾತಂತ್ರ್ಯ, ಇವೆರಡರಲ್ಲಿ ಅಭೇದವಿದ್ದುದರಿಂದ ಹೇತುಸಾಧ್ಯಗಳಲ್ಲಿ ಐಕ್ಯವೆಂದು ಭಾವ "ಸಾಕ್ಷಾತ್ — ಪರಸ್ಪರ ಅಭಾವರೂಪವಾಗಿ "ಅಂಗೀಕಾರಯಿತ್ವಾ ವಿರೋಧಃ ಅಭಿಹಿತಃ" ಎಂಬ ಹಿಂದಿನ ಪದದೊಡನ ಈ ಪದಕ್ಕ ಅನ್ವಯುವಿದ "ಅನೇನ್ಯವ" —ಅಚೇತನತ್ವವಿದ್ದರೂ ಪ್ರಧಾನಕ್ಕೆ ಸ್ವತಂತ್ರವಾಗಿ ಪ್ರವೃತ್ತಿಯಿರಲೆಂಬ ಆಶಂಕೆಯು

इच्छाम्यहमिति ह्येव निजानुभवबोधतः ॥
अचेतनेच्छापगता

एवमचेतनस्य स्वातन्त्र्याङ्गीकारे स्वव्याहतिमुपपाद्य प्रमाण-विरोधमप्युपपादयति ॥ इच्छामीति ॥ हि शब्देनास्यानुभवस्य विश्व-जनप्रसिद्धत्वं सूचयति । एवशब्दस्यापगतेवेत्यन्वयः । निजानुभवः साक्ष्यनुभवः । अहमिच्छामीति तावदिच्छा आत्मसम्बन्धिनी साक्षिणा अनुभूयते । न च सा द्विकर्तृका सम्भवति । क्वाप्येकस्य व्यापारस्य

"ನಾನು ಇಚ್ಛಿಸುತ್ತೇನೆ" ಎಂಬ ಸಾಕ್ಷಿರೂಪ ಅನುಭವದ ಅನುಸಾರವಾಗಿ ಅಚೇತನಕ್ಕೆ ಇಚ್ಛೆಯು ಇಲ್ಲವೇ ಇಲ್ಲವೆಂದಾಗುತ್ತದೆ. ಇದು ಪ್ರಸಿದ್ಧವೇ!

— ಪದಾರ್ಥದೀಪಿಕಾ —

ಹೀಗೆ, ಅಚೇತನಕ್ಕೆ ಸ್ವಾತಂತ್ರ್ಯವನ್ನು ಅಂಗೀಕರಿಸಿದರೆ ವ್ಯಾಹತಿಯನ್ನು ಉಪಪಾದನಮಾಡಿ, ಪ್ರಮಾಣ ವಿರೋಧವನ್ನೂ "ಇಚ್ಛಾಮ್ಯಹಮಿತಿ" ಇತ್ಯಾದಿ ವಚನದಿಂದ ಉಪಪಾದನಮಾಡುತ್ತಾರೆ "ಹಿ" ಶಬ್ದದಿಂದ, ಈ ಅನುಭವವು ಸಕಲಜನಪ್ರಸಿದ್ಧವೆಂಬುದನ್ನು ಸೂಚಿಸುತ್ತಾರೆ "ಏವ" ಶಬ್ದಕ್ಕೆ "ಅಪಗತೈವ" ಎಂಬುದಾಗಿ ಅನ್ವಯವಿದೆ "ನಿಜಾನುಭವಃ"–ಸಾಕ್ಷಿರೂಪ ಅನುಭವವು "ಅಹಂ ಇಚ್ಛಾಮಿ" (ನಾನು ಇಚ್ಛಿಸುತ್ತೇನೆ) ಎಂಬುದಾಗಿ, ಇಚ್ಛೆಯು ಆತ್ಮ ಸಂಬಂಧಿಯಾಗಿ ಆ ಸಾಕ್ಷಿಯಿಂದಂತೂ ಅನುಭೂತವಾಗುತ್ತದೆ ಹಾಗು ಆ ಇಚ್ಛೆಗೆ ಕರ್ತೃಗಳು ಇಬ್ಬರು ಇರುವುದು ಸಂಭಾವಿತವಲ್ಲ ಏಕೆಂದರೆ ಒಂದೇ ವ್ಯಾಪಾರಕ್ಕೆ

— ವಿಶೇಷಾರ್ಥಪ್ರದೀಪಿಕಾ —

ಮೇಲೆ ಸ್ವವ್ಯಾಹತಿಯನ್ನುಪಪಾದಿಸುವ ಗ್ರಂಥದಿದಲೇ! "ಬಾಧಕಂ ಚ" –ಅಚೇತನತ್ವವೆಂಬ ಹೇತುವಿನ ಉಚ್ಛಿತ್ತಿಯು (ಇಲ್ಲವಾಗುವುದು)ಎಂಬ ಬಾಧಕವೆಂದು ತಿಳಿಯಬೇಕು ಹಾಗೆ! ಆಶಂಕೆಯು ಬರುವುದೆಂದು ಅಂಗೀಕರಿಸಿ ಈ ಬಾಧಕವನ್ನು ಹೇಳಿದ್ದು ಹೀಗೆ ತಿಳಿಯಬೇಕು

"ಪ್ರಮಾಣವಿರೋಧಂ" – ಚೇತನದಲ್ಲಿಯೇ ಇಚ್ಛೆಯಿರುವುದೆಂಬುದನ್ನು ತಿಳಿಸುವ ಸಾಕ್ಷಿರೂಪ ಪ್ರಮಾಣವಿರೋಧವನ್ನು

"ದ್ವಿಕರ್ತೃಕಾ" –ಆತ್ಮನೆಂಬ ಚೇತನ ಅಂತಃಕರಣವೆಂಬ ಅಚೇತನ; ಹೀಗೆ ಎರಡು ಕರ್ತೃಗಳುಳ್ಳದ್ದಾಗಿರುವುದು

द्विकर्तृकत्वानुपलम्भात् । ततश्चाचेतनस्येच्छाङ्गीकृता (चेतद) चे (त्त) दनुभवविरोधादचेतनस्येच्छा अपगता नास्तीति यावत् । इच्छाभावे च स्वेच्छानुसारित्वलक्षणं स्वातन्त्र्यं दूरोत्सारितमिति भावः ।

ननु नैवमस्त्यनुभवः । किन्त्वमेहमिच्छा (मीच्छा) मीति व्यवहारमात्रम् । तस्यापि निमित्तं भेदाग्रहः । आत्मा हि नित्यो निर्विकारश्चैतन्यमात्रवपुर्न तस्येच्छादिकर्तृत्वमागन्तुकं सम्भवति । किन्त्वन्तःकरणस्यैव । प्रसवधर्मत्वात् । तयोश्चात्मान्तःकरणयोर्भेदग्रहादितरेतरधर्मव्यवहारः प्रवर्तते । भेदाग्रहे च निमित्तं सन्निधानम् । यथोक्तम् ।

— ಪದಾರ್ಥದೀಪಿಕಾ —

ಇಬ್ಬರು ಕರ್ತೃಗಳಿರುವುದು ಎಲ್ಲಿಯೂ ಕಂಡಿಲ್ಲ ಆದುದರಿಂದ, ಅಚೇತನಕ್ಕೆ ಇಚ್ಛೆಯನ್ನು ಅಂಗೀಕರಿಸಿದರೆ ಆ ಅನುಭವವಿರೋಧವು ಬರುವುದರಿಂದ, "ಇಚ್ಛಾ ಅಪಗತಾ"—ಇಚ್ಛೆಯು ಇರುವುದಿಲ್ಲವೆಂದು ತಾತ್ಪರ್ಯ ಇಚ್ಛೆಯು ಇಲ್ಲದಿದ್ದರೆ ಸ್ವೇಚ್ಛಾನುಸಾರಿವರ್ತನವೆಂಬ ಸ್ವಾತಂತ್ರ್ಯವು ದೂರದಲ್ಲಿಯೇ ನಿರಾಕರಿಸಲ್ಪಟ್ಟಿತು ಹೀಗ ಭಾವ

ಇನ್ನು— ಹೀಗೆ ಅನುಭವವಿರುವುದೇ ಇಲ್ಲ ಆದರೆ "ಅಹಂ ಇಚ್ಛಾಮಿ'' ಎಂಬುದು ಕೇವಲ ವ್ಯವಹಾರವೇ ! (ಶಬ್ದಪ್ರಯೋಗವೇ) ಇದಕ್ಕಾದರೋ ಭೇದದ ಅಜ್ಞಾನವೇ ಕಾರಣ ಹೇಗಂದರೆ— ಆತ್ಮನು ನಿತ್ಯನೂ ನಿರ್ವಿಕಾರನೂ ಚೈತನ್ಯ ಮಾತ್ರ ಶರೀರನೂ ಆಗಿದ್ದಾನೆ ಅವನಿಗೆ ಆಗಂತುಕವಾದ ಇಚ್ಛಾದಿಕರ್ತೃತ್ವವು ಸಂಭವಿಸುವುದಿಲ್ಲ ಆದರೆ ಇಚ್ಛಾಕರ್ತೃತ್ವವು ಅಂತಃಕರಣಕ್ಕೇ ಸಲ್ಲುತ್ತದೆ ಏಕೆಂದರೆ ಅದು ಪರಿಣಾಮಧರ್ಮವುಳ್ಳದ್ದಾಗಿದೆ ಆ ಅಂತಃಕರಣ, ಆತ್ಮರುಗಳ ಭೇದದ ತಿಳಿವು ಆಗದಿದ್ದುದರಿಂದ ಪರಸ್ಪರ ಧರ್ಮವ್ಯವಹಾರವು ಪ್ರವೃತ್ತವಾಗುತ್ತದೆ ಭೇದದ ತಿಳಿವು ಆಗದಿರುವುದರಲ್ಲಿ ಸನ್ನಿಧಾನವು ನಿಮಿತ್ತವಾದುದು

— ವಿಶೇಷಾರ್ಥಪ್ರದೀಪಿಕಾ —

'ನ ಚ ತಸ್ಯ ಇಚ್ಛಾದಿಕರ್ತೃತ್ವಂ' —ನಿತ್ಯತ್ವವು, ನಿರ್ವಿಕಾರತೆಯನ್ನಂಗೀಕರಿಸದಿದ್ದರೆ ಬರಲಾರದು, ಹೀಗಿರುವ, ನಿತ್ಯತ್ವಾನುಪಪತ್ತಿ ಯುಕ್ತಿಯಿಂದ ಸಿದ್ಧವಾದ ನಿರ್ವಿಕಾರತ್ವದಿಂದ ವಿರೋಧವು ಬರುತ್ತದೆ ಹೀಗೆ ಇಲ್ಲಿ ತಿಳಿಯಬೇಕು "ಪ್ರಸವಧರ್ಮತ್ವಾತ್" —ವಿಕಾರವುಳ್ಳದ್ದಾಗಿರುವುದರಿಂದ ಇಲ್ಲಿ ಸಾಂಖ್ಯಕಾರಿಕೆಯ ಅರ್ಥ ಹೀಗೆ—

यदि भेदाग्रहोऽत्र च ॥ कथ स न घटस्य स्यात् ।

तस्मात्तत्संयोगादचेतनं चेतनावदिव लिङ्गम् । गुणकर्तृत्वे च तथा कर्तेव भवत्युदासीन इति । अतोऽनुभवबलाच्चेतनस्यैवेच्छावत्त्वं नाचेतनस्येत्ययुक्तमित्यत आह ॥ यदीति । यद्येवमनुभव एव नास्ति किन्तु व्यवहारमात्रम् । अत्र च व्यवहारे भेदाग्रह एव निमित्तमित्युच्यते । तदा स भेदाग्रहो घटस्य कथं न स्यात् । व्यवहारहेतुरिति शेषः ।

ಇನ್ನು ಇಂಥ ಅನುಭವವೇ ಇಲ್ಲ ಅದು ಕೇವಲ ವ್ಯವಹಾರ. ಅದರಲ್ಲಿ ಭೇದದ ಜ್ಞಾನವಿಲ್ಲದಿರುವಿಕೆಯೇ ನಿಮಿತ್ತವೆಂದು ಅಂಗೀಕರಿಸುವ ಪಕ್ಷದಲ್ಲಿ, ಆ ಭೇದದ ಅಜ್ಞಾನವು ಘಟದ ವ್ಯವಹಾರಕಾರಣವು ಹೇಗೆ ಆಗಲಾರದು ?

— ಪದಾರ್ಥದೀಪಿಕಾ —

ಇದನ್ನೇ " ತಸ್ಮಾತ್ತತ್ಸಂಯೋಗಾದಚೇತನಂ ಚೇತನಾವದಿವಲಿಂಗಂ ॥ ಗುಣ ಕರ್ತೃತ್ವೇ ಚ ತಥಾ ಕರ್ತೈವ ಭವತ್ಯುದಾಸೀನಃ" ಎಂಬ ಸಾಂಖ್ಯಕಾರಿಕೆಯಲ್ಲಿ ಹೇಳಲಾಗಿದೆ ಆದುದರಿಂದ, ಅನುಭವಬಲದಿಂದ ಚೇತನಕ್ಕೇ ಇಚ್ಛೆಯಿರುವುದು, ಅಂತಃಕರಣಕ್ಕೆ (ಅಚೇತನಕ್ಕೆ) ಇರುವುದಿಲ್ಲವೆಂದು ಹೇಳಿದುದು ಅಯುಕ್ತವು ಈ ಆಕ್ಷೇಪವನ್ನು "ಯದಿ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಒಂದು ಪಕ್ಷದಲ್ಲಿ- ಇಂಥ ಅನುಭವವೇ ಇಲ್ಲ, ಅದು ಕೇವಲ ವ್ಯವಹಾರವಷ್ಟೇ ! ಆ ವ್ಯವ ಹಾರದಲ್ಲಿ ಭೇದದ ಅಜ್ಞಾನವೇ ನಿಮಿತ್ತವೆಂದು ಹೇಳುವುದಾದರೆ– ಆಗ, "ಸಃ"– ಆ ಭೇದದ ಅಜ್ಞಾನವು ಘಟಕ್ಕೆ ಹೇಗೆ ಆಗಲಾರದು ? ಇಲ್ಲಿ 'ವ್ಯವಹಾರಹೇತುಃ"

— ವಿಶೇಷಾರ್ಥಪ್ರದೀಪಿಕಾ —

"ತಸ್ಮಾತ್" –"ಆತ್ಮಾ ಹಿ ನಿತ್ಯಃ'' ಇತ್ಯಾದಿ ವಚನಗಳಿಂದ ಹಿಂದೆ ಹೇಳಿದ ಯುಕ್ತಿಯಿಂದ ಚೈತನ್ಯವು ಆತ್ಮಧರ್ಮವಾದುದು ಹಾಗು ಕರ್ತೃತ್ವವು ಅಂತಃ ಕರಣಧರ್ಮವಾದುದು ಈ ಕಾರಣದಿಂದ, "ತತ್ಸಂಯೋಗಾತ್" – 'ತಯೋಃ"= ಆತ್ಮ-ಅಂತ ಕರಣ ಇವುಗಳಲ್ಲಿ "ಸನ್ನಿಧಾನಾತ್' -ಸನ್ನಿಧಾನ (ಸಂಬಂಧ)ನಿಮಿ ತ್ತಕವಾದ ಭೇದದ ಜ್ಞಾನವಿಲ್ಲದಿರುವುದರಿಂದ, "ಲಿಂಗಂ"=ಅಂತಃಕರಣವು 'ಅಚೇತನಂ"=ಅಚೇತನವಾಗಿದ್ದರೂ, "ಚೇತನಾವದಿವ' = ಚೈತನ್ಯದಿಂದ ಕೂಡಿ ಧುದು, ಎಂಬುದಾಗಿ ಹೇಳಲ್ಪಡುತ್ತದೆ "ಗುಣಕರ್ತೃತ್ವೇ" "ಚ"=ಅಂತಃಕರಣ (ಗುಣ)ದ ಕರ್ತೃತ್ವದಲ್ಲಿಯಾದರೋ 'ಉದಾಸೀನಃ"= ಕರ್ತೃತ್ವವಿಲ್ಲದ, ಚೇತ ನನು ''ಕರ್ತೇವ" ಕರ್ತೃವೆಂಬುದಾಗಿ ವ್ಯವಹರಿಸಲ್ಪಡುತ್ತಾನೆ '' ಎಂಬುದು

इदमुक्तं भवति । स्वप्रकाशानुभवापलापप्रसङ्गस्तावत् । व्यवहारे च निमित्तं नास्ति । न च भेदाग्रहः । विशिष्टव्यवहारस्य तादृशज्ञानकार्यत्वनियमात् । अन्यथा घटपटावपीतरेतरभेदं न गृह्णीत इतीतरेतरधर्मसंसर्गव्यवहारः स्यादिति ।

ननु गृह्यमाणयोर्भेदाग्रहो व्यवहारहेतुर्न तु भेदाग्रहमात्रम् ।

— ಪದಾರ್ಥದೀಪಿಕಾ —

ಎಂಬುದು ಶೇಷವು ಇಲ್ಲಿ ಹೇಳಲ್ಪಟ್ಟಿದ್ದು ಇದು– 'ಸ್ವಪ್ರಕಾಶವಾದ ಅನುಭವಕ್ಕೆ ವಿರುದ್ಧವಾದುದೆಂಬ ದೋಷವು ಏಕೆಂದರೆ ಹಾಗೆ ಕರ್ತೃತ್ವದ ವ್ಯವಹಾರಕ್ಕೆ ನಿಮಿತ್ತವಿರುವುದಿಲ್ಲ ಭೇದದ ಅಜ್ಞಾನವೆಂಬೂ ನಿಮಿತ್ತವಾಗಲಾರದು ಏಕೆಂದರೆ ವಿಶಿಷ್ಟ ವ್ಯವಹಾರವು ಅಂಥ ವಿಶಿಷ್ಟ ಜ್ಞಾನದಿಂದ ಬರುವಂತಹದೆಂಬ ನಿಯಮವಿದೆ ಇಲ್ಲದಿದ್ದಲ್ಲಿ ಘಟ ಪಟಗಳಿಗೂ ಪರಸ್ಪರ ಭೇದವನ್ನು ತಿಳಿಯುವುದಿಲ್ಲವಾದುದರಿಂದ 'ಇತರೇತರಧರ್ಮಸಂಸರ್ಗಗಳ ವ್ಯವಹಾರವಾಗಲಿ!'' ಹೀಗೆ

ಇನ್ನು– 'ತಮ್ಮ ಸ್ವರೂಪಜ್ಞಾನ ಸಹಿತವಾದ ಬೇದದ ಅಜ್ಞಾನವು ವ್ಯವಹಾರ ಕಾರಣವು ಹೊರತಾಗಿ ಕೇವಲ ಭೇದದ ಅಜ್ಞಾನವು ವ್ಯವಹಾರ ಕಾರಣ

— ವಿಶೇಷಾರ್ಥಪ್ರದೀಪಿಕಾ —

"ಇದಮುಕ್ತಂ ಭವತಿ" ಇತ್ಯಾದಿವಚನಗಳಿಂದ ಅಭಿಪ್ರಾಯವನ್ನು ಸ್ಪಷ್ಟೀಕರಿಸುತ್ತಾರೆ

ಅನುಭವದ ಅಪಲಾಪವು ಅನುಭವಗೋಚರವಾದ ಅನುಭವದಿಂದ ವಿರುದ್ಧವಾದುದೆಂಬುದನ್ನು ತೋರಿಸಲು 'ಸ್ವಪ್ರಕಾಶ"ವೆಂಬ ವಿಶೇಷಣವನ್ನು 'ಅನುಭವ"ದಲ್ಲಿ ಸೇರಿಸಿದ್ದಾರೆ

"ವಿಶಿಷ್ಟವ್ಯವಹಾರಸ್ಯ" –'ಇಚ್ಛಾಮಿ'' ಎಂಬ [ಇಚ್ಛಾವಿಶೇಷಣಕ) ಇಚ್ಛಾಪ್ರಕಾರಕ) ಆತ್ಮವಿಶೇಷ್ಯಕ]ವ್ಯವಹಾರಕ್ಕೆ. 'ಇತರೇತರಭೇದಂ ನಗೃಹ್ಣೀತಃ'' – ಘಟವು ಪಟಭೇದವನ್ನು ತನಗೆ ಗ್ರಹಣಮಾಡುವುದಿಲ್ಲ ಮತ್ತು ಪಟವು ತನಗೆ ಘಟಭೇದವನ್ನೂ ಗ್ರಹಣಮಾಡುವುದಿಲ್ಲ ಆದುದರಿಂದ ಘಟವೂ ''ನಾನು ಆತಾನವಿತಾನಾತ್ಮಕಃ (ಉದ್ದ ಅಗಲತೆಯುಳ್ಳವನು) ಎಂಬುದಾಗಿ ವ್ಯವಹರಿಸಲಿ ಹಾಗು ಪಟವೂಸಹ ನಾನು ಪೃಥುಬುಧ್ನೋದರಾದ್ಯಾಕಾರವುಳ್ಳವನು'' ಎಂಬುದಾಗಿ ವ್ಯವಹರಿಸಲಿ! ಹೀಗೆ ಭಾವ

"ಗೃಹ್ಯಮಾಣಯೋಃ" —ತಮ್ಮತಮ್ಮಲ್ಲಿರುವ ಜ್ಞಾನದಲ್ಲಿ ವಿಷಯಗಳಾಗಿರುವವುಗಳಲ್ಲಿ ಅಂದರೆ — ತಮ್ಮತಮ್ಮ ಸ್ವರೂಪಜ್ಞಾನದ ವಿಷಯವಾದ

न च घटपटौ स्वरूपं गृह्णीतस्तत्कथमतिप्रसङ्ग इति चेत् । किमयं विशिष्टो भेदाग्रहोऽन्तःकरणस्य । उतात्मनः । नाद्यः । तस्याचेतनत्वेन स्वरूपग्रहानुपपत्तेः । उपपत्तौ वा स कथं विशिष्टो भेदाग्रहो घटस्य न स्यात् । तथा च व्यवहारोऽपि स्यात् । नन्वन्तःकरणेऽस्ति चैतन्यारोपो न घटेऽतो नातिप्रसङ्ग इति चेत् । किं तस्य निमित्तम् । सन्निधानमिति चेत् । तर्हि सर्वगतात्मसन्निधानं घटेऽप्यस्तीति कथं स न घटस्य स्यात् । ननु न संयोगमात्रं निमित्तम् । किन्तूपकार्योपकारकभावे सति । स चास्त्यात्मान्तःकरणयोः । पुरुषस्य दर्शनार्थमित्युक्त-

— ಪದಾರ್ಥದೀಪಿಕಾ —

ವಲ್ಲ ಘಟ ಪಟಗಳಾದರೂ ಸ್ವರೂಪವನ್ನು ತಿಳಿದುಕೊಳ್ಳುವುದಿಲ್ಲ ಆದುದರಿಂದ ಅತಿಪ್ರಸಂಗವು ಹೇಗೆ? ಎಂದು ಶಂಕಿಸಿದರೆ ಪ್ರಶ್ನೆ- - ವಿಶಿಷ್ಟ ಭೇದಾಗ್ರಹಣವು ಅಂತಃಕರಣಕ್ಕೋ? ಇಲ್ಲವೆ ಆತ್ಮನಿಗೋ? ಮೊದಲನೆಯ ಕಲ್ಪವು ಸರಿಯಲ್ಲ ಏಕೆಂದರೆ ಅದು ಅಚೇತನವಾದುದರಿಂದ ಅದಕ್ಕೆ ಸ್ವರೂಪಜ್ಞಾನವು ಸಂಭವಿಸು ವುದಿಲ್ಲ ಒಂದು ವೇಳೆ ಸಂಭವಿಸುವುದಾದರೆ ಆ ವಿಶಿಷ್ಟವಾದ ಭೇದದ ಅಜ್ಞಾನವು ಘಟಕ್ಕೆ ಏಕೆ ಬರಲಾರದು? ಆದುದರಿಂದ ವ್ಯವಹಾರವು ಆಗಲಿ! ಇನ್ನು ಅಂತಃಕರಣದಲ್ಲಿ ಚೈತನ್ಯದ ಆರೋಪವಿದೆ, ಘಟದಲ್ಲಿ ಇಲ್ಲ ಆದುದರಿಂದ ಅತಿ ಪ್ರಸಂಗವಿಲ್ಲವೆಂದು ಹೇಳುವುದಾದರೆ- ಅದರ ನಿಮಿತ್ತವಾವುದು? ಸನ್ನಿಧಾನ ವೆಂದರೆ, ಹಾಗಾದರೆ ಸರ್ವಗತನಾದ ಆತ್ಮನ ಸನ್ನಿಧಾನವು ಘಟದಲ್ಲಿಯೂ ಇದ್ದು ದರಿಂದ ಘಟಕ್ಕೂ ಆ ಆರೋಪವು ಆಗಲಿ! ಇನ್ನು- ಸಂಯೋಗವಷ್ಟೇ ನಿಮಿತ್ತ ವಲ್ಲ ಉಪಕಾರ್ಯ ಉಪಕಾರಕಭಾವವಿರುವಾಗ ಸಂಯೋಗವು ನಿಮಿತ್ತವಾಗು ತ್ತದೆ ಇಂಥ ಸಂಯೋಗವು ಆತ್ಮ ಅಂತಃಕರಣಗಳಲ್ಲಿ ಇದೆ ಏಕೆಂದರೆ ಇದರ ಬಗ್ಗೆ "ಪುರುಷಸ್ಯ ದರ್ಶನಾರ್ಥಂ" ಎಂಬ ಕಾರಿಕೆಯನ್ನು ಆಧಾರವಾಗಿ ಹೇಳ

— ವಿಶೇಷಾರ್ಥಪ್ರದೀಪಿಕಾ —

ವುಗಳಿಗ ಪರಸ್ಪರಭೇದದ ಜ್ಞಾನವಿಲ್ಲದಿರುವುದು, ಪರಸ್ಪರರ ಧರ್ಮಸಂಸರ್ಗದ ವ್ಯವಹಾರಕ್ಕೆ ಕಾರಣವಾದುದು ಹೀಗೆ ಅರ್ಥ 'ವಿಶಿಷ್ಟಃ ಭೇದಾಗ್ರಹಃ' — ಸ್ವರೂಪಜ್ಞಾನದಿಂದ ಸಹಿತವಾದ ಭೇದಾಜ್ಞಾನವು "ವ್ಯವಹಾರೋಽಪಿ" — ಪಟದ ಆತಾನವಿತಾನಾತ್ಮಕವಾಗಿರುವುದೆಂಬ ಧರ್ಮದ ಸಂಸರ್ಗ ವ್ಯವಹಾರವು ಘಟಕ್ಕೆ ಬರಲಿ ಹೀಗೆ ಅರ್ಥ

त्वादिति चेत् । नहि घटोऽपि पुरुषस्योपकारक इति कथं स न घटस्य स्यात् । द्वितीये व्यवहारोऽपि किमात्मन उतान्तःकरणस्य । नाद्यः । तस्य निर्विकारस्य व्यवहारक्रियानुपपत्तेः । उपपत्तौ वा किमिच्छयाऽपराद्धम् । द्वितीयेऽन्यगतेन भेदाग्रहेणान्य (त्र) स्य

— ಪದಾರ್ಥದೀಪಿಕಾ —

ಲಾಗಿದೆ ಹೀಗೆ ಹೇಳುವುದಾದರೆ, ಘಟವೂ ಪುರುಷನಿಗೆ ಉಪಕಾರಕವಾದುದ ರಿಂದ ಅದು ಘಟಕ್ಕೆ ಹೇಗ ಆಗಲಾರದು ? ಎರಡನೆಯ ಪಕ್ಷದಲ್ಲಿ ವ್ಯವಹಾರ ವಾದರೂ ಅಂತಃಕರಣಕ್ಕೋ? ಆತ್ಮನಿಗೋ? ಮೊದಲನೆಯ ಪಕ್ಷವು ಯುಕ್ತ ವಲ್ಲ ಏಕೆಂದರೆ ನಿರ್ವಿಕಾರನಾದ ಆತ್ಮನಿಗೆ ವ್ಯವಹಾರಕ್ರಿಯೆಯು ಸಲ್ಲುವು ದಿಲ್ಲ ಸಂಭವಿಸುವುದಾದರ ಇಚ್ಛೆಯು ಮಾಡಿದ ಅಪರಾಧವಾವುದು ? ಎರಡ ನೆಯ ಪಕ್ಷದಲ್ಲಿ– ಬೇರೆ ಕಡೆಯಲ್ಲಿರುವ ಭೇದಾಜ್ಞಾನದಿಂದ ಬೇರೆಯದರ ವ್ಯವ

— ವಿಶೇಷಾರ್ಥಪ್ರದೀಪಿಕಾ —

"ಇತ್ಯುಕ್ತತ್ವಾತ್"=ಪುರುಷಸ್ಯ ದರ್ಶನಾರ್ಥಂ ಕೈವಲ್ಯಾರ್ಥಂ ತಥಾ ಪ್ರಧಾನಸ್ಯ" ಪಂಗ್ವಂಧವದುಭಯೋರಪಿ ಸಂಯೋಗಸ್ತತ್ಕೃತಃ ಸರ್ಗ " ಎಂಬುದಾಗಿ ಹೇಳಿದೆ. ಸತ್ವಗುಣಾತ್ಮಕವಾದ ಅಂತಃಕರಣವು ಪ್ರಧಾನರೂಪವಾಗಿದೆಯೆಂದು ಭಾವ (ಇದರ ಅರ್ಥವನ್ನು ಹಿಂದೆ ಬರೆಯಲಾಗಿದೆ)

"ದ್ವಿತೀಯೇ" —"ವಿಶಿಷ್ಟವಾದ ಭೇದದ ಅಜ್ಞಾನವು ಆತ್ಮನಿಗೆ ಎಂಬ ಪಕ್ಷದಲ್ಲಿ ಹೀಗ ಅರ್ಥ

"ಕಿಮಪರಾದ್ಧಂ" —ವಿಕಾರಬರುವುದೆಂಬ ಭಯದಿಂದ ಇಚ್ಛೆಯನ್ನು ನೀನು ಅಂಗೀಕರಿಸಿಲ್ಲ ಆದುದರಿಂದ, ವ್ಯವಹಾರಕ್ರಿಯೆಯಿಂದ ವಿಕಾರವು ಬರುವುದಿಲ್ಲ ವಾದರೆ ಇಚ್ಛೆಯಿಂದಲೂ ವಿಕಾರವು ಬರುವುದಿಲ್ಲವೆಂಬುದು ಸಮಾನವು ಆದು ದರಿಂದ, ನಿರ್ವಿಕಾರತ್ವವಿರುವುದರಿಂದ ಇಚ್ಛಾಕರ್ತೃತ್ವವನ್ನು ನಿರಾಕರಿಸುವುದು (ಆತ್ಮನು ಇಚ್ಛಿಸುವುದಿಲ್ಲ— ಇಚ್ಛೆಮಾಡುವುದಿಲ್ಲವೆಂದು ಹೇಳುವುದು) ಯುಕ್ತವೆನಿ ಸುವುದಿಲ್ಲ ಹೀಗೆ ಭಾವ

"ದ್ವಿತೀಯೇ"="ವ್ಯವಹಾರವು ಅಂತಃಕರಣಕ್ಕೆ" ಎಂಬ ಪಕ್ಷದಲ್ಲಿ "ಅನ್ಯ ಗತೇನ"=ಆತ್ಮನಲ್ಲಿರುವ "ಅನ್ಯತ್ರ"=ಅಂತಃಕರಣದಲ್ಲಿ "ಸ"=ಆತ್ಮನಲ್ಲಿರುವ ಭೇದದ ಅಜ್ಞಾನದಿಂದ, ಘಟದಲ್ಲಿಯೂ ಆತ್ಮಧರ್ಮವಾದ ಇಚ್ಛೆಯ ವ್ಯವಹಾ ರವು, ಆಗಲಿ, ಹೀಗೆ ಭಾವ.

ರೀತ್ಯಂತರದಿಂದ ಯೋಜನೆಯನ್ನು "ಕಿಂಚ" ಇತ್ಯಾದಿವಾಕ್ಯದಿಂದ ತೋರಿ

व्यवहारश्चेत्कथं स न घटस्य स्यात्। किञ्च यदि भेदाग्रहादन्तःकरण-
धर्म एवेच्छाऽऽत्मनि व्यवह्रियत इत्यङ्गीक्रियते। तदा घटस्याप्यात्मना
भेदाग्रहात्पृथुबुध्नोदराकारोऽहमिति व्यवहारः कथं न स्यादिति
गूढाभिसन्धेरुत्तरम् । यद्वाऽत्र चात्मान्तःकरणयोश्च स्फुटं प्रतिभा-
समानभेदयोरपीति हृदयम् । यदि भेदाग्रहः स्यात्तदा कथं स भेदा-

— ಪದಾರ್ಥದೀಪಿಕಾ —

ಹಾರವಾಗುವುದಾದರೆ ಅದು ಘಟಕ್ಕೆ ಹೇಗ ಆಗಲಾರದು ? ಮತ್ತು ಭೇದದ
ಅಜ್ಞಾನ ಮೂಲಕವಾಗಿ ಅಂತಃಕರಣದ ಧರ್ಮವೇ ಆದ ಇಚ್ಛೆಯು ಆತ್ಮನಲ್ಲಿ
ವ್ಯವಹರಿಸಲ್ಪಡುವುದೆಂದು— ಅಂಗೀಕರಿಸುವುದಾದರ ಘಟಕ್ಕೂ ಆತ್ಮನೊಡನೆ
ಭೇದದ ಜ್ಞಾನವಿಲ್ಲವಾದುದರಿಂದ 'ಪೃಥು ಬುಧ್ನೋದರಾಕಾರೋಽಹಂ" ಎಂಬ
ವ್ಯವಹಾರವು ಹೇಗೆ ಆಗಲಾರದು ? ಹೀಗೆ ಗೂಢಾಭಿಸಂಧಿಯ ಉತ್ತರವು
ಅಥವಾ- "ಅತ್ರ ಚ"– ಆತ್ಮ ಅಂತಃಕರಣಗಳಿಗಾದರೂ, ಎಂದರ ಸ್ಪಷ್ಟವಾಗಿ
ತೋರುವ ಭೇದವುಳ್ಳವುಗಳಿಗೂ, ಹೀಗೆ ಅರ್ಥವಂದು ತಾತ್ಪರ್ಯವು 'ಯದಿ

— ವಿಶೇಷಾರ್ಥಪ್ರದೀಪಿಕಾ —

ಸುತ್ತಾರೆ ಈ ಪಕ್ಷದಲ್ಲಿ ಮೂಲವನ್ನು "ಯದಿ' ಇತ್ಯಾದಿವಾಕ್ಯದಿಂದ ಯೋಜಿ
ಸುತ್ತಾರೆ

ಗೂಢಾಭಿಸಂಧೇಃ''- ಆತ್ಮನಿಗೆ ಮನಸ್ಸಿನಿಂದ ಭೇದದ ಜ್ಞಾನವಿಲ್ಲನೆಂದು ಹೇಳಿ
ದಲ್ಲಿ —ಘಟದಿಂದ ಭೇದದ ಜ್ಞಾನವಿಲ್ಲನಾದುದರಿಂದ ಅಲ್ಲಿ ಇಚ್ಛಾವ್ಯವಹಾರ
ವಾಗಲೆಂದು ಹೇಳಿದ್ದಾಯಿತು ಅದರ ಮೇಲೆ —' ಘಟದಿಂದ ಭೇದದ ಜ್ಞಾನ
ವಿಲ್ಲವೆಂಬುದು ಅಸಿದ್ಧವು ಏಕೆಂದರ ಭೇದಜ್ಞಾನವೇ ಇದೆ ' ಹೀಗೆ ಹೇಳಿ
ದರೆ—"ಹಾಗಾದರ -ಮನಸ್ಸಿನಿಂದಲೂ ಭೇದದ ಜ್ಞಾನವೇ ಇದೆ ಭೇದದ ಅಜ್ಞಾ
ನವು ಇಲ್ಲ" ಈ ಅಭಿಪ್ರಾಯವು ಗೂಢವಾಗಿದೆ ಇದು 'ಮನೋ ಮೇ' ಇತ್ಯಾದಿ
ಪದ್ಯಗಳಲ್ಲಿ ಮುಂದೆ ವಿಶದವಾಗುವದು ಹೀಗೆ ತಿಳಿಯಬೇಕು ಬೇರ ಯೋಜ
ನೆಯನ್ನು "ಯದ್ವಾ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರ " ಅತ್ರ ಚ "
ಎಂಬುದು ಮೂಲ ಅದರ ವ್ಯಾಖ್ಯಾನವು "ಆತ್ಮಮನಸೋಃ''=ಎಂಬುದು

"ಚ''ಶಬ್ದವು "ಅಪಿ" (ಆದರೂ) ಎಂಬ ಅರ್ಥದಲ್ಲಿದ್ದು, ವಿರೋಧದ್ಯೋ
ತಕವೆಂಬ ಭಾವದಿಂದ ಅದರ ಅಭಿಪ್ರಾಯವನ್ನು "ಸ್ಫುಟಂ' ಇತ್ಯಾದಿವಾಕ್ಯ
ದಿಂದ ಹೇಳುತ್ತಾರ.

मनो म इति भेदतः ॥ मनसोऽपि गृहीतत्वात्

ग्रहो घटस्यात्मनश्च न स्यादिति योजना । अथवैवं [illegible]ऽर्थः । भेदग्रहः किं भेदाग्रहविरोधी न वेति । नेति पक्षे कथं स घटस्यात्मना पटादिना वा न स्यादित्युत्तरम् ।

ननु भेदग्रहो भेदाग्रहविरोधी । स चास्ति घट इति कुतस्तत्र भेदाग्रहस्तत्प्रयुक्तो व्यवहारो वेति गूढाभिसन्धिमजानानो द्वितीयपक्षमाशङ्क्याह ॥ मन इति ॥ भेदत इति तृतीयार्थे तसिः । यदि भेद–

ಭೇದದ ಜ್ಞಾನವು ಭೇದದ ಅಜ್ಞಾನವನ್ನು ವಿರೋಧಿಸುವುದರಿಂದ, ಭೇದ ಜ್ಞಾನವಿರುವಾಗ ಘಟದಲ್ಲಿ ಭೇದದ ಅಜ್ಞಾನವಿಲ್ಲವೆಂಬ ಪಕ್ಷದಲ್ಲಿ– "ನನ್ನ ಮನಸ್ಸು" ಎಂಬುದಾಗಿ ಮನಸ್ಸಿಗೂ ನನ್ನಿಂದ ಭೇದಜ್ಞಾನವಿರುವುದರಿಂದ ಆತ್ಮನಿಂದ (ನನ್ನಿಂದ) ಭೇದದ ಜ್ಞಾನವಿಲ್ಲವೆಂಬುದು ಇಲ್ಲ ಆದುದರಿಂದ ಭೇದದ ಅಜ್ಞಾನದಿಂದ ವ್ಯವಹಾರವೆಂಬುದು ಯುಕ್ತವಲ್ಲ.

## — ಪದಾರ್ಥದೀಪಿಕಾ —

ಭೇದಾಗ್ರಹಃ ಸ್ಯಾತ್ ತದಾ ಕಥಂ ಸ ಭೇದಾಗ್ರಹಃ ಘಟಸ್ಯಾತ್ಮನಶ್ಚ ನ ಸ್ಯಾತ್" (ಭೇದದ ಅಜ್ಞಾನವು ನಿಮಿತ್ತವಾದರೆ ಆಗ ಅದು ಘಟಕ್ಕೂ ಆತ್ಮನಿಗೂ ಹೇಗೆ ಆಗಲಾರದು") ಹೀಗೆ ಯೋಜನೆಯು. ಅಥವಾ– ಹೀಗೆ ಹೇಳುವವನನ್ನು ಕುರಿತು ಭೇದದ ಜ್ಞಾನವು ಭೇದದ ಅಜ್ಞಾನದ ವಿರೋಧಿಯೋ ಅಲ್ಲವೋ ? ಹೀಗೆ ಪ್ರಶ್ನಿಸತಕ್ಕದ್ದು ಅಲ್ಲವೆಂಬ ಪಕ್ಷದಲ್ಲಿ ಆ ಭೇದದ ಅಜ್ಞಾನವು ಘಟಕ್ಕೆ ಆತ್ಮನೊಡನೆ ಇಲ್ಲವೆ ಪಟಾದಿಗಳೊಡನೆ ಹೇಗೆ ಇಲ್ಲದಿರಲಾರದು? ಹೀಗೆ ಉತ್ತರವು

ಇನ್ನು– ಭೇದದ ಜ್ಞಾನವು ಭೇದದ ಅಜ್ಞಾನದ ವಿರೋಧಿಯು ಅದು ಘಟದಲ್ಲಿ ಇದೆ ಅಲ್ಲಿ ಭೇದದ ಅಜ್ಞಾನವೇಕೆ? ತನ್ಮೂಲಕವಾದ ವ್ಯವಹಾರವಾದರೋ ಏಕೆ? ಎಂಬುದಾಗಿ ಗೂಢಾಭಿಸಂಧಿಯನ್ನು ತಿಳಿಯದ ಪೂರ್ವಪಕ್ಷಿಯು ಎರಡನೆಯ ಪಕ್ಷವನ್ನು ಆಶಂಕಿಸಿ ಅದರ ಮೇಲೆ 'ಮನಃ" ಇತ್ಯಾದಿ ವಚನದಿಂದ

## — ವಿಶೇಷಾರ್ಥಪ್ರದೀಪಿಕಾ —

''ಗೂಢಾಭಿಸಂಧಿಂ'' –''ಆತ್ಮಮನಸ್ಸುಗಳಲ್ಲಿಯೂ ಭೇದಾಗ್ರಹವಿಲ್ಲ'' ಎಂಬುದಾಗಿರುವ, "ಮನೋಮೇ" ಎಂಬುದಾಗಿ ಮುಂದಿನ ಪದ್ಯದಿಂದ ಉತ್ತರವಾಗಿ ಹೇಳುವ ಸಿದ್ಧಾಂತಿಯ ಯಾವ ಗೂಢವಾದ ಅಭಿಪ್ರಾಯವೋ ಅದನ್ನು ''ಅಜಾನತಃ''=ತಿಳಿಯದ ಪೂರ್ವಪಕ್ಷಿಯು

ग्रहो भेदाग्रहविरोधीति भेदेन गृह्यमाणे घटे न भेदाग्रह इत्युच्यते । तदा मे मन इति मनसोऽपि भेदेन गृहीतत्वान्नात्मना भेदाग्रहः स्यात् । तथा च भेदाग्रहनिमित्तोऽहमिच्छामीति व्यवहार इत्यसत् । किन्त्वनुभवनिमित्त एव । अत एव नान्तःकरणधर्मस्यात्मन्यारोप इत्यपि युक्तम् । भेदग्रहसद्भावेनारोपहेतोर्भेदाग्रहस्यायोगात् । न ह्यविदितभेदं सम्बन्धितया गृह्यते । आत्मन्यपि प्रसङ्गात् । केन पुनः

— ಪದಾರ್ಥದೀಪಿಕಾ —

ಹೇಳುತ್ತಾರೆ "ಭೇದತಃ" ಎಂಬಲ್ಲಿಯ "ತಸಿ" ಪ್ರತ್ಯಯವು ತೃತೀಯಾ ವಿಭಕ್ತ್ಯರ್ಥದಲ್ಲಿ ಬಂದಿದೆ ಭೇದದ ಜ್ಞಾನವು ಭೇದದ ಅಜ್ಞಾನಕ್ಕೆ ವಿರೋಧಿ ಯೆಂಬ ಕಾರಣದಿಂದ ಭೇದದಿಂದ ತೋರುವ ಘಟದಲ್ಲಿ ಭೇದದ ಅಜ್ಞಾನವಿಲ್ಲ ವೆಂದು ಹೇಳುವುದಾದರೆ ಆಗ "ಮೇ ಮನಃ" (ನನ್ನ ಮನಸ್ಸು) ಎಂಬುದಾಗಿ, ಮನಸ್ಸಿಗೂ ಭೇದದಿಂದ (ತನ್ನಿಂದ ಭಿನ್ನನೆಂದು) ಗೃಹಿಸಲ್ಪಟ್ಟಿರುವುದರಿಂದ ಆತ್ಮ ನೊಡನೆ ಅಭೇದದ ಜ್ಞಾನವು ಆಗದಿರಲಿ! ಆದುದರಿಂದ ಭೇದದ ಅಜ್ಞಾನ ಮೂಲಕವಾದುದು "ಅಹಂ ಇಚ್ಛಾಮಿ" ಎಂಬ ವ್ಯವಹಾರವು, ಹೀಗೆ ಹೇಳುವುದು ಸರಿಯಾಗದು ಆದರೆ ಇದು ಅನುಭವಮೂಲಕವೇ ಆದುದು ಆದುದರಿಂದಲೇ "ಅಂತಃಕರಣದ ಧರ್ಮಕ್ಕೆ (ಇಚ್ಛೆಗೆ) ಆತ್ಮನಲ್ಲಿ ಆರೋಪ"ವೆಂಬ ಹೇಳಿಕೆಯೂ ನಿರಾಕೃತವಾಯಿತು ಏಕೆಂದರೆ- ಭೇದದ ಜ್ಞಾನವೇ ಇದ್ದುದರಿಂದ, ಆರೋ ಪದ ಕಾರಣವಾದ ಭೇದಾಜ್ಞಾನವು ಬರಲಾರದು ಭೇದವನ್ನು ತಿಳಿಯದಿರುವಾಗ ಸಂಬಂಧಿಯೆಂದು ತಿಳಿದುಕೊಳ್ಳಲು ಸಾಧ್ಯವಿಲ್ಲ ಏಕೆಂದರೆ ಹಾಗೆ ತಿಳಿಯುವು ದಾದರೆ ಆತ್ಮನಲ್ಲಿಯೂ "ಮಮ ಅಹಂ" ಎಂಬುದಾಗಿ (ಸಂಬಂಧಿಯೆಂಬ) ಜ್ಞಾನ ವಾಗುವ ಪ್ರಸಂಗವು ಬರುತ್ತದೆ ಹಾಗಾದರೆ ಯಾವ ಪ್ರಮಾಣದಿಂದ ಮನಸ್ಸು

— ವಿಶೇಷಾರ್ಥಪ್ರದೀಪಿಕಾ —

ಇನ್ನು –"ಮನೋ ಮೇ" ಎಂಬ ಅನುಭವದಿಂದ "ಮನಸ್ಸಿನಿಂದ ಆತ್ಮ ನಲ್ಲಿ ಭೇದದ ಜ್ಞಾನವಿಲ್ಲ"ವೆಂಬುದು ಹೇಗೆ ಸಿದ್ಧಿಸುತ್ತದೆಯೆಂಬ ಪ್ರಶ್ನೆಯನ್ನು 'ನಹಿ" ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಾರೆ

ಮನಸ್ಸು ಅನುಮಾನದಿಂದ ತಿಳಿಯಲ್ಪಡುವಂತಹದೆಂಬ ಪಕ್ಷದಲ್ಲಿ, "ಮೇ ಮನಃ" (ನನ್ನಮನಸ್ಸು) ಎಂಬುದಾಗಿ ಭೇದದ ಜ್ಞಾನವು ಯುಕ್ತವಲ್ಲವೆಂದು ಬಗೆದು "ಕೇನ" ಇತ್ಯಾದಿವಾಕ್ಯದಿಂದ ಪ್ರಶ್ನಿಸುತ್ತಾರೆ

प्रमाणेन मनो गृह्यते । साक्षिणेति वदामः । तथा हि । न तावच्चक्षुरादिना तदवगमः । अरूपिद्रव्यत्वात् । चक्षुराद्यव्यापारेऽप्युपलब्धेः । न चानुमानेन । लिङ्गाभावात् ।

नन्वस्ति युगपज्ज्ञानानुत्पत्तिर्मनसो लिङ्गम् । तथा हि । बाह्येन्द्रियेषु स्वैः स्वैर्विषयैर्युगपत्सन्निकृष्टेष्वात्मनाऽधिष्ठितेष्वपि न युगपज्ज्ञानानि जायन्ते । तेन ज्ञायतेऽस्त्येतेभ्योऽन्यत्सहकारि । यत्संयोगक्रमवशाज्ज्ञानक्रमः प्रक्रमत इति ।

— ಪದಾರ್ಥದೀಪಿಕಾ —

ಗೃಹಿಸಲ್ಪಡುತ್ತದ? ಎಂದರೆ-ಸಾಕ್ಷಿಯಿಂದ, ಎಂದು ಹೇಳುತ್ತೇವೆ ಹೇಗೆಂದರೆ ಚಕ್ಷುರಾದಿ ಇಂದ್ರಿಯಗಳಿಂದಂತೂ ಅದರ ಜ್ಞಾನವಾಗುವುದಿಲ್ಲ ಏಕೆಂದರ-ಮನಸ್ಸು ರೂಪವಿಲ್ಲದ ದ್ರವ್ಯವಾಗಿದೆ ಮತ್ತು ಚಕ್ಷುರಾದಿ ಇಂದ್ರಿಯವ್ಯಾಪಾರ (ಸಂನಿಕರ್ಷ)ವಿಲ್ಲದಿದ್ದರೂ ಅದರ ತಿಳಿವಾಗುತ್ತದೆ ಅನುಮಾನದಿಂದಲೂ ಅದರ ಜ್ಞಾನವಾಗದು ಏಕೆಂದರೆ ಲಿಂಗವಿಲ್ಲ

ಇನ್ನು " ಏಕಕಾಲದಲ್ಲಿ ಜ್ಞಾನಗಳ ಉತ್ಪತ್ತಿಯಾಗದಿರುವುದು " ಎಂಬ ಯುಕ್ತಿಯು ಮನಸ್ಸಿನ ಜ್ಞಾಪಕ ಲಿಂಗವಾಗುವದು ಹೇಗೆಂದರ ಬಾಹ್ಯ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಿಂದ ಏಕಕಾಲದಲ್ಲಿ ಸನ್ನಿಕರ್ಷ ಹೊಂದಿದ್ದರೂ ಆತ್ಮನಿಂದ ಅಧಿಷ್ಠಿತವಾಗಿದ್ದರೂ ಯುಗಪತ್ಕಾಲದಲ್ಲಿ ಜ್ಞಾನಗಳು ಹುಟ್ಟುವುದಿಲ್ಲ ಇದರಿಂದ, ಯಾವುದರ ಸಂಯೋಗದ ಕ್ರಮಮೂಲಕವಾಗಿ ಜ್ಞಾನಗಳಲ್ಲಿಯ ಕ್ರಮವು ಶುರುವಾಗುವುದೋ ಅಂಥ, ಇವುಗಳಿಂದ ಬೇರೆಯದಾದ ಒಂದು ಸಹಕಾರಿಯು ( ಮನಸ್ಸು ) ಇದೆಯೆಂದು ತಿಳಿಯುತ್ತದೆ." ಹೀಗೆ ಇಲ್ಲಿ ಒಬ್ಬನು—

— ವಿಶೇಷಾರ್ಥಪ್ರದೀಪಿಕಾ —

ಸಾಕ್ಷಿಯಿಂದ ಗೃಹಿಸಲ್ಪಡುವುದೆಂಬುದು ಏಕೆ? ಎಂಬ ಪ್ರಶ್ನೆಯನ್ನು, "ಪರಿಶೇಷ" ಪ್ರಮಾಣವೆಂಬ ಅಭಿಪ್ರಾಯದಿಂದ "ತಥಾಹಿ" ಇತ್ಯಾದಿವಾಕ್ಯಗಳಿಂದ ಪರಿಹರಿಸುತ್ತಾರೆ. "ತಸ್ಮಾತ್ ಸಿದ್ಧಂ ಸಾಕ್ಷಿಗ್ರಾಹ್ಯತ್ವಂ ಮನಸಃ' ಇಲ್ಲಿಯವರೆಗಿರುವ ಗ್ರಂಥದಿಂದ ಪರಿಶೇಷ ಯುಕ್ತಿಯಿಂದ "ಸಾಕ್ಷಿಯಿಂದ ಮನಸ್ಸಿನ ಸಿದ್ಧಿ" ಎಂಬ ವಿಷಯವನ್ನು ಸಮರ್ಥನಮಾಡುತ್ತಾರೆ ತಾರ್ಕಿಕಮತವನ್ನು "ಆತ್ರೋಚ್ಯತೇ" ಇಲ್ಲಿಯವರೆಗಿರುವ "ನನು" ಇಲ್ಲಿಂದಾರಂಭಿಸಿದ ಗ್ರಂಥದಿಂದ ಆಶಂಕಿಸುತ್ತಾರೆ ನ್ಯಾಯಸೂತ್ರವನ್ನು ತೋರಿಸಿ "ಯುಗಪತ್" ಇತ್ಯಾದಿವಾಕ್ಯಗಳಿಂದ ಅದನ್ನು ವಿವರಿಸುತ್ತಾರೆ

अत्र कश्चिदाह । आत्मन एवैवंविधसामर्थ्यकल्पनोपपत्तावन्यथासिद्धमनुमानम् । मनसः प्रतीन्द्रियसंयोगव्यापारे क्रमवति कारणान्तरशून्येऽनैकान्तिकं च । फलस्य च वृक्षात्पततः क्रमवर्तिन्या-

— ಪದಾರ್ಥದೀಪಿಕಾ —

ಆತ್ಮನಿಗೇ ಇಂಥ ಸಾಮರ್ಥ್ಯವನ್ನು ಕಲ್ಪಿಸುವುದರಿಂದಲೇ ಇದಲ್ಲವು ಸಂಭವಿಸುತ್ತಿರುವುದರಿಂದ ಈ ಅನುಮಾನವು ಅನ್ಯಥಾ ಸಿದ್ಧವಾಗುವದು ಮತ್ತು ಮನಸ್ಸಿಗೆ ಆಯಾಯ ಇಂದ್ರಿಯದೊಡನೆ ಸಂಯೋಗವ್ಯಾಪಾರವು ಕ್ರಮಿಕವಾಗಿರುವಾಗ ಬೇರೆ ಕಾರಣವಿಲ್ಲದಿರುವಾಗ, ಅಲ್ಲಿ ಹೇತುವು ಸಾಧ್ಯವನ್ನು ಬಿಟ್ಟೂ ಇರುತ್ತದೆ ಮತ್ತು ವೃಕ್ಷದಿಂದ ಬೀಳುತ್ತಿರುವ ಹಣ್ಣಿನ ಕ್ರಮವಾಗಿರುವ ಆಕಾಶ

— ವಿಶೇಷಾರ್ಥಪ್ರದೀಪಿಕಾ —

"ಏವಂವಿಧ" - ಕ್ರಮದಿಂದ ಜ್ಞಾನಗಳನ್ನು ಹುಟ್ಟಿಸುವುದೆಂಬ ಸಾಮರ್ಥ್ಯವನ್ನು ಕಲ್ಪಿಸುವುದರಿಂದ, ಹೀಗೆ ಅರ್ಥ - ಅಂದರೆ —"ಒಬ್ಬ ಕರ್ತೃವು ಒಂದು ಕಾಲದಲ್ಲಿ ಒಂದೇ ಕ್ರಿಯೆಯನ್ನು ಮಾಡಲು ಸಮರ್ಥನು ಅನೇಕಕ್ರಿಯೆಗಳನ್ನು ಏಕಕಾಲದಲ್ಲಿ ಮಾಡಲು ಅಶಕ್ತನು,' ಹೀಗೆ ಜ್ಞಾನಗಳ ಕ್ರಮಿಕತೆಯನ್ನು ಕುರಿತು ಬೇಕಾಗಿರುವ ಸಾಮರ್ಥ್ಯವನ್ನು ಕಲ್ಪಿಸು (ಹೇಳು)ವುದರಿಂದ ಯುಗಪತ್ತಾಗಿ ಅನೇಕಜ್ಞಾನಗಳ ಹುಟ್ಟದಿರುವಿಕೆಯು ಸಂಭವಿಸುತ್ತಿರುವಾಗ ಇದಕ್ಕಾಗಿ ಮನಸ್ಸೆಂಬ ಸಹಕಾರಿಯನ್ನು ಅಂಗೀಕರಿಸಬೇಕಿಲ್ಲ. ಹೀಗೆ ಭಾವ "ಅನುಮಾನಂ"= "ರೂಪಾದಿಗ್ರಹಣಾನಿ ಚಕ್ಷುರಾದಿವ್ಯತಿರೇಕೇಣ ಅಧಿಷ್ಠಾಪಕಾಂತರಾಪೇಕ್ಷಾಣಿ ಅಯುಗಪದುತ್ಪತ್ತೇಃ" (ಏಕಕಾಲದಲ್ಲಿ ಹುಟ್ಟದಿರುವುದರಿಂದ, ರೂಪಾದಿ ವಿಷಯಕ ಜ್ಞಾನಗಳು ಚಕ್ಷುರಿಂದ್ರಿಯ, ಆತ್ಮನುಂತಾದವುಗಳಿಂದ ಬೇರೆಯಾದ, ಕ್ರಮಿಕಸಂಯೋಗವುಳ್ಳ, ಇನ್ನು ಒಂದು ಅಧಿಷ್ಠಾಪಕನ ಸಹಾಯವನ್ನು ಪಡೆದು ಹುಟ್ಟುವವು) ಎಂಬ ಅನುಮಾನವು ಇದನ್ನು ನ್ಯಾಯವಾರ್ತಿಕದಲ್ಲಿ ಹೇಳಿದ್ದಾರೆ ಜ್ಞಾನಗಳ ಕ್ರಮೋತ್ಪತ್ತಿಯಲ್ಲಿ ಆತ್ಮನ ಸಾಮರ್ಥ್ಯವೇ ಪ್ರಯೋಜಕವೆಂದು ಹೇಳಿದುದರಿಂದ, ಮನಸ್ಸೆಂಬ ಸಹಕಾರಿಯನ್ನಂಗೀಕರಿಸದಿದ್ದರೂ ಕ್ರಮದಿಂದ ಜ್ಞಾನದ ಉತ್ಪತ್ತಿಯು (ಅಯುಗಪದುತ್ಪತ್ತಿಯು) ಯುಕ್ತವೆನಿಸುವುದರಿಂದ, ಅನ್ಯಥಾಸಿದ್ಧವಾಗುವುದೆಂದು ತಿಳಿಯಬೇಕು

ಹೇತುವು ಸಾಧ್ಯಪ್ರಯೋಜಕವಲ್ಲವೆಂಬುದಿಷ್ಟೇ ಅಲ್ಲ ಸಾಧ್ಯವನ್ನು ಬಿಟ್ಟೂ ಇರುತ್ತದೆಯೆಂಬುದಾಗಿ "ಮನಸ" ಈ ವಾಕ್ಯದಿಂದ ಹೇಳುತ್ತಾರೆ ಚಕ್ಷುರಾದಿ ಇಂದ್ರಿಯಗಳೊಡನೆ ಕ್ರಮದಿಂದ ಹುಟ್ಟುವ ಮನಸ್ಸಿನ ಸಂಯೋಗದಲ್ಲಿ "ಅಯು

काशसंयोगे। कुठारादिव्यापारे च इन्द्रियाणां प्रतिविषयसंयोग व्यापारे चेति। तदयुक्तम्। दृष्टानुसारिणी हि कल्पना। कर्ता ह्यनेक करणाधिष्ठानेन युगपन्नानाकार्याणि कुर्वाणो दृष्टः। तथा हि। युगपन्माणवको गच्छति पठति पन्थानमीक्षते वहति च कमण्डलुम्। तस्मान्नैष कर्तृधर्मो युक्तः कल्पयितुम्। किन्तु दृष्टत्वाद् द्रव्यान्तर

— ಪದಾರ್ಥದೀಪಿಕಾ —

ಸಂಯೋಗದಲ್ಲಿಯೂ ಕುಠಾರಾದಿಗಳ ವ್ಯಾಪಾರದಲ್ಲಿಯೂ ಇಂದ್ರಿಯಗಳ ಆಯಾಯ ವಿಷಯ ಸಂಯೋಗ ವ್ಯಾಪಾರದಲ್ಲಿಯೂ ಹೇತುವು ಸಾಧ್ಯವನ್ನು ಬಿಟ್ಟಿರುತ್ತದೆ" ಹೀಗೆ ದೂಷಣವನ್ನು ಹೇಳುತ್ತಾನೆ ಆದರೆ ಇದು ಅಯುಕ್ತವು– ಹೇಗೆಂದರೆ ಕಂಡದ್ದನ್ನನುಸರಿಸಿ ಕಲ್ಪಿಸಬೇಕು ಕರ್ತೃವು ಅನೇಕ ಕರಣಗಳ ಅಧಿಷ್ಠಾನನಾಗಿ ಅನೇಕ ಕಾರ್ಯಗಳನ್ನು ಏಕಸಮಯದಲ್ಲಿ ಮಾಡುತ್ತಿರುವುದು ಕಂಡುಬಂದಿದೆ ಹೇಗೆಂದರೆ ಬ್ರಹ್ಮಚಾರಿಯು, ಒಂದೇ ಕಾಲದಲ್ಲಿ ಹೋಗುತ್ತಾನೆ ಓದುತ್ತಾನೆ, ದಾರಿಯನ್ನು ನೋಡುತ್ತಾನೆ ಹಾಗು ಕಮಂಡಲುವನ್ನು ಕೈಯಲ್ಲಿ ಧರಿಸುತ್ತಾನೆ ಆದುದರಿಂದ, ಕರ್ತೃಧರ್ಮವನ್ನಾಗಿ ಅದನ್ನು ಕಲ್ಪಿಸುವುದು ಯುಕ್ತವಲ್ಲ

— ವಿಶೇಷಾರ್ಥಪ್ರದೀಪಿಕಾ —

ಗಪದುತ್ಪತ್ತಿ" (ಏಕಕಾಲದಲ್ಲಿ ಹುಟ್ಟದಿರುವುದು)ಎಂಬ ಹೇತುವು ಇದೆ ಆದರೆ ಅಲ್ಲಿ –ಮನಸ್ಸೇ ಕಾರಣವಾದುದರಿಂದ, ಅದನ್ನು ಬಿಟ್ಟು ಹಿಂದೆಹೇಳಿದ ಬೇರೆ ಸಹಕಾರಿಯೆಂಬ ಕಾರಣಾಂತರವಿಲ್ಲದಿರುವುದರಿಂದ, ಸಾಧ ವಿಲ್ಲವಾದುದರಿಂದ. ವ್ಯಭಿಚಾರವು, ಹೀಗೆ ಭಾವ ಇನ್ನು ಮನಸ್ಸಿನ ಸಿದ್ಧಿ, ಅಸಿದ್ಧಿ, ಈ ಎರಡೂ ಪಕ್ಷಗಳಲ್ಲಿಯೂ ವ್ಯಭಿಚಾರವಿಲ್ಲವಾದುದರಿಂದ ಅದನ್ನು "ಫಲಸ್ಯ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ ಕ್ರಮದಿಂದಾಗಿರುವ ಬೀಳುವ ಫಲದ ಆಕಾಶ ಸಂಯೋಗದಲ್ಲಿ ಹಾಗು ಕುಠಾರಾದಿಗಳ ವ್ಯಾಪಾರಗಳಲ್ಲಿ ಮತ್ತು ಇಂದ್ರಿಯಗಳ ತತ್ತದ್ವಿಷಯಸಂಯೋಗರೂಪ ವ್ಯಾಪಾರದಲ್ಲಿ, ಫಲ, ಕುಠಾರ, ಇಂದ್ರಿಯ, ಇವುಗಳೇ ಕಾರಣವಾದುದರಿಂದ, ಅಲ್ಲಿಯೂ 'ಕ್ರಮಿಕಕಾರಣಾಂತರ ಸಾಪೇಕ್ಷ ಹುಟ್ಟಿರುವು"ದೆಂಬ ಸಾಧ್ಯವು ಇಲ್ಲದಿದ್ದರೂ, ಅಯುಗದುತ್ಪತ್ತಿಯೆಂಬ ಹೇತುವು ಇರುವುದರಿಂದ ವ್ಯಭಿಚಾರವು ಹೀಗೆ ಭಾವ ತಾರ್ಕಿಕನ ಈ ಹೇಳಿಕೆಯನ್ನು "ತದಯುಕ್ತಂ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ ಅನ್ಯಥಾ ಸಿದ್ಧಿಯನ್ನು "ದೃಷ್ಟಾನುಸಾರಿಣೀ" ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಾರೆ = "ಏಷ" –ಸ್ವ(ತನ್ನ)ಸಂಯೋಗಕ್ರಮದಿಂದ ಕ್ರಮವುಳ್ಳದ್ದಾದ ಕಾರ್ಯವನ್ನು

मेवाव्यापकम् । अनैकान्त्यं तु नास्त्येव । तत्रापि क्रियाक्रमादेर्निमित्तस्य विद्यमानत्वादिति ।

— ಪದಾರ್ಥದೀಪಿಕಾ —

ಆದರೆ ದೃಷ್ಟ(ಕಂಡದ್ದು)ವಾದುದರಿಂದ ಬೇರೆ ದ್ರವ್ಯವೇ ಅವ್ಯಾಪಕವಾದುದು ಹೇತುವು ಸಾಧ್ಯವನ್ನು ಬಿಟ್ಟಿರುವುದೆಂಬುದಂತೂ ಇಲ್ಲವೇ ಇಲ್ಲ ಏಕೆಂದರೆ- ಅಲ್ಲಿಯೂ ಕ್ರಿಯೆಯ ಕ್ರಮ ಮುಂತಾದ ನಿಮಿತ್ತವು ಇರುತ್ತದೆ " ಹೀಗೆ ಮನಸ್ಸಿನ ವಿಷಯದಲ್ಲಿ ಅನುಮಾನವನ್ನು ಹೇಳಿದರೆ ಅದರ ಮೇಲೆ ಹೀಗೆ

— ವಿಶೇಷಾರ್ಥಪ್ರದೀಪಿಕಾ —

ಹುಟ್ಟಿಸುವುದೆಂಬುದು ಒಬ್ಬ ಕರ್ತೃವು ಒಂದುಸಲ ಒಂದೇ ಕ್ರಿಯೆಯನ್ನು ಮಾಡುವನೆಂದು ಹೇಳಿದುದು ಅಯುಕ್ತವೆಂದು ಇಲ್ಲಿಯ ಭಾವ 'ದೃಷ್ಟತ್ವಾತ್'' ಆಯಾಯ ಇಂದ್ರಿಯಗಳಿಗೆ ತಮ್ಮ ತಮ್ಮ ವಿಷಯದ ಸಂಬಂಧವು ಹಾಗು ಆತ್ಮಸಂಬಂಧವು ಇದ್ದರೂ ಮನಸ್ಸಿನ ಸಂಯೋಗದ ಕ್ರಮದಿಂದಲೇ ಜ್ಞಾನಗಳಲ್ಲಿ ಕ್ರಮವು ವ್ಯಾಸಂಗದಶೆಯಲ್ಲಿ ಕಂಡಿರುವದರಿಂದ, ಹೀಗೆ ಅರ್ಥ 'ಅವ್ಯಾಪಕಂ''=ಕ್ರಮಿಕಸಂಯೋಗವುಳ್ಳದ್ದಕ್ಕೆ ವ್ಯಾಪಕತ್ವವು ಸಂಭವಿಸುವುದಿಲ್ಲ ಆದುದರಿಂದ, ವ್ಯಾಪಕ (ವಿಭು)ವಾದ ಆತ್ಮನಿಗೆ ಕ್ರಮಿಕಸಂಯೋಗವತ್ವವು ಸರಿಯೆನಿಸುವುದಿಲ್ಲ ಆದುದರಿಂದ, ವ್ಯಾಪಕವಾಗದೇ ಇರುವಂತಹದೇ ಕ್ರಮಿಕಸಂಯೋಗವನ್ನು ಹುಟ್ಟಿಸುವುದರಿಂದ, ಅದು ಆತ್ಮನಿಂದ ಬೇರೆಯಾದ ದ್ರವ್ಯವೇ ಮನಸ್ಸೇ-ಆಗಿರುತ್ತದೆ ಹೀಗೆ ಭಾವ. ಮನಸ್ಸಿನ ಅಣುತ್ವವು ಧರ್ಮಿಗ್ರಾಹಕ ಪ್ರಮಾಣಸಿದ್ಧವೆಂದು ಇಲ್ಲಿ ತಿಳಿಯಬೇಕು

"ಅನೈಕಾಂತ್ಯಂ ತು"=ಹಿಂದೆ ಹೇಳಿದ, ಮನಸ್ಸಿನ ಆಯಾಯ ಇಂದ್ರಿಯ ಸಂಯೋಗ ಮುಂತಾದುದರಲ್ಲಿ ತೋರಿಸಿದ ಹೇತುವಿನ ಸಾಧ್ಯವ್ಯಭಿಚಾರವು "ಕ್ರಿಯಾಕ್ರಮಾದೇಃ"=ಕ್ರಿಯಾಕ್ರಮ, ಪ್ರಯತ್ನಕ್ರಮ, ಈ ಮುಂತಾದುದರ ಹಿಂದೆ ಹೇಳಿದ ಇಂದ್ರಿಯಮನಃ ಸಂಯೋಗದಲ್ಲಿ ಕ್ರಿಯೆಯೆಂಬ ಅಸಮವಾಯಿ ಕಾರಣದಿಂದ ಹುಟ್ಟಿರುವುದೆಂಬ ಸಾಧ್ಯವು ಇರುತ್ತದೆ ಕ್ರಿಯೆಯೆಂಬ ಕಾರಣದಲ್ಲಿಯ ಕ್ರಮವು ಆಯಾಯ ಇಂದ್ರಿಯ ಸಂಯೋಗಗಳ ಕ್ರಮವನ್ನು ಕುರಿತು ಕಾರಣವಾದುದರಿಂದ, "ಕಾರಣಾಂತರಶೂನ್ಯತ್ವ"ವಿಲ್ಲವಾದುದರಿಂದ, ಕಾರಣಾಂತರಸಾಪೇಕ್ಷತೆಯು ಬರುವುದರಿಂದ ಸಾಧ್ಯವೂ ಇರುತ್ತದೆ ಆದ್ದರಿಂದ ವ್ಯಭಿಚಾರದೋಷವಿಲ್ಲ ಹೀಗೆ ಭಾವ ಇನ್ನು -ಕ್ರಿಯೆಯಲ್ಲಿರುವ ಕ್ರಮದಲ್ಲಿ-ಮನ ಆದಿ ಕಾರಣವ್ಯತಿರಿಕ್ತವಾದ ಕಾರಣದಿಂದ ಹುಟ್ಟಿರುವುದೆಂಬ ಸಾಧ್ಯವಿಲ್ಲ, ಅಯುಗಪದುತ್ಪತ್ತಿಯೆಂಬ ಹೇತುವು ಇರುವುದರಿಂದ ವ್ಯಭಿಚಾರವು ಬರುವುದು;

अत्रोच्यते । अस्ति तावदविवेकिनामपि मनःप्रतीतिः । मम मनोऽन्यत्र गतमित्यादिव्यवहारात् । न च ते युगपज्ज्ञानानुत्पत्तिं जानन्ति। प्रत्युत युगपदेव ज्ञानोत्पत्तिं मन्यन्ते । अन्यथा व्यासङ्गे क्रमदर्शनेनान्यत्रापि क्रमानुमानं परस्य व्यर्थं स्यात् । तस्माल्लिङ्गदर्शनात्प्रागेव

— ಪದಾರ್ಥದೀಪಿಕಾ —

ಹೇಳುವೆವು ಅವಿವೇಕಿಗಳಿಗೂ ಮನಸ್ಸಿನ ತಿಳಿವಳಿಕೆಯುಂಟು। ಏಕೆಂದರೆ "ನನ್ನ ಮನಸ್ಸು ಬೇರೆ ಕಡೆಗೆ ಹೋಗಿದೆ" ಇತ್ಯಾದಿ ವ್ಯವಹಾರಗಳಿರುತ್ತವೆ ಮತ್ತು ಒಂದೇ ಕಾಲದಲ್ಲಿ ಜ್ಞಾನಗಳ ಉತ್ಪತ್ತಿಯಿಲ್ಲವೆಂಬುದನ್ನು ಅವರು ತಿಳಿಯುವುದಿಲ್ಲ, ಬದಲಾಗಿ ಒಂದೇ ಕಾಲದಲ್ಲಿಯೇ ಜ್ಞಾನಗಳ ಉತ್ಪತ್ತಿಯನ್ನು ತಿಳಿಯುತ್ತಾರೆ ಹಾಗಿಲ್ಲದಿದ್ದಲ್ಲಿ ವ್ಯಾಸಂಗದಲ್ಲಿ ಕ್ರಮವನ್ನು ಕಂಡಿರುವುದರಿಂದ, ಬೇರೆ ಕಡೆಗಳಲ್ಲಿಯೂ ಕ್ರಮವನ್ನು ಊಹಿಸುವುದು ಪರನಿಗೆ ವ್ಯರ್ಥವಾದೀತು। ಆದುದರಿಂದ, ಲಿಂಗದರ್ಶನಕ್ಕಿಂತ ಪೂರ್ವದಲ್ಲಿಯೇ ಉಂಟಾಗಿರುವ ಈ ಮನೋ

— ವಿಶೇಷಾರ್ಥಪ್ರದೀಪಿಕಾ —

ಹೀಗೆ ಶಂಕಿಸಬಾರದು. ಏಕೆಂದರೆ ಅಲ್ಲಿಯೂ ಅದೃಷ್ಟವೆಂಬ ಕಾರಣದಲ್ಲಿಯ ಕ್ರಮವೆಂಬ ಕಾರಣಾಂತರವಿದ್ದು, ಆ ಕಾರಣಾಂತದಿಂದ ಹುಟ್ಟಿರುವುದೆಂಬ ಸಾಧ್ಯವೂ ಇದೆ ಇನ್ನು-ಆ ಅದೃಷ್ಟಕ್ರಮದಲ್ಲಿಯೂ ಅದರ ಹಿಂದಿನ ಅದೃಷ್ಟದಲ್ಲಿನ ಕ್ರಮವೆಂಬ ಕಾರಣದಿಂದ ಹುಟ್ಟಿರುವುದೆಂಬ ಸಾಧ್ಯವಿದ್ದು. ಹೇತುವೂ ಇರುವುದರಿಂದ ವ್ಯಭಿಚಾರವಿಲ್ಲವೆಂದು ತಿಳಿಯಬೇಕು ಇದರಂತೆ– ಉದ್ಯಮನನಿಪತನರೂಪವಾದ ಕುಠಾರದಲ್ಲಿನ ವ್ಯಾಪಾರಕ್ರಮದಲ್ಲಿ ಪ್ರಯತ್ನಕ್ರಮವು ಕಾರಣವಾದುದರಿಂದ, ಆ ಕುಠಾರದಲ್ಲಿನ, ಉದ್ಯಮ್ಯೋದ್ಯಮ್ಯನಿಪತನವೆಂಬ ಕ್ರಮಿಕ ವ್ಯಾಪಾರದಲ್ಲಿ ವ್ಯಭಿಚಾರವಿಲ್ಲವೆಂದು ತಿಳಿಯಬೇಕು

ಹಿಂದೆ ಹೇಳಿದ, "ಅಯುಗಪದುತ್ಪತ್ತಿ"— (ಕ್ರಮಿಕವಾದ ಉತ್ಪತ್ತಿ)ಯೆಂಬ ಯುಕ್ತಿಯಿಂದ, ಅನುಮಾನದಿಂದ ಮನಸ್ಸಿನ ಜ್ಞಾನವಾಗುತ್ತದೆಯೆಂದು ಬಗೆಯಬಾರದು ಏಕೆಂದರೆ ಈ ಯುಕ್ತಿಯನ್ನು ಪ್ರತಿಸಂಧಾನಮಾಡದಿದ್ದರೂ —ಅಪರ ಜ್ಞಾನವಿಲ್ಲದಿದ್ದರೂ ಮನಸ್ಸಿನ ಜ್ಞಾನವಾಗುತ್ತದೆ ಈ ಅಭಿಪ್ರಾಯದಿಂದ ಸಮಾಧಾನವನ್ನು "ಅತ್ರೋಚ್ಯತೇ" ಇತ್ಯಾದಿ ಗ್ರಂಥದಿಂದ ಹೇಳುತ್ತಾರೆ

"ಅನ್ಯಥಾ" —ಪಾಮರರಿಗೂ "ಯುಗಪತ್ ಜ್ಞಾನಾನುತ್ಪತ್ತಿ"ಯು (ಏಕ ಕಾಲದಲ್ಲಿ ಅನೇಕ ಜ್ಞಾನಗಳಿಗೆ ಉತ್ಪತ್ತಿಯಿಲ್ಲವೆಂಬುದರ) ಜ್ಞಾನವಿರುವುದೆಂದರೆ– "ಅನ್ಯತ್ರಾಪಿ" — ದೀರ್ಘಶಷ್ಕುಲೀಭಕ್ಷಣಾದಿದಶೆಯಲ್ಲಿಯೂ ಅವರು ಕ್ರಮದಿಂ

भवदिदं मनोज्ञानं न तन्निमित्तकमिति । अस्तु तर्हि बुद्ध्यादीनामसमवायिकारणस्य संयोगस्याश्रयतया मनःसिद्धिः । मैवम् । प्रत्यक्षज्ञाने तावदिन्द्रियात्मसंयोगस्यैवासमवायिकारणत्वस्योपपत्तेः । अनु-

— ಪದಾರ್ಥದೀಪಿಕಾ —

ವಿಷಯಕ ಜ್ಞಾನವು ಲಿಂಗದರ್ಶನ ಮೂಲಕವಾಗಿ ಬಂದಿಲ್ಲ, ಹೀಗೆ ಹಾಗಾದರೆ ಬುದ್ಧಿಮುಂತಾದವುಗಳಿಗೆ ಅಸಮವಾಯಿ ಕಾರಣದ ಸಂಯೋಗದ ಆಶ್ರಯವಾಗಿ ಮನಸ್ಸಿನ ಸಿದ್ಧಿಯಾಗಲಿ ! ಹೀಗೆ ಶಂಕಿಸಬಾರದು ಏಕೆಂದರೆ ಪ್ರತ್ಯಕ್ಷಜ್ಞಾನದಲ್ಲಿಯಂತೂ ಇಂದ್ರಿಯಾತ್ಮ ಸಂಯೋಗವೇ ಅಸಮವಾಯಿಕಾರಣವಾಗುತ್ತದೆ

— ವಿಶೇಷಾರ್ಥಪ್ರದೀಪಿಕಾ —

ದಲೇ ಜ್ಞಾನಗಳು ಉತ್ಪನ್ನವಾಗುವವೆಂದು ತಿಳಿಯುತ್ತಾರೆ, ಆದುದರಿಂದ "ದೀರ್ಘಶಷ್ಕುಲೀಭಕ್ಷಣದಶೆಯಲ್ಲಿ ಜ್ಞಾನಗಳು ಕ್ರಮದಿಂದ ಹುಟ್ಟುವವುಗಳು ಏಕೆಂದರೆ- ಜ್ಞಾನವಾಗಿವೆ ಇದರಲ್ಲಿ ವ್ಯಾಸಂಗಕಾಲದ ಜ್ಞಾನಗಳು ದೃಷ್ಟಾಂತಗಳು" ಎಂಬ ಅನುಮಾನವು ವ್ಯರ್ಥವಾಗುತ್ತದೆ ಏಕೆಂದರೆ —ಕ್ರಮದಿಂದ ಹುಟ್ಟಿರುವುದೆಂಬ ಸಾಧ್ಯದ ನಿಶ್ಚಯವಾಗಿರುತ್ತದ ಹೀಗೆ ಭಾವ

"ಬುಧ್ಯಾದೀನಾಂ" —ಬುದ್ಧಿ, ಸುಖ, ದುಃಖ, ಇಚ್ಛಾ, ಮುಂತಾದವುಗಳು ಇವುಗಳಿಗೆ ಆತ್ಮ-ಮನಸ್ಸು ಇವುಗಳ ಸಂಯೋಗವು ಅಸಮವಾಯಿ ಕಾರಣವು. ಆದುದರಿಂದ, ಹೀಗ ಅರ್ಥ ("ಬುದ್ಧಿಮುಂತಾದುದು ಅಸಮವಾಯಿ ಕಾರಣದಿಂದ ಹುಟ್ಟಿದುದು ಏಕೆಂದರೆ- ಭಾವಕಾರ್ಯವಾಗಿದೆ ಘಟಾದಿಗಳಿದರಲ್ಲಿ ದೃಷ್ಟಾಂತಗಳು" ಈ ಅನುಮಾನದಿಂದ, ಬುಧ್ಯಾದಿಗಳ ಅಸಮವಾಯಿಕಾರಣದ ಸಿದ್ಧಿಯಾಗಲು, ಆ ಅಸಮವಾಯಿಕಾರಣವು ಸಂಯೋಗವೇ ಆಗಿದೆ ಏಕೆಂದರ - ನಿತ್ಯ (ಆತ್ಮ) ವಿಶೇಷಗುಣಗಳ ಅಸಮವಾಯಿಕಾರಣವಾಗಿರುತ್ತದ ಭೇರಿ -ಆಕಾಶಸಂಯೋಗವು ಇದರಲ್ಲಿ ದೃಷ್ಟಾಂತವಾಗಿದೆ ಈ ಅನುಮಾನದಿಂದ ಅದು ಸಂಯೋಗ ರೂಪವಂದು ಸಿದ್ಧಿಸಿ, ಪರಿಶೇಷ ಯುಕ್ತಿಯಿಂದ 'ಮನಸಂಯೋಗ"ವೆಂದು ಸಿದ್ಧಿಸುತ್ತದೆ ಹೀಗ ಇಲ್ಲಿ ತಿಳಿಯಬೇಕು "ಬುದ್ಧ್ಯಾದಿಕಂ" ಇಲ್ಲಿರುವ ಬುದ್ಧಿ (ಜ್ಞಾನ)ಯಲ್ಲಿ ನಾಲ್ಕು ತರಹಗಳು —ಪ್ರತ್ಯಕ್ಷ, ಅನುಮಿತಿ, ಶಾಬ್ದಜ್ಞಾನ, ಸ್ಮೃತಿ (ಸ್ಮರಣ) ರೂಪಜ್ಞಾನ ಹೀಗ ಇವುಗಳಲ್ಲಿ ಪ್ರತ್ಯಕ್ಷಜ್ಞಾನದಲ್ಲಿ ಆತ್ಮ-ಇಂದ್ರಿಯಸಂಯೋಗವೇ ಅಸಮವಾಯಿಕಾರಣವೆಂಬ ಅಭಿಪ್ರಾಯದಿಂದ ಮೊದಲನೆಯ ಪಕ್ಷವನ್ನು 'ಪ್ರತ್ಯಕ್ಷಜ್ಞಾನೇ" ಇತ್ಯಾದಿವಾಕ್ಯದಿಂದ ನಿರಾಕರಿಸುತ್ತಾರೆ ಆ ಸಂಯೋಗವು ಆತ್ಮೇಂದ್ರಿಯ ಸಂಯೋಗರೂಪವೇ ಮನಸ್ಸಂಯೋಗವಲ್ಲ

मिथ्यादौ लिङ्गज्ञानादेः स्मृतौ भावनायाः सुखादाविष्टार्थोपलब्ध्यादेरिति । नित्यविशेषगुणानां संयोगासमवायिकारणत्वनियमान्नैवमिति चेन्न ।

— ಪದಾರ್ಥದೀಪಿಕಾ —

ಅನುಮಿತಿ ಮುಂತಾದ ಜ್ಞಾನಗಳಲ್ಲಿಯಾದರೂ ಲಿಂಗಜ್ಞಾನ ಮುಂತಾದುದು, ಶ್ರುತಿಯಲ್ಲಿ ಭಾವನೆಯು, ಸುಖಾದಿಗಳಲ್ಲಿ ಇಷ್ಟಾರ್ಥದ ಉಪಲಬ್ಧಿಯು. ಅಸಮವಾಯಿಕಾರಣವಾಗುತ್ತದೆ " ಹೀಗೆ ಉತ್ತರವು ಇನ್ನು ನಿತ್ಯವಿಶೇಷಗುಣಗಳಿಗ ಸಂಯೋಗವು ಅಸಮವಾಯಿ ಕಾರಣವಾದುದು ನಿಯಮದಿಂದ ಬಂದಿದೆ–ಯಾದುದರಿಂದ ಹೀಗೆ ಹೇಳಬಾರದೆಂದು ಬಗೆಯಬಾರದು ಏಕೆಂದರೆ ವಿಭಾಗ

— ವಿಶೇಷಾರ್ಥಪ್ರದೀಪಿಕಾ —

ಆದುದರಿಂದ ಅದರ ಆಶ್ರಯವಾಗಿ ಮನಸ್ಸಿನ ಸಿದ್ಧಿಯು (ಪರಿಶೇಷಯುಕ್ತಿಯಿಂದ) ಆಗುವುದಿಲ್ಲ ಹೀಗ ಭಾವ ಅನುಮಿತಿಯನ್ನು ಕುರಿತು ಲಿಂಗಜ್ಞಾನವು, ಶಾಬ್ದಬೋಧವನ್ನು ಕುರಿತು ಪದಜ್ಞಾನವು, ಸ್ಮೃತಿಯನ್ನು ಕುರಿತು ಭಾವನೆಯು ಸುಖಾದಿಗಳನ್ನು ಕುರಿತು ಇಷ್ಟಪದಾರ್ಥೋಪಲಬ್ಧಿಯು, ಇವು ಅಸಮವಾಯಿಕಾರಣಗಳು ಆದುದರಿಂದ, ಬುಧ್ಯಾದಿಗಳ ಅಸಮವಾಯಿಕಾರಣವಾಗಿ ಸಂಯೋಗವೂ ಆ ಸಂಯೋಗರೂಪವಾಗಿ ಮನಃಸಂಯೋಗವೂ ಸಿದ್ಧಿಸುವುದಿಲ್ಲ ಆ ಅನುಮಾನಗಳು ಅನ್ಯಥಾಸಿದ್ಧಗಳಾಗುತ್ತವೆ ಹೀಗೆ ತಿಳಿಯಬೇಕು ಬುದ್ಧಿಮುಂತಾದವುಗಳ ಸಮವಾಯಿಕಾರಣವಾದ -ಆತ್ಮನಲ್ಲಿ ಸಮವಾಯಿಸಂಬಂಧದಿಂದ ಇರುವುದರಿಂದ, ಇಂದ್ರಿಯಾತ್ಮಸಂಯೋಗವು ಅಸಮವಾಯಿಕಾರಣವಾಗುವುದೆಂಬುದು ಸಮಂಜಸವಾಗಿದೆ

'ನಿತ್ಯಾತ್ಮವಿಶೇಷಗುಣಾನಾಂ" — ಇಲ್ಲಿ- ನಿತ್ಯವಸ್ತುವಿನ ವಿಶೇಷಗುಣಗಳು ಯಾವವೋ ಅವು ಸಂಯೋಗವೆಂಬ ಅಸಮವಾಯಿಕಾರಣವುಳ್ಳವುಗಳು (-ಆ ಕಾರಣದಿಂದ ಹುಟ್ಟಿದವುಗಳು) ಹೀಗೆ ನಿಯಮವಿಗುವುದರಿಂದ, ಬುದ್ಧಿಮುಂತಾದುದು ಆತ್ಮನ ವಿಶೇಷಗುಣವಾದುದರಿಂದ, ಅಲ್ಲಿ ಆತ್ಮಮನಸ್ಸಂಯೋಗವೆಂಬ ಅಸಮವಾಯಿಕಾರಣವನ್ನು ಅಂಗೀಕರಿಸದಿದ್ದಲ್ಲಿ ನಿರುಪಾಧಿಕವ್ಯಾಪ್ತಿಯು ಭಗ್ನವಾಗಬೇಕಾದೀತು! ಹೀಗ ಭಾವ ಗುಣವಾದುದು ಸಂಯೋಗವೆಂಬ ಅಸಮವಾಯಿಕಾರಣದಿಂದ ಹುಟ್ಟಿರುವದೆಂಬುದಾಗಿ ನಿಯಮವನ್ನು ಹೇಳಿದರೆ ಈ ನಿಯಮವು ವಿಭಾಗದಿಂದುಂಟಾದ ಮತ್ತೊಂದು ವಿಭಾಗದಲ್ಲಿ, ಸಂಯೋಗವೆಂಬ ಅಸಮವಾಯಿಕಾರಣದಿಂದ ಹುಟ್ಟಿರುವುದು ಇಲ್ಲವಾದುದರಿಂದ ವ್ಯಭಿಚರಿತವಾಗುವದು ಅದರ ಪರಿಹಾರಕ್ಕಾಗಿ "ವಿಶೇಷಗುಣ' ವೆಂಬುದಾಗಿ ಹೇಳಿದ್ದಾರೆ ವಿಶೇಷ

विभाग (ज) शब्दजशब्दे व्यभिचारात् । अश्रावणत्वेन हेतुविशेषणान्नेति चेत् । यथा तर्हि विभागादिजशब्दे कारणान्तरदर्शनात्तन्निरासार्थं

— ಪದಾರ್ಥದೀಪಿಕಾ —

ದಿಂದುಂಟಾದ ಹಾಗು ಶಬ್ದದಿಂದುಂಟಾದ ಶಬ್ದಗಳಲ್ಲಿ ಹೇತುವು ಸಾಧ್ಯವನ್ನು ಬಿಟ್ಟಿರುತ್ತದೆ "ಅಶ್ರಾವಣತ್ವೇ ಸತಿ" ಎಂಬುದಾಗಿ ಹೇತುವಿನಲ್ಲಿ ವಿಶೇಷಣವನ್ನಿಡುವುದರಿಂದ ದೋಷವಿಲ್ಲವೆಂದು ಹೇಳುವುದು ಯುಕ್ತವಲ್ಲ ಏಕೆಂದರೆ ಹಾಗಾದರೆ— ವಿಭಾಗಾದಿಗಳಿಂದುಂಟಾಗುವ ಶಬ್ದದಲ್ಲಿ, ಕಾರಣಾಂತರವು ಕಂಡು

— ವಿಶೇಷಾರ್ಥಪ್ರದೀಪಿಕಾ —

ಗುಣವು ಸಂಯೋಗಾಸಮವಾಯಿಕಾರಣಕವೆಂಬ ನಿಯಮವೂ, ಘಟದಲ್ಲಿರುವ ರೂಪವು ವಿಶೇಷವಾಗಿದ್ದರೂ ಸಂಯೋಗವೆಂಬ ಅಸಮವಾಯಿಕಾರಣದಿಂದ ಹುಟ್ಟಿದುದಲ್ಲವಾದುದರಿಂದ, ಘಟದ ರೂಪದಲ್ಲಿ ವ್ಯಭಿಚರಿಸುತ್ತದೆ ಅದನ್ನು ಪರಿಹರಿಸಲು ''ನಿತ್ಯ' ಎಂಬುದನ್ನು ಸೇರಿಸಿದ್ದಾರ "ನಿತ್ಯಸ್ಯ ವಿಶೇಷಗುಣತ್ವಂ" ಎಂಬುದಾಗಿ ವಿಗ್ರಹ ಘಟದ ರೂಪವು, ಘಟವು ನಿತ್ಯವಲ್ಲವಾದುದರಿಂದ ನಿತ್ಯ ವಿಶೇಷಗುಣವಾಗುವದಿಲ್ಲವಾದುದರಿಂದ ವ್ಯಭಿಚಾರವಿಲ್ಲ ಹೀಗ ಭಾವ ಈ ಸಮಗ್ರ ಯುಕ್ತಿಯೂ ನಿತ್ಯವಾದ ಜಲಪರಮಾಣುವಿನಲ್ಲಿರುವ ನಿತ್ಯವಾದ ರೂಪ ಮುಂತಾದುದರಲ್ಲಿ ಸಂಯೋಗವೆಂಬ ಅಸಮವಾಯಿಕಾರಣದಿಂದ ಹುಟ್ಟಿರುವುದೆಂಬುದನ್ನು ಬಿಟ್ಟಿರುವುದರಿಂದ ವ್ಯಭಿಚಾರವು ಅದರ ಪರಿಹಾರಕ್ಕೋಸ್ಕರ ನಿತ್ಯವಸ್ತುವಿನಲ್ಲಿ ಕಾರ್ಯ (ಹುಟ್ಟುವ) ವಿಶೇಷಗುಣವಾಗಿರುವುದೆಂಬ ಅಭಿಪ್ರಾಯವನ್ನು ಹೇಳಬೇಕು ಜಲಪರಮಾಣುವಿನ ನಿತ್ಯವಾದ ರೂಪವು ಕಾರ್ಯವಲ್ಲವಾದುದರಿಂದ ದೋಷವಿಲ್ಲವೆಂದು ತಿಳಿಯಬೇಕು

"ವಿಭಾಗಶಬ್ದಜಶಬ್ದೇ" —ವಿಭಾಗಜ, (ವಿಭಾಗದಿಂದಹುಟ್ಟಿದ) ಶಬ್ದಜ (ಶಬ್ದದಿಂದುಂಟಾದ) ಶಬ್ದದಲ್ಲಿ ವಂಶ (ಬಿದಿರು)ಮುಂತಾದುದರಲ್ಲಿ ಎರಡು ದಲಗಳ ವಿಭಾಗ (ಸಂಯೋಗನಾಶ)ದಿಂದ ಉಂಟಾದ ಶಬ್ದವು "ವಿಭಾಗಜ''ಶಬ್ದವು ಈ ಎರಡೂ ತರಹದ ಶಬ್ದವು ಕ್ರಮದಿಂದ, ವಿಭಾಗ ಹಾಗು ಶಬ್ದವೆಂಬ ಅಸವಾಯಿಕಾರಣದಿಂದ ಹುಟ್ಟಿದೆ ಏಕೆಂದರೆ-ಶಬ್ದಕ್ಕೆ ಸಮವಾಯಸಂಬಂಧದಿಂದ ಆಶ್ರಯವಾದ ಆಕಾಶದಲ್ಲಿ --ಹಿಂದೆಹೇಳಿದ ದಲದ್ವಯವಿಭಾಗವೂ ಶಬ್ದವೂ ಸಮವಾಯಸಂಬಂಧದಿಂದ ಇರುತ್ತದೆ ಆದರೆ ಆ ಶಬ್ದವು ಹಾಗು ವಿಭಾಗವು ಸಂಯೋಗರೂಪವಾಗಿಲ್ಲ ಈ ಕಾರಣದಿಂದ, ವಿಭಾಗಜ, ಶಬ್ದಜಶಬ್ದಗಳಲ್ಲಿ ಸಂಯೋಗವೆಂಬ ಅಸಮವಾಯಿಕಾರಣದಿಂದ ಹುಟ್ಟಿರುವುದೆಂಬ ಸಾಧ್ಯವಿಲ್ಲ.

व्याप्तिग्रहणवेलायां प्रयत्यते तथा सुखादिनिरासाय प्रयतनीयम्। असमवायिकारणान्तरदर्शनस्य तुल्यत्वात्। निमित्तं तदिति चेन्न।

## — ಪದಾರ್ಥದೀಪಿಕಾ —

ಬಂದುದರಿಂದ ಅದರ ನಿರಾಸಾರ್ಥವಾಗಿ ಹೇಗೆ ಪ್ರಯತ್ನಿಸುವುದೋ ಹಾಗೆ ಸುಖಾದಿಗಳ ನಿರಾಸಕ್ಕಾಗಿ ಪ್ರಯತ್ನಿಸಬೇಕಾಗುತ್ತದೆ ಏಕೆಂದರೆ ಅಸಮವಾಯಿಕಾರಣಾಂತರದ ದರ್ಶನವು ಸಮಾನವಾಗಿದೆ ಅದು ನಿಮಿತ್ತವೆಂದು

## — ವಿಶೇಷಾರ್ಥಪ್ರದೀಪಿಕಾ —

ನಿತ್ಯದ್ರವ್ಯದ ಕಾರ್ಯವಿಶೇಷಗುಣವಾಗಿರುವುದೆಂಬ ಹೇತುವಿದೆ ಆದುದರಿಂದ ವ್ಯಭಿಚಾರವು, ಹೀಗೆ ಭಾವ "ಅಶ್ರಾವಣತ್ವೇನ"="ಶ್ರವಣೇಂದ್ರಿಯಕ್ಕೆ ಗೋಚರವಾಗದ, ನಿತ್ಯದ್ರವ್ಯದಲ್ಲಿ ಹುಟ್ಟುವ ವಿಶೇಷಗುಣವಾದುದರಿಂದ," ಎಂಬುದಾಗಿ ಹೇತುವು "ಯಾವದು ಶ್ರವಣೇಂದ್ರಿಯಕ್ಕೆ ಗೋಚರವಾಗಿದ್ದು, ನಿತ್ಯದ್ರವ್ಯದಲ್ಲಿರುವ ಜನ್ಯ (ಹುಟ್ಟುವ) ವಿಶೇಷಗುಣವೋ ಅದು ಸಂಯೋಗವೆಂಬ ಅಸಮವಾಯಿಕಾರಣದಿಂದ ಹುಟ್ಟಿದುದು" ಹೀಗೆ ನಿಯಮವೆಂಬ ಅಭಿಪ್ರಾಯವಿದ್ದರೆ– ಹೀಗೆ ಅರ್ಥ "ಯಥಾ ತರ್ಹಿ" –'ಯಾವದು ನಿತ್ಯದ್ರವ್ಯದ ಜನ್ಯವಾದ ವಿಶೇಷಗುಣವೋ ಅದೆಲ್ಲವೂ ಸಂಯೋಗವೆಂಬ ಅಸಮವಾಯಿಕಾರಣದಿಂದ ಹುಟ್ಟಿರುವುದು," ಎಂಬ ವ್ಯಾಪ್ತಿಗ್ರಹಣಕಾಲದಲ್ಲಿ —ವಿಭಾಗಜಶಬ್ದ —ಶಬ್ದಜಶಬ್ದಗಳಲ್ಲಿ ಬರುವ ವ್ಯಭಿಚಾರವನ್ನು ತಪ್ಪಿಸಲು, ಆ ನಿಯಮದಲ್ಲಿ "ಶ್ರವಣೇಂದ್ರಿಯಕ್ಕೆ ಗೋಚರವಾಗದಿದ್ದು ಯಾವದು ನಿತ್ಯದ್ರವ್ಯದ ಜನ್ಯವಿಶೇಷಗುಣವೋ" (ಅದು ಅಸಮವಾಯಿಕಾರಣದಿಂದ ಹುಟ್ಟಿದುದು)ಎಂಬುದಾಗಿ "ಅಶ್ರಾವಣತ್ವೇಸತಿ" ಎಂಬ ವಿಶೇಷಣದಿಂದ ಪ್ರಯತ್ನಿಸುವಿರೋ —ಅಂದರೆ ಆ ವ್ಯಾಪ್ತಿಗ "ಇಂಥ ವಿಭಾಗಜ ಶಬ್ದಜಶಬ್ದಗಳನ್ನು ಬಿಟ್ಟು" ಎಂಬುದಾಗಿ ಸಂಕೋಚಮಾಡುವಿರೋ ಹಾಗೆ–ಪಕ್ಷೀಭೂತ ಸುಖ ಮುಂತಾದವುಗಳಲ್ಲಿಯೂ ವ್ಯಭಿಚಾರವನ್ನು ಪರಿಹರಿಸಲು "ಆತ್ಮನಲ್ಲಿ ಇರದ" (ಅನಾತ್ಮೀಯತ್ವೇಸತಿ)ಎಂಬ ವಿಶೇಷಣವನ್ನೂ ಸೇರಿಸಲು ಪ್ರಯತ್ನಿಸಬೇಕು ಅಂದರೆ -"ಆತ್ಮಗುಣಗಳನ್ನುಬಿಟ್ಟು ಬೇರೆಯಾದ – ಅಂಥ ವಿಶೇಷಗುಣಗಳು ಯಾವವೋ ಅವು ಸಂಯೋಗರೂಪ ಅಸಮವಾಯಿಕಾರಣದಿಂದ ಹುಟ್ಟಿರುವವುಗಳೆಂದು ಸಂಕೋಚಮಾಡಬೇಕು ಹೀಗೆ ಭಾವ. ಸಂಕೋಚದಲ್ಲಿ ಕಾರಣವನ್ನು 'ಅಸಮವಾಯಿಕಾರಣಾಂತರದರ್ಶನಸ್ಯ" ಈ ವಾಕ್ಯದಿಂದ ಹೇಳುತ್ತಾರೆ ಸುಖಾದಿಗಳಲ್ಲಿ ಇಷ್ಟಾರ್ಥದ ಉಪಲಬ್ಧಿಯೇ ಅಸಮವಾಯಿಕಾರಣವೆಂದು ವ್ಯವಸ್ಥಿತವಾಗಿದೆ ಆದುದರಿಂದ ಅಲ್ಲಿ ವ್ಯಭಿಚಾರಪರಿಹಾರಕ್ಕೆ

**असमवायिकारणलक्षणस्यातिव्याप्तिप्राप्तेरिति । न च सुखाद्युपलब्धि-करणत्वेन मनस्सिद्धिः । साक्षिसिद्धतयाऽन्यथासिद्धेः । एवमनु-मान्तरमपि निरसनीयम् । न चागमो मनसि प्रमाणम् । जाति-**

— ಪದಾರ್ಥದೀಪಿಕಾ —

ಹೇಳುವುದು ಸರಿಯಲ್ಲ ಏಕೆಂದರೆ ಅಸಮವಾಯಿಕಾರಣದ ಲಕ್ಷಣಕ್ಕೆ ಅತಿ ವ್ಯಾಪ್ತಿಯು ಬರಬೇಕಾಗುತ್ತದೆ ಹೀಗೆ ಇನ್ನು ಸುಖಾದಿಗಳ ಉಪಲಬ್ಧಿಯ ಕರಣವಾದುದೆಂಬ ಕಾರಣದಿಂದ ಮನಸ್ಸು ಸಿದ್ಧವಾಗುವುದೆಂದು ಹೇಳಬಾರದು. ಏಕೆಂದರೆ ಸಾಕ್ಷಿಸಿದ್ಧವಾದುದರಿಂದ ಅನ್ಯಥಾ ಸಿದ್ಧವಾಗುತ್ತದೆ. ಹೀಗೆ ಅನುಮಾ ನಾಂತರವನ್ನು ನಿರಾಕರಿಸಬೇಕು ಇನ್ನು ಆಗಮವೂ ಮನಸ್ಸಿನ ಬಗ್ಗೆ ಪ್ರಮಾ ಣವಾಗದು ಏಕೆಂದರೆ ಹುಟ್ಟು ಕಿವುಡರಿಗೂ ಮನಸ್ಸಿನ ಜ್ಞಾನವಾಗುತ್ತದೆ

— ವಿಶೇಷಾರ್ಥಪ್ರದೀಪಿಕಾ —

ನಿಯಮವನ್ನು "ಆತ್ಮನಲ್ಲಿಲ್ಲದ –ಈ ವಿಶೇಷಗುಣಗಳು ಸಂಯೋಗಾಸಮವಾಯಿ ಕಾರಣದಿಂದ ಹುಟ್ಟಿದವುಗಳು, ಎಂಬುದಾಗಿ ಸಂಕೋಚಪಡಿಸಬೇಕು ಹೀಗೆ ಭಾವ

''ತತ್" –ಲಿಂಗಜ್ಞಾನಮುಂತಾದುದು ಇಷ್ಟ ಅರ್ಥದ ಉಪಲಬ್ಧಿಮುಂತಾ ದುದು "ಲಕ್ಷಣಸ್ಯ''– ಸಮವಾಯಿಕಾರಣದಲ್ಲಿ ಸಮವಾಯಸಂಬಂಧದಿಂದ ಇರು ವುದೆಂಬ ಅಸಮವಾಯಿಕಾರಣದ ಲಕ್ಷಣಕ್ಕೆ, 'ಅತಿವ್ಯಾಪ್ತಿಃ" –ಇಷ್ಟಾರ್ಥದ ಉಪ ಲಬ್ಧಿಮುಂತಾದವುಗಳಲ್ಲಿ - ಅತಿವ್ಯಾಪ್ತಿಯು ಏಕೆಂದರೆ ಸಮವಾಯ ಸಂಬಂಧ ದಿಂದ ಸುಖದ ಆಶ್ರಯನಾದ ಆತ್ಮನಲ್ಲಿ ಸಮವಾಯ ಸಂಬಂಧದಿಂದ ಇಷ್ಟಾ ರ್ಥೋಪಲಬ್ಧಿಮುಂತಾದುದು ಇರುತ್ತದೆ ಆದುದರಿಂದ ಅತಿವ್ಯಾಪ್ತಿಯು, ಹೀಗೆ ಭಾವ

"ನಚ ಸುಖಾದ್ಯುಪಲಬ್ಧಿಕರಣತ್ವೇನ' – "ಸುಖಾದಿಗಳ ಉಪಲಬ್ಧಿಗಳು, ಕರಣದಿಂದ ಹುಟ್ಟುವವುಗಳು ಏಕೆಂದರೆ ಅವು ಕ್ರಿಯೆಗಳಾಗಿವೆ ಛೇದನಕ್ರಿ ಯೆಯು ದೃಷ್ಟಾಂತವು' ಈ ಅನುಮಾನದಿಂದ ಸಾಮಾನ್ಯವಾಗಿ ಕರಣವೊಂದು ಸಿದ್ಧವಾಗುತ್ತದೆ ಪರಿಶೇಷಯುಕ್ತಿಯಿಂದ ಆ ಕರಣವು ಮನಸ್ಸು ಎಂಬುದಾಗಿ ಸಿದ್ಧಿಸುತ್ತದೆ ಹೀಗೆ ಶಂಕಾಭಿಪ್ರಾಯ

ಸುಖದುಃಖಾದಿಗಳ ಅನುಭವವು ಇಂದ್ರಿಯಜನ್ಯವಾಗಿದೆ ಏಕೆಂದರೆ ಪ್ರತ್ಯಕ್ಷವಾಗಿದೆ ಚಾಕ್ಷುಷಜ್ಞಾನವು ದೃಷ್ಟಾಂತವು "ಅಹಂ" ಈ ಮುಂತಾದ ಅನುಭವವು ಇಂದ್ರಿಯಜನ್ಯವಾಗಿದೆ ಏಕೆಂದರೆ ಪ್ರತ್ಯಕ್ಷರೂಪ ಅನುಭವವಾ ಗಿದೆ ಈ ಮುಂತಾದ ಅನುಮಾನಗಳಿಂದ, ಮನಸ್ಸಿನ ಸಿದ್ಧಿಯಾಗುವುದೆಂದು

बधिराणामपि तत्प्रत्ययात् । तस्मात्सिद्धं साक्षिग्राह्यत्वं मनसः । तस्य च तेनैवात्मनो भिन्नतया ग्रहणाद्भेदाग्रहासम्भवेनेच्छाम्यहमिति न भेदाग्रनिबन्धनो व्यवहार इति ।

ननु च कामःसङ्कल्पो विचिकित्सा श्रद्धाऽश्रद्धा धृतिरधृति-र्भीर्धीर्ह्रीरित्येतत्सर्वं मन एवेति श्रुतौ कामस्यान्तःकरणरूपत्व तावत्प्रतीयते । न च श्रौतेनार्थेनान्यथा भवितुं युक्तम् । अतो बलवद्बाधकोपनिपातादिच्छाम्यहमिति भेदाग्रहनिमित्तं व्यवहारमात्रमेतदङ्गीकरणीयम् । न त्वात्मन इच्छासम्बन्धानुभवः । न च मे मन इति भेदग्रहा-

— ಪದಾರ್ಥದೀಪಿಕಾ —

ಆದುದರಿಂದ, ಮನಸ್ಸು ಸಾಕ್ಷಿಯಿಂದ ಗ್ರಹಿಸಲ್ಪಡುವಂತಹದೆಂಬ ವಿಷಯವು ಸಿದ್ಧಿಸಿತು ಅದರಿಂದಲೇ, ಮನಸ್ಸಿಗೂ ಆತ್ಮನೊಡನೆ ಭೇದದ ಜ್ಞಾನವಾಗುವುದರಿಂದ, ಭೇದದ ಅಜ್ಞಾನವು ಸಂಭವಿಸುವುದಿಲ್ಲವಾದುದರಿಂದ "ಇಚ್ಛಾಮ್ಯಹಂ" ಎಂಬ ವ್ಯವಹಾರವು ಭೇದಾಜ್ಞಾನನಿಮಿತ್ತಕವಲ್ಲವೆಂದು ಸಿದ್ಧಿಸುತ್ತದೆ

ಇನ್ನು "ಕಾಮಃ ಸಂಕಲ್ಪಃ ವಿಚಿಕಿತ್ಸಾ ಶ್ರದ್ಧಾ ಅಶ್ರದ್ಧಾ ಧೃತಿರಧೃತಿ-ರ್ಭೀರ್ಧೀರ್ಹ್ರೀರಿತ್ಯೇತತ್ಸರ್ವಂ ಮನ ಏವ' ಎಂಬ ಶ್ರುತಿಯಲ್ಲಿ ಕಾಮವು ಅಂತಃಕರಣ ರೂಪವೆಂದು ತಿಳಿದು ಬರುತ್ತದೆ ಮತ್ತು ಶ್ರುತಿಯಲ್ಲಿ ಹೇಳಿದ ಅರ್ಥವು ವಿಪರೀತವಿರುವುದಿಲ್ಲ (ಬದಲು ಮಾಡಲ್ಪಡಲು ಯುಕ್ತವಲ್ಲ) ಆದುದರಿಂದ. ಬಲವುಳ್ಳಬಾಧಕವು ಬಂದು ಬೀಳುವುದರಿಂದ 'ಇಚ್ಛಾಮ್ಯಹಂ" ಎಂಬುದು, ಭೇದಾಗ್ರಹಣದ ಮೂಲಕವಾದ ಕೇವಲ ವ್ಯವಹಾರವಷ್ಟೇ? ಎಂತೆಂಬುದನ್ನು ಅಂಗೀಕರಿಸಬೇಕು, ಹೊರತಾಗಿ ಆತ್ಮನ ಇಚ್ಛೆಯ ವಿಷಯಕವಾದ ಅನುಭವವೆಂದು ಅಂಗೀಕರಿಸಬಾರದು. ಇನ್ನು "ಮೇ ಮನಃ" ಎಂಬ ಭೇದಜ್ಞಾನವು ಇರುವು

— ವಿಶೇಷಾರ್ಥಪ್ರದೀಪಿಕಾ —

ಹೇಳಿದರೆ- ಉತ್ತರವನ್ನು "ಏವಂ" ಇತ್ಯಾದಿವಾಕ್ಯದಿಂದ ಹೇಳುತ್ತಾರೆ "ಸಾಕ್ಷಿಯಿಂದ ಸಿದ್ಧಿಸುವುದರಿಂದ ಅನ್ಯಥಾಸಿದ್ಧವಾಗುವದು" (ಮನಸ್ಸು -ಸಂಯೋಗ) ಎಂಬುದಾಗಿ ಹಿಂದೆ ತೋರಿಸಿದ ಪ್ರಕಾರದಿಂದ. ಹೀಗೆ ಅರ್ಥ "ತಸ್ಮಾತ್"- ಪರಿಶೇಷಯುಕ್ತಿಯಿಂದ.

"ಬಲವದ್ ಬಾಧಕೋಪನಿಪಾತಾತ್" —ಶ್ರುತಿರೂಪಬಾಧಕವು

त्तद्ग्रहासम्भवः । मे चैतन्यमितिवद्व्यवहारमात्रत्वात् । न चोक्तानुपपत्तिः । सत्त्वरजस्तमसामादिकार्यं हि बुद्धिरित्युच्यते । सा चांशत्रयवती । पुरुषोपरागो विषयोपरागो व्यापारावेशश्चेत्यंशाः । भवति

— ಪದಾರ್ಥದೀಪಿಕಾ —

ದರಿಂದ, ಭೇದಾಗ್ರಹಣವು ಸಂಭವಿಸಲಾರದೆಂದು ಬಗೆಯಬಾರದು ಏಕೆಂದರೆ– ಅದು "ಮೇ ಚೈತನ್ಯಂ' (ನನ್ನ ಚೈತನ್ಯವು) ಎಂಬಂತೆ ಕೇವಲ ವ್ಯವಹಾರವು! ಹಾಗಾದರೆ ಹಿಂದೆ ಹೇಳಿದ ಅನುಪಪತ್ತಿಯೂ ಇಲ್ಲ ಏಕೆಂದರೆ– ಸತ್ತ್ವ, ರಜ, ತಮಸ್ಸು, ಇವುಗಳ ಮೊದಲನೆಯ ಕಾರ್ಯವು ಬುದ್ಧಿಯೆಂದು ಹೇಳಲಾಗುತ್ತದೆ ಆ ಬುದ್ಧಿಯು ಮೂರು ಅಂಶಗಳುಳ್ಳದ್ದು ಪುರುಷ ಸಂಬಂಧ, ವಿಷಯ ಸಂಬಂಧ, ಹಾಗು ವ್ಯಾಪಾರ ಸಂಬಂಧ, ಇವುಗಳೇ ಆ ಮೂರು ಅಂಶಗಳು

— ವಿಶೇಷಾರ್ಥಪ್ರದೀಪಿಕಾ —

"ಚೋಕ್ತಾನುಪಪತ್ತಿಃ" --"ಕಥಂ ಸ ನ ಘಟಸ್ಯ ಸ್ಯಾತ್" ಇತ್ಯಾದಿ ಪದ್ಯದಿಂದ ಹೇಳಿದ ಅನುಪಪತ್ತಿಯು ಭೇದಾಗ್ರಹನಿಮಿತ್ತದಿಂದ ವ್ಯವಹಾರವೆಂಬ ಪಕ್ಷದಲ್ಲಿ ಭೇದದ ಅಜ್ಞಾನವು ಘಟಾದಿಗಳ ವಿಷಯದಲ್ಲಿಯೂ ಇರುವುದರಿಂದ, ಅಲ್ಲಿ ಪರಸ್ಪರಸಂಸರ್ಗ ವ್ಯವಹಾರವು ಬರಲಿ; ಎಂಬುದಾಗಿ ಹೇಳಿದ ಅನುಪಪತ್ತಿಯು

ಮನಸ್ಸಿನಲ್ಲಿ ಹೇಗೋ ಹಾಗೆ ಘಟದಲ್ಲಿಯೂ ಭೇದದ ಅಗ್ರಹವು (ಜ್ಞಾನವಿಲ್ಲದಿರುವುದು) ಇರುವುದರಿಂದ, ಅಲ್ಲಿ ಚೈತನ್ಯ ಸಂಬಂಧವೆಂಬ ಅಂಶವು, ಆತ್ಮ-ಬುದ್ಧಿಗಳಲ್ಲಿ ಭೇದದ ಜ್ಞಾನವಿಲ್ಲದಿರುವುದರ ನಿಮಿತ್ತದಿಂದ ಅತಾತ್ವಿಕ ಬುದ್ಧಿಯೇ! ಅದು, ಸ್ವಚ್ಛವಾದುದರಿಂದಲೇ ದರ್ಪಣದಲ್ಲಿ ಮುಖದ ಸಂಬಂಧದ ಹಾಗ ಸಂಭವಿಸುತ್ತದೆ ಆದರೆ ಘಟದಲ್ಲಿ ಚೈತನ್ಯೋಪರಾಗವು ಸಂಭವಿಸುವುದಿಲ್ಲ ಏಕೆಂದರೆ –ಅದರಲ್ಲಿ ಭೇದದ ಅಜ್ಞಾನವು ಇದ್ದರೂ ಅದು ಸ್ವಚ್ಛವಾಗಿಲ್ಲವಾದುದರಿಂದ, ಚೈತನ್ಯದ ಉಪರಾಗವು ಸಂಭವಿಸಲಾರದು, ಈ ಅಭಿಪ್ರಾಯದಿಂದ ಬುದ್ಧಿಸ್ವರೂಪವನ್ನು "ಸತ್ವ'' ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಾರೆ. 'ಆದಿಕಾರ್ಯಂ'' –ಆದಿಕಾರ್ಯವು (ಸತ್ವರಜಸ್ತಮಸ್ಸುಗಳಿಂದ ಮುಂಚೆ ಹುಟ್ಟಿದುದು)ಮಹತ್ತತ್ವವು ಆದರೂ ಅದೇ ಬುದ್ಧಿಯು ಹಾಗು ಅಂತಃಕರಣವೆಂದು ಅಂಗೀಕರಿಸಿರುತ್ತಾರೆ ''ವ್ಯಾಪಾರಾವೇಶ"– ಕೃತಿಮತ್ತಾದ್ಯಭಿಮಾನವು, (ಕರ್ತೃತ್ವಾದ್ಯಭಿಮಾನವು) "ಭವತಿಹಿ"= "ಇತ್ಯಾಕಾರೋಭವತಿ", ಅಹಮಿದಂ ಕರೋಮಿ ಎಂಬ ಆಕಾರವು ಆಗುವುದು)ಎಂಬುದಾಗಿ ಯೋಜನೆಯು ''ಪರಿಣತಿಭೇದ.''=

ह्यहमिदं करोमीति । तत्राहमिति चेतनोपरागो दर्पणस्येव मुखोपरागो भेदाग्रहादतात्त्विकः । इदमिति विषयोपराग इन्द्रियप्रनाडिकया परिणतिभेदो दर्पणस्येव मलसम्बन्धः पारमार्थिकस्तथोभयायत्तो

— ಪದಾರ್ಥದೀಪಿಕಾ —

ಹೇಗೆಂದರೆ ಅಹಮಿದಂ ಕರೋಮಿ" ಎಂಬ ಆಕಾರವು ಬರುತ್ತದೆ ಅದರಲ್ಲಿ "ಅಹಂ" ಎಂಬುದು ಚೇತನ (ಪುರುಷ) ಸಂಬಂಧವು ದರ್ಪಣಕ್ಕೆ ಮುಖದ ಸಂಬಂಧವು ಹೇಗೋ ಹಾಗೆ, ಭೇದಾಗ್ರಹಮೂಲಕವಾದುದರಿಂದ ತಾತ್ವಿಕವಲ್ಲ. "ಇದಂ" ಎಂಬುದು ವಿಷಯ ಸಂಬಂಧವು, ಇಂದ್ರಿಯ ಪ್ರಣಾಡಿಕೆಯಿಂದ ಪರಿಣಾಮ ವಿಶೇಷವಾಗಿದ್ದು ದರ್ಪಣಕ್ಕೆ ಮಲ (ಧೂಳಿ) ದ ಸಂಬಂಧದ ಹಾಗೆ ಪಾರಮಾರ್ಥಿಕವಾದುದು ಹಾಗು ಪುರುಷ ಹಾಗು ವಿಷಯ ಇವೆರಡರ ಸಂಬಂಧ

— ವಿಶೇಷಾರ್ಥಪ್ರದೀಪಿಕಾ —

ಪರಿಣಾಮ ವಿಶೇಷವು "ಇಂದ್ರಿಯಪ್ರಣಾಡಿಕಯಾ"–ವಿಷಯಗಳ ಸನ್ನಿಕರ್ಷ ಹೊಂದಿದ ಇಂದ್ರಿಯಗಳು ವಿಷಯಾಕಾರವಾಗಿ ಪರಿಣಾಮಹೊಂದುತ್ತವೆ ಅನಂತರ ಅವುಗಳನ್ನನುಸರಿಸಿ ಮನಸ್ಸು ಅನಂತರ ಬುದ್ಧಿಯು, ಹೀಗೆ ಬುದ್ಧಿಗೆ ವಿಷಯಾಕಾರವಾದ ಪರಿಣಾಮವಿಶೇಷವು ಆಗುತ್ತದೆ "ಬುದ್ಧಿಚೇತನಗಳಲ್ಲಿ ಭೇದದ ಜ್ಞಾನವಿಲ್ಲದಿರುವುದರಿಂದ, "ಒಂದೇ" ಎಂಬ ಅಭಿಮಾನವು ಪುರುಷೋಪರಾಗವು ನೀಲದೊಡನೆ ಇಂದ್ರಿಯ ಸನ್ನಿಕರ್ಷದಿಂದ ನೀಲಾಕಾರವಾದ ಜ್ಞಾನರೂಪವಾದ ಪರಿಣಾಮವು -ವಿಷಯೋಪರಾಗವು, ಇದು ಪಾರಮಾರ್ಥಿಕವು ಹೀಗೆ ಪುರುಷೋಪರಾಗ, ವಿಷಯೋಪರಾಗಗಳೆರಡರಿಂದ ಕರ್ತವ್ಯ ವಿಷಯದ ಪ್ರತಿಭಾಸವಾಗುವುದರಿಂದ, ಅದರ ಮೂಲಕವಾದ "ಕರೋಮಿ" ಎಂಬ ಅಧ್ಯವಸಾಯವು ಬರುತ್ತದೆ. ಅದು ವ್ಯಾಪಾರಾವೇಶವೆನಿಸುತ್ತದೆ ಚೇತನೋಪರಾಗವೆಂದರೆ ಚೇತನಸಂಬಂಧವು ಅದು ಒಂದು ಪರಿಣಾಮವಿಶೇಷವು ಪರಿಣಾಮವಿಲ್ಲದ ಚೇತನನಿಗೆ ಬುದ್ಧಿಯೊಡನೆ ಸಂಬಂಧವು ಹೇಗೆಂದರೆ– "ದರ್ಪಣಸ್ಯೇವ" ಎಂಬುದಾಗಿ ಹೇಳಿದ್ದಾರೆ ದರ್ಪಣದಂತೆ ಇರುವ ಬುದ್ಧಿಗೆ ದೂರದಲ್ಲಿರುವ ವಿಷಯದೊಡನೆ ಸಂಬಂಧವು ಹೇಗೆ? ಎಂದರೆ– "ಇಂದ್ರಿಯಪ್ರಣಾಡಿಕಯಾ" ಎಂಬುದಾಗಿ ಹೇಳಿದ್ದಾರೆ ಗ್ರಾಮಾಧ್ಯಕ್ಷನು ಕರವನ್ನು ವಸೂಲ ಮಾಡಿ ಪ್ರದೇಶ (ತಾಲ್ಲೂಕ)ದ ಅಧ್ಯಕ್ಷನಿಗೆ, ಆವನು ಸರ್ವಾಧ್ಯಕ್ಷನಿಗೆ, (ಮಂಡಲಾಧಿಪನಿಗೆ) ಅವನು ಭೂಪತಿಗೆ ಕೊಡುವಹಾಗೆ ಬಾಹ್ಯಇಂದ್ರಿಯಗಳು ವಿಷಯವನ್ನು ಆಲೋಚಿಸಿ (ಸಂಯೋಗದ್ವಾರಾ) ಮನಸ್ಸಿಗೆ ಕೊಡುತ್ತವೆ ಸಂಮುಗ್ಧ

उभयात्मकता यत. ॥ कामस्य तु मनः काम.

व्यापारावेशः। एषैव दिक् अहमिच्छामीत्यत्रापीत्यत आह ॥ उभयेति।

ಅಂತಃಕರಣ ರೂಪವಾದ ಕಾಮುಕ್ಕೆ ಮನೋಧರ್ಮತ್ವ, ಆತ್ಮಧರ್ಮತ್ವಗಳೆ ರಡೂ ಇರುವುದರಿಂದ " ಮನಃ ಕಾಮಃ " ಎಂಬ ಶ್ರುತಿಯು ಯುಕ್ತವಾಗುತ್ತದೆ.

— ಪದಾರ್ಥದೀಪಿಕಾ —

ಮೂಲಕವಾದುದು ವ್ಯಾಪಾರಾವೇಶವು ಇದೇ ಸ್ಥಿತಿಯೇ "ಅಹಮಿಚ್ಛಾಮಿ" ಎಂಬಲ್ಲಿಯೂ ಇದೆಯೆಂಬ ಆಶಂಕೆಯನ್ನು "ಉಭಯ'' ಇತ್ಯಾದಿ ವಚನದಿಂದ

— ವಿಶೇಷಾರ್ಥಪ್ರದೀಪಿಕಾ —

ವಾಗಿ ನೋಡಲ್ಪಟ್ಟ ವಿಷಯವನ್ನು, ವಿಶೇಷಣವಿಶೇಷ್ಯ ಭಾವದಿಂದ ವಿವೇಚನ ರೂಪವ್ಯಾಪಾರ ಸಹಿತವಾಗಿ ಮನಸ್ಸು ಅಂತಃಕರಣಕ್ಕೆ ಕೊಡುತ್ತದೆ ''ಅಹಂ ಜಾನಾಮಿ, ಅಹಂ ಕರೋಮಿ" ಎಂಬ ವ್ಯಾಪಾರ ಸಹಿತವಾದ ಅಹಂಕಾರವು "ಕರ್ತವ್ಯಮೇತನ್ಮಯಾ– ಇದು ನನ್ನ ಕರ್ತವ್ಯವು'' ಎಂಬ ವ್ಯಾಪಾರವುಳ್ಳ ಸರ್ವಾಧ್ಯಕ್ಷಸ್ಥಾನದಲ್ಲಿರುವ ಬುದ್ಧಿಗೆ ಕೊಡುತ್ತದೆ ಈ ರೀತಿಯಿಂದ, ಎಂದು ಅರ್ಥ ಆದುದರಿಂದಲೇ ಅಂತಃಕರಣರೂಪವಾದ ಬುದ್ಧಿಯು ಸರ್ವವಿಷ ವನ್ನೂ ಅವಗಾಹನಮಾಡುತ್ತದೆ ಹೀಗೆ ಭಾವ "ಉಭಯಾಯತ್ತಃ'' –ಚೇತ ನೋಪರಾಗ, ವಿಷಯೋಪರಾಗ, ಇವೆರಡರ ಅಧೀನವಾದುದು ಪ್ರಕೃತದಲ್ಲಿ ಬಂದುದೇನು? ಎಂಬ ಪ್ರಶ್ನೆಯನ್ನು "ಏಷೈವ ದಿಕ್'' ಈ ವಾಕ್ಯದಿಂದ ಹೇಳು ತ್ತಾರೆ ಇಲ್ಲಿ ''ಇದಂ'' ಎಂಬುದನ್ನು ಸೇರಿಸಬೇಕು ''ಅಹಂ'' ಎಂಬುದು ಚೇತನೋಪರಾಗವು "ಇದಂ'' ವಿಷಯೋಪರಾಗವು ''ಇಚ್ಛಾಮಿ'' ಎಂಬುದು ಎರಡೂ ಉಪರಾಗಮೂಲಕವಾದ ಇಚ್ಛಾವತ್ವವೆಂಬ ವ್ಯಾಪಾರಾವೇಶವು ಇಂದ್ರಿಯಗಳ ಕ್ರಮದಿಂದ, ಬುದ್ಧಿಗೆ ಕೃತಿರೂಪದಿಂದ ಪರಿಣಾಮವಾಗಲು ''ಕರೋಮಿ'' ಎಂಬುದಾಗಿ ಆಗುತ್ತದೆ ವೃತ್ತಿರೂಪದಿಂದ ಪರಿಣಾಮವಾಗಲು ''ಇಚ್ಛಾಮಿ'' ಎಂದಾಗುತ್ತದೆ ಹೀಗೆ ಬುದ್ಧಿಯ ಪರಿಣಾಮಗಳನ್ನು ತಿಳಿಯ ಬೇಕು ಅಂತಃಕರಣವಿಶೇಷರೂಪವಾದ ಬುದ್ಧಿಯು ಸತ್ವಾದಿಗಳ ಮೊದಲನೆಯ ಕಾರ್ಯವಾದುದರಿಂದ ದರ್ಪಣದಂತೆ ನಿರ್ಮಲವಾದುದರಿಂದ, ಅಲ್ಲಿ ಚೇತನ ಸಂಬಂಧವಾಗುವದು ಘಟದಲ್ಲಿ ಆಗುವುದಿಲ್ಲ, ಅದಕ್ಕೆ, ಅಸ್ವಚ್ಛವಾದುದರಿಂದ ಚೇತನ ಸಂಬಂಧವು ಸಂಭವಿಸಲಾರದು ಅಂತಃಕರಣಕ್ಕೆ ಹೇಗೋ ಹಾಗೆ ಇಂದ್ರಿಯಪ್ರಣಾಡಿಕೆಯಿಂದ ಘಟಕ್ಕೆ ವಿಷಯಾಕಾರ ಪರಿಣಾಮವೂ ಇಲ್ಲ ಆದು

तुशब्दोऽवधारणे । तत इत्युपस्कर्तव्यम् । यतः कारणात्कामस्योभयात्मकताऽस्ति । आत्मधर्मता मनोधर्मता च । तत एव मनः काम इति श्रुतिरुपपद्यते । इदमुक्तं भवति । भवेदिदं भेदाग्रहकल्पनम् । यद्यात्मनः कामवत्त्वं पारमार्थिकं न स्यात् । न चैतदस्ति । बाधकाभावात् । द्विविधो हि कामोऽस्ति । एक आत्मधर्मोऽपरोऽन्तःकरणधर्मः । तत्रान्तःकरणधर्मं काममभिप्रेत्य श्रुतिः प्रवृत्ता नात्मन कामवत्त्वं बाधते । न हि देवदत्तो गोमानिति वाक्यं यज्ञदत्तस्य गोसम्बन्धं बाधितुं शक्नोतीति ।

— ಪದಾರ್ಥದೀಪಿಕಾ —

ಪರಿಹರಿಸುತ್ತಾರೆ "ತು'' ಶಬ್ದವು ಅವಧಾರಣಾರ್ಥದಲ್ಲಿದೆ "ತತಃ'' ಎಂಬು ದನ್ನು ಹಚ್ಚಬೇಕು ಯಾವ ಕಾರಣದಿಂದ, ಕಾಮಕ್ಕೆ ಉಭಯಸ್ವರೂಪವಿದೆಯೋ ಹಾಗು ಅದು ಆತ್ಮಧರ್ಮವೂ ಮನೋಧರ್ಮವೂ ಆಗಿದೆಯೋ ಆ ಕಾರಣದಿಂದಲೇ "ಕಾಮಃ'' ಎಂಬ ಶ್ರುತಿಯು ಯುಕ್ತವೆನಿಸುತ್ತದೆ ಇಲ್ಲಿಯ ಅಭಿಪ್ರಾಯವು— "ಆತ್ಮನಿಗೆ ಪಾರಮಾರ್ಥಕವಾದ ಕಾಮವು ಇಲ್ಲವೆಂದಾದರೆ ಈ ಭೇದಾಗ್ರಹದ ಕಲ್ಪನೆಯು ಸರಿಯಾಗಬಹುದಿತ್ತು ಆದರೆ ಹಾಗೆ ಇಲ್ಲ. ಏಕೆಂದರೆ ಪಾರ ಮಾರ್ಥಿಕ ಕಾಮವು ಆತ್ಮನಿಗೆ ಇದೆಯೆಂಬಲ್ಲಿ ಬಾಧಕವಿಲ್ಲ ಕಾಮವು ಎರಡು ತರಹವುಳ್ಳದ್ದಿದೆ ಒಂದು ಆತ್ಮನ ಧರ್ಮವಾದುದು ಇನ್ನೊಂದು ಅಂತಃಕರಣ ಧರ್ಮ (ಪರಿಣಾಮ) ವಾದುದು ಇವೆರಡರಲ್ಲಿ ಅಂತಃಕರಣದ ಧರ್ಮವಾದ ಕಾಮವನ್ನು ಅಭಿಪ್ರಾಯದಲ್ಲಿಟ್ಟುಕೊಂಡು ಪ್ರವೃತ್ತವಾದ " ಕಾಮಃ " ಎಂಬ ಶ್ರುತಿಯು, ಆತ್ಮನಿಗೆ ಕಾಮವಿದೆಯೆಂಬುದನ್ನು ಬಾಧಿಸುವುದಿಲ್ಲ. ಏಕೆಂದರೆ "ದೇವ

— ವಿಶೇಷಾರ್ಥಪ್ರದೀಪಿಕಾ —

ದರಿಂದ, ಉಭಯತರ ಮೂಲಕವಾದ ವ್ಯಾಪಾರಾವೇಶವೂ ಘಟದಲ್ಲಿ ಆಗಲಾರದು ಆದುದರಿಂದ, ಹಿಂದೆ ಹೇಳಿದ ಅನುಪಪತ್ತಿಯಿಲ್ಲ; ಹೀಗೆಭಾವ ''ಉಭಯಾ. ತಕ್ಮತಯಾ ಯತಃ'' ಎಂಬಲ್ಲಿ ''ಯತಃ'' ಶಬ್ದವಿದ್ದುದರಿಂದ ''ತತಃ'' ಎಂಬು ದನ್ನು ಅಧ್ಯಾಹರಿಸಬೇಕಂದು ''ಉಪಸ್ಕರ್ತವ್ಯಂ'' ಎಂಬಲ್ಲಿಯ ಭಾವ

"ಮನಃ ಕಾಮ ಇತಿ ಶ್ರುತಿಃ" = " ಕಾಮಃ ಸಂಕಲ್ಪಃ " ಇಲ್ಲಿಂದಾರಂಭಿಸಿ "ಸರ್ವಂ ಮನ ಏವ" ಇಲ್ಲಿಯ ವರೆಗಿನ ಶ್ರುತಿಯು.

प्रियाप्रियविभेदतः ॥ द्वैविध्य दृश्यते चास्य

स्यादेतदेवम् । यदि कामद्वैविध्यं प्रमितं स्यादेतदेव कुत इति चेत् । श्रुत्यनुभवबलात्तावत् । प्रकारसहस्रानुसरणेऽप्यघटनायां खल्वनुभवापलापसाहसमभ्युपेयम् । प्रमाणान्तरं चाह ॥ प्रियेति ॥ प्रियमित्यान्तिकेष्टमुच्यतेऽप्रियमिति च तात्कालिकेष्टम् । विषयेण विषयिण उपलक्षणम् । अस्य कामस्य । अयमर्थः । अस्ति तावद्दास्तिककामुकस्य

ಆತ್ಯಂತಿಕ ಇಷ್ಟ ತಾತ್ಕಾಲಿಕ ಇಷ್ಟ ಎಂಬ ಪ್ರಭೇದಗಳಿಂದ ಈ ಕಾಮಕ್ಕೆ ( ಇಚ್ಛೆಗೆ ) ದ್ವೈವಿಧ್ಯವು ಕಂಡು ಬರುತ್ತದೆ.

— ಪದಾರ್ಥದೀಪಿಕಾ —

ದತ್ತನು ಗೋವುಳ್ಳವನು'' ಎಂಬ ವಾಕ್ಯವು, ಯಜ್ಞದತ್ತನ ಗೋಸಂಬಂಧವನ್ನು ಬಾಧಿಸಲು ಶಕ್ತವಾಗುವುದಿಲ್ಲ '' ಹೀಗೆ ಹೇಳಿದ್ದಾಗುತ್ತದೆ

ಇದು– ಕಾಮದಲ್ಲಿ ಎರಡು ತರಹಗಳಿರುವುದು ಪ್ರಮಾಣಸಿದ್ಧವಾದರೆ ಆಗಬಹುದು ಆದರೆ ಕಾಮದಲ್ಲಿ ದ್ವೈವಿಧ್ಯವೇಕೆಂದು ಕೇಳಿದರೆ- ಶ್ರುತಿ, ಅನುಭವಗಳ ಬಲದಿಂದ, ಎಂದು ಉತ್ತರವು ಸಾವಿರ ಪ್ರಕಾರಗಳನ್ನನುಸರಿಸಿದರೂ ಸಂಭವಿಸದಿರುವಾಗ ಮಾತ್ರ ಅನುಭವದ ಅಪಲಾಪದ ಬಗ್ಗೆ ಸಾಹಸವನ್ನು ಕೈಕೊಳ್ಳಬೇಕು. ಪ್ರಮಾಣಾಂತರವನ್ನೂ ಸಹ "ಪ್ರಿಯ'' ಇತ್ಯಾದಿ ವಚನದಿಂದ ಹೇಳುತ್ತಾರೆ ಆತ್ಯಂತಿಕ ಇಷ್ಟವಾದುದನ್ನು ಪ್ರಿಯವೆನ್ನುತ್ತಾರೆ ಹಾಗು ತಾತ್ಕಾಲಿಕ ಇಷ್ಟವಾದುದನ್ನು ಅಪ್ರಿಯವೆಂದು ಹೇಳುತ್ತಾರ ವಿಷಯದಿಂದ ವಿಷಯಿಯನ್ನು ಸಂಗ್ರಹಿಸಿರುತ್ತದೆ "ಅಸ್ಯ"= ಕಾಮದ ಇಲ್ಲಿಯ ಅರ್ಥವಿದು–

— ವಿಶೇಷಾರ್ಥಪ್ರದೀಪಿಕಾ —

" ಶ್ರುತ್ಯನುಭವಬಲಾತ್ "— ಶ್ರುತಿಬಲದಿಂದ ಕಾಮವು ಮನೋಧರ್ಮವೆಂಬುದೂ " ಇಚ್ಛಾಮಿ " ಎಂಬ ಅನುಭವ ಬಲದಿಂದ ಆತ್ಮಧರ್ಮವೆಂಬುದೂ ತಿಳಿದು ಬರುತ್ತದೆಂದು ಭಾವ ಅನುಭವವೇ ಇಲ್ಲವೆಂಬ ಆಶಂಕೆಯನ್ನು "ಪ್ರಕಾರಸಹಸ್ರಾನುಸರಣೇಽಪಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ

"ವಿಷಯಿಣಃ"– ವಿಷಯವನ್ನು ವಿಷಯೀಕರಿಸಿದ ಕಾಮಕ್ಕೆ ಯೌಗಪದ್ಯದ ಅನುಭವವು ಭ್ರಮವಲ್ಲವೆಂಬುದನ್ನು "ಬಾಧಕಾಭಾವಾತ್" ಎಂಬ ವಾಕ್ಯದಿಂದ ಸ್ಥಿರಪಡಿಸುತ್ತಾರೆ "ಅಪ್ರಿಯವಿಷಯಃ"–ತಾತ್ಕಾಲಿಕ ಇಷ್ಟವಾದ ಸ್ರಕ್ಚಂದನ ಮುಂತಾದ ವಿಷಯಗಳ ಬಗೆಗಿನ ಕಾಮವು

पुरुषस्य स्रक्चन्दनवनितादाविदं मे स्यादित्येकतः कामः । अन्यतस्तत्त्य-
जेयमिति । न चैक एवायम् । विरुद्धरूपत्वात् । न च द्वावपि
मनोधर्मौ । यौगपद्यात् । युगपत्सजातीयधर्मजननायोगात् । न च
यौगपद्यं नास्ति । अनुभवसिद्धत्वात् । बाधकाभावाच्च । तत्र
योऽप्रियविषयः सोऽन्तःकरणधर्मो यस्तु प्रियविषयः स आत्मधर्म
इति । यद्वा प्रियाप्रियशब्दाभ्यां मुक्तिसंसारावुच्येते । तत्सम्बन्धि-
विभेदन कामद्वैविध्यं दृश्यत इति । अस्ति तावत्संसारे प्रचुरोऽयमन्तः-
करणवृत्तिरूपः कामः । अस्ति चासौ मुक्तौ । स यदि पितृलोककामो
भवतीत्यादिश्रुतेः । न चैक एवायम् । मुक्तावन्तःकरणविलयात् ।
तथा चासावात्मधर्मोऽभ्युपेयः । न चागन्तुकधर्मसम्बन्धो मुक्ताविति
प्रागपि कामद्वैविध्यं सिध्यतीति ।

— ಪದಾರ್ಥದೀಪಿಕಾ —

ಆಸ್ತಿಕಕಾಮುಕ ಪುರುಷನಿಗಂತೂ ಸ್ರಕ್ ಚಂದನವನಿತಾ ಮುಂತಾದ ವಿಷಯ
ಗಳ ಬಗ್ಗೆ "ಇದು ನನಗಾಗಲಿ" ಎಂಬ ಕಾಮವು ಒಂದು ಕಡೆಗೆ ಇರುತ್ತದೆ
ಇನ್ನೊಂದು ಕಡೆಗೆ ಅದನ್ನು ಬಿಡಬೇಕೆಂಬ ಕಾಮವೂ ಇದೆ ಇವೆರಡೂ ಒಂದೇ
ಅಲ್ಲ ಏಕೆಂದರೆ ವಿರುದ್ಧ ಸ್ವಭಾವವುಳ್ಳವುಗಳಾಗಿವೆ ಮತ್ತು ಎರಡೂ ಕಾಮ
ಗಳು ಮನಸ್ಸಿನ ಧರ್ಮಗಳೆಂದು ಹೇಳಬಾರದು ಏಕೆಂದರೆ– ಇವೆರಡೂ ಒಂದೇ
ಕಾಲದಲ್ಲಿ ಹುಟ್ಟುತ್ತವೆ, ಒಂದೇ ಸಮಯದಲ್ಲಿ ಸಜಾತೀಯವಾದ ಧರ್ಮಗಳನ್ನು
ಹುಟ್ಟಿಸಲು ಮನಸ್ಸಿಗೆ ಶಕ್ಯವಿಲ್ಲ ಇನ್ನು– ಯುಗಪತ್ಕಾಲದಲ್ಲಿ ಹುಟ್ಟುವುದಿಲ್ಲ
ವೆಂದಲ್ಲ ಏಕೆಂದರೆ ಅನುಭವಸಿದ್ಧವಾಗಿವೆ ಮತ್ತು ಬಾಧಕವೂ ಇಲ್ಲ. ಇವೆ
ರಡರಲ್ಲಿ– ಅಪ್ರಿಯವನ್ನು ವಿಷಯೀಕರಿಸಿದ ಕಾಮವು ಅಂತಃಕರಣ ಪರಿಣಾಮ
ರೂಪವಾದುದು ಆದರೆ ಪ್ರಿಯವನ್ನು ಯಾವದು ವಿಷಯೀಕರಿಸಿದೆಯೋ ಅದು
ಆತ್ಮಧರ್ಮವು" ಹೀಗೆ ಅಥವಾ— ಪ್ರಿಯ ಅಪ್ರಿಯ ಶಬ್ದದಿಂದ ಮುಕ್ತಿ,
ಸಂಸಾರಗಳೆಂಬ ಅರ್ಥಗಳು ಕ್ರಮವಾಗಿ ಹೇಳಲ್ಪಡುತ್ತವೆ ಆ ಮುಕ್ತಿ ಸಂಸಾ
ರಗಳ ಸಂಬಂಧಿಗಳೆಂಬ ಪ್ರಭೇದಗಳಿಂದ ಕಾಮದಲ್ಲಿ ದ್ವೈವಿಧ್ಯವು ಕಂಡಿರು
ತ್ತದೆ ಹೀಗೆಯೂ ಅರ್ಥ ಸಂಸಾರದಲ್ಲಿಯಾದರೋ ಅಂತಃಕರಣ ಪರಿಣಾಮ
ರೂಪವಾದ ಕಾಮವೇ ಹೆಚ್ಚಾಗಿರುತ್ತದೆ ಮುಕ್ತಿಯಲ್ಲಿಯೂ ಕಾಮವು ಇರುತ್ತದೆ.
ಏಕೆಂದರೆ "ಸ ಯದಿ ಪಿತೃಲೋಕಕಾಮಃ" ಇತ್ಯಾದಿ ಶ್ರುತಿಗಳಿರುತ್ತವೆ ಇದು

तस्माद्भेदाग्रहः कुत ॥

श्रुतिबाधपरिहारस्य प्रयोजनमाह ॥ तस्मादिति । श्रुतिविरोधस्य परिहृतत्वाद्भेदाग्रहः कुतः प्रमाणात्कल्पनीयः । कुतश्चानुभवापलापेन व्यवहारस्य तन्निमित्तत्वम् । न कुतोऽपीत्यर्थ । अनेनाचेतनस्य प्रधानस्य स्वातन्त्र्येण जगत्कारणत्वं साधयतामनुमानाना-

ಶ್ರುತಿ ವಿರೋಧವನ್ನು ಪರಿಹರಿಸಿದುದರಿಂದ ಭೇದದ ಜ್ಞಾನವಿಲ್ಲವೆಂಬುದನ್ನು ಯಾವ ಪ್ರಮಾಣದಿಂದ ಕಲ್ಪಿಸತಕ್ಕದ್ದು

— ಪದಾರ್ಥದೀಪಿಕಾ —

ಒಂದೇ, ಎಂದು ಹೇಳಬಾರದು ಏಕೆಂದರೆ ಮುಕ್ತಿಯಲ್ಲಿ ಅಂತಃಕರಣದ ಲಯವಾಗಿರುತ್ತದೆ ಆದುದರಿಂದ (ಮುಕ್ತಿಯಲ್ಲಿಯು) ಕಾಮವು ಆತ್ಮಧರ್ಮವೆಂದು ಅಂಗೀಕರಿಸತಕ್ಕದ್ದು ಆಗಂತುಕಧರ್ಮದ ಸಂಬಂಧವು ಮುಕ್ತಿಯಲ್ಲಿ ಸಂಭವಿಸುವುದಿಲ್ಲವಾದುದರಿಂದ ಮುಕ್ತಿಯ ಪೂರ್ವದಲ್ಲಿಯೂ ಕಾಮದಲ್ಲಿ ದ್ವೈವಿಧ್ಯವು ಸಿದ್ಧಿಸುತ್ತದೆ" ಹೀಗೆ ಇಲ್ಲಿಯ ಭಾವ

ಶ್ರುತಿಬಾಧ ಪರಿಹಾರದ ಪ್ರಯೋಜನವನ್ನು 'ತಸ್ಮಾತ್" ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ ಶ್ರುತಿವಿರೋಧವನ್ನು ಪರಿಹರಿಸಿದುದರಿಂದ ಭೇದದ ಅಜ್ಞಾನವನ್ನು ಕಲ್ಪಿಸುವುದೇಕೆ ? ಯಾವ ಪ್ರಮಾಣದಿಂದ ಕಲ್ಪಿಸುವುದು ? ಅನುಭವದ ಅಪಲಾಪದಿಂದಾದರೋ ವ್ಯವಹಾರಕ್ಕೆ ಅದು ನಿಮಿತ್ತವೆಂದು ಏಕೆ ಹೇಳತಕ್ಕದ್ದು ಯಾವದೇ ಕಾರಣದಿಂದಲೂ ಹಾಗೆ ಇಲ್ಲ, ಹೀಗೆ ಅರ್ಥ ಇದರಿಂದ, ಅಚೇತನವಾದ ಪ್ರಧಾನಕ್ಕೆ ಸ್ವತಂತ್ರವಾಗಿ ಜಗತ್ಕಾರಣತ್ವವನ್ನು ಸಾಧನಮಾಡುವ ಅನು

— ವಿಶೇಷಾರ್ಥಪ್ರದೀಪಿಕಾ —

"ಮುಕ್ತೌ ಇತಿ" ಇಲ್ಲಿಯ "ಇತಿ" ಶಬ್ದವು ಹೇತ್ವರ್ಥದಲ್ಲಿದೆ 'ಶ್ರುತಿಬಾಧಪರಿಹಾರಸ್ಯ"—"ಮನಃಕಾಮಃ" ಎಂಬ ಮೂಲದಲ್ಲಿ ಸಂಗೃಹೀತವಾದ "ಕಾಮಃ ಸಂಕಲ್ಪಃ" ಇತ್ಯಾದಿ ಶ್ರುತಿಯ ಬಾಧದ ಪರಿಹಾರಕ್ಕೆ ಉಪಲಕ್ಷಣವೆಂದು ಬಗೆದು "ಕುತಶ್ಚ" ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ "ಅನೇನ" - "ಸ್ವತಂತ್ರ ವೃತ್ತೀ ರಚನಾ ಸಾ ಚೈವಾಚೇತನೇ ಕುತಃ" ಎಂಬ ವಾಕ್ಯದಿಂದ ಹೇಳಿದ ಪ್ರತಿಪಕ್ಷಾನುಮಾನದಲ್ಲಿ ಹೇತುವು ಸಾಧ್ಯದ ಪ್ರಯೋಜಕವಲ್ಲವೆಂಬ ಆಶಂಕೆಯನ್ನು ಪರಿಹರಿಸಲು ಹೊರಟ "ಅಚೇತನತ್ವಂ ಸ್ವಾತಂತ್ರ್ಯಂ ಇತಿ ಚಾತ್ಮಪ್ರಮಾಹತಂ" ಇತ್ಯಾದಿ ಗ್ರಂಥದಿಂದ. "ಅನುಮಾನಾನಾಂ"– "ಭೇದಾನಾಂ ಪರಿಮಾಣಾತ್" ಇತ್ಯಾದಿ

रचनानुपपत्तेस्तन्न सर्वज्ञानुमागतम् ॥
अचेतन जगत्कर्तृ ॥

मपि स्ववचनविरोधः प्रमाणविरोधश्चोक्तौ भवतः । दृष्टान्तश्च साध्यविकलः । अचेतनस्वातन्त्र्यस्य क्वाप्यसम्मतेरिति । सूत्रार्थमुपसंहरन्नानुमानमित्येतत्प्रकारान्तरेण व्याचष्टे ॥ रचनेति । तत्तस्मात् ।

ಆದುದರಿಂದ, ಸಾರ್ವಜ್ಞಸಾಧಕವಾದ ಸಾಂಖ್ಯಾನುಮಾನದಿಂದ ಅನುಮಿತವಾದ (ತಿಳಿದು ಬಂದ) ಅಚೇತನವಾದ ಪ್ರಧಾನವು, ಸ್ವತಂತ್ರ ಪ್ರವೃತ್ತಿರೂಪ ರಚನೆಯು ಯುಕ್ತವಾಗುವುದಿಲ್ಲವಾದುದರಿಂದ ಜಗತ್ತಿನ ಕರ್ತೃವಾಗಲಾರದು.

— ಪದಾರ್ಥದೀಪಿಕಾ —

ಮಾನಗಳಿಗೂ ಸ್ವವಚನವಿರೋಧವು ಮತ್ತು ಪ್ರಮಾಣ ವಿರೋಧವು, ಇವೆರಡೂ ಹೇಳಲ್ಪಟ್ಟವುಗಳಾಗುತ್ತವೆ ಮತ್ತು ದೃಷ್ಟಾಂತವು ಸಾಧ್ಯವಿಕಲವೂ ಆಗುತ್ತದೆ ಏಕೆಂದರೆ ಅಚೇತನದ ಸ್ವಾತಂತ್ರ್ಯವು ಎಲ್ಲಿಯೂ ಸಮ್ಮತವಾಗಿಲ್ಲ ಸೂತ್ರದ ಅರ್ಥವನ್ನು ಉಪಸಂಹರಿಸುತ್ತ 'ನಾನುಮಾನಂ" ಎಂಬುದನ್ನು ಬೇರೆ ರೀತಿಯಿಂದ "ರಚನಾ" ಇತ್ಯಾದಿ ವಚನದಿಂದ ವಿವರಿಸುತ್ತಾರೆ "ತತ್"=ತಸ್ಮಾತ್–

— ವಿಶೇಷಾರ್ಥಪ್ರದೀಪಿಕಾ —

ವಚನಗಳಿಂದ ಹಿಂದೆ ಹೇಳಿದ ಅನುಮಾನಗಳಿಗೆ ಅಚೇತನತ್ವ, ಇಚ್ಛಾಪೂರ್ವಕ ಪ್ರವೃತ್ತಿಯುಳ್ಳದ್ದಾಗಿರುವುದೆಂಬ ಸ್ವಾತಂತ್ರ್ಯ, ಇವುಗಳೆರಡರಲ್ಲಿ ವಿರೋಧವಿರುವುದರಿಂದ, ಸ್ವವಚನ ವಿರೋಧವು ಮತ್ತು "ಅಹಂ ಇಚ್ಛಾಮಿ" ಎಂಬುದಾಗಿ, ಚೇತನನಿಗೇ ಇಚ್ಛೆಯಿರುವುದು ಕಂಡುಬಂದಿರುವುದರಿಂದ, ಅನುಭವ ವಿರೋಧವು, ಹೀಗೆ ಭಾವ "ದೃಷ್ಟಾಂತಶ್ಚ ಸಾಧ್ಯವಿಕಲಃ" - ಅನುಮಾನಗಳ, ತಂತು ಮುಂತಾದ ದೃಷ್ಟಾಂತವು ಸಾಧ್ಯರಹಿತವೆಂದು ಅರ್ಥ ಸಾಧ್ಯವಿಲ್ಲವೆಂಬುದನ್ನು "ಅಚೇತನಸ್ಯ' ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಾರೆ "ಪ್ರಕಾರಾಂತರೇಣ"- "ಅನುಮಾನಂ"=ಅನುಮಾನ ಪ್ರಮಾಣದಿಂದ ತಿಳಿಯಲ್ಪಟ್ಟ ಪ್ರಕೃತಿ ಮುಂತಾದುದು ಹೀಗೆ ಭಾವ "ಅನುಮಾನ" ಪದಕ್ಕೆ "ಅನುಮಾನಸಿದ್ಧವಾದ ಸರ್ವಜ್ಞತೆಯುಳ್ಳ ಪುರುಷನಿಂದ ಹೇಳಲ್ಪಟ್ಟಿರುವುದರಿಂದ, ಅಥವಾ ಅನುಮಾನದಿಂದ ಸಿದ್ಧವಾದ ಪ್ರಾಮಾಣ್ಯವುಳ್ಳದ್ದಾಗಿರುವುದರಿಂದ ಇಲ್ಲವೆ ಅನುಮಾನವೇ ಪ್ರಧಾನವಾಗಿಯುಳ್ಳ ಸಾಂಖ್ಯಾಚಾರ್ಯನ ವಾಕ್ಯ" ವೆಂಬ ಅರ್ಥವು ಅಭಿಪ್ರೇತವಾಗಿದೆ "ಸಾಂಖ್ಯಾಚಾರ್ಯನ ವಾಕ್ಯದಿಂದ ತಿಳಿದು ಬಂದ ಪ್ರಕೃತಿ ಮುಂತಾದುದು

सर्वज्ञानुमागतमानुमानं प्रकृत्यादिकं कस्यचित्प्रत्यक्षं प्रमेयत्वादिति सर्वज्ञसाधकानुमयाऽवगतम् । एतदनुमानसिद्धसर्वज्ञवाक्यावगतमिति यावत् । यद्वाऽनुमानसिद्धप्रामाण्यकत्वेनानुमानप्रधानत्वेन च सर्वज्ञाभिमतस्य वाक्यमेव सर्वज्ञानुमोच्यते । व्याख्यानान्तरस्य चेदं प्रयोजनम् । यत्प्रागुक्तं न योगिप्रत्यक्षेण साङ्ख्याचार्यवचनेन वाऽय-

— ಪದಾರ್ಥದೀಪಿಕಾ —

ಆದುದರಿಂದ "ಸರ್ವಜ್ಞಾನುಮಾಗತಂ"– "ಆನುಮಾನಿಕವಾದ ಪ್ರಕೃತಿ ಮುಂತಾದುದು. ಯಾವನಿಗೊಬ್ಬನಿಗಾದರೂ ಪ್ರತ್ಯಕ್ಷಗೋಚರವಾಗುವಂತಹದು ಏಕೆಂದರೆ ಪ್ರಮೇಯವಾಗಿದೆ" ಎಂಬ ಸರ್ವಜ್ಞನ ಬಗ್ಗೆ ಸಾಧಕವಾದ ಅನುಮಾನದಿಂದ ತಿಳಿಯಲ್ಪಟ್ಟಿದ್ದು, ಅಂದರೆ ಈ ಅನುಮಾನದಿಂದ ಸಿದ್ಧನಾದ ಸರ್ವಜ್ಞನ ವಾಕ್ಯದಿಂದ ತಿಳಿದುಬಂದುದು, ಎಂದು ಅರ್ಥ ಅಥವಾ– ಅನುಮಾನದಿಂದ ಸಿದ್ಧಿಸಲ್ಪಟ್ಟ ಪ್ರಾಮಾಣ್ಯವುಳ್ಳದ್ದಾದುದರಿಂದ, ಹಾಗು ಅನುಮಾನದ ಪ್ರಾಧಾನ್ಯವಿದ್ದುದರಿಂದ ಸರ್ವಜ್ಞನೆಂದಭಿಮತನಾದವನ ವಾಕ್ಯವೇ "ಸರ್ವಜ್ಞಾನುಮಾ" ಎಂದೆನಿಸುತ್ತದೆ ಬೇರೆ ವ್ಯಾಖ್ಯಾನದ ಪ್ರಯೋಜನವು ಯಾವದೆಂದರೆ– ಯೋಗಿ ಪ್ರತ್ಯಕ್ಷದಿಂದ ಇಲ್ಲವೆ ಸಾಂಖ್ಯಾಚಾರ್ಯರ ವಚನದಿಂದ ಈ

— ವಿಶೇಷಾರ್ಥಪ್ರದೀಪಿಕಾ —

ಅರ್ಥ" ಎಂಬ ಪ್ರಕಾರಾಂತರದಿಂದ "ಹಿಂದೆ ಹೇಳಿದ ಅನುಮಾನದಿಂದ ಸಿದ್ಧಿಸಿದ" ಎಂಬ ಅರ್ಥಕ್ಕಿಂತ ಈ ಅರ್ಥಗಳು ಬೇರೆಯಾದುದರಿಂದ, "ಪ್ರಕಾರಾಂತರೇಣ" ಎಂದಿದ್ದಾರೆ

"ಅನುಮಾನಸಿದ್ಧಪ್ರಾಮಾಣ್ಯಕತ್ವೇನ"– ಪ್ರತ್ಯಕ್ಷಯೋಗ್ಯ ಫಲದ ಸಂವಾದಿಯಾದ ಸಾಂಖ್ಯವಾಕ್ಯವೊಂದರ ದೃಷ್ಟಾಂತದಿಂದ ಸಾಂಖ್ಯವಾಕ್ಯವಾಗಿರುವುದೆಂಬ ಯುಕ್ತಿಯಿಂದ ಸಂದಿಗ್ಧವಾದ ಅವನ ಎಲ್ಲ ವಾಕ್ಯಗಳಿಗೂ ಪ್ರಾಮಾಣ್ಯವು, "ನಾನುಮಾನಮತಚ್ಛಬ್ದಾತ್" ಎಂಬಲ್ಲಿಯ ಪೂರ್ವಪಕ್ಷ ಟೀಕಾವಾಕ್ಯಗಳಲ್ಲಿ ಹೇಳಿದ ಪ್ರಕಾರದಿಂದ, ಅನುಮಾನದಿಂದ ತಿಳಿಯಲ್ಪಡುವುದರಿಂದ, "ಅನುಮಾನಸಿದ್ಧ" ಇತ್ಯಾದಿಯಾಗಿ ಹೇಳಿದ್ದಾರೆ "ಅನುಮಾನಪ್ರಧಾನತ್ವೇನ"– ಸಾಂಖ್ಯನು ಹೈತುಕ (ಯುಕ್ತಿವಾದಿ) ನಾದುದರಿಂದ, ತನ್ನ ಸಮ್ಮತವಾದ ಪ್ರಮೇಯದ ಬಗ್ಗೆ ಪ್ರಧಾನವಾಗಿ ಅನುಮಾನವನ್ನೇ ಪ್ರಮಾಣವಾಗಿ ಹೇಳುತ್ತಾನೆ ಆದುದರಿಂದ ಅನುಮಾನ ಪ್ರಧಾನಕವಾದುದು ಅವನ ವಾಕ್ಯವು" ಹೀಗೆ ಇಲ್ಲಿ ಭಾವವು

मर्थः सिध्यतीति तदपि सूत्रसूचितमेवेति ज्ञापनम् । यदा तु सर्वज्ञाभिमनोत्प्रेक्षितया भेदानां परिमाणादित्यादिकयाऽनुमयाऽवगतमानुमानमिति योजना । तदा वैचि ( त्र्य ) त्रीप्रदर्शनं व्याख्यानान्तरप्रयोजनम् । जगत्कर्तृ स्वातन्त्र्येण जगत्कारणम् ॥ छ ॥

— ಪದಾರ್ಥದೀಪಿಕಾ —

ಅರ್ಥವು ಸಿದ್ಧಿಸುವುದಿಲ್ಲವೆಂದು ಹೇಳಿದುದು ಯಾವದೋ ಅದುವು ಸೂತ್ರ ಸೂಚಿತವೇ, ಎಂಬುದನ್ನು ತೋರಿಸುವುದೇ ! ಇನ್ನು– ಯಾವಾಗ ಸರ್ವಜ್ಞ ನೆಂದಭಿಮತನಾದವನು ಉತ್ಪ್ರೇಕ್ಷಿಸಿದ, "ಭೇದಾನಾಂ ಪರಿಮಾಣಾತ್" ಇತ್ಯಾದಿ ಯಾದ "ಅನುಮಯಾ"– ಅನುಮಾನದಿಂದ "ಅವಗತಂ"– ತಿಳಿಯಲ್ಪಟ್ಟ. ಅನು ಮಾನಿಕವೆಂದನಿಸಿದ ಪ್ರಧಾನವೆಂಬ ಯೋಜನೆಯು ಅಭಿಪ್ರೇತವಾಗಿದೆಯೋ ಆಗ (ಆ ಪಕ್ಷದಲ್ಲಿ) ವೈಚಿತ್ರ್ಯವನ್ನು ಪ್ರದರ್ಶಿಸುವುದು ವ್ಯಾಖ್ಯಾನಾಂತರದ ಪ್ರಯೋ ಜನವು "ಜಗತ್ಕರ್ತೃ"– ಸ್ವತಂತ್ರವಾಗಿ ಜಗತ್ಕಾರಣವಾದುದು

— ವಿಶೇಷಾರ್ಥಪ್ರದೀಪಿಕಾ —

"ತದಪಿ ಸೂತ್ರಸೂಚಿತಮೇವ"–"ನ ಅನುಮಾನಂ" ಎಂಬ ಸೂತ್ರ ಭಾಗ ದಿಂದ, "ಜಗತ್ಕರ್ತೃ ಸಾಧಕ ಅನುಮಾನದಿಂದ ಸಿದ್ಧವಾದ ಸರ್ವಜ್ಞತೆಯುಳ್ಳವನ ವಾಕ್ಯದಿಂದ ತಿಳಿಸಲ್ಪಟ್ಟ ಅಚೇತನವು "ನ"- ಜಗತ್ಕರ್ತೃವಲ್ಲವೆಂಬುದಾಗಿ ಮಾಡ ಲ್ಪಡುವ ವಿಶಿಷ್ಟ ನಿಷೇಧವು, ಅನುಮಾನಸಿದ್ಧವಾದ ವಾಕ್ಯದಿಂದ ತಿಳಿಸಲ್ಪಟ್ಟಿರು ವುದೆಂಬ ವಿಶೇಷಣದ ನಿಷೇಧದಲ್ಲಿ ಪರ್ಯವಸಾನಹೊಂದುತ್ತದೆ ಅಂದರೆ ಅದು ಸರ್ವಜ್ಞ ವಾಕ್ಯದಿಂದ ತಿಳಿದುಬಂದಿಲ್ಲವೆಂದು ಸಿದ್ಧಿಸುತ್ತದೆಂದು ಭಾವ ಸರ್ವ ಜ್ಞನ ವಾಕ್ಯದಿಂದ ತಿಳಿದು ಬಂದಿರುವುದೆಂಬ ಆ ವಿಶೇಷಣದ ನಿಷೇಧವು (ಸರ್ವಜ್ಞ ವಾಕ್ಯದಿಂದ ತಿಳಿದುಬಂದಿಲ್ಲವೆಂಬುದು) ವಿಶಿಷ್ಟ ನಿಷೇಧವಾದುದರಿಂದ, ತನ್ನಲ್ಲಿ ವಿಶೇಷಣವಾಗಿರುವ ಸರ್ವಜ್ಞತೆಯು ಅನುಮಾನಸಿದ್ಧವೆಂಬ ವಿಶೇಷಣದ ನಿಷೇಧ ದಲ್ಲಿ ಪರ್ಯವಸಾನ ಹೊಂದುತ್ತದೆ (ಸರ್ವಜ್ಞತೆಯು ಅನುಮಾನ ಸಿದ್ಧವಲ್ಲ ಎಂದು) ಆದುದರಿಂದ "ಸರ್ವ ವಿಷಯಕವಾದ ಪ್ರತ್ಯಕ್ಷ ಜ್ಞಾನವುಳ್ಳವನಾಗಿರುವು ದೆಂಬ ಸರ್ವಜ್ಞತೆಯು ಅನುಮಾನದಿಂದ ಸಿದ್ಧಿಸುವುದಿಲ್ಲ" ಎಂಬ ಅರ್ಥವು ಲಭಿ ಸುವುದರಿಂದ, " ನ ಯೋಗಿ ಪ್ರತ್ಯಕ್ಷೇಣ ತಸ್ಯಾಸ್ಮಾಕಮಸಿದ್ಧೇಃ " ಎಂಬುದಾಗಿ ಹೇಳಿದ ದೂಷಣವು ಸೂತ್ರಸೂಚಿತವಾದುದು, ಹೀಗೆ ತಿಳಿಯಬೇಕು

ಟೀಕಾಕಾರರ ಯೋಜನವನ್ನು ಅನುವಾದ ಮಾಡಿ ಅದರ ಪ್ರಯೋಜನ ವನ್ನು " ಯದಾ ತು " ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ "ವೈಚಿತ್ರೀ ಪ್ರದ

स्यादेतत् । परिमाणादिहेतुभिस्तावन्महदादिकार्याणां किमपि मूलकारणमस्तीत्यवगम्यते । तस्यापि कारणान्तरकल्पने प्रमाणाभावादनवस्थानाच्च । तस्य च स्वातन्त्र्यं कारकान्तराप्रयोज्यत्वमेव न तु स्वेच्छानुसारित्वम् । येनोक्तदोषः स्यात् । तच्च तत्प्रयोक्तुः कारकान्त-

— ಪದಾರ್ಥದೀಪಿಕಾ —

ಇದು ಇರಲಿ ! ಪರಿಮಾಣ ಮುಂತಾದ ಯುಕ್ತಿಗಳಿಂದಂತೂ ಮಹದಾದಿ ಕಾರ್ಯಗಳಿಗೆಲ್ಲ ಮೂಲಕಾರಣವೊಂದಿದೆಯೆಂದು ತಿಳಿಯುತ್ತವೆ ಆ ಮೂಲ ಕಾರಣಕ್ಕೂ (ಪ್ರಧಾನಕ್ಕೂ) ಬೇರೆ ಕಾರಣವನ್ನು ಕಲ್ಪಿಸುವುದರಲ್ಲಿ ಪ್ರಮಾಣವೂ ಇಲ್ಲ ಹಾಗು, ಕಲ್ಪಿಸಿದರೆ ಅನವಸ್ಥೆಯೂ ಬರುತ್ತದೆ ಆ ಪ್ರಧಾನದ ಸ್ವಾತಂತ್ರ್ಯವೆಂದರೆ ಬೇರೆ ಕಾರಕದಿಂದ ಪ್ರಯೋಜ್ಯವಾಗದಿರುವುದೇ! ಹೊರತಾಗಿ ಸ್ವೇಚ್ಛೆಯನ್ನು ಅನುಸರಿಸುವುದೆಂಬ ಅರ್ಥವಿಲ್ಲ ಹಾಗೆ ಸ್ವೇಚ್ಛಾನುಸಾರಿತೆಯು ಸ್ವಾತಂತ್ರ್ಯವೆಂದಾದರೆ ಹಿಂದೆ ಹೇಳಿದ ದೋಷವು ಬರಬಹುದಿತ್ತು! ಕಾರಕಾಂತರದ ಅಧೀನವಾಗದಿರುವುದೆಂಬ ಸ್ವಾತಂತ್ರ್ಯವಾದರೋ, ಪ್ರಧಾನಕ್ಕೆ ಕಾರ

— ವಿಶೇಷಾರ್ಥಪ್ರದೀಪಿಕಾ —

ರ್ಶನಂ''– ''ನಾನುಮಾನಂ'' ಎಂಬ ಸೂತ್ರಖಂಡಕ್ಕೆ ಹಿಂದಿನ ಯೋಜನೆಯಲ್ಲಿ "ಅನುಮಾನಂ'' ಎಂಬುದಾಗಿಯೂ, ಈಗಿನ ಯೋಜನೆಯಲ್ಲಿ " ಆನುಮಾನಂ " ಎಂಬುದಾಗಿಯೂ ಪದಚ್ಛೇದವನ್ನು ಮಾಡಿದುದರಿಂದ ವೈಚಿತ್ರ್ಯವನ್ನು ತೋರಿಸಿದ್ದಾಗಿದೆಯೆಂದು ತಿಳಿಯಬೇಕು

"ಜಗತ್ಕರ್ತೃ'' ಎಂಬುದು ಮೂಲದ ಅನುವಾದ ಅದರ ವ್ಯಾಖ್ಯಾನವು " ಸ್ವಾತಂತ್ರ್ಯೇಣ ಜಗತ್ಕಾರಣಂ " ಎಂಬುದು ಕರ್ತೃತ್ವವು ಇಚ್ಛಾಗರ್ಭಿತವಾದುದು. ಅದು ಅಚೇತನದಲ್ಲಿ ಬರುವುದಿಲ್ಲ ಈ ಕಾರಣದಿಂದ ಹೀಗೆ ವ್ಯಾಖ್ಯಾನಿಸಿರುತ್ತಾರೆ " ಇತರರಿಂದ ಪ್ರೇರಿತ (ಪ್ರಯೋಜ್ಯ) ರಾಗದೆ ಜಗತ್ತಿನ ಕಾರಣವಾಗುವಿಕೆಯು,'' ಎಂದು ಭಾವವು

" ಪಯೋಂಬುವಚ್ಚೇತ್ತತ್ರಾಪಿ " ಎಂಬ ಸೂತ್ರದ ಭಾಷ್ಯಕ್ಕೆ ಅವತಾರಿಕೆಯನ್ನು "ಸ್ಯಾದೇತತ್'' ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ "ಪರಿಮಾಣಾದಿ ಯುಕ್ತಿಭಿಃ''- "ಪರಿಮಾಣಾತ್'' ಇತ್ಯಾದಿ ಹಿಂದೆ ಹೇಳಿದ ಶ್ಲೋಕದಲ್ಲಿರುವ ಯುಕ್ತಿಗಳಿಂದ ಪ್ರಧಾನವು ಮೂಲಕಾರಣವೆಂಬುದೇಕೆಂಬಲ್ಲಿ ಕಾರಣವನ್ನು "ತಸ್ಯಾಪಿ'' ಈ ವಾಕ್ಯದಿಂದ ಹೇಳುತ್ತಾರೆ ಸೂತ್ರದಲ್ಲಿಯ "ಪಯೋಂಬು''

रस्याप्रामाणिकत्वादेव सिद्धम्। न चाचेतनस्य तदसम्भावितम्। अचेतनेष्वपि पयोऽम्बुप्रभृतिषु दर्शनात। अचेतनमेव हि पयोऽन्यानधिष्ठितमपि वत्सविवृद्ध्यर्थं प्रवर्तते। दधिभावं चापद्यते। घनविनिर्मुक्तं चाम्बु जम्बीरनारिकेलादिष्वनेकविधं विकारं प्राप्नोति। नाद्यं चापसर्पति। तृणं च गवा जग्धं क्षीरीभवति। अयश्चायस्कान्तमभिसर्पति। न चेदं नाचेतनवशमित्यादि प्रमाणविरोधः। तस्योक्तस्थानेष्वेवानैकान्त्यात् न चेदं ब्रह्मवादिना सम्मतम्। येन सिद्धसाधनं

— ಪದಾರ್ಥದೀಪಿಕಾ —

ಕಾಂತರವಾವುದೂ ಇಲ್ಲ- ಅಪ್ರಾಮಾಣಿಕವಾದುದರಿಂದಲೇ ಸಿದ್ಧಿಸುತ್ತದೆ ಮತ್ತು ಅಚೇತನಕ್ಕೆ ಅದು ಅಸಂಭಾವಿತವೂ ಅಲ್ಲ ಏಕೆಂದರ ಅಚೇತನಗಳಾದ ಪಯಸ್ಸು (ಹಾಲು) ಮುಂತಾದವುಗಳಲ್ಲಿಯೂ ಕಂಡಿರುತ್ತದ ಹೇಗೆಂದರೆ ಅಚೇತನವಾದರೂ ಹಾಲು, ಇನ್ನೊಬ್ಬರಿಂದ ಅಧಿಷ್ಠಿತವಾಗದಿದ್ದರೂ ಕರುವಿನ (ವತ್ಸದ) ವೃದ್ಧಿಗೋಸುಗ ಪ್ರವೃತ್ತಿಸುತ್ತವೆ ಮತ್ತು ಮೊಸರಿನ ಸ್ವರೂಪವನ್ನೈದುತ್ತದ ಮೇಘದಿಂದ ಸುರಿಸಲ್ಪಟ್ಟ ನೀರು (ಮಳೆಯ ನೀರು) ಜಂಬೀರ, ನಾರಿಕೇಲ ಮುಂತಾದವುಗಳಲ್ಲಿ ತರತರಹದ ವಿಕಾರವನ್ನು ಹೊಂದುತ್ತದೆ ನದಿಯ ಸಂಬಂಧಿಯಾಗಿ ಹರಿಯುತ್ತವ ಆಕಳವು ತಿಂದ ಹುಲ್ಲು ಹಾಲಾಗುತ್ತದೆ. ಅಯಸ್ಸಾದರೂ ಅಯಸ್ಕಾಂತ ಶಿಲೆಯನ್ನು ಎದುರಿನಲ್ಲಿ ಸ್ಪರ್ಶಿಸುತ್ತದ (ಚುಂಬಿಸುತ್ತದೆ) ಇನ್ನು– "ಇದಂ ನಾಚೇತನ ವಶಂ" ಇತ್ಯಾದಿ ಪ್ರಮಾಣಗಳಿಂದ ವಿರೋಧವು ಬರುತ್ತದೆಯೆಂದು ಬಗೆಯಬಾರದು ಏಕೆಂದರೆ ಅದಕ್ಕೆ ಹಿಂದೆ ಹೇಳಲ್ಪಟ್ಟ ಸ್ಥಾನಗಳಲ್ಲಿಯೇ ವ್ಯಭಿಚಾರವಿರುತ್ತದೆ ಹಾಗು ಇದು ಬ್ರಹ್ಮವಾದಿಗೆ ಸಮ್ಮತವಾಗಿಲ್ಲ ಹಾಗೆ ಸಮ್ಮತವಾಗಿದ್ದಲ್ಲಿ ಮಾತ್ರ ಸಿದ್ಧಸಾಧನ ದೋಷವು

— ವಿಶೇಷಾರ್ಥಪ್ರದೀಪಿಕಾ —

ಶಬ್ದಗಳು ಇತರ ಸಂಗ್ರಾಹಕವೆಂದು ತಿಳಿದು ಮೂಲ ಅನುವ್ಯಾಖ್ಯಾನದಲ್ಲಿ "ಪಯೋಽಂಬ್ವಾದಿ'' ಎಂಬುದಾಗಿ ಹೇಳಿದ್ದಾರೆ ಆದುದರಿಂದ "ಪಯೋಽಂಬುಪ್ರಭೃತಿಷು ದರ್ಶನಾತ್'' ಎಂಬುದಾಗಿ ಹೇಳಿ ಇದರ ವ್ಯಾಖ್ಯಾನವನ್ನು "ಅಚೇತನ ಮೇವ ಹಿ" ಇತ್ಯಾದಿ ವಚನದಿಂದ ಮಾಡುತ್ತಾರೆ "ಉಕ್ತಸ್ಥಾನೇಷು" = ಪಯ (ಹಾಲು) ಅಂಬು (ನೀರು) ಮುಂತಾದ ಕಾರ್ಯಗಳಲ್ಲಿ. ಅಲ್ಲಿ– ಅಚೇತನ ವಶವಾಗಿರುವುದೇ ಕಂಡಿರುತ್ತದೆ ಆದುದರಿಂದ ನ ಅಚೇತನವಶಂ– (ಚೇತನ

## ॥ ॐ पयोऽम्बुवच्चेत्तत्रापि ॐ ॥

पयोऽम्ब्वादि च नोपमा ॥

स्यादित्याशङ्कापरिहारार्थं सूत्रम् ॥ ॐ पयोऽम्बुवच्चेत्तत्रापि ॐ ॥ इति । तद्व्याचष्टे ॥ पयोऽम्ब्वादि चेति । उपमा स्वार्थसम्भावनायाम-स्मदीयहेतुव्यभिचारे चेति शेषः । यथाऽत्र साध्यं व्यभिचरति तथा

ಚೇತನಾ ಚೇತನ ಜಗತ್ತಿಗೆಲ್ಲ ಪರಮಾತ್ಮನು ಪ್ರೇರಕನೆಂಬುದಾಗಿ ಹೇಳುವ

### — ಪದಾರ್ಥದೀಪಿಕಾ —

ಬರಬಹುದಿತ್ತು! ಈ ಆಶಂಕೆಯನ್ನು ಪರಿಹರಿಸಲು "ಓಂ ॥ ಪಯೋಽಂಬು, ವಚ್ಚೇತ್ತತ್ರಾಪಿ॥ ಓಂ" ಎಂಬ ಸೂತ್ರವು ಹೊರಟಿದೆ ಅದನ್ನು ವ್ಯಾಖ್ಯಾನಿಸಲು "ಪಯೋಽಂಬ್ವಾದಿ ಚ ನೋಽಪಮಾ" ಎಂಬ ವಾಕ್ಯವು ಹೊರಟಿದೆ "ಉಪಮಾ"= ಇಲ್ಲಿ "ಸ್ವಾರ್ಥ ಸಂಭಾವನಾಯಾಂ ಅಸ್ಮದೀಯ ಹೇತುವ್ಯಭಿಚಾರೇ ಚ" ಎಂಬುದು (ಸ್ವಾರ್ಥದ ಸಂಭಾವನೆಯಲ್ಲಿ ನಾವು ಹೇಳಿದ ಹೇತುವಿಗೆ ವ್ಯಭಿಚಾರ ದಲ್ಲಿ ಎಂಬುದು) ಶೇಷವು ಈ ಪಯಸ್ಸು ಅಂಬು (ಹಾಲು, ನೀರು) ಇತ್ಯಾದಿಗಳಲ್ಲಿ ಸಾಧ್ಯವನ್ನು ಹೇತುವು ಹೇಗೆ ಬಿಟ್ಟಿರುವದೋ ಅದರಂತೆ ಪಕ್ಷದಲ್ಲಿಯೂ ಹೇತು

### — ವಿಶೇಷಾರ್ಥಪ್ರದೀಪಿಕಾ —

ವಶವೇ) ಎಂಬುದು ಇರುವುದಿಲ್ಲವಾದುದರಿಂದ ಅಚೇತನತ್ವವು ಇದನ್ನು ಬಿಟ್ಟಿರು ವುದರಿಂದ ವ್ಯಭಿಚಾರವೆಂದು ತಿಳಿಯಬೇಕು

"ಸ್ವಾರ್ಥಸಂಭಾವನಾಯಾಂ" –ಪ್ರಧಾನವು ಸ್ವತಂತ್ರವಾದ ಜಗತ್ಕಾರ ಣವು, ಎಂಬ ಅರ್ಥದ ಸಂಭಾವನೆಯಲ್ಲಿ, ಹೀಗೆ ಅರ್ಥವು "ಅಸ್ಮದೀಯ ಹೇತುವ್ಯಭಿಚಾರೇ ಚ" – "ಇದಂ ನಾಚೇತನವಶಂ ವಸ್ತುತ್ವಾತ್," ಇತ್ಯಾದಿ ವಾಕ್ಯದಿಂದ ಹೇಳಲ್ಪಟ್ಟ ಹೇತುವಿನ ವ್ಯಭಿಚಾರದಲ್ಲಿ ಹೀಗೆ ಅರ್ಥ ಇನ್ನು-ವ್ಯಭಿಚಾರದಲ್ಲಿ ಪಯೋಂಬುಗಳು ಉಪಮೆ (ದೃಷ್ಟಾಂತ)ಗಳಾಗುವುದಿಲ್ಲವೆಂಬುದು ಸರಿಯಲ್ಲ ಏಕಂದರೆ ಸ್ವಾರ್ಥಸಂಭಾವನೆಯಲ್ಲಿ -ಸಾಧ್ಯಸಾಧನಗಳುಳ್ಳದ್ದಾಗಿರು ವುದರಿಂದ ಸಾಧರ್ಮ್ಯ –(ಸಾದೃಶ್ಯ)ವಿದ್ದುದರಿಂದ "ಉಪಮಾ"ಪದಕ್ಕೆ ಸ್ವಾರಸ್ಯವು ಬರುವಂತೆ' "ವ್ಯಭಿಚಾರದಲ್ಲಿ ಪಯೋಂಬ್ವಾದಿಗಳು ಸ್ಥಲವಾಗುವುದಿಲ್ಲ" ಎಂಬು ದಾಗಿಯೇ ಹೇಳತಕ್ಕದ್ದು ಅಲ್ಲಿ "ಉಪಮಾ" ಪದಕ್ಕೆ ಸ್ವಾರಸ್ಯವಿಲ್ಲವೆಂಬ ಆಶಂಕೆ ಯನ್ನು ಕಳೆಯಲು ವ್ಯಭಿಚಾರದಲ್ಲಿಯೂ ಉಪಮಾ ಪದದ ಸ್ವಾರಸ್ಯವನ್ನು

एतत्प्रशास्तिवचनाच्चेतनाचेतनस्य च ॥

पक्षेऽपि व्यभिचरतु हेतुरित्येवमर्थं हि व्यभिचारोद्भावनम् । तदत्र न युज्यते । चेतनाचेतनस्यैतत्प्रशास्तिवचनात् । पारमेश्वरप्रेरणाप्रतिपादकश्रुतेः । आद्यश्चशब्दो लौकिकाना स्वतन्त्रतया प्रतीयमानमपीत्यर्थे । द्वितीयस्तु न केवलमचेतनस्य । किन्तूभयस्यापीति ।

एतदुक्तं भवति । कारकान्तराप्रयोज्यत्वलक्षणमपि स्वातन्त्र्यं न प्रधानस्योपपद्यते । असम्भावितत्वात् । उक्तानुमानविरुद्धत्वाच्च ।

ಶ್ರುತಿಯಿರುವುದರಿಂದ ಕ್ಷೀರ–ನೀರು ಮುಂತಾದುದು ಸ್ವಾರ್ಥಸಂಭಾವನೆಯಲ್ಲಿಯೂ ನವು ಯುಕ್ತಿಯು ವ್ಯಭಿಚಾರದಲ್ಲಿಯೂ ದೃಷ್ಟಾಂತವಾಗಲಾರದು

— ಪದಾರ್ಥದೀಪಿಕಾ —

ವನ್ನು ಬಿಟ್ಟಿರಲಿ ! ಹೀಗಿರುವ ವಿಷಯಕ್ಕಾಗಿಯೇ ವ್ಯಭಿಚಾರವನ್ನು ತೋರಿಸುವುದು ! ಆದರೆ ಅದು (ವ್ಯಭಿಚಾರವನ್ನು ತೋರಿಸುವುದು) ಇಲ್ಲಿ ಯುಕ್ತವೆನಿಸುವುದಿಲ್ಲ ಏಕೆಂದರೆ ಚೇತನ ಅಚೇತನಗಳಿಗೆಲ್ಲ, " ಏತತ್ಪ್ರಶಾಸ್ತಿ ವಚನಾತ್ "– ಪರಮೇಶ್ವರನ ಪ್ರೇರಣೆಯನ್ನು ಪ್ರತಿಪಾದಿಸುವ ಶ್ರುತಿಯು ಇರುತ್ತದೆ ಮೊದಲನೆಯ " ಚ ಶಬ್ದವು "ಲೌಕಿಕಾನಾಂ ಸ್ವತಂತ್ರತಯಾ ಪ್ರತೀಯಮಾನಮಪಿ " ಲೌಕಿಕರಿಗೆ ಸ್ವತಂತ್ರವಾಗಿ ತೋರಿದರೂ) ಎಂಬ ಅರ್ಥವನ್ನು ಹೇಳುತ್ತದೆ ಎರಡನೆಯ " ಚ " ಶಬ್ದವು " ಕೇವಲ ಅಚೇತನಕ್ಕಲ್ಲ ಎರಡಕ್ಕೂ " ಎಂಬ ಅರ್ಥದಲ್ಲಿ ಇರುತ್ತದೆ ಹೀಗೆ ಅರ್ಥ

ಇಲ್ಲಿ ಹೇಳಲ್ಪಟ್ಟದ್ದು ಇದು— " ಕಾರಕಾಂತರದ ಅಧೀನ (ಅದರಿಂದ ಪ್ರೇರಿತ (ಪ್ರಯುಕ್ತ) ವಾಗದಿರುವುದೆಂಬ ಸ್ವಾತಂತ್ರ್ಯವೂ ಪ್ರಧಾನಕ್ಕೆ ಸಂಭವಿಸುವುದಿಲ್ಲ ಏಕೆಂದರೆ ಅಸಂಭಾವಿತವಾಗಿದೆ ಹಾಗು ಹಿಂದೆ ಹೇಳಿದ ಅನುಮಾನಗಳಿಗೆ ವಿರುದ್ಧವೂ ಆಗಿದೆ ಈ ವಿಷಯದಲ್ಲಿ "ಪಯೋಂಬುವತ್" ಎಂಬು

— ವಿಶೇಷಾರ್ಥಪ್ರದೀಪಿಕಾ —

"ಯಥಾ ಅತ್ರ" ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ "ಅತ್ರ" ಪಯೋಂಬ್ವಾದಿಗಳಲ್ಲಿ. "ಪಕ್ಷೇಽಪಿ" –"ಇದಂ ನಾಚೇತನವಶಂ ವಸ್ತುತ್ವಾತ್" ಎಂಬಲ್ಲಿ "ಏತತ್ಪ್ರಶಾಸ್ತಿವಚನಾತ್"–ಇದರ ವ್ಯಾಖ್ಯಾನವು "ಪಾರಮೇಶ್ವರಪ್ರೇರಣಾಪ್ರತಿಪಾದಕಶ್ರುತೇಃ" ಎಂಬುದು

यदुक्तमत्र पयोम्ब्वादिवदिति । तदसत् । तत्रापीश्वरप्रेरणाया एतस्य वाऽक्षरस्येत्यादिश्रुतिसिद्धत्वात् । अत एव प्रधानस्य परप्रयोज्यत्वे प्रमाणाभावोऽपि परास्त इति । सूत्रे पयोऽम्बुवदित्युक्तेऽपि नोदाहरणमादरणीयम् । स्थलान्तरेऽसम्भावनाव्यभिचारश्च भविष्यत इत्याशङ्कापरिहारार्थस्य व्यतिरेकानवस्थितेश्चानपेक्षत्वादित्युत्तरसूत्रस्यापि व्याख्यानायादिपदप्रयोगः । यद्वा पयोऽम्बुग्रहणमुपलक्षणमित्यभिप्रे-

— ಪದಾರ್ಥದೀಪಿಕಾ —

ದಾಗಿ ಹೇಳಿದುದು ಸರಿಯಲ್ಲ ಏಕೆಂದರ ಅಲ್ಲಿಯೂ ಈಶ್ವರನ ಪ್ರೇರಣೆಯು ಇದೆಯೆಂಬುದು "ಏತಸ್ಯ ವಾ ಅಕ್ಷರಸ್ಯ" ಈ ಮುಂತಾದ ಶ್ರುತಿಗಳಿಂದ ಸಿದ್ಧವಾದುದು ಆದುದರಿಂದಲೇ "ಪ್ರಧಾನದ ಪರಪ್ರಯೋಜ್ಯತ್ವದ (ಪ್ರೇರಣೆಯುವರ ಅಧೀನದಲ್ಲಿರುವಿಕೆಯು) ವಿಷಯದ ಮೇಲೆ ಪ್ರಮಾಣವಿಲ್ಲವೆಂಬ ಹೇಳಿಕೆಯೂ ನಿರಾಸಹೊಂದಿತು" ಹೀಗೆ ಸೂತ್ರದಲ್ಲಿ— ಪಯೋಂಬುವತ್" ಎಂಬುದಾಗಿ ಹೇಳಿದರೂ, ಅದರ ಉದಾಹರಣಗಳನ್ನು ಆದರಿಸತಕ್ಕದ್ದಲ್ಲ ಬೇರೆ ಸ್ಥಲಗಳಲ್ಲಿ ಸಂಭಾವನಯೂ ವ್ಯಭಿಚಾರವೂ ಒರುತ್ತವೆ ಈ ಆಶಂಕೆಯನ್ನು ಪರಿಹರಿಸುವುದೆಂಬ ಪ್ರಯೋಜನವುಳ್ಳ, "ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್" ಎಂಬ ಮುಂದಿನ ಸೂತ್ರದ ವ್ಯಾಖ್ಯಾನಕ್ಕೋಸುಗ "ಆದಿ" ಪದವನ್ನು ಪ್ರಯೋಗಿಸಿದ್ದಾರೆ ಅಥವಾ "ಪಯೋಽಂಬು" ಪದಗಳ ಗ್ರಹಣವು ಇತರ ಸಂಗ್ರಾಹಕವೆಂಬ

— ವಿಶೇಷಾರ್ಥಪ್ರದೀಪಿಕಾ —

"ಅತಏವ"=ಪರಮಾತ್ಮನಿಂದ ಪ್ರೇರಿತವಾಗಿರುವುದರ ಬಗ್ಗೆ ಹಿಂದೆ ಹೇಳಿದ "ಏತಸ್ಯ ವಾಕ್ಷರಸ್ಯ ಪ್ರಶಾಸನೇ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ" ಇತ್ಯಾದಿಯಾದ ಶ್ರುತಿಯು ಇರುವುದರಿಂದಲೇ! 'ಪಯೋಽಬ್ವಾದಿ ಚ'' ಎಂಬಲ್ಲಿಯ "ಆದಿ" ಪದವು ಉತ್ಸೂತ್ರಿತವಲ್ಲವೆಂಬುದಾಗಿ ''ಸೂತ್ರೇ'' ಈ ವಚನದಿಂದ ಹೇಳುತ್ತಾರೆ "ಸ್ಥಲಾಂತರೇ" —ಅಯಸ್ಕಾಂತಶಿಲೆಯು ಸ್ಥಲಾಂತರವು "ಸಂಭಾವನಾ" —ಅಚೇತನಕ್ಕೆ ಸ್ವತಂತ್ರಪ್ರವೃತ್ತಿಯೆಂಬ ಸ್ವಾರ್ಥದ ಸಂಭಾವನೆಯು ಅಯಸ್ಕಾಂತಶಿಲೆ, ಗೋವು, ಹುಲ್ಲು, ಮುಂತಾದ ಸ್ಥಲಾಂತರಗಳಲ್ಲಿ ಇರುತ್ತದೆ ಹೀಗೆ ಅರ್ಥ ಇನ್ನು ಮುಂದಿನ "ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್'' ಇತ್ಯಾದಿ ಸೂತ್ರದ ಅರ್ಥವನ್ನು ವ್ಯಾಖ್ಯಾನಿಸಲು '' ಪಯೋಽಂಬ್ವಾದಿ ಚ '' ಇಲ್ಲಿಯ "ಆದಿ" ಪದವು ಹೊರಟಿದೆಯೆಂದು ಹೇಳಿದರೆ —"ಪಯೋಽಂಬ್ವಾದಿವಚ್ಚೇತ್ತತ್ರಾಪಿ" ಎಂಬುದಾ

त्यादिपदं प्रयुक्तम् । उत्तरसूत्रं तु कैमुत्यार्थम् । चेतनप्रवृत्तेरपीश्वर-व्यतिरेकेणानवस्थितेरचेतनप्रवृत्तेस्तदधीनत्वं किमु वाच्यमिति । तद्व्याख्यानाय चेतनाचेतनस्य चेत्युक्तम् । किञ्च परिमाणादिति हेतुस्तावदनैकान्तिकः । सत्त्वरजस्तमसां साम्यावस्था हि प्रकृतिरुच्यते । सत्त्वादयश्च परिमिता एव । यथोक्तम् । अबग्नीरनभोऽहङ्कृन्महत्तत्त्व-

— ಪದಾರ್ಥದೀಪಿಕಾ —

ಅಭಿಪ್ರಾಯದಿಂದ "ಆದಿ" ಪದವು ಪ್ರಯೋಗಿಸಲ್ಪಟ್ಟಿದೆ ಮುಂದಿನ ಸೂತ್ರವಂತೂ ಕೈಮುತ್ಯವನ್ನು ತೋರಿಸಲು, ಹೊರಟಿದೆ "ಚೇತನದ ಪ್ರವೃತ್ತಿಯೂ ಈಶ್ವರ ನಿಲ್ಲದೆ ಅಸಂಭಾವಿತವಾಗಿರುವುದರಿಂದ ಅಚೇತನದ ಪ್ರವೃತ್ತಿಯು ಈಶ್ವರಾಧೀನವೆಂಬುದನ್ನೇನು ಹೇಳತಕ್ಕದ್ದು ? ಹೀಗೆ ಆ ಕೈಮುತ್ಯವು! ಅದರ ವ್ಯಾಖ್ಯಾನಕ್ಕಾಗಿ "ಚೇತನಾಚೇತನಸ್ಯ ಚ" ಎಂಬುದಾಗಿ ಹೇಳಿದ್ದಾರೆ

ಮತ್ತು - "ಪರಿಮಾಣಾತ್" ಎಂಬ ಯುಕ್ತಿಯಂತೂ ಸಾಧ್ಯವನ್ನು ವ್ಯಭಿಚರಿಸುತ್ತದೆ ಹೇಗೆಂದರೆ ಸತ್ತ್ವ, ರಜ, ತಮಸ್ಸು ಈ ಗುಣಗಳ ಸಾಮ್ಯಾವಸ್ಥೆಯು ಮೂಲಪ್ರಕೃತಿಯೆನಿಸುತ್ತದೆ ಸತ್ತ್ವ ಮುಂತಾದವುಗಳಾದರೋ ಪರಿಮಿತಗಳೇ! (ಪರಿಮಿತಿಯನ್ನುಳ್ಳವುಗಳೇ!) 'ಅಬಗ್ನೀರನಭೋಅಹಂಕೃನ್ಮಹತ್ತ

— ವಿಶೇಷಾರ್ಥಪ್ರದೀಪಿಕಾ —

ಗಿಯೇ ಸೂತ್ರವಿರಬೇಕಾಗುತ್ತದೆ ಆದುದರಿಂದ ಬೇರೆ ಸೂತ್ರವು ಬೇಕಾಗುವುದಿಲ್ಲವೆಂಬ ಅಸ್ವಾರಸ್ಯದ ಅಭಿಪ್ರಾಯದಿಂದ "ಯದ್ವಾ' ಇತ್ಯಾದಿ ವಾಕ್ಯಗಳಿಂದ, "ಆದಿ 'ಪದವು, "ಪಯೋಂಬುವದಿತಿ ಚೇತ್ತತ್ರಾಪಿ"ಎಂಬುದರ ವಿವರಣವೆಂಬುದನ್ನು ತೋರಿಸುತ್ತಾರೆ

ಮೂಲದಲ್ಲಿರುವ "ಚ" ಶಬ್ದವು ' ಅನುಕ್ತಸಮುಚ್ಚಾಯಕವೂ," ಎಂದು ಬಗೆದು, ಸಾಂಖ್ಯಮತದ ಅನುವಾದದಲ್ಲಿ ಉದಾಹರಿಸಲ್ಪಟ್ಟ ಶ್ಲೋಕದಲ್ಲಿ ಹೇಳಿದ ಭೇದಾನಾಂ ಪರಿಮಾಣಾತ್, ಸಮನ್ವಯಾತ್, ಈ ಮುಂತಾದ ಪ್ರಕೃತಿಯ ಜಗತ್ಕಾರಣತ್ವವನ್ನು ಸಾಧಿಸುವ ಹೇತುಗಳನ್ನು ಪೃಥಕ್ಕಾಗಿ - ವಿಶೇಷವಾಗಿ "ಕಿಂಚ" ಇತ್ಯಾದಿವಾಕ್ಯಗಳಿಂದ ನಿರಾಕರಿಸುತ್ತಾರೆ "ಅನೈಕಾಂತಿಕಃ" - ಸತ್ತ್ವ, ರಜ ತಮ ಈ ಗುಣಗಳಲ್ಲಿ ಹೇತುವು ಸಾಧ್ಯವನ್ನು ಬಿಟ್ಟಿರುತ್ತದೆಂದು ಭಾವ ಅನೈಕಾಂತಿಕತೆಯು ಹೇಗೆ? ಎಂಬ ಆಶಂಕೆಯು ಬರುವುದರಿಂದ, "ಸಾಮ್ಯಾವಸ್ಥೆಯನ್ನು ಹೊಂದಿದ ಈ ತ್ರಿಗುಣಾತ್ಮಕೆಯಾದ ಪ್ರಕೃತಿಯಲ್ಲಿ ಹೇತುವು ಇದ್ದರೂ- ಅವ್ಯಕ್ತಕಾರಣವುಳ್ಳದ್ದಾಗಿರುವುದೆಂಬ ಸಾಧ್ಯವು ಇಲ್ಲವಾದುದರಿಂದ ವ್ಯಭಿಚಾರ"ವೆಂಬ

गुणत्रयैः ॥ क्रमाद्दशोत्तरैरिति । न च प्रकृतिरव्यक्तान्तरवतीति कथं नानैकान्त्यम् । न च परिमितस्यापि मूलप्रकृतित्वे बाधकमस्ति । सार्वत्रिककार्यानुत्पत्तिरिति चेन्न । सर्वत्र कार्यसद्भावे प्रमाणाभावात् ।

— ಪದಾರ್ಥದೀಪಿಕಾ —

ತ್ತ್ವಗುಣತ್ರಯೈಃ॥ ಕ್ರಮಾದ್ದಶೋತ್ತರೈಃ" ಎಂಬೀ ವಚನಗಳು ಇದರ ಬಗ್ಗೆ ಆಧಾರಗಳು ! ಪ್ರಕೃತಿಯಾದರೋ ಅವ್ಯಕ್ತದಿಂದ ಭೇದವುಳ್ಳದ್ದು– ಬೇರೆಯದು ಅಲ್ಲ ಆದುದರಿಂದ ಅನೈಕಾಂತ್ಯವು ಹೇಗೆ ಇಲ್ಲ ? ಹಾಗು ಪರಿಮಿತಿಯುಳ್ಳದ್ದು ಮೂಲ ಪ್ರಕೃತಿಯಾಗಿರುವುದೆಂಬಲ್ಲಿ ಬಾಧಕವೂ ಇಲ್ಲ ಸಾರ್ವತ್ರಿಕ ಕಾರ್ಯಾ ನುತ್ಪತ್ತಿಯು ಬಾಧಕವಲ್ಲ. ಏಕೆಂದರೆ ಸರ್ವತ್ರ ಕಾರ್ಯದ ಅಸ್ತಿತ್ವದ ಬಗ್ಗೆ

— ವಿಶೇಷಾರ್ಥಪ್ರದೀಪಿಕಾ —

ಅಭಿಪ್ರಾಯದಿಂದ, ಸಾಧ್ಯದ ಅಭಾವವನ್ನೂ ಹೇತುವಿನ ಅಸ್ತಿತ್ವವನ್ನೂ ಸಾಮ್ಯಾವಸ್ಥೆಯಲ್ಲಿನ ಪ್ರಕೃತಿಯಲ್ಲಿ ''ಸತ್ವ" ಇತ್ಯಾದಿವಾಕ್ಯಗಳಿಂದ ಉಪಪಾದಿಸುತ್ತಾರೆ. "ಪ್ರಕೃತಿರುಚ್ಯತೇ'' ಎಂಬ ಮಾತಿನಿಂದ ಅವ್ಯಕ್ತಕಾರಣವುಳ್ಳದ್ದಾಗಿರುವುದೆಂಬ ಸಾಧ್ಯವು ಇಲ್ಲವೆಂಬುದನ್ನು ತೋರಿಸಿದ್ದಾಯಿತು ಇದರ ಉಪಪಾದನವನ್ನು ''ನ ಚ ಪ್ರಕೃತಿಃ'' ಇತ್ಯಾದಿ ಮುಂದಿನವಾಕ್ಯದಲ್ಲಿ ಸ್ಪಷ್ಟೀಕರಿಸುವರು

"ಯಥೋಕ್ತಂ"— ತಾತ್ಪರ್ಯನಿರ್ಣಯ ೨ನೇ ಅಧ್ಯಾಯದಲ್ಲಿ. ಸತ್ವ ಮುಂತಾದುದು ಪರಿಮಿತವಾದುದರಿಂದ, ಮೂಲ ಪ್ರಕೃತಿಯಾಗಲಾರದು ಆದುದರಿಂದ ಬೇರೆ ಅವ್ಯಕ್ತ(ಕಾರಣ)ವುಳ್ಳದ್ದಿರುವುದೆಂಬ ಸಾಧ್ಯವೂ ಅಲ್ಲಿ ಇರುವುದರಿಂದ ವ್ಯಭಿಚಾರವಿಲ್ಲವೆಂಬ ಆಶಂಕೆಯನ್ನು "ನ ಚ" ಇತ್ಯಾದಿ ವಾಕ್ಯಗಳಿಂದ ಪರಿಹರಿಸುತ್ತಾರೆ ಬೇರೆ ಅವ್ಯಕ್ತವಿರುವುದಾದರೆ ಅದು ಮೂಲ ಪ್ರಕೃತಿಯೆಂದೆನಿಸದು, ಹೀಗೆ ಭಾವ

ಗುಣತ್ರಯವು ಪರಿಮಿತವಾದುದರಿಂದಲೇ ಮೂಲ ಪ್ರಕೃತಿಯಲ್ಲ. ಆದರೆ ಅವ್ಯಕ್ತಾಂತರಳವುಳ್ಳದ್ದೇ! ಆದುದರಿಂದ ವ್ಯಭಿಚಾರವೆಂಬ ಅಭಿಪ್ರಾಯವನ್ನು "ನ ಚ ಪರಿಮಿತತ್ವಾದೇವ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ ಪರಿಮಿತತ್ವವಿರಲಿ, ಅವ್ಯಕ್ತಾಂತರವತ್ವವು ಇಲ್ಲದಿರಲಿ, ಅಂದರೆ ಪರಿಮಿತವಾದುದೂ ಮೂಲ ಪ್ರಕೃತಿಯೇಕಾಗಬಾರದು, ಎಂಬ ಅಪ್ರಯೋಜಕತ್ವದ ಆಶಂಕೆಯ ಮೇಲೆ ಬಾಧಕವನ್ನು "ಸಾರ್ವತ್ರಿಕ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ''ಸರ್ವಕಾರ್ಯಾಣಾಂ ಮೂಲೋಪಾದಾನಂ ಪ್ರಕೃತಿಃ ಯದಿ ಪರಿಮಿತಾ ತರ್ಹಿ'' (ಸರ್ವಕಾರ್ಯಗಳ ಮೂಲ ಉಪಾದಾನವಾದ ಪ್ರಕೃತಿಯು ಪರಿಮಿತಿಯುಳ್ಳದ್ದಾದರೆ ) ಎಂಬುದು

भावेऽप्यनेकैस्तदुत्पत्त्युपपत्तेः । युक्तं च परिमितानामेव कारणत्वम् । तन्त्वादिषु दर्शनात् । अपरिमितस्य कृत्स्नैकदेशविकल्पानुपपत्तेश्च । अस्माकं त्वीश्वरशक्त्यैवोपपद्यते । समन्वयादित्यप्यसत् । यत्कार्यं

— ಪದಾರ್ಥದೀಪಿಕಾ —

ಪ್ರಮಾಣವಿಲ್ಲ ಇದ್ದರೂ ಪರಿಮಿತಗಳಾದ ಅನೇಕಗಳಿಂದ ಆ ಕಾರ್ಯವು ಸಂಭವಿಸುತ್ತದೆ ಮತ್ತು ಪರಿಮಿತಿಯುಳ್ಳದ್ದಕ್ಕೇ ಕಾರಣತ್ವವೆಂಬುದು ಯುಕ್ತವೂ ಆಗಿದೆ ಏಕೆಂದರೆ ತಂತು ಮುಂತಾದುದರಲ್ಲಿ ಕಂಡಿರುತ್ತದೆ ಪರಿಮಿತಿಯಿಲ್ಲದ್ದಕ್ಕೆ, ಕೃತ್ಸ್ನ, ಏಕದೇಶ ಪರಿಣಾಮಗಳಲ್ಲಿ ಯಾವದೇ ಕಲ್ಪವು ಯುಕ್ತವಲ್ಲ ನಮ್ಮ ಮತದಲ್ಲಿ ಯಾದರೋ ಈಶ್ವರನ ಶಕ್ತಿಯಿಂದಲೇ ಉಪಪನ್ನವಾಗುತ್ತದೆ. "ಸಮನ್ವಯಾತ್" (ಸಮನ್ವಯವಿರುತ್ತದೆ) ಹೀಗೆ ಹೇಳುವುದೂ ಸರಿಯಲ್ಲ ಏಕೆಂದರೆ

— ವಿಶೇಷಾರ್ಥಪ್ರದೀಪಿಕಾ —

ಶೇಷವು "ಅನೇಕೈಃ" ಇಲ್ಲಿ "ಪರಿಮಿತೈಃ" ಎಂಬುದು ಶೇಷವು

ಕೃತ್ಸ್ನೈಕದೇಶವಿಕಲ್ಪಾನುಪಪತ್ತೇಶ್ಚ"— ಕೃತ್ಸ್ನವಾಗಿ (ಸಮಗ್ರವಾಗಿ) ಪರಿಣಾಮವಾದರೆ, ಒಂದು ಕಾರ್ಯದ ಉತ್ಪತ್ತಿಯಾದರೆ ಇನ್ನೊಂದು ಕಾರ್ಯದ ಉತ್ಪತ್ತಿಯು ಕಾರಣವಿಲ್ಲದೆ ಆಗಬೇಕಾಗುತ್ತದೆ ಮತ್ತು ಅಪರಿಮಿತವಾದ ಪ್ರಧಾನದ ಸಮಗ್ರ ಪರಿಣಾಮರೂಪವಾದ ಮಹದಾದಿ ಕಾರ್ಯಗಳಿಗೂ ಅಪರಿಮಿತತ್ವವು (ಪರಿಮಾಣ ಶೂನ್ಯತೆಯು) ಬರಬೇಕಾಗುತ್ತದೆ ಆ ಪ್ರಕೃತಿಯು ಏಕದೇಶದಿಂದ ಪರಿಣಾಮ ಹೊಂದುತ್ತದೆಯೆಂದು ಹೇಳಿದರೆ– ಅಪರಿಮಿತ (ಪರಿಮಿತಿಯಿಲ್ಲದ್ದು)ವಾದುದಕ್ಕೆ ನಿರವಯವತ್ವದ ನಿಯಮವಿರುವುದರಿಂದ,ಏಕದೇಶವೇ ಇರುವುದಿಲ್ಲ, ಈ ಕಾರಣದಿಂದ ಏಕದೇಶವೇ ಯುಕ್ತವಾಗುವುದಿಲ್ಲ ಆದುದರಿಂದ, ನಿರಂಶತ್ವವು ಇಲ್ಲವಾಗುವ ಪ್ರಸಂಗವು ಬರುತ್ತದೆ ಹೀಗೆ ಕೃತ್ಸ್ನವಾದ ಪರಿಣಾಮ, ಏಕದೇಶ ಪರಿಣಾಮ, ಇವೆರಡೂ ಕಲ್ಪಗಳ ಮೇಲೆ ದೂಷಣವು ಬರುವುದರಿಂದ ಎರಡೂ ಕಲ್ಪಗಳು ಸಂಭವಿಸುವುದಿಲ್ಲ ಹೀಗೆ ತಿಳಿಯಬೇಕು ಉದಾಹರಿಸಲ್ಪಟ್ಟ ಪ್ರಮಾಣಗಳಲ್ಲಿ ಹೇಳಿದ ಗುಣತ್ರಯವು ಸಿದ್ಧಾಂತದಲ್ಲಿ ಪ್ರಕೃತಿಯಲ್ಲ ಅದು ಆದಿಕಾರ್ಯವೇ ಹಾಗು ಪರಿಮಿತವೇ ! ಮೂಲ ಪ್ರಕೃತಿಯು ಅಪರಿಮಿತವೇ !, ಆದುದರಿಂದ ಆ ಗುಣತ್ರಯಕ್ಕೆ ಪರಿಮಿತಿಯಿದ್ದುದರಿಂದಲೂ ಅವ್ಯಕ್ತಾಂತರವಿರುವುದರಿಂದಲೂ ಅಲ್ಲಿ ವ್ಯಭಿಚಾರವಿಲ್ಲ. ಆದರೂ ಮಹದಾದಿಗಳ ಕಾರಣವಾದ ಗುಣತ್ರಯಗಳಿಂದ ಬೇರೆಯಾದ ಪ್ರಕೃತಿಯನ್ನು ಅಂಗೀಕರಿಸದ ಪರನ ಮತದ ಪ್ರಕಾರ ವ್ಯಭಿಚಾರವನ್ನು ಹೇಳಿದುದು,

यदनुगतिमत्तत्तादृक्कारणोपेतमित्यस्या व्याप्तेरव्यक्ताद्व्यक्तजन्माङ्गीकारेणैव भग्नत्वात्। शक्तितः प्रवृत्तेश्चेत्येतदपि न विवक्षितार्थसाधकम्। अन्तर्भावितकार्यत्वमेव कारणस्य शक्तिरित्यस्य सिद्धौ हि तथा स्यात् । तच्च सत्कार्यवादनिर्वाह्यमिति । अत एव विभागाविभागावपि निरस्तौ ।

— ಪದಾರ್ಥದೀಪಿಕಾ —

"ಯಾವ ಕಾರ್ಯವು ಯಾವುದರ ಅನುಗತಿಯುಳ್ಳದ್ದೋ ಅದು ಅಂಥ ಕಾರಣವುಳ್ಳದ್ದು" ಎಂಬೀ ವ್ಯಾಪ್ತಿಯು, ಅವ್ಯಕ್ತದಿಂದ ವ್ಯಕ್ತದ ಜನನವನ್ನಂಗೀಕರಿಸುವುದರಿಂದಲೇ ಭಗ್ನವಾಗಿರುತ್ತದೆ. "ಶಕ್ತಿತಃ ಪ್ರವೃತ್ತೇಶ್ಚ" ಇತ್ಯಾದಿಯಾಗಿ ಹೇಳಿದುದೂ, ಹೇಳಬೇಕಾದ ವಿಷಯವನ್ನು ಸಾಧನಮಾಡುವುದಲ್ಲ ಏಕೆಂದರೆ-ಕಾರ್ಯದಲ್ಲಿ ಅವ್ಯಕ್ತವಾಗಿರುವುದೇ ಕಾರಣದ ಶಕ್ತಿಯೆಂಬುದು ಸಿದ್ಧವಾದರೆ ಹಾಗೆ ಆಗಬಹುದಿತ್ತು ಅದಾದರೂ ಸತ್ಕಾರ್ಯ ವಾದದಿಂದ ನಿರ್ವಾಹ್ಯವಾಗಿದೆ ಹೀಗೆ ಆದುದರಿಂದಲೇ ವಿಭಾಗ ಅವಿಭಾಗಗಳೆರಡೂ ನಿರಾಸಹೊಂದಿದವು. ಏಕೆಂದರೆ-

— ವಿಶೇಷಾರ್ಥಪ್ರದೀಪಿಕಾ —

ಹೀಗೆ ತಿಳಿಯಬೇಕು ಹಾಗಾದರೆ ನಿಮ್ಮ ಮತದಲ್ಲಿಯೂ ಪರಿಮಿತಿಯಿಲ್ಲದಿರುವ ಪ್ರಕೃತಿಯ ಪರಿಣಾಮವು ಹೇಗೆ? ಈ ಆಶಂಕೆಯನ್ನು 'ಅಸ್ಮಾಕಂ ತು" ಇತ್ಯಾಧಿ ವಾಕ್ಯದಿಂದ ಪರಿಹರಿಸುತ್ತಾರೆ ಅಪರಿಮಿತವಾದ ಪ್ರಕೃತಿಗೂ ಸಾವಯವತ್ವವು ಇರುವುದರಿಂದ ಏಕದೇಶದಿಂದ ಪರಿಣಾಮವು ಸಂಭವಿಸುತ್ತದೆ ಯೆಂದು ಭಾವ ತಿಳಿಯಬೇಕು

"ಅಂತರ್ಭಾವಿತಕಾರ್ಯತ್ವಂ"= ಅವ್ಯಕ್ತ ಕಾರ್ಯರೂಪತೆಯು ಕಾರಣದ ಶಕ್ತಿ ಹೀಗೆ ಅರ್ಥ "ತಚ್ಚ"= "ಅವ್ಯಕ್ತವಾದ ಕಾರ್ಯರೂಪತೆಯೇ ಕಾರಣದಲ್ಲಿಯ ಶಕ್ತಿ" ಎಂಬ ವಿಷಯವಾದರೋ, ಹೀಗೆ ಅರ್ಥ "ಸತ್ಕಾರ್ಯವಾದ ನಿರ್ವಾಹ್ಯಂ"– ಸತ್ಕಾರ್ಯವಾದವನ್ನು ತದನನ್ಯತ್ವಾಧಿಕರಣದಲ್ಲಿ ನಿರಾಕರಿಸಿದುದರಿಂದ, ಅವ್ಯಕ್ತ ಕಾರ್ಯರೂಪತೆಯೇ ಕಾರಣಗತಶಕ್ತಿಯೆಂಬ ಸಂಗತಿಯು ಸಿದ್ಧಿಸಲಾರದು ಹೀಗೆ ಭಾವ ಇಲ್ಲಿರುವ "ಇತಿ" ಶಬ್ದವು "ಕಿಂಚ" ಇತ್ಯಾದಿ ವಾಕ್ಯದಿಂದ ಹೇಳಿದ ದೂಷಣವು ಮುಗಿದುದೆಂಬ ಸಂಗತಿಯನ್ನು ಹೇಳುತ್ತದೆ.

"ಅತಏವ" ಎಂಬುದರಿಂದ ಹೇಳಿದ ಯುಕ್ತಿಯನ್ನು "ವಿಭಾಗಾವಿಭಾಗಯೋರೇವ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ, ಇದರಲ್ಲಿ ಕಾರಣವನ್ನು "ಸತ್ಕಾರ್ಯವಾದ ಸಿದ್ಧ್ಯಧೀನಯೋಃ" ಎಂಬ ವಚನದಿಂದ ಹೇಳಿದ್ದಾರೆ

विभागाविभागयोरेव सत्कार्यवादसिद्ध्यधीनयोरसत्त्वात् । स्वप्रक्रिया-मात्रेणार्थसिद्धौ स्थूलकार्यस्य लोष्ठादेरित्यादिना तार्किकपरिकल्पिताभ्यां विभागाविभागाभ्यां परमाणुकारणत्वमपि स्यादित्यास्तां प्रपञ्चः ।

— ಪದಾರ್ಥದೀಪಿಕಾ —

ಸತ್ಕಾರ್ಯವಾದದ ಸಿದ್ಧಿಯನ್ನು ಅವಲಂಬಿಸಿದ ವಿಭಾಗ ಅವಿಭಾಗಗಳೇ ಇರುವುದಿಲ್ಲ ತನ್ನ ಪ್ರಕ್ರಿಯೆಯಿಂದಲೇ ವಿಷಯವು ಸಿದ್ಧಿಸುವುದಾದರೆ, "ಸ್ಥೂಲ ಕಾರ್ಯಸ್ಯ ಲೋಷ್ಠಾದೇಃ" ಇತ್ಯಾದಿಯಾಗಿ ತಾರ್ಕಿಕರು ಪರಿಕಲ್ಪಿಸಿದ ವಿಭಾಗ ಅವಿಭಾಗಗಳಿಂದ ಪರಮಾಣುವಿನ ಕಾರಣತ್ವವೂ ಬರಬೇಕಾಗುತ್ತದೆ ಹೀಗೆ ಇಲ್ಲಿಯ ವಿಸ್ತರವು ಸಾಕು!

ವಿಶೇಷಾರ್ಥಪ್ರದೀಪಿಕಾ —

"ಸ್ಥೂಲಕಾರ್ಯಸ್ಯ ಲೋಷ್ಠಾದೇಃ"– ಕಿರಣಾವಲಿಯಲ್ಲಿ ಉದಯನನು ಪರಮಾಣುಗಳ ಸಿದ್ಧಿಯಲ್ಲಿ, ವಿಭಾಗ ಅವಿಭಾಗಗಳು ಹೇತು (ಯುಕ್ತಿ) ಗಳಿಂದು ಹೇಳಿದ್ದಾನೆ ಹೇಗೆಂದರೆ– "ಸ್ಥೂಲಕಾರ್ಯಸ್ಯ ಲೋಷ್ಠಾದೇಃ ಅವಯವಕ್ರಿಯಾ ವಿಭಾಗನಾ ಯೇನ ವಿಭಜ್ಯಮಾನಾಲ್ಪತರತಮಾದಿಭಾವಾತ್ ಯತೋ ನಾಲ್ಪೀಯಃ ತಂ ಪರಮಾಣುಂ ಆಚಕ್ಷ್ಮಹೇ" (ಸ್ಥೂಲಕಾರ್ಯಗಳೆನಿಸಿದ ಲೋಷ್ಠ ಮುಂತಾದುದನ್ನು ಅವಯವಕ್ರಿಯಾವಿಭಾಗ ನ್ಯಾಯದಿಂದ ವಿಭಾಗಮಾಡಿದರೆ– ಅತ್ಯಲ್ಪತರವಾದುದು ಯಾವದೋ, ಮತ್ತು ಯಾವುದಕ್ಕಿಂತ ಅಲ್ಪತರವು ಇಲ್ಲವೋ ಅದು ಪರಮಾಣುವು." ಎಂಬುದಾಗಿ ಹೇಳುತ್ತೇವೆ.) ಈ ಗ್ರಂಥದಿಂದ, ವಿಭಾಗವೆಂಬ ಹೇತುವು ಹೇಳಲ್ಪಟ್ಟಿದೆ. "ಏಷ ಹ್ಯವಯವಾವಯವಿಪ್ರಸಂಗೋ ನ ತಾವನ್ನಿರವಧಿರೇವ ಅನಂತಾವಯವಾರಬ್ಧತ್ವಾವಿಶೇಷೇ ಮೇರುಸರ್ಷಪಾದೀನಾಂ ಪರಿಮಾಣಭೇದಾನುಪಪತ್ತಿಃ। ನಚಾನ್ಯಃ ತದವಧಿಃ ಸಂಭವತಿ । ತಸ್ಮಾನ್ನಿರವಯವಾವಧಿರವಯವಾವಯವಿಪ್ರಸಂಗಃ" (ಈ ಅವಯವ ಅವಯವಿ ಪ್ರಸಂಗವು ನಿರವಧಿಯಾದುದಲ್ಲ ಏಕೆಂದರೆ– "ಅನಂತ ಅವಯವಗಳಿಂದ ಹುಟ್ಟಿರುವುದು (ಕೂಡಿ ಆದುದು) ಎಂಬುದು ಸಮಾನವಾಗಿರುವುದರಿಂದ ಮೇರು–ಸರ್ಷಪ (ಸಾಸ್ವಿ) ಗಳ ಪರಿಮಾಣಭೇದವು ಯುಕ್ತವಾಗಲಿಕ್ಕಿಲ್ಲ ಪರಮಾಣುವಿನಿಂದ ಬೇರೆಯಾದುದು ಆ ಅವಧಿಯಾಗದು ಆದುದರಿಂದ, ನಿರವಯವವಾದ ಅವಧಿಯುಳ್ಳದ್ದು ಈ ಅವಯವ ಅವಯವಿ ಪ್ರಸಂಗವು) ಎಂಬ ಗ್ರಂಥದಿಂದ "ಕಾರ್ಯದ್ರವ್ಯಕ್ಕೆ ಅವಯವದಿಂದ ಅವಿಭಾಗ" ವೆಂಬ ಹೇತುವು ಹೇಳಲ್ಪಟ್ಟಿದೆ ಈ ಯುಕ್ತಿ (ಹೇತು) ಗಳಿಂದ ಜಗತ್ತಿನ ಕಾರಣವು ಪರಮಾಣುವು; ಎನ್ನುವ ಪ್ರಸಂಗವು ಬರುವುದೆಂದು ಇಲ್ಲಿಯ

नन्विदं घट्टकुटीप्रभातमनुसरति । इच्छावत्त्वमात्मन एव न तु जडस्येत्यत्र हि प्रथममनुभवः प्रमाणीकृतः । तत्र च श्रुतिविरोधे चोदितेऽन्तःकरणधर्म आत्मधर्मश्चेति कामस्य द्वैविध्यान्न विरोध

— ಪದಾರ್ಥದೀಪಿಕಾ —

ಇನ್ನು– "ಇದು ಘಟ್ಟ ಕುಟೀ ಪ್ರಭಾತನ್ಯಾಯವನ್ನು ಅನುಸರಿಸುತ್ತದೆ ಏಕೆಂದರೆ ಇಚ್ಛೆಯುಳ್ಳದ್ದಾಗಿರುವುದು ಆತ್ಮನಿಗೇ ವಿನಾಃ ಜಡಕ್ಕಲ್ಲವೆಂಬ ವಿಷಯದಲ್ಲಿ ಮೊದಲು ಅನುಭವವೇ ಪ್ರಮಾಣೀಕರಿಸಲ್ಪಟ್ಟಿತು ಆದರ ಮೇಲೆ ಶ್ರುತಿಯ ವಿರೋಧವನ್ನು ಹೇಳಿದ ಮೇಲೆ, ಅಂತಃಕರಣಧರ್ಮ, ಆತ್ಮಧರ್ಮವೆಂಬುದಾಗಿ

— ವಿಶೇಷಾರ್ಥಪ್ರದೀಪಿಕಾ —

ಭಾವವು ಇಲ್ಲಿ ಅವಿಭಾಗವೆಂದರೆ ಅವಯವ–ಅವಯವಿಗಳ ಸಂಬಂಧವು. ಏಕೆಂದರೆ ಕಾರ್ಯವಾದ ದ್ರವ್ಯವು ಸಾವಯವವಾದುದೆಂದು ನಿಯಮವನ್ನು ಅಂಗೀಕರಿಸಿದ್ದಾರೆ "ಅವಯವಾವಯವಿಪ್ರಸಂಗ" ಶಬ್ದದಿಂದ ಇದೇ ಸಾವಯವತ್ವವನ್ನೇ ಹೇಳಿದ್ದಾರೆ ಯಾವದು ಕಾರ್ಯವೋ ಅದು ಸಾವಯವವು ಯಾವದು ಸಾವಯವವೋ ಅದು ಕಾರ್ಯದ್ರವ್ಯವು ಆದುದರಿಂದ, ಯಾವುದರಲ್ಲಿ ಕಾರ್ಯತ್ವವು ಬರುವುದಿಲ್ಲವೋ - ನಿವೃತ್ತವಾಗುವದೋ ಅದು ಪರಮಾಣುವು ಹೀಗೆ ನಿರವಯವವಾದ ಪರಮಾಣುವು ಸಿದ್ಧಿಸುತ್ತದೆಂದು ಭಾವ ಸೃಷ್ಟಿಕಾಲದಲ್ಲಿ ಈಶ್ವರನ ಕ್ರಿಯೆಯಿಂದ ಎರಡು ಪರಮಾಣುಗಳಿಗಾಗುವ ಸಂಯೋಗದಿಂದ ದ್ವ್ಯಣುಕವು ಹುಟ್ಟುತ್ತದೆ ಅವು ಮೂರರುಗಳ ಸಂಯೋಗದಿಂದ ತ್ರ್ಯಣುಕವು ಹುಟ್ಟುತ್ತದೆ. ಈ ಮುಂತಾದ ಕ್ರಮದಿಂದ ಸ್ಥೂಲವಾದ ಘಟ ಮುಂತಾದ ಕಾರ್ಯವು ಹುಟ್ಟುತ್ತದೆ ಇದರಂತೆ ಪ್ರಳಯಕಾಲದಲ್ಲಿ- ಕಾರ್ಯಕಾರಣ ವಿಭಾಗವನ್ನಾರಂಭಿಸಿ, ಪರಮಾಣುವಿನವರೆಗಿರುವ ವಿಭಾಗಕಾರ್ಯದ ನಾಶವು ಆಗುತ್ತದೆ ಹೀಗೆ ಪರಮಾಣುಗಳಿಗೇ ಕಾರಣತ್ವವು, ಎಂಬುದಾಗಿ ಪರನು (ವೈಶೇಷಿಕ) ಹೇಳುತ್ತಾನೆ ಇದನ್ನು ಅಂಗೀಕರಿಸಬೇಕಾದೀತು ಹೀಗೆ ಭಾವ

"ಘಟ್ಟಕುಟೀಪ್ರಭಾತ"– ಘಟ್ಟವೆಂದರೆ ಸುಂಕದ ಕಟ್ಟೆ ಅಲ್ಲಿ ಕಾಯುವವರಿಗಾಗಿರುವ ಚಿಕ್ಕ ಮನೆಗೆ "ಕುಟೀ" ಎನ್ನುತ್ತಾರೆ ಸುಂಕವನ್ನು ತಪ್ಪಿಸುವುದಕ್ಕೋಸುಗ ಬೇರೆ ದಾರಿಯಿಂದ ಊರನ್ನು ಸೇರಬಯಸಿದ ಕೆಲವು ವರ್ತಕರು ರಾತ್ರಿಯಲ್ಲಿ ಆ ದಾರಿಯನ್ನು ಕಾಣದೆ ಹುಡುಕುತ್ತ–ಅಲೆದು ಸುಂಕದ ಕಟ್ಟೆಯ ಹತ್ತಿರವೇ ಬರುವಷ್ಟರಲ್ಲಿ ಪ್ರಭಾತವಾಯಿತು ಈ ನ್ಯಾಯಕ್ಕೆ "ಘಟ್ಟ ಕುಟೀ ಪ್ರಭಾತ ನ್ಯಾಯ" ವೆನ್ನುತ್ತಾರೆ

द्वैविध्येऽपि तु कामादेः कुत स्वामित्वमात्मनः ॥
साक्षादनुभवारूढं शक्यतेऽपोदितुं क्वचित् ॥

इत्युक्तम्। एवञ्चात्मन एवेच्छावत्त्वं न त्वचेतनस्येति त्यक्तमेवेत्याशङ्कां सिंहावलोकनन्यायेन परिहरति ॥ द्वैविध्येऽपीति । कामादेर्द्वैविध्येऽपि साक्षादनुभवारूढमात्मनः कामादेः स्वामित्वं तु कुतः प्रमाणादपोदितुं शक्यते न कुतोऽपीति योजना । श्रुत्यपेक्षयाऽऽदिपदग्रहणम् । अपो-

ಕಾಮ ಮುಂತಾದುದಕ್ಕೆ ದ್ವೈವಿಧ್ಯವಿದ್ದರೂ ಸಾಕ್ಷಾತ್ತಾಗಿರುವ ಅನುಭವ ದಿಂದ ಸಿದ್ಧವಾದ ಆತ್ಮನ ಕಾಮಾದಿಗಳ ಮೇಲಿನ ಸ್ವಾಮಿತ್ವವನ್ನು ಯಾವ ಪ್ರಮಾ ಣದಿಂದ ಎಲ್ಲಿ ಅಲ್ಲಗಳೆಯಲು ಶಕ್ಯವಾಗುತ್ತದೆ ? (ಯಾವುದರಿಂದಲೂ ಶಕ್ಯವಿಲ್ಲ)

## — ಪದಾರ್ಥದೀಪಿಕಾ —

ಕಾಮದಲ್ಲಿ ದ್ವೈವಿಧ್ಯವಿರುವುದರಿಂದ ಶ್ರುತಿಯ ವಿರೋಧವಿಲ್ಲವೆಂದು ಹೇಳಿದ್ದಾ ಯಿತು. ಆದುದರಿಂದ (ಅಂತೂ- ಹೀಗಂದಮೇಲೆ) ಆತ್ಮನಿಗೆ ಇಚ್ಛೆಯುಳ್ಳದ್ದಾ ಗಿರುವಿಕೆಯೆಂಬ ವಿಷಯವನ್ನು ಬಿಟ್ಟಿದ್ದೇ ಆಯಿತು" ಈ ಆಶಂಕೆಯನ್ನು ಸಿಂಹಾವಲೋಕನ ನ್ಯಾಯದಿಂದ "ದ್ವೈವಿಧ್ಯೇಽಪಿ" ಇತ್ಯಾದಿ ವಚನಗಳಿಂದ ಪರಿಹರಿಸುತ್ತಾರೆ "ಕಾಮಾದೇಃ"= ಕಾಮ ಮುಂತಾದುದಕ್ಕೆ ದ್ವೈವಿಧ್ಯ ವಿದ್ದರೂ, ಸಾಕ್ಷಾತ್ತಾಗಿ ಅನುಭವದಲ್ಲಿ ಬಂದ, ಆತ್ಮನಿಗಿರುವ "ಸ್ವಾಮಿತ್ವಂ"– ಕಾಮಮುಂತಾದುದರ ಮೇಲಿನ ಸ್ವಾಮಿತ್ವವನ್ನಾದರೋ "ಕುತಃ"- ಯಾವ ಪ್ರಮಾಣದಿಂದ, "ಅಪೋದಿತುಂ" ನಿರಾಕರಿಸಲು "ಶಕ್ಯತೇ – ಶಕ್ಯವಾಗುತ್ತದೆ? "ನ ಕುತೋಽಪಿ"– ಯಾವದೇ ಪ್ರಮಾಣದಿಂದಲೂ ಸಾಧ್ಯವಿಲ್ಲ ಹೀಗೆ ಯೋಜನೆ ಯನ್ನು ತಿಳಿಯಬೇಕು ಶ್ರುತಿಯನ್ನನುಸರಿಸಿ "ಆದಿ" ಪದವನ್ನು ಪರಿಗ್ರಹಿ

## — ವಿಶೇಷಾರ್ಥಪ್ರದೀಪಿಕಾ —

ಇಚ್ಛಾರೂಪ ಕಾಮವೊಂದೇ ಇಲ್ಲಿ ಪ್ರಸಕ್ತವಾದುದರಿಂದ 'ಆದಿ" ಪದವನ್ನು (ಕಾಮಾದೇಃ ಎಂಬಲ್ಲಿ) ಗ್ರಹಿಸಿದುದು ಹೇಗೆ? ಏಕೆ? ಎಂಬ ಪ್ರಶ್ನೆಯನ್ನು "ಶ್ರುತ್ಯಪೇಕ್ಷಯಾ" ಎಂಬ ವಚನದಿಂದ ಉತ್ತರಿಸುತ್ತಾರೆ "ಕಾಮಃ ಸಂಕಲ್ಪಃ ವಿಚಿಕಿತ್ಸಾ, ಶ್ರದ್ಧಾ ಅಶ್ರದ್ಧಾ ಧೃತಿರಧೃತಿಃ ಹ್ರೀಃಧೀಃಭೀಃಸರ್ವಂ ಮನ ಏವ" 'ಈ ಶ್ರುತಿಯಲ್ಲಿ ಹೇಳಲ್ಪಟ್ಟ ಸಂಕಲ್ಪ ಮುಂತಾದ ಬೇರೆ ವೃತ್ತಿಗಳ (ಮನಃ ಪರಿಣಾಮ ಪ್ರಭೇದಗಳ) ಅಭಿಪ್ರಾಯದಿಂದ "ಆದಿ" ಪದವನ್ನು ಇಲ್ಲಿ ಗ್ರಹಿಸಿ

दितुमिति सम्प्रसारणं छान्दसम् । अयमत्रोत्तरक्रमः । सत्यं कामो द्विविध आत्मधर्मो मनोवृत्तिश्चेति । तत्र मनोवृत्तिमपि कामं प्रत्यात्मन एव स्वामित्वं न मनसः । अहं कामय इति साक्ष्यनुभवसिद्धत्वात् ।

— ಪದಾರ್ಥದೀಪಿಕಾ —

ಸಿದ್ದು "ಅಪೋದಿತುಂ" ಎಂ ಎಲ್ಲಿ ಸಂಪ್ರಸಾರಣವು ಛಾಂದಸವು ಇಲ್ಲಿ ಹೀಗೆ ಉತ್ತರಕ್ರಮವು, ಆತ್ಮಧರ್ಮರೂಪ, ಮನೋವೃತ್ತಿರೂಪ, ಹೀಗೆ ಕಾಮವು ದ್ವಿವಿಧ ವಾದುದು ಇವೆರಡರಲ್ಲಿ ಮನೋವೃತ್ತಿರೂಪವಾದ ಕಾಮದ ಮೇಲೆಯೂ ಆತ್ಮನಿಗೇ ಸ್ವಾಮಿತ್ವವು ಯುಕ್ತವು, ಹೊರತಾಗಿ ಮನಸ್ಸಿಗಲ್ಲ ಏಕೆಂದರೆ ಅದು "ಅಹಂ ಕಾಮಯೇ" (ನಾನು ಅಪೇಕ್ಷಿಸುತ್ತೇನೆ) ಎಂಬ ಸಾಕ್ಷಿರೂಪ ಅನುಭವ

— ವಿಶೇಷಾರ್ಥಪ್ರದೀಪಿಕಾ —

ರುತ್ತಾರೆ ಅಂದರೆ "ಕಾಮಾದೇಃ"= ಕಾಮ ಸಂಕಲ್ಪ ಮುಂತಾದುದಕ್ಕೆ, ಹೀಗೆ ಅರ್ಥ ಪ್ರಕೃತವಾದವನ್ನು ಅಭಿಪ್ರಾಯದಲ್ಲಿ ತಂದಿಲ್ಲ ಹೀಗ ಭಾವ

ಅಪ+ವದಿತುಂ" "ಅಪವದಿತುಂ" ಎಂದು ಪ್ರಯೋಗವಾಗುವುದರ ಬದ ಲಾಗಿ "ಅಪೋದಿತುಂ" ಎಂಬ ಪ್ರಯೋಗವು ಹೇಗೆ ? ಈ ಪ್ರಶ್ನೆಯನ್ನು ಸಂಪ್ರಸಾರಣಂ ಛಾಂದಸಂ" ಎಂಬ ವಾಕ್ಯದಿಂದ ಪರಿಹರಿಸುತ್ತಾರೆ "ಕಿತ್" (ಕಕಾರೇತ್ಸಂಜ್ಞಕ) ಎನಿಸದಿದ್ದ "ತುಮುನ್" ಪ್ರತ್ಯಯವು ಬಂದಾಗ ಆದ ಸಂಪ್ರಸಾರಣವು ಛಾಂದಸವು. "ಅಪ" ಉಪಸರ್ಗಪೂರ್ವಕವಾದ "ವದ" ಧಾತುವಿನ ಮುಂದೆ "ತುಮುನ್" ಪ್ರತ್ಯಯವು ಬರಲು, ಇಡಾಗಮವಾಗಿ (ವದ ಇದರ ಮುಂದೆ ಇಕಾರಾಗಮವಾಗಿ) ಅನಂತರ "ವದಿತುಂ" ಎಂಬಲ್ಲಿರುವ ವಕಾ ರಕ್ಕೆ ಉಕಾರವೆಂಬ ಸಂಪ್ರಸಾರಣವಾಗಿ, ಗುಣವಾಗಿ "ಅಪೋದಿತುಂ" ಎಂಬು ದಾಗಿ ರೂಪವಾಗಿದೆ "ಬಹುಲಂ ಛಂದಸಿ" ಎಂಬುದಾಗಿ ಸೂತ್ರವಿರುವುದರಿಂದ, ಇದೂ ಛಂದಃ ( ವೇದ) ಸಮಾನವಾದುದರಿಂದ, ಸಂಪ್ರಸಾರಣವಾಗಿದೆಯೆಂದು ತಿಳಿಯಬೇಕು

ಇನ್ನು ಅಂತಃಕರಣ ಪರಿಣಾಮರೂಪ ಕಾಮಸ್ವಾಮಿತ್ವವನ್ನು ತಿಳಿಸುವ ಆ ಅನುಭವವಾವುದು ? ಕಾಮದ ಸ್ವಾಮಿಯು ಆತ್ಮನೆಂದರೆ ಮನಸ್ಸು ವ್ಯರ್ಥ ವಾಗುವದು ಮತ್ತು ಉಪಾದಾನಕಾರಣವಾಗಿಲ್ಲವಾದ್ದರಿಂದ ಆತ್ಮನಿಗೆ ಕಾಮದ ಮೇಲೆ ಸ್ವಾಮಿತ್ವವು ಯುಕ್ತವಲ್ಲ, ಈ ಮುಂತಾದ ಆಶಂಕೆಗಳನ್ನು ಕ್ರಮದಿಂದ ಪರಿಹರಿಸುತ್ತ ಈ ಆಕ್ಷೇಪ ಪರಿಹಾರಕವಾದ ಯೋಜನಗಳನ್ನು ಮೂಲವಾಕ್ಯಕ್ಕೆ "ಅಯಮತ್ರ" ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ

मनसस्तु कामं प्रत्युपादानत्वमेव। यथा हि। क्षेत्रोपादानकानामपि सस्याना कृषीवल एव स्वामी न क्षेत्रं तथैव। न च वाच्यं मनस एव कामस्वामित्वमहं कामय इत्यनुभवस्तु भ्रान्तिर्व्यवहारमात्रं वेति। बाधकप्रमाणाभावात्। न च कौटस्थ्यं बाधकम्। अन्तःकरणस्यैव कामोपादानत्वेनाङ्गीकृतत्वात्। स्वामित्वमात्रेण च कौटस्थ्याविघातात्। अन्यथा कृपणधनस्येवात्मनो वैयर्थ्यापत्तेरिति। तदिदमुक्तं क्वचिदिति।

— ಪದಾರ್ಥದೀಪಿಕಾ —

ದಿಂದ ಸಿದ್ಧವಾಗಿದ ಆದರೆ ಆ ಕಾಮವನ್ನು ಕುರಿತು ಮನಸ್ಸಿಗೆ ಉಪಾದಾನ ತ್ವವೇ! ಸಸ್ಯಗಳಿಗ ಕ್ಷೇತ್ರವು ಉಪಾದಾನ ಕಾರಣವಾಗಿದ್ದರೂ ಕೃಷೀವಲನೇ ಸ್ವಾಮಿಯು ಕ್ಷೇತ್ರವಲ್ಲ ಇದು ಹೇಗೋ ಇದರಂತೆಯೇ! ಇನ್ನು– ಕಾಮದ ಮೇಲಣ ಸ್ವಾಮಿತ್ವವು ಮನಸ್ಸಿಗೇ! "ಅಹಂ ಕಾಮಯೇ" ಎಂಬ ಅನುಭವ ವಾದರೂ ಭ್ರಾಂತಿಯೇ! ಹಾಗು ಇದು ಕೇವಲ ವ್ಯವಹಾರವಷ್ಟೇ! ಹೀಗೆ ಹೇಳ ಬಾರದು ಏಕೆಂದರೆ ಬಾಧಕ ಪ್ರಮಾಣವಿರುವುದಿಲ್ಲ ನಿರ್ವಿಕಾರತೆಯೇ ಬಾಧ ಕವೆಂದು ಬಗಯಬಾರದು ಏಕೆಂದರೆ– ಅಂತಃಕರಣವೇ ಕಾಮದ ಉಪಾದಾನ ವೆಂದು ಅಂಗೀಕರಿಸಲಾಗಿದೆ. ಕೇವಲ ಸ್ವಾಮಿತ್ವ ಮಾತ್ರದಿಂದ ನಿರ್ವಿಕಾರತೆಗೆ ಹಾನಿಯು ಇಲ್ಲ ಹಾಗಿಲ್ಲದಿದ್ದಲ್ಲಿ ಕೃಪಣನ ಧನದ ಹಾಗೆ ಆತ್ಮನಿಗೆ ವೈಫಲ್ಯವು ಬರಬೇಕಾಗುತ್ತದೆ ಈ ಸಂಗತಿಯನ್ನು "ಕ್ವಚಿತ್" ಎಂಬ ವಚನದಿಂದ ಹೇಳಿರುತ್ತಾರೆ.

— ವಿಶೇಷಾರ್ಥಪ್ರದೀಪಿಕಾ —

ಅದು ಭ್ರಾಂತಿ ಅಥವಾ ಕೇವಲ ವ್ಯವಹಾರವೇಕೆ ಎಂಬ ಪ್ರಶ್ನೆಯನ್ನು "ಬಾಧಕ ಪ್ರಮಾಣಾಭಾವಾತ್" ಎಂಬ ವಾಕ್ಯದಿಂದ ಪರಿಹರಿಸುತ್ತಾರೆ ಬಾಧಕ ವಿದೆಯೆಂಬ ಆಶಂಕೆಯನ್ನು "ನ ಚ ಕೌಟಸ್ಥ್ಯಂ" ಈ ವಾಕ್ಯದಿಂದ ಪರಿಹರಿ ಸುತ್ತಾರೆ "ಕೌಟಸ್ಥ್ಯಂ'– 'ನಿರ್ವಿಕಾರೋಽಕ್ಷರಃ ಶುದ್ಧಃ" ಎಂಬಲ್ಲಿ ಹೇಳಿದ ನಿರ್ವಿಕಾರತ್ವವು

"ತದಿದಂ" - ಮನಸ್ಸು ಕಾಮದ ಉಪಾದಾನವು, ಆತ್ಮನು ಕಾಮದ ಸ್ವಾಮಿಯು, ಹಾಗು ಆತ್ಮನು ಕಾಮಸ್ವಾಮಿಯೆಂಬುದು ಭ್ರಮವಲ್ಲ ಮತ್ತು ಕೇವಲ ವ್ಯವಹಾರವೂ ಅಲ್ಲ" ಈ ಸಂಗತಿಯು, "ಕ್ವಚಿತ್" ಎಂಬುದಕ್ಕೆ "ಮನಸು ಉಪಾದಾನಕಾರಣವೆಂಬೀಮುಂತಾದ ವಿಷಯದಲ್ಲಿ" ಎಂಬ ಅರ್ಥವಿರುವುದ ರಿಂದ, ಮೂಲದಿಂದಲೇ ಹೇಳಲ್ಪಟ್ಟಿದೆಯೆಂದು ತಿಳಿಯುವದು

इच्छास्वामित्वमेवोक्तमिच्छावत्त्वं न चापरम् ॥

नन्वस्तु कामस्वामित्वमात्मन एव मा भूच्च मनसः । तथाऽपि पूर्वोत्तरविरोधस्तदवस्थ एव । इच्छास्वामित्वाभावेऽपि यादृशतादृशस्येच्छावत्त्वस्य मनस्यङ्गीकृतत्वादित्यत आह ॥ इच्छेति । अचेतनेच्छा अपगतेत्यादाविच्छास्वामित्वमेवेच्छावत्त्वमुक्तम् । न चापरमिच्छोपादानत्वलक्षणम् । एतदुक्तं भवति । स्यादत्र पूर्वापरविरोधः । यदि यदेवेच्छावत्त्वं प्राङ्मनसो निषिद्धं तदेवात्र पुनरङ्गीक्रियेत । न चैतदस्ति । पूर्वं हीच्छास्वामित्वलक्षणमिच्छावत्त्वमात्मन एव न त्वचेतनस्येत्युक्तम् । तस्यैव कर्तृत्वोपयोगात् । श्रुत्यर्थतया त्विच्छोपादानत्वलक्षणमिच्छावत्त्वमिदानीं मनसोऽभ्युपगम्यत इति कुतो विरोध इति ।

ಇಚ್ಛೆಯ ಮೇಲಿನ ಸ್ವಾಮಿತ್ವವೇ ಇಚ್ಛೆಯುಳ್ಳವನೆಂಬುದರ ಅರ್ಥವೆಂದು ಹೇಳಲ್ಪಟ್ಟಿದೆ. ಬೇರೊಂದು ಅರ್ಥವಿಲ್ಲ

— ಪದಾರ್ಥದೀಪಿಕಾ —

ಇನ್ನು- ಆತ್ಮನಿಗೇ ಕಾಮದ ಮೇಲಿನ ಸ್ವಾಮಿತ್ವವಿರಲಿ ! ಮನಸ್ಸಿಗೆ ಆ ಸ್ವಾಮಿತ್ವವು ಇಲ್ಲದಿದ್ದರೂ ಚಿಂತೆಯಿಲ್ಲ ಆದರೂ ಪೂರ್ವೋತ್ತರಗಳಲ್ಲಿ ವಿರೋಧವು ಹಾಗೆಯೇ ಉಳಿಯುತ್ತದೆ ಏಕೆಂದರೆ ಇಚ್ಛೆಯ ಮೇಲೆ ಸ್ವಾಮಿತ್ವವಿಲ್ಲದಿದ್ದರೂ ಎಂತಹದೋ ಒಂದು ತರಹದ ಇಚ್ಛೆಯುಳ್ಳದ್ದಿರುವುದೆಂಬ ಧರ್ಮವನ್ನು ಮನಸ್ಸಿಗೆ ಅಂಗೀಕರಿಸಲಾಗಿದೆ” ಈ ಆಶಂಕೆಯನ್ನು “ಇಚ್ಛಾ” ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ “ಅಚೇತನೇಚ್ಛಾಽಪಗತಾ” ಇತ್ಯಾದಿ ಕಡೆಯಲ್ಲಿ “ಇಚ್ಛೆಯ ಮೇಲಿನ ಸ್ವಾಮಿತ್ವ”ವೇ ಇಚ್ಛೆಯುಳ್ಳದ್ದಿರುವಿಕೆಯೆಂದು ಹೇಳಲಾಗಿದೆ ಹೊರತು ಇಚ್ಛೆಯನ್ನು ಕುರಿತು ಉಪಾದಾನವಾಗಿರುವುದೆಂಬ ಬೇರೆ ಇಚ್ಛಾವತ್ವವಲ್ಲ ಇಲ್ಲಿ ಹೇಳಲ್ಪಟ್ಟದ್ದು ಇದು- “ಪೂರ್ವದಲ್ಲಿ ಮನಸ್ಸಿಗೆ ನಿರಾಕರಿಸಲ್ಪಟ್ಟ ಇಚ್ಛಾವತ್ವವನ್ನೇ ಇಲ್ಲಿ ಅಂಗೀಕರಿಸಿದ್ದರ ಈ ಪೂರ್ವಾಪರ ವಿರೋಧವು ಬರಬಹುದಿತ್ತು, ಆದರೆ ಹಾಗೆ ಇಲ್ಲ (ಅಂಗೀಕರಿಸಿಲ್ಲ) ಏಕೆಂದರೆ- ಪೂರ್ವದಲ್ಲಿ- ಇಚ್ಛೆಯ ಮೇಲೆ ಸ್ವಾಮಿತ್ವವೆಂಬ ಇಚ್ಛಾವತ್ವವು ಆತ್ಮನಿಗೇ ಇದೆ ಹೊರತು ಅಚೇತನಕ್ಕಿಲ್ಲವೆಂದು ಹೇಳಲ್ಪಟ್ಟಿತ್ತು. ಏಕೆಂದರೆ ಅದೇ ಕರ್ತೃತ್ವಕ್ಕೆ ಉಪ

यद्वा कामस्य द्वैविध्येन मनसोऽपि कामवत्त्वात्कर्तृत्वमुपपत्स्यत इत्यत आह ॥ द्वैविध्येऽपीति । द्वयोः कामवत्त्वेऽपि कामस्वामित्वमात्मन एव न तु मनसः । निरपवादसाक्ष्यनुभवसिद्धत्वात् । मनसस्तु कामोपादानत्वमेवेति । ततः किमित्यत आह ॥ इच्छेति । इच्छास्वामित्वलक्षणमेवेच्छावत्त्वं प्राक् कर्तृत्वोपयुक्तमुक्तम् । न पुनरिच्छोपादानत्वलक्षणम् । यो हीच्छति स प्रयतते न तु यदिच्छा भवति

— ಪದಾರ್ಥದೀಪಿಕಾ —

ಯುಕ್ತವಾದುದು ಶ್ರುತಿಯ ಅರ್ಥವಾದುದರಿಂದ, ಇಚ್ಛೆಯ ಉಪಾದಾನವಾಗಿರುವುದೆಂಬ ಇಚ್ಛಾವತ್ತ್ವವನ್ನು ಮನಸ್ಸಿಗೆ ಅಂಗೀಕರಿಸಲಾಗುತ್ತದೆ ಅದುದರಿಂದ ವಿರೋಧವೆಲ್ಲಿಯದು ? ಎಂಬುದು

ಅಥವಾ- ಕಾಮದಲ್ಲಿ ದ್ವೈವಿಧ್ಯವಿದ್ದುದರಿಂದ ಮನಸ್ಸಿಗೂ ಕಾಮವತ್ತ್ವವಿದ್ದುದರಿಂದ ಕರ್ತೃತ್ವವು ಯುಕ್ತವಾಗುವದು. ಈ ಆಶಂಕೆಯನ್ನು "ದ್ವೈವಿಧ್ಯೇಽಪಿ" ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ ಎರಡಕ್ಕೂ ಕಾಮವತ್ತ್ವವಿದ್ದರೂ ಕಾಮದ ಮೇಲಿನ ಸ್ವಾಮಿತ್ವವು ಆತ್ಮನಿಗೇ ವಿನಾ ಮನಸ್ಸಿಗಲ್ಲ ಏಕೆಂದರೆ ಇದು ನಿರಪವಾದವಾದ ಸಾಕ್ಷ್ಯನುಭವದಿಂದ ಸಿದ್ಧವಾಗಿದೆ ಮನಸ್ಸಿಗಾದರೋ ಕಾಮವನ್ನು ಕುರಿತು ಉಪಾದಾನತ್ವವೇ ! ಹೀಗೆ ಅರ್ಥ ಇದರಿಂದ ಆದುದೇನು? ಈ ಆಶಂಕೆಯನ್ನು "ಇಚ್ಛಾ" ಇತ್ಯಾದಿ ವಚನದಿಂದ ಹೇಳುತ್ತಾರೆ. ಕರ್ತೃತ್ವಕ್ಕೆ ಉಪಯುಕ್ತವಾದ ಇಚ್ಛೆಯ ಮೇಲಿನ ಸ್ವಾಮಿತ್ವವೆಂಬ ಇಚ್ಛಾವತ್ತ್ವವೇ ಪೂರ್ವದಲ್ಲಿ ಹೇಳಲ್ಪಟ್ಟಿತ್ತು. ಆದರೆ ಇಚ್ಛೆಯ ಉಪಾದಾನವಾಗಿರುವುದೆಂಬ ಇಚ್ಛಾವತ್ತ್ವವು ಹೇಳಲ್ಪಟ್ಟಿದ್ದಿಲ್ಲ ಏಕೆಂದರೆ ಯಾವನು ಇಚ್ಛಿಸುತ್ತಾನೋ ಅವನು

— ವಿಶೇಷಾರ್ಥಪ್ರದೀಪಿಕಾ —

ನೇರ ಹಿಂದಿನಗ್ರಂಥದಿಂದ ಸಂಗತವಾಗುವ ಹಾಗೆ ಯೋಜನೆಯನ್ನು "ಯದ್ವಾ ಕಾಮಸ್ಯ" ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ "ಸಾಕ್ಷ್ಯನುಭವಸಿದ್ಧತ್ವಾತ್" –ಅಹಂ ಕಾಮಯೇ" (ನಾನು ಇಚ್ಛಿಸುತ್ತೇನೆ)ಎಂಬ ಸಾಕ್ಷ್ಯನುಭವಸಿದ್ಧವಾದುದರಿಂದ "ಇದು ಭ್ರಮವಲ್ಲ. ವಾಗು ಕೇವಲ ವ್ಯವಹಾರವಷ್ಟೇ ಅಲ್ಲ. ಏಕೆಂದರೆ ಬಾಧಕವಿಲ್ಲ" ಈಅಭಿಪ್ರಾಯವನ್ನು ತಿಳಿಸಲು "ನಿರಪವಾದ" ಎಂಬ ವಿಶೇಷಣವನ್ನು ಅನುಭವದಲ್ಲಿ ಸೇರಿಸಿರುತ್ತಾರೆ. ಕಾಮಸ್ವಾಮಿತ್ವವೆಂಬ ಇಚ್ಛೆಯು ಆತ್ಮನ ನಿರ್ವಿಕಾರತ್ವವನ್ನು ವಿಘಾತಿಸುವುದಿಲ್ಲವಾದುದರಿಂದ ನಿರ್ವಿಕಾರತ್ವವು ಬಾಧಕವಾಗುವುದಿಲ್ಲವೆಂಬ ಭಾವವು ಇದರಲ್ಲಿ ಅಡಕವಾಗಿದೆ

तदिति । तस्मादिच्छास्वामित्वाच्चेतनस्यैव कर्तृत्वं नाचेतनस्य । तस्येच्छोपादानत्वेऽपीच्छास्वामित्वाभावादिति ।

स्यादेतत् । स्वं नाम तद्भवति यद्यथेष्टविनियोगयोग्यम् । यथा गवादि । स्वामी च स उच्यते यो यथेष्टविनियोक्ता । न चेच्छात्मनोरेतदस्ति । यस्मादास्तिककामुकस्य निषिद्धेच्छां नियच्छतः अपि (इच्छा) साऽऽविर्भवति । प्रयतमानस्यापि विहितेच्छा नोदेति। तत्कथमिच्छास्वामित्वमात्मनः स्यादिति चेत् । किमिच्छा

— ಪದಾರ್ಥದೀಪಿಕಾ —

ಪ್ರಯತ್ನಿಸುತ್ತಾನೆ ಆದರೆ ಇಚ್ಛೆಯಿಂದ ಯಾವದು ಅಭಿನ್ನವಾದುದೋ ಅದು ಇಚ್ಛೆಯುಳ್ಳದ್ದಾಗುವುದಿಲ್ಲ ( ಇಚ್ಛೆಯ ಬಗ್ಗೆ ಪ್ರಯತ್ನವುಳ್ಳದ್ದಾಗುವುದಿಲ್ಲ ) ಹೀಗೆ ಅರ್ಥ ಆದುದರಿಂದ ಇಚ್ಛೆಯ ಮೇಲೆ ಸ್ವಾಮಿತ್ವವಿದ್ದುದರಿಂದ ಚೇತನಕ್ಕೇ ಇಚ್ಛೆಯನ್ನು ಕುರಿತು ಕರ್ತೃತ್ವವು ಹೊರತು ಅಚೇತನಕ್ಕಲ್ಲ ಏಕೆಂದರೆ ಅಚೇತನಕ್ಕೆ ಇಚ್ಛೆಯನ್ನು ಕುರಿತು ಉಪಾದಾನ ಕಾರಣತ್ವವಿದ್ದರೂ ಇಚ್ಛೆಯ ಮೇಲೆ ಸ್ವಾಮಿತ್ವವು ಇರುವದಿಲ್ಲ ಹೀಗೆ ಅರ್ಥ

ಇದು ಇರಲಿ ಯಾವದು ಯಥೇಷ್ಟವಾಗಿ ವಿನಿಯೋಗಕ್ಕೆ ಯೋಗ್ಯವೋ ಅದೇ "ಸ್ವ" ಎಂದೆನಿಸುತ್ತದೆ ಉದಾ— ಗೋ ಮುಂತಾದುದು. ಮತ್ತು ಯಥೇಷ್ಟವಾಗಿ ವಿನಿಯೋಗಿಸುವವನು ಯಾವನೋ ಅವನು "ಸ್ವಾಮಿ"ಯೆಂದೆನಿಸುತ್ತಾನೆ ಆದರೆ ಇಚ್ಛೆ-ಆತ್ಮ, ಇವರಲ್ಲಿ ಈ ಸ್ವ-ಸ್ವಾಮಿ ಭಾವ ಸಂಬಂಧವು ಇರುವುದಿಲ್ಲ ಏಕೆಂದರೆ ನಿಷಿದ್ಧವಿಷಯದ ಇಚ್ಛೆಯನ್ನು ನಿಯಂತ್ರಿಸುವ ಆಸ್ತಿಕ ಕಾಮುಕನಿಗೂ ಸಹ ಇಚ್ಛೆಯು ಆವಿರ್ಭವಿಸುತ್ತದ ಪ್ರಯತ್ನ ಮಾಡುವವನಿಗೂ ಸಹ ವಿಹಿತವಾದುದರ ಬಗ್ಗೆ ಇಚ್ಛೆಯು ಉತ್ಪನ್ನವಾಗುವುದಿಲ್ಲ ಆದುದರಿಂದ, ಆತ್ಮನಿಗೆ ಇಚ್ಛಾಸ್ವಾಮಿತ್ವವು ಹೇಗೆ? ಹೀಗೆ ಶಂಕಿಸಿದರೆ— ಆತ್ಮನಿಗ ಇಚ್ಛೆಯು

— ವಿಶೇಷಾರ್ಥಪ್ರದೀಪಿಕಾ —

ಇಚ್ಛಾಸ್ವಾಮಿತ್ವವೆಂಬ ಇಚ್ಛಾವತ್ವವು ಕರ್ತೃತ್ವಕ್ಕೆ ಉಪಯೋಗಿಯೆಂಬುದನ್ನು "ಯೋ ಹಿ" ಇತ್ಯಾದಿವಾಕ್ಯದಿಂದ ತೋರಿಸುತ್ತಾರೆ

ಆತ್ಮ ಇಚ್ಛೆ ಇವೆರಡರಲ್ಲಿ ಸ್ವಸ್ವಾಮಿಭಾವಸಂಬಂಧವಿಲ್ಲವೆಂಬ ಆಶಂಕೆಯನ್ನು "ಸ್ಯಾದೇತತ್" ಇತ್ಯಾದಿವಾಕ್ಯಗಳಿಂದ ತೋರಿಸಿ ಅದನ್ನು "ಕಿಂ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಇಚ್ಛೆಯ ಮೇಲಿನ ಸ್ವಾಮಿತ್ವವನ್ನು ವಿಷಯೋ

किञ्चित्तद्वशगत्वेऽपि स्वामित्वं लोकवद्भवेत् ॥

आत्मनः सर्वथाऽपि वशा न भवतीत्युच्यते । उत किञ्चिद्वशत्वमङ्गीक्रियते । नाद्यः । अनुभवविरोधात् । इच्छति देवदत्त इत्यादिव्यवहारविरहप्रसङ्गाच्च । द्वितीये तु सिद्धं स्वामित्वमित्याह ॥ किञ्चिदिति । प्रबलविरोधिवशादत्यन्तवशत्वाभावेऽपीच्छायाः किञ्चिदात्मवशत्वमात्रेणापि तां प्रत्यात्मनः स्वामित्वं भवेदे (वत्ये) व । कथम् । यथा अत्यन्तमवशायामपि गवि किञ्चिद्वशत्वमात्रेण देवदत्तस्वामित्वं लोके दृष्टं तथैव । अन्यथा तदपि न स्यादिति ।

ಕಿಂಚಿದಂಶದಿಂದ ಆವನ ವಶದಲ್ಲಿದ್ದರೆ, ಆ ಕಾಮಾದಿಗಳ ಮೇಲಿನ ಸ್ವಾಮಿತ್ವವು ಲೋಕದಂತೆ ಇದ್ದೇ ಇರುತ್ತದೆ

— ಪದಾರ್ಥದೀಪಿಕಾ —

ಸರ್ವಥಾ ವಶವಾಗುವುದಿಲ್ಲವೆಂದು ಹೇಳುವಿರೋ? ಇಲ್ಲವೆ ಸಲ್ಪ ವಶವಾಗುವುದೆಂದು ಅಂಗೀಕರಿಸುವಿರೋ? ಹೀಗೆ ಪ್ರಶ್ನೆ. ಮೊದಲನೆಯ ಪಕ್ಷವು ಯುಕ್ತವಲ್ಲ. ಏಕೆಂದರೆ ಅನುಭವವಿರೋಧವು ಬರುತ್ತದೆ ಮತ್ತು "ದೇವದತ್ತನು ಇಚ್ಛಿಸುತ್ತಾನೆ" ಎಂಬ ವ್ಯವಹಾರದ ಲೋಪವಾಗುವ ಪ್ರಸಂಗವು ಬರುತ್ತದೆ. ಎರಡನೆಯ ಪಕ್ಷದಲ್ಲಿಯೋ ಸ್ವಾಮಿತ್ವವು ಸಿದ್ಧಿಸುತ್ತದೆಂಬುದಾಗಿ 'ಕಿಂಚಿತ್' ಇತ್ಯಾದಿ ವಚನದಿಂದ ಹೇಳುತ್ತಾರೆ. ಪ್ರಬಲವಿರೋಧಿಯ ವಶದಿಂದ, ಅತ್ಯಂತ ವಶವಾಗದಿದ್ದರೂ ಇಚ್ಛೆಯು ಸ್ವಲ್ಪ ಆತ್ಮವಶವಾಗಿದೆ. ಇಷ್ಟು ಮಾತ್ರದಿಂದಲೂ ಇಚ್ಛೆಯ ಮೇಲೆ ಆತ್ಮನಿಗೆ ಸ್ವಾಮಿತ್ವವು ಬಂದೇ ಬರುತ್ತದೆ. ಹೇಗೆ? ಎಂದರೆ "ಅತ್ಯಂತ ಆತ್ಮವಶವಾಗದಿದ್ದರೂ ಕಿಂಚಿತ್ತಾಗಿ ಆತ್ಮವಶವಾದುದರಿಂದ ದೇವದತ್ತ

— ವಿಶೇಷಾರ್ಥಪ್ರದೀಪಿಕಾ —

ಕರಿಸುವ ಹಿಂದೆ ಹೇಳಿದ ಅನುಭವದ ಬಗ್ಗೆ ವಿವಾದ ಹೊಂದಿರುವವನ್ನು ಕುರಿತು "ಇಚ್ಛತಿ ದೇವದತ್ತಃ" ಇತ್ಯಾದಿ ವಾಕ್ಯವನ್ನು ಉತ್ತರವಾಗಿ ಹೇಳಿದ್ದಾರೆ "ಇಚ್ಛತಿ" (ಇಚ್ಛಿಸುತ್ತಾನೆ) ಎಂಬಲ್ಲಿ "ಸ್ವತಂತ್ರಃ ಕರ್ತಾ" ಎಂಬ ಸೂತ್ರದಲ್ಲಿ ಹೇಳಿದ, ಕರ್ತ್ರರ್ಥಕ ಲಕಾರ ವ್ಯವಹಾರವು–ಇಚ್ಛಾಸ್ವಾಮಿತ್ವದ ವ್ಯವಹಾರ ರೂಪವಾದುದು. ಆದುದರಿಂದ, ಇಚ್ಛಾಸ್ವಾಮಿತ್ವವನ್ನು ಒಪ್ಪದಿದ್ದರೆ ವ್ಯವಹಾರ ವಿಲ್ಲವಾಗಿ ಆ ಪ್ರಯೋಗಗಳಾಗದಿರಲಿ! ಹೀಗೆ ಭಾವ

नन्वेवं सत्येकं सन्धि ( दि ) त्सतोऽ ( परं प्रच्य ) न्यचच्यवत ईत्यापन्नम् । अचेतनस्य कर्तृत्वं निराकर्तुमात्मन एवेच्छास्वामित्वं न तु मनस इति समर्थितम् । तर्हीश्वरस्यापि कुलालादिमनोवृत्तीच्छां प्रति स्वामित्वं नास्तीति घटादिकर्तृत्वं न स्यात् । तथा चेतरव्यपदेशा-

— ಪದಾರ್ಥದೀಪಿಕಾ —

ನಿಗೆ ಗೋವಿನ ಮೇಲೆ ಹೇಗೆ ಸ್ವಾತಂತ್ರ್ಯವೋ ಹಾಗೆ ಲೋಕದಲ್ಲಿ ಕಂಡಿದೆಯೋ ಹೀಗೆ," ಎಂದು ಹೇಳುವೆವು ಇಲ್ಲದಿದ್ದಲ್ಲಿ ಅದುವೂ ಆಗದಿರಲಿ! ಹೀಗೆ ಅರ್ಥ

ಇನ್ನು– ಒಂದನ್ನು ಸಂಧಿಸ(ಜೋಡಿಸ)ಲು ಹೊರಟವನಿಗ ಇನ್ನೊಂದು ಚ್ಯುತವಾಗುವುದೆಂಬ ನ್ಯಾಯವು ಪ್ರಾಪ್ತವಾಗುತ್ತದೆ ಏಕೆಂದರೆ ಅಚೇತನದ ಕರ್ತೃತ್ವವನ್ನು ನಿರಾಕರಿಸಲು, 'ಆತ್ಮನಿಗೇ ಇಚ್ಛೆಯ ಮೇಲಿನ ಸ್ವಾಮಿತ್ವವು, ಆದರೆ ಮನಸ್ಸಿಗೆ ಇಲ್ಲ" ಎಂಬುದನ್ನು ಸಮರ್ಥಿಸಲಾಯಿತು ಹಾಗಾದಲ್ಲಿ ಈಶ್ವರನಿಗೂ ಕುಂಬಾರ ಮುಂತಾದವರ ಮನೋವೃತ್ತಿರೂಪವಾದ ಇಚ್ಛೆಯನ್ನು ಕುರಿತು ಸ್ವಾಮಿತ್ವವಿಲ್ಲವಾದುದರಿಂದ ಘಟಾದಿಕರ್ತೃತ್ವವು ಇಲ್ಲವಾಗಲಿ! ಆದುದರಿಂದ, "ಇತರ ವ್ಯಪದೇಶಾತ್" ಎಂಬ ಅಧಿಕರಣದಿಂದ ವಿರೋಧವು, ಈ

— ವಿಶೇಷಾರ್ಥಪ್ರದೀಪಿಕಾ —

"ಲೋಕವತ್" ಎಂಬುದನ್ನು, ಪ್ರಶ್ನಪೂರ್ವಕವಾಗಿ "ಕಥಂ" ಇತ್ಯಾದಿ ವಾಕ್ಯದಿಂದ ವಿಶದಿಸುತ್ತಾರೆ 'ಅನ್ಯಥಾ"– ಕಿಂಚಿತ್ ವಶವಾಗಿರುವುದರಿಂದ ಮಾತ್ರವೇ ಸ್ವಾಮಿತ್ವವಿಲ್ಲವೆಂದಾದರೆ ದೇವದತ್ತನಿಗೆ ಗೋವಿನ ಮೇಲೆ ಸ್ವಾಮಿತ್ವವು ಇಲ್ಲವಾಗಲಿ! ಹೀಗೆ ಭಾವ

ಇಚ್ಛೆಯು ಕಿಂಚಿತ್ತಾಗಿ ಆತ್ಮವಶವಾಗಿರುವುದು, ಇಷ್ಟು ಮಾತ್ರದಿಂದ ಆತ್ಮನಿಗೆ ಇಚ್ಛೆಯ ಮೇಲೆ ಸ್ವಾಮಿತ್ವವಿದೆಯೆಂಬುದು ಸಿದ್ಧಿಸುವುದರಿಂದ, ಪ್ರಕೃತವಾದ ಆಕ್ಷೇಪದ ಪರಿಹಾರವು ದೊರೆಯುತ್ತದೆ ಆದುದರಿಂದ, ಈಶ್ವರನಿಗೆ ಸರ್ವಾತ್ಮನಾ ( ಸರ್ವ ರೀತಿಯಿಂದ ) ಕಾಮಾದಿಗಳ ಮೇಲಿನ ಸ್ವಾಮಿತ್ವವನ್ನು ಹೇಳುವುದು ಬೇಕಾಗುವುದಿಲ್ಲ ಹೀಗೆ ಆಶಂಕೆಯು ಬಂದರೆ– "ಈಶ್ವರನಿಗೆ ಘಟಾದಿಗಳ ಕರ್ತೃತ್ವವನ್ನು ಸಮರ್ಥನ ಮಾಡುವುದರಿಂದ ಅದು ವ್ಯರ್ಥವಲ್ಲ"ವೆಂಬ ಉತ್ತರವನ್ನು ಹೇಳುವ ಅಭಿಪ್ರಾಯದಿಂದ, ಹೀಗೆ ಅರ್ಥ ಬರುವಂತೆ ಮೂಲದ ಯೋಜನೆಯನ್ನು ತೋರಿಸಲು ಮೊದಲು ಕರ್ತೃತ್ವಾನುಪಪತ್ತಿಯ ಆಶಂಕೆಯನ್ನು "ನನು" ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ ಕುಲಾಲ ಮುಂತಾದವರ ಮನೋವೃತ್ತಿರೂಪ ಇಚ್ಛೆಯ ಮೇಲೆ ಕುಲಾಲಾದಿಗಳಿಗೇ ಸ್ವಾಮಿತ್ವವು ಇರು

दित्यधिकरणविरोध इत्यत आह ॥ सर्वात्मेति । यदा जीवस्यापि कामादिस्वाम्यं तदा सर्वात्मना तन्त्रमधीनं कामादि यस्यासौ तथोक्तः।

— ಪದಾರ್ಥದೀಪಿಕಾ —

ಆಶಂಕೆಯನ್ನು "ಸರ್ವಾತ್ಮ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ ಯಾವಾಗ ಜೀವನಿಗೂ ಸಹ ಕಾಮಾದಿಗಳ ಮೇಲೆ ಸ್ವಾಮಿತ್ವವೋ ಆಗ, 'ಸರ್ವಾತ್ಮತಂತ್ರ ಕಾಮಾದೇಃ"- ಸರ್ವಾತ್ಮಕವಾಗಿ ( ಸರ್ವ ರೀತಿಯಿಂದಲೂ ) ಸ್ವಾಧೀನವಾದ

— ವಿಶೇಷಾರ್ಥಪ್ರದೀಪಿಕಾ —

ವುದರಿಂದ, ಈಶ್ವರನಿಗೆ ಆ ಸ್ವಾಮಿತ್ವವಿಲ್ಲವೆಂಬ ಅಭಿಪ್ರಾಯವು "ಸ್ವಾಮಿತ್ವಂ ನಾಸ್ತಿ" ಎಂಬಲ್ಲಿ ಇರುತ್ತದೆ ಈಶ್ವರನಿಗೆ ಘಟಾದಿ ಕರ್ತೃತ್ವವು ಇಲ್ಲವಾಗ ಲೆಂಬುದಿಷ್ಟೇ ಅಲ್ಲ ಕುಲಾಲ ಮುಂತಾದವರಿಗೇ ಕರ್ತೃತ್ವವು ಬರಲಿ ! ಏಕೆಂದರೆ- ಘಟ ಮುಂತಾದುದರ ಕೃತಿಯ ಬಗೆಗಿನ ಇಚ್ಛೆಯ ಮೇಲಿನ ಸ್ವಾಮಿತ್ವವೇ ಘಟ ದಿಗಳ ಕರ್ತೃತ್ವದಲ್ಲಿ ಉಪಯೋಗಿಯಾಗಿದೆ ಅದು ಕುಲಾಲಾದಿಗಳಲ್ಲಿ ಮಾತ್ರ ಇರುತ್ತದ ಹೀಗ "ಘಟಾದಿ ಕರ್ತೃತ್ವಂ ನ ಸ್ಯಾತ್" ಎಂಬಲ್ಲಿ ಭಾವ ವಿದ ಇವೆರಡೂ ವಿಷಯಗಳು ಇಷ್ಟವೆಂಬ ಅಭಿಪ್ರಾಯವನ್ನು "ತಥಾ ಚ" ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ ಇತರವ್ಯಪದೇಶಾಧಿಕರಣದಲ್ಲಿ ಘಟಾದಿಗಳಿಗೂ ಈಶ್ವರನೇ ಮುಖ್ಯ ಕರ್ತೃವೆಂದು ಹೇಳಿದುದರಿಂದ ವಿರೋಧವು ಹೀಗ ತಿಳಿಯಬೇಕು ಜನ್ಮಾಧಿಕರಣದಲ್ಲ ಹೇಳಿದ ಸರ್ವ ಕರ್ತೃತ್ವವು ಈಶ್ವರನಿಗ ಯುಕ್ತವೋ ಅಯುಕ್ತವೋ ಎಂಬ ಸಂಶಯವು ಬರಲು- ಅನುಭವವಿರೋಧವು ಬರುವುದರಿಂದ ಮಹದಾದಿ ಕಾರ್ಯಕರ್ತೃತ್ವವು ಜೀವನಿಗೆ ಯುಕ್ತವೆನಿಸುವುದಿಲ್ಲವಾದುದರಿಂದ ಈಶ್ವರನಿಗೇ ಮಹದಾದಿ ಕರ್ತೃತ್ವವಿದ್ದರೂ, ಘಟಾದಿಗಳಿಗೆ ಕುಲಾಲ ಮುಂತಾದವರಿಗೇ ಕರ್ತೃವು ಅನುಭವಸಿದ್ಧವಾದುದರಿಂದ, ಈಶ್ವರನಿಗೆ ಅವುಗಳ ಕರ್ತೃತ್ವವನ್ನು ಅಂಗೀಕರಿಸಿದರೆ ಗೌರವವು ಬರುವದರಿಂದ, ಈಶ್ವರನಿಗೆ ಘಟಾದಿ ಕರ್ತೃತ್ವವು ಅಯುಕ್ತವಾದುದರಿಂದ ಸರ್ವಕರ್ತೃತ್ವವೂ ಅಯುಕ್ತವೆಂಬ ಪೂರ್ವಪಕ್ಷವು ಬರಲು, ಜೀವನಿಗೇ ಘಟಾದಿಗಳ ಮೇಲೆ ಸ್ವತಂತ್ರ ಕರ್ತೃತ್ವವನ್ನು ಅಂಗೀಕರಿಸಿದರೆ ಹಿತಾಕರಣ, ಅಹಿತಕರಣ, ಕೃತ್ಸ್ನಪ್ರಸಕ್ತಿ ಮುಂತಾದ ದೋಷಗಳು ಬರುವುದರಿಂದ, ಅಚಿಂತ್ಯಶಕ್ತಿಯುಳ್ಳ ಭಗವಾನ್ ಈಶ್ವರನೇ ಘಟಾದಿ ಕಾರ್ಯಗಳಿಗೂ ಸಹ ಅನನ್ಯಾಧೀನ (ಸ್ವತಂತ್ರ) ಕರ್ತೃವು, ಜೀವನಲ್ಲ, ಆದುದರಿಂದ ಈಶ್ವರನಿಗೆ ಸರ್ವಕರ್ತೃತ್ವವು ಯುಕ್ತವೆಂದು ಸಿದ್ಧಾಂತವು ಹೇಳಲ್ಪಟ್ಟಿದೆ

सर्वात्मतन्त्रकामादेः किमुतैव परेशितुः ॥

सर्वेषामात्मना तन्त्रं साधनं यः कामस्तस्यादिः कारणं तस्य परेशितुः कामस्वामित्वं किमुतैव वक्तव्यम् । एतदुक्तं भवति । जीवेश्वरौ द्वावपि

ಜೀವನಿಗೂ ಕಾಮಾದಿಗಳ ಮೇಲೆ ಸ್ವಾಮಿತ್ವವಿರುವಾಗ ಸರ್ವರೀತಿಗಳಿಂದಲೂ ಕಾಮಾದಿಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡ, ಸರ್ವಆತ್ಮರ ಸಾಧನವಾದ ಕಾಮ (ಇಚ್ಛಾ) ಮುಂತಾದುದರ ಕಾರಣನಾದ ಆ ಪರಮಾತ್ಮನಿಗೆ ಕಾಮಾದಿಗಳ ಮೇಲೆ ಸ್ವಾಮಿತ್ವವಿದೆಯೆಂಬುದನ್ನೇನು ಹೇಳತಕ್ಕದ್ದು

— ಪದಾರ್ಥದೀಪಿಕಾ —

ಕಾಮ ಮುಂತಾದುದನ್ನುಳ್ಳ ಅಥವಾ 'ಸರ್ವೇಷಾಂ"- ಸರ್ವ ಜೀವರುಗಳಿಗೆ "ತಂತ್ರಂ" ಘಟಾದಿ ಪ್ರವೃತ್ತಿಯ ಕಾರಣವಾದ ಕಾಮವನ್ನು "ಆದೇಃ" ಕುರಿತು ಕಾರಣನಾದ ಪರಮೇಶ್ವರನಿಗೆ ಕಾಮಸ್ವಾಮಿತ್ವವಿದೆಯೆಂಬುದನ್ನು ಏನೆಂದು ಹೇಳಬೇಕು ? ಇಲ್ಲಿ ಹೇಳಲ್ಪಟ್ಟದ್ದು ಇದು— "ಜೀವೇಶ್ವರರಿಬ್ಬರೂ ಶರೀರದಲ್ಲಿ

— ವಿಶೇಷಾರ್ಥಪ್ರದೀಪಿಕಾ --

"ಸರ್ವಾತ್ಮನಾ"-ಅನ್ಯ ನಿರಪೇಕ್ಷೆಯಿಂದ.(ಇನ್ನೊಬ್ಬರ ಅಪೇಕ್ಷೆ-ಅವಲಂಬನೆಗಳಿಲ್ಲದೆ) ಪ್ರಸಕ್ತಿಯಿರುವುದರಿಂದ ಜೀವರ ಅಧೀನವಾದ, ಘಟಾದಿ ಪ್ರತಿಯೊಂದು ಕಾರ್ಯದಲ್ಲಿಯೂ ಕಾರಣತ್ವವನ್ನು ತೋರಿಸುವಂತೆ ವ್ಯಾಖ್ಯಾನವನ್ನು "ಸರ್ವೇಷಾಂ" ಇತ್ಯಾದಿ ವಾಕ್ಯದಿಂದ ಮಾಡುತ್ತಾರೆ " ಸಾಧನಂ " — ಘಟಾದಿ ಕಾರ್ಯಸಾಧನವಾದ ಕುಲಾಲ ಮುಂತಾದವರ ಶರೀರದಲ್ಲಿ ಇಲ್ಲದ ಈಶ್ವರನಿಗೆ ಅವರ ಮನೋವೃತ್ತಿರೂಪವಾದ ಕಾಮಾದಿ ಸ್ವಾಮಿತ್ವವು ಹೇಗೆ ? ಆದುದರಿಂದ ಘಟಾದಿ ಕರ್ತೃತ್ವವೂ ಹೇಗೆ ? ಕುಲಾಲಾದಿಗಳ ಶರೀರದಲ್ಲಿ ಇರುವುದರಿಂದ, ಸ್ವಾಮಿಯಾದುದರಿಂದ ಘಟಾದಿ ಕರ್ತೃತ್ವವು ಬರಬಹುದಾದರೂ ಘಟಾದಿಗಳಲ್ಲಿ ಈಶ್ವರನಿಗೇ ಮುಖ್ಯ ಕರ್ತೃತ್ವವು ಹೇಗೆ ? ಕುಲಾಲ, ಈಶ್ವರ—ಇವರಿಬ್ಬರಿಗೂ ಘಟಾದಿಗಳ ಕರ್ತೃತ್ವವು ಮುಖ್ಯವು. ಏಕೆಂದರೆ- ಕಾಮ (ಇಚ್ಛಾ) ಸ್ವಾಮಿತ್ವವು ಇಬ್ಬರಿಗೂ ಉಂಟು ಮತ್ತು ಅದರಲ್ಲಿ ವಿಶೇಷವಿಲ್ಲ ತನ್ಮೂಲಕವಾದ ಕರ್ತೃತ್ವವೂ ಸಹ ಇಬ್ಬರಲ್ಲಿಯೂ ಏಕರೂಪವಾಗಿರುವುದೇ ಯುಕ್ತಿಯುಕ್ತವಾದುದರಿಂದ, ಇತರವ್ಯಪದೇಶಾಧಿಕರಣವಿರೋಧದ ಪರಿಹಾರವಾಗಲಿಲ್ಲ ಈ ಆಶಂಕೆಗಳ ಪರಿಹಾರಕ್ಕಾಗಿ, ವಿಶಿಷ್ಟ ಅಭಿಪ್ರಾಯವನ್ನು "ಏತದುಕ್ತಂ" ಇತ್ಯಾದಿ ವಾಕ್ಯಗಳಿಂದ ಹೇಳುತ್ತಾರೆ.

ಈ ಅರ್ಥದಲ್ಲಿ ಸಮ್ಮತಿಯನ್ನು " ಯಥೋಕ್ತಂ " ಇತ್ಯಾದಿ ವಾಕ್ಯದಿಂದ

शरीरमधितिष्ठतः । तत्रेश्वरोऽन्तःकरणं स्पष्टं दृष्ट्वा तत्र ज्ञानेच्छाप्रयत्नरूपा वृत्तीः स्वेच्छाज्ञानप्रयत्नैरुत्पाद्य बाह्यकरणानि चाधिष्ठाय घटाद्युत्पादयति । जीवस्तु तद्दत्तस्वाम्योऽवतिष्ठते । यथोक्तं बुद्धिर्ज्ञानमित्यादि । तस्मादीश्वरस्यैव मुख्यं स्वाम्यं कर्तृत्वं च । जीवस्य त्वमुख्यमेवेति । तथा चोक्तम् । स्वस्वामिभावो ध्रुव एष यत्र तद्युच्यतेऽसाविति कृत्ययोग इति ।

## — ಪದಾರ್ಥದೀಪಿಕಾ —

ಅಧಿಷ್ಠಿಸಿರುತ್ತಾರೆ ಅದರಲ್ಲಿ ಈಶ್ವರನು ಅಂತಃಕರಣವನ್ನು ಸ್ಪಷ್ಟವಾಗಿ ನೋಡಿ, ಅದರಲ್ಲಿ ಜ್ಞಾನ ಇಚ್ಛಾಪ್ರಯತ್ನರೂಪವಾದ ವೃತ್ತಿಗಳನ್ನು, ತನ್ನ ಇಚ್ಛಾಜ್ಞಾನ ಪ್ರಯತ್ನಗಳಿಂದ ಹುಟ್ಟಿಸಿ, ಬಾಹ್ಯ (ಹೊರಗಿರುವ) ಸಾಧನಗಳನ್ನು ಅಧಿಷ್ಠಿಸಿ, ಘಟ ಮುಂತಾದುದನ್ನು ಉತ್ಪಾದಿಸುತ್ತಾನ ಜೀವನಾದರೋ ಈಶ್ವರನಿಂದ ಕೊಡಲ್ಪಟ್ಟ ಸ್ವಾಮಿತ್ವವುಳ್ಳವನಾಗಿರುತ್ತಾನೆ 'ಬುದ್ಧಿರ್ಜ್ಞಾನಂ" ಎಂಬಲ್ಲಿ ಈ ವಿಷಯವು ಹೇಳಲ್ಪಟ್ಟಿದೆ ಆದುದರಿಂದ, ಈಶ್ವರನಿಗೇ ಮುಖ್ಯವಾದ ಸ್ವಾಮಿತ್ವವು ಹಾಗು ಕರ್ತೃತ್ವವು ಜೀವನಿಗಾದರೋ ಅಮುಖ್ಯವೇ ಆದ ಸ್ವಾಮಿತ್ವ ಹಾಗು ಕರ್ತೃತ್ವವು" ಎಂಬುದು ಇವರಲ್ಲಿ "ಸ್ವಸ್ವಾಮಿಭಾವೊ

## — ವಿಶೇಷಾರ್ಥಪ್ರದೀಪಿಕಾ —

ಹೇಳುತ್ತಾರ. "ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ॥ ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ ॥ ಅಹಿಂಸಾ ಸಮತಾ ತುಷ್ಟಿಃ ತಪೋ ದಾನಂ ಯಶೋಽಯಶಃ ॥ ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ" ಎಂಬ ಭಗವದ್ಗೀತಾ ಹತ್ತನೆಯ ಅಧ್ಯಾಯದಲ್ಲಿ- ಕಾಮ ಮುಂತಾದ ವೃತ್ತಿಗಳಿಗೂ ಈಶ್ವರನೇ ಕಾರಣನೆಂಬ ಸಂಗತಿಯು ಹೇಳಲ್ಪಟ್ಟಿದೆ. ಹೀಗೆ ಭಾವ. ಇಲ್ಲಿ "ಇಚ್ಛಾ-ಕೃತಿ" ಇವುಗಳಿಗೂ ಸಂಗ್ರಾಹಕವಾಗಿ ಬುಧ್ಯಾದಿಗಳನ್ನು ಗ್ರಹಿಸಲಾಗಿದೆ ಹಾಗಿಲ್ಲದಿದ್ದರೆ "ಭಾವಾಃ" ಎಂಬ ಸರ್ವಸಂಗ್ರಾಹಕ ಪದಕ್ಕೆ ಸ್ವಾರಸ್ಯವಿಲ್ಲವಾಗುತ್ತದೆ ಆದುದರಿಂದ, ಪ್ರಕೃತಕ್ಕೆ ಇದರ ಉದಾಹರಣವು ಸಂಗತವೆಂದು ಭಾವವು

"ಅಮುಖ್ಯಮೇವ"- ಇಲ್ಲಿ ಇಚ್ಛಾಸ್ವಾಮಿತ್ವಂ, ಕರ್ತೃತ್ವಂ" ಇವೆರಡನ್ನು ಹಚ್ಚಿಕೊಂಡು, "ಜೀವರಿಗೆ ಇಚ್ಛಾಸ್ವಾಮಿತ್ವವೂ ಕರ್ತೃತ್ವವೂ ಅಮುಖ್ಯವೇ ಆಹುದು." ಹೀಗೆ ಅರ್ಥ ಹೇಳಬೇಕು ಈ ವಿಷಯದಲ್ಲಿ ಭಾಗವತಸಮ್ಮತಿಯನ್ನು

यदुक्तं निरपवादानुभवबलादात्मन एवेच्छास्वामित्वमिति ।

## — ಪದಾರ್ಥದೀಪಿಕಾ —

ಧ್ರುವ ಏಷಯತ್ರ ತರ್ಹ್ಯಚ್ಯುತೇಽಸಾವಿತಿ ಕೃತ್ಯಯೋಗಃ" ಎಂಬ ವಚನವು ಪ್ರಮಾಣವು.

ಇನ್ನು— "ನಿರಪವಾದವಾದ ಅನುಭವ ಬಲದಿಂದ ಆತ್ಮನಿಗೇ ಇಚ್ಛಾ

## — ವಿಶೇಷಾರ್ಥಪ್ರದೀಪಿಕಾ —

" ತಥಾಚೋಕ್ತಂ " ಇತ್ಯಾದಿವಾಕ್ಯದಿಂದ ತಿಳಿಸುತ್ತಾರೆ. ಪಂಚಮಸ್ಕಂಧ ಹತ್ತನೆಯ ಅಧ್ಯಾಯದಲ್ಲಿ ರಹೂಗಣನನ್ನುಕುರಿತು ಬ್ರಹ್ಮಕುಲೋತ್ಪನ್ನನಾದ ಜಡಭರತನು— " ಏಷಃ ' — ' ಸ್ವಾಮಿಯಾದ ನನ್ನ ಶಾಸನವನ್ನು ಯಾವ ನಿಮಿತ್ತದಿಂದ ಅನುವರ್ತಿಸುವುದಿಲ್ಲ "ವೆಂಬುದಾಗಿ ನನಗೆ ನೀನು ಹೇಳಿದ "ಸ್ವಸ್ವಾಮಿಭಾವಃ"= ಸ್ವಾಮಿ ಭೃತ್ಯ ಸಂಬಂಧವು, "ಧ್ರುವಃ"– ಸ್ಥಿರ– ಎಂದೆಂದಿಗೂ ಅಳಿಯದಂತಹದು, ಆದುದರಿಂದಲೇ 'ಮುಖ್ಯಃ"– ಮುಖ್ಯವಾದ-ದೆಂಬ ಅಭಿಪ್ರಾಯವೋ ? 'ತರ್ಹಿ"– ಹಾಗಾದರೆ "ಅಸೌ"= ಈ ಸ್ವಸ್ವಾಮಿ ಭಾವ ಸಂಬಂಧವು, 'ಅಚ್ಯುತೇ"= ನಾರಾಯಣನಲ್ಲಿ "ವರ್ತತೇ"= ಇರುತ್ತದೆ ಮುಖ್ಯಸ್ವಾಮಿತ್ವವು ಹರಿಯಲ್ಲಿಯೇ! ಇತರರಾದ ನೀವು ನಾವು ಮುಂತಾದವರಲ್ಲಿ ಸೇವಕತ್ವವೇ ! "ಯತ್ರ"- ಇತರ ದೇವತೆಗಳಲ್ಲಿ ಹೇಳಲ್ಪಟ್ಟ ಸ್ವಾಮಿತ್ವವು "ಅಚ್ಯುತೇ"=ಅಚ್ಯುತನ ಇರುವಿಕೆಯಿಂದ-ಪ್ರೇರಣೆಯಿಂದಲೇ! ಆದುದರಿಂದ ಏಷಃ ಸ್ವಾಮಿ ಭೃತ್ಯಭಾವ ಸಂಬಂಧವು ಇತರರಲ್ಲಿ-'ಅಧ್ರುವಃ"–ಅಮುಖ್ಯವಾದುದು "ಇತಿ"– ಈ ಕಾರಣದಿಂದ, "ಅನ್ಯತ್ರ"– ಇತರರಲ್ಲಿ "ಕೃತ್ಯಯೋಗಃ"= ಕರ್ತೃತ್ವವು ಸಂಭವಿಸುವುದಿಲ್ಲ ಹೀಗೆ ಈ ಪದ್ಯದ ಅರ್ಥ ನೀನು ಆ ಸ್ವಾಮಿತ್ವಭ್ರಮದಿಂದ "ನನ್ನನ್ನು ನಿನ್ನ ಶಾಸನವನ್ನು ಅತಿಕ್ರಮಿಸಿದ"ಯೆಂದು ನುಡಿದಿರುವಿ ಹೀಗೆ ಭಾವ. "ಸ್ವಾಮಿತ್ವಂ ತು ಹರಾವೇವ ಮುಖ್ಯಮನ್ಯತ್ರ ಭೃತ್ಯತಾ" ಇತ್ಯಾದಿ ವಚನಗಳು ಇದರಲ್ಲಿ ಪ್ರಮಾಣಗಳು, ಹೀಗೆ ಹರಿಯಲ್ಲಿಯೇ ಮುಖ್ಯಸ್ವಾಮಿತ್ವವೆಂದು "ಮುಕ್ತಿಯ ಕಾರಣವಾದ ಧ್ಯಾನಕ್ಕೆ ಇವನೇ ವಿಷಯನಾದುದರಿಂದ" ಎಂಬ ಆಶಯದಿಂದ " ಇತಿ ಕೃತ್ಯ ಯೋಗಃ " ಎಂಬುದಾಗಿ ಹೇಳಿದ್ದಾರೆ "ಇತಿ ಕೃತ್ಯಃ"= ಇತಿ ಕರ್ತವ್ಯ ಸಾಧನವಾದವನು ' ಮೋಕ್ಷೇ " ( ಮೋಕ್ಷಕ್ಕೆ ) ಎಂಬುದನ್ನು ಹಚ್ಚಿಕೊಳ್ಳಬೇಕು "ಯೋಗಃ"= ಧ್ಯಾನವು ಧ್ಯಾನ ವಿಷಯನಾದ ಪರಮಾತ್ಮನನ್ನು " ಯೋಗಃ " (ಧ್ಯಾನ)ವೆಂಬುದಾಗಿರುವ ಅಭೇದ ವಚನವು ಔಪಚಾರಿಕವಾದುದು " ಮಮ ಸ್ವಾಮೀ ಹರಿರ್ನಿತ್ಯಂ " ಎಂಬ, ಮುಕ್ತಿ ಕಾರಣವಾದ ಉಪಾಸನೆಯಲ್ಲಿ ವಿಷಯನಾದುದರಿಂದ ಹರಿಯಲ್ಲಿಯೇ

न चानुभवगं कामस्वामित्वं वेदवागपि ॥
शक्ताऽपवदितुं

तदयुक्तम् । कामः सङ्कल्प इति मनसः कामस्वामित्वाभिधात्र्याऽपौरुषेयत्वेन बलवत्या वेदवाचैवापोदितत्वादित्यत आह ॥ न चेति । कामस्वामित्वमात्मन इति शेषः । कामाद्यनुवादेन खल्वियं वेदवागात्मोपादानत्वं वैशेषिकादिमतप्राप्तं वारयितुं तेषां मनोरूपत्वमाचष्ट ।

ಅನುಭವದಿಂದ ಸಿದ್ಧಿಸುವ ಆತ್ಮನ ಕಾಮಸ್ವಾಮಿತ್ವವನ್ನು ವೇದ ವಾಕ್ಯವೂ ಸಹ ಅಲ್ಲಗಳೆಯಲು ಸಮರ್ಥವಲ್ಲ.

— ಪದಾರ್ಥದೀಪಿಕಾ —

ಸ್ವಾಮಿತ್ವವೆಂದು ಹೇಳಿದುದು ಅಯುಕ್ತವು ಏಕೆಂದರೆ "ಕಾಮಃ ಸಂಕಲ್ಪಃ" ಎಂಬುವಾಗಿರುವ, ಮನಸ್ಸಿಗೆ ಕಾಮ ಸ್ವಾಮಿತ್ವವನ್ನು ಹೇಳುವ ಅಪೌರುಷೇಯವಾದುದರಿಂದ ಪ್ರಬಲವಾದ ವೇದ ವಚನದಿಂದಲೇ - ಶ್ವರನ ಕಾಮ ಸ್ವಾಮಿತ್ವವು ನಿರಾಕರಿಸಲ್ಪಟ್ಟಿದೆ" ಎಂಬ ಆಶಂಕೆಯನ್ನು "ನ ಚ' ಇತ್ಯಾದಿ ವಚನದಿಂದ ಪರಿಹರಿಸುತ್ತಾರ "ಕಾಮ ಸ್ವಾಮಿತ್ವಂ" ಇಲ್ಲಿ 'ಆತ್ಮನಃ"- (ಆತ್ಮನಿಗೆ) ಎಂಬುದು ಶೇಷವು ಈ ವೇದ ವಚನವು, ವೈಶೇಷಿಕಾದಿಮತ ಪ್ರಾಪ್ತವಾದ ಆತ್ಮನ ಕಾಮೋಪಾದಾನತ್ವವನ್ನು ನಿರಾಕರಿಸಲು ಆ ಕಾಮಾದಿಗಳಿಗೆ ಮನಃ ಪರಿಣಾಮ

— ವಿಶೇಷಾರ್ಥಪ್ರದೀಪಿಕಾ —

ಸ್ವಾಮಿತ್ವವು ಮುಖ್ಯವಾದುದು ಇತರರಲ್ಲಿ ಭೃತ್ಯ ಭಾವವೇ! ಹೀಗೆ ತಾತ್ಪರ್ಯದ ಅರ್ಥವು

"ಕಾಮಸ್ವಾಮಿತ್ವಾಭಿಧಾತ್ರ್ಯ"- "ಕಾಮಃ ಸಂಕಲ್ಪಃ" ಇಲ್ಲಿಂದಾರಂಭಿಸಿ "ಸರ್ವಂ ಮನ ಏವ" ಇಲ್ಲಿಯ ವರೆಗಿನ ಶ್ರುತಿಯು ಕಾಮ ಮುಂತಾದುದಕ್ಕೂ ಮನಸ್ಸಿಗೂ ತಾದಾತ್ಮ್ಯವನ್ನು ಹೇಳುವದು ಈ ತಾದಾತ್ಮ್ಯವಚನವು ಉಪಾದಾನತ್ವವನ್ನು ಹೇಳುವಂತೆ "ರಾಜಾ ರಾಷ್ಟ್ರಂ" ಎಂಬ ವಚನದಂತೆ ಸ್ವಾಮಿತ್ವವನ್ನೂ ಹೇಳಬಹುದು ಮನಸ್ಸು ಕಾಮದ ಉಪಾದಾನವೆಂಬ ಅರ್ಥವನ್ನು ಹೇಳಿದರೆ ಪ್ರಯೋಜನವಿಲ್ಲವಾದುದರಿಂದ, ಸ್ವಸ್ವಾಮಿಭಾವರೂಪ ಅರ್ಥವನ್ನು ಹೇಳುವುದೇ ಸರಿಯಾದುದು; ಹೀಗೆ ಶಂಕಿಸುವವರ ಅಭಿಪ್ರಾಯವು

"ಆತ್ಮೋಪಾದಾನತ್ವಂ"= ಆತ್ಮನೆಂಬ ಸಮವಾಯಿ ಕಾರಣವುಳ್ಳದ್ದಾಗಿರುವುದು "ಯಥಾಹುಃ"- ತತ್ತ್ವ ನಿರ್ಣಯದಲ್ಲಿ ಹೇಳಿದ ಸ್ಮೃತಿಯನ್ನು (ಬ್ರಹ್ಮ

तस्मात्सा तदन्याभिधायिनी ॥

**कामादिस्वरूपं च साक्ष्यनुभवेनैव सिद्धमिति तस्योपजीव्यत्वम् । स च तानात्मस्वामिकानेव विषयीकरोति । न चोपजीवकमुपजीव्यमपवदितुं शक्नोति । वेदस्योत्सर्गतो बलवत्त्वेऽप्युपजीव्यापेक्षया दौर्बल्यमेव । यथाऽऽहुः । प्राबल्यमागमस्यैव जात्या तेषु त्रिषु स्मृतम् । उपजीव्यविरोधे तु न प्रामाण्यममुष्य चेति । अतो न श्रुतेरनुभवापवादकत्वं युक्तमिति । तर्हि श्रुतेः का गतिरित्यत आह ॥ तस्मा–**

ಆ ಶ್ರುತಿಯು, ಕಾಮ ಸ್ವಸಾತ್ವದಿಂದ ಬೇರೆಯಾದ ಕಾಮದ ಉಪಾದಾನವಾಗಿರುವುದೆಂಬ ಸಂಗತಿಯನ್ನು ಹೇಳುವಂತಹದು.

— ಪದಾರ್ಥದೀಪಿಕಾ —

ರೂಪತ್ವವನ್ನು ಹೇಳುತ್ತದ ಕಾಮಾದಿಗಳ ಸ್ವರೂಪವಾದರೂ ಸಾಕ್ಷಿರೂಪ ಅನುಭವದಿಂದಲೇ ಸಿದ್ಧವಾದುದರಿಂದ ಅನುಭವಕ್ಕೆ ಉಪಜೀವ್ಯತ್ವವು ಸಿದ್ಧಿಸುತ್ತದೆ ಮತ್ತು ಆ ಅನುಭವವೂ ಆ ಕಾಮವನ್ನು ಆತ್ಮಸ್ವಾಮಿಕವನ್ನಾಗಿಯೇ ವಿಷಯೀಕರಿಸುತ್ತದೆ ಮತ್ತು ಉಪಜೀವಕವು ಉಪಜೀವ್ಯವನ್ನು ಬಾಧಿಸಲು ಶಕ್ತವಾಗುವುದಿಲ್ಲ ವೇದಕ್ಕೆ ಔತ್ಸರ್ಗಿಕವಾಗಿ ಬಲವತ್ವವಿದ್ದರೂ ಉಪಜೀವ್ಯಕ್ಕಿಂತಲೂ ದೌರ್ಬಲ್ಯವೇ! ಇದನ್ನೇ "ಪ್ರಾಬಲ್ಯಮಾಗಮಸ್ಯೈವ ಜಾತ್ಯಾತೇಷು ತ್ರಿಷುಸ್ಮೃತಮ್ ॥ ಉಪಜೀವ್ಯ ವಿರೋಧೇ ತು ನ ಪ್ರಾಮಾಣ್ಯಮಮುಷ್ಯ ಚ ॥" ಎಂಬುದಾಗಿ ಹೇಳಿದ್ದಾರೆ ಆದುದರಿಂದ ಶ್ರುತಿಗೆ ಅನುಭವ ಬಾಧಕತ್ವವು ಯುಕ್ತವಲ್ಲ ಹೀಗೆ ಅರ್ಥ ಹಾಗಾದಲ್ಲಿ ಶ್ರುತಿಯ ಗತಿ ಏನೆಂಬುದರ ಉತ್ತರವನ್ನು "ತಸ್ಮಾತ್" ಇತ್ಯಾದಿ ವಚನದಿಂದ ಹೇಳುತ್ತಾರೆ ಉಪಜೀವ್ಯವಾದು

— ವಿಶೇಷಾರ್ಥಪ್ರದೀಪಿಕಾ —

ತರ್ಕ) ವಿರಚಿಸಿದವರು ಹೇಳುತ್ತಾರೆ; ಹೀಗೆ ಅರ್ಥ "ಜಾತ್ಯಾ''– ಉತ್ಸರ್ಗದಿಂದ "ತ್ರಿಷು''– ಹಿಂದೆ ಹೇಳಿದ ಪ್ರತ್ಯಕ್ಷ–ಅನುಮಾನ–ಆಗಮ, ಈ ಮೂರು ಪ್ರಮಾಣಗಳಲ್ಲಿ 'ಅಮುಷ್ಯ''- ಜಾತ್ಯಾ ಪ್ರಬಲವಾದ ಆಗಮಕ್ಕೆ "ಅತಃ"– ಆಗಮವು ಅನುಭವವನ್ನು ಉಪಜೀವಿಸುವುದರಿಂದ ಅನುಭವಕ್ಕಿಂತ ದುರ್ಬಲವಾದುದರಿಂದ. ''ತರ್ಹಿ''— ಅಪೌರುಷೇಯವಾದುದರಿಂದ ದೋಷಶಂಕೆಯಿಂದಲೂ ದೂರವಾದ ವೇದಕ್ಕೆ ನಿರ್ವಿಷಯತ್ವವೆಂಬ ಅಪ್ರಾಮಾಣ್ಯವು ಯುಕ್ತ

मोक्षकामो भवेदन्यो यदि मुक्ताद्भविष्यतः ॥
मोक्षकामस्य किं तेन

दिति । उपजीव्यत्वेन बलवताऽनुभवेन बाधितत्वादित्यर्थः । तदन्याभिधायिनी स्वामित्वादन्यस्योपादानत्वस्याभिधायिनी ।

न केवलमुपजीव्यबाधात् । किन्तूपपत्तिविरोधाच्चेत्याह ॥ मोक्षकाम इति । यदि कामोऽन्तःकरणकर्तृकः स्यात्तदा मोक्षकामोऽप्यन्तःकरणस्यैव स्यात् । मोक्षस्त्वात्मन इति च प्रसिद्धम् । तथा च यो मुक्तो भविष्यति तस्मादन्य एव मोक्षकाम इत्युक्तं स्यात् । कामस्या-

ಮೋಕ್ಷವನ್ನು ಅಪೇಕ್ಷಿಸುವವನು, (ಮುಮುಕ್ಷುವು) ಮುಂದೆ ಮುಕ್ತಿ ಹೊಂದುವವನಿಂದ ಭಿನ್ನನು (ಮುಕ್ತನು ಬೇರೆ) ಎಂದು ಹೇಳಿದ ದಲ್ಲಿ, ಮುಕ್ತಿಯನ್ನು ಇಚ್ಛಿಸುವ ಹಾಗು ಸಾಧನಾನುಷ್ಠಾನವಾಡುವ ಅಧಿಕಾರಿಗೆ ಅದರಿಂದ ಪ್ರಯೋಜನವಾವುದು ?

## — ಪದಾರ್ಥದೀಪಿಕಾ —

ದರಿಂದ ಪ್ರಬಲವಾದ ಅನುಭವದಿಂದ ಶ್ರುತಿಯು ಬಾಧಿತವಾದುದರಿಂದ, ಹೀಗೆ ಅರ್ಥ "ತದನ್ಯಾಭಿಧಾಯಿನೀ"-ಸ್ವಾಮಿತ್ವದಿಂದ ಬೇರೆಯಾದ ಉಪಾದಾನತ್ವವನ್ನು ಹೇಳುವಂತಹದು ಕೇವಲ ಉಪಜೀವ್ಯದಿಂದ ಬಾಧಬರುವುದೆಂಬ ಕಾರಣದಿಂದಷ್ಟೇ ಅಲ್ಲ ಆದರೆ ಉಪಪತ್ತಿ (ಯುಕ್ತಿ) ಯಿಂದ ವಿರೋಧವು ಬರುವುದೆಂಬ ಕಾರಣದಿಂದಲೂ, ಎಂಬುದನ್ನು "ಮೋಕ್ಷಕಾಮೋ" ಇತ್ಯಾದಿ ವಚನದಿಂದ ಹೇಳುತ್ತಾರೆ ಒಂದು ಪಕ್ಷದಲ್ಲಿ ಅಂತಃಕರಣವು ಕಾಮದ ಕರ್ತೃವಾಗಿದ್ದರೆ— ಮೋಕ್ಷ ವಿಷಯಕ ಕಾಮವೂ ಅಂತಃಕರಣಕ್ಕೇ ಆಗಲಿ! ಆದರೆ ಮೋಕ್ಷವು ಆತ್ಮನಿಗೆಯೆಂಬುದು ಪ್ರಸಿದ್ಧವು. ಆದುದರಿಂದ ಮುಂದೆ ಮುಕ್ತನಾಗುವವನು ಯಾವನೋ ಆವನಿಂದ ಭಿನ್ನವಾದುದೇ ಮೋಕ್ಷಾಪೇಕ್ಷೆಯುಳ್ಳದ್ದೆಂದು ಇದರಿಂದ ಹೇಳಲ್ಪಟ್ಟದ್ದಾಗುತ್ತದೆ ಮತ್ತು ಕಾಮವು ಬೇರೆ ಕಡೆಯಲ್ಲಿ (ಅಂತ

## — ವಿಶೇಷಾರ್ಥಪ್ರದೀಪಿಕಾ —

ವಲ್ಲವಾದುದರಿಂದ, ಅದರ ಗತಿಯಾವದೆಂದು ಪ್ರಶ್ನಿಸಿರುತ್ತಾರೆಂದು ತಿಳಿಯಬೇಕು.

'ಮೋಕ್ಷಕಾಮೋ ಭವೇದನ್ಯೋ'' ಇತ್ಯಾದಿ ಅನುವ್ಯಾಖ್ಯಾನ ಪದ್ಯದ ಪೂರ್ವಾರ್ಧದ ಯೋಜನೆಯನ್ನು ''ತಥಾ ಚ ಯೋ ಮುಕ್ತಃ'' ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ. ''ಮೋಕ್ಷಕಾಮೋ ಭವೇದನ್ಯಃ" ಈ ಹೇಳಿಕೆಯಿಂದ ಸಾಧ

न्यगतत्वे साधनानुष्ठानाऽप्यन्य एवेत्यङ्गीकर्तव्यम् । फलकामना-साधनानुष्ठानयोरेकनिष्ठत्वदृष्टेः । तथा चाकृताभ्यागमकृतविप्रणाश-प्रसङ्गः ।

ननु नाय दोषः । पुरुषविमोक्षार्थं प्रकृतिप्रवृत्त्यभ್युपगमात् ।

— ಪದಾರ್ಥದೀಪಿಕಾ —

ಕರಣದಲ್ಲಿ) ಇರುವುದಾದರೆ ಸಾಧನವನ್ನು ಅನುಷ್ಠಾನಮಾಡುವವನೂ ಬೇರೆಯುವನೇ ಆಗಿರಬೇಕಾಗುತ್ತದೆಂದು ಅಂಗೀಕರಿಸತಕ್ಕದ್ದು ಏಕೆಂದರೆ ಫಲದ ಅಪೇಕ್ಷೆ, ಸಾಧನದ ಅನುಷ್ಠಾನ, ಇವೆರಡೂ ಒಂದೇ ಕಡೆಯಲ್ಲಿರುವುದು ಕಂಡುಬಂದಿದೆ ಆದುದರಿಂದ, ಅಕೃತಾಭ್ಯಾಗಮ ಕೃತವಿಪ್ರಣಾಶಗಳ ಪ್ರಸಂಗವು ಬರುತ್ತದೆ

ಇನ್ನು– "ಇದು ದೋಷವಲ್ಲ ಏಕೆಂದರ ಪುರುಷರ (ಚೇತನರ) ಮುಕ್ತಿಗಾಗಿ ಪ್ರಕೃತಿಯು ಪ್ರವೃತ್ತವಾಗಿರುವುದಂಬುದನ್ನು ಅಂಗೀಕರಿಸಲಾಗಿದೆ ಲೋಕ

— ವಿಶೇಷಾರ್ಥಪ್ರದೀಪಿಕಾ —

ನಗಳ ಅನುಷ್ಠಾನವನ್ನು ಮಾಡುವವನೂ ಬೇರೆಯುವನೇ ! ಎಂಬ ಅರ್ಥವೂ ಲಭಿಸುತ್ತದೆಯೆಂಬ ಅಭಿಪ್ರಾಯದಿಂದ 'ಕಾಮುಸ್ಯ'' ಇತ್ಯಾದಿ ವಾಕ್ಯವು ಹೊರಟಿದೆ ''ಅನ್ಯ'' ಎಂದರೆ ಮುಕ್ತನಿಂದ ಭಿನ್ನನೆಂದು ಅರ್ಥ "ಏಕನಿಷ್ಠತ್ವದೃಷ್ಟೇಃ"– "ಯೋऽಹಂ ಕಾಮಯೇ ಸೋಽಹಂ ಸಾಧನಮ–ನುತಿಷ್ಠಾಮಿ'' (ಮುಕ್ತಿಯನ್ನು ಇಚ್ಛಿಸುತ್ತಿರುವ ನಾನು ಸಾಧನವನ್ನು ಅನುಷ್ಠಾನಮಾಡುತ್ತೇನೆ) ಎಂಬುದಾಗಿ ಫಲ ಕಾಮನೆಯೂ ಸಾಧನಾನುಷ್ಠಾನವೂ ಒಬ್ಬನಲ್ಲಿಯೇ ಇರುವುದು ಅನುಭವದಲ್ಲಿ ಬಂದಿದೆ, ಆದುದರಿಂದ, ಹೀಗೆ ಇಲ್ಲಿ ಅರ್ಥ

"ಅಕೃತಾಭ್ಯಾಗಮಕೃತ ವಿಪ್ರಣಾಶ ಪ್ರಸಂಗಃ'– ಆತ್ಮನಿಗೆ ತಾನು ಅನುಷ್ಠಾನ ಮಾಡದ ಸಾಧನವು ದೊರೆಯಬೇಕಾಗುವದು ಏಕೆಂದರೆ ಸಾಧನವಿಲ್ಲದಿದ್ದರೆ ಮೋಕ್ಷವನ್ನು ಪಡೆಯುವುದು ಸಂಭವಿಸುವುದಿಲ್ಲ ಏಕೆಂದರೆ ಸಾಧನವಿಲ್ಲದಿದ್ದಲ್ಲಿ ಸಾಧ್ಯದ ಪ್ರಾಪ್ತಿಯು ಆಗುವುದಿಲ್ಲ. ಆತ್ಮನಿಂದ (ತನ್ನಿಂದ) ಭಿನ್ನನಾದ ಯಾವನಿಂದ ಸಾಧನವು ಅನುಷ್ಠಾನ ಮಾಡಲ್ಪಟ್ಟಿದೆಯೋ ಅವನಿಗೆ ಹಾನಿಯು ಆದೀತು ! ಏಕೆಂದರೆ ಆ ಸಾಧನಾನುಷ್ಠಾನದಿಂದ ಲಭಿಸುವ ಫಲವು ಸಾಧನಾನುಷ್ಠಾನ ಮಾಡಿದವನಲ್ಲಿ ಎಂದಿಗೂ ಬರುವುದಿಲ್ಲ ಇರುವುದಿಲ್ಲ ಈ ಕಾರಣದಿಂದ, ಹೀಗೆ ಅರ್ಥ

ಮೂರೂ ಪಾದಗಳಿಗೆ ಏಕವಾಕ್ಯತೆಯು ಬರುವಂತೆ ಯೋಜನೆಯನ್ನು

स्वनाशार्थं च को यतेत् ॥

दृश्यते हि परप्रयोजनार्थं जनाना प्रवृत्तिरिति । अत्रेदमुपतिष्ठते ॥ मोक्षकाम इति । उपलक्षणमेतत् । साधनानुष्ठातेत्यपि द्रष्टव्यम् । परप्रयोजनार्थं प्रवर्तमानाः खलु लोके दृष्टमदृष्टं वा किमपि प्रयोजनमनुसन्दधानाः प्रायेणोपलब्धाः । तथाऽत्रापि प्रकृतेः प्रयोजनेन भाव्यम् । न च तदस्तीत्यर्थः ।

स्यादेतत् । स्वप्रयोजनमननुसन्धायैव जीवमोक्षार्थं प्रकृतेः प्रवृत्तिर्यथा कृपालुत्वेन भवतामीश्वरस्येत्यत आह ॥ स्वनाशार्थं चेति ।

ಮತ್ತು ತನ್ನ ನಾಶದ ಸಲುವಾಗಿ ಯಾವನು ಪ್ರಯತ್ನಿಸಿಯಾನು ?

— ಪದಾರ್ಥದೀಪಿಕಾ —

ದಲ್ಲಿ ಪರರ ಪ್ರಯೋಜನದ ಸಲುವಾಗಿ ಜನರ ಪ್ರವೃತ್ತಿಯು ಇರುತ್ತದೆ" ಹೀಗೆ ಆಶಂಕೆಯು ಬರುತ್ತದೆ ಅದರ ಉತ್ತರವನ್ನು 'ಮೋಕ್ಷ ಕಾಮಃ" ಇತ್ಯಾದಿ ವಚನದಿಂದ ಹೇಳುತ್ತಾರೆ ಇದು ಸಂಗ್ರಾಹಕ ವಚನವು "ಸಾಧನಾನುಷ್ಠಾತಾ" (ಸಾಧನದ ಅನುಷ್ಠಾನಮಾಡುವವನೂ) ಬೇರೆಯಾಗಿರಲಿ ಎಂಬುದನ್ನೂ ತಿಳಿಯಬೇಕು ಪರರ ಪ್ರಯೋಜನಕ್ಕಾಗಿ ಪ್ರವೃತ್ತಿಸುವವರು ಲೋಕದಲ್ಲಿ, ದೃಷ್ಟವೋ ಅದೃಷ್ಟವೋ ಯಾವುದೋ ಒಂದು ಪ್ರಯೋಜನವನ್ನು ಮನಸ್ಸಿನಲ್ಲಿಟ್ಟುಕೊಂಡು ಪ್ರವೃತ್ತಿಸುವುದು ಬಹಳವಾಗಿ ಕಂಡಿರುತ್ತದೆ ಅದರ ಹಾಗೆ ಇಲ್ಲಿಯೂ ಪ್ರಕೃತಿಗೆ ಏನಾದರೂ ಪ್ರಯೋಜನವಿರಬೇಕು ಆದರೆ ಅದು ಇಲ್ಲ ಹೀಗೆ ಅರ್ಥ. ಇದು ಇರಲಿ! ನಿಮ್ಮ ಮತದಲ್ಲಿ ಕೃಪಾಲುವಾದ ಈಶ್ವರನ ಪ್ರವೃತ್ತಿಯು ಹೇಗೋ ಹಾಗೆ ತನ್ನ ಪ್ರಯೋಜನವನ್ನು ಅನುಸಂಧಾನಮಾಡದೇ ಜೀವರ ಮುಕ್ತಿಗಾಗಿ

— ವಿಶೇಷಾರ್ಥಪ್ರದೀಪಿಕಾ —

ಹೇಳಲು ಪೂರ್ವಪಕ್ಷವನ್ನು "ನನು" ಇತ್ಯಾದಿ ವಾಕ್ಯಗಳಿಂದ ತೋರಿಸುತ್ತಾರೆ.

ದಯಾಲು ಜನರನ್ನು ಹೊರತುಪಡಿಸಲು "ಪ್ರಾಯೇಣ" ಎಂಬುದಾಗಿ ಹೇಳಿದ್ದಾರೆ "ಮೋಕ್ಷಕಾಮಸ್ಯ ಕಿಂ ತೇನ" (ಮೋಕ್ಷಾಪೇಕ್ಷಿಗೆ–ಅಂತಃಕರಣಕ್ಕೆ) ಆದರಿಂದ ಪ್ರಯೋಜನವೇನು) ಎಂಬುದಾಗಿ ಆಕ್ಷೇಪಾರ್ಥಕವಾದ "ಕಿಂ" ಶಬ್ದದಿಂದ ಲಭಿಸಿದ ಅರ್ಥವನ್ನು 'ನ ಚ ತದಸ್ತಿ" ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ ಪ್ರಮಾಣವಿಲ್ಲವೆಂಬ ಭಾವವಿದೆ

न केवलं परप्रयोजनार्था प्रकृतेः प्रवृत्तिर्युज्यते । प्रकृतिलयो हि मोक्षो नाम । न हि कोऽपि कृपालुरात्मनाशार्थं यतमानो दृष्ट इति । यद्यप्यत्रानाधेयातिशयस्य निष्क्रियस्योपकार्यत्वमपि क्वचिन्न दृष्टमित्येव वक्तव्यम् । तथाऽपि तच्छिष्यैरेवोह्यतामिति तदभ्युपगमेन दूषणान्तरमिदमुक्तम् । नन्विदमयुक्तम् । चेतनो हि स्वप्रयोजनमनु-

— ಪದಾರ್ಥದೀಪಿಕಾ —

ಪ್ರಕೃತಿಯು ಪ್ರವೃತ್ತಿಸುತ್ತದೆಂದಾಗಲಿ ! ಈ ಆಕ್ಷೇಪದ ಪರಿಹಾರವನ್ನು 'ಸ್ವನಾಶಾರ್ಥಂ" ಇತ್ಯಾದಿ ವಚನದಿಂದ ಹೇಳುತ್ತಾರೆ ಕೇವಲ, ಪರರ ಪ್ರಯೋಜನಕ್ಕಾಗಿ ಪ್ರಕೃತಿಯ ಪ್ರವೃತ್ತಿಯೆಂಬುದು ಯುಕ್ತವಲ್ಲ ಏಕೆಂದರೆ ಪ್ರಕೃತಿಯ ವಿಲಯವೇ ಮೋಕ್ಷವು ಆದರೆ ಯಾವದೇ ಕೃಪಾಲುವು ತನ್ನ ನಾಶಕ್ಕಾಗಿ ಪ್ರಯತ್ನಿಸುವವನು ಕಂಡು ಬಂದಿಲ್ಲ ಹೀಗೆ ಭಾವ ಇನ್ನು– ಇಲ್ಲಿ ಅನಾಧೇಯಾತಿಶಯವೂ ನಿಷ್ಕ್ರಿಯವೂ ಆದುದಕ್ಕೆ ಉಪಕಾರ್ಯತ್ವವೂ ( ಉಪಕಾರ ಮಾಡಿಸಿಕೊಳ್ಳುವುದು ) ಎಲ್ಲಿಯೂ ಕಂಡಿಲ್ಲವೆಂಬುದನ್ನಷ್ಟೇ ಹೇಳಬೇಕಿತ್ತು ಆದರೂ ಅದನ್ನು ಶಿಷ್ಯರೇ ಊಹಿಸಲೆಂಬ ಅಭಿಪ್ರಾಯದಿಂದ, ಅದನ್ನು ಅಂಗೀಕರಿಸಿ ಈ ಬೇರೆ ದೂಷಣವನ್ನು ಹೇಳಿರುತ್ತಾರೆ

ಇನ್ನು– ಇದು ಅಯುಕ್ತವು ಏಕೆಂದರೆ ಚೇತನವು ತನ್ನ ಪ್ರಯೋಜನ

— ವಿಶೇಷಾರ್ಥಪ್ರದೀಪಿಕಾ —

" ನ ಕೇವಲಂ ಪ್ರಯೋಜನಾರ್ಥಾ "– ತನ್ನ ಪ್ರಯೋಜನಾರ್ಥವೂ ಅಲ್ಲ ಪರಪ್ರಯೋಜನಾರ್ಥವೂ ಅಲ್ಲ ಹೀಗೆ ಭಾವ ಇನ್ನು ಪುರುಷ ಮೋಕ್ಷಾರ್ಥವಾಗಿ ಪ್ರವೃತ್ತಿಸುವ ಪ್ರಕೃತಿಯ ಪ್ರವೃತ್ತಿಯು ಪ್ರಕೃತಿಯ ನಾಶಕ್ಕಾಗಿಯೆಂಬುದು ಹೇಗೆ ? ಎಂಬ ಆಶಂಕೆಯನ್ನು "ಪ್ರಕೃತಿಲಯೋ ಹಿ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ 'ಅನಾಧೇಯಾತಿಶಯಸ್ಯ''''ಆತ್ಮನಃ''ಎಂಬಶೇಷವಿದೆ ಅಂತಃಕರಣದಿಂದ ಆತ್ಮನಿಗಾಗಿ ಮಾಡಬೇಕಾದ ಅತಿಶಯವು (ಹೆಚ್ಚಿನದು)ಯಾವದೂ ಇಲ್ಲ ಹೀಗೆ ಭಾವ ಅಂತಃಕರಣವು ಯಾವದೇ ಅತಿಶಯವನ್ನು ಆತ್ಮನಲ್ಲಿ ಏಕೆ ಮಾಡಲಾರದೆಂಬ ಆಶಂಕೆಯನ್ನು "ನಿಷ್ಕ್ರಿಯಸ್ಯ" ಈ ವಾಕ್ಯದಿಂದ ಪರಿಹರಿಸುತ್ತಾರೆ ಆತ್ಮನು (ಪುರುಷನು) ''ನಿಷ್ಕ್ರಿಯನು ಹೀಗೆ ಭಾವ

"ತದಭ್ಯುಪಗಮೇನ"– ಆತ್ಮನು ಉಪಕಾರ್ಯ (ಉಪಕಾರ ಹೊಂದುವವ) ನೆಂಬುದನ್ನು ಅಂಗೀಕರಿಸಿ, ಹೀಗೆ ಅರ್ಥ

सन्दध्यात् । स्वनाशाच्च बिभ्यत्परावर्तेत । प्रकृतिस्त्वचेतना कथमेवं पर्यनुयोगमर्हतीति । एव तर्हि कथमात्ममोक्षमप्यनुसन्धाय प्रवर्तेत । स्वभावोऽयं प्रधानस्येति चेत् । तर्हि कदाऽपि संसारोऽस्य न स्यात् । भोगार्था प्रवृत्तिः प्रकृतेः स्वभाव इति चेत् । तर्हि मोक्षाभावः । उभयस्वभावत्वे तूभयं न स्यात् । विरोधात् । अविरोधे वा युगपदुभयं स्यात् । व्यवस्थापकाभावात् । भोगेषूप

— ಪದಾರ್ಥದೀಪಿಕಾ —

ವನ್ನು ಅನುಸಂಧಾನಮಾಡುತ್ತದೆ ತನ್ನ ನಾಶಕ್ಕೆ ಹೆದರಿ ತಾನು (ಅದು) ಪರಾವೃತ್ತವಾಗುವದು ಆದರೆ ಪ್ರಕೃತಿಯು ಅಚೇತನವು ಅದಕ್ಕೆ ಇಂಥ ಪರ್ಯನುಯೋಗವು ಹೇಗೆ ಸಲ್ಲುತ್ತದೆ? ಹೀಗೆ ಆಶಂಕೆಯು ಬರುತ್ತದೆಂದು ಹೇಳಿದರೆ– ಹಾಗಾದರೆ ತನ್ನ ಮೋಕ್ಷವನ್ನೂ ಅನುಸಂಧಾನಮಾಡಿಕೊಂಡು ಪ್ರವೃತ್ತವಾಗಲಿ! ಇದು ಪ್ರಧಾನದ ಸ್ವಭಾವವೆಂದಾದರೆ– ಹಾಗಾದರೆ ಎಂದೆಂದಿಗೂ ಸಂಸಾರವು ಇದಕ್ಕಿಲ್ಲವಾಗಲಿ! ಭೋಗದ ಸಲುವಾಗಿ ಪ್ರವೃತ್ತಿಯು ಪ್ರಕೃತಿಯ ಸ್ವಭಾವವೆಂದರೆ– ಮೋಕ್ಷದ ಅಭಾವವು ಪ್ರಾಪ್ತವಾಗುತ್ತದೆ ಎರಡೂ ಅದರ ಸ್ವಭಾವವೆಂದರೆ ಎರಡೂ ಅದಕ್ಕೆ ಇಲ್ಲವಾಗಲಿ! ಏಕೆಂದರೆ ವಿರೋಧವಿರುತ್ತದೆ. ವಿರೋಧವಿಲ್ಲವಾದರ ಎರಡೂ ಏಕಕಾಲದಲ್ಲಿ ಆಗಲಿ! ಏಕೆಂದರೆ ವ್ಯವಸ್ಥಾಪಕ

— ವಿಶೇಷಾರ್ಥಪ್ರದೀಪಿಕಾ —

"ಆತ್ಮಮೋಕ್ಷಂ"= ಜೀವನಮೋಕ್ಷವನ್ನು

"ಕದಾಪಿ ಸಂಸಾರೋಽಸ್ಯ ನಸ್ಯಾತ್" –ಮೋಕ್ಷದ ಸಲುವಾಗಿಯೇ ಪ್ರವೃತ್ತಿಯೆಂಬ ಸ್ವಭಾವವುಳ್ಳ ಪ್ರಧಾನವು ಜೀವನಿಗೆ ಸಂಸಾರಬಂಧನವನ್ನು ಹಾಕಲಾರದು ಆದುದರಿಂದ, ಸಂಸಾರವು ಎಂದೆಂದಿಗೂ ಬಾರದಿರಲಿ, ಹೀಗೆ ಅರ್ಥ. 'ತರ್ಹಿ ಮೋಕ್ಷಾಭಾವಃ" –ಜೀವರ ಭೋಗದ ಸಲುವಾಗಿ ಪ್ರವೃತ್ತಿಯು ಪ್ರಕೃತಿಯ ಸ್ವಭಾವವಾದುದರಿಂದ (ಪ್ರಕೃತಿಯ ಪ್ರವೃತ್ತಿಯಿಂದ) ಮೋಕ್ಷವಿಲ್ಲ ಹೀಗೆ ಭಾವ, ಎರಡೂ ಸ್ವಭಾವಗಳಿರುವುದರಿಂದ ಸಂಸಾರ ಮೋಕ್ಷಗಳೆರಡೂ ಸಂಭವಿಸುವದೆಂಬ ಆಶಂಕೆಯನ್ನು "ಉಭಯಸ್ವಭಾವತ್ವೇ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ. ಆ ಸ್ವಭಾವಗಳೆರಡೂ ಪರಸ್ಪರ ವಿರುದ್ಧಗಳೋ? ಅವಿರುದ್ಧಗಳೋ? ಎಂದು ವಿಕಲ್ಪಿಸಿ ವಿರುದ್ಧವೆಂಬ ಒಂದನೆಯ ಕಲ್ಪದ ದೂಷಣವನ್ನು "ವಿರೋಧಾತ್" ಎಂಬ ವಾಕ್ಯದಿಂದಲೂ ಎರಡನೆಯ ಕಲ್ಪವನ್ನು

**भुक्तेषु मोक्षार्थेति चेन्न । भोगानामानन्त्येनापरिसमाप्तेरिति । अयं प्रसङ्गार्थः । यद्यात्मा न कामकर्ता स्यात्तदा मुमुक्षुरपि न स्यात् । ततश्च न तदर्थं प्रयतेत । तथा च न मुच्येत । परप्रवृत्तेः स्वप्रयो**

— ಪದಾರ್ಥದೀಪಿಕಾ —

ವಿಲ್ಲ. ಭೋಗಗಳನ್ನೆಲ್ಲ ಉಪಭೋಗಿಸಿದ ಮೇಲೆ ಮೋಕ್ಷಕ್ಕಾಗಿ ಪ್ರವೃತ್ತಿಯೆಂದರೆ– ಭೋಗಗಳು ಅನಂತವಾದುದರಿಂದ ಅವುಗಳ ಪರಿ ಸಮಾಪ್ತಿಯೇ ಇಲ್ಲ ಹೀಗೆ ಉತ್ತರ "ಆತ್ಮನು ಕಾಮಕ್ಕೆ ಕರ್ತೃವಾಗದಿದ್ದರೆ– ಮುಮುಕ್ಷುವು ಆಗದಿರಲಿ! ಆದಕ್ಕಾಗಿ ಅವನು ಪ್ರಯತ್ನಿಸದಿರಲಿ! ಆದುದರಿಂದ ಮುಕ್ತನೂ ಆಗಲಾರನು.

— ವಿಶೇಷಾರ್ಥಪ್ರದೀಪಿಕಾ —

"ಅವಿರೋಧೇಚ" ಇತ್ಯಾದಿ ವಾಕ್ಯದಿಂದಲೂ ನಿರಾಕರಿಸುತ್ತಾರೆ "ವ್ಯವಸ್ಥಾಪಕಾ ಭಾವಾತ್" –ಪ್ರಕೃತಿಗೆ ಇರುವ, ಸಂಸಾರ -ಮೋಕ್ಷಗಳೆರಡನ್ನೂ ತಂದುಕೊಡುವ ಎರಡು ಸ್ವಭಾವಗಳಲ್ಲಿ ಪರಸ್ಪರ ವಿರೋಧವಿಲ್ಲದಿದ್ದರೂ– 'ಒಂದು ಕಾಲದಲ್ಲಿ ಒಂದೊಂದೇ ಆಗುತ್ತದೆ. ಅದರಲ್ಲೂ ಮೊದಲು ಸಂಸಾರ, ಅನಂತರವೇ ಮೋಕ್ಷ," ಎಂಬಲ್ಲಿ ಯಾವದೇ ನಿಯಾಮಕವಿಲ್ಲ. ಆದುದರಿಂದ, ಹೀಗೆಅರ್ಥ ಅಂದರ ಇಂಥ ಕಾಲದಲ್ಲಿ ಪ್ರಕೃತಿಯ ಪ್ರವೃತ್ತಿಯು ಭೋಗಾರ್ಥವೆಂಬಲ್ಲಿಯೂ ಇಂಥಕಾಲದಲ್ಲಿ ಮೋಕ್ಷಾರ್ಥವೆಂಬಲ್ಲಿಯೂ ಯಾವದೇ ವ್ಯವಸ್ಥಾಪಕ ಯುಕ್ತಿಯಿಲ್ಲದಿರುವುದರಿಂದ ಏಕಕಾಲದಲ್ಲಿ ಸಂಸಾರಮೋಕ್ಷಗಳೆರಡೂ ಆಗಲಿ, ಹೀಗ ಭಾವವು

ವ್ಯವಸ್ಥಾಪಕವಿದೆಯೆಂಬುದಾಗಿ "ಭೋಗೇಷು' ಇತ್ಯಾದಿವಾಕ್ಯದಿಂದ ಶಂಕಿಸುತ್ತಾರೆ "ಉಪಭುಕ್ತೇಷು"=ಉಪಭೋಗದ ಅನಂತರ "ತದರ್ಥಂ"– ಮೋಕ್ಷಾರ್ಥವಾದುದು ಮೊದಲು ಭೋಗವನ್ನು ಮಾಡಿಸಿ ಅನಂತರ ಮುಕ್ತಿಯನ್ನು ಕೊಡಲು ಪ್ರವೃತ್ತಿಯುಳ್ಳದ್ದಿರುವುದೆಂಬ ಸ್ವಭಾವವೇ ವ್ಯವಸ್ಥಾಪಕವು ಆದುದರಿಂದ ವ್ಯವಸ್ಥಾಪಕವಿಲ್ಲವೆಂಬುದಿಲ್ಲ ಮತ್ತು ಮೋಕ್ಷವು ಭೋಗದ ನಿವೃತ್ತಿರೂಪವಾದುದರಿಂದ, ಮೊದಲು ಭೋಗವು ಬೇಕಾದುದರಿಂದ ವಿಪರೀತವಾಗಿ ಶಂಕಿಸ ಬರುವುದಿಲ್ಲ ಹೀಗೆ ಶಂಕಿಸುವವನ ಅಭಿಪ್ರಾಯವು. ಆ ಶಂಕೆಯನ್ನು "ಭೋಗಾನಾಂ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ

ಅಸ್ಪಷ್ಟವಿರುವುದರಿಂದ "ಅಯಂ ಪ್ರಸಂಗಾರ್ಥಃ" ಇತ್ಯಾದಿವಾಕ್ಯಗಳಿಂದ ಪ್ರಸಂಗ ಪರವಾದ ಮೂಲವಾಕ್ಯದಿಂದ ಆಕ್ಷೇಪಲಭ್ಯವಾದ ಅರ್ಥವನ್ನು ಸ್ಪಷ್ಟೀಕರಿಸುತ್ತಾರೆ.

"ಅಯುಕ್ತತ್ವಾತ್"=ಪುರುಷನಲ್ಲಿ –ಮುಮುಕ್ಷಾ –ಪ್ರಯತ್ನಗಳೆರಡೂ ಇಲ್ಲದಿರಲೆಂಬ ಆಪಾದನವು ಅನಿಷ್ಟವಲ್ಲ ಇಷ್ಟವೇ! ಏಕೆಂದರೆ ಪುರುಷರ ಮೋಕ್ಷಾ

जनभावाभावयोरयुक्तत्वादिति। बहुलमेतन्निदर्शनमिति स्मरणाद्यतेदिति परस्मैपदम् । तथा चाह । चन्द्रादयस्तु मन्यन्ते सर्वस्मादुभयं पदमिति ॥ छ ॥

— ಪದಾರ್ಥದೀಪಿಕಾ —

ಏಕೆಂದರೆ ತನಗೆ ಪ್ರಯೋಜನವಿರುವುದು ಇಲ್ಲದಿರುವುದು ಇವೆರಡೂ ಕಲ್ಪಗಳೂ ಅಯುಕ್ತಗಳು," ಹೀಗ ಇಲ್ಲಿಯ ತರ್ಕದ ಅರ್ಥ "ಬಹುಲಮೇತನ್ನಿದರ್ಶನಂ" ಎಂಬುದಾಗಿ ಪಾಣಿನಿಯ ವಚನವಿದ್ದುದರಿಂದ "ಯತೇತ್" ಎಂಬ ಪರಸ್ಮೈಪದ ಪ್ರಯೋಗವು ಅದರಂತೆಯೇ "ಚಂದ್ರಾದಯಸ್ತು ಮನ್ಯಂತೇ ಸರ್ವಸ್ಮಾದು ಭಯಂ ಪದಂ" ಎಂಬುದಾಗಿ ಹೇಳಿದ್ದಾರೆ

— ವಿಶೇಷಾರ್ಥಪ್ರದೀಪಿಕಾ —

ರ್ಥವಾಗಿ ಪ್ರಕೃತಿಗೇ ಇಚ್ಛೆ ಹಾಗು ಪ್ರಯತ್ನಗಳನ್ನು ಅಂಗೀಕರಿಸಲಾಗಿದೆಯೆಂಬ ಆಶಂಕೆಯನ್ನು ಈ ವಾಕ್ಯದಿಂದ ಪರಿಹರಿಸಿದ್ದಾಗಿದೆ "ಪರಪ್ರವೃತ್ತಿ' ಎಂದರೆ ಪ್ರಧಾನದ ಪರಾರ್ಥವಾದ ಪ್ರವೃತ್ತಿಯು ಪ್ರಧಾನದ ಪರಾರ್ಥವಾದ ಪ್ರವೃತ್ತಿಗೆ ಸ್ವಪ್ರಯೋಜನವಿದೆಯೆಂಬ ಪಕ್ಷದಲ್ಲಿ – ಪ್ರಮಾಣವಿಲ್ಲವೆಂಬ ದೋಷವನ್ನೂ ಸ್ವಪ್ರಯೋಜನವಿಲ್ಲವೆಂಬ ಪಕ್ಷದಲ್ಲಿ ಪ್ರವೃತ್ತಿಯಾಗಲಾರದೆಂಬ ದೋಷವನ್ನೂ ಹಿಂದೆ ಹೇಳಿದಯಾದುದರಿಂದ ಪರಪ್ರವೃತ್ತಿಯು ಅಯುಕ್ತವೆಂದು ಇಲ್ಲಿಯ ಅಭಿಪ್ರಾಯ

"ಯತೇತ್' ಎಂಬ ಪರಸ್ಮೈಪದಪ್ರಯೋಗವು ಹೇಗೆ? ಈ ಆಶಂಕೆ ಯನ್ನು "ಬಹುಲಂ" ಇತ್ಯಾದಿವಾಕ್ಯದಿಂದ ಪರಿಹರಿಸುತ್ತಾರೆ ಪಾಣಿನಿಯು ತಾನುಮಾಡಿದ ಧಾತುಗಣ ಪಾಠದಲ್ಲಿ ಪರಸ್ಮೈಪದಿಧಾತುಗಳನ್ನೂ ಆತ್ಮನೇ ಪದಿಧಾತುಗಳನ್ನೂ ಹೇಳಿ "ಬಹುಲಮೇತನ್ನಿದರ್ಶನಂ'' –ಧಾತುಗಳಲ್ಲಿ ''ಇದು ಪರಸ್ಮೈಪದಿ, ಇದು ಆತ್ಮನೇ ಪದಿ" ಎಂಬುದಾಗಿ ಪ್ರದರ್ಶಿಸುವುದು "ಬಹುಲಂ"= ಪ್ರಾಯಿಕವಾದುದು ಏಕೆಂದರೆ– ಪ್ರೌಢರ (ವಿದ್ವಾಂಸರ) ಪ್ರಯೋಗಗಳಲ್ಲಿ ಇವುಗಳಿಗೆ ವ್ಯತ್ಯಾಸವಾಗಿಯೂ ಪರಸ್ಮೈಪದಿ ಆತ್ಮನೇ ಪದಿಗಳಾಗಿರುವುದು ಕಂಡು ಬಂದಿರುವುದು ಆದುದರಿಂದ ಇಲ್ಲಿ ಪರಸ್ಮೈಪದಪ್ರಯೋಗವು ಸರಿಯಾ ದುದು, ಹೀಗೆ ಭಾವ. ಈ ಸಂಗತಿಯು "ಇಂದ್ರಃ ಚಂದ್ರಃ ಕಾಶಕೃತ್ಸ್ನಾ ಪಿಶಲೀಶಾಕಟಾಯನಃ ॥ ಪಾಣಿನ್ಯಮರ ಜೈನೇಂದ್ರಾ ಏತೇಷ್ಟಾವಾದಿಶಾಬ್ದಿಕಾಃ" ಎಂಬಲ್ಲಿ ಹೇಳಿದ ಇತರ ವ್ಯಾಕರಣಕಾರರಿಗೂ ಸಮ್ಮತವೆಂಬುದಾಗಿ "ಚಂದ್ರಾದ ಯಸ್ತು" ಇತ್ಯಾದಿ ವಚನದಿಂದ ಹೇಳುತ್ತಾರೆ. ಚಂದ್ರಮುಂತಾದವರು ಮಾಡಿದ

कर्तृत्वं यस्य तस्यैव भोक्तृत्वमुपलभ्यते ॥

एवमनीश्वरसाङ्ख्यमतं साधारणदूषणैरपाकृत्य ये कर्तृत्व प्रकृतेरेव भोक्तृत्वं त्वात्मन इति मन्यन्ते तन्मतं दूषयति ॥ कर्तृत्वमिति । यद्वैवमात्मनः कर्तृत्वमुपपाद्य भोक्तृत्वमप्यनेनोपपादयति । येन मयेदं कृतं स एवाहं तत्फलं भुञ्ज इति कर्तृत्वभोक्तृत्वयोः सामानाधिकरण्यानुभवात्तद्वैय्यधिकरण्याङ्गीकारेऽनुभवविरोध इत्यर्थः । भ्रान्तो

ಯಾವನಿಗೆ ಕರ್ತೃತ್ವವೋ ಅವನಿಗೇ ಭೋಕ್ತೃತ್ವವು ಕಂಡು ಬರುತ್ತದೆ.

— ಪದಾರ್ಥದೀಪಿಕಾ —

ಹೀಗೆ ನಿರೀಶ್ವರ ಸಾಂಖ್ಯಮತವನ್ನು ಸಾಧಾರಣ ದೂಷಣಗಳಿಂದ ನಿರಾಕರಿಸಿ " ಪ್ರಕೃತಿಗೇ ಕರ್ತೃತ್ವವು, ಆತ್ಮನಿಗ ಭೋಕ್ತೃತ್ವವು, " ಹೀಗೆ ಯಾರು ಬಗೆಯುತ್ತಾರೋ ಅವರ ಮತವನ್ನು "ಕರ್ತೃತ್ವಂ" ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ ಅಥವಾ ಹೀಗೆ " ಆತ್ಮನ ಕರ್ತೃತ್ವವನ್ನು ಉಪಪಾದನ ಮಾಡಿ ಭೋಕ್ತೃತ್ವವನ್ನು ಇದರಿಂದಲೇ ಉಪಪಾದಿಸುತ್ತಾರೆ- ಏಕೆಂದರೆ " ಇದನ್ನು ಮಾಡಿದವನು ನಾನೇ, ನಾನೇ ಇದರ ಫಲವನ್ನು ಉಣ್ಣುತ್ತೇನ " ಎಂಬುದಾಗಿ ಕರ್ತೃತ್ವ ಭೋಕ್ತೃತ್ವಗಳೆರಡೂ ಒಬ್ಬರಲ್ಲಿರುವುದು ಅನುಭವದಲ್ಲಿ ಕಂಡಿದೆ ಮತ್ತು ಬೇರೆ ಬೇರೆ ಕಡೆಯಲ್ಲಿರುವವೆಂದು ಒಪ್ಪಿದರೆ ಅನುಭವವಿರೋಧವು ಬರುತ್ತದೆ ಹೀಗೆ ಅರ್ಥ ಈ ಅನುಭವವು ಭ್ರಮವೆಂದು ಶಂಕಿಸಬಾರದು

— ವಿಶೇಷಾರ್ಥಪ್ರದೀಪಿಕಾ —

ಇತರ ವ್ಯಾಕರಣಗ್ರಂಥಗಳಲ್ಲಿ ಎಲ್ಲ ಧಾತುಗಳೂ ಉಭಯಪದಿಗಳೆಂದು ಹೇಳಿದುದರಿಂದ, ಈ ಪರಸ್ಮೈಪದಪ್ರಯೋಗವು ಯುಕ್ತವೆಂದು ಭಾವ. ಧಾತು ವೃತ್ತಿಯಲ್ಲಿ "ಚಕ್ಷಿಙ್ ವ್ಯಕ್ತಾಯಾಂ ವಾಚಿ" ಎಂಬ "ಚಕ್ಷಿಙ್" ಧಾತುವು ಅನುದಾತ್ತವಾದುದರಿಂದಲೇ ಆತ್ಮನೇ ಪದವು ಸಿದ್ಧವಾಗುವುದರಿಂದ, " ಙಿತ್ ' ಎಂಬುದಾಗಿ ಹೇಳುವುದು, "ವ್ಯರ್ಥಂ ಸತ್ ಅನ್ಯತ್ ಜ್ಞಾಪಯತಿ" ಎಂಬ ನ್ಯಾಯದಿಂದ, ಇಂಥ ಇನ್ನೂ ಅನೇಕ ಧಾತುಗಳಿಗೆ ಪರಸ್ಮೈಪದವು ಇರುವುದೆಂಬುದನ್ನು ಜ್ಞಾಪನ ಮಾಡುತ್ತದೆಯೆಂದು ಹೇಳಿದ್ದಾರೆ. ಆದುದರಿಂದ, ಪಾಣಿನಿಗೂ ಇದು ಸಮ್ಮತವೆಂದೂ ಸೂಚಿತವಾಗುತ್ತದೆ.

ಕರ್ತೃತ್ವ ಭೋಕ್ತೃತ್ವಗಳು ಒಂದೆಡೆಯಲ್ಲಿ ಇರುವುದಿಲ್ಲ. ಬೇರೆ ಬೇರೆ

विभागे च तयोर्मानं नैव किञ्चित्क्वचिद्भवेत् ॥

अयमनुभव इति चेन्न । बाधकाभावादित्याह ॥ विभागे चेति । तयोः कर्तृत्वभोक्तृत्वयोर्विभागे व्यधिकरणत्वे । अकृताभ्यागमकृत-विनाशौ चैवं सति स्यातामिति ।

यदुक्तमात्मनो मोक्षो न स्यादिति । तदिष्टापादनम् । प्रकृते-रेव मोक्षाभ्युपगमात् । न च बन्धमोक्षयोर्वैय्यधिकरण्यानुपपत्तिः ।

ಆ ಕರ್ತೃತ್ವ-ಭೋಕ್ತೃತ್ವಗಳಿಗೆ ಒಂದೆಡೆಯಲ್ಲಿ ಸಮಾವೇಶವಿಲ್ಲವೆಂಬಲ್ಲಿ ಯಾವ ಪ್ರಮಾಣವೂ ಎಲ್ಲಿಯೂ ಇರುವುದೇ ಇಲ್ಲ

— ಪದಾರ್ಥದೀಪಿಕಾ —

ಏಕೆಂದರೆ- ಬಾಧಕವಿರುವುದಿಲ್ಲ ಈ ಸಂಗತಿಯನ್ನು " ವಿಭಾಗೇ ಚ " ಇತ್ಯಾದಿ ವಚನದಿಂದ ಹೇಳುತ್ತಾರೆ "ತಯೋಃ'– ಕರ್ತೃತ್ವ ಭೋಕ್ತೃತ್ವಗಳಿಗೆ, "ವಿಭಾಗೇ"– ಬೇರೆ ಬೇರ ಅಧಿಕರಣಗಳಿರುವುದಾದರೆ- "ಅಕೃತಾಭ್ಯಾಗಮ ಕೃತವಿಪ್ರನಾಶ"ಗಳೆಂಬ ದೋಷಗಳು ಬರುತ್ತವೆ ಹೀಗೆ ಅರ್ಥ

ಆತ್ಮನಿಗೆ ಮೋಕ್ಷವಾಗದಿರಲಿ ! ಎಂಬ ಹೇಳಿಕೆಯು. ಇಷ್ಟಾಪಾದನವೇ ! ಏಕೆಂದರೆ ಪ್ರಕೃತಿಗೇ ಮೋಕ್ಷವೆಂಬುದನ್ನು ಅಂಗೀಕರಿಸಿರುತ್ತದೆ ಬಂಧ ಮುಕ್ತಿಗಳಿಗೆ ಬೇರೆ ಬೇರೆ ಅಧಿಕರಣವಿರುವುದು ಸರಿಯಲ್ಲವೆಂಬ ದೂಷಣವೂ

— ವಿಶೇಷಾರ್ಥಪ್ರದೀಪಿಕಾ —

ಅಧಿಕರಣಗಳಲ್ಲಿ ಇರತಕ್ಕವುಗಳೆಂಬ ಪಕ್ಷದಲ್ಲಿ ಸಾಧಕವಿಲ್ಲವೆಂಬುದಷ್ಟೇ ದೋಷ ವಲ್ಲ ಬಾಧಕವೂ ಇದೆಯೆಂಬುದಾಗಿ " ಅಕೃತಾಭ್ಯಾಗಮಕೃತ ವಿನಾಶೌಚ ಸ್ಯಾತಾಂ" ಎಂಬ ವಚನದಿಂದ ಹೇಳುತ್ತಾರೆ ಕರ್ತೃತ್ವ-ಭೋಕ್ತೃತ್ವಗಳು ಬೇರೆ ಬೇರೆ ಅಧಿಕರಣಗಳಲ್ಲಿ ಇರುವವುಗಳಾದರೆ– ಕರ್ತೃವಿಗೆ (ಮಾಡಿದವನಿಗೆ) ಫಲ ವಿಲ್ಲದಿರುವುದರಿಂದ, ಅವನು ಮಾಡಿದ ಪುಣ್ಯದ ನಾಶವಾಗುವದು (ಮಾಡದ ವನಿಗೆ) ಅಕರ್ತೃವಿಗೆ ಫಲವು ಬರುವುದರಿಂದ ಅಕೃತ (ಮಾಡಲ್ಪಡದ) ವಾದ ಪುಣ್ಯದ ಬರುವಿಕೆಯು, ಹೀಗೆ ದೋಷವು. "ತಸ್ಮಾನ್ನ ಬಧ್ಯತೇ ಜಂತುಃ ನಾಪಿ ಸಂಸರತಿ ಕಶ್ಚಿತ್ ॥ ಬಧ್ಯತೇ ಸಂಸರತಿ ಮುಚ್ಯತೇ ಚ ನಾನಾಶ್ರಯಾ ಪ್ರಕೃತಿಃ" ಎಂಬ ಸಾಂಖ್ಯಕಾರಿಕೆಯನ್ನು ಹೃದಯದಲ್ಲಿಟ್ಟುಕೊಂಡು "ಪ್ರಕೃತೇರೇವ ಮೋಕ್ಷಾ ಭ್ಯುಪಗಮಾತ್" ಎಂಬುದಾಗಿ ಹೇಳಿದ್ದಾರೆ.

सर्वमानविरोधैकदुर्दीक्षा[illegible]त्वयम् ॥
मायावाद्युपमां यायात्

बन्धस्यापि प्रकृतिगतत्वादिति चेन्न । सकलश्रुतिस्मृतीतिहासपुराणानुभवैर्बन्धमोक्षयोरात्मगतत्वावगमेन तद्विरोधादित्याशयवानुपसंहरति ॥ सर्वेति । सर्वमानविरोध एव या प्रधानदुर्दीक्षा दुष्टोऽनुष्ठानसङ्कल्पः । तया दीक्षितोऽयं तु साङ्ख्यो मायावादिनामुपमात्वं प्राप्नुयात् । तेऽपि हि कर्तृत्वभोक्तृत्वादिसकलधर्मविकलमसत्कल्पं चैतन्यमात्रमङ्गीकृत्याविद्याया एवाचेतनायाः सर्वकारणत्वं बन्धमोक्षा-

ಸರ್ವಪ್ರಮಾಣಗಳ ವಿರೋಧವನ್ನು ಮಾಡುವುದರಲ್ಲಿಯೇ ಪ್ರಧಾನ ಸಂಕಲ್ಪವುಳ್ಳ ಈ ಸಾಂಖ್ಯನು ಮಾಯಾವಾದಿಗಳ ಸಾಮ್ಯವನ್ನು ಹೊಂದುತ್ತಾನ

— ಪದಾರ್ಥದೀಪಿಕಾ —

ಇಲ್ಲಿ ಅನ್ವಯಿಸುವುದಿಲ್ಲ ಏಕೆಂದರೆ ಬಂಧವಾದರೋ ಪ್ರಕೃತಿಯಲ್ಲಿಯೇ ಇರುವಂತಹದು ಹೀಗೆ ಹೇಳಬಾರದು ಏಕೆಂದರೆ– ಸಕಲ ಶ್ರುತಿಸ್ಮೃತಿ ಇತಿಹಾಸ ಪುರಾಣ ಅನುಭವಗಳಿಂದ, ಬಂಧಮೋಕ್ಷಗಳೆರಡೂ ಆತ್ಮನಲ್ಲಿರುವವುಗಳೆಂದು ತಿಳಿದುಬರುವುದರಿಂದ, ಅವುಗಳಿಂದ ವಿರೋಧವು ಬರುತ್ತದೆಯೆಂಬ ಅಭಿಪ್ರಾಯದಿಂದ " ಸರ್ವಮಾನವಿರೋಧೈಕ " ಇತ್ಯಾದಿ ವಚನದಿಂದ ಉಪಸಂಹಾರ ಮಾಡುತ್ತಾರೆ ಸರ್ವಪ್ರಮಾಣಗಳ ವಿರೋಧದಲ್ಲಿಯೇ ಪ್ರಧಾನವಾದ ದುರ್ದೀಕ್ಷೆಯು ಎಂದರೆ ದುಷ್ಟವಾದ ಅನುಷ್ಠಾನ ( ಮಾಡಬೇಕೆಂಬ ) ಸಂಕಲ್ಪವು ಯಾವದೋ ಅದರಿಂದ ದೀಕ್ಷಿತನಾದ ಈ ಸಾಂಖ್ಯನಾದರೋ ಮಾಯಾವಾದಿಯಿಂದ ಸಾಮ್ಯವನ್ನು ಹೊಂದಿಯಾನು ( ಹೊಂದುತ್ತಾನೆ) ಅವರಾದರೋ ಕರ್ತೃತ್ವ ಭೋಕ್ತೃತ್ವ ಮುಂತಾದ ಸಕಲ ಧರ್ಮಗಳಿಂದಲೂ ರಹಿತವಾದ ಅಸತ್ತಿನಂತಹ

— ವಿಶೇಷಾರ್ಥಪ್ರದೀಪಿಕಾ —

"ಸರ್ವಮಾನವಿರೋಧ ಏವ" ಸರ್ವಪ್ರಮಾಣಗಳಿಗೆ ವಿರುದ್ಧವಾದ ಅರ್ಥವನ್ನು ಅಂಗೀಕರಿಸುವುದೆಂಬ ದುರ್ದೀಕ್ಷೆಯಿಂದ ದೀಕ್ಷಿತನಾದವನೆಂದು ಇಲ್ಲಿಯ ಅರ್ಥ "ಭಸ್ಮಧಾರಣರೂಪದುರ್ದೀಕ್ಷಾದೀಕ್ಷಿತನ ಹಾಗೆ ಸರ್ವಪ್ರಮಾಣವಿರುದ್ಧ ಅರ್ಥಾಂಗೀಕಾರವೆಂಬ ದುರ್ದೀಕ್ಷಾ ದೀಕ್ಷಿತನು ಈ ಸಾಂಖ್ಯನು,' ಹೀಗೆ ರೂಪಕವಿದೆಯೆಂದು ಭಾವ

धिकरणत्वं चाभ्युपगच्छन्ति । तदेतेषां सर्वप्रमाणविरुद्धार्थाङ्गीकारित्वे साङ्ख्योऽयं दृष्टान्तभावमापद्यत इति । यत्पुरुषबहुत्वं साङ्ख्येनाङ्गीकृतं तदपि मायावादिभिरभ्युपगतमेव । जननादिप्रकृतिधर्मैरेव हि

— ಪದಾರ್ಥದೀಪಿಕಾ —

ಕೇವಲ ಚೈತನ್ಯವೊಂದನ್ನೇ ಅಂಗೀಕರಿಸಿ, ಅಚೇತನವಾದ ಅವಿದ್ಯೆಯೇ ಸರ್ವ ಕಾರಣವೆಂದೂ ಬಂಧ ಮೋಕ್ಷಗಳುಳ್ಳದ್ದೆಂದೂ ಅಂಗೀಕರಿಸುತ್ತಾರೆ ಅವರು ಸರ್ವಪ್ರಮಾಣಗಳಿಂದ ವಿರುದ್ಧವಾದ ವಿಷಯವನ್ನು ಸ್ವೀಕರಿಸುವುದರ ಬಗೆ ಈ ಸಾಂಖ್ಯನು ದೃಷ್ಟಾಂತನಾಗುತ್ತಾನೆ ಹೀಗ ಅರ್ಥ, ಸಾಂಖ್ಯರು ಅಂಗೀಕರಿಸಿದ ಪುರುಷರ ಬಹುತ್ವವೆಂಬ ವಾದವನ್ನಾದರೂ ಮಾಯಾವಾದಿಗಳು ಒಪ್ಪಿಯೇ ಒಪ್ಪಿದ್ದಾರೆ ಏಕೆಂದರೆ ಜನನಮುಂತಾದ ಪ್ರಕೃತಿಯ ಧರ್ಮಗಳಿಂದಲೇ

— ವಿಶೇಷಾರ್ಥಪ್ರದೀಪಿಕಾ —

ಉಪಮಾ ಶಬ್ದಕ್ಕೆ ಸಾದೃಶ್ಯವೆಂಬ ಅರ್ಥವನ್ನು ಗ್ರಹಿಸಿ, ಅದನ್ನು "ಅವಿದ್ಯಾಯಾ" ಇತ್ಯಾದಿ ವಾಕ್ಯದಿಂದ ಉಪಪಾದಿಸುತ್ತಾರೆ ಇನ್ನು ಮಾಯಾ ವಿಶಿಷ್ಟವಾದ ಬ್ರಹ್ಮವು ಜಗತ್ತಿನ ಉಪಾದಾನವೆಂಬ ಪಕ್ಷದಲ್ಲಿ ಹಗ್ಗದ ಎರಡು ಎಳೆಗಳ ಹಾಗೆ ಮಾಯಾ-ಬ್ರಹ್ಮ ಇವೆರಡೂ ಸೇರಿ ಜಗತ್ತಿನ ಉಪಾದಾನಗಳು ಆದರೆ ಅಚೇತನವೇ ಆದ ಕೇವಲ ಅವಿದ್ಯೆಗೆ ಜಗತ್ಕಾರಣತ್ವವಿಲ್ಲ ಆದರೂ "ಮಾಯೆಯೇ ಜಗತ್ತಿನ ಉಪಾದಾನವು ಬ್ರಹ್ಮವು ಜಗತ್ತಿನ ಉಪಾದಾನವಾದ ಮಾಯೆಯ ಅಧಿಷ್ಠಾನವಷ್ಟೇ" ಎಂಬ ಮತವನ್ನು ಅವಲಂಬಿಸಿ, "ಅವಿದ್ಯಾಯಾ ಏವ ಸರ್ವಕಾರಣತ್ವಂ ಅಭ್ಯುಪಗಚ್ಛಂತಿ" ಇತ್ಯಾದಿಯಾಗಿ ಹೇಳಿದ್ದಾರೆ ಇವರ ಪಕ್ಷದಲ್ಲಿ "ಈ ಪ್ರಪಂಚದ ಜನ್ಮಾದಿಗಳು ಯಾವುದರಿಂದ ಆಗುವವೋ ಅದು ಮಾಯೆಯು, ಅದರ ಆಶ್ರಯವು ಬ್ರಹ್ಮವು" ಹೀಗೆ "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದ ಅರ್ಥ

ಪುರುಷ( ಆತ್ಮ )ರ ಬಹುತ್ವವನ್ನು ಸಾಂಖ್ಯರು ಅಂಗೀಕರಿಸುವರು, ಮಾಯಾ ವಾದಿಗಳು ಅಂಗೀಕರಿಸುವುದಿಲ್ಲ ಆದುದರಿಂದ ಅವರಿಬ್ಬರಲ್ಲಿ ವೈಷಮ್ಯವಿದೆ ಯೆಂಬ ಆಶಂಕೆಯನ್ನು "ಯತ್ಪುರುಷ ಬಹುತ್ವಂ" ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ. "ಮಾಯಾವಾದಿಭಿರಭ್ಯುಪಗತಮೇವ"- ಏಕಜೀವ ವಾದಿಗಳು ಪುರುಷ ಬಹುತ್ವವನ್ನು ಅಂಗೀಕರಿಸಿಲ್ಲ. ಆದರೂ ಬಹುಜೀವವಾದಿಗಳು ಅಂಗೀಕರಿಸಿದ್ದಾರೆ ಅವರ ಮತಾನುಸಾರವಾಗಿ ಹೀಗೆ ಹೇಳಿದ್ದೆಂದು ತಿಳಿಯಬೇಕು

ಸಾಂಖ್ಯರು ಪುರುಷ ಬಹುತ್ವವನ್ನು ಉಪಪಾದಿಸುವ ಪುರುಷ ಭೇದವನ್ನು

तद्बहुत्वम् । न तु स्वरूपे कश्चिदस्ति परस्परतो विशेषः । मायावादिनोऽप्युपाधिनिबन्धनं भेदमङ्गीकुर्वन्त्येव न च प्रपञ्चसत्यत्वं विशेषः । कारणमात्रत्वाभ्युपगमेन कार्यप्रपञ्चस्य साङ्ख्येन निरस्तत्वादिति ।

— ಪದಾರ್ಥದೀಪಿಕಾ —

ಪುರುಷರ ಬಹುತ್ವವು ಆದರೆ ಸ್ವರೂಪದಲ್ಲಿ ಪರಸ್ಪರವಾಗಿ ಯಾವದೇ ವಿಶೇಷ ವಿಲ್ಲ ಮಾಯಾವಾದಿಗಳಾದರೋ ಉಪಾಧಿಗಳ ಭೇದದ ಮೂಲಕವಾಗಿಯೇ ಭೇದವನ್ನು ಅಂಗೀಕರಿಸಿಯೇ ಇರುತ್ತಾರೆ ಇನ್ನು ಪ್ರಪಂಚಸತ್ಯತೆಯನ್ನು ಅಂಗೀಕರಿಸುವುದು ಸಾಂಖ್ಯರಲ್ಲಿ ಹೆಚ್ಚಿನದೆಂದು ಬಗೆಯಬಾರದು ಏಕೆಂದರೆ— ಕೇವಲ ಕಾರಣವನ್ನಷ್ಟೇ ಅಂಗೀಕರಿಸಿದುದರಿಂದ ಕಾರ್ಯಪ್ರಪಂಚವನ್ನು ಸಾಂಖ್ಯನು ನಿರಾಕರಿಸಿರುತ್ತಾನೆ ಹೀಗೆ ಸೃಷ್ಟಿಪ್ರಳಯ ಬಂಧಮೋಕ್ಷ ಅವುಗಳ

— ವಿಶೇಷಾರ್ಥಪ್ರದೀಪಿಕಾ —

ಅಂಗೀಕರಿಸಿದುದರಿಂದ ಅದನ್ನು ಒಪ್ಪುತ್ತಾರೆ ಆದರೆ ಅಪಸಿದ್ಧಾಂತವು ಬರುವುದರಿಂದ ಆತ್ಮಭೇದವನ್ನು ಒಪ್ಪದ ಮಾಯಾವಾದಿಗಳು ಪುರುಷಬಹುತ್ವವನ್ನು ಒಪ್ಪಲಾರರು ಆದುದರಿಂದ ಉಭಯಮತದಲ್ಲಿ ವೈಷಮ್ಯವೆಂಬ ಆಶಂಕೆಯು ಬಂದರೆ— ಇದರ ಅಭಿಪ್ರಾಯವೇನು ? ಸ್ವಾಭಾವಿಕ ಪುರುಷಭೇದವನ್ನು ಮಾಯಾವಾದಿಯು ಒಪ್ಪಿಲ್ಲವಾದ್ದರಿಂದ ಪುರುಷಬಹುತ್ವವನ್ನು ಒಪ್ಪಲಾರರೆಂಬ ಅಭಿಪ್ರಾಯವೋ ? ಔಪಾಧಿಕ ಭೇದವನ್ನೂ ಒಪ್ಪಿಲ್ಲವಾದುದರಿಂದ ಪುರುಷ ಬಹುತ್ವವನ್ನು ಒಪ್ಪಲಾರರೆಂಬ ಅಭಿಪ್ರಾಯವೋ ? ಮೊದಲನೆಯ ಕಲ್ಪವು ಯುಕ್ತವಲ್ಲ ಏಕೆಂದರೆ ಮಾಯಾವಾದಿಗಳ ಮತದಲ್ಲಿ ಹೇಗೋ ಹಾಗೆ ಸಾಂಖ್ಯರ ಮತದಲ್ಲಿಯೂ ಸ್ವಾಭಾವಿಕ ಪುರುಷ ಭೇದವೂ ಅಂಥ ಪುರುಷ ಬಹುತ್ವವೂ ಒಪ್ಪಿತವಾಗಿಲ್ಲ ಈ ಕಾರಣದಿಂದ ಇಬ್ಬರಲ್ಲಿಯೂ ಸಾಮ್ಯವೇ ಇರುತ್ತದೆ ಈ ಅಭಿಪ್ರಾಯದಿಂದ ಸಾಂಖ್ಯರ ಮತದಲ್ಲಿ ಪುರುಷ ಭೇದವು ಔಪಾಧಿಕವೆಂಬುದನ್ನು "ಜನನಾದಿ ಇತ್ಯಾದಿ" ವಾಕ್ಯದಿಂದ ಉಪಪಾದಿಸುತ್ತಾರೆ ಎರಡನೆಯ ಪಕ್ಷವೂ ಸರಿಯಲ್ಲ ಏಕೆಂದರೆ ಸಾಂಖ್ಯರ ಮತದಲ್ಲಿರುವಂತೆ ಮಾಯಾವಾದಿಗಳ ಮತದಲ್ಲಿಯೂ ಔಪಾಧಿಕ ಪುರುಷ ಭೇದವೂ ಒಪ್ಪಿತವಿರುವುದರಿಂದ, ಆದರಿಂದ ಪುರುಷ ಬಹುತ್ವವನ್ನು ಅಂಗೀಕರಿಸುವುದರಿಂದ ವೈಷಮ್ಯವಿಲ್ಲ ಎರಡೂ ವಾದಿಗಳಲ್ಲಿ ಸಾಮ್ಯವೇ ! ಈ ಅಭಿಪ್ರಾಯವನ್ನು "ಮಾಯಾವಾದಿನೋಽಪಿ" ಈ ವಾಕ್ಯದಿಂದ ಹೇಳಿರುತ್ತಾರೆ

ಮೂಲದಲ್ಲಿ "ಸರ್ವಮಾನ ವಿರೋಧೈಕದುರ್ದೀಕ್ಷಾ ದೀಕ್ಷಿತಸ್ತ್ವಯಂ"

तच्चशब्दान्निराकृत. ॥ २-२-१ ॥

याऽपि साङ्ख्यपरिकल्पिता सृष्टिप्रलयबन्धमोक्षतत्साधनप्रक्रिया साऽपि सर्वप्रमाणविरुद्धेत्युक्तं भवति । न केवलं साङ्ख्यस्य मायावादिसदृशत्वमस्माभिरेवोच्यते । किन्तु सूत्रकृताऽपि सू.चितमित्याह ॥ तदिति । तस्मान्मायावादिसदृशत्वादेव हि साङ्ख्यो भोक्त्रापत्तेरविभागश्चेत्स्याल्लोकवदिति प्राक् पराकृतेन मायावादिना रचनानुपपत्तेश्च नानुमानमिति चशब्देन समुच्चित्य निराकृतः । यद्वा प्रमाण-

ಮಾಯಾವಾದಿ ಸದೃಶನಾಗುವನೆಂಬ ಕಾರಣದಿಂದಲೇ "ರಚನಾನುಪಪತ್ತೇಶ್ಚ" ಎಂಬಲ್ಲಿಯು "ಚ" ಶಬ್ದದಿಂದ ನಿರಾಕರಿಸಲ್ಪಟ್ಟದ್ದಾನೆ ೨-೨-೧

— ಪದಾರ್ಥದೀಪಿಕಾ —

ಸಾಧನ, ಇವುಗಳ ಯಾವ ಪ್ರಕ್ರಿಯೆಯನ್ನು ಸಾಂಖ್ಯನು ಕಲ್ಪಿಸಿರುತ್ತಾನೋ ಅದೆಲ್ಲವೂ ಸಕಲಪ್ರಮಾಣಗಳಿಂದ ವಿರುದ್ಧವಾದುದೆಂದು ಹೇಳಿದ್ದಾಗುತ್ತದೆ ಕೇವಲ ನಾವು ಮಾತ್ರ ಮಾಯಾವಾದಿಗಳ ಸಾಮ್ಯವನ್ನು ಸಾಂಖ್ಯರಿಗೆ ಹೇಳುತ್ತೇವೆಂದಲ್ಲ ಸೂತ್ರಕಾರರೂ ಸೂಚಿಸಿರುತ್ತಾರೆಂಬುದನ್ನು "ತತ್" ಇತ್ಯಾದಿ ವಚನದಿಂದ ಹೇಳುತ್ತಾರೆ ಆದುದರಿಂದ, ಮಾಯಾವಾದಿಯಿಂದ ಸದೃಶನಾದುದರಿಂದ, "ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್" ಎಂಬುದಾಗ ಹಿಂದೆ ನಿರಾಕರಿಸಲ್ಪಟ್ಟ ಮಾಯಾವಾದಿಯೊಡನ "ರಚನಾನುಪಪತ್ತೇಶ್ಚ ನಾನುಮಾನಂ" ಇಲ್ಲಿರುವ "ಚ" ಶಬ್ದದಿಂದ ಸಮುಚ್ಚಯಗೊಳಿಸಿ ಸಾಂಖ್ಯನನ್ನು

— ವಿಶೇಷಾರ್ಥಪ್ರದೀಪಿಕಾ —

ಎಂಬುದಾಗಿ ಹೇಳಿದ ಸಾಮಾನ್ಯ ವಚನವು ವ್ಯರ್ಥವೆಂಬ ಆಶಂಕೆಯನ್ನು "ಸಾಂಖ್ಯರು ಕಲ್ಪಿಸಿದ ಬೇರೆ ಪ್ರಕ್ರಿಯೆಗಳೂ ಪ್ರಮಾಣ ವಿರುದ್ಧಗಳೆಂಬುದರ ಸೂಚನೆಯಾಗುವುದರಿಂದ ಅದು ವ್ಯರ್ಥವಲ್ಲ" ಎಂಬ ಅಭಿಪ್ರಾಯದಿಂದ ''ಯಾಽಪಿ'' ಇತ್ಯಾದಿ ವಾಕ್ಯಗಳಿಂದ ಪರಿಹರಿಸುತ್ತಾರೆ

ಮುಂದಿನ ''ತಚ್ಚ'' ಎಂಬ ಅನುವ್ಯಾಖ್ಯಾನದ ವ್ಯರ್ಥತೆಯನ್ನು ಪರಿಹರಿಸಲು, ಹಿಂದಿನ ವಾಕ್ಯದಿಂದ ಹೇಳಿದ ಮಾಯಾವಾದಿ ಸಾದೃಶ್ಯವನ್ನು ಸಮರ್ಥನ ಮಾಡಲು ಹೊರಟಿದೆಯೆ ಃ ಸಮಾಧಾನಪರವಾಗಿ ಯೋಜನೆಯ '' ನ ಕೇವಲಂ '' ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ

विरोधोऽपि नोत्सूत्रित. इत्यनेनाह । तस्मात्सर्वविरोधित्वादेव । चशब्दात्सर्वमानविरोधसमुच्चयार्थं चशब्दं प्रक्षिप्येत्यर्थः ॥ २-२-१ ॥

## — ಪದಾರ್ಥದೀಪಿಕಾ —

ನಿರಾಕರಿಸಿದ್ದಾಗಿದೆ. ಅಥವಾ- ಪ್ರಮಾಣವಿರೋಧವನ್ನು ಸೂತ್ರದಲ್ಲಿ ಹೇಳಿಲ್ಲ ವೆಂದಲ್ಲ ಎಂಬುದನ್ನು ಈ ವಚನದಿಂದ ಹೇಳಿದ್ದಾರೆ "ತಸ್ಮಾತ್"=ಸರ್ವಪ್ರಮಾಣ ಗಳಿಂದ ವಿರುದ್ಧವಾದುದರಿಂದಲೇ ! "ಚ ಶಬ್ದಾತ್"- ಸರ್ವ ಪ್ರಮಾಣಗಳಿಂದ ವಿರೋಧವೆಂಬುದನ್ನು ಸಮುಚ್ಚಯಗೊಳಿಸುವ " ಚ " ಶಬ್ದವನ್ನು ಪ್ರಕ್ಷೇಪಿಸಿ; ಪ್ರಯೋಗಿಸಿ ಹೀಗೆ ಅರ್ಥ ॥ ೨-೨-೧ ॥

ರಚನಾನುಪಪತ್ತ್ಯಧಿಕರಣವು ಮುಗಿದುದು.

## — ವಿಶೇಷಾರ್ಥಪ್ರದೀಪಿಕಾ —

"ಚಶಬ್ದಾತ್" ಎಂಬಲ್ಲಿರುವ ಪಂಚಮೀವಿಭಕ್ತಿಯು, ಲ್ಯಬಂತ ಅವ್ಯಯದ ಪ್ರಯೋಗವಿಲ್ಲದೆಯೇ, ಅದರ ಅರ್ಥವು ಗಮ್ಯಮಾನವಾಗುವಾಗ ( ತಿಳಿದು ಬರುವಾಗ) ಅಧಿಕರಣ-ಕರ್ಮಕಾರಕಗಳ ಮುಂದೆ ಪಂಚಮೀ ವಿಭಕ್ತಿಯು ಬರುತ್ತದೆಂಬ ನಿಯಮದ ಪ್ರಕಾರವಾಗಿ ಬಂದುದು, ಈ ಅಭಿಪ್ರಾಯದಿಂದ "ಚಶಬ್ದಾತ್" ಇತ್ಯಾದಿ ವಾಕ್ಯವನ್ನು ಹಿಡಿದು ವ್ಯಾಖ್ಯಾನಿಸಿರುತ್ತಾರೆ. "ಸರ್ವ ಪ್ರಮಾಣವಿರೋಧಗಳ ಸಮುಚ್ಚಯಾರ್ಥಕವಾದ ಚಶಬ್ದವನ್ನು ಪ್ರಯೋಗಿಸಿ" ಎಂದು ಅದರ ವಿವರಣ. ॥ ೨-೨-೧ ॥

# — ಶುದ್ಧಾಶುದ್ಧಿ ಪತ್ರಿಕೆ —

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩ | ೨೯ | ಸ್ತ್ರೋತ್ರತ್ವಾದಿಕಂ | ಶ್ರೋತೃತ್ವಾದಿಕಂ |
| ೭ | ೨೦ | ವಾಕ್ಯೇಃ | ವಾಕ್ಯೇ |
| ೧೧ | ೬ | क. र्यलिङ्गेन | क र्यालिङ्गेन |
| ೧೫ | ೧೭ | ಮುದಾದಿ | ಮೃದಾದಿ |
| ೧೬ | ೭ | केषा ञ्चचेननाना | केषाञ्चचे नाना |
| ೧೯ | ೧೫ | ಸೂತದಿಂದ | ಸೂತ್ರದಿಂದ |
| ೧೯ | ೧೭ | ಪ್ರಾಮಾಣ್ಯೇಪಿ | ಪ್ರಾಮಾಣ್ಯೇಪಿ |
| ೨೧ | ೧೮ | ಸಬಂಧ | ಸಂಬಂಧ |
| ೨೨ | ೬ | सूचता | सूचिता |
| ೨೭ | ೪ | चतरस्य | च् तरस्य |
| ೩೨ | ೫ | यद्याप | यद्यपि |
| ೩೫ | ೧೨ | ಹಿೀಗೆ | ಹೇಗೆ |
| ೩೭ | ೩ | व्युत्यदिता | व्युत्पादिता |
| ೪೨ | ೮ | विरुद्धत्वाब्रह्म | विरुद्धत्वाद् ब्रह्म |
| ೬೫ | ೧೫ | ವೆಂದಿಂದಲ್ಲಿ | ವೆಂದಲ್ಲಿ |
| ೬೮ | ೨೭ | ನಪುಸಂಕ | ನಪುಂಸಕ |
| ೭೧ | ೬ | ಧರ್ಮೈ | ಧರ್ಮ್ಯೈರ್ |
| ೮೫ | ೨ | धर्म्यभद | धर्म्यभेद |
| ೮೮ | ೨೦ | ವಿಷಯುಳ್ಳ | ವಿಷಯವುಳ್ಳ |
| ೯೨ | ೨೭ | ತಾವಚ್ | ತಾವತ್ |
| ೧೦೨ | ೧೪ | ಆದಿಕಾ | ಆದಿಕಾಲ |
| ೧೦೫ | ೩ | त युत्तरं | तद्युत्तरं |
| ೧೧೨ | ೨ | प्रययत्न | प्रयत्न |
| ೧೧೬ | ೨ | षक्षीकारे | पक्षीकारे |
| ೧೨೦ | ೧೭ | ಸರ್ವ | ಸೂರ್ಯ |
| ೧೨೧ | ೩೦ | ಶೂನ್ಯೈಃ | ಶೂನ್ಯ್ಯೈಃ |
| ೧೨೨ | ೪ | क्रमेणाच्छेद | क्रमेणोच्छेद |
| ೧೨೪ | ೨೯ | ತತ್ರೈ ವಾವ್ಯಕ್ತ | ತತ್ತೈವಾವ್ಯಕ್ತ |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧೨೬ | ೪ | चतन | चेतन |
| ೧೨೭ | ೬ | पटोत्पात त् | पटोत्पात्तयत् |
| ೧೨೯ | ೨೭ | ಪ್ರಾನು ೃಹೀತ | ಪ್ರಾನುಗೃಹೀತ |
| ೧೩೧ | ೭ | प्रा प्रा ण्य | प्रामाण्य |
| ೧೩೮ | ೨೫ | ವಿಲಕ್ಷಣಾತ್ವಾತ್ | ವಿಲಕ್ಷಣತ್ವಾತ್ |
| ೧೪೦ | ೧೧ | ತಾರ್ಕಿಕನ | ತಾರ್ಕಿಕನು |
| ೧೪೧ | ೨೦ | शिष्ट | शिष्टे |
| ೧೪೨ | ೫ | ना भ्यैुपति | नाभ्युपैति |
| ೧೫೭ | ೧೯ | ಶುತ್ರಿಯು | ಶ್ರುತಿಯು |
| ೧೫೭ | ೨೭ | ಕಲ್ಪತ | ಕಲ್ಪಿತ |
| ೧೫೯ | ೧೮ | ವಾನ | ವಾದ |
| ೧೬೪ | ೨೮ | ಯುಧೋಽಕದಕಂ | ಯುಧೋಽದಕಂ |
| ೧೭೨ | ೭ | रित्यनैत्र | रित्यनेनैत्र |
| ೧೭೮ | ೯ | क्षेप | क्षेपे |
| ೧೮೩ | ೨೬ | ಬ್ರಹೋಽ | ಬ್ರಹ್ಮೋಽ |
| ೧೮೭ | ೭ | कथ ञ्चिदित्यर्थ | कथञ्चिदित्यर्थ |
| ೧೯೦ | ೧೧ | ಮಿಥಾತ್ವವು | ಮಿಥ್ಯಾತ್ವವು |
| ೧೯೨ | ೪ | तदनन्येतेति | तदनन्यतेति |
| ೨೧೩ | ೧೨ | ಅದೃಃ | ಅದೃಷ್ಟಃ |
| ೨೨೬ | ೧೮ | ಅಭೇವನ್ನಂತೂ | ಅಭೇದವನ್ನಂತೂ |
| ೨೨೯ | ೭ | प्रसिद्धोत्पति | प्रसिद्धोत्पत्ति |
| ೨೩೫ | ೨೭ | ಉಪಲಬಿ | ಉಪಲಬ್ಧಿ |
| ೨೪೦ | ೮ | ಅನಭಿಕ್ತಿ | ಅನಭಿವ್ಯಕ್ತಿ |
| ೨೪೦ | ೩೦ | ಅನಭ್ಯಿ | ಅನಭಿ |
| ೨೪೩ | ೧೭ | ಅಪ್ರಾಣಿಕ | ಅಪ್ರಾಮಾಣಿಕ |
| ೨೫೩ | ೫ | कर्तत्व | कर्तृत्व |
| ೨೭೦ | ೫ | श्चैतन्य | चैतन्य |
| ೨೭೪ | ೫ | निरत्रयत्व | निरवयवत्व |
| ೨೭೬ | ೩ | व्याचक्षते | व्याचक्षते । |
| ೨೭೯ | ೬ | ऽभेदं | भेदं |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೨೮೦ | ೧೨ | ಶಕ್ತಿಕ್ತ್ವ | ಶಕ್ತಿಕತ್ವ |
| ೨೮೫ | ೧೧ | ಪ್ರ ಪಾದಿ | ಪ್ರತಿಪಾದಿ |
| ೨೮೫ | ೨೬ | ದ್ವಿತೀಯಾಃ | ದ್ವಿತೀಯಾರ್ಧಃ |
| ೨೮೬ | [illegible] | शाब | शे । |
| ೨೯೦ | ೯ | नावस्तातु | नावस्थातुं |
| ೨೯೩ | ೧೩ | ಮೋಯೋಃ | ಮೋಯುಯೋಃ |
| ೨೯೪ | ೯ | ಪ್ರಯೋನಕ್ಕೆ | ಪ್ರಯೋಜನಕ್ಕೆ |
| ೨೯೪ | ೨೦ | ಬಭುತ್ಸೆ | ಬುಭುತ್ಸೆ |
| ೨೯೫ | ೧೮ | ಮೊದಲಯು | ಮೊದಲನಯು |
| ೨೯೬ | ೧೭ | ತ್ರಾರೆ | ತ್ರಾನ |
| ೨೯೬ | ೨೪ | ಕೊಂದು | ಕೊಂಡು |
| ೨೯೭ | ೮ | ಸಾಧಮಾಡು | ಸಾಧನಮಾಡು |
| ೨೯೭ | ೧೧ | ನಿರವನದ್ಯಃ | ನಿರವದ್ಯಃ |
| ೩೦೦ | ೬ | चयत | चेत्यत |
| ೩೦೦ | ೯ | प्यनकान्त्य | प्यनैकान्त्या |
| ೩೦೧ | ೧೩ | ಮಾಸ್ತ | ಮಾಪ್ತ |
| ೩೦೩ | ೪ | सूत्रक्षरा | सूत्राक्षरा |
| ೩೦೩ | ೭ | ततोऽप्ययुक्त | ततोऽप्ययुक्त |
| ೩೦೩ | ೧೩ | ಸೂತ್ರಾಕ್ಷಂಗಳಿಗೆ | ಸೂತ್ರಾಕ್ಷರಗಳಿಗೆ |
| ೩೦೬ | ೩ | स्वप्रयोजनो– | स्वप्रयोजना |
| ೩೦೬ | ೨೨ | ಪಾದಕ | ಆಪಾದಕ |
| ೩೦೮ | ೧೦ | ಪ್ರಯೋಜನತ್ವಾತ್ | ಪ್ರಯೋಜನವತ್ವಾತ |
| ೩೧೩ | ೬ | श्रुातनश्वरस्य | श्रुतिरीश्वरस्य |
| ೩೧೫ | ೧೯ | ಮಾಯಾವಿಯ | ಮಾಯಾವಿಯು |
| ೩೨೪ | ೨೬ | ಸರಿಬಂಧ | ಸಂಬಂಧ |
| ೩೨೬ | ೬ | श्रुयन | श्रुतय |
| ೩೨೮ | ೪ | श्रुतरैकार्थ्य | श्रुतैरैकार्थ्य |
| ೩೩೦ | ೧೩ | ಕರಿಸುವು | ಕರಿಸುವುದೇ |
| ೩೩೭ | ೫ | निर्घणत्व | निर्घृणत्व |
| ೩೪೦ | ೨೧ | ರಡು | ಎರಡು |

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೩೪೦ | ೨೩ | ಶ್ವರ | ಈಶ್ವರ |
| ೩೪೫ | ೨೦ | ಯುಕ್ತಿನಾಂ | ಯುಕ್ತೀನಾಂ |
| ೩೪೬ | ೧೭ | ಹತ್ವೇನ | ಹತತ್ವೇನಾಂ |
| ೩೪೯ | ೨೩ | ಸ ಗಕ್ಷ | ಸ್ವಪಕ್ಷ |
| ೩೫೦ | ೪ | प्रागवे | प्रागत्र |
| ೩೫೩ | ೮ | प्रज्ञात् | प्रसज्ञात् |
| ೩೬೬ | ೮ | इतीत्वेव | इतीत्येव |
| ೩೬೭ | ೧೧ | ತೀಕ್ಷ್ಣತೆಯು | ತೀಕ್ಷ್ಣತೆಯ |
| ೩೬೮ | ೫ | योयायाम्।मेव । | योग्यानामेव |
| ೩೭೦ | ೬ | स्वाभात्राव्यात् | स्वाभाव्यात् |
| ೩೭೧ | ೨೧ | ಗಳಿಲ್ಲ | ಗಳಿಗಿಲ್ಲ |
| ೩೭೮ | ೨ | भदेन | भेदेन |
| ೩೮೧ | ೪ | चतना | चेतना |
| ೩೮೭ | ೯ | ವಧ್ಯತೇ | ಬಧ್ಯತೇ |
| ೩೯೪ | ೯ | व्यत्ययन | व्यत्ययेन |
| ೪೦೬ | ೧೫ | ಹ್ಯುಪಾದಾನೇನ | ಹ್ಯುಪಾದಾನೇನ |
| ೪೧೩ | ೭ | प्रामाण | प्रमाण |
| ೪೧೯ | ೪ | स्वत त्वेन | स्वतस्त्वेन |
| ೪೨೨ | ೧೪ | ವಿಭಕ್ತಿ | ವಿಭಕ್ತ |
| ೪೩೫ | ೫ | त्त्रमह | त्वह |
| ೪೩೬ | ೧೩ | ಕರ್ತೇ್ಯವ | ಕರ್ತೇವ |
| ೪೫೬ | ೧೬ | ವಿಷ | ವಿಷಯ |
| ೪೬೦ | ೫ | पीस्यर्थ. | पीत्यर्थ |
| ೪೬೭ | ೨ | प्रशारित | प्रशास्ति |
| ೪೭೭ | ೧೦ | ನವು | ನವ್ಯ |
| ೪೮೧ | ೧೩ | ಸಲ | ಸ್ವಲ್ಪ |
| ೪೮೩ | ೧೦ | ಕರ್ತೃತರ್ತ್ವವು | ಕರ್ತೃತ್ವವು |
| ೪೯೩ | ೨ | विभ्यत्पराबर्तेत | बिभ्यत्परावर्तेत |
| ೪೯೬ | ೫ | यव्द्वैव | यद्वैव |

# ಶ್ರೀ ನ್ಯಾಯಸುಧಾ ಗ್ರಂಥದ ಪೋಷಕರು —

1) ಸರ್ವಶ್ರೀ T. R. ಆನಂದಮೂರ್ತಿ, ರಾಜಾಜಿನಗರ, ಬೆಂಗಳೂರ
2) K. ಹನುಮಂತರಾವ ,, ,,
3) K. ಸತ್ಯನಾರಾಯಣ ,, ,,
4) P ವೇಣುಗೋಪಾಲಾಚಾರ್ಯ ,, ,,
5) ಜಯತೀರ್ಥಾಚಾರ್ಯ ಅಗ್ನಿಹೋತ್ರಿ ,, ,,
6) C. S. ರಾಮಚಂದ್ರರಾವ ,, ,,
7) K. R ಅನಂತಮೂರ್ತಿ, ,, ,,
8) B M. ರಾಮರಾವ, ಮಲ್ಲೇಶ್ವರಂ, ,,
9) K ಗೋಕುಲಚಂದ್ರ ,,
10) ಒಂಟೀಲಿ ಕಿಶನ್‌ರಾವ, ರಾಜಾಜಿನಗರ ,,
11) ನಾಗರಾಜರಾವ, ಶೇಷಾದ್ರಿಪುರಂ ,,
12) B. ಶೇಷಗಿರಿರಾವ ಮೈಸೂರ
13) B. N. ಬದ್ರಿನಾಥ, ರಾಮಾನುಜಕೊಂಡ ,,
14) D. ರಾಮಚಂದ್ರಯ್ಯ, ಗಾಂಧಿನಗರ, ತುಮಕೂರ
15) R V ಗುರುರಾಜ ,
16) B P ನಾರಾಯಣಮೂರ್ತಿ, ಗೋಕುಲ, ,,
17) L S ರಾಘವೇಂದ್ರ ,,
18) B ಜನಾರ್ದನ K. R ಎಕ್ಸ್ಟೆನ್ಶನ್ ,,
19) ಭೀಮಸೇನಾಚಾರ್ಯ ವಡವಿ, ಗುಲಬುರ್ಗಾ
20) K V ಗೋಪಾಲಕೃಷ್ಣರಾವ ,,
21) K V ದೇವಳೆ, K T O ,
22) P S ಕುಲಕರ್ಣಿ, ,,
23) ಗುರ್ಜಾಲ ಹನುಮಂತಾಚಾರ್ಯ, ,,
24) K ಗುಂಡುರಾವ ಹೈದರಾಬಾದ
25) ಮಾನ್ವಿ ನರಸಿಂಗರಾವ ,,
26) K ವಿಜಯರಾವ ,,
27) B G. ಚಿಮ್ಮಲಿಗಿ "ವಸಿಷ್ಠಾಶ್ರಮ" ರಾಮಕೋಟಿ ,,
28) P S ಹೊಂಬಾಳಿ ಗದಗ
29) H ಹನುಮೇಶ ಕಡಪ
30) C ರಂಗವಿಠಲರಾವ ,,
31) ಸಾಗರಂ ಶ್ರೀನಿವಾಸರಾವ ,
32) ಕೋಲಾರ ರಾಮರಾವ, ಬಳ್ಳಾರಿ
33) ಹುದ್ದಾರ ನರಸಿಂಗರಾಯರು, ಧಾರವಾಡ